# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ದ್ರೋಣಪರ್ವ
ಕರ್ಣ ಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೧೮

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 18**

*ಮುದ್ರಕರು:*

**ಭಾರತ ದರ್ಶನ ಮುದ್ರಣಾಲಯ**

163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*

**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*

**ದಿ॥ ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*

**ದಿ॥ ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*

**ದಿ॥ ವಿದ್ವಾನ್ ರಾಮೇಶ್ವರಾವಧಾನೀ**

ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್,M.A. B.Com., B.L.,
ಕೋಶಾಧ್ಯಕ್ಷರು

## ವಿನಮ್ರವಚನಗಳು

ದಯಾಮಯನಾದ ಪರಮಾತ್ಮನ ಕೃಪೆಯಿಂದಲೂ, ಗುರುಭಗವಂತನ ದಿವ್ಯಾನುಗ್ರಹದಿಂದಲೂ, ಸತ್ಪುರುಷರ ಅಮೋಘಸಹಕಾರದಿಂದಲೂ ಶ್ರೀಮನ್ಮಹಾ ಭಾರತದ ಹದಿನೆಂಟನೆಯ ಸಂಪುಟರೂಪವಾದ ಪುಷ್ಪವನ್ನು ಸಿದ್ಧಗೊಳಿಸಿ ಭಗವಂತನ ದಿವ್ಯಪಾದಾರವಿಂದಗಳಲ್ಲಿ ಅರ್ಪಿಸಿ ಅನಂತರ ಪ್ರಸಾದರೂಪವಾದ ಈ ಪುಷ್ಪವನ್ನು ನಮ್ಮ ಪ್ರಿಯವಾಚಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ. ಭಗವದ್ವಾಕ್ಯ ಗಳೂ ಭಗವದ್ಗೀತೆಗಳೂ ತುಂಬಿರುವ ಈ ಸಂಪುಟವು ಸಾಧಕರಿಗೆ ವರಪ್ರಸಾದ ದಂತಿದೆಯೆಂದರೆ ಅತಿಶಯೋಕ್ತಿಯಲ್ಲ. ಈ ಸಂಪುಟದಲ್ಲಿ ದ್ರೋಣಪರ್ವವು ಮುಗಿದಿದ್ದು ಕರ್ಣಪರ್ವದಲ್ಲಿ ಅರ್ಧಕ್ಕೂ ಹೆಚ್ಚುಭಾಗವು ಎಂದರೆ ೯೬ ಅಧ್ಯಾಯ ಗಳು ಅಡಕವಾಗಿವೆ.

ನಮ್ಮ ಆಶಯದಂತೆ ಈ ವರ್ಷ ಇನ್ನೂ ಎರಡು ಸಂಪುಟಗಳನ್ನು ಹೊರತರಬೇಕಾಗಿದ್ದಿತು. ಆದರೆ ಪರಮಾತ್ಮನ ಇಚ್ಛೆ ಇಲ್ಲವೆಂದು ತೋರುತ್ತದೆ. ಇನ್ನೂ ಒಂದು ತಿಂಗಳು ಮೊದಲೇ ಈ ಸಂಪುಟವನ್ನು ಹೊರತರಬೇಕೆಂಬ ಆಶಯವಿದ್ದಿತು. ಆದರೂ ಹದಿನೇಳನೆಯ ಸಂಪುಟವು ಪ್ರಕಟವಾದ ನಾಲ್ಕುತಿಂಗಳಿಗೆ ಸರಿಯಾಗಿ ಈ ಸಂಪುಟವು ಹೊರಬಂದಿರುತ್ತದೆ. ೧೯ನೆಯ ಸಂಪುಟವನ್ನು ೧೪-೧-೮೦ನೇ ಸಂಕ್ರಾಂತಿಯ ದಿವಸ, ಭಾರತ ದರ್ಶನ ಮಾಸಪತ್ರಿಕೆಯ ೨೩ನೆಯ ವಾರ್ಷಿಕೋತ್ಸವದಂದು ಹೊರತರುವ ಆಶಯವಿದೆ. ಪರಮಾತ್ಮನ ದಯೆ, ಗುರುವಿನ ಅನುಗ್ರಹ—ಎರಡೂ ಇದ್ದರೆ ಸಾಧ್ಯವಾದೀತು.

ಈ ಸಂಪುಟದ ಕಥಾಭಾಗದಲ್ಲಿ ರುದ್ರಾಧ್ಯಾಯದ ಸುಂದರವಾದ ಸ್ತೋತ್ರಗಳಿವೆ. ಅಣುಶಸ್ತ್ರಕ್ಕೆ ಅನುರೂಪವಾದ ಅಸ್ತ್ರದ ವಿವರಣೆಯು ಬರುತ್ತದೆ. ವೀರರ ತೆಗಳಿಕೆಯ ಮತ್ತು ಹೊಗಳಿಕೆಯ ಅಧ್ಯಾಯಗಳೂ ಇವೆ. ಯುದ್ಧದ ವರ್ಣನೆಯು ಯಥಾಪೂರ್ವ ರೋಮಾಂಚಕರವಾಗಿದೆ. ಕರ್ಣನ ಸೇನಾಪತ್ಯದ ಒಂದು ದಿವಸವು ಮುಗಿದು ಎರಡನೆಯ ದಿವಸದ ಮೂರನೆಯ ಎರಡು ಭಾಗವೂ ಈ ಸಂಪುಟದಲ್ಲಿ ಮುಗಿದಿರುತ್ತದೆ. ಹದಿನೆಂಟು ದಿವಸಗಳ ಮಹಾಭಾರತಯುದ್ಧ ದಲ್ಲಿ ಈ ಸಂಪುಟದೊಡನೆ ೧೬ ೨/೩ ದಿವಸಗಳ ಯುದ್ಧವು ಮುಗಿದಂತಾಗುತ್ತದೆ.

ಮಹಾಭಾರತದ ಪ್ರಚಾರಕಾರ್ಯವು ಕಳೆದ ನಾಲ್ಕು ತಿಂಗಳಲ್ಲಿ ಸ್ವಲ್ಪ ಉತ್ತೇಜನಕರವಾಗಿದೆಯೆನ್ನಬಹುದು. ಕೆನರಾ ಬ್ಯಾಂಕ್ ಪ್ರಧಾನಕಛೇರಿಯವರು ಸುತ್ತೋಲೆಯೊಂದನ್ನು ಹೊರಡಿಸಿ ಅಪೇಕ್ಷಿಸುವವರಿಗೆ ಸಾಲಸೌಲಭ್ಯವನ್ನು ಯಥಾ ಪೂರ್ವಕೊಡಬಹುದೆಂದು ಎಲ್ಲ ಶಾಖೆಗಳಿಗೂ ಸೂಚನೆಯನ್ನಿತ್ತಿದ್ದಾರೆ. ಸಿಂಡಿಕೇಟ್, ಕರ್ಣಾಟಕ, ಕಾರ್ಪೊರೇಷನ್ ಮತ್ತು ನ್ಯಾಷನಲ್ ಕೋ-ಆಪರೇಟಿವ್ ಬ್ಯಾಂಕಿನವರು ಸಾಲಸೌಲಭ್ಯವನ್ನು ಮುಂದುವರಿಸಿದ್ದಾರೆ. ನಮ್ಮ ಪ್ರಾರ್ಥನೆಗೆ ಓಗೊಟ್ಟು ಅನೇಕ ಸದಸ್ಯರು ನೂತನಸದಸ್ಯರನ್ನು ಮಾಡಿಕೊಡುತ್ತಿದ್ದಾರೆ. ನಮ್ಮ

ಪ್ರಿಯಸದಸ್ಯರಲ್ಲಿ ಕೆಲವರಾದರೂ ಹೀಗೆ ಮಾಡಬಹುದೆಂದು ನಮ್ಮ ಅಭಿಪ್ರಾಯ
ವಾಗಿದೆ. ಉಪನಯನ, ವಿವಾಹ, ಷಷ್ಟ್ಯಬ್ದಪೂರ್ತಿ–ಇವೇ ಮುಂತಾದ ಸಮಾರಂಭ
ಗಳಲ್ಲಿ ಈ ಮಹಾಗ್ರಂಥವನ್ನು ಉಡುಗೊರೆಯಾಗಿಯೂ ಕೊಡಬಹುದು.

ಸಂಪುಟಗಳನ್ನು ಬೇಗತರುವುದೆಂದರೆ ಗೌರವ ಸಂಪಾದಕರಮೇಲೆ ಹೆಚ್ಚು
ಹೊರೆಹೊರೆಸುವುದೇ ಆಗುತ್ತದೆ. ಆದರೂ ಸಹ ಈ ಮಹನೀಯರೆಲ್ಲರೂ
ಸಂತೋಷದಿಂದ ಈ ಮಹಾಕಾರ್ಯವನ್ನು ನಿರ್ವಹಿಸಿಕೊಡುತ್ತಿದ್ದಾರೆ. ಸಾಧ್ಯ
ವಾದಷ್ಟುಬೇಗ ಈ ಮಹಾಗ್ರಂಥವನ್ನು ಮುಗಿಸಿ ಕನ್ನಡನಾಡಿನ ಪ್ರಿಯಜನರಿಗೆ ಕೊಡ
ಬೇಕೆಂಬುದೇ ಇವರೆಲ್ಲರ ಪರಮೋದ್ದೇಶವಾಗಿರುತ್ತದೆ. ಎಂತಹುದೇ ಸಂದರ್ಭ
ದಲ್ಲಿಯೂ ಬೇಸರಪಟ್ಟುಕೊಳ್ಳದೇ, ಆಲಸಿಕೆಯಿಲ್ಲದೇ ಅತ್ಯಂತ ಶ್ರದ್ಧೆಯಿಂದ ಈ
ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿಕೊಡುತ್ತಿರುವ ಸಂಪಾದಕಮಂಡಲಿಯ
ವಿದ್ವಾಂಸರಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ಮುಖ್ಯಕರ್ತವ್ಯವಾಗಿರುತ್ತದೆ.
ದಯಾಮಯನಾದ ಪರಮಾತ್ಮನು ನಿಃಸ್ವಾರ್ಥಸೇವೆಯನ್ನು ಸಲ್ಲಿಸುತ್ತಿರುವ
ಇವರೆಲ್ಲರ ಸಕಲ ಇಷ್ಟಾರ್ಥಗಳನ್ನೂ ನೆರವೇರಿಸಲಿ.

ಕರ್ಣಾಟಕದ ಎಲ್ಲ ಪ್ರೌಢಶಾಲೆಗಳಿಗೂ ಮಹಾಭಾರತದ ಸಂಪುಟಗಳನ್ನು
ಒದಗಿಸಿಕೊಡಬೇಕೆನ್ನುವ ನಮ್ಮ ಪ್ರಾರ್ಥನೆಯು ಇನ್ನೂ ಕಾರ್ಯಗತವಾಗಿರುವುದಿಲ್ಲ.
ಕರ್ಣಾಟಕದ ಮುಖ್ಯಮಂತ್ರಿಗಳಾದ ಶ್ರೀ ಡಿ. ದೇವರಾಜ ಅರಸ್ ಅವರು ತುಂಬಿದ
ಸಭೆಯಲ್ಲಿ ಉದ್ಘೋಷಿಸಿರುವ ಆಶ್ವಾಸನೆಯು ಸಾಧ್ಯವಾದಷ್ಟು ಬೇಗ
ಕಾರ್ಯಗತವಾಗುವುದೆಂಬ ಭರವಸೆಯಿಂದಿರುತ್ತೇವೆ. ಸತ್ಪುರುಷರಾಡಿದ
ಮಾತೆಂದಿಗೂ ಸುಳ್ಳಾಗುವುದಿಲ್ಲ; ಸುಳ್ಳಾಗಲು ಸಾಧ್ಯವೂ ಇಲ್ಲ.

೧೭ನೆಯ ಸಂಪುಟದ ಪ್ರಕಾಶನ ಸಮಾರಂಭವು ಬಿ. ಎಂ. ಎಸ್.
ಇಂಜಿನಿಯರಿಂಗ್ ಕಾಲೇಜಿನ ಸಭಾಂಗಣದಲ್ಲಿ ೧-೮-೧೯೭೫ನೇ ಶುಕ್ರವಾರ
ಸಾಯಂಕಾಲ ೬ ಘಂಟೆಗೆ ಸನ್ಮಾನ್ಯ ಶ್ರೀ ಬಿ. ಡಿ. ಜತ್ತಿಯವರ ಅಧ್ಯಕ್ಷತೆಯಲ್ಲಿ
ನಡೆಯಿತು. ನಿಶ್ಚಯವಾಗಿಯೂ ಆ ಸಮಾರಂಭವು ಚಿರಸ್ಮರಣೀಯವಾಗಿದ್ದಿತು. ೬
ಘಂಟೆಗೆ ಸರಿಯಾಗಿ ಉಪರಾಷ್ಟ್ರಪತಿಗಳು ದಯಮಾಡಿಸಿದರು. ಮಹಾದ್ವಾರದಲ್ಲಿ
ಇಂಜಿನಿಯರಿಂಗ್ ಕಾಲೇಜಿನ ಅಧ್ಯಕ್ಷರಾದ ಶ್ರೀ ಕಡಿದಾಳ್ ಮಂಜಪ್ಪನವರೂ,
ಕಾಲೇಜಿನ ಪ್ರಿನ್ಸಿಪಾಲರೂ, ಭಾರತ ದರ್ಶನ ಪ್ರಕಾಶನಮಂಡಲಿಯವರೂ ಮಂಗಳ
ವಾದ್ಯಗಳಿಂದ ಕೂಡಿದ ಪೂರ್ಣಕುಂಭದೊಡನೆ ಶ್ರೀಯುತರನ್ನು ಸ್ವಾಗತಿಸಿದರು.
ವೇದವಿದ್ವಾಂಸರು ಸ್ವಸ್ತಿವಾಚನಮಾಡಿದರು. ವೇದಪಠನದೊಂದಿಗೆ ಸಮಾರಂಭವು
ಪ್ರಾರಂಭವಾಯಿತು. ಕುಮಾರಿ ಸತ್ಯವತಿಯವರು ವಿದ್ವಾನ್ ಹೆಚ್. ವಿ.
ನಾರಾಯಣಶಾಸ್ತ್ರಿಗಳು ರಚಿಸಿದ್ದ ಸ್ವಾಗತಗೀತೆಗಳನ್ನು ಸುಶ್ರಾವ್ಯವಾಗಿ ಹಾಡಿದರು.
ವಿದ್ವಾನ್ ಹೆಚ್. ಎನ್. ರಂಗಸ್ವಾಮಿಯವರು ಸ್ವಾಗತಭಾಷಣಮಾಡುತ್ತಾ ಇದು
ವರೆಗೆ ಸಾಧಿಸಿರುವ ಪ್ರಗತಿಯನ್ನು ವಿಶ್ಲೇಷಿಸಿದರು. ಕೇಂದ್ರಸರ್ಕಾರದವರೂ ನೆರವು

ನೀಡಬೇಕೆಂದು ಕಳ-ಕಳಿಯಿಂದ ಪ್ರಾರ್ಥಿಸಿಕೊಂಡರು. ಕರ್ನಾಟಕದ ಎಲ್ಲ ಪ್ರೌಢಶಾಲೆಗಳಿಗೂ ಮಹಾಭಾರತದ ಸಂಪುಟಗಳನ್ನು ತೆಗೆದುಕೊಳ್ಳುವ ವಿಷಯವಾಗಿ ಮುಖ್ಯಮಂತ್ರಿಗಳೂ ಮತ್ತು ರಾಜ್ಯಪಾಲರೂ ಇತ್ತಿರುವ ಆಶ್ವಾಸನೆಯನ್ನು ಉಪರಾಷ್ಟ್ರಪತಿಗಳ ಅವಗಾಹನೆಗೂ ತಂದರು.

ಅನಂತರ ಶ್ರೀ ನೆ. ವೆಂ. ಶ್ರೀನಿವಾಸರಾಯರು ಸಂದೇಶಗಳನ್ನು ಕಳುಹಿಸಿದವರ ಶುಭನಾಮಗಳನ್ನು ಓದಿದರು. ಶುಭಮುಹೂರ್ತದಲ್ಲಿ ಉಪರಾಷ್ಟ್ರಾಧ್ಯಕ್ಷ ಶ್ರೀ ಬಿ. ಡಿ. ಜತ್ತಿಯವರು ೧೭ನೆ ಸಂಪುಟಕ್ಕೆ ಪೂಜೆಯನ್ನು ಸಲ್ಲಿಸಿ ಪ್ರಕಾಶನಗೊಳಿಸಿದರು. ವೇದಘೋಷಗಳೊಡನೆ ಮಂಗಳವಾದ್ಯಗಳು ಮೊಳಗಿದುವು.

ಪ್ರಕಾಶನದ ಅಧ್ಯಕ್ಷರಾದ ವಿದ್ವಾನ್ ಹೆಚ್. ಎಸ್. ವರದದೇಶಿಕಾಚಾರ್ಯರು ೧೭ನೆಯ ಸಂಪುಟದ ಪರಿಚಯವನ್ನು ಚಿಕ್ಕಭಾಷಣದಲ್ಲಿ ಚೊಕ್ಕವಾಗಿ ಮಾಡಿಕೊಟ್ಟರು.

ಅನಂತರ ಉಪರಾಷ್ಟ್ರಪತಿಗಳು ಮಾತನಾಡುತ್ತಾ ಮಹಾಭಾರತದ ಹಿರಿಮೆಯನ್ನು ಹೇಳಿದರಲ್ಲದೇ-ಪ್ರಕಾಶಗೊಂಡಿರುವ ಸಂಪುಟಗಳ ವಿಷಯವಾಗಿ ತಮ್ಮ ಸ್ನೇಹಿತರ ಸದಭಿಪ್ರಾಯಗಳನ್ನೂ ಮಹಾಸಭೆಯಲ್ಲಿ ವ್ಯಕ್ತಪಡಿಸಿದರು.

ವಿದ್ವಾನ್ ರಾಮೇಶ್ವರಾವಧಾನಿಗಳು ವಂದನಾರ್ಪಣೆಮಾಡಿದರು. ಶಾಂತಿಪಾಠದೊಡನೆ ಸಮಾರಂಭವು ಮುಕ್ತಾಯವಾಯಿತು.

ಪ್ರಿಯಬಂಧುಗಳೇ! ಪರಮಾತ್ಮನ ದಿವ್ಯಾನುಗ್ರಹದಿಂದ ಈ ಮಹಾಭಾರತ ಮಾಹಾಸಾಗರವನ್ನು ಈಜುತ್ತಿದ್ದೇವೆ. ಅರ್ಧಕ್ಕೂ ಹೆಚ್ಚು ದೂರ ಸಾಗಿದ್ದೇವೆ. ದಯಾಮಯನಾದ ಪರಮಾತ್ಮನ ದಿವ್ಯಾನುಗ್ರಹದಿಂದಾಗಿ ಶ್ರಮವೇನೂ ಕಾಣುತ್ತಿಲ್ಲ. ಅವನೇ ಎಲ್ಲ ಭಾರವನ್ನೂ ವಹಿಸಿಕೊಂಡು ಕಾರ್ಯವನ್ನು ನಿರ್ವಹಿಸಿಕೊಡುತ್ತಿದ್ದಾನೆ. ಸೂತ್ರದ ಗೊಂಬೆಯಂತೆ ಆಡುತ್ತಿರುವುದು ಮಾತ್ರ ನಮ್ಮ ಕಾರ್ಯವಾಗಿದೆ. ಸೂತ್ರದ ಗೊಂಬೆಯು ಪ್ರತ್ಯಕ್ಷವಾದ ಸೂತ್ರಕ್ಕೆ ಅಧೀನವಾಗಿರುವುದರಿಂದ ತಪ್ಪೇ ಆಗದಂತೆ ಹೆಜ್ಜೆಯಿಡುತ್ತದೆ. ಆದರೆ ನಾವು ಅಪ್ರತ್ಯಕ್ಷವಾದ ಸೂತ್ರದಿಂದ ಬಂಧಿತರಾಗಿದ್ದೇವೆ. ಮಾನವನ ಪ್ರಕೃತಿಗೆ ಅನುಗುಣವಾಗಿ ತಪ್ಪು ಹೆಜ್ಜೆಯಿಡಲು ಸಾಧ್ಯ. ಇಂತಹ ತಪ್ಪುಗಳನ್ನೂ ದಯಾಮಯನು ತಿದ್ದುತ್ತಾ ಮಹಾಭಾರತಸಮುದ್ರದ ಪಾರವನ್ನು ತೋರಿಸುವನೆಂಬ ಸಂಪೂರ್ಣಭರವಸೆಯಿದೆ.

ಮಹಾಭಾರತದ ವಾಚಕರಿಗೂ, ಪೋಷಕರಿಗೂ ತೆರೆಯ ಮರೆಯಲ್ಲಿ ಇದರ ಪ್ರಚಾರಕ್ಕಾಗಿ ಹಗಲಿರುಳೂ ದುಡಿಯುತ್ತಿರುವ ಸಾಧುಪುರುಷರಿಗೂ ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನು ಸಕಲಸೌಭಾಗ್ಯಗಳನ್ನೂ ದಯಪಾಲಿಸಲಿ.

ಶಾನ್ತಿಃ ಪುಷ್ಟಿಸ್ತುಷ್ಟಿಶ್ಚಾಸ್ತು! ಸಮಸ್ತಸನ್ಮಙ್ಗಲಾನಿ ಭವನ್ತು!

-ಪ್ರಕಾಶಕರು.

# ಮುನ್ನುಡಿ

ಶ್ರೀಮನ್ಮಹಾಭಾರತವನ್ನು ಕನ್ನಡದಲ್ಲಿ ಸಂಪುಟ-ಸಂಪುಟಗಳಾಗಿ ಹೊರತರುವ ಅತ್ಯಂತ ಉಪಯುಕ್ತಕಾರ್ಯವನ್ನು ಕೈಗೊಂಡು ನಡೆಸುತ್ತ ಬಂದಿರುವ ಭಾರತ ದರ್ಶನ ಪ್ರಕಾಶನ ಈಗ ಈ ಗ್ರಂಥದ ಹದಿನೆಂಟನೆಯ ಸಂಪುಟವನ್ನು ಪ್ರಕಟಿಸುವ ಕಾಲದಲ್ಲಿ ಈ ಅನುವಾದ ಕಾರ್ಯದ ಬಗ್ಗೆ ಕೆಲವು ಮಾತುಗಳನ್ನು ಹೇಳುವುದು ಸಂತೋಷದ ಸಂಗತಿ. ನಮ್ಮ ಸಂಸ್ಕೃತಿಯ ಬಗ್ಗೆ ಅರಿವು ಕ್ರಮೇಣ ಕಡಿಮೆಯಾಗುತ್ತಿರುವಲ್ಲಿ ನಮ್ಮ ಸಂಸ್ಕೃತಿಯ ಸಾರಸರ್ವಸ್ವವೇ ಆಗಿರುವ ಮಹಾಭಾರತವನ್ನು ಹೀಗೆ ತಿಳಿಯಾದ ಕನ್ನಡದಲ್ಲಿ ಸಾರ್ವಜನಿಕರಿಗೆ ಒದಗಿಸುತ್ತಿರುವುದು ತುಂಬ ಅಭಿನಂದನೀಯಸಂಗತಿಮಾತ್ರವಲ್ಲ; ದೇಶದ ದೃಷ್ಟಿಯಿಂದ ತುಂಬ ಅಗತ್ಯದ ಕೆಲಸವೂ ಹೌದು. ಜನಕ್ಕೆ ಅಕ್ಷರ ಕಲಿಸಿ ಓದಲು ತಕ್ಕ ಗ್ರಂಥಗಳನ್ನು ಒದಗಿಸದೇ ಹೋದರೆ ಭಯಂಕರ ಪರಿಣಾಮವಾಗುವುದು ಖಂಡಿತ. ಹಿಂದೆ ಗುರುಹಿರಿಯರಿಂದಲೇ ಕೇಳಿ ಕಲಿಯುತ್ತಿದ್ದ ಪುರಾತನಜ್ಞಾನವನ್ನು ಸ್ವತಃ ಓದಿ ತಿಳಿಯಬೇಕಾದ ಕಾಲ ಈಗ ಬಂದಿದೆ. ತನ್ನ ವ್ಯಕ್ತಿತ್ವದ ವಿಕಾಸವನ್ನು ಬಯಸಿ ತಿಳಿವಳಿಕೆಯನ್ನು ಹುಡುಕಹೊರಟವನ ಮುಂದೆ ಮಾನವಜನಾಂಗದ ಎಲ್ಲ ಕಾಲಗಳ ಅತ್ಯುತ್ತಮ ಕೃತಿಗಳೂ ಇರಬೇಕಾದ್ದು ಈಗ ಅತ್ಯವಶ್ಯ. ಈ ಆಧುನಿಕಯುಗ ವ್ಯಕ್ತಿತ್ವದ ಯುಗ ಹೇಗೋ ಹಾಗೆ ಮಾನವತೆಯ ಯುಗವೂ ಹೌದು. ಈ ಎರಡೂ ತತ್ತ್ವಗಳ ಅನುಸಂಧಾನವನ್ನು ಪ್ರೇರಿಸಿ ಪೋಷಿಸುವ ಕೃತಿ ಮಹಾಭಾರತವೊಂದಲ್ಲದೇ ಬೇರೆ ಇಲ್ಲ ಎಂದೂ ಹೇಳಬಹುದು.

ಮಾನವರು, ದಾನವರು, ದೇವತೆಗಳು—ಎಂಬ ಸೃಷ್ಟಿಯ ಮೂರೂ ಮುಖಗಳನ್ನೂ ಮಾನವತೆಯ ಮೂಲಕವೇ ಹುಡುಕುವುದು ಮಹಾಭಾರತದ ವೈಶಿಷ್ಟ್ಯ. ಈ ಹುಡುಕಾಟದ ವಾಸ್ತವದೃಶ್ಯಪ್ರಪಂಚದಲ್ಲಿ ಹೇಗೋ ಹಾಗೆ ಅದೃಶ್ಯಭಾವ, ಚಿಂತನ, ದರ್ಶನಗಳ ಅಂತಃಪ್ರಪಂಚದಲ್ಲೂ ಏಕಕಾಲದಲ್ಲಿ ಒಂದು ಇನ್ನೊಂದರ ಪರ್ಯಾಯ ಎನ್ನುವಂತೆ ನಡೆಯುತ್ತಿರುವುದರಿಂದ ಇಲ್ಲಿ ಅತ್ಯಂತನಿಷ್ಠುರವಸ್ತುದೃಷ್ಟಿಯಮೂಲಕವೇ ಸದಾಕಾಲವೂ ನಿಲ್ಲುವ ಆಧ್ಯಾತ್ಮದೃಷ್ಟಿ ವ್ಯಕ್ತವಾಗುತ್ತದೆಯಾಗಿ ಮಹಾಭಾರತದ ಮಹತ್ತ್ವ ಎಂದಿಗೂ ಕಡಮೆಯಾಗತಕ್ಕದ್ದಲ್ಲ. 'ಮಹಾಭಾರತ' ನಮಗೆ ಕೊಡುವ ತಿಳಿವಳಿಕೆ, ಮಾಡಬಹುದಾದ ಧರ್ಮಜಾಗೃತಿ, ಅದರಿಂದ ಸ್ಫೂರ್ತವಾಗಬಹುದಾದ ಹೊಸ ದೃಷ್ಟಿ-ಧೋರಣೆಗಳು ಅತ್ಯಂತ ಮಹತ್ತ್ವದುವು ಎಂಬುದರಲ್ಲಿ ಸಂದೇಹವೇ ಇಲ್ಲ. ಆದರೆ ನಾವು ಈ ಮಹಾಗ್ರಂಥವನ್ನು ಅತ್ಯಂತ ಮಹತ್ತ್ವದ ಸಾಹಿತ್ಯಕಲಾಕೃತಿಯೆಂದೇ ಅಭ್ಯಾಸಮಾಡಬೇಕಾದ ಕಾಲ ಇದು. ಸರ್ವಜ್ಞಾನವನ್ನೂ ಕೊಡುವ ಪಂಚಮವೇದವೆಂದು ನಾವು ಧಾರ್ಮಿಕವಾಗಿ ಆರಾಧಿಸುತ್ತಾಬಂದಿರುವ ಈ ಗ್ರಂಥ ಅತ್ಯಂತ ಶ್ರೇಷ್ಠವಾದ ಮಹಾಕಾವ್ಯಕೃತಿಯೂ ಹೌದು-ಎಂದು ನಮ್ಮ ದೇಶದಲ್ಲಿ ಇಲ್ಲಿಯತನಕವೂ ಹೆಚ್ಚಾಗಿ ಗುರುತಿಸದೇ ಇದ್ದದ್ದು ಒಂದು ಸೋಜಿಗವೇ ಸರಿ. ಅನೇಕಾನೇಕ ಆಖ್ಯಾನ-ಉಪಾಖ್ಯಾನಗಳೊಂದಿಗೆ, ಅನೇಕಾನೇಕ ಶಾಸ್ತ್ರವಿಚಾರ-ವಿಮರ್ಶೆ-ಚರ್ಚೆಗಳೊಂದಿಗೆ ಬದುಕಿನಲ್ಲಿ ಮೈದೋರಬಹುದಾದ ಅಸಂಖ್ಯ ಮಾನವ ಮಾದರಿ ಪಾತ್ರಗಳ ತುಮುಲ ಕೋಲಾಹಲದೊಂದಿಗೆ, ಭಾವ-ಭಾವಾಂತರಗಳ ಅಲ್ಲೋಲ-ಕಲ್ಲೋಲವನ್ನೂ ಸೃಷ್ಟಿಸುತ್ತಾ

ಒಂದು ಕಡೆ ಯುದ್ಧದಲ್ಲಿ ಜಯವನ್ನು ಹುಡುಕುವ ರಣಧ್ಯಾನಗಳಲ್ಲಿ ಮುಳುಗಿದಂತೆ ತೋರುತ್ತೆ. ಆದರೂ ಸದಾಕಾಲವೂ ಶಾಶ್ವತಮಾನವಮೌಲ್ಯಗಳನ್ನು ಹುಡುಕುತ್ತಾ, ಶಾಂತಿಯ ಮಹತ್ತರ ಸಂದೇಶವನ್ನು ಒಳಗಿಟ್ಟುಕೊಂಡು ಸಾಗುವ ಈ ಕೃತಿಯ ವಿಸ್ತಾರವನ್ನೂ, ಜಟಿಲತೆಯನ್ನೂ ಕಂಡು ಸರಳಸಾಹಿತ್ಯಮೌಲ್ಯಗಳ ಭಕ್ತರು ಭೀತರಾಗಬೇಕು ಎನ್ನಿಸುತ್ತದೆ. ಮಹಾಭಾರತವನ್ನು ಈ ದೇಶದಲ್ಲಿ ಸಾಹಿತ್ಯಕೃತಿಯಾಗಿ ಪರಿಗಣಿಸಿ ಅದನ್ನೊಂದು ಮೇಲ್ಪಂಕ್ತಿಯನ್ನಾಗಿಟ್ಟುಕೊಂಡಿದ್ದರೆ ಬಹುಶಃ ನಮ್ಮ ದೇಶದ ಸಾಹಿತ್ಯಚರಿತ್ರೆಯೇ ಬೇರೇ ರೀತಿಯದಾಗಿರುತ್ತಿತ್ತೋ ಏನೋ ಅನ್ನಿಸುತ್ತದೆ. ಜೀವನದ ಮಹಾಪ್ರಶ್ನೆಯನ್ನೂ ಸಮಸ್ಯೆಗಳನ್ನೂ ಆಳವಾಗಿ ಗಂಭೀರವಾಗಿ ಚಿಂತಿಸಿ, ಅನುಭವಿಸಿ ಅವುಗಳಿಗೆ ವಸ್ತುನಿಷ್ಠಚಿತ್ರಗಳನ್ನು ಒದಗಿಸುವ ಕೆಲಸದಲ್ಲಿ 'ಮಹಾಭಾರತ' ವನ್ನು ಸಾಹಿತ್ಯಕೃತಿಯಾಗಿ ಅಭ್ಯಾಸಮಾಡುವುದು ಇಂದಿನ ಸಾಹಿತಿಗಳಿಗೆ ಮಹತ್ತರಸ್ಫೂರ್ತಿಯನ್ನು ಕೊಡಬಲ್ಲುದು.

ಇಂಥ ಅನ್ಯಾದೃಶಕೃತಿಯ ಅನುವಾದ ಕನ್ನಡದಲ್ಲಿ ಹಿಂದೆ ಈಗ ಸ್ವರ್ಗಸ್ಥರಾಗಿರುವ ಅಳಸಿಂಗಾಚಾರ್ಯರಿಂದ ನಡೆದು ಪ್ರಕಟವಾಗಿತ್ತು. ಬಹುಶಃ ಆ ಅನುವಾದ ಈಗ ದೊರೆಯುತ್ತಿಲ್ಲ. ಈ ಅಭಾವವನ್ನು ತುಂಬುವ ಕೆಲಸವನ್ನು ಭಾರತ ದರ್ಶನ ಪ್ರಕಾಶನ ತನ್ನ ಈ ಅನುವಾದ ಸಂಪುಟಗಳ ಮೂಲಕವಾಗಿ ಸಮರ್ಥವಾಗಿ ತುಂಬುತ್ತಿರುವುದು ಸಂತೋಷದ ಸಂಗತಿ. ಮೂಲವನ್ನು ಯಥಾವತ್ತಾಗಿ ಅನುವಾದ ಮಾಡುತ್ತಾ ಮುಖ್ಯ ಎನ್ನಿಸಿದ ಮೂಲ ಶ್ಲೋಕಗಳನ್ನು ಉದಹರಿಸುತ್ತಾ, ತಿಳಿಯಲು ಕಷ್ಟ ಎನಿಸುವಂತಹ ವಿಭಾಗಗಳನ್ನೂ ಶಬ್ದ ಗಳನ್ನೂ ತಿಳಿಯಾಗಿ ವಿವರಿಸುತ್ತಾ ಒಟ್ಟಿನಲ್ಲಿ ಮೂಲದ ಗೌರವ-ಘನತೆಗಳನ್ನು ಉಳಿಸಿ ಕೊಂಡಿರುವ ಈ ಅನುವಾದದ ಕೆಲಸ ಚೆನ್ನಾಗಿ ನಡೆದಿದೆ ಎನ್ನಬಹುದು. ಆದರೆ ಆಧುನಿಕ ಕನ್ನಡ ಗದ್ಯಶೈಲಿಯ ಹೊಸಬೆಳವಣಿಗೆಯನ್ನೂ ಗಮನದಲ್ಲಿಟ್ಟುಕೊಂಡು ವಾಕ್ಯಗಳು ಇನ್ನಷ್ಟು ಚಿಕ್ಕವುಗಳಾಗಿ, ಹೇಳುವರೀತಿ ಸಂಪೂರ್ಣ ಕನ್ನಡವಾಗುವ ಹಾಗೆ ಭಾಷೆ ಇನ್ನಷ್ಟು ತಿಳಿಯಾಗ ಬಹುದಿತ್ತೇನೋ ಎಂದು ಹೇಳಿದರೆ ಈ ಅನುವಾದದ ಕೆಲಸದ ಮಹತ್ತ್ವವನ್ನು ಅಲ್ಲಗಳೆಯುವ ಮಾತಲ್ಲ; ಒಂದು ಸಲಹೆ ಅಷ್ಟೆ.

ಇಂಥ ಉತ್ತಮಕೆಲಸಕ್ಕೆ ಸರಕಾರದಿಂದಲೂ, ಸಾರ್ವಜನಿಕರಿಂದಲೂ ತಕ್ಕಷ್ಟು ಪ್ರೋತ್ಸಾಹ ದೊರೆಯುತ್ತಿರುವುದು ಸಂತೋಷದ ವಿಷಯ. ಅದು ಇನ್ನಷ್ಟು ಹೆಚ್ಚು ಹೆಚ್ಚು ಲಭಿಸಿ, ಅನುವಾದ ಕಾರ್ಯ ಬಹುಬೇಗ ಪೂರ್ಣಗೊಂಡು, ಪುನರಾವರ್ತಿಗಳು ಬೇಗಬೇಗ ನಡೆದು ಕನ್ನಡನಾಡಿನ ಪ್ರತಿಯೊಂದು ಮನೆಯಲ್ಲೂ ಈ ಗ್ರಂಥದ ಮೂವತ್ತೂ ಸಂಪುಟಗಳು ಮೂಲಧನವಾಗಿ ಇರುವಂತಾಗಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

ಬೆಂಗಳೂರು-೫೬೦ ೦೪೧
೨೩-೯-೧೯೭೯

**ಗೋಪಾಲಕೃಷ್ಣ ಅಡಿಗ.**

## ಮಹಾಭಾರತ-ದ್ರೋಣಪರ್ವ: ಹದಿನೆಂಟನೆಯ ಸಂಪುಟದ ವಿಷಯಾನುಕ್ರಮಣಿಕೆ

**ಮಹಾಭಾರತ - ಕರ್ಣಪರ್ವ**

ಕರ್ಣಪರ್ವ

## ದ್ವಿತೀಯಮುದ್ರಣದ ಪ್ರಸ್ತಾವನೆ

ಪರಮಕಾರುಣಿಕನಾದ ಭಗವಂತನ ದಯೆಯಿಂದ ಹದಿನೆಂಟನೆಯ ಸಂಪುಟದ ಎರಡನೆಯ ಮುದ್ರಣವು ಮುಗಿದಿದೆ. ಇದು ಹೊರಬರಲು ಅನೇಕವಿಧವಾದ ಮಾನಸಿಕ ಯಾತನೆಗಳನ್ನು ಅನುಭವಿಸಬೇಕಾಯಿತು. ಮುಂದಾದರೂ ಪರಮಾತ್ಮನ ದಯೆಯಿಂದ ಇಂತಹ ಸಂಕಷ್ಟಗಳು ಒದಗದಿರಲಿ. ಮುದ್ರಣದ ಸಹಯೋಗಿಗಳು ಇನ್ನು ಮುಂದಾದರೂ ಸತ್ಯನಿಷ್ಠೆಯಿಂದನಡೆದುಕೊಳ್ಳುವರೆಂದುಆಶಿಸಿದ್ದೇವೆ.ಈಸಂಪುಟದತಪ್ಪು–ಒಪ್ಪುಗಳನ್ನುತಿದ್ದಿಕೊಟ್ಟಿರುವ ಸಂಪಾದಕಮಂಡಲಿಯವಿದ್ವಾಂಸರಿಗೆಕೃತಜ್ಞತಾಪೂರ್ವಕವಂದನೆಗಳು.

ಕಾರಣಾಂತರಗಳಿಂದ ಈ ಸಂಪುಟವನ್ನು ಸಕಾಲದಲ್ಲಿ ಗ್ರಾಹಕರಿಗೆ ಕೊಡಲು ಆಗದಿದ್ದುದಕ್ಕಾಗಿ ಕ್ಷಮೆಬೇಡುತ್ತೇವೆ. ಶ್ರೀಮದ್ವಾಲ್ಮೀಕಿರಾಮಾಯಣದ ಪ್ರಕಾಶನವು ಪ್ರಾರಂಭವಾಗಿದ್ದು ಅಕ್ಷಯ ಶ್ರೀರಾಮನವಮಿಯಂದು (೧೮-೪-೮೬) ಬಿಡುಗಡೆ ಮಾಡುವ ಆಶಯವಿದೆ. ಮಹಾಭಾರತದ ಗ್ರಾಹಕರೆಲ್ಲರೂ ಶ್ರೀಮದ್ವಾಲ್ಮೀಕಿರಾಮಾಯಣಕ್ಕೂ ಗ್ರಾಹಕರಾಗಿ ಪ್ರೋತ್ಸಾಹಿಸಬೇಕಾಗಿ ಪ್ರಾರ್ಥಿಸುತ್ತೇವೆ.

–ಪ್ರಕಾಶಕರು.

## ತೃತೀಯಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದಲೂ ಗುರುಭಗವಂತನ ದಿವ್ಯಾಶೀರ್ವಾದದಿಂದಲೂ ಸತ್ಪುರುಷರ ಸಹಕಾರಸದಾಶಯಗಳಿಂದಲೂ ಹದಿನೆಂಟನೆಯ ಸಂಪುಟದ ಮೂರನೆಯ ಪುನರ್ಮುದ್ರಣಕಾರ್ಯವು ಮುಗಿದಿದೆ. ಈ ಸಂಪುಟವೂ ಲೇಸರ್ ಲೈನ್ ಗ್ರ್ಯಾಫಿಕ್ಸ್ ರವರ ತಾಂತ್ರಿಕ ನೆರವಿನಿಂದಲೂ ಎಲಿಗೆಂಟ್ ಮುದ್ರಣಾಲಯದವರ ಸಹಕಾರದಿಂದಲೂ D.T.P. ಮೂಲಕ ಸಿದ್ಧವಾಗಿದೆ. ಭಕ್ತಿಭಾವದಿಂದ ಈ ಕಾರ್ಯಕ್ಕೆ ಸಹಕರಿಸಿರುವ ಇವರೆಲ್ಲರಿಗೂ ಹೃತ್ಪೂರ್ವಕವಂದನೆಗಳು. ಈ ಸಂಪುಟದ ತಪ್ಪು-ಒಪ್ಪುಗಳನ್ನೂ ಸಂಪಾದಕಮಂಡಲಿಯ ವಿದ್ವಾಂಸರು ನೋಡಿಕೊಟ್ಟು ಸಹಕರಿಸಿರುತ್ತಾರೆ. ಇವರಿಗೂ ನಮ್ಮ ಹೃತ್ಪೂರ್ವಕವಂದನೆಗಳು. ಉಳಿದ ಸಂಪುಟಗಳನ್ನೂ ಸಾಧ್ಯವಾದಷ್ಟು ಬೇಗ ಹೊರತರುವ ಚೈತನ್ಯವನ್ನು ಪರಮಾತ್ಮನು ದಯಪಾಲಿಸಲೆಂಬ ಪ್ರಾರ್ಥನೆಯೊಡನೆ ವಿರಮಿಸುವೆವು.

-ಪ್ರಕಾಶಕರು.

ಶ್ರೀ ಮಹಾಗಣಪತಯೇ ನಮಃ ಶ್ರೀ ಸರಸ್ವತ್ಯೈ ನಮಃ ಶ್ರೀ ಸದ್ಗುರವೇ ನಮಃ

ॐ

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥**

# ಮಹಾಭಾರತ-ದ್ರೋಣಪರ್ವ ಹದಿನೆಂಟನೆಯ ಸಂಪುಟ

೧೯೩ನೆಯ ಅಧ್ಯಾಯ ನಾರಾಯಣಾಸ್ತ್ರಮೋಕ್ಷಪರ್ವ

## ಕೌರವಸೈನಿಕರೂ ಮತ್ತು ಸೇನಾಪತಿಗಳೂ ಪಲಾಯನಮಾಡಿದುದು: ಕೃಪರು ದ್ರೋಣರ ವಧೆಯ ವಿಷಯವನ್ನು ಅಶ್ವತ್ಥಾಮನಿಗೆ ತಿಳಿಸಿದುದು

ಸಂಜಯನು ದ್ರೋಣರ ವಧೆಯಾದನಂತರ ನಡೆದ ವೃತ್ತಾಂತವನ್ನು ಹೇಳುತ್ತಾನೆ:

**ತತೋ ದ್ರೋಣೇ ಹತೇ ರಾಜನ್ಕುರವಃ ಶಸ್ತ್ರಪೀಡಿತಾಃ ।**
**ಗತಪ್ರವೀರಾ ವಿಧ್ವಸ್ತಾ ಭೃಶಂ ಶೋಕಪರಾಯಣಾಃ ॥೧॥**

"ಮಹಾರಾಜ! ದ್ರೋಣರು ಹತರಾದನಂತರ ಕುರುಗಳು ಪಾಂಡವರ ಬಾಣಗಳಿಂದ ಬಹಳವಾಗಿ ಪೀಡಿತರಾದರು. ಅನೇಕವೀರರು ಅಸುನೀಗಿದರು. ಹಲವರು ವಿಧ್ವಸ್ತರಾದರು. (ಗಾಯಗೊಂಡರು.) ಅಳಿದುಳಿದವರು ಶೋಕಮಗ್ನರಾದರು. ಯುದ್ಧದಲ್ಲಿ ಶತ್ರುಪಕ್ಷದವರ ಕೈಮೇಲಾಗುತ್ತಿರುವುದನ್ನು ಕಂಡ ಕೌರವಸೈನಿಕರು ಭಯದಿಂದ ನಡುಗುತ್ತಾ ಕಂಬನಿದುಂಬಿದ ಕಣ್ಣುಗಳಿಂದ ಕೂಡಿದವರೂ, ಭೀತರೂ, ದೀನರೂ ಆದರು. ಅವರೆಲ್ಲರೂ ಬುದ್ಧಿಗೆಟ್ಟಿದ್ದರು. ಅವರಲ್ಲಿ ಉತ್ಸಾಹವೆಂಬುದೇ ಇರಲಿಲ್ಲ. ಮೋಹಪರವಶರಾಗಿ ಕಳೆಗುಂದಿದ್ದರು. ಗಟ್ಟಿಯಾಗಿ ಆರ್ತಸ್ವರಮಾಡುತ್ತಾ ನಿನ್ನ ಮಗನನ್ನು ಸುತ್ತುವರಿದರು.

**ರಜಸ್ವಲಾ ವೇಪಮಾನಾ ವೀಕ್ಷಮಾಣಾ ದಿಶೋ ದಶ ।**
**ಅಶ್ರುಕಣ್ಠಾ ಯಥಾ ದೈತ್ಯಾ ಹಿರಣ್ಯಾಕ್ಷೇ ಪುರಾ ಹತೇ ॥೨॥**

ಹಿಂದೆ ಹಿರಣ್ಯಾಕ್ಷನು ವರಾಹಮೂರ್ತಿಯಿಂದ ಹತನಾದಾಗ ಯಾವ ರೀತಿಯಲ್ಲಿ ದೈತ್ಯರು ಧೂಳಿನಿಂದ ಆವೃತರಾಗಿ ನಡುಗುತ್ತಾ ಹತ್ತು ದಿಕ್ಕುಗಳನ್ನೂ ಶೂನ್ಯದೃಷ್ಟಿಯಿಂದ ನೋಡುತ್ತಾ ಗಳ-ಗಳನೆ ಅತ್ತರೋ– ಅದೇ ರೀತಿಯಲ್ಲಿ ದ್ರೋಣರು ಹತರಾದನಂತರ ಕೌರವಸೈನಿಕರೂ ಧೂಳಿನಿಂದ ಧೂಸರಿತರಾಗಿ ನಡುಗುತ್ತಾ ರಕ್ಷಕರನ್ನು ಪಡೆಯುವ ಕಾತರತೆಯಿಂದ ಹತ್ತು ದಿಕ್ಕುಗಳನ್ನೂ ನೋಡುತ್ತಾ ಗಳ-ಗಳನೆ ಅಳುತ್ತಿದ್ದರು. ಭಯಗೊಂಡ ಸಣ್ಣ-ಸಣ್ಣ ಪ್ರಾಣಿಗಳಂತೆ ಭಯಗೊಂಡ ಸೈನಿಕರಿಂದ ಪರಿವೃತನಾದ ನಿನ್ನ ಮಗನು ಅವರಿಗೆ ಸಮಾಧಾನಹೇಳಲು ಶಕ್ತನಾಗದೇ ಅವರ ಮಧ್ಯದಲ್ಲಿ ಹೆಚ್ಚು ಹೊತ್ತು ನಿಲ್ಲಲಾರದೇ ಹೊರಟುಹೋದನು. ಪರಿತಪಿಸುವ ಸೂರ್ಯನ ಪ್ರಖರವಾದ ಕಿರಣಗಳಿಗೆ ಸಿಕ್ಕಿ ಸಂತಪ್ತರಾದವರಂತೆ, ಹಸಿವು-ಬಾಯಾರಿಕೆಗಳಿಂದ ಬಹಳವಾಗಿ ಪರಿತಪಿಸುತ್ತಿದ್ದ ನಿನ್ನ ಕಡೆಯ ಯೋಧರು ನಿರುತ್ಸಾಹಿಗಳಾದರು. ದ್ರೋಣರ ಪತನವೆಂಬುದು ಅವರಿಗೆ ನಂಬಲಾಗದ, ತುಂಬಲಾಗದ, ಅಸಹನೀಯವಾದ ನಷ್ಟವೇ ಆಗಿದ್ದಿತು. ಸೂರ್ಯನು ಆಕಾಶದಿಂದ ಕೆಳಕ್ಕೆ ಬಿದ್ದಂತೆ–ಸಮುದ್ರವೇ ಶೋಷಿಸಿಹೋದಂತೆ–ಮೇರುಪರ್ವತವು ತಲೆಕೆಳಗಾದಂತೆ–ಇಂದ್ರನೇ ಪರಾಜಿತನಾದಂತೆ–ದ್ರೋಣರು ಹತರಾಗಿ ಬಿದ್ದುದನ್ನು ಕಂಡು ಕೌರವರು ಚಕಿತರಾಗಿ ಅತ್ಯಂತ ಭಯಗ್ರಸ್ತರಾದವರ ರೂಪವನ್ನು ಹೊಂದಿ ಪಲಾಯನಮಾಡಿದರು. ಗಾಂಧಾರರಾಜನಾದ ಶಕುನಿಯು ದ್ರೋಣರು ಹತರಾದುದನ್ನು ಕೇಳಿ ತಾನೂ ಭಯಗೊಂಡವನಾಗಿ, ತನಗಿಂತಲೂ ಹೆಚ್ಚು ಭಯಗೊಂಡಿದ್ದ ತನ್ನ ರಥಿಗಳೊಡನೆ ಪಲಾಯನ ಮಾಡಿದನು. ಸೂತಪುತ್ರನಾದ ಕರ್ಣನು ಧ್ವಜ-ಪತಾಕೆಗಳಿಂದ ಶೋಭಿತವಾಗಿದ್ದ, ಅತ್ಯಂತವೇಗವಾಗಿ ಪಲಾಯನಮಾಡುತ್ತಿದ್ದ ತನ್ನ ವಿಶಾಲವಾದ ಸೈನ್ಯದೊಡನೆ ಭಯದಿಂದ ಪಲಾಯನಮಾಡಿದನು. ಮದ್ರೇಶ್ವರನಾದ ಶಲ್ಯನೂ ಸಹ ರಥ-ಗಜಾಶ್ವ ಸೈನಿಕರಿಂದ ಸಮೃದ್ಧವಾಗಿದ್ದ ತನ್ನ ಸೈನ್ಯವನ್ನು ಮುಂದೆ ಮಾಡಿಕೊಂಡು ಭಯದಿಂದ ಹಿಂದೆ-ಮುಂದೆ ನೋಡುತ್ತಾ ಪಲಾಯನಮಾಡಿದನು. ಶರದ್ವಂತರ ಮಕ್ಕಳಾದ ಶಾರದ್ವತರು ಬಹುಸಂಖ್ಯಾತವಾದ ಧ್ವಜ-ಪತಾಕೆಗಳಿಂದ ಶೋಭಿಸುತ್ತಿದ್ದ ವಿಶಾಲಸೈನ್ಯದಿಂದ ಪರಿವೃತರಾಗಿದ್ದರು. ಅವರ ಸೈನ್ಯದಲ್ಲಿಯೂ ಅನೇಕ ಪ್ರಮುಖರಾದ ವೀರರು ಶತ್ರು

ಪಕ್ಷದವರ ದಾಳಿಯಿಂದ ಅಸುನೀಗಿದ್ದರು. "ಅಯ್ಯೋ! ಈ ದಾಳಿಯನ್ನು ಸಹಿಸಿಕೊಳ್ಳುವುದು ಬಹಳ ಕಷ್ಟವೇ ಸರಿ"–ಎಂದೆನ್ನುತ್ತಾ ಅಳಿದುಳಿದ ಸೈನಿಕರೊಡನೆ ಕೃಪರೂ ಪಲಾಯನಮಾಡಿದರು. ಕೃತವರ್ಮನು ಅಳಿದುಳಿದಿದ್ದ ಭೋಜಸೈನಿಕರಿಂದಲೂ, ಕಳಿಂಗ, ಆರಟ್ಟ ಮತ್ತು ಬಾಹ್ಲಿಕಸೈನಿಕರಿಂದಲೂ ಪರಿವೃತನಾಗಿ, ವೇಗವಾಗಿಹೋಗುವ ಕುದುರೆಗಳಿಂದ ಕೂಡಿದ್ದ ರಥದಲ್ಲಿ ಕುಳಿತು ಪಲಾಯನಮಾಡಿದನು. ದ್ರೋಣರು ಯುದ್ಧದಲ್ಲಿ ಹತರಾದುದನ್ನು ನೋಡಿ ಪದಾತಿಸೈನಿಕರಿಂದ ಸಂವೃತನಾಗಿದ್ದ, ಬಹಳವಾಗಿ ಭಯಗೊಂಡಿದ್ದ ಉಲೂಕನೂ ಪದಾತಿಸೈನಿಕರೊಡನೆ ಪಲಾಯನಮಾಡಿದನು. ಪರಾಕ್ರಮಿಯ ಲಕ್ಷಣಗಳನ್ನು ಹೊಂದಿದ್ದ (ಶೌರ್ಯದಿಂದ ಖ್ಯಾತಿಯನ್ನು ಗಳಿಸಿದ್ದ), ದರ್ಶನೀಯನಾಗಿದ್ದ, ಇನ್ನೂ ಯುವಕನಾಗಿದ್ದ ದುಶ್ಯಾಸನನೂ ದ್ರೋಣರು ನಿಧನರಾದುದನ್ನು ನೋಡಿ ಬಹಳ ಉದ್ವಿಗ್ನನಾಗಿ ತನ್ನ ಗಜಸೈನಿಕರೊಡನೆ ಓಡಿಹೋದನು. ದ್ರೋಣರು ಅಸುನೀಗಿ ಕೆಳಕ್ಕೆ ಬಿದ್ದುದನ್ನು ನೋಡಿ ವೃಷಸೇನನೂ ಹತ್ತುಸಾವಿರ ರಥಸೈನ್ಯವನ್ನೂ ಮೂರು ಸಾವಿರ ಗಜಸೈನ್ಯವನ್ನೂ ತೆಗೆದುಕೊಂಡು ಬಹಳಬೇಗ ಓಡಿಹೋದನು. ಮಹಾರಥನಾದ ದುರ್ಯೋಧನನು ರಥಾಶ್ವ-ಗಜಸೈನಿಕರೊಡನೆ ಕೂಡಿಕೊಂಡು ಪದಾತಿಸೈನಿಕರಿಂದಲೂ ಪರಿವೃತನಾಗಿ ರಣಭೂಮಿಯಿಂದ ಪಲಾಯನಮಾಡಿದನು. ದ್ರೋಣರು ರಣಾಂಗಣದಲ್ಲಿ ಧೃಷ್ಟದ್ಯುಮ್ನನಿಂದ ಭೂಮಿಯಮೇಲೆ ಬೀಳಿಸಲ್ಪಟ್ಟುದನ್ನು ಕಂಡು ಸುಶರ್ಮನು, ಅರ್ಜುನನ ಬಾಣಗಳಿಗೆ ಲಕ್ಷ್ಯರಾಗದೇ ಉಳಿದಿದ್ದ ಸಂಶಪ್ತಕ ಸೈನಿಕರನ್ನು ಕರೆದುಕೊಂಡು ಓಡಿಹೋದನು. ದ್ರೋಣರು ಪರಲೋಕವನ್ನೈದಿದುದನ್ನು ಕಂಡು ಹಲವಾರು ಸೈನಿಕರು ಆನೆಗಳನ್ನೂ, ರಥಗಳನ್ನೂ ಹತ್ತಿಕೊಂಡು ಎಲ್ಲ ದಿಕ್ಕುಗಳಿಗೂ ಪಲಾಯನಮಾಡಿದರು. ಮತ್ತೆ ಕೆಲವರು ತಮ್ಮ ಕುದುರೆಗಳನ್ನೇ ಬಿಟ್ಟು ದಿಕ್ಕಾಪಾಲಾಗಿ ಓಡಿಹೋದರು. ಕೆಲವು ಕುರುಯೋಧರು ತಮ್ಮ ಪಿತೃಗಳನ್ನೂ (ಚಿಕ್ಕಪ್ಪ-ದೊಡ್ಡಪ್ಪ ಮೊದಲಾದವರನ್ನೂ), ಅಣ್ಣ-ತಮ್ಮಂದಿರನ್ನೂ, ಸೋದರಮಾವಂದಿರನ್ನೂ, ಮಕ್ಕಳನ್ನೂ, ಮಿತ್ರರನ್ನೂ ಬೇಗ ಪಲಾಯನಮಾಡುವಂತೆ ಆತುರಪಡಿಸುತ್ತಾ ಅವರನ್ನೂ ಜೊತೆಯಲ್ಲೇ ಕರೆದುಕೊಂಡು ಓಡಿಹೋದರು. ಮತ್ತೆ ಕೆಲವರು ಬೇಗ-ಬೇಗ ಓಡಿಹೋಗುವಂತೆ ಸೈನಿಕರನ್ನು ಪ್ರಚೋದಿಸುತ್ತಾ ತಮ್ಮ

ಸೋದರಳಿಯಂದಿರನ್ನೂ ತ್ವರೆಗೊಳಿಸುತ್ತಾ ಓಡಿಹೋಗುತ್ತಿದ್ದರು. ಕೆಲವು ಕುರುಯೋಧರು ತಮ್ಮ ಸಂಬಂಧಿಗಳನ್ನು ಗುರುತಿಸಿ, ಪಲಾಯನಮಾಡಿ ಪ್ರಾಣಾಪಾಯದಿಂದ ತಪ್ಪಿಸಿಕೊಳ್ಳುವಂತೆ ಅವರನ್ನೂ ಪ್ರೇರಿಸುತ್ತಾ, ರಣಾಂಗಣವನ್ನು ಬಿಟ್ಟು ಹತ್ತು ದಿಕ್ಕುಗಳಿಗೂ ಓಡಿಹೋದರು. ಆ ಸೈನಿಕರ ತಲೆಗೂದಲುಗಳೆಲ್ಲವೂ ಕೆದರಿಹೋಗಿದ್ದುವು. ತಡವರಿಸುತ್ತಾ ಮುಗ್ಗರಿಸುತ್ತಾ ಓಡುತ್ತಿದ್ದರು. ಇಬ್ಬರು ಒಟ್ಟಾಗಿಸೇರಿ ಒಂದೇ ದಿಕ್ಕಿಗೂ ಓಡಿಹೋಗುತ್ತಿರಲಿಲ್ಲ. (ಯಾರನ್ನೂ ಗಮನಿಸದೇ ತಮ್ಮಪಾಡಿಗೆ ತಾವು ಓಡುತ್ತಿದ್ದರು.) ಹತೋತ್ಸಾಹರಾದ, ಹತವೀರ್ಯರಾದ ಕುರುಸೈನಿಕರು 'ಇನ್ನು ಈ ಸೈನ್ಯವು ಉಳಿಯಲಾರದು'–ಎಂದೇ ಭಾವಿಸಿದ್ದರು.

ಮಹಾರಾಜ! ನಿನ್ನ ಕಡೆಯ ಸೈನಿಕರಲ್ಲಿ ಕೆಲವರು ಕವಚಗಳನ್ನೇ ಬಿಚ್ಚಿ ಎಸೆದು ಓಡಿಹೋಗುತ್ತಿದ್ದರು. ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನು ಕೂಗಿಕೊಳ್ಳುತ್ತಿದ್ದರು.' ತಿಷ್ಠ-ತಿಷ್ಠ ' 'ನಿಲ್ಲು-ನಿಲ್ಲು' –ಎಂದು ತಮ್ಮ ವಯಸ್ಯರನ್ನೋ, ಬಂಧುಗಳನ್ನೋ ಅಥವಾ ಶತ್ರುಗಳನ್ನೋ ಕುರಿತು ಹೇಳುತ್ತಿದ್ದರೇ ಹೊರತು ತಾವು ಮಾತ್ರ ಕ್ಷಣಮಾತ್ರವೂ ಒಂದು ಕಡೆಯಲ್ಲಿ ನಿಲ್ಲುತ್ತಿರಲಿಲ್ಲ. ಸುವರ್ಣಮಾಲೆಯಿಂದ ಸಮಲಂಕೃತವಾಗಿದ್ದ, ಸೂತನಿಂದ ವಿಹೀನವಾಗಿದ್ದ ರಥದ ಕುದುರೆಗಳನ್ನು ನೊಗದಿಂದ ಬಿಚ್ಚಿಕೊಂಡು ಅವುಗಳ ಮೇಲೆ ಕುಳಿತು ಶೀಘ್ರವಾಗಿ ಹೋಗುವಂತೆ ಕಾಲುಗಳಿಂದಲೇ ಅವುಗಳನ್ನು ತಿವಿಯುತ್ತಿದ್ದರು. ಈ ರೀತಿಯಲ್ಲಿ ತೇಜೋವಿಹೀನವಾಗಿದ್ದ, ಬಹಳ ಭಯಗೊಂಡಿದ್ದ ಕೌರವ ಸೈನ್ಯವು ದಿಕ್ಕಾಪಾಲಾಗಿ ಓಡಿಹೋಗುತ್ತಿರಲಾಗಿ–ಪ್ರವಾಹಕ್ಕೆ ವಿರುದ್ಧದಿಕ್ಕಿನಲ್ಲಿ ರಭಸದಿಂದ ಹೋಗುವ ಮೊಸಳೆಯೋಪಾದಿಯಲ್ಲಿ–ದ್ರೋಣರ ಮಗನಾದ ಅಶ್ವತ್ಥಾಮನು ಶತ್ರುಗಳ ಕಡೆಗೆ ಧಾವಿಸಿದನು. ಆ ಮೊದಲು ದ್ರೌಣಿಯು ಶಿಖಂಡಿಪ್ರಮುಖರಾದ ಸೈನ್ಯಗಣಗಳೊಡನೆಯೂ, ಪ್ರಭದ್ರಕರೊಡನೆಯೂ, ಪಾಂಚಾಲರೊಡನೆಯೂ, ಚೇದಿಗಳೊಡನೆಯೂ, ಕೇಕಯರೊಡನೆಯೂ ಯುದ್ಧಮಾಡುತ್ತಿದ್ದನು. (ಆದುದರಿಂದ ಅವನಿಗೆ ದ್ರೋಣರ ವಧೆಯ ವಿಷಯವು ತಿಳಿದಿರಲಿಲ್ಲ.) ಯುದ್ಧದುರ್ಮದನಾದ, ಮದಿಸಿದ ಆನೆಯ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮದಿಂದ ಕೂಡಿದ್ದ ಅಶ್ವತ್ಥಾಮನು ಪಾಂಡವರ ಹಲವುಬಗೆಯ ಸೈನಿಕರನ್ನು ಸಂಹರಿಸಿ ಬಹಳ

ಕಷ್ಟದಿಂದ ಯುದ್ಧಸಂಕಟದಿಂದ ಪಾರಾಗಿ ಬಂದಿದ್ದನು. ಕೌರವರ ಸೈನ್ಯವು ಪಲಾಯನಮಾಡುವುದರಲ್ಲಿಯೇ ಹೆಚ್ಚು ಉತ್ಸಾಹಗೊಂಡಿರುವುದನ್ನೂ ಮತ್ತು ದಿಕ್ಕಾಪಾಲಾಗಿ ಓಡುತ್ತಿರುವುದನ್ನೂ ನೋಡಿ ಅಶ್ವತ್ಥಾಮನು ದುರ್ಯೋಧನನ ಸಮೀಪಕ್ಕೆ ಹೋಗಿ ಅವನನ್ನು ಕೇಳಿದನು:

"ಭರತಶ್ರೇಷ್ಠನೇ! ಬಹಳ ಭಯಗೊಂಡಿರುವಂತೆ ನಮ್ಮ ಸೈನ್ಯವೇಕೆ ಓಡಿಹೋಗುತ್ತಿದೆ? ನಮ್ಮ ಸೈನಿಕರು ಹೀಗೆ ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದರೂ ನೀನೇಕೆ ಅವರನ್ನು ತಡೆಯಲು ಪ್ರಯತ್ನಿಸುತ್ತಿಲ್ಲ? ನೀನೂ ಸಹ ಹಿಂದಿನಂತೆ ಸ್ವಸ್ಥನಾಗಿರುವಂತೆ ಕಾಣುತ್ತಿಲ್ಲ. (ನಿನ್ನ ಮುಖದಲ್ಲಿ ಅಸ್ವಸ್ಥತೆಯು ಎದ್ದುಕಾಣುತ್ತಿದೆ.) ಕರ್ಣನೇ ಮೊದಲಾದ ಈ ಮಹಾವೀರರೂ ರಣಾಂಗಣದಲ್ಲಿ ನಿಲ್ಲುತ್ತಿಲ್ಲ. ಹಿಂದೆ ನಡೆದ ಬೇರೆ ಹಲವು ಯುದ್ಧಗಳಲ್ಲಿ ಸೈನಿಕರು ಇಷ್ಟು ಭಯಗ್ರಸ್ತರಾಗಿ ಓಡಿಹೋಗಿರಲಿಲ್ಲ. ಮಹಾಬಾಹುವೇ! ನಿನ್ನ ಸೈನ್ಯವು ಕುಶಲದಿಂದಿರುವುದೇ? ಕೌರವೇಶ್ವರ! ರಥಶ್ರೇಷ್ಠನೊಬ್ಬನು ಹತನಾಗಲಾಗಿ ಈ ನಿನ್ನ ಸೈನ್ಯಕ್ಕೆ ಈ ದುರವಸ್ಥೆಯುಂಟಾಯಿತೇ? ಈ ವಿಷಯವನ್ನು ಸ್ಪಷ್ಟವಾಗಿ ನನ್ನೊಡನೆ ಹೇಳು, ದುರ್ಯೋಧನ!"

ಮಹಾರಾಜ! ದ್ರೋಣಪುತ್ರನು ಹೇಳಿದ ಮಾತುಗಳನ್ನು ಕೇಳಿದ ದುರ್ಯೋಧನನಿಗೆ ಪರಮಘೋರವೂ, ಪರಮಾಪ್ರಿಯವೂ ಆದ ದ್ರೋಣರ ನಿಧನವಾರ್ತೆಯನ್ನು ಅಶ್ವತ್ಥಾಮನೊಡನೆ ಹೇಳಲು ಸಾಧ್ಯವಾಗಲಿಲ್ಲ.

ಆಗ ನಿನ್ನ ಮಗನು ಶೋಕವೆಂಬ ಮಹಾಸಾಗರದಲ್ಲಿ ಒಡೆದುಹೋದ ನೌಕೆಯಂತೆ ಸಂಪೂರ್ಣವಾಗಿ ಮುಳುಗಿಹೋಗಿದ್ದನು. ರಥದಲ್ಲಿ ಕುಳಿತಿದ್ದ ದ್ರೋಣರ ಮಗನಾದ ಅಶ್ವತ್ಥಾಮನನ್ನು ಕಂಡು ದುರ್ಯೋಧನನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ದುರ್ಯೋಧನನು ಲಜ್ಜಿತನಾಗಿ ಪಕ್ಕದಲ್ಲಿಯೇ ಇದ್ದ ಕೃಪರೊಡನೆ ಈ ಮಾತುಗಳನ್ನು ಹೇಳಿದನು:

"ಆಚಾರ್ಯರೇ! ನಿಮಗೆ ಮಂಗಳವಾಗಲಿ. ನಮ್ಮ ಸೈನಿಕರು ಯಾವ ಕಾರಣಕ್ಕಾಗಿ ಪಲಾಯನಮಾಡುತ್ತಿರುವರೆಂಬ ವಿಷಯವನ್ನು ಆಮೂಲಾಗ್ರವಾಗಿ ಅಶ್ವತ್ಥಾಮನಿಗೆ ಹೇಳಿರಿ." ದುರ್ಯೋಧನನ ಮಾತಿ

ನಂತೆ ಕೃಪರು ಬಾರಿ-ಬಾರಿಗೂ ಬಹಳವಾಗಿ ಸಂಕಟಪಡುತ್ತಾ, ದ್ರೋಣರು ಯುದ್ಧದಲ್ಲಿ ಹೇಗೆ ಹತರಾದರೆಂಬುದನ್ನು ಅಶ್ವತ್ಥಾಮನಿಗೆ ವಿವರಿಸಿ ಹೇಳಿದರು:

“ಮಗು, ಅಶ್ವತ್ಥಾಮ! ಭೂಮಂಡಲದಲ್ಲಿಯೇ ಶ್ರೇಷ್ಠಮಹಾರಥರೆಂದು ವಿಖ್ಯಾತರಾದ ದ್ರೋಣರನ್ನು ಮುಂದೆಮಾಡಿಕೊಂಡು ಪಾಂಚಾಲ ಯೋಧರೊಡನೆ ಮಾತ್ರವೇ ಯುದ್ಧವನ್ನು ಆರಂಭಿಸಿದೆವು. ಯುದ್ಧವು ಪ್ರಾರಂಭವಾದನಂತರ ಕುರು-ಸೋಮಕರೂ ಪರಸ್ಪರವಾಗಿ ಯುದ್ಧದಲ್ಲಿ ತೊಡಗಿ ಗರ್ಜನೆಮಾಡುತ್ತಾ ಶಸ್ತ್ರಾಸ್ತ್ರಗಳಿಂದ ಶತ್ರುಗಳ ಶರೀರಗಳನ್ನು ಕೆಳಗುರುಳಿಸಿದರು. ಯುದ್ಧವು ಹೀಗೆ ಭಯಂಕರವಾದ ರೀತಿಯಲ್ಲಿ ನಡೆಯುತ್ತಿರಲಾಗಿ ಧೃತರಾಷ್ಟ್ರನ ಸೈನಿಕರು ಕ್ಷಣ-ಕ್ಷಣಕ್ಕೂ ಕ್ಷೀಣಿಸುತ್ತಿರಲಾಗಿ ಕುಪಿತರಾದ ನಿನ್ನ ತಂದೆಯವರು ಬ್ರಹ್ಮಾಸ್ತ್ರವನ್ನು ಪ್ರಕಟಪಡಿಸಿದರು. ನರ ಶ್ರೇಷ್ಠರಾದ ಅವರು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಭಲ್ಲಗಳಿಂದ ನೂರಾರು-ಸಾವಿರಾರು ಶತ್ರುಸೈನಿಕರನ್ನು ಸಂಹರಿಸಿದರು. ಪಾಂಡವಸೈನಿಕರು, ಕೇಕಯರು, ಮತ್ಸ್ಯರು, ಎಲ್ಲರಿಗಿಂತಲೂ ವಿಶೇಷವಾಗಿ ಪಾಂಚಾಲ ಸೈನಿಕರು–ಈ ಎಲ್ಲರೂ ಕಾಲಚೋದಿತರಾದವರಂತೆ ದ್ರೋಣರ ರಥದ ಬಳಿಗೆ ಹೋಗಿ ಸಂಪೂರ್ಣವಾಗಿ ವಿನಾಶಹೊಂದಿದರು. ದ್ರೋಣರು ಬ್ರಹ್ಮಾಸ್ತ್ರ ಪ್ರಯೋಗದಿಂದ ಒಂದು ಸಾವಿರ ನರಶ್ರೇಷ್ಠರನ್ನೂ, ಎರಡು ಸಾವಿರ ಆನೆಗಳನ್ನೂ ಮೃತ್ಯುದೇವತೆಯ ಬಳಿಗೆ ಕಳುಹಿಸಿಕೊಟ್ಟರು. ಕರ್ಣಪರ್ಯಂತ ವಾಗಿ ನರೆತ ಕೂದಲನ್ನು ಹೊಂದಿದ್ದ, ಶ್ಯಾಮಲವರ್ಣದವರಾದ, ಎಂಬತ್ತು ಐದು( ನಾಲ್ಕುನೂರು) ವಯಸ್ಸಿನವರಾದ ವೃದ್ಧ ದ್ರೋಣರು ಹದಿನಾರು ವರ್ಷದ ಯುವಕರಂತೆ ರಣಾಂಗಣದಲ್ಲಿ ಶತ್ರುಗಳನ್ನು ಸಂಹರಿಸುತ್ತಾ ಸಂಚರಿಸುತ್ತಿದ್ದರು. ದ್ರೋಣರಿಂದ ಸೈನಿಕರು ವಿಧ್ವಸ್ತರಾಗುತ್ತಿರಲಾಗಿ, ರಾಜರು ಹತರಾಗುತ್ತಿರಲಾಗಿ, ಕ್ರೋಧವಶರಾಗಿದ್ದ ಪಾಂಚಾಲರು ಯುದ್ಧದಿಂದ ಪರಾಙ್ಮುಖರಾದರು. ಹೀಗೆ ಪಾಂಚಾಲಸೈನಿಕರು ಹತೋತ್ಸಾಹರಾಗಿ ಯುದ್ಧದಿಂದ ವಿರಮಿಸುತ್ತಿರಲಾಗಿ, ಶತ್ರುಂಜಯರಾದ ದ್ರೋಣರು ದಿವ್ಯಾಸ್ತ್ರಗಳನ್ನು ಪುನಃಪುನಃ ಪ್ರಕಟಿಸುತ್ತಾ ಉದಯಿಸಿದ ಸೂರ್ಯ ನಂತೆಯೇ ಪ್ರಕಾಶಿಸಿದರು. ಪ್ರತಾಪವಂತರಾದ, ಶರಕಿರಣರಾದ ದ್ರೋಣರು ಪಾಂಡವರ ಸೈನ್ಯದ ಮಧ್ಯಭಾಗಕ್ಕೆ ಹೋಗಿ ನಡುನೆತ್ತಿಯ

ಮೇಲೆ ಬಂದ ಸೂರ್ಯನಂತೆ ದಿಟ್ಟಿಸಿ ನೋಡಲು ಅಶಕ್ಯರಾಗಿದ್ದರು. ಪ್ರಜ್ವಲಿಸುವ ಸೂರ್ಯನೋಪಾದಿಯಲ್ಲಿದ್ದ ದ್ರೋಣರ ಶರಕಿರಣಗಳಿಂದ ದಹಿಸಲ್ಪಡುತ್ತಿದ್ದ ಪಾಂಡು-ಪಾಂಚಾಲಸೈನಿಕರು ಭಸ್ಮೀಭೂತವಾದ ಪರಾಕ್ರಮವುಳ್ಳವರೂ, ಉತ್ಸಾಹರಹಿತರೂ, ಬುದ್ಧಿಗೆಟ್ಟವರೂ ಆದರು. ದ್ರೋಣರ ಬಾಣಗಳಿಂದ ಪೀಡಿಸಲ್ಪಡುತ್ತಿದ್ದ ಪಾಂಡವಸೈನಿಕರನ್ನು ನೋಡಿ ತಮ್ಮ ಪಕ್ಷಕ್ಕೇ ವಿಜಯವಾಗಬೇಕೆಂದು ಇಚ್ಛಿಸಿದ್ದ ಮಧುಸೂದನನು ಪಾಂಡುಪುತ್ರರನ್ನು ಕುರಿತು ಈ ಮಾತುಗಳನ್ನು ಹೇಳಿದನು:

**ನೈಷ ಜಾತು ನರೈಃ ಶಕ್ಯೋ ಜೇತುಂ ಶಸ್ತ್ರಭೃತಾಂ ವರಃ।**
**ಅಪಿ ವೃತ್ರಹಣಾ ಸಂಖ್ಯೇ ರಥಯೂಥಪಯೂಥಪಃ ॥೪೯॥**

"ಪಾಂಡುನಂದನರೇ! ಶಸ್ತ್ರಧಾರಿಗಳಲ್ಲಿಯೇ ಶ್ರೇಷ್ಠರಾದ, ರಥಿಗಳ ನಾಯಕರಿಗೂ ನಾಯಕರಾದ ಈ ದ್ರೋಣರನ್ನು ಯುದ್ಧದಲ್ಲಿ ಮನುಷ್ಯರಾರೂ ಜಯಿಸಲಾರರು. ವೃತ್ರಸಂಹಾರಕನಾದ ಇಂದ್ರನೂ ಸಹ ಖಂಡಿತವಾಗಿಯೂ ಜಯಿಸಲಾರನು.

**ತೇ ಯೂಯಂ ಧರ್ಮಮುತ್ಸರ್ಜ್ಯ ಜಯಂ ರಕ್ಷತ ಪಾಂಡವಾಃ।**
**ಯಥಾ ವಃ ಸಂಯುಗೇ ಸರ್ವಾನ್ನ ಹನ್ಯಾದ್ರುಕ್ಮವಾಹನಃ ॥೫೦॥**

ಪಾಂಡವರೇ! ರುಕ್ಮರಥರಾದ ದ್ರೋಣರು ಯುದ್ಧದಲ್ಲಿ ನಿಮ್ಮೆಲ್ಲರನ್ನೂ ಸಂಪೂರ್ಣವಾಗಿ ವಿನಾಶಮಾಡದಿರಬೇಕಾದರೆ ನೀವೀಗ ಧರ್ಮವನ್ನು ಕಟ್ಟಿಡಬೇಕು ಮತ್ತು ವಿಜಯವನ್ನು ರಕ್ಷಿಸಬೇಕು. (ಯಾವುದೇ ಮಾರ್ಗದಿಂದಲಾದರೂ ವಿಜಯಿಗಳಾಗಬೇಕು.)

**ಅಶ್ವತ್ಥಾಮ್ನಿ ಹತೇ ನೈಷ ಯುಧ್ಯೇದಿತಿ ಮತಿರ್ಮಮ।**
**ಹತಂ ತಂ ಸಂಯುಗೇ ಕಶ್ಚಿದಾಖ್ಯಾತ್ವಸ್ಮೈ ಮೃಷಾ ನರಃ ॥೫೧॥**

ಯುದ್ಧದಲ್ಲಿ ಅಶ್ವತ್ಥಾಮನೇನಾದರೂ ಹತನಾಗಿಬಿಟ್ಟರೆ ಮುಂದೆ ದ್ರೋಣರು ಯುದ್ಧಮಾಡಲಾರರೆಂಬುದು ನನ್ನ ಅಭಿಪ್ರಾಯವಾಗಿದೆ. (ಆದರೆ ಈಗ ಅಶ್ವತ್ಥಾಮನನ್ನು ಸಂಹರಿಸುವ ಸಾಧ್ಯತೆಯಿಲ್ಲ.) ಆದುದರಿಂದ ಯಾರಾದರೊಬ್ಬರು ಯುದ್ಧದಲ್ಲಿ ಅಶ್ವತ್ಥಾಮನು ಸತ್ತುಹೋದನೆಂಬ ಸುಳ್ಳುಸುದ್ದಿಯನ್ನು ದ್ರೋಣರಿಗೆ ಮುಟ್ಟಿಸಬೇಕು."

ಆದರೆ ಕೃಷ್ಣನ ಈ ಮಾತು ಧನಂಜಯನಿಗೆ ಹಿಡಿಸಲೇ ಇಲ್ಲ. ಉಳಿದ ಮೂವರೂ ಶ್ರೀಕೃಷ್ಣನ ಸಲಹೆಯು ಸಾಧುವಾಗಿದೆಯೆಂದು ಅಭಿಪ್ರಾಯ ಪಟ್ಟರು. ಯುಧಿಷ್ಠಿರನೂ ಕಡೆಗೆ ಬಹಳ ಕಷ್ಟದಿಂದ ಶ್ರೀಕೃಷ್ಣನ ಸಲಹೆಗೆ ಸಮ್ಮತಿಸಿದನು. ಭೀಮಸೇನನು ನಾಚಿಕೆಪಟ್ಟುಕೊಂಡೇ ನಿನ್ನ ತಂದೆಯವರಿಗೆ ಕೇಳಿಸುವಂತೆ ಅಶ್ವತ್ಥಾಮನು ಹತನಾದನೆಂದು ಕೂಗಿ ಹೇಳಿದನು. ಆದರೆ ಅವನ ಮಾತಿಗೆ ದ್ರೋಣರು ಗಮನವನ್ನೇ ಕೊಡಲಿಲ್ಲ. ಆದರೂ ಪುತ್ರವತ್ಸಲರಾದ ದ್ರೋಣರು ಸಂದೇಹಗೊಂಡವರಾಗಿ 'ಅಶ್ವತ್ಥಾಮನು ಹತನಾದನೇ ಅಥವಾ ಇಲ್ಲವೇ?'–ಎಂದು ಧರ್ಮರಾಜನನ್ನೇ ಪ್ರಶ್ನಿಸಿದರು. ಆಗ ಯುಧಿಷ್ಠಿರನ ಮನಸ್ಸು ಡೋಲಾಯಮಾನವಾಗಿದ್ದಿತು. ಸುಳ್ಳುಹೇಳಲು ಅವನಿಗೆ ಬಹಳ ಭಯವಾಗುತ್ತಿದ್ದಿತು. ಆದರೆ ಅವನ ಮನಸ್ಸು ಜಯ ಗಳಿಸುವುದರಲ್ಲಿಯೇ ಆಸಕ್ತವಾಗಿದ್ದಿತು. ಶ್ರೀಕೃಷ್ಣನ ಅಭಿಪ್ರಾಯದಂತೆ ಈ ಒಂದು ಉಪಾಯದ ಹೊರತಾಗಿ ಜಯಗಳಿಸಲು ಅನ್ಯಮಾರ್ಗವೇ ಇರಲಿಲ್ಲ. ಆ ಸಂದರ್ಭದಲ್ಲಿ ಮಾಲವದ ಅರಸನಾದ ಇಂದ್ರವರ್ಮನ ಪರ್ವತಾಕಾರವಾದ ಶರೀರವನ್ನು ಹೊಂದಿದ್ದ 'ಅಶ್ವತ್ಥಾಮಾ'–ಎಂಬ ಹೆಸರಿನ ಆನೆಯನ್ನು ಭೀಮಸೇನನು ಸಂಹರಿಸಿದುದನ್ನು ನೋಡಿ ದ್ರೋಣರ ಸಮೀಪಕ್ಕೆ ಹೋಗಿ ಯುಧಿಷ್ಠಿರನು ಗಟ್ಟಿಯಾಗಿ ಹೇಳಿದನು :

ಯಸ್ಯಾರ್ಥೇ ಶಸ್ತ್ರಮಾದತ್ಸೇ ಯಮವೇಕ್ಷ್ಯ ಚ ಜೀವಸಿ ।
ಪುತ್ರಸ್ತೇ ದಯಿತೋ ನಿತ್ಯಂ ಸೋಽಶ್ವತ್ಥಾಮಾ ನಿಪಾತಿತಃ ॥೫೭॥
ಶೇತೇ ವಿನಿಹತೋ ಭೂಮೌ ವನೇ ಸಿಂಹಶಿಶುರ್ಯಥಾ ॥೫೮॥

"ಆಚಾರ್ಯರೇ! ನೀವು ಯಾರಸಲುವಾಗಿ ಶಸ್ತ್ರಧಾರಣೆ ಮಾಡಿರುವಿರೋ, ಯಾರನ್ನು ನೋಡಿಕೊಂಡು ನೀವು ಜೀವಂತ ರಾಗಿರುವಿರೋ, ತಮಗೆ ಅತ್ಯಂತಪ್ರಿಯನಾದ ಆ ಅಶ್ವತ್ಥಾಮನು ಯುದ್ಧದಲ್ಲಿ ಕೊಲ್ಲಲ್ಪಟ್ಟನು. ಅರಣ್ಯದಲ್ಲಿ ಸತ್ತುಬಿದ್ದಿರುವ ಸಿಂಹದ ಮರಿಯಂತೆ–ಅವನೀಗ ಹತನಾಗಿ ಯುದ್ಧಭೂಮಿಯಲ್ಲಿ ಮಲಗಿದ್ದಾನೆ."

ದ್ರೋಣಪುತ್ರ! ಆಚಾರ್ಯರೊಡನೆ ಸುಳ್ಳುಹೇಳುವುದರಿಂದ ಮಹಾಪಾಪವು ಪ್ರಾಪ್ತವಾಗುವುದೆಂಬುದನ್ನು ತಿಳಿದಿದ್ದರೂ ಯುಧಿಷ್ಠಿರನು ದ್ವಿಜಶ್ರೇಷ್ಠರಾದ ದ್ರೋಣರನ್ನು ಕುರಿತು ಅಶ್ವತ್ಥಾಮನು ಹತನಾದನೆಂದೇ ಹೇಳಿದನು. ಅನಂತರ ಅಸ್ಪಷ್ಟವಾಗಿ ಆನೆಯು ಸತ್ತಿತು–ಎಂದೂ ಹೇಳಿದನು.

ವತ್ಸ! ಹೀಗೆ ಯುದ್ಧದಲ್ಲಿ ನೀನು ಸತ್ತುಹೋದೆಯೆಂಬ ವಾರ್ತೆಯನ್ನು ಕೇಳಿದ ದ್ರೋಣರು ಶೋಕತಪ್ತರಾಗಿ ಗಟ್ಟಿಯಾಗಿ ಅತ್ತರು. ದಿವ್ಯಾಸ್ತ್ರಗಳ ಪ್ರಯೋಗವನ್ನೂ ನಿಲ್ಲಿಸಿಬಿಟ್ಟರು. ಪುನಃ ಅವರು ಹಿಂದಿನಂತೆ ಯುದ್ಧಮಾಡಲಿಲ್ಲ. ಇಷ್ಟಜನರ ವಿರಹದಿಂದ (ಪ್ರಿಯಪುತ್ರನ ವಿಯೋಗ ಶಂಕೆಯಿಂದ ) ಬಹಳ ಉದ್ವಿಗ್ನರಾಗಿದ್ದ, ಶೋಕಾತುರರಾಗಿದ್ದ, ದೀನಮನಸ್ಕರಾಗಿದ್ದ ದ್ರೋಣರನ್ನು ಕ್ರೂರಕರ್ಮನಾದ ಧೃಷ್ಟದ್ಯುಮ್ನನು ಆಕ್ರಮಿಸಿದನು. ಲೋಕತತ್ತ್ವವಿಚಕ್ಷಣರಾದ ದ್ರೋಣರು ದೈವದಿಂದಲೇ ನಿರ್ದಿಷ್ಟನಾದ, ಮೃತ್ಯುರೂಪನಾದ ಧೃಷ್ಟದ್ಯುಮ್ನನನ್ನು ನೋಡಿ ದಿವ್ಯಾಸ್ತ್ರಗಳನ್ನು ವಿಸರ್ಜಿಸಿ ರಣರಂಗದಲ್ಲಿ ಪ್ರಾಯೋಪವೇಶಮಾಡಿದರು. ಅನಂತರ ಧೃಷ್ಟದ್ಯುಮ್ನನು ದ್ರೋಣರ ತಲೆಗೂದಲನ್ನು ಎಡಗೈಯಿಂದ ಹಿಡಿದುಕೊಂಡು ಎರಡೂ ಪಕ್ಷದ ವೀರರೂ ಕೂಗಿಕೊಳ್ಳುತ್ತಿದ್ದಾಗ ಅವರ ತಲೆಯನ್ನು ಖಡ್ಗದಿಂದ ಕತ್ತರಿಸಿಬಿಟ್ಟನು. “ನ ಹನ್ತವ್ಯೋ ನ ಹನ್ತವ್ಯಃ” “ಆಚಾರ್ಯರು ವಧಿಸಲ್ಪಡತಕ್ಕವರಲ್ಲ. ಅವರನ್ನು ಖಂಡಿತವಾಗಿಯೂ ವಧೆಮಾಡಬಾರದು”–ಎಂದು ಅವರೆಲ್ಲರೂ ಎಲ್ಲ ಕಡೆಗಳಿಂದಲೂ ಕೂಗಿಕೊಂಡರು. ಅದೇ ರೀತಿಯಲ್ಲಿ ಅರ್ಜುನನೂ ಸಹ ರಥದಿಂದಿಳಿದು ದ್ರೋಣರ ವಧೆಯನ್ನು ತಪ್ಪಿಸುವ ಆಶಯದಿಂದ ಧೃಷ್ಟದ್ಯುಮ್ನನ ಬಳಿಗೆ ಓಡಿಹೋದನು. ಧರ್ಮವೀರನಾದ ಅರ್ಜುನನು ಎರಡು ತೋಳುಗಳನ್ನೂ ಅವಸರದಿಂದೆತ್ತಿ ಅಳ್ಳಾಡಿಸುತ್ತಾ ‘ಜೀವನ್ತಮಾಚಾರ್ಯಮಾನಯ’ ‘ಆಚಾರ್ಯರನ್ನು ಜೀವಸಹಿತವಾಗಿಯೇ ಕರೆದುಕೊಂಡು ಬಾ’ ‘ಮಾ ವಧೀಃ’ -‘ಖಂಡಿತವಾಗಿಯೂ ಕೊಲ್ಲಬೇಡ’–ಎಂದು ಕೂಗಿಕೊಂಡನು. ಕೌರವರೂ ಮತ್ತು ಅರ್ಜುನನೂ ಧೃಷ್ಟದ್ಯುಮ್ನನನ್ನು ಕುರಿತು ಆಚಾರ್ಯರನ್ನು ಕೊಲ್ಲಕೂಡದೆಂದು ಕೂಗಿಹೇಳುತ್ತಿದ್ದರೂ ಸಹ ಮಹಾಕ್ರೂರಿಯಾದ ಪಾರ್ಷತನು ನಿನ್ನ ತಂದೆಯವರನ್ನು ಕೊಂದೇಬಿಟ್ಟನು.

ಅನಂತರ ಭಯದಿಂದ ಪೀಡಿತರಾದ ಎಲ್ಲ ಸೈನಿಕರೂ ಪಲಾಯನ ಮಾಡಿದರು. ನಿನ್ನ ತಂದೆಯ ಮರಣಾನಂತರ ನಾವೂ ಸಹ ಉತ್ಸಾಹರಹಿತರಾದೆವು."

ಮಹಾರಾಜ! ಯುದ್ಧದಲ್ಲಿ ತನ್ನ ತಂದೆಯು ಹತರಾದರೆಂಬ ದಾರುಣವಾರ್ತೆಯನ್ನು ಕೇಳಿ ದ್ರೌಣಿಯು ಕಾಲಿನಿಂದ ಮೆಟ್ಟಿದ ಸರ್ಪದೋಪಾದಿಯಲ್ಲಿ ಅತ್ಯಂತ ಕುಪಿತನಾದನು. ಕಟ್ಟಿಗೆಯ ರಾಶಿಯನ್ನು ಪಡೆದು ಯಜ್ಞೇಶ್ವರನು ಪ್ರಜ್ವಲಿಸುವಂತೆ–ಅಶ್ವತ್ಥಾಮನು ಕೋಪವೆಂಬ ಇಂಧನವನ್ನು ಹೊಂದಿ ಧಗ-ಧಗನೆ ಉರಿಯತೊಡಗಿದನು. ಕೈಯಿಂದ ಕೈಯನ್ನು ಉಜ್ಜುತ್ತಾ ಕಟ-ಕಟನೆ ಹಲ್ಲುಗಳನ್ನು ಕಡಿದನು. ಸರ್ಪದಂತೆ ಸುದೀರ್ಘವಾಗಿ ನಿಟ್ಟುಸಿರುಬಿಟ್ಟನು. ಅವನ ಕಣ್ಣುಗಳು ಕೋಪದಿಂದ ಕೆಂಡದಂತೆ ಕೆಂಪಾದುವು."

ನ೯೩ನೆಯ ಅಧ್ಯಾಯವು ಮುಗಿಯಿತು.

೧೯೪ನೆಯ ಅಧ್ಯಾಯ ನಾರಾಯಣಾಸ್ತ್ರಮೋಕ್ಷಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನ ಪ್ರಶ್ನೆ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

"ಸಂಜಯ! ಧೃಷ್ಟದ್ಯುಮ್ನನು ಬ್ರಾಹ್ಮಣರಾದ, ವೃದ್ಧರಾದ ಮತ್ತು ತನ್ನ ತಂದೆಯವರಾದ ದ್ರೋಣರನ್ನು ಅಧರ್ಮದಿಂದ ಸಂಹರಿಸಿದನೆಂಬುದನ್ನು ಕೇಳಿ ಅಶ್ವತ್ಥಾಮನು ಏನು ಹೇಳಿದನು? ಮಾನವ, ವಾರುಣ, ಆಗ್ನೇಯ, ಬ್ರಾಹ್ಮ, ಐಂದ್ರ, ನಾರಾಯಣ-ಇವೇ ಮೊದಲಾದ ಮಹಾಸ್ತ್ರಗಳು ದ್ರೋಣರಲ್ಲಿ ಸದಾ ಪ್ರತಿಷ್ಠಿತವಾಗಿದ್ದುವು. ಅವರು ಅತ್ಯಂತ ಧರ್ಮಿಷ್ಠರಾಗಿದ್ದರು. ಅಂತಹವರನ್ನು ಧೃಷ್ಟದ್ಯುಮ್ನನು ಅಧರ್ಮಮಾರ್ಗದಿಂದ ಸಂಹರಿಸಿದನೆಂದು ಕೃಪರಮೂಲಕ ತಿಳಿದುಕೊಂಡನಂತರ ಅಶ್ವತ್ಥಾಮನು ಯಾವ ಮಾತುಗಳನ್ನಾಡಿದನು? ಮಗನನ್ನು ಅತ್ಯಂತ ಗುಣವಂತನನ್ನಾಗಿ ಮಾಡಬೇಕೆಂಬ ಅಭಿಲಾಷೆಯಿಂದ ಮಹಾತ್ಮರಾದ ದ್ರೋಣರು ಪರಶುರಾಮನಿಂದ ಧನುರ್ವೇದವನ್ನು ಅಭ್ಯಸಿಸಿ, ಗುರುಗಳಿಂದ ಕಲಿತಿದ್ದ ಸಕಲದಿವ್ಯಾಸ್ತ್ರಗಳನ್ನೂ ತಮ್ಮ ಮಗನಾದ ಅಶ್ವತ್ಥಾಮನಿಗೆ ಉಪದೇಶಿಸಿದ್ದರು.

**ಏಕಮೇವ ಹಿ ಲೋಕೇಸ್ಮಿನ್ನಾತ್ಮನೋ ಗುಣವತ್ತರಮ್ ।**
**ಇಚ್ಛನ್ತಿ ಪುರುಷಾಃ ಪುತ್ರಂ ಲೋಕೇ ನಾನ್ಯಂ ಕಥಂಚನ ॥೫॥**

ಲೋಕದಲ್ಲಿ ಮನುಷ್ಯರು ತಮಗಿಂತಲೂ ತಮ್ಮ ಮಗನು ಹೆಚ್ಚು ಗುಣವಂತ (ಹೆಚ್ಚು ಹಣವಂತ, ಹೆಚ್ಚು ವಿದ್ಯಾವಂತ) ನಾಗಬೇಕೆಂದು ಆಶಿಸುತ್ತಾರೆಯೇ ಹೊರತು ಮಗನನ್ನು ಬಿಟ್ಟು ಬೇರೆಯವರು ತಮಗಿಂತಲೂ ಗುಣವಂತರಾಗುವುದನ್ನು ಯಾವುದೇ ಕಾರಣದಿಂದಲೂ ಸಹಿಸುವುದಿಲ್ಲ.

**ಆಚಾರ್ಯಾಣಾಂ ಭವನ್ತ್ಯೇವ ರಹಸ್ಯಾನಿ ಮಹಾತ್ಮನಾಮ್ ।**
**ತಾನಿ ಪುತ್ರಾಯ ವಾ ದದ್ಯುಃ ಶಿಷ್ಯಾಯಾನುಗತಾಯ ವಾ ॥೬॥**

ಮಹಾತ್ಮರಾದ ಆಚಾರ್ಯರು ವಿದ್ಯೆಯಲ್ಲಿನ ರಹಸ್ಯವನ್ನು ಬಹಿರಂಗಪಡಿಸದೇ ಇಟ್ಟುಕೊಂಡಿರುತ್ತಾರೆ. ಅಂತಹ ರಹಸ್ಯಗಳನ್ನವರು ಪುತ್ರನಿಗಾಗಲೀ, ತಮ್ಮನ್ನೇ ಸದಾಕಾಲದಲ್ಲಿಯೂ ಅನುಸರಿಸಿಕೊಂಡು ಶುಶ್ರೂಷೆಮಾಡುವ ಶಿಷ್ಯನಿಗಾಗಲೀ ಉಪದೇಶಮಾಡುತ್ತಾರೆ. ಶಾರದ್ವತಿಯ ಮಗನಾದ ಶೂರನಾದ ಅಶ್ವತ್ಥಾಮನು ದ್ರೋಣರಿಗೆ ಪ್ರಿಯಪುತ್ರನೂ ಮತ್ತು ಪ್ರಿಯಶಿಷ್ಯನೂ ಆಗಿದ್ದುದರಿಂದ ವಿಶೇಷರಹಸ್ಯಗಳನ್ನೊಳಗೊಂಡ ಸಮಸ್ತವಾದ ವಿದ್ಯೆಯನ್ನೂ ದ್ರೋಣರಿಂದ ಪಡೆದು ದ್ರೋಣರ ಅನಂತರದಲ್ಲಿ ಅವರ ಸ್ಥಾನವನ್ನು ಅಲಂಕರಿಸಲು ಯೋಗ್ಯನಾಗಿದ್ದಾನೆ.

**ರಾಮಸ್ಯ ತು ಸಮಃ ಶಸ್ತ್ರೇ ಪುರನ್ದರಸಮೋ ಯುಧಿ ।**
**ಕಾರ್ತವೀರ್ಯಸಮೋ ವೀರ್ಯೇ ಬೃಹಸ್ಪತಿಸಮೋ ಮತೌ ॥೮॥**

**ಮಹೀಧರಸಮಸ್ಥೈರ್ಯೇ ತೇಜಸಾಗ್ನಿಸಮೋ ಯುವಾ ।**
**ಸಮುದ್ರ ಇವ ಗಾಮ್ಭೀರ್ಯೇ ಕ್ರೋಧೇ ಚಾಶೀವಿಷೋಪಮಃ ॥೯॥**

**ಸ ರಥೀ ಪ್ರಥಮೋ ಲೋಕೇ ದೃಢಧನ್ವಾ ಜಿತಕ್ಲಮಃ ।**
**ಶೀಘ್ರೋನಿಲ ಇವಾಕ್ರನ್ದೇ ಚರನ್ಕ್ರುದ್ಧ ಇವಾನ್ತಕಃ ॥೧೦॥**

ಸಂಜಯ! ಅಶ್ವತ್ಥಾಮನೇನು ಸಾಮಾನ್ಯನೇ? ಶಸ್ತ್ರವಿದ್ಯೆಯಲ್ಲಿ ಪರಶುರಾಮನಿಗೆ ಸಮಾನನು. ಯುದ್ಧದಲ್ಲಿ ಇಂದ್ರನಿಗೆ ಸಮಾನನು.

ಪರಾಕ್ರಮದಲ್ಲಿ ಕಾರ್ತವೀರ್ಯಸದೃಶನು. ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನು. ಪರ್ವತಕ್ಕೆ ಸಮಾನವಾದ ಸ್ಥೈರ್ಯವಿರತಕ್ಕವನು. ಅಗ್ನಿಯಂತೆ ಮಹಾತೇಜಸ್ವಿಯು. ಗಾಂಭೀರ್ಯದಲ್ಲಿ ಸಮುದ್ರಸದೃಶನು. ಕೋಪದಲ್ಲಿ ವಿಷಸರ್ಪಕ್ಕೆ ಸಮಾನನು. ದ್ರೌಣಿಯು ಶ್ರೇಷ್ಠನಾದ ರಥಿಯೂ, ಸುದೃಢವಾದ ಧನುಸ್ಸನ್ನು ಧರಿಸಿರತಕ್ಕವನೂ ಆಗಿದ್ದಾನೆ. ಅವನು ಶ್ರಮವೆಂಬುದನ್ನೇ ಸಂಪೂರ್ಣವಾಗಿ ಜಯಿಸಿದ್ದಾನೆ. ದ್ರೋಣಪುತ್ರನು ಯುದ್ಧಸಮಯದಲ್ಲಿ ಬಿರುಗಾಳಿಯಂತೆ ವೇಗಪೂರ್ವಕವಾಗಿ ಸಂಚರಿಸುತ್ತಾ ಪರಮಕ್ರುದ್ಧನಾದ ಯಮರಾಜನಂತೆಯೇ ಕಾಣುತ್ತಾನೆ. ಅವನು ಮಹಾಸ್ತ್ರಗಳನ್ನೂ, ಘೋರವಾದ ಬಾಣಗಳನ್ನೂ ಪುಂಖಾನುಪುಂಖವಾಗಿ ಬಿಡುತ್ತಿರುವಾಗ ಭೂಮಿಯೇ ಸಂಕಟಕ್ಕೊಳಗಾಗುತ್ತದೆ. ವೀರನಾದ ಸತ್ಯಪರಾಕ್ರಮನಾದ ದ್ರೌಣಿಯು ಯುದ್ಧಸಮಯದಲ್ಲಿ ಯಾವುದೇ ಕಾರಣದಿಂದಲೂ ವ್ಯಥಿತನಾಗುವುದಿಲ್ಲ. ಅವನು ವೇದಾಧ್ಯಯನವನ್ನೂ ಮತ್ತು ಬ್ರಹ್ಮಚರ್ಯೆಯನ್ನೂ ವಿಧಿವತ್ತಾಗಿ ಪೂರ್ಣಗೊಳಿಸಿ ಸ್ನಾತಕನಾಗಿದ್ದಾನೆ. ಧನುರ್ವೇದದಲ್ಲಿಯೂ ಪಾರಂಗತನಾಗಿರುತ್ತಾನೆ. ದಶರಥನ ಮಗನಾದ ಶ್ರೀರಾಮನಂತೆ ಮತ್ತು ಮಹೋದಧಿಯಂತೆ ಸರ್ವದಾ ಶಾಂತಸ್ವಭಾವದಿಂದಿರುತ್ತಾನೆ. ಅಂತಹ ಅಶ್ವತ್ಥಾಮನು-ಧೃಷ್ಟದ್ಯುಮ್ನನು ಧರ್ಮಮೂರ್ತಿಯಾದ ತನ್ನ ತಂದೆಯನ್ನು ಅಧರ್ಮಮಾರ್ಗದಿಂದ ಸಂಹರಿಸಿದುದಕ್ಕಾಗಿ ಏನೆಂದು ಹೇಳಿದನು? (ಯಾವ ಪ್ರತಿಕ್ರಿಯೆಯನ್ನು ತೋರಿದನು?)

**ಧೃಷ್ಟದ್ಯುಮ್ನಸ್ಯ ಯೋ ಮೃತ್ಯುಃ ಸೃಷ್ಟಸ್ತೇನ ಮಹಾತ್ಮನಾ ।**
**ಯಥಾ ದ್ರೋಣಸ್ಯ ಪಾಞ್ಚಾಲ್ಯೋ ಯಜ್ಞಸೇನಸುತೋಽಭವತ್ ॥**

ಸಂಜಯ! ನಾನು ಈ ರಹಸ್ಯವಿಷಯವನ್ನು ಬಲ್ಲವರಿಂದ ಕೇಳಿ ತಿಳಿದುಕೊಂಡಿದ್ದೇನೆ. ದ್ರೋಣಾಚಾರ್ಯರನ್ನು ವಧಿಸುವ ಸಲುವಾಗಿಯೇ ಪಾಂಚಾಲದೇಶೀಯನಾದ ದ್ರುಪದನ ಮಗನಾದ ಧೃಷ್ಟದ್ಯುಮ್ನನು ಜನ್ಮ ತಾಳಿದನು. ಅದೇ ರೀತಿಯಲ್ಲಿ ಧೃಷ್ಟದ್ಯುಮ್ನನನ್ನು ಸಂಹರಿಸುವ ಸಲು

ವಾಗಿಯೇ ಮಹಾತ್ಮರಾದ ದ್ರೋಣರೂ ಅಶ್ವತ್ಥಾಮನಿಗೆ ಜನ್ಮವನ್ನಿತ್ತರು. ಕ್ರೂರಿಯಾದ, ಸಂಕುಚಿತವಾದ ದೃಷ್ಟಿಯುಳ್ಳ, ಪಾಪಿಷ್ಠನಾದ ಮತ್ತು ನೃಶಂಸನಾದ ಧೃಷ್ಟದ್ಯುಮ್ನನು ತನ್ನ ತಂದೆಯಾದ ದ್ರೋಣರನ್ನು ವಧಿಸಿದನೆಂಬ ವಾರ್ತೆಯನ್ನು ಕೇಳಿ ಅಶ್ವತ್ಥಾಮನೇನೆಂದನು?"

೧೯೪ನೆಯ ಅಧ್ಯಾಯವು ಮುಗಿಯಿತು.

೧೯೫ನೆಯ ಅಧ್ಯಾಯ ನಾರಾಯಣಾಸ್ತ್ರಮೋಕ್ಷಪರ್ವ (ಮುಂದುವರಿದಿದೆ.)

## ಅಶ್ವತ್ಥಾಮನ ಕ್ರೋಧಪೂರ್ಣವಾದ ಉದ್ಗಾರ: ನಾರಾಯಣಾಸ್ತ್ರವನ್ನು ಪ್ರಕಟಿಸಿದುದು

ಸಂಜಯನು ಅಶ್ವತ್ಥಾಮನ ಪ್ರತಿಕ್ರಿಯೆಯನ್ನು ವಿವರಿಸುತ್ತಾನೆ:

"ಮಹಾರಾಜ! ಪಾಪಕರ್ಮನಾದ ಧೃಷ್ಟದ್ಯುಮ್ನನು ತನ್ನ ತಂದೆಯನ್ನು ಮೋಸದಿಂದ ಕೊಂದನೆಂಬ ವಾರ್ತೆಯನ್ನು ಕೇಳಿದೊಡನೆಯೇ ಅಶ್ವತ್ಥಾಮನ ಕಣ್ಣುಗಳಲ್ಲಿ ದುಃಖದಿಂದಲೂ ಮತ್ತು ರೋಷದಿಂದಲೂ ನೀರು ತುಂಬಿಕೊಂಡಿತು. ಪ್ರಳಯಕಾಲದಲ್ಲಿ ಪ್ರಾಣಿಗಳ ಅಸುವನ್ನು ಹೀರಲಿಚ್ಛಿಸುವ ಅಂತಕನೋಪಾದಿಯಲ್ಲಿ ಕ್ರುದ್ಧನಾದ ಅಶ್ವತ್ಥಾಮನ ಶರೀರವು ಜಾಜ್ವಲ್ಯಮಾನವಾಗಿ ಉರಿಯುತ್ತಿರುವಂತೆ ಕಾಣುತ್ತಿದ್ದಿತು. ಅಶ್ವತ್ಥಾಮನ ಕಣ್ಣುಗಳಲ್ಲಿ ನೀರು ತುಂಬಿಕೊಳ್ಳುತ್ತಲೇ ಇದ್ದಿತು. ಅದನ್ನು ಅವನು ಬಾರಿ-ಬಾರಿಗೂ ಒರೆಸಿಕೊಳ್ಳುತ್ತಲೇ ಇದ್ದನು. ಅನಂತರ ಕೋಪದಿಂದ ನಿಟ್ಟುಸಿರುಬಿಡುತ್ತಾ ಅವನು ದುರ್ಯೋಧನನೊಡನೆ ಈ ಮಾತುಗಳನ್ನು ಹೇಳಿದನು:

"ದುರ್ಯೋಧನ! ಕ್ಷುದ್ರಜನರು, ಶಸ್ತ್ರಸಂನ್ಯಾಸವನ್ನು ಮಾಡಿದ್ದ ನನ್ನ ತಂದೆಯನ್ನು ಹೇಗೆ ಕೊಂದರೆಂಬ ವಿಷಯವು ತಿಳಿಯಿತು. ಧರ್ಮಧ್ವಜಿಯಾದ (ಕೇವಲ ಮಾತಿನಲ್ಲಿ ಮಾತ್ರವೇ ಧಾರ್ಮಿಕನಾಗಿರುವ) ಯುಧಿಷ್ಠಿರನು ಎಂತಹ ಪಾಪಕಾರ್ಯವನ್ನು ಮಾಡಿದನೆಂಬುದನ್ನೂ ನಾನು ತಿಳಿದುಕೊಂಡೆನು. ಧರ್ಮಪುತ್ರನ ಅತ್ಯಂತಹೀನವಾದ ಮತ್ತು ಅತ್ಯಂತಕ್ರೂರವಾದ ವ್ಯವಹಾರವನ್ನೂ ಕೇಳಿದೆನು.

ಯುದ್ಧೇಷ್ವಪಿ ಪ್ರವೃತ್ತಾನಾಂ ಧ್ರುವಂ ಜಯಪರಾಜಯೌ ।
ದ್ವಯಮೇತದ್ಭವೇದ್ರಾಜನ್ವಧಸ್ತತ್ರ ಪ್ರಶಸ್ಯತೇ ॥೫॥



ಮಹಾರಾಜ! ಯುದ್ಧದಲ್ಲಿ ಪ್ರವೃತ್ತರಾದವರಿಗೆ ಜಯಾಪಜಯಗಳೆರಡರಲ್ಲಿ ಯಾವುದಾದರೊಂದು ನಿಶ್ಚಿತವಾಗಿಯೇ ಇದೆ. ಆದರೆ ಯುದ್ಧದಲ್ಲಾಗುವ ವಧೆಗೆ ಹೆಚ್ಚಿನ ಪ್ರಾಶಸ್ತ್ಯವಿದೆ.

ನ್ಯಾಯವೃತ್ತೋ ವಧೋ ಯಸ್ತು
ಸಂಗ್ರಾಮೇ ಯುಧ್ಯತೋ ಭವೇತ್ ।
ನ ಸ ದುಃಖಾಯ ಭವತಿ
ತಥಾ ದೃಷ್ಟೋ ಹಿ ಸ ದ್ವಿಜೈಃ ॥೬॥

ಯುದ್ಧದಲ್ಲಿ ತೊಡಗಿರುವವನಿಗೆ ನ್ಯಾಯವಾದ ರೀತಿಯಲ್ಲಿ ವಧೆ

ಯಾದರೆ ಅದರಿಂದ ಯಾರಿಗೂ ಯಾವವಿಧವಾದ ದುಃಖವೂ ಉಂಟಾಗುವುದಿಲ್ಲ. ದ್ವಿಜರು ಈ ಧರ್ಮರಹಸ್ಯವನ್ನು ಕಂಡುಕೊಂಡಿದ್ದಾರೆ.

ಪುರುಷಸಿಂಹನೇ! ಯುದ್ಧದಲ್ಲಿ ನಿಧನಹೊಂದಿದ ನನ್ನ ತಂದೆಯವರು ವೀರರಿಗೆ ಲಭಿಸುವಂತಹ ಉತ್ತಮಲೋಕಗಳಿಗೆ ಹೋಗಿದ್ದಾರೆ. ಈ ವಿಷಯದಲ್ಲಿ ಸಂಶಯವೇ ಇಲ್ಲ. ಆದುದರಿಂದ ಅವರ ನಿಧನಕ್ಕಾಗಿ ದುಃಖಿಸುವುದೂ ಉಚಿತವಲ್ಲ. ನನ್ನ ತಂದೆಯರು ಧರ್ಮದಲ್ಲಿಯೇ ಪ್ರವೃತ್ತರಾಗಿದ್ದಾಗ ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಅವರ ಶಿಖೆ ಯನ್ನು ಮತ್ತೊಬ್ಬನು ಹಿಡಿದನೆಂಬ ಘೋರವಾರ್ತೆಯು ನನ್ನ ಮರ್ಮ ಸ್ಥಳವನ್ನು ಛಿದ್ರಗೊಳಿಸುತ್ತಿದೆ. ನಾನು ಜೀವಿಸಿರುವಾಗಲೇ ನನ್ನ ತಂದೆಯವರ ಶಿಖೆಯನ್ನು ಮತ್ತೊಬ್ಬನು ಹಿಡಿಯುವಂತಾದರೆ ನಾನು ಬದುಕಿದ್ದೂ ಪ್ರಯೋಜನವೇನು? ಪುತ್ರವಂತರಾದ ಇತರರು ತಮ್ಮ ಮಕ್ಕಳಿಂದ ಯಾವವಿಧವಾದ ಆಸೆಯನ್ನು ಪೂರೈಸಿಕೊಳ್ಳಲು ಇಚ್ಛಿಸು ತ್ತಾರೆ? (ನನ್ನಂತಹವನೇ ನನ್ನ ತಂದೆಯವರ ಕಷ್ಟಕಾಲದಲ್ಲಿ ಅವರ ಸಮೀಪದಲ್ಲಿಲ್ಲದೇ ಅವರ ನಿಧನಕ್ಕೆ ಮತ್ತು ಅವಹೇಳನಕ್ಕೆ ಕಾರಣನಾದ ನೆಂದಮೇಲೆ ಪ್ರಪಂಚದಲ್ಲಿರುವ ಇತರ ಪಿತೃಗಳು ತಮ್ಮ ಮಕ್ಕಳಿಂದ ಏನನ್ನು ತಾನೇ ನಿರೀಕ್ಷಿಸಿಯಾರು?) ಲೋಕದಲ್ಲಿನ ಜನರು ಕಾಮ ದಿಂದಲೋ, ಕ್ರೋಧದಿಂದಲೋ, ಅಜ್ಞಾನದಿಂದಲೋ ಹರ್ಷದಿಂದಲೋ ಅಥವಾ ಬಾಲ್ಯಚಾಪಲ್ಯದಿಂದಲೋ ಧರ್ಮಬಾಹಿರವಾದ ಕಾರ್ಯವನ್ನು ಮಾಡುತ್ತಾರೆ. ಈ ಕಾರಣಗಳಿಂದಲೇ ಹಿರಿಯರನ್ನೂ ಅವಮಾನಗೊಳಿಸು ತ್ತಾರೆ. ಅಂತಹ ಒಂದು ಅಧಾರ್ಮಿಕವಾದ, ಅವಹೇಳನಕರವಾದ ಕಾರ್ಯ ವನ್ನು ಧೃಷ್ಟದ್ಯುಮ್ನನು ಮಾಡಿರುವನು. ದುರಾತ್ಮನಾದ ಮತ್ತು ಕ್ರೂರಿಯಾದ ಅವನು ನಿಶ್ಚಯವಾಗಿಯೂ ನನ್ನನ್ನು ಸಂಪೂರ್ಣವಾಗಿ ಮರೆತೇ ಈ ಘೋರಕಾರ್ಯವನ್ನು ಮಾಡಿರುತ್ತಾನೆ. ಪಾರ್ಷತನು ತಾನು ಮಾಡಿದ ಪಾಪಕರ್ಮಕ್ಕೆ ಸುದಾರುಣವಾದ ಫಲವನ್ನು ಈಗಲೇ ಕಾಣು ತ್ತಾನೆ. ಯಾವನು ಮೋಸದಿಂದ ಆಚಾರ್ಯರನ್ನು ಶಸ್ತ್ರಸಂನ್ಯಾಸಮಾಡು

ವಂತೆ ಮಾಡಿದನೋ, ಆ ಯುಧಿಷ್ಠಿರನೂ ಅತ್ಯಂತಹೀನವಾದ ಈ ಅಕಾರ್ಯವನ್ನು ಮಾಡಿ ಸುಳ್ಳುಗಾರನಾಗಿದ್ದಾನೆ. ಧರ್ಮರಾಜನ ರಕ್ತವನ್ನೂ ಭೂದೇವಿಯಿಂದು ಪಾನಮಾಡುತ್ತಾಳೆ.

**ಶಪೇ ಸತ್ಯೇನ ಕೌರವ್ಯ ಇಷ್ಟಾಪೂರ್ತೇನ ಚೈವ ಹ ।**
**ಅಹತ್ವಾ ಸರ್ವಪಾಞ್ಚಾಲಾಞ್ಜೀವೇಯಂ ನ ಕಥಂಚನ ।**
**ಸರ್ವೋಪಾಯೈರ್ಯತಿಷ್ಯಾಮಿ ಪಾಞ್ಚಾಲಾನಾಮಹಂ ವಧೇ ॥೧೫॥**

ದುರ್ಯೋಧನ! ಸತ್ಯದಮೇಲೆ ಮತ್ತು ಇಷ್ಟಾಪೂರ್ತಗಳಮೇಲೆ ಆಣೆಯಿಟ್ಟು ಪ್ರತಿಜ್ಞೆಮಾಡುತ್ತೇನೆ. ನಾನು ಯಾವುದೇಕಾರಣದಿಂದಲೂ ಎಲ್ಲ ಪಾಂಚಾಲಯೋಧರನ್ನೂ ಸಂಹರಿಸದೇ ಬದುಕಿರಲಾರೆನು. ಎಲ್ಲ ವಿಧವಾದ ಉಪಾಯಗಳಿಂದಲೂ ನಾನು ಪಾಂಚಾಲರ ವಧೆಗಾಗಿ ಪ್ರಯತ್ನಮಾಡುತ್ತೇನೆ. ಪಾಪಕರ್ಮಿಯಾದ ಧೃಷ್ಟದ್ಯುಮ್ನನನ್ನು ನಾನು ಋಜುಮಾರ್ಗದಿಂದಲೋ, ಕ್ರೂರಮಾರ್ಗದಿಂದಲೋ ಯಾವುದೇ ಮಾರ್ಗವನ್ನವಲಂಬಿಸಿಯಾದರೂ ಸಂಹರಿಸುತ್ತೇನೆ.

ಕೌರವೇಶ್ವರ! ಪಾಂಚಾಲರನ್ನು ನಿಃಶೇಷವಾಗಿ ವಧೆಮಾಡಿದನಂತರವೇ ನಾನು ಸಮಾಧಾನಹೊಂದುತ್ತೇನೆ.

**ಯದರ್ಥಂ ಪುರುಷವ್ಯಾಘ್ರ ಪುತ್ರಾನಿಚ್ಛನ್ತಿ ಮಾನವಾಃ ।**
**ಪ್ರೇತ್ಯ ಚೇಹ ಚ ಸಂಪ್ರಾಪ್ತಾಸ್ತ್ರಾಯನ್ತೇ ಮಹತೋ ಭಯಾತ್ ॥೧೬॥**

ಪುರುಷವ್ಯಾಘ್ರನೇ! ಪರಲೋಕದಲ್ಲಿಯೂ ಮತ್ತು ಈ ಲೋಕದಲ್ಲಿಯೂ ಪ್ರಾಪ್ತವಾಗಬಹುದಾದ ಮಹಾಭಯದಿಂದ ರಕ್ಷಿಸುತ್ತಾರೆಂಬ ಕಾರಣದಿಂದಲೇ ಮಾನವರು ಮಕ್ಕಳನ್ನು ಪಡೆಯಲು ಅಪೇಕ್ಷಿಸುತ್ತಾರೆ. ಪರ್ವತಸಮಾನನಾಗಿರುವ ಪುತ್ರನೂ ಮತ್ತು ಶಿಷ್ಯನೂ ಆದ ನಾನು ಜೀವಿಸಿರುವಾಗಲೇ ಬಂಧುಗಳೇ ಇಲ್ಲವೋ ಎಂಬಂತಹ ದುರವಸ್ಥೆಯು ನನ್ನ ತಂದೆಯವರಿಗೆ ಪ್ರಾಪ್ತವಾಯಿತು.

**ಧಿಙ್ಮಮಾಸ್ತ್ರಾಣಿ ದಿವ್ಯಾನಿ ಧಿಗ್ಬಾಹೂ ಧಿಕ್ಪರಾಕ್ರಮಮ್ ।**
**ಯಂ ಸ್ಮ ದ್ರೋಣಃ ಸುತಂ ಪ್ರಾಪ್ಯ ಕೇಶಗ್ರಹಮವಾಪ್ತವಾನ್ ॥೧೭॥**

ನನ್ನಲ್ಲಿರುವ ದಿವ್ಯಾಸ್ತ್ರಗಳಿಗೂ ಧಿಕ್ಕಾರವಿರಲಿ. ನನ್ನ ಈ ಬಾಹು

ಗಳಿಗೂ ಧಿಕ್ಕಾರವಿರಲಿ. ನನ್ನ ಪರಾಕ್ರಮಕ್ಕೂ ಧಿಕ್ಕಾರವಿರಲಿ. ನನ್ನಂತಹ ಅಯೋಗ್ಯನಾದ ಮಗನನ್ನು ಪಡೆದ ಕಾರಣದಿಂದ ಮಹಾತ್ಮರಾದ ನನ್ನ ತಂದೆಯವರು ಕ್ಷುದ್ರರಿಂದ ಜುಟ್ಟುಹಿಡಿಸಿಕೊಳ್ಳುವಂತಾಯಿತಲ್ಲವೇ? ಭರತ ಸತ್ತಮನೇ! ಯದ್ಯಪಿ ಈಗ ನನ್ನ ತಂದೆಯವರು ಪರಲೋಕಕ್ಕೆ ಹೊರಟುಹೋಗಿದ್ದರೂ ಅವರ ಋಣವು ತೀರುವ ರೀತಿಯಲ್ಲಿ ನಾನು ಸಂಹಾರಕಾರ್ಯವನ್ನು ಮಾಡುತ್ತೇನೆ. (ಅವರಿರುವಾಗಲೇ, ಅವರೆದುರಿನಲ್ಲಿಯೇ ಶತ್ರುಗಳನ್ನು ತುಂಡರಿಸಿ ನಮ್ಮ ತಂದೆಯವರ ಮನಸ್ಸಿಗೆ ನೆಮ್ಮದಿಯನ್ನುಂಟುಮಾಡುವುದು ನನ್ನ ಕರ್ತವ್ಯವಾಗಿದ್ದಿತು. ಆದರೆ ಈಗ ನಮ್ಮ ತಂದೆಯವರು ಇಲ್ಲದೇ ಇರುವುದರಿಂದ ಅವರಿದ್ದಾಗ ಯಾವ ಕಾರ್ಯಮಾಡಿ ಅವರನ್ನು ತಣಿಸಬೇಕಾಗಿದ್ದಿತೋ ಅದೇ ಕಾರ್ಯವನ್ನೇ ಮಾಡಿ ಪಿತೃಋಣದಿಂದ ಮುಕ್ತನಾಗುತ್ತೇನೆ. )

**ಆರ್ಯೇಣ ಹಿ ನ ವಕ್ತವ್ಯಾ ಕದಾಚಿತ್ ಸ್ತುತಿರಾತ್ಮನಃ ।**
**ಪಿತುರ್ವಧಮಮರ್ಷ್ಯಂಸ್ತು ವಕ್ಷ್ಯಾಮ್ಯದ್ಯೈವ ಪೌರುಷಮ್ ॥೨೧॥**

ದುರ್ಯೋಧನ! ಆರ್ಯಧರ್ಮದಲ್ಲಿರತಕ್ಕವನು ಆತ್ಮಸ್ತುತಿಯನ್ನು ಮಾಡಿಕೊಳ್ಳುವುದು ಖಂಡಿತವಾಗಿಯೂ ಯೋಗ್ಯವಲ್ಲ. ಆದರೆ ನನ್ನ ತಂದೆಯ ವಧೆಯನ್ನು ಸಹಿಸಿಕೊಳ್ಳಲು ಅಸಮರ್ಥನಾದ ನಾನು ನನ್ನ ಪೌರುಷದ ಬಗೆಗೆ ಹೇಳುತ್ತೇನೆ. ಸರ್ವಸೈನಿಕರನ್ನೂ ಅರೆದು ಧ್ವಂಸಮಾಡಿ ಪ್ರಳಯಕಾಲವನ್ನೇ ಉಂಟುಮಾಡುವ ನನ್ನ ವೀರ್ಯವನ್ನಿಂದು ಕೃಷ್ಣಸಹಿತರಾದ ಪಾಂಡವರು ನೋಡಲಿ. ರಥಸ್ಥನಾದ ನನ್ನನ್ನಿಂದು ದೇವ-ಗಂಧರ್ವಾಸುರ-ರಾಕ್ಷಸರಿಂದಲೂ ಕೂಡ ಜಯಿಸಲು ಸಾಧ್ಯವಾಗುವುದಿಲ್ಲ. ಅಸ್ತ್ರವಿದ್ಯೆಯಲ್ಲಿ ಈ ಪ್ರಪಂಚದಲ್ಲಿಯೇ ನನಗಿಂತಲೂ ಮತ್ತು ಅರ್ಜುನನಿಗಿಂತಲೂ ಮಿಗಿಲಾದವರು ಯಾರೂ ಇರುವುದಿಲ್ಲ. ನಾನಿಂದು ಶತ್ರುಗಳ ಸೈನ್ಯದ ಮಧ್ಯದಲ್ಲಿ ನುಗ್ಗಿ, ಪ್ರಜ್ವಲಿಸುತ್ತಿರುವ ವೀರರ ಮಧ್ಯದಲ್ಲಿ ನಿಂತು–ಪ್ರಖರವಾದ ಕಿರಣಗಳಿಂದ ಕೂಡಿದ ಸೂರ್ಯನು ಕಿರಣಗಳನ್ನು ಎಲ್ಲೆಡೆಯಲ್ಲಿಯೂ ಹರಡುವಂತೆ–ದೇವನಿರ್ಮಿತವಾದ ಸಕಲಾಸ್ತ್ರಗಳನ್ನೂ ಶತ್ರುಗಳಮೇಲೆ ಪ್ರಯೋಗಿಸುತ್ತೇನೆ. ಇಂದಿನ ಮಹಾಸಮರದಲ್ಲಿ

ನನ್ನ ಧನುಸ್ಸಿನಿಂದ ಪ್ರಮುಕ್ತವಾದ ಬಾಣಗಳು ನನ್ನ ಪರಾಕ್ರಮವೆಷ್ಟೆಂಬುದನ್ನು ಪ್ರದರ್ಶಿಸುತ್ತಾ ಪಾಂಡವರನ್ನು ಮಥಿಸಿಬಿಡುತ್ತವೆ. ಎಲ್ಲ ದಿಕ್ಕುಗಳೂ ಮಳೆಯ ನೀರಿನ ಧಾರೆಗಳಿಂದ ವ್ಯಾಪ್ತವಾಗುವಂತೆ–ನನ್ನ ತೀಕ್ಷ್ಣವಾದ ಬಾಣಗಳಿಂದ ವ್ಯಾಪ್ತವಾಗುವುದನ್ನು ಎಲ್ಲರೂ ನೋಡುತ್ತಾರೆ. ಭಯಂಕರವಾಗಿ ಧ್ವನಿ ಮಾಡುತ್ತಾ ಹೋಗುವ ಬಾಣಗಳ ಸಮೂಹವನ್ನು ಸರ್ವತ್ರ ಸುರಿಸುತ್ತಾ ಬಿರುಗಾಳಿಯು ವೃಕ್ಷಗಳನ್ನು ಕೆಳಗುರುಳಿಸುವಂತೆ– ಶತ್ರುಗಳನ್ನು ತಂಡ-ತಂಡವಾಗಿ ಕೆಳಗುರುಳಿಸುತ್ತೇನೆ. ದುರ್ಯೋಧನ! ನಾನಿಂದು ಪ್ರಯೋಗಿಸಲಿರುವ ಅಸ್ತ್ರವನ್ನು ಅರ್ಜುನ-ಕೃಷ್ಣರಾಗಲೀ, ಭೀಮಸೇನನಾಗಲೀ, ನಕುಲ-ಸಹದೇವರಾಗಲೀ, ಯುಧಿಷ್ಠಿರರಾಜನಾಗಲೀ, ದುರಾತ್ಮನಾದ ಆ ಪಾರ್ಷತನಾಗಲೀ, ಶಿಖಂಡಿ-ಸಾತ್ಯಕಿಗಳಾಗಲೀ ತಿಳಿದಿರುವುದಿಲ್ಲ. ಈ ಮಹಾಸ್ತ್ರವು ಪ್ರಯೋಗಸಂಹಾರಗಳೊಡನೆ ನನ್ನಲ್ಲಿ ಮಾತ್ರವೇ ಪ್ರತಿಷ್ಠಿತವಾಗಿದೆ.

**ನಾರಾಯಣಾಯ ಮೇ ಪಿತ್ರಾ ಪ್ರಣಮ್ಯ ವಿಧಿಪೂರ್ವಕಮ್ ।**
**ಉಪಹಾರಃ ಪುರಾ ದತ್ತೋ ಬ್ರಹ್ಮರೂಪ ಉಪಸ್ಥಿತಃ ॥೩೧॥**

**ತಂ ಸ್ವಯಂ ಪರಿಗೃಹ್ಯಾಥ ಭಗವಾನ್ಸ ವರಂ ದದೌ ।**
**ವವ್ರೇ ಪಿತಾ ಮೇ ಪರಮಮಸ್ತ್ರಂ ನಾರಾಯಣಂ ತತಃ ॥೩೨॥**

ಹಿಂದೊಮ್ಮೆ ನಮ್ಮ ತಂದೆಯವರು ವಿಧಿಪೂರ್ವಕವಾಗಿ ಶ್ರೀಮನ್ನಾರಾಯಣನಿಗೆ ನಮಸ್ಕರಿಸಿ ಬ್ರಹ್ಮರೂಪವಾದ ಉಪಹಾರವನ್ನು ಸಮರ್ಪಿಸಿದರು. (ವೇದಮಂತ್ರಗಳಿಂದ ಪರಮಾತ್ಮನನ್ನು ಸ್ತೋತ್ರ ಮಾಡಿದರು.) ಶ್ರೀಮನ್ನಾರಾಯಣನು ಉಪಸ್ಥಿತನಾಗಿ ಬ್ರಹ್ಮರೂಪವಾದ ಉಪಹಾರವನ್ನು ಸ್ವೀಕರಿಸಿ ವರವೊಂದನ್ನು ದಯಪಾಲಿಸಿದನು. ಆಗ ನನ್ನ ತಂದೆಯವರು ಶ್ರೇಷ್ಠವಾದ ನಾರಾಯಣಾಸ್ತ್ರವನ್ನು ದಯಪಾಲಿಸಬೇಕೆಂದು ಪ್ರಾರ್ಥಿಸಿದರು. ನನ್ನ ತಂದೆಯವರು ಮಾಡಿದ ಪ್ರಾರ್ಥನೆಯನ್ನು ಕೇಳಿ ಭಗವಾನ್ ಶ್ರೀಮನ್ನಾರಾಯಣನು ಹೇಳಿದನು:

**ಭವಿತಾ ತ್ವತ್ಸಮೋ ನಾನ್ಯಃ ಕಶ್ಚಿದ್ಯುಧಿ ನರಃ ಕ್ವಚಿತ್ ॥೩೩॥**

"ದ್ರೋಣ! ಈ ಮಹಾಸ್ತ್ರವನ್ನು ನೀನು ಪಡೆದುಕೊಂಡನಂತರ

ನಿನಗೆ ಸಮಾನವಾಗಿ ಯುದ್ಧಮಾಡುವವನು ಮನುಷ್ಯರಲ್ಲಿಯೇ ಯಾರೂ ಇರುವುದಿಲ್ಲ. ಆದರೆ:

**ನ ತ್ವಿದಂ ಸಹಸಾ ಬ್ರಹ್ಮನ್ಪ್ರಯೋಕ್ತವ್ಯಂ ಕಥಂಚನ ।**
**ನ ಹ್ಯೇತದಸ್ತ್ರಮನ್ಯತ್ರ ವಧಾಚ್ಛತ್ರೋರ್ನಿವರ್ತತೇ ॥೩೪॥**

ಬ್ರಹ್ಮನ್! ಈ ಮಹಾಸ್ತ್ರವನ್ನು ವಿಚಾರಮಾಡದೇ ಪ್ರಯೋಗಿಸಬಾರದು. ಏಕೆಂದರೆ : ಈ ಮಹಾಸ್ತ್ರವು ಶತ್ರುವನ್ನು ವಧೆಮಾಡದೆ ಹಿಂದಿರುಗುವುದೇ ಇಲ್ಲ.

**ನ ಚೈತಚ್ಛಕ್ಯತೇ ಜ್ಞಾತುಂ ಕಂ ನ ವಧ್ಯೇದಿತಿ ಪ್ರಭೋ ।**
**ಅವಧ್ಯಮಪಿ ಹನ್ಯಾದ್ಧಿ ತಸ್ಮಾನ್ನೈತತ್ಪ್ರಯೋಜಯೇತ್ ॥೩೫॥**

ಈ ಮಹಾಸ್ತ್ರವು ಯಾರನ್ನು ಸಂಹರಿಸುತ್ತದೆ–ಯಾರನ್ನು ಬಿಡುತ್ತದೆ?–ಎಂಬುದನ್ನು ತಿಳಿಯುವುದಕ್ಕೇ ಆಗುವುದಿಲ್ಲ. ವಧೆಗೆ ಅರ್ಹರಲ್ಲದವರನ್ನೂ ವಧಿಸಿಬಿಡುತ್ತದೆ. ಆದುದರಿಂದ ಈ ಮಹಾಸ್ತ್ರವನ್ನು ದುಡುಕಿ ಪ್ರಯೋಗಿಸಲೇಬಾರದು.

**ಅಥ ಸಂಖ್ಯೇ ರಥಸ್ಯೈವ ಶಸ್ತ್ರಾಣಾಂ ಚ ವಿಸರ್ಜನಮ್ ।**
**ಪ್ರಯಾಚತಾಂ ಚ ಶತ್ರೂಣಾಂ ಗಮನಂ ಶರಣಸ್ಯ ಚ ॥೩೬॥**

**ಏತೇ ಪ್ರಶಮನೇ ಯೋಗಾ ಮಹಾಸ್ತ್ರಸ್ಯ ಪರಂತಪ ।**
**ಸರ್ವಥಾ ಪೀಡಿತೋ ಹಿಂಸ್ಯಾದವಧ್ಯಾನ್ಪೀಡಯನ್ರಣೇ ॥೩೭॥**

ಪರಂತಪನೇ! ರಣರಂಗದಲ್ಲಿ ರಥವನ್ನು ವಿಸರ್ಜಿಸಿ ಕೆಳಗಿಳಿಯುವುದು, ಶಸ್ತ್ರಾಸ್ತ್ರಗಳನ್ನು ಕೆಳಗಿಡುವುದು, ಅಭಯವನ್ನು ಯಾಚಿಸುವುದು ಮತ್ತು ಶರಣಾಗತರಾಗುವುದು–ಇವುಗಳು ಈ ಮಹಾಸ್ತ್ರವನ್ನು ಉಪಶಮನ ಗೊಳಿಸತಕ್ಕ ಕೆಲವು ಉಪಾಯಗಳಾಗಿವೆ. ರಣಾಂಗಣದಲ್ಲಿ ಈ ಅಸ್ತ್ರದ ಮೂಲಕವಾಗಿ ಅವಧ್ಯರಾದವರನ್ನು ಪೀಡಿಸಿದ್ದೇ ಆದರೆ ಅಸ್ತ್ರದ ಪ್ರಯೋಕ್ತೃವೇ ಪೀಡೆಗೆ ಒಳಗಾಗುತ್ತಾನೆ."

ಅನಂತರ ನನ್ನ ತಂದೆಯವರು ನನ್ನ ಸಲುವಾಗಿ ನಾರಾಯಣ ಮಹಾಸ್ತ್ರವನ್ನು ಪಡೆದುಕೊಂಡರು. ಪ್ರಭುವಾದ ಶ್ರೀಮನ್ನಾರಾಯಣನು ಪುನಃ ನನ್ನ ತಂದೆಯವರನ್ನು ಕುರಿತು ಹೇಳಿದನು:

**ತ್ವಂ ವಧಿಷ್ಯಸಿ ಸರ್ವಾಣಿ ಶಸ್ತ್ರವರ್ಷಾಣ್ಯನೇಕಶಃ ।**
**ಅನೇನಾಸ್ತ್ರೇಣ ಸಂಗ್ರಾಮೇ ತೇಜಸಾ ಚ ಜ್ವಲಿಷ್ಯಸಿ ॥೩೯॥**

"ನೀನು ಈ ಮಹಾಸ್ತ್ರದಿಂದ ನಿನ್ನ ಮೇಲೆ ಬೀಳುವ ಶಸ್ತ್ರಗಳ ವೃಷ್ಟಿಯನ್ನು ಹಲವು ಬಾರಿ ಧ್ವಂಸಮಾಡುವೆ. ಈ ಅಸ್ತ್ರವನ್ನು ಹೊಂದಿರುವುದರಿಂದ ನೀನು ಮಹಾತೇಜಸ್ಸಿನಿಂದಲೂ ಪ್ರಜ್ವಲಿಸುವೆ."

ಮಹಾರಾಜ! ಶ್ರೀಮನ್ನಾರಾಯಣನು ಹೀಗೆ ಹೇಳಿ ತನ್ನ ಪರಮಪದಕ್ಕೆ ಹೊರಟುಹೋದನು. ಈ ರೀತಿ ನನ್ನ ತಂದೆಯವರು ಆ ನಾರಾಯಣಾಸ್ತ್ರವನ್ನು ಶ್ರೀಮನ್ನಾರಾಯಣನಿಂದಲೇ ಪಡೆದುಕೊಂಡರು. ಅವರಿಂದ ನನಗೂ ಪ್ರಾಪ್ತವಾಯಿತು. ಅದೇ ಮಹಾಸ್ತ್ರದಿಂದಲೇ ನಾನು ಇಂದಿನ ಯುದ್ಧದಲ್ಲಿ–ಇಂದ್ರನು ಅಸುರರನ್ನು ಹೊಡೆದೋಡಿಸಿದಂತೆ ಪಾಂಡವ-ಪಾಂಚಾಲ-ಮತ್ಸ್ಯ-ಕೇಕಯಸೈನಿಕರನ್ನು ಹೊಡೆದೋಡಿಸುತ್ತೇನೆ. ನಾನು ಬಿಟ್ಟ ಬಾಣಗಳು ಯಾವರೀತಿಯಲ್ಲಿ ಹೋಗಬೇಕೆಂದು ಇಚ್ಛಿಸುವೆನೋ ಅದೇ ರೀತಿಯಲ್ಲಿ ನನ್ನ ಬಾಣಗಳು ಪರಾಕ್ರಮಿಗಳಾದ ಶತ್ರುಗಳ ಮೇಲೆ ಹೋಗಿ ಬೀಳುತ್ತವೆ.

**ಯಥೇಷ್ಟಮಶ್ಮವರ್ಷೇಣ ಪ್ರವರ್ಷಿಷ್ಯೇ ರಣೇ ಸ್ಥಿತಃ।**
**ಅಯೋಮುಖೈಶ್ಚ ವಿಹಗೈರ್ದ್ರಾವಯಿಷ್ಯೇ ಮಹಾರಥಾನ್ ।**
**ಪರಶ್ವಧಾಂಶ್ಚ ನಿಶಿತಾನುತ್ಸ್ರಕ್ಷ್ಯೇಽಹಮಸಂಶಯಮ್ ॥೪೩॥**

ದುರ್ಯೋಧನ! ನಾನು ರಣರಂಗದಲ್ಲಿ ಕುಳಿತು ನನ್ನ ಇಚ್ಛೆಯಂತೆ ಶತ್ರುಸೈನ್ಯದಮೇಲೆ ಕಲ್ಲಿನ ಮಳೆಗರೆಯುತ್ತೇನೆ. ಲೋಹಮಯವಾದ ಪಕ್ಷಿಗಳ ಮೂಲಕವಾಗಿ ಮಹಾರಥರು ಪಲಾಯನಮಾಡುವಂತೆ ಮಾಡುತ್ತೇನೆ. ನಿಶಿತವಾದ ಗಂಡುಗೊಡಲಿಗಳನ್ನು ಶತ್ರುಸೈನಿಕರ ಮೇಲೆ ಸುರಿಸುತ್ತೇನೆ. ಈ ವಿಷಯದಲ್ಲಿ ಸಂಶಯಕ್ಕೆ ಅವಕಾಶವೇ ಇಲ್ಲ. ಈ ರೀತಿಯಲ್ಲಿ ಶತ್ರು ಸಂತಾಪಕನಾದ ನಾನು ಪಾಂಡವರ ಪ್ರಯತ್ನವನ್ನು ವ್ಯರ್ಥಗೊಳಿಸಿ ಮಹಾನಾರಾಯಣಾಸ್ತ್ರದಿಂದ ಶತ್ರುಗಳನ್ನು ವಿಧ್ವಂಸಮಾಡುತ್ತೇನೆ. ಮಿತ್ರ-ಬ್ರಹ್ಮ-ಗುರುದ್ರೋಹಿಯಾದ, ನೀಚನಾದ, ಅತಿನಿಂದ್ಯನಾದ, ಪಾಂಚಾಲಕುಲಕಳಂಕನಾದ ಧೃಷ್ಟದ್ಯುಮ್ನನು ಜೀವಂತನಾಗಿ ನನ್ನಿಂದ ಇಂದು ತಪ್ಪಿಸಿಕೊಂಡು ಹೋಗಲಾರನು."

ಧೃತರಾಷ್ಟ್ರಮಹಾರಾಜ! ಅಶ್ವತ್ಥಾಮನ ವೀರೋಕ್ತಿಯನ್ನು ಕೇಳಿ ಸೈನಿಕರು ಯುದ್ಧಕ್ಕೆ ಹಿಂದಿರುಗಿದರು. ಪುರುಷಶ್ರೇಷ್ಠರಾದ ಕೌರವರು ತಮ್ಮಲ್ಲಿದ್ದ ಮಹಾಶಂಖಗಳನ್ನು ಊದಿದರು. ಹೃಷ್ಟರಾದ ಸೈನಿಕರು ಭೇರಿಗಳನ್ನು ಬಾರಿಸಿದರು. ಸಾವಿರಾರು ಡಿಂಡಿಮಗಳನ್ನು ಬಜಾಯಿಸಿದರು. ಕುದುರೆಗಳ ಗೊರಸುಗಳಿಂದಲೂ ರಥಚಕ್ರಗಳ ಸಂಚಲನದಿಂದಲೂ ಪೀಡಿತಳಾದ ವಸುಧೆಯು ಆರ್ತನಾದವನ್ನು ಮಾಡಿದಳು. ಆ ಭಯಂಕರ ಶಬ್ದವು ಆಕಾಶವನ್ನೂ, ಸ್ವರ್ಗವನ್ನೂ ಮತ್ತು ಭೂತಲವನ್ನೂ ನಿನಾದಿತವನ್ನಾಗಿ ಮಾಡಿತು. (ಎಲ್ಲ ಕಡೆಗಳಲ್ಲಿಯೂ ಸೈನಿಕರ ಕಾಲುಗಳ ಸಪ್ಪಳಗಳೂ, ಕುದುರೆಗಳ ಗೊರಸುಗಳ ಶಬ್ದಗಳೂ, ರಥಚಕ್ರಗಳ ಗಡ-ಗಡಾಶಬ್ದಗಳೂ ಕೇಳಿಬರುತ್ತಿದ್ದುವು.) ಮೇಘದ ಗರ್ಜನೆಗೆ ಸಮಾನವಾಗಿದ್ದ ಆ ಮಹಾಶಬ್ದವನ್ನು ಕೇಳಿದ ಪಾಂಡವರು ಯೋಧಶ್ರೇಷ್ಠರೊಡನೆ ಕಲೆತು ಮಂತ್ರಾಲೋಚನೆಗೆ ತೊಡಗಿದರು.

ಅನಂತರ ದ್ರೋಣರ ಮಗನಾದ ಅಶ್ವತ್ಥಾಮನು ನೀರನ್ನು ಮುಟ್ಟಿ ಆಚಮನ ಮಾಡಿ ಮಹಾನಾರಾಯಣಾಸ್ತ್ರವನ್ನು ಪ್ರಕಟಿಸಿದನು.”

೧೯೫ನೆಯ ಅಧ್ಯಾಯವು ಮುಗಿಯಿತು.

೧೯೬ನೆಯ ಅಧ್ಯಾಯ ನಾರಾಯಣಾಸ್ತ್ರಮೋಕ್ಷಪರ್ವ (ಮುಂದುವರಿದಿದೆ.)

**ಕೌರವರ ಸಿಂಹನಾದವನ್ನು ಕೇಳಿದ ಯುಧಿಷ್ಠಿರನು ಅದಕ್ಕೆ ಕಾರಣವೇನಿರಬಹುದೆಂದು ಅರ್ಜುನನನ್ನು ಕೇಳಿದುದು: ಅರ್ಜುನನು ಅಶ್ವತ್ಥಾಮನ ಕ್ರೋಧವನ್ನೂ, ಗುರುಹತ್ಯೆಯಿಂದ ಆಗಬಹುದಾದ ಭಯಂಕರಪರಿಣಾಮವನ್ನೂ ಹೇಳಿದುದು**

ಸಂಜಯನು ನಾರಾಯಣಾಸ್ತ್ರದ ಪ್ರಯೋಗದಿಂದ ಭೂಮಿಯ ಮೇಲಾದ ಪ್ರತಿಕ್ರಿಯೆಯನ್ನು ವರ್ಣಿಸುತ್ತಾನೆ:

**ಪ್ರಾದುರ್ಭೂತೇ ತತಸ್ತಸ್ಮಿನ್ನಸ್ತ್ರೇ ನಾರಾಯಣೇ ಪ್ರಭೋ ।**
**ಪ್ರಾವಾತ್ಸಪೃಷತೋ ವಾಯುರನಭ್ರೇ ಸ್ತನಯಿತ್ನುಮಾನ್ ॥೧॥**

“ಮಹಾರಾಜ! ಮಹಾನಾರಾಯಣಾಸ್ತ್ರವು ಪ್ರಾದುರ್ಭೂತವಾಗ

ಲಾಗಿ ನೀರಿನ ತುಂತುರುಗಳೊಡನೆ ಗಾಳಿಯು ಬೀಸತೊಡಗಿತು. ಮೋಡವೇ ಇಲ್ಲದ ಆಕಾಶದಲ್ಲಿ ಗುಡುಗು-ಸಿಡಿಲುಗಳ ಗರ್ಜನೆಗಳು ಕೇಳತೊಡಗಿದುವು.

**ಚಚಾಲ ಪೃಥಿವೀಚಾಪಿ ಚುಕ್ಷುಭೇ ಚ ಮಹೋದಧಿಃ ।**
**ಪ್ರತಿಸ್ರೋತಃ ಪ್ರವೃತ್ತಾಶ್ಚ ಗನ್ತುಂ ತತ್ರ ಸಮುದ್ರಗಾಃ ॥೨॥**

ಭೂಮಿಯು ನಡುಗಿತು. ಸಮುದ್ರವು ಅಲ್ಲೋಲ-ಕಲ್ಲೋಲ ವಾಯಿತು. ಸಮುದ್ರಗಾಮಿಗಳಾದ ದೊಡ್ಡ-ದೊಡ್ಡ ನದಿಗಳು ಮೇಲ್ಮುಖವಾಗಿ ಪ್ರವಹಿಸತೊಡಗಿದುವು. (ಸಮುದ್ರದ ಕಡೆಗೆ ಪ್ರವಹಿಸದೇ ಹಿಮ್ಮುಖವಾಗಿ ಹರಿಯತೊಡಗಿದುವು.)

**ಶಿಖರಾಣಿ ವ್ಯಶೀರ್ಯನ್ತ ಗಿರೀಣಾಂ ತತ್ರ ಭಾರತ ।**
**ಅಪಸವ್ಯಂ ಮೃಗಾಶ್ಚೈವ ಪಾಣ್ಡುಸೇನಾಂ ಪ್ರಚಕ್ರಿರೇ ॥೩॥**

ಪರ್ವತದ ಶಿಖರಗಳು ಬಿರುಕುಬಿಟ್ಟುವು. ಮೃಗಗಳು ಪಾಂಡವರ ಸೈನ್ಯವನ್ನು ಪ್ರತಿಕೂಲವಾದ ರೀತಿಯಲ್ಲಿ ಬಳಸಿದುವು.

**ತಮಸಾ ಚಾವಕೀರ್ಯನ್ತ ಸೂರ್ಯಶ್ಚ ಕಲುಷೋಽಭವತ್ ।**
**ಸಂಪತನ್ತಿ ಚ ಭೂತಾನಿ ಕ್ರವ್ಯಾದಾನಿ ಪ್ರಹೃಷ್ಟವತ್ ॥೪॥**

ಎಲ್ಲ ದಿಕ್ಕುಗಳೂ ಕತ್ತಲಿನಿಂದ ಮುಚ್ಚಿಹೋದುವು. ಸೂರ್ಯನೂ ಮಾಲಿನ್ಯವನ್ನು ಹೊಂದಿದನು. ಮಾಂಸಾಹಾರಿಗಳಾದ ಪ್ರಾಣಿಗಳು ಸಂತಸಗೊಂಡು ರಣರಂಗದ ಕಡೆಗೆ ಗುಂಪು-ಗುಂಪಾಗಿ ಬರತೊಡಗಿದುವು. ಮಹತ್ತರವಾದ ಆ ದಾರುಣಪರಿಸ್ಥಿತಿಯನ್ನು ನೋಡಿ ದೇವ-ದಾನವ-ಗಂಧರ್ವರೂ ಭಯಗೊಂಡರು. ಮುಂದಿನ ಪರಿಣಾಮವೇನಾಗಬಹು ದೆಂದು ಅವರೆಲ್ಲರೂ ತೀವ್ರವಾಗಿ ಚರ್ಚಿಸುತ್ತಿದ್ದರು. ಅಶ್ವತ್ಥಾಮನ ಮಹಾಭಯಂಕರವಾದ, ಘೋರರೂಪವಾದ ಮಹಾನಾರಾಯಣಾಸ್ತ್ರವನ್ನು ನೋಡಿ ಎಲ್ಲ ರಾಜರೂ ಭಯಗೊಂಡರು ಮತ್ತು ದುಃಖಿತರಾದರು."

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ:

"ಸಂಜಯ! ತಂದೆಯ ವಧೆಯನ್ನು ಸಹಿಸದಿದ್ದ, ಶೋಕದಿಂದ

ಬಹಳವಾಗಿ ಪರಿತಪಿಸುತ್ತಿದ್ದ ದ್ರೋಣಪುತ್ರನಾದ ಅಶ್ವತ್ಥಾಮನೊಡನೆ ಎಲ್ಲ ಕುರುಸೈನಿಕರೂ ಯುದ್ಧಕ್ಕೆ ಹಿಂದಿರುಗಿದನಂತರ, ಕುರುಸೈನಿಕರು ತಮ್ಮ ಮೇಲೆ ಎರಗಿ ಬರುತ್ತಿರುವುದನ್ನು ಕಂಡು ಪಾಂಡವರು ತಮ್ಮ ರಕ್ಷಣೆಗಾಗಿ ಅದರಲ್ಲಿಯೂ ಮುಖ್ಯವಾಗಿ ಧೃಷ್ಟದ್ಯುಮ್ನನ ರಕ್ಷಣೆಗಾಗಿ ಯಾವ ಉಪಾಯವನ್ನು ಕೈಗೊಂಡರು?–ಈ ವಿಷಯವನ್ನು ನನಗೆ ಯಥಾವತ್ತಾಗಿ ಹೇಳು."

"ಮಹಾರಾಜ! ಯುಧಿಷ್ಠಿರನು ಸ್ವಲ್ಪಹೊತ್ತಿಗೆ ಮುಂಚೆ ನಿನ್ನ ಕಡೆಯ ಸೈನಿಕರು ಪಲಾಯನಮಾಡುತ್ತಿದ್ದುದನ್ನು ಕಂಡಿದ್ದನು. ಪುನಃ ಶತ್ರುಸೈನ್ಯದಲ್ಲಿ ಘೋರಗರ್ಜನೆಯಾಗುತ್ತಿದ್ದುದನ್ನು ಕೇಳಿ ವ್ಯಾಕುಲನಾಗಿ ಅರ್ಜುನನನ್ನು ಪ್ರಶ್ನಿಸಿದನು:

"ಅರ್ಜುನ! ವಜ್ರಹಸ್ತನಾದ ಇಂದ್ರನಿಂದ ವೃತ್ರಾಸುರನು ಕೊಲ್ಲಲ್ಪಟ್ಟಂತೆ–ಧೃಷ್ಟದ್ಯುಮ್ನನಿಂದ ಆಚಾರ್ಯರು ಹತರಾಗಲಾಗಿ, ಕುರುಯೋಧರು ವಿಜಯದ ಆಸೆಯನ್ನೇ ಸಂಪೂರ್ಣವಾಗಿ ತೊರೆದು, ದೀನಮನಸ್ಕರಾಗಿ ಆತ್ಮರಕ್ಷಣೆಯನ್ನಾದರೂ ಮಾಡಿಕೊಳ್ಳಬೇಕೆನ್ನುವ ಬುದ್ಧಿಯಿಂದ ರಣಾಂಗಣವನ್ನೇ ಬಿಟ್ಟು ಓಡಿಹೋದರು. ಹಾಗೆ ಓಡಿಹೋಗುತ್ತಿದ್ದ ರಥಿಕರ ಪಾರ್ಷ್ಣಿ ಸಾರಥಿಗಳು ಸತ್ತುಹೋಗಿದ್ದರು. ಅವರ ರಥದ ಪತಾಕ-ಧ್ವಜ-ಛತ್ರಗಳು ಮುರಿದು ಬಿದ್ದಿದ್ದುವು. ಮೂಕಿಗಳು ಸೀಳಿಹೋಗಿದ್ದುವು. ಅವರು ಕುಳಿತುಕೊಳ್ಳುವ ಆಸನಗಳೂ ಸಹ ಭಿನ್ನವಾಗಿಹೋಗಿದ್ದುವು. ಕುದುರೆಗಳೂ ಬಾಣಾಘಾತಗಳಿಂದ ವ್ಯಾಕುಲಗೊಂಡಿದ್ದುವು. ರಥಗಳ ಅಚ್ಚುಮರಗಳೂ, ನೊಗಗಳೂ ಮತ್ತು ಚಕ್ರಗಳೂ ಮುರಿದುಹೋಗಿದ್ದುವು. ಅದಕ್ಕಿಂತಲೂ ವಿಶೇಷವಾಗಿ ರಥಿಕರೇ ಬಹಳವಾಗಿ ಗಾಯಗೊಂಡು, ವ್ಯಾಕುಲಗೊಂಡ ಕುದುರೆಗಳಿಂದ ರಣಾಂಗಣದ ಸುತ್ತಲೂ ಸೆಳೆದಾಡಲ್ಪಡುತ್ತಿದ್ದರು. (ಅಂತಹ ದುಃಸ್ಥಿತಿಯಲ್ಲಿದ್ದ ಕುರುಪ್ರವೀರರು ಇಷ್ಟು ಬೇಗ ಸಿಂಹನಾದಗಳನ್ನು ಮಾಡುತ್ತಿರುವುದಕ್ಕೆ ಕಾರಣವೇನಿರಬಹುದು?) ಭಯಗೊಂಡಿದ್ದ ಕುರುಯೋಧರಲ್ಲಿ ಕೆಲವರು ಕುದುರೆಗಳ ಮೇಲೆ ಕುಳಿತು ಕಾಲುಗಳಿಂದ ಅವುಗಳನ್ನು ತಿವಿದು ತ್ವರೆಗೊಳಿಸುತ್ತಾ ರಣಾಂಗಣವನ್ನು ಬಿಟ್ಟು ಓಡಿಹೋದರು. ಸಾರಥಿಯನ್ನು

ಕಳೆದುಕೊಂಡ ಕೆಲವರು ತಾವೇ ರಥವನ್ನು ನಡೆಸಿಕೊಂಡು ಹೋಗುತ್ತಿದ್ದರು. ಮತ್ತೆ ಕೆಲವರು ರಥಿಕರು ಮುರಿದುಹೋಗಿದ್ದ ತಮ್ಮ ರಥಗಳನ್ನು ಅಲ್ಲಿಯೇ ಬಿಟ್ಟು ನಾಗಾಲೋಟದಿಂದ ಪಲಾಯನಮಾಡುತ್ತಿದ್ದರು. ಕುದುರೆಗಳ ಮೇಲೆ ಕುಳಿತಿದ್ದ ಕೆಲವರು ಯೋಧರು ಕುದುರೆಗಳು ಮೇರೆದಪ್ಪಿ ಓಡುತ್ತಿದ್ದಾಗ ತಮ್ಮ ಆಸನಗಳಿಂದ ಅರ್ಧಭಾಗ ಜಾರಿಬಿದ್ದು, ಭೂಮಿಯಮೇಲೂ ಬೀಳದೇ ಕುದುರೆಯ ಮೇಲೂ ಸರಿಯಾಗಿ ಕುಳಿತುಕೊಳ್ಳಲಾಗದೇ ವಿಚೇತನರಾಗಿ ಲಗಾಮುತಪ್ಪಿದ ಕುದುರೆಗಳಿಂದ ಸೆಳೆದೊಯ್ಯಲ್ಪಡುತ್ತಿದ್ದರು. ಮತ್ತೆ ಕೆಲವು ಗಜಯೋಧರು ನಾರಾಚಗಳಿಂದ ಹತರಾಗಿ ಆಸನಗಳಿಂದ ಚ್ಯುತ ರಾಗುತ್ತಿದ್ದರು. ಆದರೆ ಅವರು ಕೆಳಕ್ಕೆ ಬೀಳದೇ ಆನೆಗಳ ಹೆಗಲ ಮೇಲಿರುತ್ತಿದ್ದ ಹಗ್ಗಗಳಿಗೆ ಸಿಕ್ಕಿಹಾಕಿಕೊಂಡು ನೇತಾಡುತ್ತಿದ್ದರು. ಬಾಣಗಳಿಂದ ಗಾಯಗೊಂಡ ಮತ್ತು ಮಾವಟಿಗರಿಲ್ಲದ ಕೆಲವು ಆನೆಗಳು ಯೋಧರನ್ನೆಳೆದುಕೊಂಡು ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದುವು.

ಮತ್ತೆ ಕೆಲವರು ಕವಚಗಳನ್ನೂ, ಆಯುಧಗಳನ್ನೂ ಕಳೆದುಕೊಂಡು ವಾಹನಗಳಿಂದ ಕುಸಿದು ಭೂಮಿಯ ಮೇಲೆ ಬಿದ್ದಿದ್ದರು. ಅಂತಹವರಲ್ಲಿ ಕೆಲವರು ರಥಚಕ್ರಗಳ ಅಂಚುಗಳಿಂದ ಕತ್ತರಿಸಲ್ಪಟ್ಟಿದ್ದರು. ಮತ್ತೆ ಕೆಲವರು ಆನೆ-ಕುದುರೆಗಳ ಕಾಲಿಗೆ ಸಿಕ್ಕಿ ಮರ್ದಿತರಾಗುತ್ತಿದ್ದರು. ಮತ್ತೆ ಕೆಲವರು ಭಯದಿಂದ 'ಹಾ ಪುತ್ರಕ! ಹಾ ತಾತ!' –ಎಂದು ಕಿರುಚಿಕೊಳ್ಳುತ್ತಾ ಪಲಾಯನಮಾಡುತ್ತಿದ್ದರು. ಸಂಕಟದಿಂದ ನಿರುತ್ಸಾಹಿಗಳಾಗಿದ್ದ ಅವರು ತಮ್ಮ-ತಮ್ಮಲ್ಲಿಯೇ ಒಬ್ಬರು ಮತ್ತೊಬ್ಬರನ್ನು ಗುರುತಿಸುತ್ತಿರಲಿಲ್ಲ. ಮತ್ತೆ ಕೆಲವು ಯೋಧರು ಬಹಳವಾಗಿ ಗಾಯಗೊಂಡ ತಮ್ಮ ಮಕ್ಕಳನ್ನೋ ಪಿತೃಗಳನ್ನೋ, ಸ್ನೇಹಿತರನ್ನೋ, ಅಣ್ಣ-ತಮ್ಮಂದಿರನ್ನೋ ತೊಡೆಗಳ ಮೇಲೆ ಮಲಗಿಸಿಕೊಂಡು ಅವರ ಕವಚಗಳನ್ನು ಬಿಚ್ಚಿ ನೀರನ್ನು ಚುಮುಕಿಸುತ್ತಿದ್ದರು. (ಶೈತ್ಯೋಪಚಾರಮಾಡುತ್ತಿದ್ದರು.)

ಅರ್ಜುನ! ದ್ರೋಣರು ಹತರಾದನಂತರ ಇಂತಹ ದುರವಸ್ಥೆಯನ್ನು ಹೊಂದಿದ್ದ ಕೌರವಯೋಧರನ್ನು ಇಷ್ಟು ಬೇಗ ನಮ್ಮೊಡನೆ ಯುದ್ಧ ಮಾಡಲು ರಣರಂಗಕ್ಕೆ ಕರೆತಂದವರಾರು? ನಿನಗೇನಾದರೂ ಈ ವಿಷಯವು ತಿಳಿದಿದ್ದಪಕ್ಷದಲ್ಲಿ ನನ್ನೊಡನೆ ಹೇಳು. ಕುದುರೆಗಳು ಕೆನೆಯುವ

ಶಬ್ದಗಳೂ, ಆನೆಗಳ ಘೀಂಕಾರಶಬ್ದಗಳೂ, ರಥಚಕ್ರಗಳ ಗಡ-ಗಡಾ ಶಬ್ದಗಳೂ ಸಮ್ಮಿಶ್ರವಾಗಿ ದೊಡ್ಡದಾದ ಭಯಂಕರಶಬ್ದವು ನನಗೀಗ ಕೇಳಿ ಬರುತ್ತಿದೆ. ಕುರುಸೈನ್ಯಸಾಗರದಲ್ಲಿ ಈ ಶಬ್ದಗಳು ಬಹಳ ತೀವ್ರವಾಗಿ ಕ್ಷಣ-ಕ್ಷಣಕ್ಕೂ ಅಧಿಕಗೊಳ್ಳುತ್ತಿವೆ ಮತ್ತು ನಮ್ಮ ಸೈನಿಕರನ್ನು ಕಂಪನ ಗೊಳಿಸುತ್ತಿವೆ. ಈಗ ನಮಗೆ ಕೇಳಿಸುತ್ತಿರುವ ರೋಮಾಂಚಕಾರಕವಾದ ಭಯಂಕರಧ್ವನಿಯು ಇಂದ್ರಸಹಿತವಾದ ಮೂರುಲೋಕಗಳನ್ನೂ ನುಂಗಿಬಿಡ ಬಹುದೆಂದು ನನಗೆ ಭಾಸವಾಗುತ್ತಿದೆ. ಈ ಭಯಂಕರನಿನಾದವು ವಜ್ರಧರ ನಾದ ಇಂದ್ರನ ಗರ್ಜನೆಯಿರಬಹುದೆಂದೇ ನಾನು ಭಾವಿಸಿದ್ದೇನೆ. ದ್ರೋಣರು ಹತರಾದನಂತರ ಕೌರವರಿಗೆ ಸಹಾಯಮಾಡುವ ಸಲುವಾಗಿ ಇಂದ್ರನೇ ಬಂದಿರಬಹುದೆಂದು ಈ ಭಯಂಕರಗರ್ಜನೆಯಿಂದ ವ್ಯಕ್ತವಾಗುತ್ತಿದೆ. ಧನಂಜಯ! ಅತ್ಯಂತಭೀಷಣವಾದ ಮತ್ತು ದೊಡ್ಡದಾದ ಈ ಶಬ್ದವನ್ನು ಕೇಳಿ ನಮ್ಮ ಕಡೆಯ ರಥಪುಂಗವರ ರೋಮಗಳು ನಿಮಿರಿನಿಂತಿವೆ. ಹಾಗೂ ಅವರು ಬಹಳ ಉದ್ವಿಗ್ನರಾಗಿದ್ದಾರೆ. ದೇವರಾಜನಾದ ಇಂದ್ರನು ಯುದ್ಧದಲ್ಲಿ ದೈತ್ಯರಿಂದ ವಿದೀರ್ಣವಾಗಿಹೋದ ದೇವಸೇನೆಯನ್ನು ಪುನಃ ಒಟ್ಟುಗೂಡಿಸಿ ಯುದ್ಧಮಾಡಲು ಹಿಂದಿರುಗಿಸಿದಂತೆಯೇ ಛಿನ್ನ-ಭಿನ್ನವಾಗಿ ಹೋಗಿದ್ದ ಕೌರವ ಸೈನ್ಯವನ್ನು ಪುನಃ ಒಟ್ಟುಗೂಡಿಸಿ ಯುದ್ಧಕ್ಕೆ ಕರೆತಂದಿರುವ ಮಹಾರಥನಾರು? ಅರ್ಜುನ!”

“ಅಣ್ಣ! ಶಸ್ತ್ರಸಂನ್ಯಾಸಮಾಡಿದ ಆಚಾರ್ಯದ್ರೋಣರು ಹತರಾದ ನಂತರ ಯಾರ ವೀರ್ಯವನ್ನು ಆಶ್ರಯಿಸಿ ಕೌರವಯೋಧರು ಉಗ್ರವಾದ ಯುದ್ಧಕರ್ಮಕ್ಕೆ ಪುನಃ ಸಿದ್ಧರಾಗುತ್ತಿದ್ದಾರೆಂಬ ಮತ್ತು ಮಹಾಶಂಖಗಳ ಧ್ವನಿಮಾಡುತ್ತಿದ್ದಾರೆಂಬ ಸಂದೇಹವು ನಿನಗೆ ಉಂಟಾಗಿದೆಯಲ್ಲವೇ? ಯಾವ ವೀರನು ದಿಕ್ಕಾಪಾಲಾಗಿ ಹೋಗಿದ್ದ ಆ ಕೌರವಸೈನಿಕರನ್ನು ಹುರಿದುಂಬಿಸಿ ಯುದ್ಧಕ್ಕೆ ಪುನಃ ಕರೆದುಕೊಂಡು ಬಂದನೆಂಬ ಸಂಶಯವು ನಿನ್ನ ಮನಸ್ಸಿ ನಲ್ಲುಂಟಾಗಿದೆಯಲ್ಲವೇ? ಮದಿಸಿದ ಆನೆಯಂತೆ ನಡೆಯುವ, ಕುರುಗಳಿಗೆ ಅಭಯಂಕರನಾದ ಆ ಮಹಾವೀರನಾರೆಂಬುದನ್ನು ಹೇಳುತ್ತೇನೆ, ಕೇಳು:

**ಯಸ್ಮಿಂಜ್ಜಾತೇ ದದೌ ದ್ರೋಣೋ ಗವಾಂ ದಶಶತಂ ಧನಮ್।**
**ಬ್ರಾಹ್ಮಣೇಭ್ಯೋ ಮಹಾರ್ಹೇಭ್ಯಃ ಸೋಽಶ್ವತ್ಥಾಮೈಷಗರ್ಜತಿ ॥**

ಯಾವನು ಹುಟ್ಟಿದೊಡನೆಯೇ ದ್ರೋಣರು ಒಂದುಸಾವಿರ ಗೋವುಗಳನ್ನು ಯೋಗ್ಯರಾದ ಬ್ರಾಹ್ಮಣರಿಗೆ ದಾನಮಾಡಿದರೋ–ಆ ಅಶ್ವತ್ಥಾಮನೇ ಇಂದು ಹೀಗೆ ಗರ್ಜನೆಮಾಡುತ್ತಿದ್ದಾನೆ.

**ಜಾತಮಾತ್ರೇಣ ವೀರೇಣ ಯೇನೋಚ್ಚೈಃಶ್ರವಸಾ ಯಥಾ ।**
**ಹ್ರೇಷತಾ ಕಮ್ಪಿತಾ ಭೂಮಿರ್ಲೋಕಾಶ್ಚ ಸಕಲಾಸ್ತ್ರಯಃ ॥೩೦॥**

**ತಚ್ಛ್ರುತ್ವಾನ್ತರ್ಹಿತಂ ಭೂತಂ ನಾಮ ತಸ್ಯಾಕರೋತ್ತದಾ ।**
**ಅಶ್ವತ್ಥಾಮೇತಿ ಸೋಽದ್ಯೈಷ ಶೂರೋ ನದತಿ ಪಾಣ್ಡವ ॥೩೧॥**

ಹುಟ್ಟಿದೊಡನೆಯೇ ಯಾವನು–ಇಂದ್ರನ ಉಚ್ಚೈಃಶ್ರವಸ್ಸೆಂಬ ಕುದುರೆಯು ಹೇಷಾರವವನ್ನು ಮಾಡುವಂತೆ ಹೇಷಾರವವನ್ನು ಮಾಡಿ ಮೂರುಲೋಕಗಳನ್ನೂ ಮತ್ತು ಭೂಮಿಯನ್ನೂ ಕಂಪನಗೊಳಿಸಿದನೋ–ಅದೃಶ್ಯವಾದೊಂದು ಭೂತವು ಯಾವನಿಗೆ ಅಶ್ವತ್ಥಾಮಾ ಎಂಬ ಹೆಸರನ್ನಿಟ್ಟಿತೋ, ಸುವಿಖ್ಯಾತನಾದ, ಶೂರನಾದ ಆ ಅಶ್ವತ್ಥಾಮನೇ ಈಗ ಸಿಂಹನಾದವನ್ನು ಮಾಡುತ್ತಿದ್ದಾನೆ. ಅನಾಥನಾದವನೊಬ್ಬನನ್ನು, ಹೇಳಿ-ಕೇಳುವವರೇ ಇಲ್ಲದವನೊಬ್ಬನು ಆಕ್ರಮಿಸುವಂತೆ–ಧೃಷ್ಟದ್ಯುಮ್ನನು ಅತ್ಯಂತಕ್ರೂರವಾದ ರೀತಿಯಲ್ಲಿ ಯಾವ ದ್ರೋಣರನ್ನು ವಧೆಮಾಡಿದನೋ ಆ ದ್ರೋಣರ ನಾಥನೀಗ ರಣಾಂಗಣದಲ್ಲಿ ಉಪಸ್ಥಿತನಾಗಿದ್ದಾನೆ. ತನ್ನ ಪೌರುಷವು ಎಷ್ಟಿರುವುದೆಂದು ತಿಳಿದುಕೊಂಡಿರುವ ಅಶ್ವತ್ಥಾಮನು ನನ್ನ ಗುರುಗಳನ್ನು ಮುಡಿಹಿಡಿದು ಕೊಂದಿರುವವನನ್ನು ಖಂಡಿತವಾಗಿಯೂ ಕ್ಷಮಿಸುವುದಿಲ್ಲ.

**ಉಪಚೀರ್ಣೋ ಗುರುರ್ಮಿಥ್ಯಾ ಭವತಾ ರಾಜ್ಯಕಾರಣಾತ್ ।**
**ಧರ್ಮಜ್ಞೇನ ಸತಾ ನಾಮ ಸೋಽಧರ್ಮಃ ಸುಮಹಾನ್ಕೃತಃ ॥೩೪॥**

ನೀನು ಧರ್ಮಜ್ಞನೇ ಆಗಿದ್ದರೂ, ಸತ್ಪುರುಷನೇ ಆಗಿದ್ದರೂ –ರಾಜ್ಯಲೋಭದಿಂದ ನನ್ನ ಗುರುಗಳಿಗೆ ಸುಳ್ಳುಹೇಳಿ ಮೋಸಗೊಳಿಸಿ ಅತಿನಿಂದ್ಯವಾದ ಮಹತ್ತರವಾದ ಅಧರ್ಮದ ಕಾರ್ಯವನ್ನು ಮಾಡಿರುವೆ.

**ಚಿರಂ ಸ್ಥಾಸ್ಯತಿ ಚಾಕೀರ್ತಿಸ್ತ್ರೈಲೋಕ್ಯೇ ಸಚರಾಚರೇ ।**
**ರಾಮೇ ವಾಲಿವಧಾದ್ಯದ್ವದೇವಂ ದ್ರೋಣೇ ನಿಪಾತಿತೇ ॥೩೫॥**

ಹೀಗೆ ಮೋಸದ ವಿಧಾನದಲ್ಲಿ ದ್ರೋಣರನ್ನು ಸಂಹರಿಸಲಾಗಿ–ವಾಲಿಯನ್ನು ವೃಕ್ಷಗಳ ಮರೆಯಲ್ಲಿ ನಿಂತು ವಧಿಸಿದ ಶ್ರೀರಾಮನಿಗೆ ಎಂತಹ ಅಪಕೀರ್ತಿಯುಂಟಾಯಿತೋ –ಅದೇ ರೀತಿಯಲ್ಲಿ ಸುಳ್ಳುಹೇಳಿ ದ್ರೋಣರವಧೆಗೆ ಕಾರಣನಾದ ನಿನ್ನ ದುಷ್ಕೀರ್ತಿಯೂ ಅನೇಕವರ್ಷಗಳ ಪರ್ಯಂತವಾಗಿ ಚರಾಚರವಸ್ತುಗಳಿಂದ ಕೂಡಿರುವ ಈ ಮೂರುಲೋಕಗಳಲ್ಲಿಯೂ ಶಾಶ್ವತವಾಗಿ ಉಳಿದಿರುತ್ತದೆ.

**ಸರ್ವಧರ್ಮೋಪಪನ್ನೋಽಯಂ ಸ ಮೇ ಶಿಷ್ಯಶ್ಚ ಪಾಣ್ಡವಃ।**
**ನಾಯಂ ವದತಿ ಮಿಥ್ಯೇತಿ ಪ್ರತ್ಯಯಂ ಕೃತವಾಂಸ್ತ್ವಯಿ ॥೩೬॥**

"ಪಾಂಡುಪುತ್ರನಾದ ಯುಧಿಷ್ಠಿರನು ಸಕಲಧರ್ಮಗಳನ್ನೂ ತಿಳಿದಿರ ತಕ್ಕವನು. ಮೇಲಾಗಿ ನನ್ನ ಶಿಷ್ಯನು. ಆದುದರಿಂದ ನನ್ನೊಡನೆ ಇವನು ಖಂಡಿತವಾಗಿಯೂ ಸುಳ್ಳುಹೇಳುವುದಿಲ್ಲ"–ಎಂಬ ದೃಢವಿಶ್ವಾಸವು ನಿನ್ನಲ್ಲಿ ದ್ರೋಣರಿಗಿದ್ದಿತು.

**ಸ ಸತ್ಯಕಞ್ಚುಕಂ ನಾಮ ಪ್ರವಿಷ್ಟೇನ ತತೋಽನೃತಮ್।**
**ಆಚಾರ್ಯ ಉಕ್ತೋ ಭವತಾ ಹತಃ ಕುಞ್ಜರ ಇತ್ಯುತ ॥೩೭॥**

ಆದರೆ ನೀನು ಸತ್ಯವೆಂಬ ಅಂಗಿಯನ್ನು ತೊಟ್ಟುಕೊಂಡು ಆಚಾರ್ಯರೊಡನೆ ಸುಳ್ಳು ಹೇಳಿದೆ. 'ಅಶ್ವತ್ಥಾಮಾ'–ಎಂಬ ಹೆಸರಿನ ಆನೆಯು ಸತ್ತುದನ್ನು ಕಂಡು ಅಶ್ವತ್ಥಾಮಾ-ಎಂಬ ಪದವನ್ನು ಗಟ್ಟಿಯಾಗಿ ಉಚ್ಚರಿಸಿ ಅನಂತರ **ಹತಃ ಕುಞ್ಜರಃ**–ಎಂದು ಮೆಲ್ಲಗೆ ಹೇಳಿದೆ. ಇದು ಸತ್ಯದ ಸೋಗಾಯಿತೇ ಹೊರತು ಸತ್ಯವಾಗಲಿಲ್ಲ. ಆಚಾರ್ಯರು ಕೇಳಿದ ಪ್ರಶ್ನೆಗೆ ಸತ್ಯವಾದ ಉತ್ತರವಾಗಲಿಲ್ಲ. ಇಂತಹ ಅಸತ್ಯವನ್ನು ನುಡಿದು ನೀನು ಅವರನ್ನು ಮೋಸಗೊಳಿಸಿದೆ. ನೀನು ಈ ಮಾತನ್ನು ಹೇಳಿದೊಡನೆಯೇ ದ್ರೋಣರು (ಅಶ್ವತ್ಥಾಮನು ಹತನಾದನೆಂದೇ ಭಾವಿಸಿ ) ಶಸ್ತ್ರಗಳನ್ನು ಕೆಳಗಿಟ್ಟು ಪ್ರಾಣಗಳ ಮೇಲಿನ ಮಮತೆಯನ್ನು ತೊರೆದು ಬುದ್ಧಿಗೆಟ್ಟವರಾಗಿ ಅತ್ಯಂತ ದುಃಖಿತರಾದರು. ಇದನ್ನು ನೀನು ಪ್ರತ್ಯಕ್ಷವಾಗಿಯೇ ನೋಡಿರುವೆ. ಪುತ್ರವತ್ಸಲರಾಗಿದ್ದ ಅವರು, ಪುತ್ರನ ಮರಣ ವಾರ್ತೆಯನ್ನು ನಿನ್ನಿಂದ ಕೇಳುತ್ತಲೇ ಪುತ್ರಶೋಕಪರಿತಪ್ತರಾಗಿ ಶಸ್ತ್ರ ಸಂನ್ಯಾಸಮಾಡಿ ಯುದ್ಧದಿಂದ ವಿಮುಖರಾದರು. ಅಂತಹ ಸಂದರ್ಭದಲ್ಲಿ

ಧೃಷ್ಟದ್ಯುಮ್ನನು ಶಾಶ್ವತವಾದ ಸನಾತನಧರ್ಮವನ್ನೇ ತಿರಸ್ಕರಿಸುತ್ತಾ ಆಚಾರ್ಯರ ತಲೆಯನ್ನು ಕತ್ತಿಯಿಂದ ಕತ್ತರಿಸಿದನು. ಶಸ್ತ್ರಗಳನ್ನು ಪರಿತ್ಯಜಿಸಿದ್ದ ಗುರುಗಳ ಹತ್ಯೆಗೆ ಕಾರಣನಾದ ನೀನು ನಿಶ್ಚಯವಾಗಿಯೂ ಶಕ್ತನೇ ಆಗಿದ್ದರೆ ನಿನ್ನ ಅಮಾತ್ಯರೊಡನೆ ಸೇರಿಕೊಂಡು, ತಂದೆಯನ್ನು ಕಳೆದುಕೊಂಡು ಅತ್ಯಂತ ಕ್ರುದ್ಧನಾಗಿರುವ ಅಶ್ವತ್ಥಾಮನಿಂದ ಗ್ರಸ್ತನಾಗಲಿರುವ (ಆಕ್ರಮಿಸಲ್ಪಡುವ) ಧೃಷ್ಟದ್ಯುಮ್ನನನ್ನು ರಕ್ಷಿಸು. ನಾವೆಲ್ಲರೂ ಸೇರಿ ಒಟ್ಟಾಗಿ ಯುದ್ಧಮಾಡಿದರೂ ಧೃಷ್ಟದ್ಯುಮ್ನನನ್ನು ರಕ್ಷಿಸಲಾರೆವು. ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಸ್ನೇಹಭಾವದಿಂದಿರುವ, ಮಾನವಾತೀತವಾದ ಗುಣಗಳಿಂದ ಕೂಡಿರುವ ಅಶ್ವತ್ಥಾಮನು, ತನ್ನ ತಂದೆಯವರ ಮುಡಿಯನ್ನು ಧೃಷ್ಟದ್ಯುಮ್ನನು ಹಿಡಿದನೆಂಬ ವಾರ್ತೆಯನ್ನು ಕೇಳಿ ಪರಮಕ್ರುದ್ಧನಾಗಿದ್ದಾನೆ. ನಮ್ಮೆಲ್ಲರನ್ನೂ ರಣಾಂಗಣದಲ್ಲಿ ಭಸ್ಮಮಾಡಿಬಿಡುತ್ತಾನೆ.

**ವಿಕ್ರೋಶಮಾನೇ ಹಿ ಮಯಿ ಭೃಶಮಾಚಾರ್ಯಗೃದ್ಧಿನಿ ।**
**ಅವಾಕೀರ್ಯ ಸ್ವಯಂ ಧರ್ಮಂ ಶಿಷ್ಯೇಣ ನಿಹತೋ ಗುರುಃ ॥೪೩॥**

ನಾನು ಆಚಾರ್ಯರ ಪ್ರಾಣಗಳನ್ನು ರಕ್ಷಿಸುವ ಸಲುವಾಗಿ 'ಆಚಾರ್ಯರನ್ನು ಕೊಲ್ಲಬೇಡ. ಜೀವಗ್ರಹಣಮಾಡು'–ಎಂದು ಗಟ್ಟಿಯಾಗಿ ಕೂಗಿಕೊಳ್ಳುತ್ತಲೇ ಇದ್ದೆನು. ಆದರೂ ಸಹ ಧೃಷ್ಟದ್ಯುಮ್ನನು ಶಿಷ್ಯಧರ್ಮವನ್ನೂ ಕ್ಷತ್ರಿಯಧರ್ಮವನ್ನೂ ಸಂಪೂರ್ಣವಾಗಿ ಪರಿತ್ಯಜಿಸಿ ಸಾಕ್ಷಾತ್ ಗುರುಗಳನ್ನೇ ಸಂಹಾರಮಾಡಿದನು.

**ಯದಾ ಗತಂ ವಯೋ ಭೂಯಃ ಶಿಷ್ಟಮಲ್ಪತರಂ ಚ ನಃ ।**
**ತಸ್ಯೇದಾನೀಂ ವಿಕಾರೋಽಯಮಧರ್ಮೋಽಯಂ ಕೃತೋ ಮಹಾನ್**

ನಮ್ಮ ಆಯುಷ್ಯದಲ್ಲಿ ಬಹುಭಾಗ ಕಳೆದುಹೋಗಿದೆ. ಸ್ವಲ್ಪಭಾಗ ಮಾತ್ರವೇ ಉಳಿದಿರುತ್ತದೆ. ಈಗ ನಾವು ಮಹತ್ತರವಾದ ಅಧರ್ಮಕಾರ್ಯವನ್ನೆಸಗಿದ್ದೇವೆ. ನಮ್ಮ ಉಳಿದ ಆಯುಷ್ಯಕ್ಕೆ ಈ ಅಪರಾಧವು ಕಳಂಕವನ್ನುಂಟುಮಾಡಿದೆ.

**ಪಿತೇವ ನಿತ್ಯಂ ಸೌಹಾರ್ದಾತ್ಪಿತೇವ ಹಿ ಚ ಧರ್ಮತಃ ।**
**ಸೋಽಲ್ಪಕಾಲಸ್ಯ ರಾಜ್ಯಸ್ಯ ಕಾರಣಾದ್ಘಾತಿತೋ ಗುರುಃ ॥೪೫॥**

ಯಾರು ನಮ್ಮನ್ನು ತಂದೆಯೋಪಾದಿಯಲ್ಲಿ ಅತ್ಯಂತಸ್ನೇಹ

ಭಾವದಿಂದ ಕಾಣುತ್ತಿದ್ದರೋ, ಸದಾಕಾಲದಲ್ಲಿಯೂ ನಮ್ಮ ಹಿತಚಿಂತಕರಾಗಿದ್ದರೋ, ಧರ್ಮದ ದೃಷ್ಟಿಯಿಂದಲೂ ನಮ್ಮ ತಂದೆಗೆ ಸಮಾನರಾಗಿದ್ದರೋ –ಅಂತಹ ಗುರುಗಳನ್ನು ನಾವು ಕ್ಷಣಭಂಗುರವಾದ (ಅಲ್ಪಕಾಲದ) ರಾಜ್ಯದ ಆಸೆಯಿಂದ ಸಂಹರಿಸಿದೆವು.

**ಧೃತರಾಷ್ಟ್ರೇಣ ಭೀಷ್ಮಾಯ ದ್ರೋಣಾಯ ಚ ವಿಶಾಂಪತೇ ।**
**ವಿಸೃಷ್ಟಾ ಪೃಥಿವೀ ಸರ್ವಾ ಸಹ ಪುತ್ರೈಶ್ಚ ತತ್ಪರೈಃ ॥೪೬॥**

ಪ್ರಜಾನಾಥನೇ! ಧೃತರಾಷ್ಟ್ರನು ಭೀಷ್ಮ-ದ್ರೋಣರಿಗೆ ಅವರ ಸೇವೆಯಲ್ಲಿ ತತ್ಪರರಾದ ತನ್ನ ಮಕ್ಕಳ ಸಹಿತವಾಗಿ ಈ ಪೃಥ್ವಿಯನ್ನು ಒಪ್ಪಿಸಿಬಿಟ್ಟಿದ್ದನು.

**ಸಮ್ಪ್ರಾಪ್ಯ ತಾದೃಶೀಂ ವೃತ್ತಿಂ ಸತ್ಕೃತಃ ಸತತಂ ಪರೈಃ ।**
**ಅವೃಣೀತ ಸದಾ ಪುತ್ರಾನ್ಮಾಮೇವಾಭ್ಯಧಿಕಂ ಗುರುಃ ॥೪೭॥**

ಧೃತರಾಷ್ಟ್ರನಿಂದ ಅಖಂಡಸಾಮ್ರಾಜ್ಯವನ್ನೇ ಬಳುವಳಿಯನ್ನಾಗಿ ಪಡೆದುಕೊಂಡು ನಮ್ಮ ಶತ್ರುಗಳಿಂದ ಸತತವಾಗಿ ಸತ್ಕಾರವನ್ನು ಹೊಂದುತ್ತಿದ್ದರೂ ಸಹ ನನ್ನ ಗುರುಗಳು ನನ್ನನ್ನೇ ತಮ್ಮ ಮಗನಾದ ಅಶ್ವತ್ಥಾಮನಿಗಿಂತಲೂ ಅಧಿಕನಾದವನೆಂದು ಪರಿಗ್ರಹಿಸಿದ್ದರು.

**ಅವೇಕ್ಷಮಾಣಸ್ತ್ವಾಂ ಮಾಂ ಚ ನ್ಯಸ್ತಾಸ್ತ್ರಶ್ಚಾಹವೇ ಹತಃ ।**
**ನ ತ್ವೇನಂ ಯುಧ್ಯಮಾನಂ ವೈ ಹನ್ಯಾದಪಿ ಶತಕ್ರತುಃ ॥೪೮॥**

ನನ್ನನ್ನೂ ಮತ್ತು ನಿನ್ನನ್ನೂ ನೋಡುತ್ತಾ ಗುರುಗಳಾದ ದ್ರೋಣರು ರಣರಂಗದಲ್ಲಿ ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟು ಹತರಾದರು. ಅವರು ಯುದ್ಧಮಾಡುತ್ತಿರುವಾಗ ಅವರನ್ನು ಸಂಹರಿಸಲು ಶತಕ್ರತುವಿನಿಂದಲೂ ಸಾಧ್ಯವಾಗುತ್ತಿರಲಿಲ್ಲ.

**ತಸ್ಯಾಚಾರ್ಯಸ್ಯ ವೃದ್ಧಸ್ಯ ದ್ರೋಹೋ ನಿತ್ಯೋಪಕಾರಿಣಃ ।**
**ಕೃತೋ ಹ್ಯನಾರ್ಯೈರಸ್ಮಾಭೀ ರಾಜ್ಯಾರ್ಥೇ ಲುಬ್ಧಬುದ್ಧಿಭಿಃ ॥೪೯॥**

ನಿತ್ಯೋಪಕಾರಿಗಳಾಗಿದ್ದ, ನಮ್ಮೆಲ್ಲರಿಗೂ ಆಚಾರ್ಯರಾಗಿದ್ದ, ವೃದ್ಧರಾಗಿದ್ದ ದ್ರೋಣರಿಗೆ–ಅನಾರ್ಯರಾದ, ರಾಜ್ಯಾರ್ಥವಾಗಿ ಲುಬ್ಧವಾದ

ಬುದ್ಧಿಯನ್ನು ಹೊಂದಿರುವ (ರಾಜ್ಯಲೋಭಿಗಳಾದ) ನಾವು ದ್ರೋಹವನ್ನೆಸಗಿದೆವು.

**ಅಹೋ ಬತ ಮಹತ್ಪಾಪಂ ಕೃತಂ ಕರ್ಮ ಸುದಾರುಣಮ್ ।**
**ಯದ್ರಾಜ್ಯಸುಖಲೋಭೇನ ದ್ರೋಣೋಽಯಂ ಸಾಧುಘಾತಿತಃ ॥೫೦॥**

ಅಯ್ಯೋ! ನಾವು ಅತ್ಯಂತಭಯಂಕರವಾದ ಪಾಪಕರ್ಮವನ್ನು ಮಾಡಿದೆವು. ರಾಜ್ಯಸುಖದ ಲೋಭದಿಂದ ನಾವು ದ್ರೋಣರನ್ನು ಸಂಪೂರ್ಣವಾಗಿ ನಾಶಮಾಡಿದೆವು.

**ಪುತ್ರಾನ್ಭ್ರಾತೄನ್ಪಿತೄನ್ದಾರಾಂಜ್ಜೀವಿತಂ ಚೈವ ವಾಸವಿಃ ।**
**ತ್ಯಜೇತ್ಸರ್ವಂ ಮಮ ಪ್ರೇಮ್ಣಾ ಜಾನಾತ್ಯೇವಂ ಹಿ ಮೇ ಗುರುಃ ॥**

ನನ್ನ ಆಚಾರ್ಯರು ನನ್ನ ಮೇಲೆ ಅಪಾರವಾದ ವಿಶ್ವಾಸವನ್ನಿಟ್ಟಿದ್ದರು. "ನನ್ನ ಪ್ರಿಯಶಿಷ್ಯನಾದ, ಇಂದ್ರನ ಮಗನಾದ ಅರ್ಜುನನು ನನ್ನ ಮೇಲಿನ ಪ್ರೀತಿಯಿಂದಾಗಿ ಮಕ್ಕಳು, ಅಣ್ಣ-ತಮ್ಮಂದಿರು, ತಂದೆ-ಚಿಕ್ಕಪ್ಪ-ದೊಡ್ಡಪ್ಪಂದಿರು, ಪತ್ನಿ ಮತ್ತು ಜೀವಿತ–ಈ ಎಲ್ಲವನ್ನೂ ತ್ಯಾಗಮಾಡಬಲ್ಲನು"–ಎಂಬುದಾಗಿ ಅವರು ಭಾವಿಸಿದ್ದರು.

**ಸ ಮಯಾ ರಾಜ್ಯಕಾಮೇನ ಹನ್ಯಮಾನೋ ಹ್ಯುಪೇಕ್ಷಿತಃ ।**
**ತಸ್ಮಾದರ್ವಾಕ್ಶಿರಾ ರಾಜನ್ಪ್ರಾಪ್ತೋಽಸ್ಮಿ ನರಕಂ ಪ್ರಭೋ ॥೫೨॥**

ಅವರ ಅಭಿಪ್ರಾಯಕ್ಕೆ ವಿರುದ್ಧವಾಗಿಯೇ ನಾನು ನಡೆದುಕೊಂಡೆನು. ರಾಜ್ಯಲೋಭಿಯಾದ ನಾನು ನನ್ನ ಸಮಕ್ಷದಲ್ಲೇ ಅವರ ಹತ್ಯೆಯಾಗುತ್ತಿದ್ದರೂ ಉಪೇಕ್ಷೆಯಿಂದಿದ್ದುಬಿಟ್ಟೆನು. ಆ ಮಹಾಪಾಪದ ಫಲರೂಪವಾಗಿ ನಾನು ತಲೆಯನ್ನು ಕೆಳಗೆ ಮಾಡಿಕೊಂಡು ನರಕವನ್ನು ಅನುಭವಿಸುತ್ತೇನೆ.

**ಬ್ರಾಹ್ಮಣಂ ವೃದ್ಧಮಾಚಾರ್ಯಂ ನ್ಯಸ್ತಶಸ್ತ್ರಂ ಮಹಾಮುನಿಮ್ ।**
**ಘಾತಯಿತ್ವಾದ್ಯ ರಾಜ್ಯಾರ್ಥೇ ಮೃತಂ ಶ್ರೇಯೋ ನ ಜೀವಿತಮ್ ॥**

ಮೊದಲನೆಯದಾಗಿ: ದ್ರೋಣರು ಬ್ರಾಹ್ಮಣರು. (ಬ್ರಹ್ಮಹತ್ಯೆಯು ಮಹಾಪಾತಕಗಳಲ್ಲೊಂದು) ಎರಡನೆಯದಾಗಿ: ಅವರು ವೃದ್ಧರಾಗಿದ್ದರು. ಮೂರನೆಯದಾಗಿ: ಅವರು ಕ್ಷತ್ರಿಯಕುಲಕ್ಕೇ ಆಚಾರ್ಯರಾಗಿದ್ದರು.

ನಾಲ್ಕನೆಯದಾಗಿ: ಶಸ್ತ್ರವನ್ನೂ ಕೆಳಗಿಟ್ಟಿದ್ದರು. ಐದನೆಯದಾಗಿ: ತಮ್ಮ ಮನಸ್ಸನ್ನು ಪರತತ್ತ್ವದಲ್ಲಿ ಲೀನಗೊಳಿಸಿ ಮಹಾಮುನಿಗಳಾಗಿದ್ದರು. ರಾಜ್ಯದ ಲೋಭದಿಂದ ಅಂತಹ ಮಹಾನುಭಾವರನ್ನು ಸಾವಿಗೀಡುಮಾಡಿದ ನನಗೆ ಬದುಕಿರುವುದಕ್ಕಿಂತಲೂ ಸಾವೇ ಲೇಸೆನಿಸಿದೆ."

೧೯೬ನೆಯ ಅಧ್ಯಾಯವು ಮುಗಿಯಿತು.

೧೯೭ನೆಯ ಅಧ್ಯಾಯ ನಾರಾಯಣಾಸ್ತ್ರಮೋಕ್ಷಪರ್ವ (ಮುಂದುವರಿದಿದೆ.)

## ಭೀಮಸೇನನ ವೀರೋಚಿತವಾದ ಉದ್ಗಾರ: ಧೃಷ್ಟದ್ಯುಮ್ನನು ತನ್ನ ಕೃತ್ಯವನ್ನು ಸಮರ್ಥಿಸಿಕೊಂಡುದು

ಸಂಜಯನು ಅರ್ಜುನನ ಮಾತಿಗೆ ಇತರರ ಪ್ರತಿಕ್ರಿಯೆಯು ಏನೆಂಬುದನ್ನು ಹೇಳುತ್ತಾನೆ:

"ಮಹಾರಾಜ! ಅರ್ಜುನನ ಮಾತನ್ನು ಕೇಳಿದನಂತರ ಸುತ್ತಲೂ ನೆರೆದಿದ್ದ ಮಹಾರಥರು ಅರ್ಜುನನಿಗೆ ಪ್ರಿಯವಾಗುವ ಅಥವಾ ಅವನ ಅಭಿಪ್ರಾಯವನ್ನು ಅನುಮೋದಿಸುವ ಮಾತನ್ನಾಗಲೀ, ಅವನಿಗೆ ಅಪ್ರಿಯವಾದ ಮಾತನ್ನಾಗಲೀ ಆಡದೆ ಸುಮ್ಮನಿದ್ದರು. ಆದರೆ ಭೀಮಸೇನನಿಗೆ ಅರ್ಜುನನ ತೆಗಳಿಕೆಯ ಮಾತುಗಳನ್ನು ಕೇಳಿ ಸುಮ್ಮನಿರಲಾಗಲಿಲ್ಲ. ಮಹಾಬಾಹುವಾದ ಭೀಮಸೇನನು ಅರ್ಜುನನ ಮಾತನ್ನು ಕೇಳಿ ಬಹಳ ಕ್ರುದ್ಧನಾಗಿ ಅರ್ಜುನನನ್ನು ನಿಂದಿಸುವ ರೀತಿಯಲ್ಲಿ ಈ ಮಾತನ್ನು ಹೇಳಿದನು:

**ಮುನಿರ್ಯಥಾರಣ್ಯಗತೋ ಭಾಷಸೇ ಧರ್ಮಸಂಹಿತಮ್ ।**
**ನ್ಯಸ್ತದಣ್ಡೋ ಯಥಾ ಪಾರ್ಥ ಬ್ರಾಹ್ಮಣಃ ಸಂಶಿತವ್ರತಃ ॥೩॥**

"ಅರ್ಜುನ! ಅರಣ್ಯದಲ್ಲಿರುವ ಮುನಿಯು ಅಥವಾ ಯಾವ ಪ್ರಾಣಿಯನ್ನೂ ಹಿಂಸಿಸಕೂಡದೆಂಬ ಕಠೋರವಾದ ವ್ರತವನ್ನು ಕೈಗೊಂಡಿರುವ ಬ್ರಾಹ್ಮಣನು ಉಪದೇಶಮಾಡುವಂತೆ ನೀನು ಧರ್ಮವೆನ್ನುವ ಮಾತುಗಳನ್ನಾಡುತ್ತಿರುವೆ.

**ಕ್ಷತತ್ರಾತಾ ಕ್ಷತಾಜ್ಜೀವನ್ಕ್ಷಾನ್ತ್ರಾ ಸ್ತ್ರೀಷ್ವಪಿ ಸಾಧುಷು ।**
**ಕ್ಷತ್ರಿಯಃ ಕ್ಷಿತಿಮಾಪ್ನೋತಿ ಕ್ಷಿಪ್ರಂ ಧರ್ಮಂ ಯಶಃ ಶ್ರಿಯಃ ॥೪॥**

ಆದರೆ ಯಾವನು ಸಂಕಟದಲ್ಲಿರುವ ತನ್ನನ್ನೂ ರಕ್ಷಿಸಿಕೊಳ್ಳುತ್ತಾ ಸಂಕಟದಲ್ಲಿರುವ ಇತರರನ್ನೂ ರಕ್ಷಿಸುತ್ತಾನೆಯೋ, ಯುದ್ಧದಲ್ಲಿ ಶತ್ರುಗಳನ್ನು ಕ್ಷತ-ವಿಕ್ಷತಗೊಳಿಸುವುದೇ ಯಾವನಿಗೆ ಜೀವಿಕೆಯಾಗಿರುತ್ತದೆಯೋ ಮತ್ತು ಯಾವನು ಸ್ತ್ರೀಯರ ವಿಷಯದಲ್ಲಿಯೂ ಮತ್ತು ಸಾಧು-ಸಂತರ ವಿಷಯ ದಲ್ಲಿಯೂ ಕ್ಷಮಾಭಾವದಿಂದಿರುವನೋ–ಅಂತಹ ಕ್ಷತ್ರಿಯನು ಶೀಘ್ರವಾಗಿ ರಾಜ್ಯವನ್ನೂ ಅದರೊಡನೆ ಧರ್ಮ, ಯಶಸ್ಸು ಮತ್ತು ಸಂಪತ್ತುಗಳನ್ನೂ ಪಡೆದುಕೊಳ್ಳುತ್ತಾನೆ.

**ಸ ಭವಾನ್ಕ್ಷತ್ರಿಯಗುಣೈರ್ಯುಕ್ತಃ ಸರ್ವೈಃ ಕುಲೋದ್ವಹಃ।**
**ಅವಿಪಶ್ಚಿದ್ಯಥಾ ವಾಚಂ ವ್ಯಾಹರನ್ನಾದ್ಯ ಶೋಭಸೇ ॥೫॥**

ಅರ್ಜುನ! ನೀನು ಕ್ಷತ್ರಿಯರಲ್ಲಿರಬೇಕಾದ ಸಮಸ್ತಗುಣಗಳಿಂದಲೂ ಪರಿಪೂರ್ಣನಾಗಿರುವೆ. ವಂಶದ ರಕ್ಷಣೆಯ ಭಾರವನ್ನು ವಹಿಸಿಕೊಂಡಿರುವೆ. ಇಂತಹವನಾದ ನೀನಿಂದು ಮೂರ್ಖನಂತೆ ಮಾತನಾಡುತ್ತಿರುವುದು ಖಂಡಿತವಾಗಿಯೂ ನಿನಗೆ ಶೋಭಿಸುವುದಿಲ್ಲ.

**ಪರಾಕ್ರಮಸ್ತೇ ಕೌನ್ತೇಯ ಶಕ್ರಸ್ಯೇವ ಶಚೀಪತೇಃ ।**
**ನ ಚಾತಿವರ್ತಸೇ ಧರ್ಮಂ ವೇಲಾಮಿವ ಮಹೋದಧಿಃ ॥೬॥**

ನಿನ್ನಲ್ಲಿ ಶಚೀಪತಿಯಾದ ಇಂದ್ರನಲ್ಲಿರುವ ಪರಾಕ್ರಮದಂತೆಯೇ ಅತುಲವಾದ ಪರಾಕ್ರಮವಿದೆ. ಮಹಾಸಾಗರವು ತೀರವನ್ನು ಅತಿಕ್ರಮಿಸ ದಂತೆ–ನೀನು ಯಾವುದೇ ಕಾರಣದಿಂದಲೂ ಧರ್ಮವನ್ನು ಅತಿಕ್ರಮಿಸಿ ವರ್ತಿಸುತ್ತಿಲ್ಲ.

**ನ ಪೂಜಯೇತ್ತ್ವಾಂ ಕೋನ್ವದ್ಯ ಯತ್ತ್ರಯೋದಶವಾರ್ಷಿಕಮ್ ।**
**ಅಮರ್ಷಂ ಪೃಷ್ಠತಃ ಕೃತ್ವಾ ಧರ್ಮಮೇವಾಭಿಕಾಂಕ್ಷಸೇ ॥೭॥**

ಹದಿಮೂರು ವರ್ಷಗಳಿಂದಲೂ ಸಂಚಿತವಾದ ಕೋಪವನ್ನೂ ಹಿಂದಕ್ಕೆ ಸರಿಸಿ ಕೇವಲ ಧರ್ಮವನ್ನೇ ಅವಲಂಬಿಸಲು ಹೊರಟಿರುವ ನಿನ್ನನ್ನು ಯಾರುತಾನೇ ಶ್ಲಾಘಿಸುವುದಿಲ್ಲ? (ದ್ರೋಣರ ಸಂಬಂಧವಾಗಿ ನೀನು ಹೇಳಿದ ಮಾತುಗಳನ್ನು ಕೇಳಿದ ನಮ್ಮ ಶತ್ರುಗಳು ಮಾತ್ರ ನಿನ್ನನ್ನು ಶ್ಲಾಘಿಸಬಹುದು.)

**ದಿಷ್ಟ್ಯಾ ತಾತ ಮನಸ್ತೇಽದ್ಯ ಸ್ವಧರ್ಮಮನುವರ್ತತೇ।**
**ಆನೃಶಂಸ್ಯೇ ಚ ತೇ ದಿಷ್ಟ್ಯಾ ಬುದ್ಧಿಃ ಸತತಮಚ್ಯುತ ॥೮॥**

ಮಗು, ಅರ್ಜುನ! ಅದೃಷ್ಟದ ಕಾರಣದಿಂದಲೇ ಈಗ ನಿನ್ನ ಮನಸ್ಸು ಸ್ವಧರ್ಮವನ್ನೇ ಅನುಸರಿಸಿ ಹೋಗುತ್ತಿದೆ. ಧರ್ಮಮಾರ್ಗದಿಂದ ಯಾವಾಗಲೂ ಚ್ಯುತನಾಗದೇ ಇರುವವನೇ! (ಅಚ್ಯುತನೇ!) ನಿನ್ನ ಬುದ್ಧಿಯು ಕ್ರೂರಕರ್ಮದಿಂದ ಹಿಂದಕ್ಕೆ ಸರಿದು ಯಾವಾಗಲೂ ದಯಾಪೂರ್ಣವಾಗಿಯೇ ಇರುವುದೂ ಅದೃಷ್ಟದಿಂದಲೇ ಸರಿ.

**ಯತ್ತು ಧರ್ಮಪ್ರವೃತ್ತಸ್ಯ ಹೃತಂ ರಾಜ್ಯಮಧರ್ಮತಃ ।**
**ದ್ರೌಪದೀ ಚ ಪರಾಮೃಷ್ಟಾ ಸಭಾಮಾನೀಯ ಶತ್ರುಭಿಃ ॥೯॥**
**ವನಂ ಪ್ರವ್ರಾಜಿತಾಶ್ಚಾಸ್ಮ ವಲ್ಕಲಾಜಿನವಾಸಸಃ।**
**ಅನರ್ಹಮಾಣಾಸ್ತಂ ಭಾವಂ ತ್ರಯೋದಶ ಸಮಾಃ ಪರೈಃ ॥೧೦॥**

ಆದರೆ ನೀನಿಷ್ಟು ಧರ್ಮಿಷ್ಠನಾಗಿದ್ದರೂ ಶತ್ರುಗಳು ಅಧರ್ಮದಮೂಲಕವಾಗಿ ರಾಜ್ಯವನ್ನು ಅಪಹರಿಸಿದರು. ದ್ರೌಪದಿಯನ್ನು ಸಭೆಗೆ ಕರೆತಂದು ಅವಮಾನಿಸಿದರು. ವನವಾಸಕ್ಕೆ ಅನರ್ಹರಾದ ನಮ್ಮನ್ನು ನಾರುಮಡಿ-ಕೃಷ್ಣಾಜಿನಗಳನ್ನು ಧರಿಸಿ ಹದಿಮೂರು ವರ್ಷಗಳ ಪರ್ಯಂತವಾಗಿ ವನವಾಸಿಗಳಾಗುವಂತೆ ಮಾಡಿದರು.

**ಏತಾನ್ಯಮರ್ಷಸ್ಥಾನಾನಿ ಮರ್ಷಿತಾನಿ ಮಯಾನಘ ।**
**ಕ್ಷತ್ರಧರ್ಮಪ್ರಸಕ್ತೇನ ಸರ್ವಮೇತದನುಷ್ಠಿತಮ್ ॥೧೧॥**

ನಾನು ಮೇಲೆ ಹೇಳಿದ ಸಂದರ್ಭಗಳು ಕೋಪಗೊಳ್ಳಲು ತಕ್ಕುದಾದ ಪ್ರತಿಕ್ರಿಯೆಯನ್ನು ತೋರಲು ಉಚಿತವಾದ ಸನ್ನಿವೇಶಗಳಾಗಿದ್ದುವು. ಆದರೆ ಕ್ಷತ್ರಿಯಧರ್ಮದಲ್ಲಿಯೇ ಆಸಕ್ತನಾಗಿದ್ದ ನಾನು ಆ ಸಮಯದಲ್ಲಿ ಕ್ಷಮೆಯನ್ನೇ ತಾಳಿದೆನು. ನಾವು ದ್ಯೂತದ ಸಮಯದಲ್ಲಿ ಮಾಡಿಕೊಂಡಿದ್ದ ನಿಬಂಧನೆಯಂತೆ ಎಲ್ಲವನ್ನೂ ಅನುಷ್ಠಾನಮಾಡಿದ್ದಾಯಿತು.

**ತಮಧರ್ಮಮಪಾಕೃಷ್ಟಂ ಸ್ಮೃತ್ವಾದ್ಯ ಸಹಿತಸ್ತ್ವಯಾ।**
**ಸಾನುಬನ್ಧಾನ್ಹನಿಷ್ಯಾಮಿ ಕ್ಷುದ್ರಾನ್ರಾಜ್ಯಹರಾನಹಮ್ ॥೧೨॥**

ಅಂದಿನ ಅವರ ಅಧರ್ಮಪ್ರವೃತ್ತಿಯನ್ನೂ ತಿರಸ್ಕಾರವನ್ನೂ ನಾನೀಗ ಸ್ಮರಿಸಿಕೊಂಡು ನಿನ್ನೊಡನೆ ಸೇರಿ ರಾಜ್ಯಾಪಹಾರಿಗಳಾದ ಕ್ಷುದ್ರರಾದ ಆ ನಮ್ಮ ಶತ್ರುಗಳನ್ನು ಬಂಧು-ಮಿತ್ರರ ಸಹಿತವಾಗಿ ಸಂಹರಿಸುತ್ತೇನೆ. (ಇದರಲ್ಲಿ ನಮ್ಮ ಅಪರಾಧವೇನಿದೆ?)

**ತ್ವಯಾ ಹಿ ಕಥಿತಂ ಪೂರ್ವಂ ಯುದ್ಧಾಯಾಭ್ಯಾಗತಾ ವಯಮ್ ।**
**ಘಟಾಮಹೇ ಯಥಾಶಕ್ತಿ ತ್ವಂ ತು ನೋಽದ್ಯ ಜುಗುಪ್ಸಸೇ ॥೧೩॥**

ಮೊದಲು ನೀನೇ ಯುದ್ಧಕ್ಕೆ ಪ್ರೋತ್ಸಾಹವನ್ನು ನೀಡಿದ್ದೆ. ನೀನು ನೀಡಿದ ಪ್ರೋತ್ಸಾಹದಿಂದಲೇ ನಾವೆಲ್ಲರೂ ಯುದ್ಧಮಾಡಲು ಆಗಮಿಸಿದೆವು. ಯಥಾಶಕ್ತಿ ಕಾದಾಡುತ್ತಿದ್ದೇವೆ. ಆದರೆ ಅಂದು ಯುದ್ಧಕ್ಕೆ ಪ್ರೋತ್ಸಾಹಿಸಿದ ನೀನೇ ಇಂದು ನಮ್ಮನ್ನು ನಿಂದಿಸುತ್ತಿರುವೆ.

**ಸ್ವಧರ್ಮಂ ನೇಚ್ಛಸೇ ಜ್ಞಾತುಂ ಮಿಥ್ಯಾವಚನಮೇವ ತೇ ।**
**ಭಯಾರ್ದಿತಾನಾಮಸ್ಮಾಕಂ ವಾಚಾ ಮರ್ಮಾಣಿ ಕೃಂತಸಿ ॥೧೪॥**

**ವಪನ್ವ್ರಣೇ ಕ್ಷಾರಮಿವ ಕ್ಷತಾನಾಂ ಶತ್ರುಕರ್ಶನ ।**
**ವಿದೀರ್ಯತೇ ಮೇ ಹೃದಯಂ ತ್ವಯಾ ವಾಕ್ಶಲ್ಯಪೀಡಿತಮ್ ॥೧೫॥**

ಇಂತಹ ಸಂದರ್ಭದಲ್ಲಿ ಕ್ಷತ್ರಿಯಧರ್ಮವು ಏನು ಹೇಳುತ್ತದೆ?–ಎಂಬುದನ್ನು ವಿವೇಚಿಸಲೂ ನಿನಗೆ ಆಸಕ್ತಿಯಿಲ್ಲ. ಈಗ ನಮ್ಮನ್ನು ನಿಂದಿಸಿದಲ್ಲಿ ಹಿಂದೆ ನೀನೇ ಹೇಳಿದ ಪ್ರೋತ್ಸಾಹಕರವಾದ ಮಾತುಗಳು ಸುಳ್ಳಾಗುವುದೆಂಬುದನ್ನೂ ನೀನು ಅರಿತುಕೊಳ್ಳುವ ಇಚ್ಛೆಯಿಂದಿಲ್ಲ. (ಶತ್ರುಗಳಾಡಿದ ಸುಳ್ಳುಮಾತುಗಳನ್ನೂ ನೀನು ಸ್ಮರಿಸುವ ಆಸಕ್ತಿಯನ್ನು ಹೊಂದಿಲ್ಲ.) ಈ ಮೊದಲೇ ಭಯದಿಂದ ಪೀಡಿತರಾಗಿರುವ ನಮ್ಮ ಮರ್ಮಸ್ಥಳಗಳನ್ನು –ಗಾಯಗೊಂಡಿರುವವರ ಗಾಯಗಳ ಮೇಲೆ ಉಪ್ಪು ಚೆಲ್ಲುವಂತೆ–ನಿನ್ನ ಕಟುವಚನಗಳಿಂದಲೂ ಛಿನ್ನ-ಭಿನ್ನಗೊಳಿಸುತ್ತಿರುವೆ. ಮಾತುಗಳೆಂಬ ಬಾಣಗಳಿಂದ ಪೀಡಿತವಾಗಿರುವ ನಮ್ಮ ಹೃದಯಗಳನ್ನು ಪುನಃ ಪುನಃ ಅಂತಹುದೇ ಮಾತುಗಳಿಂದ ಸೀಳುತ್ತಿರುವೆ.

**ಅಧರ್ಮಮೇನಂ ವಿಪುಲಂ ಧಾರ್ಮಿಕಃ ಸನ್ನ ಬುಧ್ಯಸೇ।**
**ಯತ್ತ್ವಮಾತ್ಮಾನಮಸ್ಮಾಂಶ್ಚ ಪ್ರಶಸ್ಯಾನ್ನ ಪ್ರಶಂಸಸಿ ॥೧೬॥**

ನಾವೂ ಮತ್ತು ನೀನೂ ಪ್ರತಿಜ್ಞಾತವಾದ ವನವಾಸವನ್ನೂ ಮತ್ತು ಅಜ್ಞಾತವಾಸವನ್ನೂ ಯಾವ ನ್ಯೂನತೆಯೂ ಇಲ್ಲದೇ ಮುಗಿಸಿಕೊಂಡು ಬಂದಿರುವುದರಿಂದ ಪ್ರಶಂಸಾರ್ಹರಾಗಿದ್ದೇವೆ. ಆದರೆ ನೀನು ನಿನ್ನನ್ನೂ ಪ್ರಶಂಸೆಮಾಡಿಕೊಳ್ಳುತ್ತಿಲ್ಲ; ನಮ್ಮನ್ನೂ ಪ್ರಶಂಸೆಮಾಡುತ್ತಿಲ್ಲ. ನೀನು ಧಾರ್ಮಿಕನಾಗಿದ್ದರೂ ಪ್ರಶಂಸೆಗೆ ಯೋಗ್ಯರಾದವರನ್ನು ಪ್ರಶಂಸಿಸದೇ ಇರುವುದು ಮಹತ್ತಾದ ಅಧರ್ಮವೆಂಬುದನ್ನೂ ಮನಗಂಡಿರುವುದಿಲ್ಲ. (ಶತ್ರುಗಳು ನಮ್ಮ ವಿಷಯದಲ್ಲಿ ಮಾಡಿರುವ ದೊಡ್ಡದಾದ ಅಧರ್ಮವನ್ನೂ ನೀನು ತಿಳಿಯುತ್ತಿಲ್ಲ.)

**ವಾಸುದೇವೇ ಸ್ಥಿತೇ ಚಾಪಿ ದ್ರೋಣಪುತ್ರಂ ಪ್ರಶಂಸಸಿ।**
**ಯಃ ಕಲಾಂ ಷೋಡಶೀಂ ಪೂರ್ಣಾಂ ಧನಂಜಯ ನ ತೇಽರ್ಹತಿ ॥**

ಧನಂಜಯ! ವಾಸುದೇವನಿಲ್ಲಿಯೇ ಇರುವಾಗ ನೀನು ಅಶ್ವತ್ಥಾಮನನ್ನು ಪ್ರಶಂಸೆಮಾಡುತ್ತಿರುವೆ. ನಿಶ್ಚಯವಾಗಿ ಹೇಳುವುದಾದರೆ ನಿನ್ನಲ್ಲಿರುವ ಹದಿನಾರು ಕಲೆಗಳಲ್ಲಿ ಒಂದು ಕಲೆಗೂ ಸಹ ಅವನು ಸಮಾನನಾಗುವುದಿಲ್ಲ. (ನಿನ್ನ ಹದಿನಾರನೆಯ ಒಂದಂಶಕ್ಕೂ ಸಮಾನನಲ್ಲ.)

ನಿನ್ನಲ್ಲಿರುವ ದೋಷಗಳನ್ನು ಹೇಳಿಕೊಳ್ಳಲು ನಿನಗೆ ನಾಚಿಕೆಯಾಗುವುದಿಲ್ಲವೇ? ನಾನಿಂದು ಸುವರ್ಣಮಾಲಾಭೂಷಿತವಾದ, ಭಯಂಕರವಾದ ಈ ನನ್ನ ದೊಡ್ಡಗದೆಯನ್ನು ಕ್ರೋಧಪೂರ್ವಕವಾಗಿ ಪ್ರಯೋಗಿಸಿ ಈ ಭೂಮಿಯನ್ನೇ ಸೀಳಿಬಿಡಬಲ್ಲೆನು. ಪರ್ವತಗಳನ್ನು ಚೆಲ್ಲಾಪಿಲ್ಲಿಯಾಗಿ ಮಾಡಬಲ್ಲೆನು. ಬಿರುಗಾಳಿಯಂತೆ ಪರ್ವತೋಪಮವಾದ ವೃಕ್ಷಗಳನ್ನೂ ಒಡೆದು ಚೂರುಮಾಡಬಲ್ಲೆನು. ಅರ್ಜುನ! ಅಸುರ-ನಾಗ-ಮಾನವ- ರಾಕ್ಷಸರಿಂದ ಸಹಿತರಾದ ದೇವತೆಗಳು ಇಂದ್ರಪುರಃಸರರಾಗಿ ಯುದ್ಧಕ್ಕೆ ಬಂದರೂ ನಿಶಿತವಾದ ಬಾಣಗಳ ಪ್ರಯೋಗದಿಂದ ಅವರೆಲ್ಲರನ್ನೂ ಪಲಾಯನಗೊಳಿಸುತ್ತೇನೆ. ಅಮಿತವಿಕ್ರಮನೇ! ಅರ್ಜುನ! ನಿನ್ನ ಅಣ್ಣನಾದ ನಾನು ಇಂತಹ ಅತುಲಪರಾಕ್ರಮಿಯೆಂಬುದನ್ನು ತಿಳಿದಿದ್ದೂ ನೀನು ಅಶ್ವತ್ಥಾಮನಿಂದ ಭಯವು ಪ್ರಾಪ್ತವಾಗಿರುವುದೆಂದು ಹೇಳಿ ನಮ್ಮನ್ನು ಹೆದರಿಸುವುದು ನಿನಗೆ ಉಚಿತವಲ್ಲ. ಒಂದು ವೇಳೆ ನಿನಗೆ ಅವನೊಡನೆ

ಯುದ್ಧಮಾಡುವ ಇಚ್ಛೆಯಿಲ್ಲದಿದ್ದರೆ ಎಲ್ಲ ಅಣ್ಣಂದಿರೊಡನೆಯೂ ನೀನು ಇಲ್ಲಿಯೇ ಇರು. ಗದಾಪಾಣಿಯಾಗಿ ನಾನೊಬ್ಬನೇ ಹೋಗಿ ಅಶ್ವತ್ಥಾಮನನ್ನು ಪರಾಜಯಗೊಳಿಸುತ್ತೇನೆ."

ಮಹಾರಾಜ! ಭೀಮನು ಅರ್ಜುನನೊಡನೆ ಹೀಗೆ ಹೇಳಿದನಂತರ ಹಿಂದೆ ಕೋಪಗೊಂಡು ಗರ್ಜಿಸುತ್ತಿದ್ದ ನೃಸಿಂಹನನ್ನು ಕುರಿತು ಹಿರಣ್ಯಕಶಿಪುವು ಹೇಳಿದಂತೆ–ಧೃಷ್ಟದ್ಯುಮ್ನನು ಪಾರ್ಥನನ್ನು ಕುರಿತು ಹೇಳಿದನು:

**ಬೀಭತ್ಸೋ ವಿಪ್ರಕರ್ಮಾಣಿ ವಿದಿತಾನಿ ಮನೀಷಿಣಾಮ್ ।**
**ಯಾಜನಾಧ್ಯಾಪನೇ ದಾನಂ ತಥಾ ಯಜ್ಞಪ್ರತಿಗ್ರಹೌ ॥೨೪॥**

**ಷಷ್ಠಮಧ್ಯಯನಂ ನಾಮ ತೇಷಾಂ ಕಸ್ಮಿನ್ಪ್ರತಿಷ್ಠಿತಃ ।**
**ಹತೋ ದ್ರೋಣೋ ಮಯಾ ಹ್ಯೇವಂ ಕಿಂ ಮಾಂ ಪಾರ್ಥವಿಗರ್ಹಸೇ**

**ಅಪಕ್ರಾಂತಃ ಸ್ವಧರ್ಮಾಚ್ಚ ಕ್ಷಾತ್ರಧರ್ಮಂ ವ್ಯಪಾಶ್ರಿತಃ।**
**ಅಮಾನುಷೇಣ ಹನ್ತ್ಯಸ್ಮಾನಸ್ತ್ರೇಣ ಕ್ಷುದ್ರಕರ್ಮಕೃತ್ ॥೨೬॥**

"ಅರ್ಜುನ! ಯಜನ-ಯಾಜನ, ಅಧ್ಯಯನ-ಅಧ್ಯಾಪನ, ದಾನ-ಪ್ರತಿಗ್ರಹ–ಈ ಷಟ್ಕರ್ಮಗಳು ಬ್ರಾಹ್ಮಣರು ಮಾಡಬೇಕಾದುವು ಗಳೆಂಬುದು ವಿದ್ವಾಂಸರಿಗೆ ತಿಳಿದ ವಿಷಯವೇ ಆಗಿದೆ. ಬ್ರಾಹ್ಮಣರಿಗೆ ಉಕ್ತ ವಾಗಿರುವ ಈ ಷಟ್ಕರ್ಮಗಳಲ್ಲಿ ದ್ರೋಣರು ಯಾವ ಕರ್ಮವನ್ನು ಅನುಷ್ಠಾನದಲ್ಲಿಟ್ಟುಕೊಂಡಿದ್ದರು? (ಅವರೀಗ ಯಜ್ಞಮಾಡಿಸುತ್ತಿದ್ದರೇ? ವೇದಗಳನ್ನು ಹೇಳಿಕೊಡುತ್ತಿದ್ದರೇ? ದಾನವನ್ನು ಪ್ರತಿಗ್ರಹಿಸುತ್ತಿದ್ದರೇ? ಇಂತಹ ಯಾವುದಾದರೂ ಸ್ವಕರ್ಮಗಳಲ್ಲಿ ಅವರು ನಿರತರಾಗಿದ್ದು ದಾದರೆ ಬ್ರಾಹ್ಮಣರಿಗೆ ಸಲ್ಲಬೇಕಾದ ಗೌರವವನ್ನು ನಾವೂ ಸಲ್ಲಿಸಲೇಬೇಕಾಗಿದ್ದಿತು.) ಆದರೆ ಅವರು ಬ್ರಾಹ್ಮಣರಿಗೆ ಉಕ್ತವಾಗಿರುವ ಈ ಆರು ಕರ್ಮಗಳಿಂದಲೂ ಭ್ರಷ್ಟರಾಗಿದ್ದರು. ಅವರು ಸ್ವಧರ್ಮದಲ್ಲಿ ನಿರತರಾಗಿರಲಿಲ್ಲ. ಕ್ಷಾತ್ರಧರ್ಮವನ್ನು ಅವಲಂಬಿಸಿದ್ದರು. ತಮಗೆ ಸಲ್ಲದ ಕ್ಷುದ್ರವಾದ ಕರ್ಮದಲ್ಲಿ ತೊಡಗಿದ್ದ ಅವರು ಅಮಾನುಷವಾದ ದಿವ್ಯಾಸ್ತ್ರಗಳ ಮೂಲಕವಾಗಿ ನಮ್ಮೆಲ್ಲರನ್ನೂ ಸಂಹರಿಸುತ್ತಿದ್ದರು. ಇಂತಹ ಸ್ವಧರ್ಮ

ಭ್ರಷ್ಟರಾದ ದ್ರೋಣರನ್ನು ನಾನು ಸಂಹರಿಸಿದೆನು. ಇದಕ್ಕಾಗಿ ನೀನು ನನ್ನನ್ನು ನಿಂದಿಸುವುದೇಕೆ?

**ತಥಾ ಮಾಯಾಂ ಪ್ರಯುಞ್ಜಾನಮಸಹ್ಯಂ ಬ್ರಾಹ್ಮಣಬ್ರುವಮ್ ।**
**ಮಾಯಯೈವ ವಿಹನ್ಯಾದ್ಯೋ ನ ಯುಕ್ತಂ ಪಾರ್ಥ ತತ್ರ ಕಿಮ್ ॥**

ಪಾರ್ಥ! ಸ್ವಧರ್ಮಭ್ರಷ್ಟರಾಗಿ ಪರಧರ್ಮವನ್ನಾಶ್ರಯಿಸಿ ಮಾಯಾ ಯುದ್ಧದಲ್ಲಿ ತೊಡಗಿದ್ದ, ಎದುರಿಸಲು ಅಸಾಧ್ಯರಾಗಿದ್ದ, ಬ್ರಾಹ್ಮಣರೆಂದು ಹೇಳಿಕೊಳ್ಳುತ್ತಿದ್ದ ದ್ರೋಣರನ್ನು ವಂಚನೆಯಿಂದಲೇ ಒಬ್ಬನು ಸಂಹರಿಸಿದರೆ ಅದರಲ್ಲಿ ಅಯುಕ್ತವಾದುದೇನಿದೆ?

**ತಸ್ಮಿಂಸ್ತಥಾ ಮಯಾ ಶಸ್ತೇ ಯದಿ ದ್ರೌಣಾಯನೀ ರುಷಾ ।**
**ಕುರುತೇ ಭೈರವಂ ನಾದಂ ತತ್ರ ಕಿಂ ಮಮ ಹೀಯತೇ ॥೨೮॥**

ಇಂತಹ ಸ್ಥಿತಿಯಲ್ಲಿದ್ದ ದ್ರೋಣರನ್ನು ನಾನು ಸಂಹರಿಸಲಾಗಿ, ಅವರ ಮಗನಾದ ಅಶ್ವತ್ಥಾಮನು ಕೋಪದಿಂದ ಭಯಂಕರವಾಗಿ ನಿನಾದಮಾಡಿದರೆ ಅದರಿಂದ ನನಗಾದ ನಷ್ಟವೇನು?

**ನ ಚಾದ್ಭುತಮಿದಂ ಮನ್ಯೇ ಯದ್ದ್ರೌಣಿರ್ಯುದ್ಧಸಂಜ್ಞಯಾ ।**
**ಘಾತಯಿಷ್ಯತಿ ಕೌರವ್ಯಾನ್ಪರಿತ್ರಾತುಮಶಕ್ನುವನ್ ॥೨೯॥**

ಯುದ್ಧದ ನೆಪಮಾಡಿಕೊಂಡು ದ್ರೌಣಿಯು ಕೌರವರನ್ನು ರಕ್ಷಿಸಲಾರದೇ ಅವರನ್ನೇ ಸಂಹರಿಸಿದರೂ ಅದು ನನಗೆ ಆಶ್ಚರ್ಯವಾಗಿ ಕಾಣುವುದಿಲ್ಲ.

**ಯಚ್ಚ ಮಾಂ ಧಾರ್ಮಿಕೋ ಭೂತ್ವಾ ಬ್ರವೀಷಿ ಗುರುಘಾತಿನಮ್ ।**
**ತದರ್ಥಮಹಮುತ್ಪನ್ನಃ ಪಾಞ್ಚಾಲ್ಯಸ್ಯ ಸುತೋಽನಲಾತ್ ॥೩೦॥**

ನೀನು ಧಾರ್ಮಿಕನಾಗಿದ್ದುಕೊಂಡು ನನ್ನನ್ನು ಗುರುಹಂತಕನೆಂದು ಹೇಳುತ್ತಿರುವುದೂ ಸರಿಯಲ್ಲ. ದ್ರೋಣರನ್ನು ಸಂಹರಿಸುವ ಸಲುವಾಗಿಯೇ ನಾನು ದ್ರುಪದನ ಪುತ್ರನಾಗಿ ಅಗ್ನಿಕುಂಡದಲ್ಲಿ ಜನ್ಮತಾಳಿದೆನು.

**ಯಸ್ಯ ಕಾರ್ಯಮಕಾರ್ಯಂ ವಾ ಯುಧ್ಯತಃ ಸ್ಯಾತ್ಸಮಂ ರಣೇ ।**
**ತಂ ಕಥಂ ಬ್ರಾಹ್ಮಣಂ ಬ್ರೂಯಾಃ ಕ್ಷತ್ರಿಯಂ ವಾ ಧನಂಜಯ ॥**

ಅರ್ಜುನ! ರಣಾಂಗಣದಲ್ಲಿ ಯುದ್ಧಮಾಡುತ್ತಿದ್ದ ಯಾವ ದ್ರೋಣರಿಗೆ ಕಾರ್ಯ ಮತ್ತು ಅಕಾರ್ಯ ಈ ಎರಡೂ ಸಮನಾಗಿದ್ದುವೋ (ಕಾರ್ಯಾಕಾರ್ಯವಿವೇಚನೆಯೇ ಇರಲಿಲ್ಲವೋ) ಅಂತಹವರನ್ನು ಬ್ರಾಹ್ಮಣರೆಂದಾಗಲೀ ಕ್ಷತ್ರಿಯರೆಂದಾಗಲೀ ನೀನು ಹೇಗೆ ಹೇಳುವೆ?

**ಯೋ ಹ್ಯನಸ್ತ್ರವಿದೋ ಹನ್ಯಾದ್ಬ್ರಹ್ಮಾಸ್ತ್ರೈಃ ಕ್ರೋಧಮೂರ್ಛಿತಃ ।**
**ಸರ್ವೋಪಾಯೈರ್ನ ಸ ಕಥಂ ವಧ್ಯಃ ಪುರುಷಸತ್ತಮ ॥೩೨॥**

ಪುರುಷಶ್ರೇಷ್ಠನೇ! ಯಾರು ಕ್ರೋಧಾಭಿಭೂತರಾಗಿ ಅಸ್ತ್ರವನ್ನು ತಿಳಿಯದೇ ಇರತಕ್ಕವರನ್ನೂ ಬ್ರಹ್ಮಾಸ್ತ್ರಗಳಿಂದ ಕೊಲ್ಲುತ್ತಾರೆಯೋ ಅಂತಹವರನ್ನು ಎಲ್ಲ ವಿಧವಾದ ಉಪಾಯಗಳನ್ನೂ ಆಶ್ರಯಿಸಿ ಏಕೆ ಕೊಲ್ಲಕೂಡದು? (ಅಸ್ತ್ರಾನಭಿಜ್ಞರನ್ನು ಬ್ರಹ್ಮಾಸ್ತ್ರದಿಂದ ಕೊಲ್ಲುತ್ತಿರುವವರನ್ನು ಯಾವುದೇ ವಿಧಾನದಿಂದಲಾದರೂ ಕೊಲ್ಲುವುದೇ ಧರ್ಮ.)

**ವಿಧರ್ಮಿಣಂ ಧರ್ಮವಿದ್ಭಿಃ ಪ್ರೋಕ್ತಂ ತೇಷಾಂ ವಿಷೋಪಮಮ್ ।**
**ಜಾನನ್ಧರ್ಮಾರ್ಥತತ್ತ್ವಜ್ಞ ಕಿಂ ಮಾಮರ್ಜುನ ಗರ್ಹಸೇ ॥೩೩॥**

ಧರ್ಮಾರ್ಥತತ್ತ್ವಜ್ಞನೇ! ಅರ್ಜುನ! ಯಾವನು ತನ್ನ ಧರ್ಮವನ್ನು ಪರಿತ್ಯಜಿಸಿ ಪರಧರ್ಮವನ್ನು ಗ್ರಹಣಮಾಡುತ್ತಾನೆಯೋ–ಅಂತಹ ವಿಧರ್ಮೀಯನನ್ನು ಧರ್ಮವಿದರು, ತಮಗವನು ವಿಷಪ್ರಾಯನೆಂದು ಭಾವಿಸುತ್ತಾರೆ. (ಧರ್ಮಿಷ್ಠನಾದ ನೀನು ಪರಧರ್ಮಾವಲಂಬಿಗಳಾಗಿದ್ದ ದ್ರೋಣರನ್ನು ವಿಷದಂತೆ ಕಾಣಬೇಕಾಗಿದ್ದಿತು.) ಈ ವಿಷಯವನ್ನು ನೀನು ತಿಳಿದೂ ನನ್ನನ್ನೇಕೆ ನಿಂದಿಸುವೆ?

**ನೃಶಂಸಃ ಸ ಮಯಾಕ್ರಮ್ಯ ರಥ ಏವ ನಿಪಾತಿತಃ।**
**ತನ್ಮಾಮನಿನ್ದ್ಯಂ ಬೀಭತ್ಸೋ ಕಿಮರ್ಥಂ ನಾಭಿನನ್ದಸೇ ॥೩೪॥**

ಬೀಭತ್ಸೋ! ಮಹಾಕ್ರೂರಿಗಳಾದ ಆಚಾರ್ಯರನ್ನು ಅವರು ಕುಳಿತಿದ್ದ ರಥದ ಮೇಲೆಯೇ ಆಕ್ರಮಿಸಿ ಶಿರಚ್ಛೇದನಮಾಡಿ ಕೆಳಕ್ಕೆ ಕೆಡುಹಿದೆನು. ಇದರಿಂದ ನಾನು ಖಂಡಿತವಾಗಿಯೂ ನಿಂದ್ಯನಾಗುವುದಿಲ್ಲ. ಹೀಗಿದ್ದರೂ ನಾನು ಮಾಡಿದ ಸಾಹಸಕಾರ್ಯಕ್ಕಾಗಿ ನನ್ನನ್ನೇಕೆ ಅಭಿನಂದಿಸುವುದಿಲ್ಲ?

**ಕಾಲಾನಲಸಮಂ ಪಾರ್ಥ ಜ್ವಲನಾರ್ಕವಿಷೋಪಮಮ್ ।**
**ಭೀಮಂ ದ್ರೋಣಶಿರಶ್ಛಿನ್ನಂ ನ ಪ್ರಶಂಸಸಿ ಮೇ ಕಥಮ್ ॥೩೫॥**

ಪಾರ್ಥ! ದ್ರೋಣರ ಶಿರಸ್ಸು ಪ್ರಳಯಕಾಲದ ಅಗ್ನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದಿತು. ಪ್ರಜ್ವಲಿಸುವ ಸೂರ್ಯನಂತೆ ಮತ್ತು ವಿಷದಂತೆ ಸಂತಾಪದಾಯಕವಾಗಿದ್ದಿತು. ಅಂತಹ ಭಯಂಕರವಾದ ಶಿರಸ್ಸನ್ನು ಛೇದನ ಮಾಡಿರುವ ನನ್ನನ್ನೇಕೆ ನೀನು ಶ್ಲಾಘಿಸುತ್ತಿಲ್ಲ?

**ಯೋಽಸೌ ಮಮೈವ ನಾನ್ಯಸ್ಯ ಬಾನ್ಧವಾನ್ಯುಧಿ ಜಘ್ನಿವಾನ್ ।**
**ಛಿತ್ವಾಪಿ ತಸ್ಯ ಮೂರ್ಧಾನಂ ನೈವಾಸ್ಮಿ ವಿಗತಜ್ವರಃ ॥೩೭॥**

ಅವರನ್ನು ವಧಿಸಲು ಮತ್ತೊಂದು ಕಾರಣವೂ ಇದ್ದಿತು, ಅರ್ಜುನ! ಅವರು ಸಾಮಾನ್ಯವಾಗಿ ಯಾವಾಗಲೂ ನನ್ನ ಬಂಧು-ಬಳಗದವರನ್ನೇ ಯುದ್ಧದಲ್ಲಿ ಸಂಹಾರಮಾಡುತ್ತಿದ್ದರು. ಬೇರೆ ಯಾರ ತಂಟೆಗೂ ಹೋಗುತ್ತಲೇ ಇರಲಿಲ್ಲ. ಈ ಕಾರಣದಿಂದಲೇ ನಾನು ಅವರ ತಲೆಯನ್ನು ಕತ್ತರಿಸಿದರೂ ನನಗೆ ಅವರ ವಿಷಯದಲ್ಲಿ ಉದ್ಭೂತವಾಗಿದ್ದ ಕೋಪದ ಮತ್ತು ತಾಪದ ಉಪಶಮನವಾಗಿಲ್ಲ.

**ತಚ್ಚ ಮೇ ಕೃನ್ತತೇ ಮರ್ಮ ಯನ್ನ ತಸ್ಯ ಶಿರೋ ಮಯಾ ।**
**ನಿಷಾದವಿಷಯೇ ಕ್ಷಿಪ್ತಂ ಜಯದ್ರಥಶಿರೋ ಯಥಾ ॥೩೭॥**

ನೀನು ಜಯದ್ರಥನ ಶಿರಸ್ಸನ್ನು ಕತ್ತರಿಸಿ, ಅದು ಬಹಳದೂರದವರೆಗೆ ಹೋಗುವಂತೆ ಮಾಡಿ, ಕಡೆಗದು ಅವನ ತಂದೆಯ ತೊಡೆಯ ಮೇಲೆ ಬೀಳುವಂತೆ ಮಾಡಿದೆ. ಅದೇ ರೀತಿಯಲ್ಲಿ ನಾನೂ ಸಹ ದ್ರೋಣರ ತಲೆಯು ನಿಷಾದರ ಮಧ್ಯದಲ್ಲಿ ಬೀಳುವಂತೆ ಮಾಡಬೇಕಾಗಿದ್ದಿತು. ಹಾಗೆ ಮಾಡದೇ ಇರುವುದನ್ನು ನೆನೆದುಕೊಂಡರೆ ನನ್ನ ಮರ್ಮಸ್ಥಾನಗಳನ್ನು ಚುಚ್ಚಿದಂತಾಗುತ್ತದೆ.

**ಅಥಾವಧಶ್ಚ ಶತ್ರೂಣಾಮಧರ್ಮಃ ಶ್ರೂಯತೇಽರ್ಜುನ ।**
**ಕ್ಷತ್ರಿಯಸ್ಯ ಹಿ ಧರ್ಮೋಽಯಂ ಹನ್ಯಾದ್ಧನ್ಯೇತ ವಾ ಪುನಃ ॥೩೮॥**

ಅರ್ಜುನ! ಶತ್ರುಗಳನ್ನು ಯುದ್ಧದಲ್ಲಿ ಸಂಹರಿಸದೇ ಇರುವುದು ಅಧರ್ಮವೆಂದು ಹೇಳುತ್ತಾರೆ. ಕ್ಷತ್ರಿಯನಾದವನು ಯುದ್ಧದಲ್ಲಿ ಶತ್ರು

ಗಳನ್ನು ಸಂಹರಿಸಬೇಕು; ಅಥವಾ ಶತ್ರುಗಳಿಂದ ಹತನಾಗಬೇಕು. ಇದೇ ಕ್ಷತ್ರಿಯರ ಮುಖ್ಯಧರ್ಮವಾಗಿದೆ.

**ಸ ಶತ್ರುರ್ನಿಹತಃ ಸಂಖ್ಯೇ ಮಯಾ ಧರ್ಮೇಣ ಪಾಣ್ಡವ ।**
**ಯಥಾ ತ್ವಯಾ ಹತಃ ಶೂರೋ ಭಗದತ್ತಃ ಪಿತುಃ ಸಖಾ ॥೩೯॥**

ಪಾಂಡುನಂದನ! ದ್ರೋಣರು ನನ್ನ ಪರಮಶತ್ರುಗಳಾಗಿದ್ದರು. ನೀನು ನಿನ್ನ ತಂದೆಯ ಪ್ರಿಯಸಖನಾದ, ಶೂರನಾದ ಭಗದತ್ತನನ್ನು ಸಂಹರಿಸಿದಂತೆ ನಾನು ಧರ್ಮಮಾರ್ಗದಿಂದಲೇ ಯುದ್ಧದಲ್ಲಿ ದ್ರೋಣರನ್ನು ಸಂಹರಿಸಿದ್ದೇನೆ.

**ಪಿತಾಮಹಂ ರಣೇ ಹತ್ವಾ ಮನ್ಯಸೇ ಧರ್ಮಮಾತ್ಮನಃ ।**
**ಮಯಾ ಶತ್ರೌ ಹತೇ ಕಸ್ಮಾತ್ಪಾಪೇ ಧರ್ಮಂ ನ ಮನ್ಯಸೇ ॥೪೦॥**

ರಣಾಂಗಣದಲ್ಲಿ ಪಿತಾಮಹನನ್ನೇ ಸಂಹರಿಸಿಯೂ 'ನಾನು ಧರ್ಮಾತ್ಮನು'–ಎಂದು ನೀನು ಭಾವಿಸಿಕೊಂಡಿರುವೆ. ನಾನು ಮಹಾ ಪಾಪಿಷ್ಠನಾದ ನನ್ನ ಶತ್ರುವನ್ನು ಸಂಹರಿಸಿದೆನು. ಅದನ್ನು ನೀನೇಕೆ ಧರ್ಮಕಾರ್ಯವೆಂದು ಭಾವಿಸುವುದಿಲ್ಲ? (ನೀನು ಭೀಷ್ಮನನ್ನು ಶತ್ರುವೆಂದು ಭಾವಿಸಿರಲಿಲ್ಲ. ಅವನನ್ನು ನೀನು ಪಿತಾಮಹನೆಂದು ಗೌರವಿಸುತ್ತಿದ್ದೆ. ಅಂತಹವನನ್ನೇ ನೀನು ಯುದ್ಧದಲ್ಲಿ ಸಂಹರಿಸಿದೆ. ಆದರೂ ನಿನಗೆ 'ನಾನು ಧರ್ಮಾತ್ಮಾ'–ಎಂಬ ಅಭಿಮಾನವು ಇದ್ದೇ ಇದೆ. ನೀನು ಮಾಡಿದ ಕಾರ್ಯವನ್ನು ನೀನು ಧರ್ಮಮೂಲವಾದ ಕಾರ್ಯವೆಂದೇ ಸಮರ್ಥಿಸುವೆ. ದ್ರೋಣರು ಮೊದಲಿನಿಂದಲೂ ನನಗೆ ಪರಮಶತ್ರುಗಳಾಗಿದ್ದರು. ಅವರನ್ನು ನಾನು ಕ್ಷತ್ರಿಯಧರ್ಮಾನುಸಾರವಾಗಿಯೇ ಸಂಹರಿಸಿದೆನು. ಅದರೆ ಈ ನನ್ನ ಕಾರ್ಯವನ್ನು ಮಾತ್ರ ನೀನು ಧರ್ಮಸಮ್ಮತವಾದುದೆಂದು ಭಾವಿಸುವುದಿಲ್ಲ. ಧರ್ಮದ ಅಳತೆಗೋಲು ನಿನಗೇ ಒಂದು ಬಗೆ, ನನಗೇ ಒಂದು ಬಗೆ. ಇದು ಹೇಗೆ ಸಾಧ್ಯ? ಹೀಗೇಕೆ ಹೇಳುವೆ? ನಾನು ಮಾಡಿರುವುದನ್ನು ಧರ್ಮಸಮ್ಮತವಾದುದೆಂದು ನೀನೇಕೆ ಭಾವಿಸುವುದಿಲ್ಲ?

**ಸಮ್ಬನ್ಧಾವನತಂ ಪಾರ್ಥ ನ ಮಾಂ ತ್ವಂ ವಕ್ತುಮರ್ಹಸಿ ।**
**ಸ್ವಗಾತ್ರಕೃತಸೋಪಾನಂ ನಿಷಣ್ಣಮಿವ ದನ್ತಿನಮ್ ॥೪೧॥**

ಯಾವ ರೀತಿಯಲ್ಲಿ ಆನೆಯು ತನ್ನೊಡನೆ ಸ್ನೇಹವನ್ನು ಬೆಳೆಸಿದವನನ್ನು–ಅಗಾಧವಾದ ತನ್ನ ಮೈಯ್ಯನ್ನು ಕೆಳಗಿನವರೆಗೂ ಬಗ್ಗಿಸಿ ಅವನು ತನ್ನ ಮೇಲೆ ಹತ್ತಲು ಸೋಪಾನವನ್ನಾಗಿ ಮಾಡಿಕೊಡುವುದೋ–ಅದೇ ರೀತಿಯಲ್ಲಿ ನಾನೂ ಸಹ ನಿನ್ನೊಡನೆ ಇರುವ ಸಂಬಂಧದ ಕಾರಣದಿಂದಾಗಿ ತಗ್ಗಿ ನಡೆಯುತ್ತಿದ್ದೇನೆ. ತಗ್ಗಿ ನಡೆಯುತ್ತಿರುವೆನೆಂಬ ಕಾರಣದಿಂದಲೇ ಇಷ್ಟು ತಾತ್ಸಾರವಾಗಿ ಮಾತನಾಡುವುದು ನಿನಗೆ ಯೋಗ್ಯವಲ್ಲ.

**ಕ್ಷಮಾಮಿ ತೇ ಸರ್ವಮೇವ ವಾಗ್ವ್ಯತಿಕ್ರಮಮರ್ಜುನ ।**
**ದ್ರೌಪದ್ಯಾ ದ್ರೌಪದೇಯಾನಾಂ ಕೃತೇ ನಾನ್ಯೇನ ಹೇತುನಾ ॥೪೨॥**

ನೀನು ನನ್ನ ವಿಷಯದಲ್ಲಿ ಹದ್ದುಮೀರಿ ಹೇಳಿದ ಮಾತುಗಳನ್ನೂ ನನ್ನ ತಂಗಿಯಾದ ದ್ರೌಪದಿಗಾಗಿ ಮತ್ತು ಅವಳ ಮಕ್ಕಳಾದ ದ್ರೌಪದೇಯರಿಗಾಗಿ ಕ್ಷಮಿಸಿಬಿಟ್ಟಿದ್ದೇನೆ. ಕೋಪವನ್ನು ಉದ್ಬೋಧಿಸುವಂತಹ ನಿನ್ನ ಮಾತುಗಳನ್ನು ಕ್ಷಮಿಸಲು ಬೇರೆ ಯಾವ ಕಾರಣವೂ ಇರುವುದಿಲ್ಲ. (ಹಾಗೆ ನೋಡಿದರೆ ನಿಶ್ಚಯವಾಗಿಯೂ ನಿನ್ನ ಮಾತುಗಳು ಕ್ಷಮಾರ್ಹವಾದುವುಗಳೇ ಅಲ್ಲ.)

**ಕುಲಕ್ರಮಾಗತಂ ವೈರಂ ಮಮಾಚಾರ್ಯೇಣ ವಿಶ್ರುತಮ್ ।**
**ತಥಾ ಜಾನಾತ್ಯಯಂ ಲೋಕೋ ನ ಯೂಯಂ ಪಾಣ್ಡುನನ್ದನಾಃ ॥**

ಪಾರ್ಥ! ಆಚಾರ್ಯರೊಡನೆ ನನ್ನ ವೈರವು ಕುಲಕ್ರಮಾಗತವಾದುದೆಂದೂ ತಂದೆಯ ಕಾಲದಿಂದಲೂ ಬಂದುದೆಂದೂ ವಿಖ್ಯಾತವಾಗಿದೆ. ಇಡೀ ಲೋಕಕ್ಕೇ ಈ ವಿಷಯವು ತಿಳಿದಿದೆ. ಪಾಂಡುವಿನ ಮಕ್ಕಳಾದ ನಿಮಗೆ ಮಾತ್ರ ಈ ವಿಷಯವು ತಿಳಿಯದೇ?

**ನಾನೃತೀ ಪಾಣ್ಡವೋ ಜ್ಯೇಷ್ಠೋ ನಾಹಂ ವಾಧಾರ್ಮಿಕೋಽರ್ಜುನ ।**
**ಶಿಷ್ಯದ್ರೋಹೀ ಹತಃ ಪಾಪೋ ಯುಧ್ಯಸ್ವ ವಿಜಯಸ್ತವ ॥೪೪॥**

ಅರ್ಜುನ! ಪಾಂಡವಜ್ಯೇಷ್ಠನಾದ ಯುಧಿಷ್ಠಿರನು ನಿಶ್ಚಯವಾಗಿಯೂ ಸುಳ್ಳುಗಾರನಲ್ಲ. ನಾನು ಅಧಾರ್ಮಿಕನೂ ಅಲ್ಲ. ಶಿಷ್ಯದ್ರೋಹಿಗಳಾದ, ಪಾಪಿಷ್ಠರಾದ ದ್ರೋಣರು ಸತ್ತುಹೋದರು. ಈ ವಿಷಯವನ್ನು

ವಿಮರ್ಶಿಸುವ ಕಾರಣವಿಲ್ಲ. ಅಪ್ರಮತ್ತನಾಗಿ ಯುದ್ಧಮಾಡು. ನಿನಗೆ ಜಯವು ಲಭಿಸಿಯೇ ತೀರುವುದು."

೧೯೭ನೆಯ ಅಧ್ಯಾಯವು ಮುಗಿಯಿತು.

೧೯೮ನೆಯ ಅಧ್ಯಾಯ ನಾರಾಯಣಾಸ್ತ್ರಮೋಕ್ಷಪರ್ವ (ಮುಂದುವರಿದಿದೆ)

## ಸಾತ್ಯಕಿ-ಧೃಷ್ಟದ್ಯುಮ್ನರ ವಾಗ್ಘರ್ಷಣೆ: ಭೀಮಸೇನ-ಸಹದೇವ-ಕೃಷ್ಣ-ಯುಧಿಷ್ಠಿರರು ಸಮಾಧಾನಪಡಿಸಿದುದು

ಧೃಷ್ಟದ್ಯುಮ್ನನ ಮಾತನ್ನು ಕೇಳಿದನಂತರ ಧೃತರಾಷ್ಟ್ರನು ಅಸಹನೆಯಿಂದ ಹೇಳುತ್ತಾನೆ:

"ಸಂಜಯ! ಮಹಾತ್ಮರಾದ ದ್ರೋಣರು ಯಥಾವಿಧಿಯಾಗಿ ಸಾಂಗವೇದಾಧ್ಯಯನ ಮಾಡಿದ್ದರು. ಲಜ್ಜಾವಿಶಿಷ್ಟರಾಗಿದ್ದ ಅವರಲ್ಲಿ ಸಾಕ್ಷಾತ್ ಧನುರ್ವೇದವೇ ನೆಲೆಗೊಂಡಿದ್ದಿತು. ಅವರ ಅನುಗ್ರಹದಿಂದಲೇ ಪುರುಷರ್ಷಭರಾದ ರಾಜಕುಮಾರರು ಯುದ್ಧದಲ್ಲಿ ದೇವತೆಗಳಿಂದಲೂ ಮಾಡಲು ದುಃಸಾಧ್ಯವಾದ ಅಮಾನುಷವಾದ ಆದಾನ-ಸಂಧಾನ-ಆಕರ್ಷಣ-ಪ್ರಯೋಗಾದಿ ಕರ್ಮಗಳನ್ನು ಚತುರತೆಯಿಂದ ಮಾಡುತ್ತಾರೆ. ಇಂತಹ ಬಹುಸಂಖ್ಯಾತಶಿಷ್ಯರ ಸಮ್ಮುಖದಲ್ಲಿಯೇ ಪಾಪಕರ್ಮನಾದ, ನೀಚಾತ್ಮನಾದ, ಕ್ರೂರಿಯಾದ, ಕ್ಷುದ್ರನಾದ ಧೃಷ್ಟದ್ಯುಮ್ನನು ದ್ರೋಣರ ಶಿಖೆಯನ್ನು ಹಿಡಿದೆಳೆಯುತ್ತಿರಲಾಗಿ ಯಾರೊಬ್ಬರೂ ಕೋಪಗೊಳ್ಳಲಿಲ್ಲ. ಎಂತಹ ವಿಪರ್ಯಾಸವಿದು! ಅವರು ನಿಶ್ಚಯವಾಗಿಯೂ ಕ್ಷತ್ರಿಯರೇ? ಆ ಕ್ಷತ್ರಿಯರೆಲ್ಲರಿಗೂ ಧಿಕ್ಕಾರವಿರಲಿ! ಅವರ ಕೋಪಕ್ಕೂ ಧಿಕ್ಕಾರವಿರಲಿ!

ಸೂತ! ಭೂಮಂಡಲದ ಎಲ್ಲ ಧನುರ್ಧಾರಿಗಳಾದ ರಾಜರೂ ಅಲ್ಲಿ ಉಪಸ್ಥಿತರಾಗಿದ್ದರು. ಅವರೆಲ್ಲರೂ ಧೃಷ್ಟದ್ಯುಮ್ನನ ಆ ಮಾತುಗಳನ್ನು ಕೇಳಿ ಏನು ಹೇಳಿದರು? ಅವನ ಮಾತಿಗೆ ಅವರ ಪ್ರತಿಕ್ರಿಯೆ ಏನು? ಪಾಂಡವರು ಏನು ಹೇಳಿದರು? ಈ ವಿಷಯವನ್ನು ವಿಶದವಾಗಿ ಹೇಳು."

"ಮಹಾರಾಜ! ಕ್ರೂರಕರ್ಮಿಯಾದ ಧೃಷ್ಟದ್ಯುಮ್ನನ ಮಾತು

ಗಳನ್ನು ಕೇಳಿ ಅಲ್ಲಿ ಸೇರಿದ್ದ ಎಲ್ಲ ರಾಜರೂ ಮೌನಿಗಳಾಗಿಯೇ ಇದ್ದು ಬಿಟ್ಟರು. ಆದರೆ ಅರ್ಜುನನು ಮಾತ್ರ ಪಾರ್ಷತನನ್ನು ಕಡೆಗಣ್ಣಿನ ವಕ್ರದೃಷ್ಟಿಯಿಂದ ಒಮ್ಮೆ ನೋಡಿ ಕಣ್ಣೀರುಸುರಿಸುತ್ತಾ, ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ 'ಈ ಕ್ರೂರಕ್ರಿಯೆಗೆ ಧಿಕ್ಕಾರ-ಧಿಕ್ಕಾರ'–ಎಂದೇ ಹೇಳಿದನು. ಯುಧಿಷ್ಠಿರ, ಭೀಮಸೇನ, ನಕುಲ-ಸಹದೇವರು ಮತ್ತು ಶ್ರೀಕೃಷ್ಣ– ಇವರೆಲ್ಲರೂ ನಾಚಿಕೆಯಿಂದ ತಲೆತಗ್ಗಿಸಿಕೊಂಡು ಕುಳಿತಿದ್ದರು. ಆಗ ಸಾತ್ಯಕಿಯು ಈ ಮಾತುಗಳನ್ನು ಹೇಳಿದನು:

**ನೇಹಾಸ್ತಿ ಪುರುಷಃ ಕಶ್ಚಿದ್ಯ ಇಮಂ ಪಾಪಪೂರುಷಮ್ ।**
**ಭಾಷಮಾಣಮಕಲ್ಯಾಣಂ ಶೀಘ್ರಂ ಹನ್ಯಾನ್ನರಾಧಮಮ್ ॥೮॥**

"ಅಮಂಗಳಕರವಾಗಿ ಮಾತನಾಡುತ್ತಿರುವ, ಪಾಪಿಷ್ಠನಾದ, ನರಾಧಮನಾದ ಈ ಧೃಷ್ಟದ್ಯುಮ್ನನನ್ನು ಶೀಘ್ರವಾಗಿ ಸಂಹರಿಸುವ ಪುರುಷನು ಇಲ್ಲಿ ಯಾರೂ ಇರುವಂತೆ ಕಾಣುವುದಿಲ್ಲ.

**ಏತೇ ತ್ವಾಂ ಪಾಣ್ಡವಾಃ ಸರ್ವೇ ಕುತ್ಸಯನ್ತಿ ವಿಕುತ್ಸಯಾ ।**
**ಕರ್ಮಣಾ ತೇನ ಪಾಪೇನ ಶ್ವಪಾಕಂ ಬ್ರಾಹ್ಮಣಾ ಇವ ॥೯॥**

ಪಾರ್ಷತ! ಬ್ರಾಹ್ಮಣರು ಯಾವ ರೀತಿಯಲ್ಲಿ ಚಂಡಾಲನನ್ನು ನಿಂದಿಸುತ್ತಾರೆಯೋ–ಅದೇ ರೀತಿಯಲ್ಲಿ ಮಹಾಪಾಪವನ್ನು ಮಾಡಿದ ಕಾರಣದಿಂದಾಗಿ ಈ ಪಾಂಡವರೂ ಬೇರೆಯ ಎಲ್ಲ ರಾಜರೂ ನಿನ್ನನ್ನು ಅತ್ಯಂತ ತುಚ್ಛವಾದ ಭಾವನೆಯಿಂದ ನಿಂದಿಸುತ್ತಿದ್ದಾರೆ.

**ಏತತ್ಕೃತ್ವಾ ಮಹತ್ಪಾಪಂ ನಿನ್ದಿತಃ ಸರ್ವಸಾಧುಭಿಃ।**
**ನ ಲಜ್ಜಸೇ ಕಥಂ ವಕ್ತುಂ ಸಮಿತಿಂ ಪ್ರಾಪ್ಯ ಶೋಭನಾಮ್ ॥೧೦॥**

**ಕಥಂ ಚ ಶತಧಾ ಜಿಹ್ವಾ ನ ತೇ ಮೂರ್ಧಾ ಚ ದೀರ್ಯತೇ।**
**ಗುರುಮಾಕ್ರೋಶತಃ ಕ್ಷುದ್ರ ನ ಚಾಧರ್ಮೇಣ ಪಾತ್ಯಸೇ ॥೧೧॥**

ಕ್ಷುದ್ರನೇ! ಈ ಮಹಾಪಾಪವನ್ನು ಮಾಡಿರುವ ನೀನು ಸಮಸ್ತಸಾಧುಪುರುಷರ ತೆಗಳಿಕೆಗೂ ಪಾತ್ರನಾಗಿರುವೆ. ಆದರೂ ಪರಮ

ಶೋಭಾಯಮಾನವಾದ, ಸತ್ಪುರುಷಸೇವಿತವಾದ ಮಹಾಸಭೆಗೆ ಬಂದು ಇಂತಹ ಮಾತುಗಳನ್ನು ಹೇಳಲು ನಿನಗೆ ನಾಚಿಕೆಯೇ ಆಗುವುದಿಲ್ಲವೇ? ಗುರುನಿಂದಕನಾದ ನಿನ್ನ ತಲೆಯೂ ಮತ್ತು ನಾಲಿಗೆಯೂ ನೂರಾರು ಚೂರುಗಳಾಗಿ ಸೀಳಿಹೋಗಲಿಲ್ಲವೇಕೆ? ಈ ಮಹಾಪಾಪದ ಕಾರಣದಿಂದಾಗಿ ನಿನ್ನ ಪತನವೇಕೆ ಇನ್ನೂ ಆಗಿರುವುದಿಲ್ಲ?

**ವಾಚ್ಯಸ್ತ್ವಮಸಿ ಪಾರ್ಥೈಶ್ಚ ಸರ್ವೈಶ್ಚಾನ್ಧಕವೃಷ್ಣಿಭಿಃ ।**
**ಯತ್ಕರ್ಮ ಕಲುಷಂ ಕೃತ್ವಾ ಶ್ಲಾಘಸೇ ಜನಸಂಸದಿ ॥೧೨॥**

ನೀನು ಮಹಾಪಾಪವನ್ನು ಮಾಡಿಯೂ ಮಹಾಜನರ ಸಭೆಯಲ್ಲಿ 'ನಾನು ಮಾಡಿರುವ ಕಾರ್ಯವು ಯುಕ್ತವಾಗಿದೆ'–ಎಂದು ಆತ್ಮಶ್ಲಾಘನೆ ಮಾಡಿಕೊಳ್ಳುತ್ತಿರುವುದರಿಂದ ಕುಂತಿಯ ಮಕ್ಕಳ ಮತ್ತು ಎಲ್ಲ ಅಂಧಕ-ವೃಷ್ಣಿಗಳ ಅವಹೇಳನೆಗೆ ಪಾತ್ರನಾಗಿರುವೆ.

**ಅಕಾರ್ಯಂ ತಾದೃಶಂ ಕೃತ್ವಾ ಪುನರೇವ ಗುರುಂ ಕ್ಷಿಪನ್ ।**
**ವಧ್ಯಸ್ತ್ವಂ ನ ತ್ವಯಾರ್ಥೋಽಸ್ತಿ ಮುಹೂರ್ತಮಪಿ ಜೀವತಾ ॥೧೩॥**

ಅಂತಹ ಅತಿಹೀನವಾದ ಕಾರ್ಯಮಾಡಿದನಂತರವೂ ನೀನು ನಿನ್ನ ಗುರುಗಳೂ ಆದ ದ್ರೋಣಾಚಾರ್ಯರನ್ನೇ ಮತ್ತೆ-ಮತ್ತೆ ನಿಂದಿಸುತ್ತಿರುವೆ. ಆದುದರಿಂದ ನೀನೀಗ ವಧಾರ್ಹನಾಗಿರುವೆ. ಒಂದು ಮುಹೂರ್ತ ಮಾತ್ರವಾದರೂ ನೀನು ಜೀವಿಸಿರುವುದರಿಂದ ಯಾವವಿಧವಾದ ಪ್ರಯೋಜನವೂ ಯಾರಿಗೂ ಇರುವುದಿಲ್ಲ. (ನೀನು ಬದುಕಿರಬಾರದು.)

**ಕಸ್ತ್ವೇತದ್ವ್ಯವಸ್ಯೇದಾರ್ಯಸ್ತ್ವದನ್ಯಃ ಪುರುಷಾಧಮ ।**
**ನಿಗೃಹ್ಯ ಕೇಶೇಷು ವಧಂ ಗುರೋರ್ಧರ್ಮಾತ್ಮನಃ ಸತಃ ॥೧೪॥**

ಪುರುಷಾಧಮನೇ! ನಿನ್ನ ಹೊರತಾಗಿ ಮತ್ತಾವ ಮನುಷ್ಯನು ತಾನೇ ಸತ್ಪುರುಷರಾದ, ಧರ್ಮಾತ್ಮರಾದ ಗುರುಗಳ ಶಿಖೆಗೆ ಕೈಹಾಕಿ ಹಿಡಿದುಕೊಂಡು ವಧೆಮಾಡಲು ಉದ್ಯುಕ್ತನಾದಾನು?

**ಸಪ್ತಾವರೇ ತಥಾ ಪೂರ್ವೇ ಬಾನ್ಧವಾಸ್ತೇ ನಿಮಜ್ಜಿತಾಃ ।**
**ಯಶಸಾ ಚ ಪರಿತ್ಯಕ್ತಾಸ್ತ್ವಾಂ ಪ್ರಾಪ್ಯ ಕುಲಪಾಂಸನಮ್ ॥೧೫॥**

ಕುಲದ ಹೆಸರನ್ನು ಕೆಡಿಸಿದ ನಿನ್ನನ್ನು ಪಡೆದು ನಿನ್ನ ಹಿಂದಿನ ಏಳು ತಲೆಮಾರಿನವರೂ (ತಂದೆ-ತಾತ ಮುಂತಾದವರೂ) ಯಶಸ್ಸಿನಿಂದಲೂ ವಂಚಿತರಾಗಿ ನರಕದಲ್ಲಿ ಮುಳುಗಿಹೋದರು. ಮುಂದಿನ ಏಳು ತಲೆಮಾರಿನವರೂ (ಮಗ, ಮೊಮ್ಮಗ, ಮರಿಮಗ ಮೊದಲಾದವರೂ) ಅಪಯಶಸ್ಸನ್ನು ಪಡೆದು ನರಕದಲ್ಲಿ ಬೀಳುತ್ತಾರೆ.

**ಉಕ್ತವಾಂಶ್ಚಾಪಿ ಯತ್ಪಾರ್ಥೇ ಭೀಷ್ಮಂ ಪ್ರತಿ ನರರ್ಷಭಮ್।**
**ತಥಾನ್ತೋ ವಿಹಿತಸ್ತೇನ ಸ್ವಯಮೇವ ಮಹಾತ್ಮನಾ ॥೧೬॥**

ಪಿತಾಮಹನಾದ ಭೀಷ್ಮನನ್ನು ಕೊಂದುದಕ್ಕಾಗಿ ಅರ್ಜುನನ ಮೇಲೆ ಆಪಾದನೆಯನ್ನು ಹೊರಿಸಿದೆಯಲ್ಲವೇ? ಈ ನಿನ್ನ ಆಪಾದನೆಯು ಹುಸಿಯಾದುದು. ಏಕೆಂದರೆ: ಅದೇ ವಿಧಾನದಲ್ಲಿ ತನ್ನ ಅಂತ್ಯವಾಗ ತಕ್ಕುದೆಂದು ಮಹಾತ್ಮನಾದ ಭೀಷ್ಮನೇ ವಿಧಾಯಕಮಾಡಿದ್ದನು.

**ತಸ್ಯಾಪಿ ತವ ಸೋದರ್ಯೋ ನಿಹನ್ತಾ ಪಾಪಕೃತ್ತಮಃ।**
**ನಾನ್ಯಃ ಪಾಞ್ಚಾಲ್ಯಪುತ್ರೇಭ್ಯೋ ವಿದ್ಯತೇ ಭುವಿ ಪಾಪಕೃತ್ ॥೧೭॥**

ನಿಜವಾಗಿ ಹೇಳುವುದಾದರೆ ಅರ್ಜುನನ ಸಹಕಾರದಿಂದ ಭೀಷ್ಮನನ್ನು ಸಂಹರಿಸಿದವನೂ ಪಾಪಿಷ್ಠರಲ್ಲಿ ಅಗ್ರಗಣ್ಯನಾದ ನಿನ್ನ ಸೋದರನೇ ಆಗಿದ್ದಾನೆ. ಒಟ್ಟಿನಲ್ಲಿ ಹೇಳುವುದಾದರೆ ಪಾಂಚಾಲ್ಯನ ಮಕ್ಕಳಿಗಿಂತಲೂ ಪಾಪಿಷ್ಠ ರಾದವರು ಈ ಲೋಕದಲ್ಲಿಯೇ ಮತ್ತಾರೂ ಇರುವುದಿಲ್ಲ.

**ಸ ಚಾಪಿ ಸೃಷ್ಟಃ ಪಿತ್ರಾ ತೇ ಭೀಷ್ಮಸ್ಯಾನ್ತಕರಃ ಕಿಲ।**
**ಶಿಖಣ್ಡೀ ರಕ್ಷಿತಸ್ತೇನ ಸ ಚ ಮೃತ್ಯುರ್ಮಹಾತ್ಮನಃ ॥೧೮॥**

ಭೀಷ್ಮನನ್ನು ಕಡೆಗಾಣಿಸುವ ಸಲುವಾಗಿಯೇ ಶಿಖಂಡಿಯೂ ನಿನ್ನ ತಂದೆಯಿಂದ ಉತ್ಪನ್ನನಾದನು. ಮಹಾತ್ಮನಾದ ಭೀಷ್ಮನಿಗೆ ಮೃತ್ಯುಸ್ವರೂಪ ನಾಗಿದ್ದ ಶಿಖಂಡಿಯು ದ್ರುಪದನಿಂದ ಸಂರಕ್ಷಿಸಲ್ಪಡುತ್ತಿದ್ದನು.

**ಪಾಞ್ಚಾಲಾಶ್ಚಾಲಿತಾ ಧರ್ಮಾತ್ಕ್ಷುದ್ರಾ ಮಿತ್ರಗುರುದ್ರುಹಃ।**
**ತ್ವಾಂ ಪ್ರಾಪ್ಯ ಸಹಸೋದರ್ಯಂ ಧಿಕ್ಕೃತಂ ಸರ್ವಸಾಧುಭಿಃ ॥೧೯॥**

ನೀನೂ ಮತ್ತು ನಿನ್ನ ಸಹೋದರನೂ ಸರ್ವಸಾಧುಸತ್ಪುರುಷರ ಧಿಕ್ಕಾರಕ್ಕೆ ಪಾತ್ರರಾಗಿರುತ್ತೀರಿ. ನಿಮ್ಮಿಬ್ಬರನ್ನೂ ಪಡೆದುಕೊಂಡ ಎಲ್ಲ ಪಾಂಚಾಲರೂ ಧರ್ಮಭ್ರಷ್ಟರೂ, ನೀಚರೂ, ಮಿತ್ರದ್ರೋಹಿಗಳೂ, ಗುರುದ್ರೋಹಿಗಳೂ ಆದರು. (ನೀವಿಬ್ಬರೂ ಪಾಂಚಾಲವಂಶದಲ್ಲಿ ಹುಟ್ಟಿದ ಕಾರಣದಿಂದಾಗಿ ನಿಮ್ಮ ವಂಶದವರೆಲ್ಲರಿಗೂ ಮಿತ್ರ-ಗುರುದ್ರೋಹಿಗಳೆಂಬ ಮತ್ತು ಧರ್ಮದಿಂದ ಚ್ಯುತರಾದವರೆಂಬ ಅಪಯಶಸ್ಸುಂಟಾಯಿತು.)

**ಪುನಶ್ಚೇದೀದೃಶಂ ವಾಚಂ ಮತ್ಸಮೀಪೇ ವದಿಷ್ಯಸಿ।**
**ಶಿರಸ್ತೇ ಪೋಥಯಿಷ್ಯಾಮಿ ಗದಯಾ ವಜ್ರಕಲ್ಪಯಾ ॥೨೦॥**

ಗುರುಘಾತಕನೇ! ನೀನೇನಾದರೂ ಪುನಃ ಇಂತಹ ಮಾತುಗಳನ್ನು ನನ್ನ ಎದುರಿಗೆ ಹೇಳಿದ್ದೇ ಆದರೆ ವಜ್ರಾಯುಧಕ್ಕೆ ಸಮಾನವಾದ ಗದೆಯಿಂದ ನಿನ್ನ ತಲೆಯನ್ನು ಒಡೆದು ಹಾಕುತ್ತೇನೆ.

**ತ್ವಾಂ ಚ ಬ್ರಹ್ಮಹಣಂ ದೃಷ್ಟ್ವಾ ಜನಃ ಸೂರ್ಯಮವೇಕ್ಷತೇ ।**
**ಬ್ರಹ್ಮಹತ್ಯಾ ಹಿ ತೇ ಪಾಪಂ ಪ್ರಾಯಶ್ಚಿತ್ತಾರ್ಥಮಾತ್ಮನಃ ॥೨೧॥**

ಬ್ರಹ್ಮಹತ್ಯೆಯ ಮಹಾಪಾಪವು ನಿನಗೆ ಲೇಪಿತವಾಗಿದೆ. ಬ್ರಾಹ್ಮಣಹಂತಕನಾದ ನಿನ್ನನ್ನು ನೋಡಿದೊಡನೆಯೇ ಜನರು ನಿನ್ನನ್ನು ನೋಡಿದುದರಿಂದುಂಟಾದ ಪಾಪದ ಪ್ರಾಯಶ್ಚಿತ್ತಾರ್ಥವಾಗಿ ಸೂರ್ಯನನ್ನು ದರ್ಶನಮಾಡುತ್ತಾರೆ.

**ಪಾಞ್ಚಾಲಕ ಸುದುರ್ವೃತ್ತ ಮಮೈವ ಗುರುಮಗ್ರತಃ।**
**ಗುರೋರ್ಗುರುಂ ಚ ಭೂಯೋಽಪಿ ಕ್ಷಿಪನ್ನೈವ ಹಿ ಲಜ್ಜಸೇ ॥೨೨॥**

ದುರಾಚಾರಿಯಾದ ಪಾಂಚಾಲನೇ! ನನ್ನ ಎದುರಿನಲ್ಲಿಯೇ ನನ್ನ ಪೂಜ್ಯಗುರುವನ್ನೂ (ಅರ್ಜುನನನ್ನೂ) ಮತ್ತು ನನ್ನ ಗುರುವಿನ ಗುರುವನ್ನೂ (ದ್ರೋಣರನ್ನೂ) ಬಾರಿ-ಬಾರಿಗೂ ನಿಂದಿಸುತ್ತಿರುವ ನಿನಗೆ ಸ್ವಲ್ಪವಾದರೂ ನಾಚಿಕೆಯುಂಟಾಗುವುದಿಲ್ಲವೇ?

**ತಿಷ್ಠ ತಿಷ್ಠ ಸಹಸ್ವೈಕಂ ಗದಾಪಾತಮಿಮಂ ಮಮ।**
**ತವ ಚಾಪಿ ಸಹಿಷ್ಯೇಽಹಂ ಗದಾಪಾತಾನನೇಕಶಃ ॥೨೩॥**

ಸ್ವಲ್ಪಹೊತ್ತು ನಿಲ್ಲು. ನಾನು ನಿನ್ನ ಮೇಲೆ ಮಾಡಲಿರುವ ಗದಾಪ್ರಹಾರವೊಂದನ್ನು ಸಹಿಸು. ನಾನೂ ಸಹ ನಿನ್ನ ಅನೇಕ ಗದಾಪ್ರಹಾರಗಳನ್ನು ಸಹಿಸಿಕೊಳ್ಳುತ್ತೇನೆ."

ಮಹಾರಾಜ! ಸಾತ್ವತವಂಶೀಯನಾದ ಸಾತ್ಯಕಿಯು ಪಾರ್ಷತನನ್ನು ಇಷ್ಟು ಕಠಿನವಾದ ಮಾತುಗಳಿಂದ ಆಕ್ಷೇಪಿಸಲಾಗಿ, ಪರಮಕ್ರುದ್ಧನಾಗಿದ್ದ ಧೃಷ್ಟದ್ಯುಮ್ನನು ಅಟ್ಟಹಾಸದಿಂದ ನಗುತ್ತಿರುವನೋ ಎಂಬಂತೆ ತೋರ್ಪಡಿಸಿಕೊಳ್ಳುತ್ತಾ ಕುಪಿತನಾಗಿದ್ದ ಸಾತ್ಯಕಿಯೊಡನೆ ಹೇಳಿದನು:

**ಶ್ರೂಯತೇ ಶ್ರೂಯತೇ ಚೇತಿ ಕ್ಷಮ್ಯತೇ ಚೇತಿ ಮಾಧವ।**
**ಸದಾನಾರ್ಯೋಽಶುಭಃ ಸಾಧುಂ ಪುರುಷಂ ಕ್ಷೇಪ್ತುಮಿಚ್ಛತಿ ॥೨೫॥**

"ಮಾಧವ! ನಿನ್ನ ಮಾತುಗಳನ್ನು ಕೇಳುತ್ತಲೇ ಇದ್ದೇನೆ. 'ಏನಾದರೂ ಹರಟಿಕೊಂಡು ಹೋಗಲಿ'–ಎಂದು ಕ್ಷಮಿಸುತ್ತಲೂ ಇದ್ದೇನೆ. ಆದರೆ ಲೋಕದಲ್ಲಿ ಇದೊಂದು ಹವ್ಯಾಸವು ಬೆಳೆದುಬಂದುಬಿಟ್ಟಿದೆ. 'ಸತ್ಪುರುಷನು ತನ್ನ ನಿಂದೆಯನ್ನು ಕೇಳುತ್ತಾನೆ; ಕೇಳಿಯೂ ಕ್ಷಮಿಸುತ್ತಾನೆ. (ಪ್ರತೀಕಾರ ಮಾಡುವುದಿಲ್ಲ.)'–ಎಂಬ ಭಾವನೆಯಿಂದ ಪಾಪಿಷ್ಠನು ಸತ್ಪುರುಷರನ್ನು ಸದಾಕಾಲದಲ್ಲಿಯೂ ನಿಂದಿಸಬೇಕೆಂಬ ಇಚ್ಛೆಯಿಂದಲೇ ಇರುತ್ತಾನೆ.

**ಕ್ಷಮಾ ಪ್ರಶಸ್ಯತೇ ಲೋಕೇ ನ ತು ಪಾಪೋಽರ್ಹತಿ ಕ್ಷಮಾಮ್ ।**
**ಕ್ಷಮಾವನ್ತಂ ಹಿ ಪಾಪಾತ್ಮಾ ಜಿತೋಽಯಮಿತಿ ಮನ್ಯತೇ ॥೨೬॥**

ಲೋಕದಲ್ಲಿ ಕ್ಷಮಾಗುಣವು ಅತ್ಯಂತಪ್ರಶಸ್ತವಾದುದೆಂಬುದೇನೋ ನಿಜ. ಆದರೆ ಪಾಪಿಷ್ಠರಾದವರು ಕ್ಷಮೆಗೆ ಅರ್ಹರಾಗುವುದಿಲ್ಲ. ಪಾಪಿಷ್ಠರು ಕ್ಷಮಾವಂತನಾದವನನ್ನು ಸೋತುಹೋದವನೆಂದೇ ಭಾವಿಸುತ್ತಾರೆ. (ಕೈಯಲ್ಲಿ ಹರಿಯದವನೆಂದು ತೆಗಳುತ್ತಾರೆ.)

**ಸ ತ್ವಂ ಕ್ಷುದ್ರಸಮಾಚಾರೋ ನೀಚಾತ್ಮಾ ಪಾಪನಿಶ್ಚಯಃ ।**
**ಆಕೇಶಾಗ್ರಾನ್ನಖಾಗ್ರಾಚ್ಚ ವಕ್ತವ್ಯೋ ವಕ್ತುಮಿಚ್ಛಸಿ ॥೨೭॥**

ಸಾತ್ವತ! ನೀನು ಸ್ವತಃ ದುರಾಚಾರಿಯಾಗಿರತಕ್ಕವನು. ಬಹಳ

ತುಚ್ಛವಾದ ಬುದ್ಧಿಯಿರುವವನು. ಪಾಪಭೂಯಿಷ್ಠವಾದ ನಿಶ್ಚಯಗಳನ್ನೇ ಮಾಡತಕ್ಕವನು. ಕಾಲುಗುರಿನ ತುದಿಯಿಂದ ಹಿಡಿದು ಶಿಖಾಗ್ರದವರೆಗೂ ನಿನ್ನಲ್ಲಿರುವ ಅವಗುಣಗಳನ್ನು ವರ್ಣಿಸಿ-ವರ್ಣಿಸಿ ಹೇಳಬಹುದಾಗಿದೆ. ಹೀಗಿದ್ದರೂ ನೀನು ಪರನಿಂದೆಯಲ್ಲಿಯೇ ಆಸಕ್ತನಾಗಿರುವೆ.

**ಯಃ ಸ ಭೂರಿಶ್ರವಾಶ್ಛಿನ್ನಭುಜಃ ಪ್ರಾಯಗತಸ್ತ್ವಯಾ ।**
**ವಾರ್ಯಮಾಣೇನ ಹಿ ಹತಸ್ತತಃ ಪಾಪತರಂ ನು ಕಿಮ್ ॥೨೮॥**

ಭೂರಿಶ್ರವಸನ ತೋಳು ಅರ್ಜುನನಿಂದ ಕತ್ತರಿಸಲ್ಪಟ್ಟಿದ್ದಿತು. ಮೇಲಾಗಿ ಅವನು ಪ್ರಾಯೋಪವೇಶವ್ರತಸ್ಥನಾಗಿದ್ದನು. ಎಲ್ಲ ಯೋಧರೂ ಆ ಸಮಯದಲ್ಲಿ ಅವನನ್ನು ಕೊಲ್ಲಕೂಡದೆಂದು ನಿನಗೆ ಕೂಗಿ ಹೇಳಿದರು. ಅದರೂ ಸಹ ನೀನು ಹೋಗಿ ಅವನ ಕತ್ತನ್ನು ಕತ್ತರಿಸಿದೆ. ಇದಕ್ಕಿಂತಲೂ ಪಾಪತರವಾದುದು ಬೇರಾವುದಿದೆ?

**ಗಾಹಮಾನೋ ಮಯಾ ದ್ರೋಣೋ ದಿವ್ಯೇನಾಸ್ತ್ರೇಣ ಸಂಯುಗೇ ।**
**ವಿಸೃಷ್ಟಶಸ್ತ್ರೋ ನಿಹತಃ ಕಿಂ ತತ್ರ ಕ್ರೂರ ದುಷ್ಕೃತಮ್ ॥೨೯॥**

ಕ್ರೂರಿಯೇ! ದ್ರೋಣರನ್ನು ಸಂಹಾರಮಾಡುವ ಮೊದಲು ನಾನು ಅವರೊಡನೆ ಯುದ್ಧದಲ್ಲಿ ತೊಡಗಿದ್ದು ಅನೇಕ ದಿವ್ಯಾಸ್ತ್ರಗಳಿಂದ ಅವರನ್ನು ಮರ್ದಿಸಿದ್ದೆನು. ಅವರನ್ನು ಸಂಹರಿಸುವುದೇ ನನ್ನ ಏಕೈಕಧ್ಯೇಯವಾಗಿದ್ದಿತು. ದಿವ್ಯಾಸ್ತ್ರಗಳಿಂದ ನಮ್ಮ ಸೈನ್ಯಗಳನ್ನು ನಾಶಗೊಳಿಸುತ್ತಿದ್ದ ದ್ರೋಣರನ್ನು ಅವರು ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟನಂತರ ನಾನು ಸಂಹರಿಸಿದೆನು. (ಶಸ್ತ್ರಗಳನ್ನು ಕೆಳಗಿಡದಿದ್ದರೆ ಯುದ್ಧವನ್ನು ಮುಂದುವರಿಸಿ ಸಂಹರಿಸುತ್ತಿದ್ದೆನು.) ಹೀಗೆ ಮಾಡುವುದರಲ್ಲಿ ಪಾಪವೇನಿದೆ?

**ಅಯುಧ್ಯಮಾನಂ ಯಸ್ತ್ವಾಜೌ ತಥಾ ಪ್ರಾಯಗತಂ ಮುನಿಮ್ ।**
**ಛಿನ್ನಬಾಹುಂ ಪರೈರ್ಹನ್ಯಾತ್ತಾಸ್ಯಾತ್ಯಕೇ ಸ ಕಥಂ ವದೇತ್ ॥೩೦॥**

ಬೇರೆಯವರು (ಅರ್ಜುನನು) ಭೂರಿಶ್ರವಸನ ಬಲತೋಳನ್ನು ಕತ್ತರಿಸಿಬಿಟ್ಟಿದ್ದರು. ಅನಂತರ ಅವನೂ ಯುದ್ಧವನ್ನು ನಿಲ್ಲಿಸಿದ್ದನು. ಆಮರಣಾಂತವಾದ ಉಪವಾಸಮಾಡಲು ನಿಶ್ಚಯಿಸಿ, ಪ್ರಾಯೋಪವೇಶ

ವ್ರತವನ್ನು ಕೈಗೊಂಡು ಮೌನಿಯಾಗಿ ರಣರಂಗದಲ್ಲಿ ದರ್ಭಾಸನದಲ್ಲಿ ಕುಳಿತಿದ್ದನು. ಅಂತಹವನನ್ನು ಕೊಂದಿರುವ ನೀನು ಇತರರಿಗೆ ಯಾವ ಮುಖವನ್ನಿಟ್ಟುಕೊಂಡು ಉಪದೇಶಿಸುವೆ?

**ನಿಹತ್ಯ ತ್ವಾಂ ಪದಾ ಭೂಮೌ ಸ ವಿಕರ್ಷತಿ ವೀರ್ಯವಾನ್ ।**
**ಕಿಂ ತದಾ ನ ನಿಹಂಸ್ಯೇನಂ ಭೂತ್ವಾ ಪುರುಷಸತ್ತಮಃ ॥೩೧॥**

ವೀರ್ಯವಂತನಾದ ಭೂರಿಶ್ರವಸನು ನಿನ್ನನ್ನು ಕಾಲಿನಿಂದ ಒದೆದು ಜುಟ್ಟುಹಿಡಿದು ಅತ್ತಲಿತ್ತ ಎಳೆದಾಡುತ್ತಿದ್ದನು. ನೀನು ಪುರುಷಶ್ರೇಷ್ಠ ನಾಗಿದ್ದುಕೊಂಡು ಆ ಸಮಯದಲ್ಲಿ ಅವನನ್ನೇಕೆ ಸಂಹರಿಸಲಿಲ್ಲ? ಮೊದಲು ಅರ್ಜುನನು–ನಿನ್ನನ್ನು ಕತ್ತರಿಸಲೆತ್ತಿದ್ದ ಮಹಾಶೂರನಾದ ಭೂರಿಶ್ರವಸನ ಬಾಹುವನ್ನು ಕತ್ತರಿಸಿ–ಅವನನ್ನು ಪರಾಜಯಗೊಳಿಸಿಬಿಟ್ಟಿದ್ದನು. ಪರಾಜಯ ಗೊಂಡಿದ್ದವನನ್ನೂ, ಶಸ್ತ್ರಸಂನ್ಯಾಸಮಾಡಿದ್ದವನನ್ನೂ ಅನಾರ್ಯನಾದ ನೀನು ಸಂಹರಿಸಿದೆ. ನನ್ನ ವಿಷಯವು ಹಾಗಲ್ಲ. ಸಾವಿರಾರು ಶರಗಳನ್ನು ಸುರಿಸುತ್ತಾ ದ್ರೋಣರು ಎಲ್ಲೆಲ್ಲಿ ಪಾಂಡವಸೈನ್ಯವನ್ನು ಪಲಾಯನಗೊಳಿಸುತ್ತಿದ್ದರೋ– ಅಲ್ಲಲ್ಲಿಗೇ ನಾನೂ ಧಾವಿಸುತ್ತಿದ್ದೆನು. ನೀನು ವಿವರಿಸಿದ ರೀತಿಯಲ್ಲಿ ಚಂಡಾಲನಂತೆ ಪಾಪಕರ್ಮಮಾಡಿ ಸರ್ವರ ನಿಂದೆಗೂ ಪಾತ್ರನಾಗಿರತಕ್ಕ ನೀನು ಇತರರನ್ನು ಕಟುವಚನಗಳಿಂದ ಹೇಗೆ ನಿಂದಿಸುವೆ?

**ಕರ್ತಾ ತ್ವಂ ಕರ್ಮಣೋ ಹ್ಯಸ್ಯ ನಾಹಂ ವೃಷ್ಣಿಕುಲಾಧಮ ।**
**ಪಾಪಾನಾಂ ಚ ತ್ವಮಾವಾಸಃ ಕರ್ಮಣಾಂ ಮಾ ಪುನರ್ವದ ॥೩೫॥**

ವೃಷ್ಣಿಕುಲಾಧಮನೇ! ಇಂತಹ ಕುತ್ಸಿತಕರ್ಮವನ್ನು ಮಾಡಿದವನು ನೀನೇ ಆಗಿರುವೆ. ನಾನಂತೂ ಅಲ್ಲ. ಪಾಪಕರ್ಮಗಳೆಲ್ಲಕ್ಕೂ ನೀನು ಆಶ್ರಯಸ್ಥಾನನಾಗಿರುವೆ. ಇಂತಹ ನೀನು ಇತರರ ವಿಷಯದಲ್ಲಿ ಪುನಃ ಹೀಗೆ ಮಾತನಾಡಬೇಡ.

**ಜೋಷಮಾಸ್ವ ನ ಮಾಂ ಭೂಯೋ ವಕ್ತುಮರ್ಹಸ್ಯತಃ ಪರಮ್ ।**
**ಅಧರೋತ್ತರಮೇತದ್ಧಿ ಯನ್ಮಾಂ ತ್ವಂ ವಕ್ತುಮಿಚ್ಛಸಿ ॥೩೬॥**

ಸುಮ್ಮನೆ ಕುಳಿತುಕೊ. ನನ್ನೊಡನೆ ಪುನಃ ಇಂತಹ ಮಾತುಗಳನ್ನಾಡಬೇಡ. ನನ್ನೊಡನೆ ನೀನು ಹೇಳಲಿಚ್ಛಿಸಿರುವುದು ಪ್ರಕರಣಕ್ಕೆ ಅತ್ಯಂತ ನೀಚವಾದ ಉತ್ತರವಾಗಿದೆ.

**ಅಥ ವಕ್ಷ್ಯಸಿ ಮಾಂ ಮೌರ್ಖ್ಯಾದ್ಭೂಯಃ ಪರುಷಮೀದೃಶಮ್ ।**
**ಗಮಯಿಷ್ಯಾಮಿ ಬಾಣೈಸ್ತ್ವಾಂ ಯುಧಿ ವೈವಸ್ವತಕ್ಷಯಮ್ ॥೩೭॥**

ಒಂದು ವೇಳೆ ಮೌಢ್ಯದಿಂದ ಪುನಃ ನೀನು ನನ್ನನ್ನು ಇಂತಹುದೇ ಕಠಿನವಾದ ಮಾತುಗಳಿಂದ ನಿಂದಿಸಿದರೆ ಯುದ್ಧದಲ್ಲಿ ನಿನ್ನನ್ನು ಬಾಣಗಳಿಂದ ಯಮನ ಮನೆಗೆ ಕಳುಹಿಸಿಬಿಡುತ್ತೇನೆ.

**ನ ಚೈವಂ ಮೂರ್ಖ ಧರ್ಮೇಣ ಕೇವಲೇನೈವ ಶಕ್ಯತೇ ।**
**ತೇಷಾಮಪಿ ಹ್ಯಧರ್ಮೇಣ ಚೇಷ್ಟಿತಂ ಶೃಣು ಯಾದೃಶಮ್ ॥೩೮॥**

ಮೂರ್ಖ! ಕೇವಲ ಧರ್ಮಮಾರ್ಗಾನುಸರಣೆಯಿಂದಲೇ ಯುದ್ಧದಲ್ಲಿ ಜಯಗಳಿಸಲು ಸಾಧ್ಯವಾಗುವುದಿಲ್ಲ. ನಮ್ಮ ಶತ್ರುಗಳಾದ ಕೌರವರೂ ಸಹ ಅನೇಕ ರೀತಿಯಲ್ಲಿ ಅಧರ್ಮಕರ್ಮಗಳನ್ನೆಸಗಿದ್ದಾರೆ. ಅವರು ಹೇಗೆ ಮತ್ತು ಯಾವಾಗ ಅಧರ್ಮಮಾರ್ಗದಲ್ಲಿ ಪ್ರವೃತ್ತರಾದರೆಂಬುದನ್ನು ಹೇಳುವೆನು ಕೇಳು :

**ವಞ್ಚಿತಃ ಪಾಣ್ಡವಃ ಪೂರ್ವಮಧರ್ಮೇಣ ಯುಧಿಷ್ಠಿರಃ ।**
**ದ್ರೌಪದೀ ಚ ಪರಿಕ್ಲಿಷ್ಟಾ ತಥಾಧರ್ಮೇಣ ಸಾತ್ಯಕೇ ॥೩೯॥**

ಸಾತ್ಯಕಿಯೇ! ಹಿಂದೆ ದ್ಯೂತದ ಸಮಯದಲ್ಲಿ ಪಾಂಡುವಿನ ಮಗನಾದ ಯುಧಿಷ್ಠಿರನು ಅಧರ್ಮದಮೂಲಕವಾಗಿಯೇ ವಂಚಿಸಲ್ಪಟ್ಟನು. ಹಾಗೆಯೇ ಅಧರ್ಮದಿಂದಲೇ ದ್ರೌಪದಿಯೂ ಕೌರವರಿಂದ ಅವಮಾನಿತಳಾದಳು.

**ಪ್ರವ್ರಾಜಿತಾ ವನಂ ಸರ್ವೇ ಪಾಣ್ಡವಾಃ ಸಹ ಕೃಷ್ಣಯಾ ।**
**ಸರ್ವಸ್ವಮಪಕೃಷ್ಟಂ ಚ ತಥಾಧರ್ಮೇಣ ಬಾಲಿಶ ॥೪೦॥**

ಮೂರ್ಖನೇ! ಅಧರ್ಮಮಾರ್ಗದಿಂದಲೇ ಕೌರವರು ಪಾಂಡವರ

ಸಕಲೈಶ್ವರ್ಯಗಳನ್ನೂ ಅಪಹರಿಸಿ ದ್ರೌಪದಿಯೊಡನೆ ಪಾಂಡವರನ್ನು ಕಾಡಿಗಟ್ಟಿದರು.

**ಅಧರ್ಮೇಣಾಪಕೃಷ್ಟಶ್ಚ ಮದ್ರರಾಜಃ ಪರೇರಿತಃ ।**
**ಅಧರ್ಮೇಣ ತಥಾ ಬಾಲಃ ಸೌಭದ್ರೋ ವಿನಿಪಾತಿತಃ ॥೪೧॥**

ಪಾಂಡವರ ಕಡೆಗೆ ಬರುತ್ತಿದ್ದ ಮದ್ರರಾಜನಾದ ಶಲ್ಯನನ್ನು ನಮ್ಮ ಶತ್ರುಗಳು ವಂಚನೆಯಿಂದಲೇ ತಮ್ಮ ಕಡೆಗೆ ಸೆಳೆದುಕೊಂಡರು. ಅದೇ ರೀತಿಯಲ್ಲಿ ಬಾಲಕನಾದ ಅಭಿಮನ್ಯುವೂ ಸಹ ಮೋಸದಿಂದಲೇ ಶತ್ರುಗಳಿಂದ ಕೊಲ್ಲಲ್ಪಟ್ಟನು.

**ಇತೋಽಪ್ಯಧರ್ಮೇಣ ಹತೋ ಭೀಷ್ಮಃ ಪರಪುರಂಜಯಃ।**
**ಭೂರಿಶ್ರವಾ ಹ್ಯಧರ್ಮೇಣ ತ್ವಯಾ ಧರ್ಮವಿದಾ ಹತಃ ॥೪೨॥**

ನಮ್ಮ ಕಡೆಯಲ್ಲಿಯೂ ಕೆಲವು ಸಂದರ್ಭಗಳಲ್ಲಿ ಅಧರ್ಮವನ್ನೇ ಅನುಸರಿಸಿದ್ದೇವೆ. ಪರಪುರಂಜಯನಾದ ಭೀಷ್ಮನು ಅಧರ್ಮಮಾರ್ಗದ ಮೂಲಕವಾಗಿಯೇ ನಮ್ಮಿಂದ ಹತನಾದನು. ಧರ್ಮವಿದನಾದ ನಿನ್ನಿಂದಲೇ ಭೂರಿಶ್ರವಸನು ಅಧರ್ಮಮಾರ್ಗದಿಂದಲೇ ಸಂಹರಿಸಲ್ಪಟ್ಟನು.

**ಏವಂ ಪರೈರಾಚರಿತಂ ಪಾಣ್ಡವೇಯೈಶ್ಚ ಸಂಯುಗೇ ।**
**ರಕ್ಷಮಾಣೈರ್ಜಯಂ ವೀರೈರ್ಧರ್ಮಜ್ಞೈರಪಿ ಸಾತ್ವತ ॥೪೩॥**

ಸಾತ್ವತ! ಹೀಗೆ ರಣಾಂಗಣದಲ್ಲಿ ತಮ್ಮ ವಿಜಯವನ್ನು ರಕ್ಷಿಸಿಕೊಳ್ಳಬೇಕೆಂಬ ಇಚ್ಛೆಯಿಂದ ವೀರರಾದ ಪಾಂಡವರೂ ಮತ್ತು ಕೌರವರೂ ಧರ್ಮಜ್ಞರೇ ಆಗಿದ್ದರೂ ಹಲವಾರು ಸಮಯಗಳಲ್ಲಿ ಅಧರ್ಮಮಾರ್ಗವನ್ನೇ ಅನುಸರಿಸುತ್ತಾರೆ. (ಇದು ಅನಿವಾರ್ಯವೂ ಆಗಿದೆ.)

**ದುರ್ಜ್ಞೇಯಃ ಸ ಪರೋ ಧರ್ಮಸ್ತಥಾಧರ್ಮಶ್ಚ ದುರ್ವಿದಃ।**
**ಯುಧ್ಯಸ್ವ ಕೌರವ್ಯೈಃ ಸಾರ್ಧಂ ಮಾ ಗಾ ಪಿತೃನಿವೇಶನಮ್ ॥೪೪॥**

ಸಾತ್ವತ! ಒಟ್ಟಿನಲ್ಲಿ ಹೇಳುವುದಾದರೆ ಶ್ರೇಷ್ಠವಾದ ಧರ್ಮವು ಯಾವುದೆಂಬುದನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಹಾಗೆಯೇ

ಯಾವುದು ಅಧರ್ಮವೆಂಬುದನ್ನೂ ನಿಶ್ಚಯಮಾಡಿಹೇಳಲು ಸಾಧ್ಯ ವಾಗುವುದಿಲ್ಲ. ನನ್ನೊಡನೆ ಈ ವಿಧವಾದ ವಾದದಲ್ಲಿ ತೊಡಗಿ ಸೆಣೆಸಾಟಕ್ಕೆ ನಿಂತು ಪಿತೃಲೋಕಕ್ಕೆ ಹೋಗಬೇಡ. ಕೌರವರೊಡನೆ ಪರಾಕ್ರಮದಿಂದ ಯುದ್ಧಮಾಡು."

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

ಮಹಾರಾಜ! ಪಾರ್ಷತನು ಇವೇ ಮುಂತಾದ ಕ್ರೂರವಾದ ಮತ್ತು ಕಠಿನವಾದ ಮಾತುಗಳನ್ನು ಶ್ರೀಮಂತನಾದ ಸಾತ್ಯಕಿಗೆ ಹೇಳಿದನು. ಪಾರ್ಷತನ ಆ ಮಾತುಗಳನ್ನು ಕೇಳಿ ಸಾತ್ಯಕಿಗೆ ಕೋಪದಿಂದ ಮೈನಡುಗಿತು. ಕಣ್ಣುಗಳು ಕೆಂಪಾದುವು. ಧನುಸ್ಸನ್ನು ರಥದಲ್ಲಿರಿಸಿ ಗದೆಯೊಂದನ್ನು ಕೈಗೆತ್ತಿ ಕೊಂಡು ಸರ್ಪವು ಬುಸುಗುಟ್ಟುವಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಧೃಷ್ಟದ್ಯುಮ್ನನ ಎದುರಿಗೆ ಹೋಗಿ ಅತ್ಯಂತಕೋಪದಿಂದ ಹೇಳಿದನು:

**ನ ತ್ವಾಂ ವಕ್ಷ್ಯಾಮಿ ಪರುಷಂ ಹನಿಷ್ಯೇ ತ್ವಾಂ ವಧಕ್ಷಮಮ್ ॥**

"ಇನ್ನು ನಿನ್ನೊಡನೆ ಕಠೋರವಾದ ಮಾತುಗಳನ್ನಾಡುವುದಿಲ್ಲ. ವಧಾರ್ಹನಾದ ನಿನ್ನನ್ನು ಈಗಲೇ ಕೊಂದುಬಿಡುತ್ತೇನೆ."

ಮಹಾರಾಜ! ಹೀಗೆ ಹೇಳುತ್ತಾ ಅಂತಕೋಪಮನಾದ ಪಾರ್ಷತನ ಮೇಲೆ ಒಡನೆಯೇ ಬೀಳುವುದರಲ್ಲಿದ್ದ, ಮಹಾಬಲನಾದ, ಮಹಾಕೋಪಿಷ್ಠ ನಾದ, ಯಮಸದೃಶನಾಗಿ ಕಾಣುತ್ತಿದ್ದ ಸಾತ್ಯಕಿಯನ್ನು ಮಹಾಬಲನಾದ ಭೀಮಸೇನನು ವಾಸುದೇವನಿಂದ ಪ್ರಚೋದಿತನಾಗಿ ಒಡನೆಯೇ ರಥ ದಿಂದ ಕೆಳಕ್ಕೆ ನೆಗೆದು ಎರಡು ತೋಳುಗಳಿಂದಲೂ ಭದ್ರವಾಗಿ ಹಿಡಿದು ಮುಂದೆ ಹೋಗದಂತೆ ತಡೆದನು. ಬಲಿಷ್ಠನಾದ ಭೀಮಸೇನನು, ಕೋಪಾ ವಿಷ್ಟನಾಗಿ ಮುಂದೆ-ಮುಂದೆ ಹೋಗುತ್ತಿದ್ದ, ಭದ್ರವಾಗಿ ಹಿಡಿದಿದ್ದರೂ ಬಿಡಿಸಿಕೊಂಡು ಮುಂದೆ ಹೋಗಲು ಚಡಪಡಿಸುತ್ತಿದ್ದ ಬಲಿಷ್ಠನಾದ ಸಾತ್ಯಕಿಯನ್ನು ಭದ್ರವಾಗಿ ಹಿಡಿದುಕೊಂಡು ಬಲಾತ್ಕಾರಪೂರ್ವಕವಾಗಿ ಹಿಂದಕ್ಕೆ ಸೆಳೆಯುತ್ತಿದ್ದರೂ ಅವನ ಜೊತೆಯಲ್ಲಿಯೇ ಹೋಗುತ್ತಿದ್ದನು. ಎರಡು ಪಾದಗಳನ್ನೂ ಭದ್ರವಾಗಿ ಊರಿಕೊಂಡು ನಿಂತಿದ್ದ ಭೀಮಸೇನನು ಬಲಿಷ್ಠರಲ್ಲಿ ಶ್ರೇಷ್ಠನಾದ ಸಾತ್ಯಕಿಯನ್ನು ಆರನೆಯಹೆಜ್ಜೆಯನ್ನಿಡುವುದ

ರೊಳಗಾಗಿ ತಡೆದು ನಿಲ್ಲಿಸಿದನು. ಅಷ್ಟರಲ್ಲಿ ಸಹದೇವನು ತನ್ನ ರಥದಿಂದಿಳಿದು ಮಹಾಬಲಿಷ್ಠನಾದ ಭೀಮನಿಂದ ಹಿಡಿಯಲ್ಪಟ್ಟಿದ್ದ ಸಾತ್ಯಕಿಯನ್ನು ಕುರಿತು ಮಧುರವಾದ ಈ ಮಾತುಗಳನ್ನು ಹೇಳಿದನು:

ಅಸ್ಮಾಕಂ ಪುರುಷವ್ಯಾಘ್ರ ಮಿತ್ರಮನ್ಯನ್ನ ವಿದ್ಯತೇ।
ಪರಮನ್ಧಕವೃಷ್ಣಿಭ್ಯಃ ಪಾಞ್ಚಾಲೇಭ್ಯಶ್ಚ ಮಾರಿಷ ॥೫೩॥

ತಥೈವಾನ್ಧಕವೃಷ್ಣೀನಾಂ ತಥೈವ ಚ ವಿಶೇಷತಃ ।
ಕೃಷ್ಣಸ್ಯ ಚ ತಥಾಸ್ಮತ್ತೋ ಮಿತ್ರಮನ್ಯನ್ನ ವಿದ್ಯತೇ ॥೫೪॥

"ಪುರುಷಸಿಂಹನೇ! ನಮಗೆ ಅಂಧಕ-ವೃಷ್ಣಿಗಳನ್ನೂ ಪಾಂಚಾಲರನ್ನೂ ಬಿಟ್ಟು ಬೇರೆ ಯಾರೂ ಮಿತ್ರರಿರುವುದಿಲ್ಲ. ಅದೇ ರೀತಿಯಲ್ಲಿ ಅಂಧಕ-ವೃಷ್ಣಿಗಳಿಗೂ ವಿಶೇಷವಾಗಿ ಶ್ರೀಕೃಷ್ಣನಿಗೂ ನಮ್ಮನ್ನು ಬಿಟ್ಟರೆ ಬೇರೆ ಮಿತ್ರರೇ ಇಲ್ಲ. ನೀವು ನಮಗೂ ನಾವು ನಿಮಗೂ ಪರಸ್ಪರಮಿತ್ರರಾಗಿದ್ದೇವೆ.

ಪಞ್ಚಾಲಾನಾಂ ಚ ವಾರ್ಷ್ಣೇಯ
ಸಮುದ್ರಾನ್ತಾಂ ವಿಚಿನ್ವತಾಮ್ ।
ನಾನ್ಯದಸ್ತಿ ಪರಂ ಮಿತ್ರಂ
ಯಥಾ ಪಾಣ್ಡವವೃಷ್ಣಯಃ ॥೫೫॥

ಪಾಂಚಾಲರಿಗೂ ಸಹ–ಅವರು ಸಮುದ್ರಪರ್ಯಂತವಾಗಿ ಹುಡುಕಿದರೂ ಪಾಂಡವ-ವೃಷ್ಣಿಗಳಿಗಿಂತಲೂ ಉತ್ತಮರಾದ ಮಿತ್ರರು ಯಾರೂ ಇರುವುದಿಲ್ಲ.

ಸ ಭವಾನೀದೃಶಂ ಮಿತ್ರಂ ಮನ್ಯತೇ ಚ ಯಥಾ ಭವಾನ್।
ಭವನ್ತಶ್ಚ ಯಥಾಸ್ಮಾಕಂ ಭವತಾಂ ಚ ತಥಾ ವಯಮ್ ॥೫೬॥

ಸಾತ್ಯಕಿಯೇ! ನೀನು ನಮ್ಮನ್ನು ಎಂತಹ ಮಿತ್ರರೆಂದು ಭಾವಿಸಿರುವೆಯೋ ನಾವೂ ಸಹ ನಿನ್ನನ್ನು ಅಂತಹ ಮಿತ್ರನೆಂದೇ ಭಾವಿಸಿರುತ್ತೇವೆ. ನೀವು ನಮಗೆ ಹೇಗೋ ನಾವೂ ಸಹ ನಿಮಗೆ ಹಾಗೆಯೇ ಇದ್ದೇವೆ.

ಸ ಏವಂ ಸರ್ವಧರ್ಮಜ್ಞ ಮಿತ್ರಧರ್ಮಮನುಸ್ಮರನ್ ।
ನಿಯಚ್ಛ ಮನ್ಯುಂ ಪಾಞ್ಚಾಲ್ಯಾತ್ಪ್ರಶಾಮ್ಯ ಶಿನಿಪುಙ್ಗವ ॥೫೭॥

**ಪಾರ್ಷತಸ್ಯ ಕ್ಷಮ ತ್ವಂ ವೈ ಕ್ಷಮತಾಂ ಪಾರ್ಷತಶ್ಚ ತೇ ।**
**ವಯಂ ಕ್ಷಮಯಿತಾರಶ್ಚ ಕಿಮನ್ಯತ್ರ ಶಮಾದ್ಭವೇತ್ ॥೫೮॥**

ಸರ್ವಧರ್ಮಗಳನ್ನೂ ತಿಳಿದಿರುವ ಶಿನಿಪುಂಗವನೇ! ನಾನು ಹೇಳಿದ ರೀತಿಯಲ್ಲಿ ಮಿತ್ರಧರ್ಮವನ್ನು ಸ್ಮರಣೆಗೆ ತಂದುಕೊಂಡು ಪಾಂಚಾಲ್ಯನ ಮೇಲಿರುವ ಕೋಪವನ್ನು ತಡೆಹಿಡಿದು ಶಾಂತನಾಗು. ಧೃಷ್ಟದ್ಯುಮ್ನನನ್ನು ನೀನೂ ಕ್ಷಮಿಸಿಬಿಡು. ಪಾರ್ಷತನೂ ನಿನ್ನನ್ನು ಕ್ಷಮಿಸಿಬಿಡಲಿ. ನಾವು ನಿಮ್ಮಿಬ್ಬರನ್ನೂ ಕ್ಷಮಾವಂತರನ್ನಾಗಿ ಮಾಡಲು ಆಸಕ್ತರಾಗಿದ್ದೇವೆ. ಕ್ಷಮಾಗುಣಕ್ಕಿಂತಲೂ ಅಧಿಕವಾದುದು ಮತ್ತಾವುದಿದೆ? ಶೈನೇಯ!”

ಮಹಾರಾಜ! ಸಹದೇವನು ಹೀಗೆ ಮಾತುಗಳಿಂದ ಸಾತ್ಯಕಿಯನ್ನು ಶಾಂತಗೊಳಿಸುತ್ತಿರಲಾಗಿ, ಪಾಂಚಾಲರಾಜನ ಮಗನಾದ ಧೃಷ್ಟದ್ಯುಮ್ನನು ಗಹ-ಗಹಿಸಿ ನಗುತ್ತಾ ಭೀಮಸೇನನಿಗೆ ಹೇಳಿದನು:

**ಮುಞ್ಚ ಮುಞ್ಚ ಶಿನೇಃ ಪೌತ್ರಂ ಭೀಮ ಯುದ್ಧಮದಾನ್ವಿತಮ್ ।**
**ಆಸಾದಯತು ಮಾಮೇಷ ಧರಾಧರಮಿವಾನಿಲಃ ॥೬೦॥**

**ಯಾವದಸ್ಯ ಶಿತೈರ್ಬಾಣೈಃ ಸಂರಮ್ಭಂ ವಿನಯಾಮ್ಯಹಮ್ ।**
**ಯುದ್ಧಶ್ರದ್ಧಾಂ ಚ ಕೌನ್ತೇಯ ಜೀವಿತಂ ಚಾಸ್ಯ ಸಂಯುಗೇ ॥೬೧॥**

“ಭೀಮಸೇನ! ಯುದ್ಧಮದದಿಂದ ಕೊಬ್ಬಿರುವ ಈ ಸಾತ್ಯಕಿಯನ್ನು ಬಿಟ್ಟುಬಿಡು. ಇವನು ನನ್ನ ಬಳಿಗೆ ಬರಲಿ. ಚಂಡಮಾರುತವು ಪರ್ವತವನ್ನು ಎದುರಿಸುವಂತೆ ಇವನು ನನ್ನನ್ನು ಎದುರಿಸಲಿ. ಈಗಲೇ ನಾನು ನಿಶಿತವಾದ ಬಾಣಗಳಿಂದ ಯಾದವನ ಕೋಪವನ್ನು ಅಡಗಿಸುತ್ತೇನೆ. ಯುದ್ಧಶ್ರದ್ಧೆಯನ್ನೂ ಹೋಗಲಾಡಿಸುತ್ತೇನೆ. ಕಡೆಗೆ ನಾನಿವನನ್ನು ಜೀವದಿಂದಲೂ ಉಳಿಸುವುದಿಲ್ಲ.

**ಕಿಂ ನು ಶಕ್ಯಂ ಮಯಾ ಕರ್ತುಂ ಕಾರ್ಯಂ ಯದಿದಮುದ್ಯತಮ್ ।**
**ಸುಮಹತ್ಪಾಣ್ಡುಪುತ್ರಾಣಾಮಾಯಾನ್ತ್ಯೇತೇ ಹಿ ಕೌರವಾಃ ॥೬೨॥**

ಆದರೆ ನಾನು ಈ ಸಮಯದಲ್ಲಿ ಏನುತಾನೇ ಮಾಡಬಲ್ಲೆನು? ಪಾಂಡವರು ಎದುರಿಸಬೇಕಾಗಿರುವ ಮತ್ತೊಂದು ದೊಡ್ಡಪ್ರಸಂಗವು

ಸಿದ್ಧವಾಗುತ್ತಿದೆ. ಕೌರವರು ಈಗಾಗಲೇ ನಮ್ಮೊಡನೆ ಯುದ್ಧಕ್ಕಾಗಿ ಬರುತ್ತಿದ್ದಾರೆ. (ಸಾತ್ಯಕಿಯೊಡನೆ ಹೇಗೆ ಯುದ್ಧಕ್ಕೆ ತೊಡಗಲಿ?)

**ಅಥವಾ ಫಾಲ್ಗುನಃ ಸರ್ವಾನ್ವಾರಯಿಷ್ಯತಿ ಸಂಯುಗೇ ।**
**ಅಹಮಪ್ಯಸ್ಯ ಮೂರ್ಧಾನಂ ಪಾತಯಿಷ್ಯಾಮಿ ಸಾಯಕೈಃ ॥೬೩॥**
**ಮನ್ಯತೇ ಛಿನ್ನಬಾಹುಂ ಮಾಂ ಭೂರಿಶ್ರವಸಮಾಹವೇ ।**
**ಉತ್ಸೃಜ್ಯೈನಮಹಂ ಚೈನಮೇಷ ವಾ ಮಾಂ ಹನಿಷ್ಯತಿ ॥೬೪॥**

ಅಥವಾ ಬರುತ್ತಿರುವ ಎಲ್ಲ ಕೌರವಸೈನಿಕರನ್ನೂ ಅರ್ಜುನನೊಬ್ಬನೇ ತಡೆಯುತ್ತಾನೆ. ಅಷ್ಟರೊಳಗಾಗಿ ನಾನು ಬಾಣಗಳಿಂದ ಇವನ ತಲೆಯನ್ನು ನೆಲಕ್ಕೆ ಬೀಳಿಸುತ್ತೇನೆ. ಈ ಮೂಢನು ನನ್ನನ್ನೂ ಭುಜವನ್ನು ಕಳೆದುಕೊಂಡ ಭೂರಿಶ್ರವಸನೆಂದೇ ಭಾವಿಸಿದಂತಿದೆ. ಇವನಿಗೆ ಪಾಠಕಲಿಸಲೇಬೇಕು. ಆದುದರಿಂದ, ಭೀಮಸೇನ! ಇವನನ್ನು ಬಿಟ್ಟು ಬಿಡು. ನಾನಾದರೂ ಇವನನ್ನು ಸಂಹರಿಸುವೆನು. ಅಥವಾ ಇವನಾದರೂ ನನ್ನನ್ನು ಸಂಹರಿಸುವನು."

ಮಹಾರಾಜ! ಭೀಮಸೇನನ ಬಾಹುಪಾಶದಿಂದ ಬಂಧಿತನಾಗಿದ್ದ ಬಲಿಷ್ಠನಾದ ಸಾತ್ಯಕಿಯು ಧೃಷ್ಟದ್ಯುಮ್ನನ ಮಾತನ್ನು ಕೇಳಿ ಸರ್ಪದಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಭೀಮಸೇನನ ಬಾಹುಬಂಧನದಿಂದ ಬಿಡಿಸಿಕೊಳ್ಳಲು ಚಡಪಡಿಸುತ್ತಿದ್ದನು. ಎರಡು ಗೂಳಿಗಳೋಪಾದಿಯಲ್ಲಿ ಗರ್ಜನೆಮಾಡುತ್ತಿದ್ದ ಮಹಾಬಲಿಷ್ಠರಾಗಿದ್ದ, ಬಲಿಷ್ಠವಾದ ತೋಳುಗಳನ್ನು ಹೊಂದಿದ್ದ ಧೃಷ್ಟದ್ಯುಮ್ನ-ಸಾತ್ಯಕಿಯರನ್ನು ಘರ್ಷಣೆಗೆ ಅವಕಾಶವಾಗದಂತೆ ಬಹಳ ಶೀಘ್ರವಾಗಿ ಶ್ರೀಕೃಷ್ಣ-ಧರ್ಮರಾಜರು ಬಹಳ ಪ್ರಯತ್ನದಿಂದ ತಡೆದು ನಿಲ್ಲಿಸಿದರು. ಮಹಾಧನುಷ್ಮಂತರಾದ ಮತ್ತು ಕೋಪದಿಂದ ರಕ್ತಾಕ್ಷರಾಗಿದ್ದ ಧೃಷ್ಟದ್ಯುಮ್ನ-ಸಾತ್ಯಕಿಯರ ಸಂಘರ್ಷವನ್ನು ತಡೆದಬಳಿಕ ಕ್ಷತ್ರಿಯ ಶ್ರೇಷ್ಠರೆಲ್ಲರೂ ಶತ್ರುಗಳೊಡನೆ ಯುದ್ಧಮಾಡುವ ಇಚ್ಛೆಯಿಂದ ರಣಾಂಗಣಕ್ಕೆ ತೆರಳಿದರು."

ಗ೯೮ನೆಯ ಅಧ್ಯಾಯವು ಮುಗಿಯಿತು.

## ಅಶ್ವತ್ಥಾಮನು ನಾರಾಯಣಾಸ್ತ್ರವನ್ನು ಪ್ರಯೋಗಿಸಿದುದು: ಯುಧಿಷ್ಠಿರನ ಖೇದ: ಶ್ರೀಕೃಷ್ಣನು ಉಪಾಯದಿಂದ ಸೈನಿಕರನ್ನು ರಕ್ಷಿಸಿದುದು: ಭೀಮಸೇನನ ವೀರೋದ್ಗಾರ: ಮಹಾಸ್ತ್ರವು ಭೀಮನನ್ನು ಆಕ್ರಮಿಸಿದುದು

ಸಂಜಯನು ನಾರಾಯಣಾಸ್ತ್ರದ ಮಹತ್ತ್ವವನ್ನು ವರ್ಣಿಸುತ್ತಾ ಹೇಳುತ್ತಾನೆ:

"ಮಹಾರಾಜ! ಪ್ರಳಯಕಾಲದಲ್ಲಿ ಕಾಲನಿಂದಲೇ ಪ್ರೇರಿತನಾದ ಯಮಧರ್ಮನು ಸರ್ವಪ್ರಾಣಿಗಳನ್ನೂ ಸಂಹರಿಸುವಂತೆ–ಅಶ್ವತ್ಥಾಮನು ನಾರಾಯಣಾಸ್ತ್ರದ ಮೂಲಕವಾಗಿ ಶತ್ರುಗಳನ್ನು ಸಂಹರಿಸಲು ಉಪಕ್ರಮಿಸಿದನು. ಆ ಸಮಯದಲ್ಲಿ ಅಶ್ವತ್ಥಾಮನು ಭಲ್ಲಗಳಿಂದ ಶತ್ರುಗಳನ್ನು ಸಂಹರಿಸಿ ದೊಡ್ಡದಾದ ಒಂದು ದೇಹಪರ್ವತವನ್ನೇ ಸೃಷ್ಟಿಸಿದನು. ರಥದ ಧ್ವಜಗಳೇ ಆ ದೇಹಪರ್ವತದ ವೃಕ್ಷಗಳಂತಿದ್ದುವು. ಶಸ್ತ್ರಗಳು ಶಿಖರಗಳಂತಿದ್ದುವು. ಸತ್ತು ಹೋಗಿದ್ದ ಆನೆಗಳು ಪರ್ವತದ ಬಂಡೆಗಳಂತಿದ್ದುವು. ಹಲವು ಕುದುರೆಗಳಿಂದ ತುಂಬಿದ್ದ ಆ ಪರ್ವತವು ಕುದುರೆಗಳ ಮುಖವನ್ನು ಧರಿಸಿದ ಕಿಂಪುರುಷರಿಂದ ನಿಬಿಡವಾಗಿರುವಂತೆ ಕಾಣುತ್ತಿದ್ದಿತು. ಅಲ್ಲಿ ಬಿದ್ದಿದ್ದ ಸಾವಿರಾರು ಧನುಸ್ಸುಗಳು ಪರ್ವತದ ಮೇಲೆ ಹಬ್ಬಿರುವ ಲತೆಗಳಂತಿದ್ದುವು. ಮಾಂಸಭಕ್ಷಿಗಳಾದ ಪಕ್ಷಿಗಳಿಂದ ಅದು ನಿನಾದಿತವಾಗಿದ್ದಿತು. ದೇಹಪರ್ವತದಲ್ಲಿ ಓಡಾಡುತ್ತಿದ್ದ ಭೂತಗಳ ಸಮುದಾಯವು ಯಕ್ಷರ ಗುಂಪಿನಂತೆ ಕಾಣುತ್ತಿದ್ದಿತು. ಪುರುಷರ್ಷಭನಾದ ಅಶ್ವತ್ಥಾಮನು ಅತ್ಯಂತ ಗಟ್ಟಿಯಾಗಿ ಗರ್ಜನೆಮಾಡುತ್ತಾ ನಿನ್ನ ಮಗನಿಗೆ ತನ್ನ ಪ್ರತಿಜ್ಞೆಯನ್ನು ಪುನಃ ಹೇಳಿದನು:

**ಯಸ್ಮಾದ್ಯುದ್ಧ್ಯನ್ತಮಾಚಾರ್ಯಂ ಧರ್ಮಕಞ್ಚುಕಮಾಸ್ಥಿತಃ ।**
**ಮುಞ್ಚ ಶಸ್ತ್ರಮಿತಿ ಪ್ರಾಹ ಕುನ್ತೀಪುತ್ರೋ ಯುಧಿಷ್ಠಿರಃ ॥೫॥**
**ತಸ್ಮಾತ್ಸಮ್ಪಶ್ಯತಸ್ತಸ್ಯ ದ್ರಾವಯಿಷ್ಯಾಮಿ ವಾಹಿನೀಮ್ ।**
**ವಿದ್ರಾವ್ಯ ಸರ್ವಾನ್ಹನ್ತಾಸ್ಮಿ ಜಾಲ್ಮಂ ಪಾಞ್ಚಾಲ್ಯಮೇವ ತು ॥೬॥**

"ಧರ್ಮದ ಅಂಗಿಯನ್ನು ಧರಿಸಿರುವ (ತೋರಿಕೆಗೆ ಮಾತ್ರ ಧರ್ಮಿಷ್ಠನಾಗಿರುವ ) ಕುಂತಿಯ ಮಗನಾದ ಯುಧಿಷ್ಠಿರನು ನನ್ನ

ತಂದೆಯವರಾದ ದ್ರೋಣಾಚಾರ್ಯರನ್ನು 'ಶಸ್ತ್ರವನ್ನು ತ್ಯಜಿಸಿರಿ'– ಎಂದು ಹೇಳಿದ ಕಾರಣಕ್ಕಾಗಿ ಯುಧಿಷ್ಠಿರನು ನೋಡುತ್ತಿರುವಂತೆಯೇ ಅವನ ಸಂಪೂರ್ಣಸೈನ್ಯವನ್ನೂ ಪಲಾಯನಮಾಡಿಸುತ್ತೇನೆ. ಅವರೆಲ್ಲರನ್ನೂ ಓಡಿಸಿದ ನಂತರ ನೀಚನಾದ ಧೃಷ್ಟದ್ಯುಮ್ನನನ್ನು ಸಂಹರಿಸುತ್ತೇನೆ.

**ಸರ್ವಾನೇತಾನ್ನಿಹನಿಷ್ಯಾಮಿ ಯದಿ ಯೋತ್ಸ್ಯನ್ತಿ ಮಾಂ ರಣೇ ।**
**ಸತ್ಯಂ ತೇ ಪ್ರತಿಜಾನಾಮಿ ಪರಿವರ್ತಯ ವಾಹಿನೀಮ್ ॥೭॥**

ಪಾಂಡವರು ನನ್ನೊಡನೆ ಯುದ್ಧವನ್ನು ಮುಂದುವರಿಸಿದ್ದೇ ಆದರೆ ಅವರೆಲ್ಲರನ್ನೂ ಸಂಹರಿಸುತ್ತೇನೆ. ಈ ಮಾತನ್ನು ನಾನು ಸತ್ಯದಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ. ಸೈನ್ಯವನ್ನು ರಣರಂಗಕ್ಕೆ ಹಿಂದಿರುಗಿಸು, ದುರ್ಯೋಧನ!"

ಕೌರವೇಶ್ವರ! ಅಶ್ವತ್ಥಾಮನ ಮಾತನ್ನು ಕೇಳಿದೊಡನೆಯೇ ದುರ್ಯೋಧನನು ದ್ರೋಣರ ವಧೆಯಿಂದ ಪ್ರಾಪ್ತವಾಗಿದ್ದ ಮಹಾಭಯವನ್ನು ಸಂಪೂರ್ಣವಾಗಿ ತೊರೆದು ದೊಡ್ಡದಾದ ಸಿಂಹನಾದದೊಡನೆ ತನ್ನ ಸೈನಿಕರನ್ನು ರಣರಂಗಕ್ಕೆ ಹಿಂದಿರುಗಿಸಿದನು.

ಅನಂತರ ತುಂಬಿದ ಎರಡು ಸಮುದ್ರಗಳ ಸಂಘರ್ಷವಾಗುವಂತೆ– ಕೌರವ-ಪಾಂಡವಸೈನಿಕರಲ್ಲಿ ಅತಿತೀವ್ರವಾದ ಸಂಘರ್ಷವು ಪುನಃ ಪ್ರಾರಂಭ ವಾಯಿತು. ದ್ರೋಣಪುತ್ರನಿಂದ ಆಶ್ವಾಸನೆಯನ್ನು ಪಡೆದಿದ್ದ ಕೌರವರು ರೋಷಾವೇಶದಿಂದ ಸುಸ್ಥಿರವಾಗಿ ನಿಂತಿದ್ದರು. ದ್ರೋಣರ ನಿಧನದಿಂದಾಗಿ ಪಾಂಡು-ಪಾಂಚಾಲಸೈನಿಕರು ಉದ್ಧತರಾಗಿದ್ದರು. ಪರಮಹೃಷ್ಟರಾಗಿದ್ದ, ತಮಗೇ ಜಯವು ಲಭಿಸುವುದೆಂಬ ಆಶಯವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡಿದ್ದ, ಪರಮಕ್ರುದ್ಧರಾಗಿದ್ದ ಆ ಉಭಯಸೈನಿಕರ ಮಧ್ಯದಲ್ಲಿ ಮಹಾವೇಗವು ಪ್ರಕಟವಾಯಿತು. (ಮಹಾವೇಗದಿಂದ ಎರಡೂ ಪಕ್ಷಗಳ ಸೈನಿಕರೂ ಕದನವನ್ನಾರಂಭಿಸಿದರು.) ಒಂದು ಪರ್ವತವು ಮತ್ತೊಂದು ಪರ್ವತದೊಡನೆ ಸಂಧಿಸುವಂತೆ–ಒಂದು ಸಾಗರವು ಮತ್ತೊಂದು ಸಾಗರದೊಡನೆ ಸಂಘರ್ಷಿಸುವಂತೆ–ಕುರು-ಪಾಂಡವರು ಪರಸ್ಪರವಾಗಿ ಬಡಿದಾಡತೊಡಗಿದರು. ಅನಂತರ ಸಂಹೃಷ್ಟರಾದ ಕುರು-ಪಾಂಡವಸೈನಿಕರು

ಸಾವಿರಾರು ಶಂಖಗಳನ್ನೂದಿದರು; ಹತ್ತುಸಾವಿರ ಭೇರಿಗಳನ್ನು ಬಾರಿಸಿದರು. ಮಂದರಪರ್ವತವನ್ನೇ ಕಡೆಗೋಲನ್ನಾಗಿ ಮಾಡಿಕೊಂಡು ಸಮುದ್ರವನ್ನು ಮಥಿಸುತ್ತಿದ್ದಾಗ ಯಾವ ರೀತಿಯಲ್ಲಿ ಅದ್ಭುತವಾದ, ಅನುಪಮವಾದ ಮಹಾಶಬ್ದವು ಕೇಳಿಬರುತ್ತಿದ್ದಿತೋ–ಅದೇ ರೀತಿಯಲ್ಲಿ ಕುರುಸೈನಿಕರು ಮಾಡುತ್ತಿದ್ದ ಶಂಖ-ಭೇರಿಗಳ ನಿನಾದವು ಅದ್ಭುತವೂ ಅನುಪಮವೂ ಆಗಿದ್ದಿತು. ಅನಂತರ ಅಶ್ವತ್ಥಾಮನು ಪಾಂಡು-ಪಾಂಚಾಲಸೈನಿಕರನ್ನು ಲಕ್ಷೀಕರಿಸಿ ನಾರಾಯಣಾಸ್ತ್ರವನ್ನು ಪ್ರಕಟಿಸಿದನು.

**ಪ್ರಾದುರಾಸಂಸ್ತತೋ ಬಾಣಾ ದೀಪ್ತಾಗ್ರಾಃ ಖೇ ಸಹಸ್ರಶಃ।**
**ಪಾಣ್ಡವಾನ್ಕ್ಷಪಯಿಷ್ಯನ್ತೋ ದೀಪ್ತಾಸ್ಯಾಃ ಪನ್ನಗಾ ಇವ ॥೧೬॥**

ಒಡನೆಯೇ ದೀಪ್ತವಾದ ಮುಖಗಳಿಂದ ಕೂಡಿದ್ದ ಹಾವುಗಳಂತೆ ಪ್ರದೀಪ್ತವಾದ ಅಗ್ರಭಾಗಗಳಿಂದ ಕೂಡಿದ್ದ ಸಾವಿರಾರು ಬಾಣಗಳು ಪಾಂಡವರ ಸೈನ್ಯವನ್ನು ವಿನಾಶಗೊಳಿಸುವ ಸಲುವಾಗಿ ಆಕಾಶದಲ್ಲಿ ಕಾಣಿಸಿಕೊಂಡುವು.

**ತೇ ದಿಶಃ ಖಂ ಚ ಸೈನ್ಯಂ ಚ ಸಮಾವೃಣ್ವನ್ಮಹಾಹವೇ ।**
**ಮುಹೂರ್ತಾದ್ಭಾಸ್ಕರಸ್ಯೇವ ಲೋಕೇ ರಾಜನ್ಗಭಸ್ತಯಃ ॥೧೭॥**

ಸೂರ್ಯನ ಕಿರಣಗಳು ಬಹಳ ಬೇಗ ಲೋಕದಲ್ಲೆಲ್ಲಾ ಹರಡಿಕೊಳ್ಳುವಂತೆ–ಆ ಬಾಣಗಳು ಮುಹೂರ್ತಮಾತ್ರದಲ್ಲಿ ಆಕಾಶವನ್ನೂ, ದಿಕ್ಕುಗಳನ್ನೂ, ಸೈನ್ಯವನ್ನೂ ಆವರಿಸಿಕೊಂಡುವು.

**ತಥಾಪರೇ ದ್ಯೋತಮಾನಾ ಜ್ಯೋತೀಂಷೀವಾಮಲಾಮ್ಬರೇ।**
**ಪ್ರಾದುರಾಸನ್ಮಹಾರಾಜ ಕಾರ್ಷ್ಣಾಯಸಮಯಾ ಗುಡಾಃ ॥೧೮॥**

ಶುದ್ಧಾಕಾಶದಲ್ಲಿ ಪ್ರಕಾಶಮಾನವಾಗಿ ಕಾಣುವ ನಕ್ಷತ್ರಗಳೋಪಾದಿಯಲ್ಲಿ ಉಕ್ಕಿನಿಂದ ಮಾಡಿದ ಪ್ರಕಾಶಮಾನವಾದ ಚೆಂಡುಗಳು ಪ್ರಾದುರ್ಭವಿಸಿದುವು.

**ಚತುಶ್ಚಕ್ರಾ ದ್ವಿಚಕ್ರಾಶ್ಚ ಶತಘ್ನ್ಯೋ ಬಹುಲಾ ಗದಾಃ ।**
**ಚಕ್ರಾಣಿ ಚ ಕ್ಷುರಾನ್ತಾನಿ ಮಣ್ಡಲಾನೀವ ಭಾಸ್ವತಃ ॥೧೯॥**

ನಾಲ್ಕು ಚಕ್ರಗಳಿರುವ ಮತ್ತು ಎರಡು ಚಕ್ರಗಳಿರುವ ಶತಘ್ನಿಗಳೂ, ಅನೇಕಪ್ರಕಾರವಾದ ಗದೆಗಳೂ, ಸೂರ್ಯನ ಮಂಡಲದೋಪಾದಿಯಲ್ಲಿದ್ದ, ಕತ್ತಿಯನ್ನೇ ತುದಿಯಲ್ಲಿ ಹೊಂದಿದ್ದ ಸಾವಿರಾರು ಚಕ್ರಗಳೂ ಪ್ರಾದುರ್ಭವಿಸಿದುವು.



**ಶಸ್ತ್ರಾಕೃತಿಭಿರಾಕೀರ್ಣಮತೀವ ಪುರುಷರ್ಷಭ।**
**ದೃಷ್ಟ್ವಾಂತರಿಕ್ಷಮಾವಿಗ್ನಾಃ ಪಾಣ್ಡುಪಾಞ್ಚಾಲಸೃಞ್ಜಯಾಃ ॥೨೦॥**

ಅನೇಕವಿಧವಾದ ಶಸ್ತ್ರಗಳ ಆಕೃತಿಗಳಿಂದ ಅತಿಯಾಗಿ ವ್ಯಾಪ್ತವಾಗಿದ್ದ ಅಂತರಿಕ್ಷವನ್ನು ನೋಡಿ ಪಾಂಡು-ಪಾಂಚಾಲ-ಸೃಂಜಯಸೈನಿಕರು ಉದ್ವಿಗ್ನರಾದರು.

**ಯಥಾ ಯಥಾ ಹ್ಯಯುಧ್ಯನ್ತ ಪಾಣ್ಡವಾನಾಂ ಮಹಾರಥಾಃ ।**
**ತಥಾ ತಥಾ ತದಸ್ತ್ರಂ ವೈ ವ್ಯವರ್ಧತ ಜನಾಧಿಪ ॥೨೧॥**

ಪಾಂಡವರ ಕಡೆಯ ಮಹಾರಥರು ಎಷ್ಟೆಷ್ಟು ಪರಾಕ್ರಮದಿಂದ ಹೇಗೆ-ಹೇಗೆ ಯುದ್ಧಮಾಡುತ್ತಿದ್ದರೋ ಹಾಗೆ-ಹಾಗೆಯೇ ಅಶ್ವತ್ಥಾಮನು ಪ್ರಯೋಗಿಸಿದ ನಾರಾಯಣಾಸ್ತ್ರವೂ ವೃದ್ಧಿಸುತ್ತಿದ್ದಿತು. ಪಾಂಡವರ ಕಡೆಯ ಮಹಾಯೋಧರ ಪರಾಕ್ರಮವು ಹೆಚ್ಚಿದಂತೆಲ್ಲಾ ಅಸ್ತ್ರದ ಪರಾಕ್ರಮವೂ ಹೆಚ್ಚುತ್ತಿದ್ದಿತು.

**ವಧ್ಯಮಾನಾಸ್ತದಾಸ್ತ್ರೇಣ ತೇನ ನಾರಾಯಣೇನ ವೈ ।**
**ದಹ್ಯಮಾನಾನಲೇನೇವ ಸರ್ವತೋಽಭ್ಯರ್ದಿತಾ ರಣೇ ॥೨೨॥**

ಆ ನಾರಾಯಣಾಸ್ತ್ರದಿಂದ ಪ್ರಹೃತರಾದ ಸೈನಿಕರು ಬೆಂಕಿಯಿಂದ ಸುಡಲ್ಪಟ್ಟವರಂತೆ ಸರ್ವಾಂಗಗಳಲ್ಲಿಯೂ ಪೀಡಿಸಲ್ಪಡುತ್ತಿದ್ದರು.

**ಯಥಾ ಹಿ ಶಿಶಿರಾಪಾಯೇ ದಹೇತ್ಕಕ್ಷಂ ಹುತಾಶನಃ ।**
**ತಥಾ ತದಸ್ತ್ರಂ ಪಾಣ್ಡೂನಾಂ ದದಾಹ ಧ್ವಜಿನೀಂ ಪ್ರಭೋ ॥೨೩॥**

ಯಾವರೀತಿಯಲ್ಲಿ ಶಿಶಿರರ್ತುವು ಕಳೆದನಂತರ ಬೇಸಿಗೆಯಲ್ಲಿ ಬೆಂಕಿಯು ಅರಣ್ಯದಲ್ಲಿರುವ ಪೊದೆಯನ್ನು ಸುಟ್ಟು ಭಸ್ಮಮಾಡುವುದೋ– ಅದೇ ರೀತಿಯಲ್ಲಿ ಆ ಮಹಾಸ್ತ್ರವು ಪಾಂಡವರ ಸೈನ್ಯವನ್ನು ಸುಟ್ಟುಬಿಟ್ಟಿತು.

ಸರ್ವತ್ರ ತುಂಬಿಹೋಗಿದ್ದ ಅಸ್ತ್ರದಿಂದ ಸೈನ್ಯವು ಕ್ಷಣ-ಕ್ಷಣಕ್ಕೂ ಕ್ಷೀಣಿಸುತ್ತಿರಲಾಗಿ, ಧರ್ಮಪುತ್ರನಾದ ಯುಧಿಷ್ಠಿರನು ಬಹಳವಾಗಿ ಭಯ ಪಟ್ಟನು. ತನ್ನ ಸೈನ್ಯವು ಬುದ್ಧಿಗೆಟ್ಟು ಓಡಿಹೋಗುತ್ತಿರುವುದನ್ನೂ ಅರ್ಜುನನು ತಟಸ್ಥಭಾವದಿಂದಿರುವುದನ್ನೂ ನೋಡಿ ಧರ್ಮಪುತ್ರನು ಹೇಳಿದನು:

**ಧೃಷ್ಟದ್ಯುಮ್ನ ಪಲಾಯಸ್ವ ಸಹ ಪಾಞ್ಚಾಲಸೇನಯಾ।**
**ಸಾತ್ಯಕೇ ತ್ವಂ ಚ ಗಚ್ಛಸ್ವ ವೃಷ್ಣ್ಯನ್ಧಕವೃತೋ ಗೃಹಾನ್ ॥೨೪॥**

“ಧೃಷ್ಟದ್ಯುಮ್ನನೇ! ಪಾಂಚಾಲಸೈನ್ಯದೊಡನೆ ನೀನು ಪಲಾಯನ

ಮಾಡು. ಸಾತ್ಯಕಿಯೇ! ನೀನೂ ಸಹ ವೃಷ್ಣ್ಯಂಧಕಯೋಧರೊಡನೆ ನಿನ್ನ ನಿವಾಸಕ್ಕೆ ಹೊರಟುಹೋಗು.

**ವಾಸುದೇವೋಽಪಿ ಧರ್ಮಾತ್ಮಾ ಕರಿಷ್ಯತ್ಯಾತ್ಮನಃ ಕ್ಷಮಮ್ ।**
**ಶ್ರೇಯೋ ಹ್ಯುಪದಿಶತ್ಯೇಷ ಲೋಕಸ್ಯ ಕಿಮುತಾತ್ಮನಃ ॥೨೭॥**

ಧರ್ಮಾತ್ಮನಾದ ಭಗವಾನ್ ಶ್ರೀಕೃಷ್ಣನು ಸೂಕ್ತವೆನಿಸಿದ ರೀತಿಯಲ್ಲಿ ತನ್ನ ರಕ್ಷಣೆಯನ್ನು ಮಾಡಿಕೊಳ್ಳುತ್ತಾನೆ. ಮಹಾತ್ಮನಾದ ಶ್ರೀಕೃಷ್ಣನು ವಿಶ್ವಕ್ಕೇ ಶ್ರೇಯಸ್ಸಾಗುವ ರೀತಿಯಲ್ಲಿ ಉಪದೇಶಮಾಡುವಾಗ ತನ್ನ ಶ್ರೇಯಸ್ಸನ್ನು ತಾನೇ ಮಾಡಿಕೊಳ್ಳಲಾರನೇ?

**ಸಂಗ್ರಾಮಸ್ತು ನ ಕರ್ತವ್ಯಃ ಸರ್ವಸೈನ್ಯಾನ್ಬ್ರವೀಮಿ ವಃ ।**
**ಅಹಂ ಹಿ ಸಹ ಸೋದರ್ಯೈಃ ಪ್ರವೇಕ್ಷ್ಯೇ ಹವ್ಯವಾಹನಮ್ ॥೨೮॥**

ನಾನು ಸರ್ವಸೈನಿಕರನ್ನೂ ಉದ್ದೇಶಿಸಿ ಹೇಳುತ್ತಿದ್ದೇನೆ. ಇನ್ನು ಮುಂದೆ ಯುದ್ಧಮಾಡಬೇಡಿರಿ. ನಾನಾದರೋ ನನ್ನ ಅನುಜರೊಡನೆ ಅಗ್ನಿಪ್ರವೇಶಮಾಡುತ್ತೇನೆ.

**ಭೀಷ್ಮದ್ರೋಣಾರ್ಣವಂ ತೀರ್ತ್ವಾ ಸಂಗ್ರಾಮೇ ಭೀರುದುಸ್ತರೇ ।**
**ವಿಮಜ್ಜಿಷ್ಯಾಮಿ ಸಲಿಲೇ ಸಗಣೋ ದ್ರೌಣಿಗೋಷ್ಪದೇ ॥೨೭॥**

ಯುದ್ಧದಲ್ಲಿ ಹೇಡಿಗಳಿಂದ ದಾಟಲಸಾಧ್ಯವಾಗಿದ್ದ ಭೀಷ್ಮ-ದ್ರೋಣರೆಂಬ ಮಹಾಸಮುದ್ರವನ್ನು ದಾಟಿದ ನಾನೀಗ ಅಶ್ವತ್ಥಾಮನೆಂಬ ಹಸುವಿನ ಗೊರಸಿನ (ಗೊರಸಿನಿಂದುಂಟಾದ ಹಳ್ಳದ) ನೀರಿನಲ್ಲಿ ಪರಿವಾರಸಹಿತನಾಗಿ ಮುಳುಗಿಹೋಗುತ್ತಿದ್ದೇನೆ.

**ಕಾಮಃ ಸಮ್ಪದ್ಯತಾಮಸ್ಯ ಬೀಭತ್ಸೋರಾಶು ಮಾಂ ಪ್ರತಿ ।**
**ಕಲ್ಯಾಣವೃತ್ತಿರಾಚಾರ್ಯೋ ಮಯಾ ಯುಧಿ ನಿಪಾತಿತಃ ॥೩೦॥**

ಅರ್ಜುನನಿಗೆ ನನ್ನ ವಿಷಯದಲ್ಲಿ ಯಾವ ಆಶಯವಿರುವುದೋ ಅದು ಈಗಲೇ ಆಗಿಹೋಗಲಿ. ಸದಾಚಾರಸಂಪನ್ನರಾದ ಆಚಾರ್ಯರನ್ನು ನಾನೇ ಸಂಹರಿಸಿದ್ದೇನೆ.

**ಯೇನ ಬಾಲಃ ಸ ಸೌಭದ್ರೋ ಯುದ್ಧಾನಾಮವಿಶಾರದಃ।**
**ಸಮರ್ಥೈರ್ಬಹುಭಿಃ ಕ್ರೂರೈರ್ಘಾತಿತೋ ನಾಭಿಪಾಲಿತಃ ॥೩೧॥**

ಯುದ್ಧಕುಶಲನಲ್ಲದ ಸುಭದ್ರಾತನಯನಾದ ಅಭಿಮನ್ಯುವು ಸಮರ್ಥರಾದ ಅನೇಕ ಕ್ರೂರಯೋಧರಿಂದ ಕೊಲ್ಲಲ್ಪಟ್ಟನು. ಅಂತಹ ಸಮಯದಲ್ಲಿ ದ್ರೋಣರು ಅವನ ರಕ್ಷಣೆಯನ್ನು ಮಾಡಲಿಲ್ಲ. (ಅವನನ್ನು ಸಂಹರಿಸಲು ಯೋಜನೆಯನ್ನು ಸಿದ್ಧಗೊಳಿಸಿಕೊಟ್ಟರು.) ಅಂತಹ ಸದಾಚಾರಸಂಪನ್ನರಾದ ಆಚಾರ್ಯರನ್ನು ನಾನು ಸಂಹರಿಸಿದ್ದೇನೆ.

**ಯೇನಾವಿಬ್ರುವತಾ ಪ್ರಶ್ನಂ ತಥಾ ಕೃಷ್ಣಾ ಸಭಾಂ ಗತಾ ।**
**ಉಪೇಕ್ಷಿತಾ ಸಪುತ್ರೇಣ ದಾಸಭಾವಂ ನಿಯಚ್ಛತೀ ॥೩೨॥**

ನಮ್ಮ ದಾಸಭಾವವನ್ನು ತೊಲಗಿಸಲು ಪ್ರಯತ್ನಿಸುತ್ತಾ ಸಭೆಯೊಳಗೆ ಬಂದ ಕೃಷ್ಣೆಯು ಪ್ರಶ್ನೆಗಳನ್ನು ಕೇಳಿದಳು. ಅವಳ ಪ್ರಶ್ನೆಗೆ ಉತ್ತರಿಸಲು ಅಶ್ವತ್ಥಾಮನೊಡನಿದ್ದ ದ್ರೋಣರು ಉಪೇಕ್ಷಿಸಿದರು. (ಧರ್ಮದ ಸಂಬಂಧ ವಾಗಿ ಕೇಳಿದ ದ್ರೌಪದಿಯ ಪ್ರಶ್ನೆಗೆ ಆಚಾರ್ಯರು ಉತ್ತರಿಸುವುದು ಉಚಿತವಾಗಿದ್ದಿತು. ಹಾಗೆ ಮಾಡದೇ ಮೌನಧರಿಸಿ ಕುಳಿತಿದ್ದರು.) ಅಂತಹ ಕಲ್ಯಾಣವೃತ್ತರಾದ ಆಚಾರ್ಯರನ್ನು ನಾನೇ ಸಂಹರಿಸಿದೆನು.

**ಜಿಘಾಂಸುರ್ಧಾರ್ತರಾಷ್ಟ್ರಶ್ಚ ಶ್ರಾನ್ತೇಶ್ವಶ್ವೇಷು ಫಾಲ್ಗುನಮ್ ।**
**ಕವಚೇನ ತಥಾ ಗುಪ್ತೋ ರಕ್ಷಾರ್ಥೇ ಸೈನ್ಧವಸ್ಯ ಚ ॥೩೩॥**

ದುರ್ಯೋಧನನು ಅರ್ಜುನನನ್ನು ಸಂಹರಿಸಬೇಕೆಂಬ ಇಚ್ಛೆ ಯಿಂದಿದ್ದನು. ಆ ಸಮಯಕ್ಕೆ ಸರಿಯಾಗಿ ಅರ್ಜುನನ ಕುದುರೆಗಳೂ ಬಳಲಿದ್ದುವು. ಅಂತಹ ಸಂದರ್ಭದಲ್ಲಿ ದ್ರೋಣರು ದುರ್ಯೋಧನನ ರಕ್ಷಣಾರ್ಥವಾಗಿಯೂ ತನ್ಮೂಲಕವಾಗಿ ಸೈಂಧವನ ರಕ್ಷಣಾರ್ಥವಾಗಿಯೂ ಅಮೋಘವಾದ ಶಿವಕವಚವನ್ನು ದುರ್ಯೋಧನನಿಗೆ ತೊಡಿಸಿದರು. (ಇಂತಹ ಕಲ್ಯಾಣಗುಣಸಂಪನ್ನರಾದ ಆಚಾರ್ಯರನ್ನು ನಾನು ಸಂಹರಿಸಿ ಅವರ ಪರಮಶಿಷ್ಯನಾದ ಅರ್ಜುನನಿಗೆ ಮಹಾಪರಾಧವನ್ನೇ ಮಾಡಿದ್ದೇನೆ.)

**ಯೇನ ಬ್ರಹ್ಮಾಸ್ತ್ರವಿದುಷಾ ಪಞ್ಚಾಲಾಃ ಸತ್ಯಜಿನ್ಮುಖಾಃ ।**
**ಕುರ್ವಾಣಾ ಮಜ್ಜಯೇ ಯತ್ನಂ ಸಮೂಲಾ ವಿನಿಪಾತಿತಾಃ ॥೩೪॥**

ನನಗೆ ವಿಜಯವನ್ನು ಗಳಿಸಿಕೊಡಲು ಸತತವಾಗಿ ಪ್ರಯತ್ನಿಸುತ್ತಿದ್ದ ಸತ್ಯಜಿತನೇ ಮೊದಲಾದ ಪಾಂಚಾಲರನ್ನು ಬ್ರಹ್ಮಾಸ್ತ್ರವಿದರಾದ ಆಚಾರ್ಯರು ನಿಃಶೇಷವಾಗಿ ಧ್ವಂಸಮಾಡಿದರು. (ಇಂತಹವರನ್ನು ಸಂಹರಿಸಿದುದೂ ಮಹಾಪರಾಧವೇ ಸರಿ.)

**ಯೇನ ಪ್ರವ್ರಾಜ್ಯಮಾನಾಶ್ಚ ರಾಜ್ಯಾದ್ವಯಮಧರ್ಮತಃ।**
**ನಿವಾರ್ಯಮಾಣೇನಾಸ್ಮಾಭಿಃ ಅನುಗನ್ತುಂ ತದೇಷಿತಾಃ ॥೩೫॥**
**(ನಿವಾರ್ಯಮಾಣಾ ನು ವಯಂ ನಾನುಯಾತಾಸ್ತದೈಷಿಣಃ॥)**

ಕೌರವರು ನಮ್ಮನ್ನು ಅಧರ್ಮದಿಂದ ರಾಜ್ಯಭ್ರಷ್ಟರನ್ನಾಗಿ ಮಾಡಿದರು. ಆ ಸಮಯದಲ್ಲಿ ನಮ್ಮವರಾದ ವಿದುರಾದಿಗಳು ದ್ರೋಣರಿಗೆ ನಮ್ಮನ್ನು ಅರಣ್ಯಕ್ಕೆ ಕಳುಹಿಸದಂತೆ ಮಾಡಬೇಕೆಂದು ಸಲಹೆಮಾಡಿದರು. ಆದರೆ ದ್ರೋಣರು ಅರಣ್ಯಕ್ಕೆ ಹೋಗಲು ಅನುಮತಿಯನ್ನು ನೀಡಿದರೇ ಹೊರತು ನಮ್ಮನ್ನು ಅರಣ್ಯಕ್ಕೆ ಹೋಗದಂತೆ ಮಾಡಲು ದುರ್ಯೋಧನನಿಗೆ ಯಾವ ಸಲಹೆಯನ್ನೂ ನೀಡಲಿಲ್ಲ. (ಈ ವಿವರಣೆಯನ್ನು ವ್ಯಾಖ್ಯಾನಕಾರರ ವಿವರಣೆಯನ್ನನುಸರಿಸಿ ಕೊಡಲಾಗಿದೆ. ಈ ಶ್ಲೋಕದ ಉತ್ತರಾರ್ಧವು ಅತ್ಯಂತಕ್ಲಿಷ್ಟವಾಗಿದೆ. ಇದರಲ್ಲಿ ಪಾಠಾಂತರವೂ ಇದೆ. ಅದನ್ನೂ ಕಂಸದಲ್ಲಿ ಕೊಟ್ಟಿದ್ದೇವೆ. "ನಾವೇನೋ ದ್ರೋಣರಿಂದ ತಡೆಯಲ್ಪಟ್ಟೆವು. ಆದರೆ ಅವರ ಕಡೆಯವರು ಅವರ ಮಾತಿನಂತೆ ನಡೆದುಕೊಳ್ಳಲಿಲ್ಲ."–ಎಂದು ಇದಕ್ಕೆ ಅರ್ಥಮಾಡಬಹುದಾಗಿದೆ. ವ್ಯಾಖ್ಯಾನಕಾರರು ಈ ಪಾಠವನ್ನು ಅನುಸರಿಸಿಲ್ಲ. ಅವರ ವ್ಯಾಖ್ಯೆಯು ಹೀಗಿದೆ. ಅಸ್ಮಾಭಿಃ=ಅಸ್ಮದೀಯೈಃ ವಿದುರಾದಿಭಿಃ ನಿವಾರ್ಯಮಾಣೇನ = ನಿಷೇಧ್ಯಮಾನೇನಾಪಿ ತದ್ವನಮನುಗನ್ತುಂ =ಪ್ರವೇಷ್ಟುಂ ಏಷಿತಾಃ ನ ತು ಪ್ರತಿಷಿದ್ಧಾ ಇತ್ಯರ್ಥಃ)

**ಯೋಽಸಾವತ್ಯನ್ತಮಸ್ಮಾಸು ಕುರ್ವಾಣಃ ಸೌಹೃದಂ ಪರಮ್।**
**ಹತಸ್ತದರ್ಥೇ ಮರಣಂ ಗಮಿಷ್ಯಾಮಿ ಸಬಾನ್ಧವಃ ॥೩೬॥**

ಈ ರೀತಿಯಲ್ಲಿ ಯಾರು ನಮ್ಮ ವಿಷಯದಲ್ಲಿ ಅತಿಶಯವಾದ ಸೌಹಾರ್ದಭಾವದಿಂದಿದ್ದರೋ ಅಂತಹ ಆಚಾರ್ಯರನ್ನು ನಾನು ಸಂಹಾರ ಮಾಡಿದ್ದೇನೆ. ಆದುದರಿಂದ (ಆಚಾರ್ಯರನ್ನು ಸಂಹಾರಮಾಡಿದುದರ ಕಾರಣದಿಂದಾಗಿ) ಬಂಧುಗಳ ಸಮೇತನಾಗಿ ನಾನು ಮರಣಹೊಂದುತ್ತೇನೆ."

ಈ ರೀತಿ ಅರ್ಜುನನ ತಾಟಸ್ಥ್ಯಭಾವವನ್ನು ಕಂಡು ದುಃಖಿತನಾದ ಯುಧಿಷ್ಠಿರನು ತನ್ನ ಸಂಕಟವನ್ನು ತೋಡಿಕೊಳ್ಳುತ್ತಿರಲಾಗಿ, ಶ್ರೀಕೃಷ್ಣನು ಅತ್ಯಂತ ತ್ವರೆಯಿಂದ ತನ್ನೆರಡು ಕೈಗಳನ್ನೂ ಮೇಲೆತ್ತಿ ಅಳ್ಳಾಡಿಸುತ್ತಾ (ಯುದ್ಧವನ್ನು ನಿಲ್ಲಿಸುವಂತೆ ಕೈಯಳ್ಳಾಡಿಸುವುದರ ಮೂಲಕವಾಗಿ ಸೈನಿಕರಿಗೆ ಸೂಚನೆನೀಡುತ್ತಾ) ಈ ಮಾತನ್ನು ಹೇಳಿದನು:

**ಶೀಘ್ರಂ ನ್ಯಸ್ಯತ ಶಸ್ತ್ರಾಣಿ ವಾಹೇಭ್ಯಶ್ಚಾವರೋಹತ ।**
**ಏಷ ಯೋಗೋತ್ರ ವಿಹಿತಃ ಪ್ರತಿಷೇಧೇ ಮಹಾತ್ಮನಾ ॥೩೭॥**

"ಯೋಧರೇ! ಶೀಘ್ರವಾಗಿ ನಿಮ್ಮ ಶಸ್ತ್ರಗಳನ್ನು ಕೆಳಗಿಡಿರಿ. ನಿಮ್ಮ ವಾಹನಗಳಿಂದ ಕೆಳಗಿಳಿಯಿರಿ. ಈ ಮಹಾಸ್ತ್ರದ ನಿವಾರಣೋಪಾಯವನ್ನು ಮಹಾತ್ಮನಾದ ನಾರಾಯಣನೇ ವಿಧಿಸಿದ್ದಾನೆ.

**ದ್ವಿಪಾಶ್ವಸ್ಯನ್ದನೇಭ್ಯಶ್ಚ ಕ್ಷಿತಿಂ ಸರ್ವೇಽವರೋಹತ ।**
**ಏವಮೇತನ್ನ ವೋ ಹನ್ಯಾದಸ್ತ್ರಂ ಭೂಮೌ ನಿರಾಯುಧಾನ್ ॥೩೯॥**

ಆನೆ, ಕುದುರೆ ಮತ್ತು ರಥಗಳಿಂದ ಎಲ್ಲರೂ ಕೆಳಗಿಳಿಯಿರಿ. ನೆಲದಮೇಲೆ ನಿಂತಿರುವ ನಿರಾಯುಧರಾದ ಯೋಧರನ್ನು ಈ ಮಹಾಸ್ತ್ರವು ಸಂಹರಿಸುವುದಿಲ್ಲ.

**ಯಥಾ ಯಥಾ ಹಿ ಯುಧ್ಯನ್ತೇ ಯೋಧಾಹ್ಯಸ್ತ್ರಮಿದಂ ಪ್ರತಿ ।**
**ತಥಾ ತಥಾ ಭವನ್ತ್ಯೇತೇ ಕೌರವಾ ಬಲವತ್ತರಾಃ ॥೪೦॥**

ನಮ್ಮ ಯೋಧರು ಯಾವ-ಯಾವ ರೀತಿಯಲ್ಲಿ ಈ ಮಹಾಸ್ತ್ರಕ್ಕೆ ವಿರುದ್ಧವಾಗಿ ಯುದ್ಧಮಾಡುತ್ತಾರೆಯೋ ಹಾಗೆಯೇ ಅವರು ಕ್ಷಯಿಸುತ್ತಾ ಹೋಗುತ್ತಾರೆ. ಇದರಿಂದ ಕೌರವರು ಬಲಿಷ್ಠರಾಗುತ್ತಾರೆ.

**ನಿಕ್ಷೇಪ್ಸ್ಯನ್ತಿ ಚ ಶಸ್ತ್ರಾಣಿ ವಾಹನೇಭ್ಯೋ ಹ್ಯವರುಹ್ಯ ಯೇ ।**
**ತಾನ್ನೈತದಸ್ತ್ರಂ ಸಂಗ್ರಾಮೇ ನಿಹನಿಷ್ಯತಿ ಮಾನವಾನ್ ॥೪೧॥**

ಯಾರು ವಾಹನಗಳಿಂದ ಕೆಳಗಿಳಿದು ಶಸ್ತ್ರಗಳನ್ನು ಭೂಮಿಯ ಮೇಲಿಡುವರೋ–ಅಂತಹ ಮನುಷ್ಯರನ್ನು ಈ ಮಹಾಸ್ತ್ರವು ಸಂಹರಿಸುವುದಿಲ್ಲ.

**ಯೇ ತ್ವೇತತ್ಪ್ರತಿಯೋತ್ಸ್ಯನ್ತಿ ಮನಸಾಪೀಹ ಕೇಚನ ।**
**ನಿಹನಿಷ್ಯತಿ ತಾನ್ಸರ್ವಾನ್ರಸಾತಲಗತಾನಪಿ ॥೪೨॥**

ಈ ಅಸ್ತ್ರದ ವಿರುದ್ಧವಾಗಿ ಪ್ರತ್ಯಕ್ಷವಾಗಿಯೇ ಅಲ್ಲ; ಮನಸ್ಸಿನಿಂದಲಾದರೂ ಯಾರು ಸೆಣೆಸಾಡುತ್ತಾರೆಯೋ-ಅಂತಹವರನ್ನಿದು ರಸಾತಲಕ್ಕೇ ಹೋದರೂ ಬಿಡದೇ ಸಂಹರಿಸುತ್ತದೆ.”

ಮಹಾರಾಜ! ವಾಸುದೇವನ ಮಾತುಗಳನ್ನು ಕೇಳಿ ಪಾಂಡವ ಯೋಧರೆಲ್ಲರೂ ಶಸ್ತ್ರನ್ಯಾಸಮಾಡಲು ಇಚ್ಛಿಸಿದರು. ಶ್ರೀಕೃಷ್ಣನು ಹೇಳಿದಂತೆ ಮನಸ್ಸಿನಿಂದಲೂ ಕೂಡ ಆ ಮಹಾಸ್ತ್ರದೊಡನೆ ಸೆಣೆಸದಿರಲು ನಿಶ್ಚಯಿಸಿದರು. ಶಸ್ತ್ರಾಸ್ತ್ರಗಳನ್ನು ಕೆಳಗಿಡಲು ಇಚ್ಛಿಸಿದ್ದ ಪಾಂಡು-ಪಾಂಚಾಲ ಯೋಧರನ್ನು ನೋಡಿ ಪಾಂಡುಪುತ್ರನಾದ ಭೀಮಸೇನನು ಯೋಧರ ಮನಸ್ಸಿನಲ್ಲಿ ಹರ್ಷೋತ್ಸಾಹಗಳನ್ನು ಹೆಚ್ಚಿಸುವ ಈ ಮಾತುಗಳನ್ನು ಹೇಳಿದನು:

**ನ ಕಥಂಚನ ಶಸ್ತ್ರಾಣಿ ಮೋಕ್ತವ್ಯಾನೀಹ ಕೇನಚಿತ್ ।**
**ಅಹಮಾವಾರಯಿಷ್ಯಾಮಿ ದ್ರೋಣಪುತ್ರಾಸ್ತ್ರಮಾಶುಗೈಃ ॥೪೫॥**

“ಪಾಂಡು-ಪಾಂಚಾಲಯೋಧರೇ! ಯಾವುದೇ ಕಾರಣದಿಂದಲೂ ಯಾರೂ ಶಸ್ತ್ರಾಸ್ತ್ರಗಳನ್ನು ಕೆಳಗಿಡಬಾರದು. ಶೀಘ್ರವಾಗಿ ಹೋಗುವ ಬಾಣಗಳಿಂದ ಅಶ್ವತ್ಥಾಮನ ಮಹಾಸ್ತ್ರವನ್ನು ನಾನು ತಡೆಯುತ್ತೇನೆ.

**ಗದಯಾಪ್ಯನಯಾ ಗುರ್ವ್ಯಾ ಹೇಮವಿಗ್ರಹಯಾ ರಣೇ ।**
**ಕಾಲವತ್ಪ್ರಹರಿಷ್ಯಾಮಿ ದ್ರೌಣೇರಸ್ತ್ರಂ ವಿಶಾತಯನ್ ॥೪೬॥**

ಸುವರ್ಣಮಯವಾದ ಭಾರವಾದ, ಈ ಗದೆಯಿಂದ ದ್ರೌಣಿಯ ಅಸ್ತ್ರವನ್ನು ಭಿನ್ನಗೊಳಿಸಿ ಅಂತಕನೋಪಾದಿಯಲ್ಲಿ ಅವನನ್ನು ಪ್ರಹರಿಸುತ್ತೇನೆ.

**ನ ಹಿ ಮೇ ವಿಕ್ರಮೇ ತುಲ್ಯಃ ಕಶ್ಚಿದಸ್ತಿ ಪುಮಾನಿಹ ।**
**ಯಥೈವ ಸವಿತುಸ್ತುಲ್ಯಂ ಜ್ಯೋತಿರನ್ಯನ್ನ ವಿದ್ಯತೇ ॥೪೭॥**

ಯಾವ ರೀತಿಯಲ್ಲಿ ಸೂರ್ಯಸದೃಶವಾದ ಜ್ಯೋತಿಯು

ಮತ್ತೊಂದಿಲ್ಲವೋ–ಅದೇ ರೀತಿಯಲ್ಲಿ ನನ್ನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವಿರುವ ಮನುಷ್ಯನು ಈ ಪ್ರಪಂಚದಲ್ಲಿಯೇ ಯಾರೂ ಇಲ್ಲ.

**ಪಶ್ಯತೇಮೌ ಹಿ ಮೇ ಬಾಹೂ ನಾಗರಾಜಕರೋಪಮೌ ।**
**ಸಮರ್ಥೌ ಪರ್ವತಸ್ಯಾಪಿ ಶೈಶಿರಸ್ಯ ನಿಪಾತನೇ ॥೪೮॥**

ಗಜರಾಜನ ಸೊಂಡಿಲುಗಳಂತಿರುವ ಈ ನನ್ನ ತೋಳುಗಳನ್ನಾದರೂ ನೋಡಿರಿ. ಇವು ಹಿಮವತ್ಪರ್ವತವನ್ನಾದರೂ ಉರುಳಿಸಲು ಅತ್ಯಂತ ಸಮರ್ಥವಾಗಿವೆ.

**ನಾಗಾಯುತಸಮಪ್ರಾಣೋ ಹ್ಯಹಮೇಕೋ ನರೇಷ್ವಿಹ ।**
**ಶಕ್ರೋ ಯಥಾಪ್ರತಿದ್ವನ್ದ್ವೋ ದಿವಿ ದೇವೇಷು ವಿಶ್ರುತಃ ॥೪೯॥**

ದೇವತೆಗಳಲ್ಲಿ ಇಂದ್ರನು ಎದುರಾಳಿಯಿಲ್ಲದವನೆಂದು ಸ್ವರ್ಗದಲ್ಲಿ ಪ್ರಸಿದ್ಧನಾಗಿರುವಂತೆ–ಈ ಮಾನವಕೋಟಿಯಲ್ಲಿ ಹತ್ತು ಸಾವಿರ ಆನೆಗಳ ಬಲವನ್ನು ಹೊಂದಿರುವ ನಾನೊಬ್ಬನೇ ಅಪ್ರತಿದ್ವಂದ್ವನಾಗಿದ್ದೇನೆ.

**ಅದ್ಯ ಪಶ್ಯತ ಮೇ ವೀರ್ಯಂ ಬಾಹ್ವೋಃ ಪೀನಾಂಸಯೋರ್ಯುಧಿ ।**
**ಜ್ವಲಮಾನಸ್ಯ ದೀಪ್ತಸ್ಯ ದ್ರೌಣೇರಸ್ತ್ರಸ್ಯ ವಾರಣೇ ॥೫೦॥**

ಪ್ರಜ್ವಲಿಸುತ್ತಿರುವ ಮತ್ತು ದೇದೀಪ್ಯಮಾನವಾಗಿ ಪ್ರಕಾಶಿಸುತ್ತಿರುವ ಅಶ್ವತ್ಥಾಮನ ನಾರಾಯಣಮಹಾಸ್ತ್ರದ ಸ್ತಂಭನದಲ್ಲಿ ಉಬ್ಬಿರುವ ಹೆಗಲುಗಳಿಂದ ಕೂಡಿರುವ ಈ ನನ್ನ ತೋಳುಗಳ ಶಕ್ತಿಯು ಎಷ್ಟಿದೆ–ಎಂಬುದನ್ನಾದರೂ ಈಗಲೇ ನೋಡಿರಿ.

**ಯದಿ ನಾರಾಯಣಾಸ್ತ್ರಸ್ಯ ಪ್ರತಿಯೋದ್ಧಾ ನ ವಿದ್ಯತೇ ।**
**ಅದ್ಯೈತತ್ಪ್ರತಿಯೋತ್ಸ್ಯಾಮಿ ಪಶ್ಯತ್ಸು ಕುರುಪಾಣ್ಡುಷು ॥೫೧॥**

ನಾರಾಯಣಾಸ್ತ್ರಕ್ಕೆ ಪ್ರತಿಯಾಗಿ ನಿಂತು ಯುದ್ಧಮಾಡುವವನೇ ಇಲ್ಲವೆಂದಾದರೆ ನಾನೀಗಲೇ ಕುರು-ಪಾಂಡವರು ನೋಡುತ್ತಿರುವಾಗಲೇ ಅಸ್ತ್ರಕ್ಕೆದುರಾಗಿ ನಿಂತು ಯುದ್ಧಮಾಡುತ್ತೇನೆ.

**ಅರ್ಜುನಾರ್ಜುನ ಬೀಭತ್ಸೋ ನ ನ್ಯಸ್ಯಂ ಗಾಣ್ಡಿವಂ ತ್ವಯಾ ।**
**ಶಶಾಙ್ಕಸ್ಯೇವ ಯೋ ಪಙ್ಕೋ ನೈರ್ಮಲ್ಯಂ ಪಾತಯಿಷ್ಯತಿ ॥೫೨॥**

ಅರ್ಜುನ! ಅರ್ಜುನ! ಬೀಭತ್ಸೋ! (ಶ್ರೀಕೃಷ್ಣನ ಸಲಹೆಯಂತೆ ನೀನು) ಖಂಡಿತವಾಗಿಯೂ ಗಾಂಡೀವಧನುಸ್ಸನ್ನು ಕೆಳಗಿಡಬಾರದು. ಒಂದು ವೇಳೆ ನೀನೇನಾದರೂ ಮಹಾಸ್ತ್ರಕ್ಕೆ ಭಯಪಟ್ಟು ಶಸ್ತ್ರನ್ಯಾಸಮಾಡಿದ್ದೇ ಆದರೆ ಕಳಂಕವನ್ನು ಹೊಂದಿರುವ ಚಂದ್ರನಂತೆ–ನೀನೂ ಕಳಂಕಿತನಾಗುವೆ. ನಿನ್ನ ನೈರ್ಮಲ್ಯವನ್ನು (ವಿಶುದ್ಧಕೀರ್ತಿಯನ್ನು) ಇದು ಹಾಳುಮಾಡಿಬಿಡುತ್ತದೆ."

ಭೀಮಸೇನನ ಈ ಮಾತಿಗೆ ಅರ್ಜುನನು ಉತ್ತರಿಸಿದನು:

**ಭೀಮ ನಾರಾಯಣಾಸ್ತ್ರೇ ಮೇ ಗೋಷು ಚ ಬ್ರಾಹ್ಮಣೇಷು ಚ ।**
**ಏತೇಷು ಗಾಣ್ಡಿವಂ ನ್ಯಸ್ಯಮೇತದ್ಧಿ ವ್ರತಮುತ್ತಮಮ್ ॥೫೩॥**

"ಭೀಮ! ನಾನು ಗಾಂಡೀವವನ್ನು ಕೆಳಗಿಡುವುದು ಭಯದ ಕಾರಣದಿಂದಲ್ಲ. ನಾರಾಯಣಾಸ್ತ್ರವು ಎದುರಾಗಿ ಬಂದಾಗ, ಗೋ-ಬ್ರಾಹ್ಮಣರ ವಿಷಯದಲ್ಲಿ ಗಾಂಡೀವಧನುಸ್ಸನ್ನು ಕೆಳಗಿಡಬೇಕೆಂಬುದು ನನ್ನ ಉತ್ತಮವಾದ ವ್ರತಗಳಲ್ಲಿ ಒಂದಾಗಿದೆ."

ಮಹಾರಾಜ! ಅರ್ಜುನನು ಹೀಗೆ ಹೇಳಲಾಗಿ, ಭೀಮಸೇನನು ಮೇಘದಂತೆ ಧ್ವನಿಮಾಡುತ್ತಿರುವ, ಸೂರ್ಯನ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ರಥದಲ್ಲಿ ಕುಳಿತು ಅರಿಂದಮನಾದ ಅಶ್ವತ್ಥಾಮನಿಗೆ ಎದುರಾಗಿ ಹೋದನು. ಹಸ್ತಲಾಘವವನ್ನು ಹೊಂದಿದ್ದನಾದುದರಿಂದ ಅತ್ಯಂತ ಶೀಘ್ರವಾಗಿಯೇ ತನ್ನ ಪರಾಕ್ರಮವನ್ನು ತೋರಿಸಲು ಸಮರ್ಥನಾಗಿದ್ದ ಭೀಮಸೇನನು ನಿಮೇಷಮಾತ್ರದಲ್ಲಿ ಅಶ್ವತ್ಥಾಮನನ್ನು ಸಮೀಪಿಸಿ ಬಾಣಗಳ ಸಮೂಹದಿಂದ ಅವನನ್ನು ಮುಚ್ಚಿದನು. ಅನಂತರ ಅಶ್ವತ್ಥಾಮನು ಭೀಮಸೇನನನ್ನು ನೋಡಿ ಗಹ-ಗಹಿಸಿನಗುತ್ತಾ, ಉದಾಸೀನನಾಗಿ ಅವನೊಡನೆ ಒಂದೆರಡು ಮಾತುಗಳನ್ನಾಡಿ, ನಾರಾಯಣ ಮಹಾಸ್ತ್ರ ಮಹಾಮಂತ್ರದಿಂದ ಅಭಿಮಂತ್ರಿತವಾಗಿದ್ದ, ಪ್ರದೀಪ್ತವಾದ ಅಗ್ರಭಾಗಗಳಿಂದ ಕೂಡಿದ್ದ ಬಾಣಗಳಿಂದ ಭೀಮಸೇನನನ್ನು ಮುಚ್ಚಿಬಿಟ್ಟನು. ಸರ್ಪಗಳಂತೆ ಪ್ರದೀಪ್ತವಾದ ಮೂತಿಗಳನ್ನು ಹೊಂದಿದ್ದ, ಬೆಂಕಿಯನ್ನೇ

ಕಾರುತ್ತಿದ್ದ ಬಾಣಗಳು ಸುವರ್ಣಮಯವಾದ ಕಿಡಿಗಳಂತೆ ಭೀಮಸೇನನನ್ನು ಆವರಿಸಿಕೊಂಡುವು. ಆ ಸಮಯದಲ್ಲಿ ಭೀಮಸೇನನ ಶರೀರವು– ಸಾಯಂಕಾಲದವೇಳೆಯಲ್ಲಿ ಮಿಣುಕುಹುಳುಗಳಿಂದ ಆಚ್ಛಾದಿತವಾದ ಪರ್ವತದಂತೆಯೇ ಕಾಣುತ್ತಿದ್ದಿತು. ಭೀಮಸೇನನು, ಅಶ್ವತ್ಥಾಮನು ಪ್ರಯೋಗಿಸಿದ ಮಹಾಸ್ತ್ರಕ್ಕೆ ಎದುರಾಗಿ ಬಾಣಪ್ರಯೋಗಮಾಡಲು ಆರಂಭಿಸಿದೊಡನೆಯೇ ಆ ಮಹಾಸ್ತ್ರವು ಗಾಳಿಯ ಸಹಾಯದಿಂದ ಅಗ್ನಿಯು ವರ್ಧಿಸುವಂತೆ– ವರ್ಧಿಸತೊಡಗಿತು. ಭಯಂಕರವಾದ ಶಕ್ತಿಯುಳ್ಳ ಆ ಮಹಾಸ್ತ್ರವು ವರ್ಧಿಸುತ್ತಿರುವುದನ್ನು ನೋಡಿ ಭೀಮಸೇನನೊಬ್ಬನನ್ನು ಬಿಟ್ಟು ಉಳಿದೆಲ್ಲ ಯೋಧರ ಮನಸ್ಸೂ ಭಯದಿಂದ ಆವರಿಸಿತು. ಅನಂತರ ಆ ಯೋಧರೆಲ್ಲರೂ ಶ್ರೀಕೃಷ್ಣನ ಸಲಹೆಯಂತೆ ರಥ-ಗಜಾಶ್ವಗಳಿಂದ ಕೆಳಗಿಳಿದು ತಮ್ಮ ಶಸ್ತ್ರಗಳನ್ನು ನೆಲದಮೇಲಿರಿಸಿದರು.

ಪಾಂಡವಯೋಧರೆಲ್ಲರೂ ವಾಹನಗಳಿಂದಿಳಿದು ಶಸ್ತ್ರನ್ಯಾಸಮಾಡ ಲಾಗಿ, ವಿಪುಲವಾದ (ಅಗಾಧವಾದ) ಮಹಾಸ್ತ್ರದ ಶಕ್ತಿಯು ಭೀಮನೊಬ್ಬನ ತಲೆಯ ಮೇಲೆಯೇ ಬಿದ್ದಿತು. ಮಹಾತೇಜಸ್ಸಿನಿಂದ ಸಂವೃತನಾಗಿದ್ದ ಭೀಮಸೇನನನ್ನು ಎಲ್ಲರೂ ನೋಡಿದರು. ಪ್ರಾಣಿಗಳು ಹಾಹಾಕಾರಮಾಡಿದುವು. ಅದರಲ್ಲಿಯೂ ವಿಶೇಷವಾಗಿ ಪಾಂಡವರು 'ಹಾ ಭೀಮಸೇನ! ಅಯ್ಯೋ ಇನ್ನೇನು ಗತಿ?'–ಎಂದು ಗಟ್ಟಿಯಾಗಿ ಕೂಗಿಕೊಂಡರು."

೧೯೯ನೆಯ ಅಧ್ಯಾಯವು ಮುಗಿಯಿತು.

೨೦೦ನೆಯ ಅಧ್ಯಾಯ ನಾರಾಯಣಾಸ್ತ್ರಮೋಕ್ಷಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಭೀಮಸೇನನನ್ನು ರಥದಿಂದಿಳಿಸಿ ನಾರಾಯಣಾಸ್ತ್ರವನ್ನು ಶಾಂತಗೊಳಿಸಿದುದು: ಪುನಃ ಅದೇ ಅಸ್ತ್ರವನ್ನು ಪ್ರಯೋಗಿಸಲು ಅಶ್ವತ್ಥಾಮನು ತನ್ನ ಅಸಾಮರ್ಥ್ಯವನ್ನು ಹೇಳಿಕೊಂಡುದು: ಸಾತ್ಯಕಿಯೊಡನೆ ನಡೆದ ಯುದ್ಧದಲ್ಲಿ ದುರ್ಯೋಧನನೇ ಮೊದಲಾದ ಆರು ಮಹಾರಥರು ಪಲಾಯನಮಾಡಿದುದು: ಅಶ್ವತ್ಥಾಮನು ಮಾಲವ-ಪೌರವರನ್ನೂ, ಚೇದಿದೇಶದ ಯುವರಾಜನನ್ನೂ ಸಂಹರಿಸಿದುದು: ಭೀಮಾಶ್ವತ್ಥಾಮರ ಘೋರಯುದ್ಧ: ಪಾಂಡವರ ಸೈನ್ಯದ ಪಲಾಯನ

ಸಂಜಯನು ನಾರಾಯಣಾಸ್ತ್ರಪ್ರಯೋಗದ ಪರಿಣಾಮವನ್ನು ಹೇಳುತ್ತಾನೆ:

“ಮಹಾರಾಜ! ಭೀಮಸೇನನು ಮಹಾಸ್ತ್ರದಿಂದ ಹೊರಟ ಸಾವಿರಾರು ಬಾಣಗಳಿಂದ ಸಮಾಕೀರ್ಣನಾಗಿರುವುದನ್ನು ಕಂಡು ಅರ್ಜುನನು ಆ ತೇಜಸ್ಸನ್ನು ಕುಂಠಿತಗೊಳಿಸುವ ಸಲುವಾಗಿ (ಭೀಮಸೇನನ ಮೇಲೆ ಆ ಮಹಾಸ್ತ್ರದ ದುಷ್ಪರಿಣಾಮವನ್ನು ತಡೆಯಲು) ಭೀಮನನ್ನು ವಾರುಣಾಸ್ತ್ರದಿಂದ ಆಚ್ಛಾದಿಸಿದನು. ಅರ್ಜುನನ ಕೈಚಳಕದ ಕಾರಣದಿಂದಲೂ, ನಾರಾಯಣ ಮಹಾಸ್ತ್ರದ ತೇಜಸ್ಸು ಸರ್ವತ್ರ ಹರಡಿದ್ದುದರಿಂದಲೂ ಅರ್ಜುನನು ಬಿಟ್ಟ ವಾರುಣಾಸ್ತ್ರದಿಂದ ಭೀಮನು ಪರಿವೃತನಾಗಿರುವುದನ್ನು ಯಾರೂ ಗಮನಿಸಲಿಲ್ಲ. ಅಶ್ವತ್ಥಾಮನು ಪ್ರಯೋಗಿಸಿದ ನಾರಾಯಣಾಸ್ತ್ರದಿಂದ ಅಶ್ವ-ಸೂತ-ರಥಗಳೊಡನೆ ಪರಿವೃತನಾಗಿದ್ದ ಭೀಮಸೇನನು ಧಗ-ಧಗಿಸುವ ಅಗ್ನಿಯಲ್ಲಿ ಇಡಲ್ಪಟ್ಟ ಮತ್ತೊಂದು ಅಗ್ನಿಯಂತೆಯೇ ಪ್ರಕಾಶಿಸುತ್ತಿದ್ದನು. ಆ ಸಮಯದಲ್ಲಿ ಅವನನ್ನು ನೋಡಲು ಕೂಡ ಇತರರಿಂದ ಸಾಧ್ಯವಾಗುತ್ತಿರಲಿಲ್ಲ. ರಾತ್ರಿಯು ಕಳೆದು ಹೋಗುತ್ತಿರಲಾಗಿ ಗ್ರಹ-ನಕ್ಷತ್ರಗಳು ಅಸ್ತಾಚಲದ ಕಡೆಗೆ ಹೋಗುವಂತೆ-ಅಶ್ವತ್ಥಾಮನು ಪ್ರಯೋಗಿಸಿದ ಮಹಾಸ್ತ್ರದಿಂದ ಹೊರಬರುತ್ತಿದ್ದ ಬಾಣಗಳೆಲ್ಲವೂ ಭೀಮನ ರಥದ ಕಡೆಗೇ ಹೋಗುತ್ತಿದ್ದುವು. ರಥಸ್ಥನಾಗಿದ್ದ ಭೀಮಸೇನ, ಅವನ ಕುದುರೆಗಳು

ಮತ್ತು ಸೂತ ಎಲ್ಲರೂ ಅಶ್ವತ್ಥಾಮನ ಬಾಣಗಳಿಂದ ಪರಿವೃತರಾಗಿ ಪ್ರಜ್ವಲಿಸುವ ಯಜ್ಞೇಶ್ವರನ ಮಧ್ಯಭಾಗದಲ್ಲಿರುವಂತೆಯೇ ಕಾಣುತ್ತಿದ್ದರು. ಯಾವ ರೀತಿಯಲ್ಲಿ ಪ್ರಳಯಕಾಲದಲ್ಲಿ ಬಡಬಾಗ್ನಿಯು ಚರಾಚರಗಳಿಂದ ಯುಕ್ತವಾದ ಸಕಲ ಜಗತ್ತನ್ನೂ ದಹಿಸಿ ಪರಮಾತ್ಮನ ಮುಖದೊಳಗೆ ಸೇರಿಕೊಳ್ಳುತ್ತದೆಯೋ–ಅದೇ ರೀತಿಯಲ್ಲಿ ಅಶ್ವತ್ಥಾಮನು ಪ್ರಯೋಗಿಸಿದ ಮಹಾಸ್ತ್ರವು ಭೀಮಸೇನನೊಬ್ಬನನ್ನೇ ಆವರಿಸಿತು. ಸೂರ್ಯನು (ರಾತ್ರಿಯ ಸಮಯದಲ್ಲಿ) ಅಗ್ನಿಯೊಳಗೆ ಪ್ರವೇಶಿಸುವಂತೆ–ಅಗ್ನಿಯು ಹಗಲಿನಲ್ಲಿ ಸೂರ್ಯನನ್ನು ಪ್ರವೇಶಿಸುವಂತೆ–ಆ ಮಹಾಸ್ತ್ರದ ತೇಜಸ್ಸು ಭೀಮಸೇನನನ್ನು ಪ್ರವೇಶಿಸಿತು. ಆ ಸಮಯದಲ್ಲಿ ಭೀಮಸೇನನು ಎಲ್ಲಿರುವನೆಂಬುದೇ ಯಾರಿಗೂ ತಿಳಿಯುತ್ತಿರಲಿಲ್ಲ.

ಆ ಮಹಾಸ್ತ್ರವು ಭೀಮಸೇನನ ರಥವನ್ನು ಸಂಪೂರ್ಣವಾಗಿ ವ್ಯಾಪಿಸಿಬಿಟ್ಟಿದ್ದಿತು. ತನ್ನನ್ನು ಎದುರಿಸುವವರೇ ಇಲ್ಲದೇ ಇದ್ದುದರಿಂದ ಅಶ್ವತ್ಥಾಮನ ಪ್ರಾಬಲ್ಯವು ಪ್ರತಿಕ್ಷಣದಲ್ಲಿಯೂ ಹೆಚ್ಚುತ್ತಿದ್ದಿತು. ಪಾಂಡವರ ಕಡೆಯ ಎಲ್ಲ ಸೈನಿಕರೂ ಆಯುಧಗಳನ್ನು ಕೆಳಗಿಟ್ಟು ಮುಂದೇನಾಗುವು ದೆಂಬುದನ್ನು ತಿಳಿಯದೇ ಬುದ್ಧಿಗೆಟ್ಟು ನಿಂತಿದ್ದರು. ಯುಧಿಷ್ಠಿರಪುರಸ್ಸರರಾದ ಮಹಾರಥರು ಯುದ್ಧದಿಂದ ಪರಾಙ್ಮುಖರಾಗುತ್ತಿದ್ದರು. ಆ ಎಲ್ಲ ದೃಶ್ಯಗಳನ್ನೂ ನೋಡಿ ಮಹಾದ್ಯುತಿಮಂತರಾದ ಅರ್ಜುನ-ವಾಸುದೇವರು ರಥದಿಂದಿಳಿದು ಬಹಳ ಬೇಗ ಭೀಮಸೇನನ ರಥದ ಕಡೆಗೆ ಧಾವಿಸಿದರು. ಮಹಾಬಲಿಷ್ಠರಾದ ಕೃಷ್ಣಾರ್ಜುನರು ದ್ರೋಣಪುತ್ರನ ಅಸ್ತ್ರಬಲದಿಂದ ಹುಟ್ಟಿದ್ದ ತೇಜಸ್ಸಿನ ರಾಶಿಯೊಳಗೆ ನುಗ್ಗಿ ಮಾಯೆಯಿಂದ ಭೀಮನ ಬಳಿಗೆ ಸಾಗಿದರು. ಕೃಷ್ಣಾರ್ಜುನರು ಅಸ್ತ್ರಗಳನ್ನು ಕೆಳಗಿಟ್ಟಿದ್ದರಿಂದಲೂ, ಅರ್ಜುನನು ವಾರುಣಾಸ್ತ್ರ ವನ್ನು ಪ್ರಯೋಗಿಸಿದ್ದುದರಿಂದಲೂ, ಕೃಷ್ಣಾರ್ಜುನರು ಮಹಾಸತ್ತ್ವವಂತ ರಾಗಿದ್ದುದರಿಂದಲೂ ಅಶ್ವತ್ಥಾಮನು ಬಿಟ್ಟಿದ್ದ ನಾರಾಯಣಮಹಾಸ್ತ್ರವು ಕೃಷ್ಣಾರ್ಜುನರನ್ನು ದಹಿಸಲಿಲ್ಲ. ಅನಂತರ ನರ-ನಾರಾಯಣರು ನಾರಾಯಣಾಸ್ತ್ರದ ಶಾಂತ್ಯರ್ಥವಾಗಿ ಭೀಮಸೇನನನ್ನು ಮತ್ತು ಅವನಲ್ಲಿದ್ದ ಸಕಲಾಯುಧಗಳನ್ನೂ ರಥದ ಮೇಲಿನಿಂದ ಬಲ ಪೂರ್ವಕವಾಗಿ ಕೆಳಕ್ಕೆಳೆದರು. ಹಾಗೆ ರಥದಿಂದ ಕೆಳಕ್ಕೆ ಎಳೆಯಲ್ಪಡು

ತ್ತಿದ್ದರೂ ಭೀಮಸೇನನು ಗಟ್ಟಿಯಾಗಿ ಗರ್ಜನೆಮಾಡುತ್ತಲೇ ಇದ್ದನು. ಅದಕ್ಕೆ ಪ್ರತಿಯಾಗಿ ದ್ರೌಣಿಯ ಸುದುರ್ಜಯವಾದ ಮತ್ತು ಘೋರವಾದ ಮಹಾಸ್ತ್ರವೂ ವರ್ಧಿಸುತ್ತಲೇ ಇದ್ದಿತು. ಅದನ್ನು ಗಮನಿಸಿದ ವಾಸುದೇವನು ಭೀಮನಿಗೆ ಹೇಳಿದನು:



"ಭೀಮಸೇನ! ಇದೇನಿದು? ಯುದ್ಧಮಾಡಬೇಡವೆಂದು ತಡೆಯುತ್ತಿದ್ದರೂ, ಆಯುಧವನ್ನು ಕೆಳಗಿಡುವಂತೆ ಹೇಳುತ್ತಿದ್ದರೂ, ಯುದ್ಧದಿಂದ ನೀನು ವಿಮುಖನಾಗಲೇ ಇಲ್ಲ. ಈ ಸಮಯದಲ್ಲಿ ಯುದ್ಧದಿಂದ ಕೌರವರನ್ನು ಜಯಿಸುವ ಸಾಧ್ಯತೆಯಿದ್ದಿದ್ದರೆ ನಾವೂ ಯುದ್ಧಮಾಡುತ್ತಿದ್ದೆವು. ಈ ರಾಜರೂ ಯುದ್ಧಮಾಡುತ್ತಿದ್ದರು. ಆದರೆ ಈ ಸಮಯದಲ್ಲಿ ಯುದ್ಧಮಾಡಿ ಕೌರವರನ್ನು ಪರಾಜಯಗೊಳಿಸುವ ಸಾಧ್ಯತೆಯಿಲ್ಲ. ಮೊದಲು ನಾವು ನಾರಾಯಣಾಸ್ತ್ರದಿಂದ ತಪ್ಪಿಸಿಕೊಳ್ಳಬೇಕಾಗಿದೆ. ಈ

ಕಾರಣದಿಂದಲೇ ನಿನ್ನ ಕಡೆಯ ಯೋಧರೆಲ್ಲರೂ ಆಯುಧಗಳನ್ನು ಕೆಳಗಿಟ್ಟು ರಥಗಳಿಂದಲೂ ವಾಹನಗಳಿಂದಲೂ ಕೆಳಗಿಳಿದಿರುತ್ತಾರೆ. ಆದುದರಿಂದ ನೀನೂ ಸಹ ಸಾವಕಾಶಮಾಡದೇ ಕೂಡಲೇ ರಥದಿಂದ ಕೆಳಗಿಳಿ."

ಮಹಾರಾಜ! ಶ್ರೀಕೃಷ್ಣನು ಹೀಗೆ ಹೇಳುತ್ತಾ ಸರ್ಪದಂತೆ ನಿಟ್ಟುಸಿರು ಬಿಡುತ್ತಿದ್ದ, ಕೋಪದಿಂದ ಕೆಂಗಣ್ಣನಾಗಿದ್ದ ಭೀಮಸೇನನನ್ನು ರಥದಿಂದಿಳಿಸಿದನು.

**ಯದಾಪಕೃಷ್ಟಃ ಸ ರಥಾನ್ನ್ಯಾಸಿತಶ್ಚಾಯುಧಂ ಭುವಿ ।**
**ತತೋ ನಾರಾಯಣಾಸ್ತ್ರಂ ತತ್ಪ್ರಶಾನ್ತಂ ಶತ್ರುತಾಪನಮ್ ॥೧೯॥**

ಯಾವಾಗ ಭೀಮಸೇನನು ಕೃಷ್ಣಾರ್ಜುನರಿಂದ ರಥದಿಂದ ಕೆಳಕ್ಕೆ ಸೆಳೆಯಲ್ಪಟ್ಟನೋ ಮತ್ತು ಅವರ ಒತ್ತಾಯದಿಂದ ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟನೋ–ಆಗ ಶತ್ರುಗಳಿಗೆ ಮಹಾತಾಪವನ್ನುಂಟುಮಾಡುತ್ತಿದ್ದ ಆ ಮಹಾನಾರಾಯಣಾಸ್ತ್ರವು ಉಪಶಮನಗೊಂಡಿತು.

ಮಹಾರಾಜ! ದುಃಸಹವಾಗಿದ್ದ, ಸುದುರ್ಜಯವಾಗಿದ್ದ ನಾರಾಯಣಾಸ್ತ್ರದ ಮಹಾತೇಜಸ್ಸು ಈ ರೀತಿಯಲ್ಲಿ ಪ್ರಶಾಂತವಾಗಲಾಗಿ, ಎಲ್ಲ ದಿಕ್ಕುಗಳೂ ಮತ್ತು ಉಪದಿಕ್ಕುಗಳೂ ನಿರ್ಮಲವಾದುವು. ಶುಭಕರವಾದ ಮಂದಮಾರುತವು ಬೀಸತೊಡಗಿತು. ಮೃಗ-ಪಕ್ಷಿಗಳು ಪ್ರಸನ್ನವಾದುವು. ವಾಹನಗಳು ಪ್ರಹೃಷ್ಟವಾದುವು. ಮಹಾಘೋರವಾಗಿದ್ದ ನಾರಾಯಣಾಸ್ತ್ರದ ಮಹಾತೇಜಸ್ಸು ಹೊರಟುಹೋಗಲಾಗಿ, ರಾತ್ರಿಯು ಕಳೆದನಂತರ ಉದಯಿಸಿದ ಸೂರ್ಯನು ಪ್ರಕಾಶಿಸುವಂತೆ ಭೀಮಸೇನನು ಪ್ರಕಾಶಿಸಿದನು. ಅಳಿದುಳಿದಿದ್ದ ಪಾಂಡವರ ಸೈನ್ಯವು ಮಹಾಸ್ತ್ರವು ಶಾಂತವಾದುದರಿಂದ ಅತ್ಯಂತ ಸಂತೋಷಗೊಂಡು ನಿನ್ನ ಮಗನನ್ನು ಸಂಹರಿಸುವ ಇಚ್ಛೆಯಿಂದ ಯುದ್ಧಸನ್ನದ್ಧವಾಗಿ ನಿಂತಿತು. ಉಪಾಯಾಂತರದಿಂದ ಮಹಾಸ್ತ್ರವು ಶಾಂತಗೊಳ್ಳಲಾಗಿ, ಪಾಂಡವರ ಸೈನ್ಯವು ಪುನಃ ಸಜ್ಜಾಗಿ ನಿಂತುದನ್ನು ಕಂಡು ದುರ್ಯೋಧನನು ಅಶ್ವತ್ಥಾಮನೊಡನೆ ಹೇಳಿದನು:

**ಅಶ್ವತ್ಥಾಮನ್ಪುನಃ ಶೀಘ್ರಮಸ್ತ್ರಮೇತತ್ಪ್ರಯೋಜಯ ।**
**ಅವಸ್ಥಿತಾ ಹಿ ಪಾಞ್ಚಾಲಾಃ ಪುನರೇತೇ ಜಯೈಷಿಣಃ ॥೨೫॥**

"ದ್ರೋಣಪುತ್ರ! ಈ ಮಹಾನಾರಾಯಣಾಸ್ತ್ರವನ್ನೇ ಪುನಃ ಪ್ರಯೋ

ಗಿಸು. ವಿಜಯದ ಆಸೆಯನ್ನಿಟ್ಟುಕೊಂಡಿರುವ ಈ ಪಾಂಚಾಲರು ಪುನಃ ಯುದ್ಧಸನ್ನದ್ಧರಾಗಿ ನಿಂತಿದ್ದಾರೆ.”

ಅಶ್ವತ್ಥಾಮನು ಹೇಳುತ್ತಾನೆ:

**ನೈತದಾವರ್ತತೇ ರಾಜನ್ನಸ್ತ್ರಂ ದ್ವಿರ್ನೋಪಪದ್ಯತೇ ।**
**ಆವೃತಂ ಹಿ ನಿವರ್ತೇತ ಪ್ರಯೋಕ್ತಾರಂ ನ ಸಂಶಯಃ ॥೨೭॥**

“ದುರ್ಯೋಧನ! ಈ ನಾರಾಯಣಮಹಾಸ್ತ್ರವು ಪ್ರಯೋಕ್ತೃವಿನ ಬಳಿಗೆ ಪುನಃ ಹಿಂದಿರುಗಿ ಬರುವುದಿಲ್ಲ. ಆದುದರಿಂದ ಈ ಮಹಾಸ್ತ್ರವನ್ನು ಎರಡನೆಯ ಬಾರಿಗೆ ಬಿಡಲು ಸಾಧ್ಯವಾಗುವುದಿಲ್ಲ. ಒಂದು ವೇಳೆ ಮಂತ್ರವು ತಿಳಿದಿರುವುದೆಂಬ ಕಾರಣದಿಂದ ಪುನಃ ಆ ಮಹಾಮಂತ್ರದಿಂದ ಅಭಿಮಂತ್ರಿಸಿದ್ದೇ ಆದರೆ–ಅದು ಹಿಂದಕ್ಕೆ ಬಂದು ಪ್ರಯೋಕ್ತೃವನ್ನೇ ಸಂಹರಿಸುತ್ತದೆ. ಇದರಲ್ಲಿ ಸಂಶಯವೇ ಇಲ್ಲ.

**ಏಷಚಾಸ್ತ್ರಪ್ರತೀಘಾತಂ ವಾಸುದೇವಃ ಪ್ರಯುಕ್ತವಾನ್ ।**
**ಅನ್ಯಥಾ ವಿಹಿತಃ ಸಂಖ್ಯೇ ವಧಃ ಶತ್ರೋರ್ಜನಾಧಿಪ ॥೨೮॥**

ದುರ್ಯೋಧನ! ಈ ಮಹಾಸ್ತ್ರದ ನಿವಾರಣೋಪಾಯವನ್ನು ಶ್ರೀಕೃಷ್ಣನೇ ತಿಳಿಸಿ ಅಸ್ತ್ರವು ಶಾಂತವಾಗುವಂತೆ ಮಾಡಿರುವನು. ಶ್ರೀಕೃಷ್ಣನೇನಾದರೂ ಇದರ ನಿವಾರಣೋಪಾಯವನ್ನು ಸೂಚಿಸದಿದ್ದರೆ ಈ ಮಹಾಸ್ತ್ರದಿಂದ ಶತ್ರುಗಳ ಸಂಪೂರ್ಣವಿನಾಶವು ನಡೆದುಹೋಗುತ್ತಿದ್ದಿತು.

**ಪರಾಜಯೋ ವಾ ಮೃತ್ಯುರ್ವಾ ಶ್ರೇಯಾನ್ಮೃತ್ಯುರ್ನ ನಿರ್ಜಯಃ ।**
**ವಿಜಿತಾಶ್ಚಾರಯೋ ಹ್ಯೇತೇ ಶಸ್ತ್ರೋತ್ಸರ್ಗಾನ್ಮೃತೋಪಮಾಃ ॥೨೯॥**

(ಈ ಮಹಾಸ್ತ್ರವು ಶತ್ರುಗಳನ್ನು ಪರಾಜಯಗೊಳಿಸುತ್ತದೆ ಅಥವಾ ಸಂಹರಿಸುತ್ತದೆ.) ವೀರರಿಗೆ ಸಾವು-ಸೋಲು ಇವೆರಡರಲ್ಲಿ ಪರಾಜಯಕ್ಕಿಂತಲೂ ಮರಣವೇ ಶ್ರೇಯಸ್ಕರವಾದುದು. ಆಯುಧಗಳನ್ನು ಕೆಳಗಿಟ್ಟುದರಿಂದ ಈ ನಮ್ಮ ಶತ್ರುಗಳೆಲ್ಲರೂ ನಮ್ಮಿಂದ ಪರಾಜಿತರೇ ಆಗಿದ್ದಾರೆ. ಅವರೀಗ ಬದುಕಿದ್ದರೂ ಪರಾಜಯಗೊಂಡುದರಿಂದ ಮೃತಪ್ರಾಯರೇ ಆಗಿದ್ದಾರೆ.”

**ಆಚಾರ್ಯಪುತ್ರ ಯದ್ಯೇತದ್ದ್ವಿರಸ್ತ್ರಂ ನ ಪ್ರಯುಜ್ಯತೇ ।**
**ಅನ್ಯೈರ್ಗುರುಘ್ನಾ ವಧ್ಯನ್ತಾಮಸ್ತ್ರೈರಸ್ತ್ರವಿದಾಂ ವರ ॥೩೦॥**

"ಆಚಾರ್ಯಪುತ್ರ! ಅಸ್ತ್ರವಿದರಲ್ಲಿ ಶ್ರೇಷ್ಠನಾದವನೇ! ಈ ನಾರಾಯಣಾಸ್ತ್ರವನ್ನು ಎರಡನೆಯಬಾರಿಗೆ ಬಿಡಕೂಡದೆಂಬುದಾದರೆ ನಿನ್ನಲ್ಲಿರುವ ಇನ್ನೂ ಅನೇಕವಿಧವಾದ ಮಹಾಸ್ತ್ರಗಳಿಂದ ಗುರುಘಾತಕರಾದ ಇವರನ್ನು ವಧಿಸು.

**ತ್ವಯಿ ಶಸ್ತ್ರಾಣಿ ದಿವ್ಯಾನಿ ತ್ರ್ಯಮ್ಬಕೇಚಾಮಿತೌಜಸಿ ।**
**ಇಚ್ಛತೋ ನ ಹಿ ತೇ ಮುಚ್ಯೇತ್ಸಂಕ್ರುದ್ಧೋ ಹಿ ಪುರಂದರಃ ॥೩೧॥**

ನಿನ್ನಲ್ಲಿಯೂ ಮತ್ತು ಮಹಾತೇಜಸ್ವಿಯಾದ ಶಂಕರನಲ್ಲಿಯೂ ಸಮಸ್ತವಾದ ದಿವ್ಯಾಸ್ತ್ರಗಳೂ ಇವೆ. ನೀನೇನಾದರೂ ಇಚ್ಛಿಸಿದ್ದೇ ಆದರೆ ಪರಮಕ್ರುದ್ಧನಾದ ಪುರಂದರನೂ ನಿನ್ನಿಂದ ಬಿಡಿಸಿಕೊಂಡು ಹೋಗಲಾರನು."

ಧೃತರಾಷ್ಟ್ರನು ಸಂಜಯನನ್ನು ಇದೇ ವಿಷಯವಾಗಿ ಪ್ರಶ್ನೆಮಾಡುತ್ತಾನೆ:

"ಸಂಜಯ! ಸುಳ್ಳುಸಮಾಚಾರದ ಮೂಲಕವಾಗಿ ದ್ರೋಣರನ್ನು ಸಂಹರಿಸಲಾಗಿ, ದ್ರೌಣಿಯು ಬಿಟ್ಟ ನಾರಾಯಣಾಸ್ತ್ರವೂ ಶಾಂತವಾಗಲಾಗಿ, ದುರ್ಯೋಧನನಿಂದ ಸಂಪ್ರಾರ್ಥಿತನಾದ ದ್ರೌಣಿಯು ಮುಂದೇನು ಮಾಡಿದನು? ರಣರಂಗದಲ್ಲಿ ನಾರಾಯಣಾಸ್ತ್ರದಿಂದ ವಿಮುಕ್ತರಾಗಿ, ಯುದ್ಧಸನ್ನದ್ಧರಾಗಿ ನಿಂತಿದ್ದ ಪಾಂಡವರನ್ನು ನೋಡಿ ಅಶ್ವತ್ಥಾಮನೇನು ಮಾಡಿದನು?–ಈ ವಿಷಯವನ್ನು ನನಗೆ ಸವಿಸ್ತರವಾಗಿ ಹೇಳು."

"ಮಹಾರಾಜ! ಧ್ವಜದಲ್ಲಿ ಸಿಂಹದಬಾಲವನ್ನೇ ಚಿಹ್ನೆಯಾಗಿ ಹೊಂದಿದ್ದ ಅಶ್ವತ್ಥಾಮನು ತಂದೆಯ ಮರಣವನ್ನು ಸ್ಮರಿಸಿಕೊಳ್ಳುತ್ತಾ ಭಯವನ್ನು ಸಂಪೂರ್ಣವಾಗಿ ತೊರೆದು, ಕ್ರೋಧಾಭಿಭೂತನಾಗಿ ಪಾರ್ಷತನೊಡನೆ ಯುದ್ಧಕ್ಕೆ ಧಾವಿಸಿದನು. ಪುರುಷರ್ಷಭನಾದ ಅಶ್ವತ್ಥಾಮನು ಅವನ ಸಮೀಪಕ್ಕೆ ಹೋಗಿ ಮೊದಲು ಕ್ಷುದ್ರಕಗಳೆಂಬ ಹೆಸರಿನ ಇಪ್ಪತ್ತು

ಬಾಣಗಳಿಂದ ಧೃಷ್ಟದ್ಯುಮ್ನನನ್ನು ಪ್ರಹರಿಸಿ, ಪುನಃ ಅತಿಶೀಘ್ರವಾಗಿ ಐದು ಬಾಣಗಳಿಂದಲೂ ಅವನನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಧೃಷ್ಟದ್ಯುಮ್ನನೂ ಪ್ರಜ್ವಲಿಸುವ ಅಗ್ನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಅಶ್ವತ್ಥಾಮನನ್ನು ಅರುವತ್ತು ಮೂರು ಬಾಣಗಳಿಂದ ಪ್ರಹರಿಸಿದನು. ಅಷ್ಟು ಮಾತ್ರವಲ್ಲದೇ ಅವನ ಸಾರಥಿಯನ್ನು ಸುವರ್ಣಮಯವಾದ ಮೂಲ ಭಾಗಗಳಿಂದ ಕೂಡಿದ್ದ ಮತ್ತು ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಇಪ್ಪತ್ತು ಬಾಣಗಳಿಂದಲೂ, ಅವನ ನಾಲ್ಕು ಕುದುರೆಗಳನ್ನು ನಿಶಿತವಾದ ನಾಲ್ಕು ಬಾಣಗಳಿಂದಲೂ ಗಾಯಗೊಳಿಸಿದನು. ಧೃಷ್ಟದ್ಯುಮ್ನನು ಅಶ್ವತ್ಥಾಮನನ್ನು ಕ್ಷಣ-ಕ್ಷಣಕ್ಕೂ ನಿಶಿತವಾದ ಬಾಣಗಳಿಂದ ಪ್ರಹರಿಸುತ್ತಾ ಭೂಮಿಯನ್ನೇ ನಡುಗಿಸುವನೋ ಎಂಬಂತೆ ಗರ್ಜಿಸುತ್ತಿದ್ದನು. ಆ ಸಮಯದಲ್ಲಿ ಪಾರ್ಷತನು ಎಲ್ಲ ಲೋಕಗಳಲ್ಲಿರುವ ಪ್ರಾಣಿಗಳ ಪ್ರಾಣ ಗಳನ್ನೂ ಹೀರುತ್ತಿರುವನೋ ಎಂಬಂತೆ ಭಯಂಕರನಾಗಿ ಕಾಣುತ್ತಿದ್ದನು. ಧೃಷ್ಟದ್ಯುಮ್ನನು ನಿಶ್ಚಯವಾಗಿಯೂ ಮಹಾಬಲಿಷ್ಠನಾಗಿದ್ದನು; ಅಸ್ತ್ರವಿದ್ಯೆ ಯಲ್ಲಿ ಪಾರಂಗತನಾಗಿದ್ದನು; ದೃಢಸಂಕಲ್ಪನಾಗಿದ್ದನು. ಯುದ್ಧದಿಂದ ಹಿಂದಿರುಗಲು ಮೃತ್ಯುವನ್ನೇ ಅವಧಿಯನ್ನಾಗಿ ಮಾಡಿಕೊಂಡಿದ್ದ ಧೃಷ್ಟದ್ಯುಮ್ನನು ಅಶ್ವತ್ಥಾಮನೊಡನೆಯೇ ಯುದ್ಧವನ್ನು ಮುಂದುವರಿಸಿದನು.

ಅನಂತರ ರಥಿಗಳಲ್ಲಿ ಶ್ರೇಷ್ಠನಾದ, ಮಹಾತ್ಮನಾದ ಪಾಂಚಾಲ್ಯನು ದ್ರೋಣರ ಮಗನ ತಲೆಯಮೇಲೆ ಬಾಣಮಯವಾದ ಮಳೆಯನ್ನೇ ಸುರಿಸಿದನು. ಅಶ್ವತ್ಥಾಮನೂ ತನ್ನ ತಂದೆಯ ಮರಣವನ್ನು ಸ್ಮರಿಸುತ್ತಾ ಕ್ರುದ್ಧನಾಗಿದ್ದ ಪಾರ್ಷತನನ್ನು ಬಾಣಗಳಿಂದ ಮುಚ್ಚಿದನು. ಪುನಃ ಹತ್ತು ಬಾಣಗಳಿಂದ ಅವನನ್ನು ಗಾಯಗೊಳಿಸಿದನು. ಸುಪ್ರಮುಕ್ತವಾದ ಮತ್ತು ನಿಶಿತವಾಗಿದ್ದ ಎರಡು ಬಾಣಗಳಿಂದ ಅಶ್ವತ್ಥಾಮನು ಧೃಷ್ಟದ್ಯುಮ್ನನ ಧ್ವಜವನ್ನೂ ಮತ್ತು ಧನುಸ್ಸನ್ನೂ ಕತ್ತರಿಸಿ ಅನಂತರ ಇನ್ನೂ ಅನೇಕ ಬಾಣಗಳಿಂದ ಪಾರ್ಷತನನ್ನು ಬಹಳವಾಗಿ ಗಾಯಗೊಳಿಸಿದನು. ಮರುಕ್ಷಣದಲ್ಲಿಯೇ ಅಶ್ವತ್ಥಾಮನು ಪಾರ್ಷತನನ್ನು ಅಶ್ವ-ಸಾರಥಿ-ರಥಗಳಿಂದ

ವಿಹೀನನನ್ನಾಗಿ ಮಾಡಿದನು. ಅವನ ಅನುಯಾಯಿಗಳನ್ನೂ ನಿಶಿತವಾದ ಬಾಣಗಳಿಂದ ದ್ರೌಣಿಯು ಪಲಾಯಿತರನ್ನಾಗಿ ಮಾಡಿದನು. ಆ ಸಮಯದಲ್ಲಿ ಬಹಳ ಗಾಬರಿಗೊಂಡಿದ್ದ ಮತ್ತು ಸಂಕಟಕ್ಕೊಳಗಾಗಿದ್ದ ಪಾಂಚಾಲರ ಸೈನ್ಯವು ಪಲಾಯನಮಾಡಿತು. ಒಬ್ಬರು ಮತ್ತೊಬ್ಬರನ್ನು ನೋಡಲೂ ಅವರಿಗೆ ತಾಳ್ಮೆಯಿರಲಿಲ್ಲ. ಅವರು ಅಷ್ಟು ಭ್ರಾಂತರಾಗಿದ್ದರು. ಧೃಷ್ಟದ್ಯುಮ್ನನು ಅಶ್ವತ್ಥಾಮನಿಂದ ಪೀಡಿತನಾದುದನ್ನೂ ಮತ್ತು ಪಾಂಚಾಲಯೋಧರು ಯುದ್ಧದಿಂದ ಪರಾಙ್ಮುಖರಾಗುತ್ತಿರುವುದನ್ನೂ ಕಂಡು ಸಾತ್ಯಕಿಯು ತನ್ನ ರಥವನ್ನು ದ್ರೌಣಿಯ ರಥದಕಡೆಗೆ ದೌಡಾಯಿಸಿದನು.

ಅಶ್ವತ್ಥಾಮನನ್ನು ಯುದ್ಧದಲ್ಲಿ ಎದುರಿಸುತ್ತಾ ಎಂಟು ನಿಶಿತವಾದ ಬಾಣಗಳಿಂದ ಅವನನ್ನು ಪ್ರಹರಿಸಿದನು. ಅಸಹನಶೀಲನಾದ ಸಾತ್ಯಕಿಯು ಪುನಃ ಅನೇಕವಿಧವಾದ ಇಪ್ಪತ್ತು ಬಾಣಗಳಿಂದ ಅಶ್ವತ್ಥಾಮನನ್ನು ಪ್ರಹರಿಸಿ, ಒಂದು ಬಾಣದಿಂದ ಸೂತನನ್ನೂ, ನಾಲ್ಕು ಬಾಣಗಳಿಂದ ರಥದ ನಾಲ್ಕು ಕುದುರೆಗಳನ್ನೂ ಗಾಯಗೊಳಿಸಿದನು. ಸಾತ್ಯಕಿಯು ಸಿದ್ಧಹಸ್ತನಾದ ಯೋಧನಂತೆ ದ್ರೌಣಿಯ ಧ್ವಜವನ್ನೂ ಮತ್ತು ಧನುಸ್ಸನ್ನೂ ಕ್ಷಣಮಾತ್ರದಲ್ಲಿ ಕತ್ತರಿಸಿದನು. ಕುದುರೆಗಳಿಂದ ಯುಕ್ತವಾಗಿದ್ದ ಸುವರ್ಣಭೂಷಿತನಾಗಿದ್ದ ದ್ರೌಣಿಯ ರಥವನ್ನೂ ಧ್ವಂಸಮಾಡಿದನಲ್ಲದೇ ಮೂವತ್ತು ಬಾಣಗಳಿಂದ ಅಶ್ವತ್ಥಾಮನ ವಕ್ಷಃಸ್ಥಳದಲ್ಲಿ ಆಳವಾಗಿ ಪ್ರಹರಿಸಿದನು. ಹೀಗೆ ಸಾತ್ಯಕಿಯ ಬಾಣಗಳಿಂದ ಪೀಡಿತನಾದ ಮತ್ತು ಸಾತ್ವತನು ಬಿಟ್ಟ ಬಾಣಗಳ ಸಮೂಹದಿಂದ ಪರಿವೃತನಾಗಿದ್ದ ಅಶ್ವತ್ಥಾಮನಿಗೆ ಮುಂದೇನು ಮಾಡಬೇಕೆಂಬುದೇ ತಿಳಿಯದಾಯಿತು. ಆಚಾರ್ಯಪುತ್ರನು ಅಂತಹ ದುರವಸ್ಥೆಯಲ್ಲಿರಲಾಗಿ, ಮಹಾರಥನಾದ ನಿನ್ನ ಮಗ ದುರ್ಯೋಧನನು ಕೃಪ-ಕರ್ಣಾದಿಗಳೊಡನೆ ಶೈನೇಯನನ್ನು ಆಕ್ರಮಿಸಿದನು. ದುರ್ಯೋಧನನು ಇಪ್ಪತ್ತು ಬಾಣಗಳಿಂದಲೂ, ಶರದ್ವಂತನ ಮಕ್ಕಳಾದ ಕೃಪರು ಮೂರು ಬಾಣಗಳಿಂದಲೂ, ಕೃತವರ್ಮನು ಹತ್ತು ಬಾಣಗಳಿಂದಲೂ, ಕರ್ಣನು ಐವತ್ತು ಬಾಣಗಳಿಂದಲೂ, ದುಃಶಾಸನನು ನೂರು ಬಾಣಗಳಿಂದಲೂ, ವೃಷಸೇನನು ಏಳುಬಾಣಗಳಿಂದಲೂ, ಸಾತ್ಯಕಿಯನ್ನು ಪ್ರಹರಿಸಿದರು. ಈ ಎಲ್ಲ ಯೋಧರೂ ಶೈನೇಯನ ಸುತ್ತಲೂ ನಿಂತು ನಿಶಿತವಾದ ಬಾಣಗಳಿಂದ ಅವನನ್ನು ಸತತವಾಗಿ ಪ್ರಹರಿಸುತ್ತಲೇ ಇದ್ದರು. ಮರುಕ್ಷಣ

ದಲ್ಲಿಯೇ ಸಾತ್ಯಕಿಯು ಆ ಎಲ್ಲ ಮಹಾರಥರನ್ನೂ ರಥರಹಿತರನ್ನಾಗಿಯೂ, ಯುದ್ಧದಿಂದ ಪರಾಙ್ಮುಖರನ್ನಾಗಿಯೂ ಮಾಡಿದನು.

ಆ ವೇಳೆಗೆ ಅಶ್ವತ್ಥಾಮನು ಸ್ವಲ್ಪ ಚೇತರಿಸಿಕೊಂಡಿದ್ದನು. ಬಾರಿ-ಬಾರಿಗೂ ನಿಟ್ಟುಸಿರುಬಿಡುತ್ತಾ ಪಿತೃಮರಣದುಃಖದಿಂದ ಪೀಡಿತನಾಗಿ ಗಾಢವಾಗಿ ಚಿಂತಿಸತೊಡಗಿದನು. ಹೆಚ್ಚುಕಾಲ ಚಿಂತೆಯಲ್ಲಿಯೇ ಮಗ್ನನಾಗಿರದೇ ದ್ರೌಣಿಯು ಮತ್ತೊಂದು ರಥದಲ್ಲಿ ಕುಳಿತು ನೂರಾರು ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಾ ಸಾತ್ಯಕಿಯನ್ನು ತಡೆದು ನಿಲ್ಲಿಸಿದನು. (ಮುಂದಕ್ಕೆ ಹೋಗಗೊಡಲಿಲ್ಲ.) ಭಾರದ್ವಾಜಸುತನು ತನ್ನ ಕಡೆಗೆ ಬರುತ್ತಿರುವುದನ್ನು ಕಂಡು ಮಹಾರಥನಾದ ಸಾತ್ಯಕಿಯು ಪುನಃ ಅವನನ್ನು ರಥಹೀನನನ್ನಾಗಿಯೂ, ಪರಾಙ್ಮುಖನನ್ನಾಗಿಯೂ ಮಾಡಿದನು. ಆ ಸಮಯದಲ್ಲಿ ಸಾತ್ಯಕಿಯ ಅತುಲಪರಾಕ್ರಮವನ್ನು ಕಂಡು ಪರಮಹೃಷ್ಟರಾದ ಪಾಂಡವರು ಶಂಖಗಳನ್ನೂದಿದರು. ಸಿಂಹನಾದಗಳನ್ನು ಮಾಡಿದರು.

ಈ ರೀತಿಯಲ್ಲಿ ಸತ್ಯವಿಕ್ರಮನಾದ ಸಾತ್ಯಕಿಯು ಅಶ್ವತ್ಥಾಮನನ್ನು ರಥಹೀನನನ್ನಾಗಿ ಮಾಡಿ ರಣಾಂಗಣದಿಂದಲೇ ಓಡಿಸಿ, ಅನಂತರ ವೃಷಸೇನನ ಮೂರು ಸಾವಿರ ಸೈನಿಕರನ್ನೂ ಸಂಹರಿಸಿದನು. ಅನಂತರ ಸಾತ್ಯಕಿಯು ಕೃಪರ ಹದಿನೈದು ಸಾವಿರ ಗಜಸೈನಿಕರನ್ನೂ ಸಂಹರಿಸಿ ಶಕುನಿಯ ಐವತ್ತು ಸಾವಿರ ಅಶ್ವಸೈನಿಕರನ್ನೂ ನಿರ್ಮೂಲಮಾಡಿದನು. ಬಳಿಕ ಸಾತ್ಯಕಿಯ ವಿಷಯವಾಗಿ ಬಹಳ ಕುಪಿತನಾಗಿದ್ದ ವೀರ್ಯವಂತನಾದ ಅಶ್ವತ್ಥಾಮನು ಅವನನ್ನು ಸಂಹರಿಸುವ ಇಚ್ಛೆಯಿಂದ ಶೈನೇಯನ ಬಳಿಗೆ ಹೋದನು.

ಅಶ್ವತ್ಥಾಮನು ಪುನಃ ತನ್ನೊಡನೆ ಯುದ್ಧಮಾಡಲು ಬಂದುದನ್ನು ನೋಡಿ ಸಾತ್ಯಕಿಯು ಕ್ರೂರತರವಾದ ಮತ್ತು ನಿಶಿತವಾದ ಬಾಣಗಳಿಂದ ಪುನಃ ದ್ರೌಣಿಯನ್ನು ಗಾಯಗೊಳಿಸಿದನು. ಸಾತ್ಯಕಿಯು ಪ್ರಯೋಗಿಸಿದ ನಾನಾವಿಧವಾದ ಬಾಣಗಳಿಂದ ಬಹಳವಾಗಿ ಗಾಯಗೊಂಡ ಅಸಹನ ಶೀಲನಾದ ಮಹಾಧನುಷ್ಮಂತನಾದ ಅಶ್ವತ್ಥಾಮನು ಗಹ-ಗಹಿಸಿ ನಗುತ್ತಾ ಸಾತ್ಯಕಿಯೊಡನೆ ಈ ಮಾತುಗಳನ್ನು ಹೇಳಿದನು:

**ಶೈನೇಯಾಭ್ಯುಪಪತ್ತಿಂ ತೇ ಜಾನಾಮ್ಯಾಚಾರ್ಯಘಾತಿನಿ ।**
**ನ ಚೈನಂ ತ್ರಾಸ್ಯಸಿ ಮಾಯಾ ಗ್ರಸ್ತಮಾತ್ಮಾನಮೇವ ಚ ॥೬೩॥**

"ಶೈನೇಯ! ಗುರುಹಂತಕನಾದ ಧೃಷ್ಟದ್ಯುಮ್ನನ ವಿಷಯದಲ್ಲಿ ನಿನಗೆ ಅನುಗ್ರಹಬುದ್ಧಿಯಿದೆಯೆಂಬುದನ್ನು ನಾನು ತಿಳಿದಿದ್ದೇನೆ. ಆದರೆ ಅವನನ್ನು ಮಾತ್ರ ನೀನು ರಕ್ಷಿಸಲಾರೆ. ನನ್ನ ಹಿಡಿತಕ್ಕೆ ಸಿಕ್ಕಿರುವ ನೀನೂ ಸಹ ಆತ್ಮರಕ್ಷಣೆಯನ್ನು ಮಾಡಿಕೊಳ್ಳಲಾರೆ.

**ಶಪೇಽತ್ಮನಾಹಂ ಶೈನೇಯ ಸತ್ಯೇನ ತಪಸಾ ತಥಾ ।**
**ಅಹತ್ವಾ ಸರ್ವಪಾಞ್ಚಾಲಾನ್ಯದಿ ಶಾನ್ತಿಮಹಂ ಲಭೇ ॥೬೪॥**

ಶೈನೇಯ! ನನ್ನ ಮೇಲೆ, ಸತ್ಯದಮೇಲೆ, ನಾನು ಮಾಡಿರುವ ತಪಸ್ಸಿನಮೇಲೆ ಆಣೆಯಿಟ್ಟು ಹೇಳುತ್ತೇನೆ. ಎಲ್ಲ ಪಾಂಚಾಲರನ್ನೂ ಸಂಹರಿಸಿದ ಹೊರತು ನನ್ನ ಮನಸ್ಸಿಗೆ ಶಾಂತಿಯು ಲಭಿಸುವುದಿಲ್ಲ. (ಎಲ್ಲ ಪಾಂಚಾಲರನ್ನೂ ಸಂಹಾರಮಾಡದೆ ನಾನೇನಾದರೂ ಸಮಾಧಾನ ಹೊಂದಿದಲ್ಲಿ ಸತ್ಯ ಮತ್ತು ತಪಸ್ಸಿನಮೇಲೆ ಆಣೆಯಿದೆ.) ಪಾಂಡವರಲ್ಲಿ ಎಷ್ಟು ಬಲವಿರುವುದೋ ಮತ್ತು ವೃಷ್ಣಿಗಳಲ್ಲಿ ಎಷ್ಟು ಬಲವಿರುವುದೋ–ಆ ಬಲಗಳೆಲ್ಲವೂ ಈಗಲೇ ಪ್ರದರ್ಶಿತವಾಗಲಿ. ಅಂತಹ ಅಪಾರಬಲವನ್ನೂ ಕಡೆಗಾಣಿಸಿ ಸೋಮಕರನ್ನು ಸಂಹರಿಸುತ್ತೇನೆ."

ಅಶ್ವತ್ಥಾಮನು ಸಾತ್ಯಕಿಯೊಡನೆ ಹೀಗೆ ಹೇಳಿ ಸೂರ್ಯನ ಕಿರಣಕ್ಕೆ ಸಮಾನವಾದ ಕಾಂತಿಯಿಂದ ಕೂಡಿದ್ದ, ಸುತೀಕ್ಷ್ಣವಾಗಿದ್ದ, ಶ್ರೇಷ್ಠವಾದ ಬಾಣವೊಂದನ್ನು–ಇಂದ್ರನು ವಜ್ರಾಯುಧವನ್ನು ವೃತ್ರಾಸುರನ ಮೇಲೆ ಪ್ರಯೋಗಿಸಿದಂತೆ–ಸಾತ್ವತನ ಮೇಲೆ ಪ್ರಯೋಗಿಸಿದನು. ಅಶ್ವತ್ಥಾಮನು ಬಿಟ್ಟ ಆ ಬಾಣವು ಕವಚಸಹಿತವಾಗಿ ಸಾತ್ಯಕಿಯ ಶರೀರವನ್ನು ಭೇದಿಸಿ ಕೊಂಡು ಹೊರಬಂದು ಬುಸುಗುಟ್ಟುತ್ತಿರುವ ಸರ್ಪವು ಬಿಲವನ್ನು ಹೊಗು ವಂತೆ ಭೂಮಿಯೊಳಗೆ ನುಸುಳಿಕೊಂಡಿತು. ಭಿನ್ನವಾದ ಕವಚದಿಂದ ಕೂಡಿದ್ದ ಸಾತ್ಯಕಿಯು–ಅಂಕುಶದಿಂದ ತಿವಿಯಲ್ಪಟ್ಟ ಆನೆಯಂತೆ–ಬಹಳ ವ್ಯಥಿತನಾದನು. ಅವನ ಶರೀರದಲ್ಲಿ ಬಾಣಾಘಾತದಿಂದ ಉಂಟಾಗಿದ್ದ ಗಾಯಗಳಿಂದ ರಕ್ತವು ಹರಿಯತೊಡಗಿತು. ರಕ್ತದಿಂದ ತೋಯ್ದು ಹೋಗಿದ್ದ ಸಾತ್ಯಕಿಯು ಬಹಳ ಬಳಲಿದವನಾಗಿ ಬಾಣದಿಂದ ಕೂಡಿದ್ದ

ಧನುಸ್ಸನ್ನು ಕೆಳಗಿಟ್ಟು ಆಸನದ ಪಕ್ಕಕ್ಕೆ ಜರುಗಿ ಕುಳಿತನು. ಸಾತ್ಯಕಿಯ ಅವಸ್ಥೆಯನ್ನು ಗಮನಿಸಿದ ಸೂತನು ರಥವನ್ನು ಅಶ್ವತ್ಥಾಮನ ಸಮೀಪದಿಂದ ಬೇರೆಯ ರಥಿಯ ಬಳಿಗೆ ಶೀಘ್ರವಾಗಿ ಒಯ್ದನು.

ಸಾತ್ಯಕಿಯು ಹೊರಟುಹೋದನಂತರ ಪರಂತಪನಾದ ಅಶ್ವತ್ಥಾಮನು ಸುಂದರವಾದ ರೆಕ್ಕೆಗಳನ್ನು ಹೊಂದಿದ್ದ ಬಗ್ಗಿದ ಗಿಣ್ಣೆದ್ದ ಒಂದು ಬಾಣವನ್ನು ಧೃಷ್ಟದ್ಯುಮ್ನನ ಹುಬ್ಬುಗಳ ನಡುಭಾಗಕ್ಕೆ ಗುರಿಯಿಟ್ಟು ಪ್ರಯೋಗಿಸಿದನು. ಆ ಮೊದಲೇ ಬಹಳ ಗಾಯಗೊಂಡಿದ್ದ ಪಾರ್ಷತನು ಪುನಃ ಬಾಣದಿಂದ ಗಾಯಗೊಂಡವನಾಗಿ ಬಹಳವಾಗಿ ಬಳಲಿ ಕುಳಿತುಕೊಳ್ಳಲೂ ತ್ರಾಣವಿಲ್ಲದೇ ಧ್ವಜದ ಕೋಲನ್ನೇ ಒರಗಿಕೊಂಡು ಕುಸಿದನು. ಸಿಂಹದಿಂದ ಪೀಡಿಸಲ್ಪಟ್ಟ ಆನೆಯಂತೆ–ಅಶ್ವತ್ಥಾಮನ ಬಾಣಗಳಿಂದ ಪೀಡಿತನಾದ ಧೃಷ್ಟದ್ಯುಮ್ನನನ್ನು ನೋಡಿ ಪಾಂಡವರ ಪಕ್ಷದ ಅರ್ಜುನ, ಭೀಮಸೇನ, ಪುರುವಂಶೀಯನಾದ ವೃದ್ಧಕ್ಷತ್ರ, ಚೇದಿಗಳ ಯುವರಾಜ ಮತ್ತು ಮಾಲವರಾಜನಾದ ಸುದರ್ಶನ– ಈ ಐವರು ಶೂರಯೋಧರೂ ಬೇಗನೆ ಅಶ್ವತ್ಥಾಮನ ಬಳಿಗೆ ಧಾವಿಸಿದರು. ಆ ವೀರರೆಲ್ಲರೂ ಜಯಕಾರ ಮಾಡುತ್ತಾ ಧನುಸ್ಸುಗಳನ್ನು ಹಿಡಿದುಕೊಂಡು ಅಶ್ವತ್ಥಾಮನನ್ನು ನಾಲ್ಕು ಕಡೆಗಳಿಂದಲೂ ಆಕ್ರಮಿಸಿದರು. ಅರ್ಜುನನೇ ಮೊದಲಾದ ಪಾಂಡವ ಯೋಧರು ಅಶ್ವತ್ಥಾಮನಿಂದ ಇಪ್ಪತ್ತು ಹೆಜ್ಜೆಗಳಷ್ಟು ಅಂತರದಲ್ಲಿ ನಿಂತು ಕುಪಿತನಾಗಿದ್ದ ದ್ರೋಣಪುತ್ರನನ್ನು ಐದೈದು ಬಾಣಗಳಿಂದ ಒಂದೇ ಕಾಲದಲ್ಲಿ ನಾಲ್ಕು ಕಡೆಗಳಿಂದಲೂ ಪ್ರಹರಿಸಿದರು. ಅಶ್ವತ್ಥಾಮನು, ಐವರೂ ಏಕಕಾಲದಲ್ಲಿ ಬಿಟ್ಟ ಇಪ್ಪತ್ತೈದು ಬಾಣಗಳನ್ನೂ ಸರ್ಪೋಪಮಗಳಾಗಿದ್ದ, ನಿಶಿತವಾಗಿದ್ದ ಇಪ್ಪತ್ತೈದು ಬಾಣಗಳಿಂದ ಒಂದೇ ಬಾರಿಗೆ ಕತ್ತರಿಸಿ ಹಾಕಿದನು. ಅನಂತರ ದ್ರೌಣಿಯು ನಿಶಿತವಾಗಿದ್ದ ಏಳು ಬಾಣಗಳಿಂದ ವೃದ್ಧಕ್ಷತ್ರನನ್ನೂ, ಮೂರು ಬಾಣಗಳಿಂದ ಮಾಲವರಾಜನಾದ ಸುದರ್ಶನನನ್ನೂ, ಒಂದು ಬಾಣದಿಂದ ಅರ್ಜುನನನ್ನೂ, ಆರು ಬಾಣಗಳಿಂದ ವೃಕೋದರನನ್ನೂ ಪ್ರಹರಿಸಿದನು. ಅನಂತರ ಆ ಮಹಾರಥರೆಲ್ಲರೂ ಸಾಮೂಹಿಕವಾಗಿಯೂ ಪ್ರತ್ಯೇಕ-ಪ್ರತ್ಯೇಕವಾಗಿಯೂ ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ ಮತ್ತು ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಬಾಣಗಳಿಂದ ಪ್ರಹರಿಸಿದರು. ಚೇದಿದೇಶದ

ಯುವರಾಜನು ಅಶ್ವತ್ಥಾಮನನ್ನು ಇಪ್ಪತ್ತು ಬಾಣಗಳಿಂದ ಪ್ರಹರಿಸಿದನು. ಅರ್ಜುನನು ಪುನಃ ಎಂಟು ಬಾಣಗಳಿಂದ ಪ್ರಹರಿಸಿದನು. ಉಳಿದ ಮೂವರೂ ಮೂರು-ಮೂರು ಬಾಣಗಳಿಂದ ಪ್ರಹರಿಸಿದರು. ಅದಕ್ಕೆ ಪ್ರತಿಯಾಗಿ ಅಶ್ವತ್ಥಾಮನೂ ಅರ್ಜುನನನ್ನು ಆರು ಬಾಣಗಳಿಂದಲೂ, ಶ್ರೀಕೃಷ್ಣನನ್ನು ಹತ್ತು ಬಾಣಗಳಿಂದಲೂ, ಭೀಮಸೇನನನ್ನು ಐದು ಬಾಣ ಗಳಿಂದಲೂ, ಚೇದಿಗಳ ಯುವರಾಜನನ್ನು ನಾಲ್ಕು ಬಾಣಗಳಿಂದಲೂ, ಮಾಲವ-ಪೌರವರನ್ನು ಎರಡೆರಡು ಬಾಣಗಳಿಂದಲೂ ಪ್ರಹರಿಸಿದನು. ಪುನಃ ದ್ರೌಣಿಯು ಭೀಮಸೇನನ ಸಾರಥಿಯನ್ನು ಆರು ಬಾಣಗಳಿಂದ ಪ್ರಹರಿಸಿ, ಮತ್ತೆರಡು ಬಾಣಗಳಿಂದ ಭೀಮನ ಧನುಸ್ಸನ್ನೂ, ಧ್ವಜವನ್ನೂ ಕತ್ತರಿಸಿದನು. ಬಾಣಗಳ ಸುರಿಸುವಿಕೆಯಿಂದ ಪುನಃ ಅರ್ಜುನನನ್ನು ಗಾಯಗೊಳಿಸಿದ ದ್ರೌಣಿಯು ಮಹಾಘೋರವಾಗಿ ಸಿಂಹನಾದಮಾಡಿದನು. ಅಶ್ವತ್ಥಾಮನು ಎಣ್ಣೆಯಿಂದ ಹದಮಾಡಲ್ಪಟ್ಟಿದ್ದ ಆ ಬಾಣಗಳನ್ನು ಹಿಂದೆ-ಮುಂದೆ ಎಲ್ಲೆಡೆಗಳಲ್ಲಿಯೂ ಸುರಿಸುತ್ತಿದ್ದನು. ಭೂಮ್ಯಾಕಾಶ-ಸ್ವರ್ಗಗಳೂ, ದಿಕ್ಕು ಗಳೂ ಮತ್ತು ಉಪದಿಕ್ಕುಗಳೂ ಅಶ್ವತ್ಥಾಮನು ಬಿಟ್ಟ ಘೋರರೂಪವಾದ ಆ ಬಾಣಗಳಿಂದ ತುಂಬಿಹೋದುವು. ಇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮದಿಂದ ಯುಕ್ತನಾಗಿದ್ದ, ಉಗ್ರವಾದ ತೇಜಸ್ಸಿನಿಂದ ಕೂಡಿದ್ದ ಅಶ್ವತ್ಥಾಮನು ತನ್ನ ರಥದ ಸಮೀಪಕ್ಕೆ ಬಂದ ಮಾಲವರಾಜನಾದ ಸುದರ್ಶನನ ಇಂದ್ರಧ್ವಜಸದೃಶವಾದ ಎರಡು ಭುಜಗಳನ್ನೂ ಮತ್ತು ಶಿರಸ್ಸನ್ನೂ ಮೂರುಬಾಣಗಳಿಂದ ಏಕಕಾಲದಲ್ಲಿ ಕತ್ತರಿಸಿದನು.

ಅನಂತರ ದ್ರೋಣಪುತ್ರನು ವೃದ್ಧಕ್ಷತ್ರನನ್ನು ರಥಶಕ್ತಿಯಿಂದ ಗಾಯ ಗೊಳಿಸಿ ಅವನ ರಥವನ್ನು ಬಾಣಗಳಿಂದ ಎಳ್ಳುಕಾಳಿನಷ್ಟು ಪುಡಿ-ಪುಡಿ ಮಾಡಿಬಿಟ್ಟನು. ಶ್ರೇಷ್ಠವಾದ ಚಂದನದಿಂದ ಲೇಪಿತವಾಗಿದ್ದ ಅವನೆರಡು ತೋಳುಗಳನ್ನೂ ಕತ್ತರಿಸಿ, ಭಲ್ಲದಿಂದ ಶಿರಸ್ಸನ್ನೂ ದೇಹದಿಂದ ಪ್ರತ್ಯೇಕಿಸಿ ದನು. ಬಳಿಕ ವೇಗಶಾಲಿಯಾದ ಅಶ್ವತ್ಥಾಮನು ಪ್ರಜ್ವಲಿಸುವ ಅಗ್ನಿಸದೃಶ ವಾದ ಬಾಣಗಳಿಂದ ಯುವಕನಾದ, ನೀಲಕಮಲಮಾಲೆಯ ಕಾಂತಿಗೆ ಸಮಾನವಾದ ಶರೀರಕಾಂತಿಯಿಂದ ಕೂಡಿದ್ದ ಚೇದಿಗಳ ಯುವರಾಜನನ್ನು ಬಲಪೂರ್ವಕವಾಗಿ ಪ್ರಹರಿಸಿ ಅಶ್ವ-ಸೂತರೊಡನೆ ಮೃತ್ಯುವಿಗರ್ಪಿಸಿದನು.

ತಮ್ಮೆದುರಿನಲ್ಲಿಯೇ ಅಶ್ವತ್ಥಾಮನು ವೃದ್ಧಕ್ಷತ್ರ, ಸುದರ್ಶನ, ಚೇದಿಯ ಯುವರಾಜ–ಈ ಮೂವರನ್ನೂ ಸಂಹರಿಸಿದುದನ್ನು ಕಂಡು ಮಹಾಬಲನಾದ ಭೀಮಸೇನನು ಕೋಪಾವಿಷ್ಟನಾದನು. ಪರಂತಪನಾದ ಭೀಮಸೇನನು ದ್ರೋಣಪುತ್ರನನ್ನು ಕೋಪಗೊಂಡ ವಿಷಸರ್ಪಗಳಂತಿದ್ದ ತೀಕ್ಷ್ಣವಾದ ನೂರು ಬಾಣಗಳಿಂದ ಮುಚ್ಚಿಬಿಟ್ಟನು. ಅನಂತರ ಮಹಾತೇಜಸ್ವಿಯಾದ ಅಸಹನ ಶೀಲನಾದ ದ್ರೌಣಿಯು ಭೀಮಸೇನನು ಬಿಟ್ಟ ಶರವರ್ಷವನ್ನು ನಾಶಗೊಳಿಸಿ ನಿಶಿತವಾದ ಬಾಣಗಳಿಂದ ಭೀಮಸೇನನನ್ನು ಪ್ರಹರಿಸಿದನು. ಅದಕ್ಕೆ ಪ್ರತಿ ಯಾಗಿ ಮಹಾಬಲನಾದ, ಮಹಾಬಾಹುವಾದ ಭೀಮಸೇನನು ಅಶ್ವತ್ಥಾಮನ ಧನುಸ್ಸನ್ನು ಕ್ಷುರಪ್ರದಿಂದ ಕತ್ತರಿಸಿ ಮತ್ತೊಂದು ಬಾಣದಿಂದ ಅವನನ್ನೂ ಗಾಯಗೊಳಿಸಿದನು. ಮಹಾಮನಸ್ವಿಯಾದ ದ್ರೌಣಿಯು ಭೀಮನಿಂದ ಕತ್ತರಿಸಲ್ಪಟ್ಟ ಧನುಸ್ಸನ್ನು ಕೆಳಗಿಟ್ಟು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಅನೇಕ ಬಾಣಗಳಿಂದ ಭೀಮಸೇನನನ್ನು ಪ್ರಹರಿಸಿದನು. ಮಳೆಗರೆಯುವ ಎರಡು ಮೋಡಗಳೋಪಾದಿಯಲ್ಲಿ ಪರಾಕ್ರಮಿಗಳಾದ, ಮಹಾಬಲರಾದ ಭೀಮಾಶ್ವತ್ಥಾಮರು ಒಬ್ಬರು ಮತ್ತೊಬ್ಬರಮೇಲೆ ಬಾಣಗಳ ಮಳೆಗರೆಯು ತ್ತಿದ್ದರು. ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ, ಮಸೆಗಲ್ಲಿ ನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ಭೀಮನಾಮಾಂಕಿತಗಳಾಗಿದ್ದ ಬಾಣ ಗಳು–ಮೇಘಗಳು ಸೂರ್ಯನನ್ನು ಮುಚ್ಚುವಂತೆ–ಅಶ್ವತ್ಥಾಮನನ್ನು ಮುಚ್ಚಿ ದುವು. ಅದೇ ರೀತಿಯಲ್ಲಿ ದ್ರೌಣಿಪ್ರಮುಕ್ತವಾದ, ಬಗ್ಗಿದ ಗಿಣ್ಣುಗಳಿಂದ ಕೂಡಿದ್ದ ನೂರಾರು-ಸಾವಿರಾರು ಬಾಣಗಳಿಂದ ಭೀಮಸೇನನೂ ಮುಚ್ಚಿ ಹೋದನು. ರಣಧೀರನಾದ ಅಶ್ವತ್ಥಾಮನ ಸಾವಿರಾರು ಬಾಣಗಳಿಂದ ಮುಚ್ಚಲ್ಪಟ್ಟಿದ್ದರೂ ಭೀಮಸೇನನು ಸ್ವಲ್ಪವಾದರೂ ಉದ್ವಿಗ್ನನಾಗಲಿಲ್ಲ. ಅದು ನಮಗೆ ಪರಮಾದ್ಭುತವಾಗಿ ಕಂಡಿತು.

ಅನಂತರ ಮಹಾಬಾಹುವಾದ ಭೀಮಸೇನನು ಸುವರ್ಣಭೂಷಿತ ವಾಗಿದ್ದ, ಯಮದಂಡೋಪಮವಾಗಿದ್ದ, ನಿಶಿತವಾಗಿದ್ದ ಹತ್ತು ನಾರಾಚಗಳನ್ನು ಅಶ್ವತ್ಥಾಮನ ಮೇಲೆ ಪ್ರಯೋಗಿಸಿದನು. ಭೀಮಪ್ರಮುಕ್ತ ವಾದ ಆ ನಾರಾಚಗಳು ಅಶ್ವತ್ಥಾಮನ ಜತ್ರುಪ್ರದೇಶವನ್ನು (ಕೊರಳಿನ ಎಲುಬು ಪ್ರದೇಶವನ್ನು) ಭೇದಿಸಿಕೊಂಡು ಹೊರಬಂದು ಸರ್ಪಗಳು

ಹುತ್ತದೊಳಗೆ ನುಸುಳಿಕೊಳ್ಳುವಂತೆ ಭೂಮಿಯಲ್ಲಿ ನಾಟಿಕೊಂಡುವು. ಮಹಾತ್ಮನಾದ ಭೀಮಸೇನನ ನಾರಾಚಗಳಿಂದ ಬಹಳವಾಗಿ ಗಾಯಗೊಂಡ ಅಶ್ವತ್ಥಾಮನು ಧ್ವಜದಂಡವನ್ನೊರಗಿ ಕಣ್ಣುಗಳನ್ನು ಮುಚ್ಚಿದನು. ಸ್ವಲ್ಪಹೊತ್ತಿನಲ್ಲಿಯೇ ಮೂರ್ಛೆಯಿಂದ ಎಚ್ಚರಗೊಂಡ ರಕ್ತಸಿಕ್ತನಾಗಿದ್ದ ಅಶ್ವತ್ಥಾಮನು ತನಗಾದ ಸ್ಥಿತಿಯನ್ನು ಸ್ಮರಿಸಿ ಬಹಳವಾಗಿ ಕೋಪಗೊಂಡನು. ಅವನ ಕಣ್ಣುಗಳು ಕೆಂಪಾದುವು. ಮಹಾತ್ಮನಾದ ಪಾಂಡವನಿಂದ ಬಹಳವಾಗಿ ಗಾಯಗೊಳಿಸಲ್ಪಟ್ಟಿದ್ದ ಮಹಾಬಾಹುವಾದ ಅಶ್ವತ್ಥಾಮನು ಭೀಮಸೇನನ ರಥದಕಡೆಗೆ ವೇಗವಾಗಿ ಧಾವಿಸಿದನು.

ತೀಕ್ಷ್ಣವಾದ ತೇಜಸ್ಸಿನಿಂದ ಕೂಡಿದ್ದ ಸರ್ಪೋಪಮವಾಗಿದ್ದ ನೂರು ಬಾಣಗಳನ್ನು ಕಿವಿಯ ತುದಿಯವರೆಗೂ ಸೆಳೆದು ದ್ರೌಣಿಯು ಭೀಮಸೇನನ ಮೇಲೆ ಪ್ರಯೋಗಿಸಿದನು. ಸಮರಶ್ಲಾಘಿಯಾದ ಭೀಮಸೇನನು ಅಶ್ವತ್ಥಾಮನ ಪರಾಕ್ರಮವನ್ನು ಗಣನೆಗೇ ತೆಗೆದುಕೊಳ್ಳದೆ ಅಶ್ವತ್ಥಾಮನ ಮೇಲೆ ಬಹಳ ಬೇಗ ಉಗ್ರವಾದ ಬಾಣಗಳ ಮಳೆಯನ್ನೇ ಸುರಿಸಿದನು. ಅದರಿಂದ ಕ್ರುದ್ಧನಾದ ಅಶ್ವತ್ಥಾಮನು ಬಾಣಗಳಿಂದ ಭೀಮಸೇನನ ಧನುಸ್ಸನ್ನು ಕತ್ತರಿಸಿ ಪುನಃ ನಿಶಿತ ವಾದ ಬಾಣಗಳಿಂದ ಅವನ ವಕ್ಷಃಸ್ಥಳವನ್ನೂ ಪ್ರಹರಿಸಿದನು. ಕೋಪಿಷ್ಠನಾದ ಭೀಮಸೇನನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಅಶ್ವತ್ಥಾಮನನ್ನು ನಿಶಿತವಾದ ಐದು ಬಾಣಗಳಿಂದ ಪ್ರಹರಿಸಿದನು. ಕೋಪದಿಂದ ಕೆಂಗಣ್ಣ ರಾಗಿದ್ದ ಭೀಮಾಶ್ವತ್ಥಾಮರು ವರ್ಷಾಕಾಲದ ಮೇಘಗಳೋಪಾದಿಯಲ್ಲಿ ಬಾಣಗಳ ಮಳೆಗರೆಯುತ್ತಾ ಒಬ್ಬರು ಮತ್ತೊಬ್ಬರನ್ನು ಬಾಣಗಳಿಂದ ಮುಚ್ಚಿದರು. ಘೋರವಾದ ಚಪ್ಪಾಳೆಯ ಶಬ್ದಗಳಿಂದ ಒಬ್ಬರು ಮತ್ತೊಬ್ಬರನ್ನು ಭಯಗೊಳಿಸುತ್ತಾ, ಒಬ್ಬರು ಕೊಟ್ಟಪ್ರಹಾರಕ್ಕೆ ಪ್ರತಿಯಾಗಿ ಮತ್ತೊಬ್ಬರು ಪ್ರಹರಿಸುತ್ತಾ ಕೋಪಾಭಿಭೂತರಾಗಿ ಇಬ್ಬರೂ ಯುದ್ಧಮಾಡುತ್ತಿದ್ದರು. ಅನಂತರ ಸುವರ್ಣಭೂಷಿತವಾದ ದೊಡ್ಡಧನುಸ್ಸನ್ನು ಟೇಂಕರಿಸುತ್ತಾ, ಹತ್ತಿರ ದಲ್ಲಿಯೇ ನಿಂತು ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಿದ್ದ ಭೀಮ ಸೇನನನ್ನು ಶರದೃತುವಿನ ಮಧ್ಯಾಹ್ನದ ಸಮಯದಲ್ಲಿ ಜಾಜ್ವಲ್ಯಮಾನನಾಗಿ ಕಾಣುವ ಸೂರ್ಯನಂತೆಯೇ ಪ್ರಕಾಶಿಸುತ್ತಿದ್ದ ಅಶ್ವತ್ಥಾಮನು ನೋಡಿದನು.

**ಆದದಾನಸ್ಯ ವಿಶಿಖಾನ್ಸಂಧಾನಸ್ಯ ಚಾಶುಗಾನ್ ।**
**ವಿಕರ್ಷತೋ ಮುಞ್ಚತಶ್ಚ ನಾನ್ತರಂ ದದೃಶುರ್ಜನಾಃ ॥೧೦೮॥**

ಅಶ್ವತ್ಥಾಮನು ಬತ್ತಳಿಕೆಯಿಂದ ಬಾಣಗಳನ್ನು ತೆಗೆದುಕೊಳ್ಳುವುದನ್ನಾಗಲೀ, ಧನುಸ್ಸಿನಲ್ಲಿ ಬಾಣಗಳನ್ನು ಹೂಡುವುದನ್ನಾಗಲೀ, ಶಿಂಜಿನಿಯೊಡನೆ ಬಾಣವನ್ನು ಆಕರ್ಣವಾಗಿ ಸೆಳೆದುಬಿಡುವುದನ್ನಾಗಲೀ ಯಾರೂ ಕಾಣುತ್ತಲೇ ಇರಲಿಲ್ಲ. ಆ ಕ್ರಿಯೆಗಳು ಒಂದಾದಮೇಲೊಂದು ನಡೆಯಬೇಕಾಗಿದ್ದರೂ ಒಂದು ಕ್ರಿಯೆಯಿಂದ ಮತ್ತೊಂದು ಕ್ರಿಯೆಗೆ ಯಾವವಿಧವಾದ ಅಂತರವೂ ಗೋಚರಿಸುತ್ತಿರಲಿಲ್ಲ. ಧನುಸ್ಸು ಕೊಳ್ಳಿಯ ಚಕ್ರದಂತೆ ಯಾವಾಗಲೂ ಮಂಡಲಾಕಾರವಾಗಿಯೇ ಕಾಣುತ್ತಿದ್ದಿತು. ಬಾಣಗಳೂ ಸಹ ಒಂದಕ್ಕೊಂದು ಅಂಟಿಕೊಂಡಂತೆ ಮಂಡಲಾಕಾರವಾದ ಧನುಸ್ಸಿನಿಂದ ಹೊರಬರುತ್ತಿದ್ದುವು. ಅಶ್ವತ್ಥಾಮನ ಧನುಸ್ಸಿನಿಂದ ಚ್ಯುತವಾದ ಸಾವಿರಾರು ಬಾಣಗಳು ಆಕಾಶದಲ್ಲಿ ತುಂಬಿಕೊಂಡು ಮಿಡತೆಗಳ ಸಾಲುಗಳಂತೆಯೇ ಕಾಣುತ್ತಿದ್ದುವು. ಅಶ್ವತ್ಥಾಮನ ಧನುಸ್ಸಿನಿಂದ ಮುಕ್ತವಾದ ಸುವರ್ಣಭೂಷಿತವಾದ ಮತ್ತು ಘೋರವಾದ ಬಾಣಗಳು ಭೀಮಸೇನನ ರಥವನ್ನು ಬಹಳ ಬೇಗ ಮುಚ್ಚಿದುವು.

**ತತ್ರಾದ್ಭುತಮಪಶ್ಯಾಮ ಭೀಮಸೇನಸ್ಯ ವಿಕ್ರಮಮ್ ।**
**ಬಲಂ ವೀರ್ಯಂ ಪ್ರಭಾವಂ ಚ ವ್ಯವಸಾಯಂ ಚ ಭಾರತ ॥೧೧೨॥**

ಭಾರತನೇ! ಆಗ ನಾವು ಭೀಮಸೇನನ ಪರಮಾದ್ಭುತವಾದ ಬಲ-ವೀರ್ಯ-ಪ್ರಭಾವ-ವ್ಯವಸಾಯಗಳನ್ನು ಕಂಡೆವು.

ವರ್ಷಾಕಾಲದಲ್ಲಿ ಸತತವಾಗಿ ಬೀಳುವ ಘೋರವಾದ ಜಲವೃಷ್ಟಿಯೋಪಾದಿಯಲ್ಲಿ–ಮೇಘದಲ್ಲಿಯೇ ಹುಟ್ಟಿ ಧಾರಾಕಾರವಾಗಿ ಸುತ್ತಲೂ ಸುರಿಯುತ್ತಿದೆಯೋ ಎಂಬಂತೆ ಕಾಣುತ್ತಿದ್ದ–ಅಶ್ವತ್ಥಾಮನ ಬಾಣಗಳ ವೃಷ್ಟಿಯನ್ನು ನೋಡಿ ಭಯಂಕರಪರಾಕ್ರಮನಾದ ಭೀಮಸೇನನು ಕ್ಷಣಕಾಲ ಚಿಂತಿಸಿ ವೀರನಾದ ದ್ರೋಣಪುತ್ರನನ್ನು ವಧಿಸುವ ಇಚ್ಛೆಯಿಂದ ಮಳೆಗಾಲದಲ್ಲಿ ಮೇಘವು ಮಳೆಗರೆಯುವಂತೆ ದ್ರೌಣಿಯ ಮೇಲೆ ಬಾಣಗಳ ಮಳೆಗರೆದನು. ಸುವರ್ಣಮಯವಾದ ಹಿಂಭಾಗವನ್ನು ಹೊಂದಿದ್ದ, ಮಹಾಘೋರವಾಗಿದ್ದ ಭೀಮಸೇನನ ಆ ಧನುಸ್ಸು ಆಕರ್ಣವಾಗಿ ಸೆಳೆಯಲ್ಪಡುತ್ತಿದ್ದಾಗ ಮತ್ತೊಂದು ಇಂದ್ರಧನುಸ್ಸಿನಂತೆಯೇ ಕಾಣುತ್ತಿದ್ದಿತು. ಆ

ಮಹಾಧನುಸ್ಸಿನಿಂದ ನೂರಾರು ಬಾಣಗಳು ಪ್ರಾದುರ್ಭವಿಸಿ ರಣರಂಗಕ್ಕೇ ಶೋಭೆಯನ್ನುಂಟುಮಾಡುವವನಾಗಿದ್ದ ದ್ರೌಣಿಯನ್ನು ಮುಚ್ಚಿದುವು. ಅವರಿಬ್ಬರೂ ಹೀಗೆ ಅವ್ಯಾಹತವಾಗಿ ಬಾಣಗಳನ್ನು ಬಿಡುತ್ತಿದ್ದಾಗ ಅವರಿಬ್ಬರ ನಡುವೆ ವಾಯುವಿಗೂ ಸಂಚರಿಸಲು ಸಾಧ್ಯವಾಗುತ್ತಿರಲಿಲ್ಲ. ಭೀಮಸೇನನಂತೆ ದ್ರೌಣಿಯೂ ಸಹ ಸುವರ್ಣಭೂಷಿತವಾದ, ಎಣ್ಣೆಯಲ್ಲಿ ನೆನೆಸಿ ಹದಮಾಡಿದ್ದ, ಸ್ವಚ್ಛವಾದ ಅಗ್ರಭಾಗಗಳಿಂದ ಕೂಡಿದ್ದ ಬಾಣಗಳನ್ನು ಭೀಮಸೇನನನ್ನು ಸಂಹರಿಸುವ ಇಚ್ಛೆಯಿಂದ ಪ್ರಯೋಗಿಸಿದನು. ಭೀಮಸೇನನು ದ್ರೌಣಿಯು ಬಿಟ್ಟ ಆ ಬಾಣಗಳಲ್ಲಿ ಪ್ರತಿಯೊಂದು ಬಾಣವನ್ನೂ ನಿಶಿತವಾದ ಬಾಣಗಳಿಂದ ಮೂರು-ಮೂರು ಚೂರುಗಳನ್ನಾಗಿ ಅಂತರಿಕ್ಷದಲ್ಲಿಯೇ ಕತ್ತರಿಸಿ 'ನಿಲ್ಲು-ನಿಲ್ಲು'–ಎಂದೂ ಗರ್ಜಿಸಿದನು. ಬಲಿಷ್ಠನಾದ, ಕ್ರುದ್ಧನಾಗಿದ್ದ ಭೀಮಸೇನನು ದ್ರೋಣಪುತ್ರನನ್ನು ವಧಿಸುವ ಇಚ್ಛೆಯಿಂದ ಘೋರವಾದ ಮತ್ತು ಉಗ್ರವಾದ ಬಾಣಗಳನ್ನು ಸುರಿಸಿದನು. ಅನಂತರ ಮಹಾಸ್ತ್ರವಿದನಾದ ಅಶ್ವತ್ಥಾಮನು ಅಸ್ತ್ರಮಾಯೆಯಿಂದ ಭೀಮನು ಬಿಟ್ಟ ಶರವರ್ಷವನ್ನು ನಾಶಗೊಳಿಸಿ ಅವನ ಧನುಸ್ಸನ್ನು ಕತ್ತರಿಸಿದನು. ಕ್ರುದ್ಧನಾದ ಅಶ್ವತ್ಥಾಮನು ಬಹುಸಂಖ್ಯಾತವಾದ ಬಾಣಗಳಿಂದ ಭೀಮಸೇನನನ್ನೂ ಬಹಳವಾಗಿ ಗಾಯಗೊಳಿಸಿದನು.

ಧನುಸ್ಸನ್ನು ಕಳೆದುಕೊಂಡ ಬಲಿಷ್ಠನಾದ ಭೀಮಸೇನನು ಸುದಾರುಣವಾದ ರಥಶಕ್ತಿಯನ್ನೆತ್ತಿಕೊಂಡು ವೇಗವಾಗಿ ತಿರುಗಿಸಿ ಅಶ್ವತ್ಥಾಮನ ರಥದ ಕಡೆಗೆಸೆದನು. ಅಶ್ವತ್ಥಾಮನು ಉಲ್ಕೆಯ ಕಾಂತಿಗೆ ಸಮಾನವಾದ ಕಾಂತಿಯನ್ನು ಹೊಂದಿದ್ದ, ತನ್ನ ಮೇಲೆ ರಭಸದಿಂದ ಬೀಳುವುದರಲ್ಲಿದ್ದ, ಭೀಮಪ್ರಮುಕ್ತವಾದ ಆ ರಥಶಕ್ತಿಯನ್ನು ಕೈಚಳಕವನ್ನು ತೋರಿಸುತ್ತಾ ನಿಶಿತವಾದ ಬಾಣಗಳಿಂದ ಕತ್ತರಿಸಿದನು. ಆ ಮಧ್ಯದಲ್ಲಿಯೇ ಭೀಮಸೇನನು ದೃಢವಾದ ಧನುಸ್ಸನ್ನೆತ್ತಿಕೊಂಡು ನಸುನಗುತ್ತಾ ಅಶ್ವತ್ಥಾಮನನ್ನು ಬಾಣಗಳಿಂದ ಗಾಯಗೊಳಿಸಿದನು. ಅದಕ್ಕೆ

ಪ್ರತಿಯಾಗಿ ದ್ರೌಣಿಯು ಬಗ್ಗಿದ್ದ ಗಿಣ್ಣಿದ್ದ ಬಾಣದಿಂದ ಭೀಮಸೇನನ ಸಾರಥಿಯ ಹಣೆಯನ್ನು ಸೀಳಿದನು. ಮಹಾಬಲಿಷ್ಠನಾದ ದ್ರೋಣಪುತ್ರನು ಪ್ರಯೋಗಿಸಿದ ಬಾಣದಿಂದ ಬಹಳವಾಗಿ ಗಾಯಗೊಂಡ ಭೀಮನ ಸಾರಥಿಯು ಮೂರ್ಛಿತನಾದನು. ಕುದುರೆಗಳ ಕಡಿವಾಣಗಳು ಸಾರಥಿಯ ಕೈಯಿಂದ ಜಾರಿದುವು. ಭೀಮನ ರಥದ ಸಾರಥಿಯು ಮೂರ್ಛಿತನಾಗಲಾಗಿ, ಸರ್ವಧನುಷ್ಮಂತರೂ ನೋಡುತ್ತಿದ್ದಂತೆಯೇ ಅನಿಯಂತ್ರಿತವಾದ ಭೀಮಸೇನನ ಕುದುರೆಗಳು ಭಯದಿಂದ ಓಡಿಹೋದುವು. ಓಡಿಹೋಗುತ್ತಿರುವ ಕುದುರೆಗಳ ಮೂಲಕವಾಗಿ ಭೀಮಸೇನನು ರಣಾಂಗಣದಿಂದ ಒಯ್ಯಲ್ಪಟ್ಟುದನ್ನು ನೋಡಿ ಪರಮಸಂತುಷ್ಟನಾದ, ಅಪರಾಜಿತನಾದ ಅಶ್ವತ್ಥಾಮನು ತನ್ನ ದೊಡ್ಡದಾದ ಶಂಖವನ್ನೂದಿದನು. ಅನಂತರ ಎಲ್ಲ ಪಾಂಚಾಲಯೋಧರೂ ಮತ್ತು ಭೀಮಸೇನನೂ ಭಯಗೊಂಡವರಾಗಿ ಧೃಷ್ಟದ್ಯುಮ್ನನ ರಥವನ್ನು ಬಿಟ್ಟು ದಿಕ್ಕಾಪಾಲಾಗಿ ಓಡಿಹೋದರು. ಪಾಂಚಾಲಸೈನ್ಯವು ಭಗ್ನವಾಗಿ ಓಡುತ್ತಿದ್ದಾಗಲೂ ಅಶ್ವತ್ಥಾಮನು ಹಿಂದಿನಿಂದಲೇ ಬಾಣಗಳನ್ನು ಸೈನಿಕರ ಮೇಲೆ ಸುರಿಸುತ್ತಿದ್ದನು. ಪಾಂಡವರ ಸೈನ್ಯವನ್ನು ಧ್ವಂಸಮಾಡುತ್ತಾ ಅವರ ಬೆನ್ನಟ್ಟಿ ವೇಗವಾಗಿ ಹೋಗುತ್ತಿದ್ದನು. (ಪಲಾಯನಮಾಡಿದರೂ ಪಾಂಡು-ಪಾಂಚಾಲಸೈನಿಕರಿಗೆ ಪ್ರಾಣಗಳನ್ನುಳಿಸಿಕೊಳ್ಳಲು ಸಾಧ್ಯವಾಗಲಿಲ್ಲ) ಹೀಗೆ ದ್ರೋಣಪುತ್ರನಿಂದ ಅವ್ಯಾಹತವಾಗಿ ವಧಿಸಲ್ಪಡುತ್ತಿದ್ದ ಪಾರ್ಥಿವಯೋಧರು ಅಶ್ವತ್ಥಾಮನ ಭಯದಿಂದಾಗಿ ದಿಕ್ಕುಗಳನ್ನೇ ಆಶ್ರಯಸ್ಥಾನವನ್ನಾಗಿ ಪಡೆದರು. (ಅವನ ಬಾಣಪ್ರಹಾರವನ್ನು ತಪ್ಪಿಸಿಕೊಳ್ಳಲು ದಿಕ್ಕಾಪಾಲಾಗಿ ಓಡಿಹೋದರು.)"

೨೦೦ನೆಯ ಅಧ್ಯಾಯವು ಮುಗಿಯಿತು.

## ಅಶ್ವತ್ಥಾಮನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿ ಪಾಂಡವರ ಕಡೆಯ ಒಂದು ಅಕ್ಷೌಹಿಣೀ ಸೈನ್ಯವನ್ನು ಸಂಹರಿಸಿದುದು: ಕೃಷ್ಣಾರ್ಜುನರಿಗೆ ಆ ಮಹಾಸ್ತ್ರದಿಂದ ಯಾವ ಪರಿಣಾಮವೂ ಆಗದಿದ್ದುದಕ್ಕೆ ಚಿಂತಿತನಾದ ಅಶ್ವತ್ಥಾಮನಿಗೆ ವ್ಯಾಸರು ಶಿವ-ಕೃಷ್ಣರ ಮಹಿಮೆಯನ್ನು ಹೇಳಿದುದು

ಸಂಜಯನು ಅಶ್ವತ್ಥಾಮನ ಪರಾಕ್ರಮವರ್ಣನೆಯನ್ನು ಮುಂದು ವರಿಸುತ್ತಾನೆ:

“ಮಹಾರಾಜ! ತಮ್ಮ ಕಡೆಯ ಸೈನ್ಯವು ಅಶ್ವತ್ಥಾಮನಿಂದ ಭಗ್ನವಾಗಿ ಓಡಿಹೋಗುತ್ತಿರುವುದನ್ನು ಕಂಡು ಧನಂಜಯನು ದ್ರೋಣರ ಮಗನನ್ನು ಜಯಿಸಬೇಕೆನ್ನುವ ಇಚ್ಛೆಯಿಂದ ತನ್ನ ರಥವನ್ನು ತಡೆದನು. ಕೃಷ್ಣಾರ್ಜುನರು ಪ್ರಯತ್ನಪೂರ್ವಕವಾಗಿ ತಮ್ಮ ಕಡೆಯ ಸೈನಿಕರನ್ನು ರಣಾಂಗಣದಲ್ಲಿಯೇ ನಿಲ್ಲಿಸಲು ಯತ್ನಿಸುತ್ತಿದ್ದರೂ ಪಾಂಡವರ ಕಡೆಯ ಯೋಧರು ಅಲ್ಲಿ ನಿಲ್ಲಲೇ ಇಲ್ಲ. ಆ ಸಮಯದಲ್ಲಿ ಅರ್ಜುನನೊಬ್ಬನೇ ಸೋಮಕರ ಸೈನ್ಯದಲ್ಲಿ ಸ್ವಲ್ಪಭಾಗವನ್ನೂ, ಮತ್ಸ್ಯಯೋಧರನ್ನೂ ಮತ್ತು ಇತರ ಸೈನಿಕರನ್ನೂ ಒಟ್ಟಾಗಿ ಸೇರಿಸಿಕೊಂಡು ಕೌರವರೊಡನೆ ಯುದ್ಧಮಾಡಲು ರಣಭೂಮಿಗೆ ಹಿಂದಿರುಗಿದನು. ಅರ್ಜುನನು ಸಿಂಹದ ಬಾಲವೇ ಚಿಹ್ನೆಯಾಗಿ ಉಳ್ಳ ಧ್ವಜವನ್ನು ಹೊಂದಿದ್ದ ಅಶ್ವತ್ಥಾಮನನ್ನು ಬಹಳ ಬೇಗ ಆಕ್ರಮಿಸಿ ಮಹಾಧನುಷ್ಮಂತನಾದ ದ್ರೋಣಪುತ್ರನನ್ನು ಕುರಿತು ಹೇಳಿದನು:

**ಯಾ ಶಕ್ತಿರ್ಯಚ್ಚ ವಿಜ್ಞಾನಂ**
**ಯದ್ವೀರ್ಯಂ ಯಚ್ಚ ಪೌರುಷಮ್ ।**
**ಧಾರ್ತರಾಷ್ಟ್ರೇಷು ಯಾ ಪ್ರೀತಿ-**
**ರ್ದ್ವೇಷೋಽಸ್ಮಾಸು ಚ ಯಚ್ಚ ತೇ ॥೫॥**

**ಯಚ್ಚ ಭೂಯೋಽಸ್ತಿ ತೇಜಸ್ತೇ ತತ್ಸರ್ವಂ ಮಯಿ ದರ್ಶಯ ।**
**ಸ ಏವ ದ್ರೋಣಹನ್ತಾ ತೇ ದರ್ಪಂ ಛೇತ್ಸ್ಯತಿ ಪಾರ್ಷತಃ ॥೬॥**

“ಆಚಾರ್ಯಪುತ್ರನೇ! ನಿನ್ನಲ್ಲಿ ಯಾವ ಶಕ್ತಿ-ವಿಜ್ಞಾನ-ವೀರ್ಯ-ಪೌರುಷಗಳಿವೆಯೋ, ಕೌರವರ ವಿಷಯದಲ್ಲಿ ಯಾವ ಪ್ರೀತಿಯೂ, ಮತ್ತು ನಮ್ಮ ವಿಷಯದಲ್ಲಿ ಯಾವ ದ್ವೇಷವೂ ಇರುವುದೋ ಮತ್ತು ನಿನ್ನಲ್ಲಿ ಅಸಾಧಾರಣವಾದ ಇನ್ನೂ ಅನೇಕ ತೇಜಸ್ಸುಗಳು ಯಾವುಗಳಿವೆಯೋ ಅವೆಲ್ಲವನ್ನೂ ನನ್ನಲ್ಲಿ ಪ್ರದರ್ಶಿಸು. ದ್ರೋಣರನ್ನು ಸಂಹರಿಸಿದ ಆ ಧೃಷ್ಟದ್ಯುಮ್ನನೇ ನಿನ್ನ ದರ್ಪವನ್ನು ಮುರಿಯುತ್ತಾನೆ.

**ಕಾಲಾನಲಸಮಪ್ರಖ್ಯಂ ದ್ವಿಷತಾಮನ್ತಕೋಪಮಮ್ ।**
**ಸಮಾಸಾದಯ ಪಾಞ್ಚಾಲ್ಯಂ ಮಾಂ ಚಾಪಿ ಸಹ ಕೇಶವಮ್ ।**
**ದರ್ಪಂ ನಾಶಯಿತಾಸ್ಮ್ಯದ್ಯ ತವೋದ್ವೃತ್ತಸ್ಯ ಸಂಯುಗೇ ॥೭॥**

ಕಾಲಾಗ್ನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿರುವ, ಶತ್ರುಗಳಿಗೆ ಯಮಪ್ರಾಯನಾದ ಪಾಂಚಾಲ್ಯನನ್ನೂ ಕೃಷ್ಣಸಹಿತನಾದ ನನ್ನನ್ನೂ ಎದುರಿಸು. ಉದ್ವೃತ್ತನಾಗಿರುವ ನಿನ್ನ ದರ್ಪವನ್ನು ಇಂದಿನ ಯುದ್ಧದಲ್ಲಿ ನಾನು ನಾಶಮಾಡುತ್ತೇನೆ.”

ಅರ್ಜುನನು ಅಶ್ವತ್ಥಾಮನೊಡನೆ ಹೇಳಿದ ಈ ಮಾತುಗಳನ್ನು ಕೇಳಿ ಚಕಿತನಾದ ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

**ಆಚಾರ್ಯಪುತ್ರೋ ಮಾನಾರ್ಹೋ ಬಲವಾಂಶ್ಚಾಪಿ ಸಂಜಯ ।**
**ಪ್ರೀತಿರ್ಧನಂಜಯೇ ಚಾಸ್ಯ ಪ್ರಿಯಶ್ಚಾಪಿ ಮಹಾತ್ಮನಃ ॥೮॥**
**ನ ಭೂತಪೂರ್ವಂ ಬೀಭತ್ಸೋರ್ವಾಕ್ಯಂ ಪರುಷಮೀದೃಶಮ್ ।**
**ಅಥ ಕಸ್ಮಾತ್ಸ ಕೌನ್ತೇಯಃ ಸಖಾಯಂ ರೂಕ್ಷಮುಕ್ತವಾನ್ ॥೯॥**

“ಸಂಜಯ! ಆಚಾರ್ಯಪುತ್ರನು ಸನ್ಮಾನಕ್ಕೆ ಪಾತ್ರನಾದವನು. ಅವನನ್ನು ಗುರುಪುತ್ರನೆಂಬ ಭಾವನೆಯಿಂದಾದರೂ ಎಲ್ಲರೂ ಮಾನ್ಯಮಾಡಲೇಬೇಕು. ಮೇಲಾಗಿ ಅವನೂ ಬಲಿಷ್ಠನು. ಗುರುಪುತ್ರನಿಗೆ ಧನಂಜಯನ ವಿಷಯದಲ್ಲಿ ಅಪಾರವಾದ ಪ್ರೀತಿಯಿದ್ದಿತು. ಅರ್ಜುನನಿಗೂ ಅಶ್ವತ್ಥಾಮನು ಪರಮಪ್ರಿಯನೇ ಆಗಿದ್ದನು. ಆದರೆ ಗುರುಪುತ್ರನೊಡನೆ ಆಡಿದ ಇಂತಹ ಕಠೋರವಾದ ಮಾತುಗಳನ್ನು ಅರ್ಜುನನು ಈ ಹಿಂದೆ ಯಾವಾಗಲೂ ಆಡಿದವನೇ ಅಲ್ಲ. ಹೀಗಿರುವಾಗ ಅರ್ಜುನನು

ಯಾವಕಾರಣದಿಂದ ಗುರುಪುತ್ರನೊಡನೆ ಇಂತಹ ಕಠೋರವಾದ ಮಾತುಗಳನ್ನಾಡಿದನು? ಹೇಳು ಸಂಜಯ!”

“ಅರ್ಜುನನು ಹೀಗೆ ಮಾತನಾಡಲು ಕಾರಣವಿಲ್ಲದಿಲ್ಲ; ಮಹಾರಾಜ!

**ಯುವರಾಜೇ ಹತೇ ಚೈವ ವೃದ್ಧಕ್ಷತ್ರೇ ಚ ಪೌರವೇ।**
**ಇಷ್ವಸ್ತ್ರವಿಧಿಸಂಪನ್ನೇ ಮಾಲವೇ ಚ ಸುದರ್ಶನೇ ॥೧೦॥**
**ಧೃಷ್ಟದ್ಯುಮ್ನೇ ಸಾತ್ಯಕೌ ಚ ಭೀಮೇ ಚಾಪಿ ಪರಾಜಿತೇ।**
**ಯುಧಿಷ್ಠಿರಸ್ಯ ತೈರ್ವಾಕ್ಯೈರ್ಮರ್ಮಣ್ಯಪಿ ಚ ಘಟ್ಟಿತೇ ॥೧೧॥**
**ಅನ್ತರ್ಭೇದೇ ಚ ಸಂಜಾತೇ ದುಃಖಂ ಸಂಸ್ಮೃತ್ಯ ಚ ಪ್ರಭೋ।**
**ಅಭೂತಪೂರ್ವೋ ಬೀಭತ್ಸೋರ್ದುಃಖಾನ್ಮನ್ಯುರಜಾಯತ ॥೧೨॥**

ಚೇದಿದೇಶದ ಯುವರಾಜನು ಹತನಾದನು. ಪುರುವಂಶೀಯನಾದ ವೃದ್ಧಕ್ಷತ್ರನು ಅಶ್ವತ್ಥಾಮನ ಬಾಣಗಳಿಗೆ ಆಹುತಿಯಾದನು. ಇಷ್ವಸ್ತ್ರಗಳ ಪ್ರಯೋಗವಿಧಿಯಲ್ಲಿ ಕುಶಲನಾಗಿದ್ದ ಮಾಲವದೇಶೀಯನಾದ ಸುದರ್ಶನನೂ ದ್ರೌಣಿಯೊಡನೆ ಮಾಡಿದ ಯುದ್ಧದಲ್ಲಿ ಅಸುನೀಗಿದನು. ಇಷ್ಟುಮಾತ್ರವಲ್ಲ. ಧೃಷ್ಟದ್ಯುಮ್ನ-ಸಾತ್ಯಕಿ-ಭೀಮಸೇನರೂ ಅಶ್ವತ್ಥಾಮನಿಂದ ಪರಾಜಿತರಾದರು. ಇದರ ಜೊತೆಗೆ ಯುಧಿಷ್ಠಿರನಾಡಿದ ಮಾತುಗಳೂ ಅರ್ಜುನನ ಮರ್ಮಸ್ಥಳಗಳನ್ನು ಭೇದಿಸಿದುವು. ಸಾತ್ಯಕಿ-ಧೃಷ್ಟದ್ಯುಮ್ನರಿಗೆ ಘರ್ಷಣೆಯೂ ನಡೆಯಿತು. ಹಿಂದೆ ತಾವು ಅನುಭವಿಸಿದ ಕಷ್ಟದ ಸ್ಮರಣೆಯೂ ಅರ್ಜುನನಿಗೆ ಬಂದಿತು. ಈ ಎಲ್ಲ ದುಃಖಗಳ ಕಾರಣದಿಂದಾಗಿ ಅರ್ಜುನನಿಗೆ ಅಭೂತಪೂರ್ವವಾದ (ಹಿಂದೆಂದೂ ಬಾರದಿದ್ದ ) ಕೋಪವುಂಟಾಯಿತು.

**ತಸ್ಮಾದನರ್ಹಮಶ್ಲೀಲಮಪ್ರಿಯಂ ದ್ರೌಣಿಮುಕ್ತವಾನ್ ।**
**ಮಾನ್ಯಮಾಚಾರ್ಯತನಯಂ ರೂಕ್ಷಂ ಕಾಪುರುಷಂ ಯಥಾ ॥೧೩॥**

ಈ ಕಾರಣದಿಂದಲೇ ಅರ್ಜುನನು ಮಾನ್ಯನಾದ, ಆಚಾರ್ಯಪುತ್ರನಾದ, ನಿಷ್ಠುರವಾದ ಮಾತುಗಳಿಗೆ ಅನರ್ಹನಾದ ಅಶ್ವತ್ಥಾಮನಿಗೆ ಹೇಡಿಯಾದವನನ್ನು (ಕೆಟ್ಟವನನ್ನು) ಕುರಿತು ಹೇಳುವಂತೆ ಅಪ್ರಿಯವಾದ ಮತ್ತು ಅಶ್ಲೀಲವಾದ ಮಾತುಗಳನ್ನು ಹೇಳಿದನು.

ಮಹಾರಾಜ! ಮರ್ಮವನ್ನು ಭೇದಿಸುವ ಮಾತುಗಳಿಂದ ಕೂಡಿದ ಕಠೋರವಾಕ್ಯಗಳನ್ನು ಪಾರ್ಥನಿಂದ ಕೇಳಿದ ಮಹಾಧನುಷ್ಮಂತನಾದ ಅಶ್ವತ್ಥಾಮನು ಸುದೀರ್ಘವಾಗಿ ನಿಟ್ಟುಸಿರುಬಿಟ್ಟನು. ಆ ಸಮಯದಲ್ಲಿ ಅಶ್ವತ್ಥಾಮನಿಗೆ ಪಾರ್ಥನಮೇಲೆ ಕೋಪವೇ ಬಂದಿತು. ಅದರಲ್ಲಿಯೂ ವಿಶೇಷವಾಗಿ ಶ್ರೀಕೃಷ್ಣನ ವಿಷಯದಲ್ಲಿಯೇ ಅವನು ಹೆಚ್ಚು ಕುಪಿತನಾದನು. ಅನಂತರ ಮಹಾಪರಾಕ್ರಮಿಯಾದ ಅಶ್ವತ್ಥಾಮನು ಸಾವಧಾನದಿಂದ ರಥದಲ್ಲಿ ಕುಳಿತು ಆಚಮನಮಾಡಿ ದೇವತೆಗಳಿಂದಲೂ ಎದುರಿಸಲು ಅಸಾಧ್ಯವಾದ ಆಗ್ನೇಯಾಸ್ತ್ರವನ್ನು ಕೈಗೆತ್ತಿಕೊಂಡನು.

**ದೃಶ್ಯಾದೃಶ್ಯಾನರಿಗಣಾನುದ್ದಿಶ್ಯಾಚಾರ್ಯನನ್ದನಃ ।**
**ಸೋಽಭಿಮಂತ್ರ್ಯ ಶರಂ ದೀಪ್ತಂ ವಿಧೂಮಮಿವ ಪಾವಕಮ್ ।**
**ಸರ್ವತಃ ಕ್ರೋಧಮಾವಿಶ್ಯ ಚಿಕ್ಷೇಪ ಪರವೀರಹಾ ॥೧೭॥**

ಶತ್ರುವೀರಹಂತಕನಾದ ಆಚಾರ್ಯಪುತ್ರನು ತನ್ನೆದುರಿಗೆ ಕಾಣಿಸುತ್ತಿದ್ದ ಶತ್ರುಗಳನ್ನೂ, ಪರೋಕ್ಷದಲ್ಲಿದ್ದ ಶತ್ರುಗಳನ್ನೂ ಉದ್ದೇಶಿಸಿ ಧೂಮರಹಿತ ವಾದ ಅಗ್ನಿಯಂತಿದ್ದ, ಜಾಜ್ವಲ್ಯಮಾನವಾಗಿದ್ದ ಬಾಣವನ್ನು ಆಗ್ನೇಯಾಸ್ತ್ರ ಮಂತ್ರದಿಂದ ಅಭಿಮಂತ್ರಿಸಿ, ಕ್ರೋಧದ ಮೂರ್ತಿಯೇ ಆಗಿ ಪರಿವರ್ತನೆಹೊಂದಿ, ಆ ಮಹಾಸ್ತ್ರವನ್ನು ಶತ್ರುಸೈನ್ಯದ ಮೇಲೆ ಪ್ರಯೋಗಿಸಿದನು.

ಆ ಮಹಾಸ್ತ್ರದಿಂದ ಮಹಾಭಯಂಕರವಾದ ಪರಿಣಾಮವೇ ಉಂಟಾಯಿತು.

**ತತಸ್ತುಮುಲಮಾಕಾಶೇ ಶರವರ್ಷಮಜಾಯತ ।**
**ಪಾವಕಾರ್ಚಿಃ ಪರೀತಂ ತತ್ಪಾರ್ಥಮೇವಾಭಿಪುಪ್ಲುವೇ ॥೧೮॥**

ಆಕಾಶದಿಂದ ಭಯಂಕರವಾದ ಬಾಣಗಳ ಮಳೆಯು ಸುರಿಯ ತೊಡಗಿತು. ಆ ಆಗ್ನೇಯಾಸ್ತ್ರವು ಬೆಂಕಿಯ ಜ್ವಾಲೆಯಿಂದ ಸುತ್ತುವರಿದಿದ್ದು ಅರ್ಜುನನ ಮೇಲೆಯೇ ಬಿದ್ದಿತು.

**ಉಲ್ಕಾಶ್ಚ ಗಗನಾತ್ಪೇತುರ್ದಿಶಶ್ಚ ನ ಚಕಾಶಿರೇ ।**
**ತಮಶ್ಚ ಸಹಸಾ ರೌದ್ರಂ ಚಮೂಮವತತಾರ ತಾಮ್ ॥೧೯॥**

ಆಕಾಶದಿಂದ ಬಾಲಚುಕ್ಕೆಗಳು ಬಿದ್ದುವು. ದಿಕ್ಕುಗಳಲ್ಲಿದ್ದ ಪ್ರಕಾಶವು

ಲುಪ್ತವಾಯಿತು. ಮಹಾಭಯಂಕರವಾದ ತಮಸ್ಸು ಶತ್ರುಸೈನ್ಯವನ್ನು ಕೂಡಲೇ ಆವರಿಸಿತು.



ರಕ್ಷಾಂಸಿ ಚ ಪಿಶಾಚಾಶ್ಚ ವಿನೇದುರತಿಸಙ್ಗತಾಃ ।
ವವುಶ್ಚಾಶಿಶಿರಾ ವಾತಾಃ ಸೂರ್ಯೋ ನೈವ ತತಾಪ ಚ ॥೨೦॥

ರಾಕ್ಷಸಗಣಗಳೂ ಮತ್ತು ಪಿಶಾಚಗಣಗಳೂ ಮಿಳಿತವಾಗಿ ಗರ್ಜನೆಮಾಡುತ್ತಿದ್ದುವು. ಬಿಸಿಯಾದ ಗಾಳಿಯು ಬೀಸತೊಡಗಿತು. ಸೂರ್ಯನು ಪ್ರಕಾಶಿಸಲೇ ಇಲ್ಲ.

ವಾಯಸಾಶ್ಚಾಪಿ ಚಕ್ರನ್ದನ್ದಿಕ್ಷು ಸರ್ವಾಸು ಭೈರವಮ್ ।
ರುಧಿರಂ ಚಾಪಿ ವರ್ಷನ್ತೋ ವಿನೇದುಸ್ತೋಯದಾ ದಿವಿ ॥೨೧॥

ಎಲ್ಲ ದಿಕ್ಕುಗಳಲ್ಲಿಯೂ ಕಾಗೆಗಳು ಬಹಳ ಭಯಂಕರವಾಗಿ ಅರಚಿಕೊಳ್ಳುತ್ತಿದ್ದುವು. ಅಂತರಿಕ್ಷದಲ್ಲಿ ಮೇಘಗಳು ರಕ್ತವನ್ನೇ ಸುರಿಸುತ್ತಾ ಗರ್ಜಿಸುತ್ತಿದ್ದುವು.

**ಪಕ್ಷಿಣಃ ಪಶವೋ ಗಾವೋ ವಿನೇದುಶ್ಚಾಪಿ ಸುವ್ರತಾಃ।**
**ಪರಮಂ ಪ್ರಯತಾತ್ಮಾನೋ ನ ಶಾನ್ತಿಮುಪಲೇಭಿರೇ ॥೨೨॥**

ಆ ಸಮಯದಲ್ಲಿ ಪಕ್ಷಿಗಳೂ, ಪ್ರಾಣಿಗಳೂ ಮತ್ತು ಹಸುಗಳೂ ಗಟ್ಟಿಯಾಗಿ ಚೀತ್ಕರಿಸುತ್ತಿದ್ದುವು. ಶ್ರೇಷ್ಠವಾದ ವ್ರತಗಳನ್ನು ಪರಿಪಾಲಿಸುತ್ತಿದ್ದ, ಪವಿತ್ರಾತ್ಮರಾದ ಸಾಧು-ಸತ್ಪುರುಷರು ಅಶಾಂತಭಾವವನ್ನು ಹೊಂದಿದರು. ಅವರ ಮನಸ್ಸು ಅಲ್ಲೋಲ-ಕಲ್ಲೋಲವಾಯಿತು.

**ಭ್ರಾನ್ತಸರ್ವಮಹಾಭೂತಮಾವರ್ತಿತದಿವಾಕರಮ್ ।**
**ತ್ರೈಲೋಕ್ಯಮಭಿಸಂತಪ್ತಂ ಜ್ವರಾವಿಷ್ಟಮಿವಾಭವತ್ ॥೨೩॥**

ಪ್ರಪಂಚದಲ್ಲಿರುವ ಸಕಲಪ್ರಾಣಿಗಳೂ ದಿಗ್ಭ್ರಮೆಗೊಂಡುವು. ಸೂರ್ಯನೂ ಸಹ ಇರುವೆಡೆಯಲ್ಲಿಯೇ ಗರ-ಗರನೆ ತಿರುಗುತ್ತಿರುವನೋ ಎಂಬಂತೆ ಕಾಣುತ್ತಿದ್ದನು. ಮೂರು ಲೋಕದವರೂ ಜ್ವರದಿಂದ ಪೀಡಿತರಾದವರಂತೆ ಪರಿತಪಿಸಿದರು.

**ಅಸ್ತ್ರತೇಜೋಽಭಿಸಂತಪ್ತಾ ನಾಗಾಭೂಮಿಶಯಾಸ್ತಥಾ।**
**ನಿಃಶ್ವಸನ್ತಃ ಸಮುತ್ಪೇತುಸ್ತೇಜೋ ಘೋರಂ ಮುಮುಕ್ಷವಃ ॥೨೪॥**

ಭೂಮಿಯಮೇಲೆ ಮಲಗಿದ್ದ ಸರ್ಪಗಳು ಮಹಾಸ್ತ್ರದ ತೇಜಸ್ಸಿನಿಂದ ಸಂತಾಪಗೊಂಡು ಬುಸುಗುಟ್ಟುತ್ತಾ ಸುಘೋರವಾದ ಅಸ್ತ್ರದ ತೇಜಸ್ಸಿನಿಂದ ಮುಕ್ತಿಯನ್ನು ಪಡೆಯುವ ಆಶಯದಿಂದ ಮೇಲು-ಮೇಲಕ್ಕೆ ನೆಗೆಯುತ್ತಿದ್ದುವು.

**ಜಲಜಾನಿ ಚ ಸತ್ತ್ವಾನಿ ದಹ್ಯಮಾನಾನಿ ಭಾರತ ।**
**ನ ಶಾನ್ತಿಮುಪಜಗ್ಮುರ್ಹಿ ತಪ್ಯಮಾನೈರ್ಜಲಾಶಯೈಃ ॥೨೫॥**

ಆಗ್ನೇಯಾಸ್ತ್ರದ ತೇಜಸ್ಸಿನಿಂದ ಜಲಾಶಯಗಳೂ (ಸಮುದ್ರ-ನದೀ-ನದ-ತಟಾಕಗಳೂ) ಕುದಿಯತೊಡಗಿದುವು. ಅದರಿಂದಾಗಿ ಜಲಚರ

ಪ್ರಾಣಿಗಳು ಕಾದನೀರಿನಿಂದ ದಹಿಸಲ್ಪಡುತ್ತಿದ್ದು ಅಶಾಂತಿಯಿಂದಾಗಿ ಚಡ-ಪಡಿಸುತ್ತಿದ್ದುವು.

**ದಿಗ್ಭ್ಯಃ ಪ್ರದಿಗ್ಭ್ಯಃ ಖಾದ್ಭೂಮೇಃ ಸರ್ವತಃ ಶರವೃಷ್ಟಯಃ ।**
**ಉಚ್ಚಾವಚಾ ನಿಪೇತುರ್ವೈ ಗರುಡಾನಿಲರಂಹಸಃ ॥೨೬॥**

ದಿಕ್ಕುಗಳಿಂದಲೂ, ಉಪದಿಕ್ಕುಗಳಿಂದಲೂ, ಆಕಾಶದಿಂದಲೂ, ಭೂಮಿಯಿಂದಲೂ ಅರ್ಥಾತ್ ಎಲ್ಲ ಕಡೆಗಳಿಂದಲೂ ಬಗೆ-ಬಗೆಯ ಬಾಣಗಳ ವೃಷ್ಟಿಯು ಗರುಡನ ಮತ್ತು ಗಾಳಿಯ ವೇಗಗಳಿಗೆ ಸಮಾನವಾದ ವೇಗದಿಂದ ಬೀಳುತ್ತಿದ್ದುವು.

**ತೈಃ ಶರೈರ್ದ್ರೋಣಪುತ್ರಸ್ಯ ವಜ್ರವೇಗೈಃ ಸಮಾಹತಾಃ ।**
**ಪ್ರದಗ್ಧಾ ರಿಪವಃ ಪೇತುರಗ್ನಿದಗ್ಧಾ ಇವ ದ್ರುಮಾಃ ॥೨೭॥**

ವಜ್ರಾಯುಧದ ವೇಗಕ್ಕೆ ಸಮಾನವಾದ ವೇಗವುಳ್ಳ ದ್ರೋಣರ ಮಗನಾದ ಅಶ್ವತ್ಥಾಮನ ಬಾಣಗಳಿಂದ ಪ್ರಹೃತರಾಗಿ ಭಸ್ಮೀಭೂತರಾದ ಶತ್ರುಸೈನಿಕರು ಬೆಂಕಿಬಿದ್ದು ಭಸ್ಮವಾಗಿ ಹೋದ ವೃಕ್ಷಗಳು ಕೆಳಗುರುಳುವಂತೆ–ಉರುಳಿದರು.

**ದಹ್ಯಮಾನಾ ಮಹಾನಾಗಾಃ ಪೇತುರುರ್ವ್ಯಾಂ ಸಮನ್ತತಃ ।**
**ನದನ್ತೋ ಭೈರವಾನ್ನಾದಾಞ್ಜಲದೋಪಮನಿಃಸ್ವನಾನ್ ॥೨೮॥**

ಆಗ್ನೇಯಾಸ್ತ್ರದಿಂದ ದಹಿಸಲ್ಪಡುತ್ತಿದ್ದ ದೊಡ್ಡ-ದೊಡ್ಡ ಆನೆಗಳು ಮೇಘದ ಗರ್ಜನೆಯೋಪಾದಿಯಲ್ಲಿ ಭಯಂಕರವಾಗಿ ಗರ್ಜನೆಮಾಡುತ್ತಾ ರಣಾಂಗಣದ ಸುತ್ತಲೂ ತೊಪ-ತೊಪನೆ ಬೀಳುತ್ತಿದ್ದುವು. ಅರಣ್ಯದಲ್ಲಿ ದಾವಾಗ್ನಿಯಿಂದ ಸಂವೃತವಾದ ಕಾಡಾನೆಗಳು ಪ್ರಾಣವುಳಿಸಿಕೊಳ್ಳಲು ಸರ್ವತ್ರ ಭ್ರಮಿಸುವಂತೆ–ಕೆಲವು ಆನೆಗಳು ಭಯದಿಂದ ಗಾಬರಿಗೊಂಡವುಗಳಾಗಿ ದಿಕ್ಕಾಪಾಲಾಗಿ ಓಡುತ್ತಿದ್ದುವು.

**ದ್ರುಮಾಣಾಂ ಶಿಖರಾಣೀವ ದಾವದಗ್ಧಾನಿ ಮಾರಿಷ ।**
**ಅಶ್ವವೃನ್ದಾನ್ಯದೃಶ್ಯನ್ತ ರಥವೃನ್ದಾನಿ ಭಾರತ ॥೨೯॥**

**ಅಪತನ್ತ ರಥೌಘಾಶ್ಚ ತತ್ರ ತತ್ರ ಸಹಸ್ರಶಃ ॥೩೦॥**

ಮಹಾರಾಜ! ಆಗ್ನೇಯಮಹಾಸ್ತ್ರದಿಂದ ದಗ್ಧವಾದ ಅಶ್ವಸೈನ್ಯ ಸಮೂಹಗಳೂ ಮತ್ತು ರಥಸೈನ್ಯಸಮೂಹಗಳೂ ದಾವಾಗ್ನಿಯಿಂದ ಭಸ್ಮವಾಗಿಹೋದ ವೃಕ್ಷಗಳ ಅಗ್ರಭಾಗಗಳಂತೆಯೇ ಕಾಣುತ್ತಿದ್ದುವು. ಅಶ್ವತ್ಥಾಮನ ಮಹಾಸ್ತ್ರದಿಂದ ದಗ್ಧವಾದ ಸಾವಿರಾರು ರಥಗಳ ಸಮೂಹಗಳು ಅಲ್ಲಲ್ಲಿ ರಾಶಿ-ರಾಶಿಯಾಗಿ ಬೀಳುತ್ತಿದ್ದುವು.



**ತತ್ಸೈನ್ಯಂ ಭಯಸಂವಿಗ್ನಂ ದದಾಹ ಯುಧಿ ಭಾರತ ।**
**ಯುಗಾನ್ತೇ ಸರ್ವಭೂತಾನಿ ಸಂವರ್ತಕ ಇವಾನಲಃ ॥೩೧॥**

ಪ್ರಳಯಕಾಲದಲ್ಲಿ ಸಂವರ್ತಕಾಗ್ನಿಯು ಎಲ್ಲ ಪ್ರಾಣಿಗಳನ್ನೂ ದಹಿಸಿ ಭಸ್ಮಮಾಡುವಂತೆ ಭಯದಿಂದ ಉದ್ವಿಗ್ನವಾಗಿದ್ದ ಆ ಪಾಂಡವರ ಸೈನ್ಯವನ್ನು

ಆಗ್ನೇಯಾಸ್ತ್ರವು ದಹಿಸಿತು. ಆ ಮಹಾಯುದ್ಧದಲ್ಲಿ ಆಗ್ನೇಯಾಸ್ತ್ರದ ತೇಜಸ್ಸಿನಿಂದ ಪಾಂಡವಸೈನ್ಯವು ಅವ್ಯಾಹತವಾಗಿ ದಹಿಸಲ್ಪಡುತ್ತಿರುವುದನ್ನು ಕಂಡು ಆನಂದಿತರಾದ ಪ್ರಫುಲ್ಲವದನರಾದ ನಿನ್ನ ಕಡೆಯ ಸೈನಿಕರು ಹೃಷ್ಟರಾಗಿ ನಾನಾವಿಧವಾದ ಸಾವಿರಾರು ಮಂಗಳವಾದ್ಯಗಳನ್ನು ಏಕಕಾಲದಲ್ಲಿ ಬಾರಿಸಿದರು.

ಮಹಾರಾಜ! ಲೋಕವೆಲ್ಲವೂ ಕತ್ತಲೆಯಿಂದಲೇ ಆವೃತವಾಗಿದ್ದ ಆ ಸಮಯದಲ್ಲಿ ಪಾಂಡವರ ಸಂಪೂರ್ಣವಾದ ಅಕ್ಷೌಹಿಣೀಸೇನೆಯೂ ಮತ್ತು ಅರ್ಜುನನೂ ಕಾಣಿಸುತ್ತಲೇ ಇರಲಿಲ್ಲ.

**ನೈವ ನಸ್ತಾದೃಶಂ ರಾಜನ್ದೃಷ್ಟಪೂರ್ವಂ ನ ಚ ಶ್ರುತಮ್ ।**
**ಯಾದೃಶಂ ದ್ರೋಣಪುತ್ರೇಣ ಸೃಷ್ಟಮಸ್ತ್ರಮಮರ್ಷಿಣಾ ॥೩೪॥**

ಅಸಹನಶೀಲನಾದ ಅಶ್ವತ್ಥಾಮನು ಆಗ ಸೃಷ್ಟಿಸಿದಂತಹ ಮಹಾಸ್ತ್ರವನ್ನು ನಾವು ಈ ಹಿಂದೆ ಕಂಡೂ ಇರಲಿಲ್ಲ. ಅಂತಹ ಮಹಾಸ್ತ್ರವೊಂದಿದೆಯೆಂಬುದನ್ನು ಕೇಳಿಯೂ ಇರಲಿಲ್ಲ.

ಆ ಸಮಯದಲ್ಲಿ ಅರ್ಜುನನು ಸರ್ವಮಹಾಸ್ತ್ರಗಳನ್ನೂ ಉಪ ಶಮನಗೊಳಿಸುವುದಕ್ಕಾಗಿಯೇ ಪದ್ಮಯೋನಿಯಾದ ಬ್ರಹ್ಮನಿಂದ ನಿರ್ಮಿಸಲ್ಪಟ್ಟಿದ್ದ ಬ್ರಹ್ಮಾಸ್ತ್ರವನ್ನು ಪ್ರಕಟಿಸಿದನು. ಸ್ವಲ್ಪಹೊತ್ತಿನಲ್ಲಿಯೇ ಕವಿದಿದ್ದ ಕತ್ತಲೆಯು ಉಪಶಮನಹೊಂದಿತು. ಶೀತಲವಾದ ಗಾಳಿಯು ಬೀಸತೊಡಗಿತು. ದಿಕ್ಕುಗಳು ನಿರ್ಮಲವಾದುವು. ಆ ಸಮಯದಲ್ಲಿ ನಾವು ಅಲ್ಲೊಂದು ಅದ್ಭುತದೃಶ್ಯವನ್ನು ಕಂಡೆವು, ಮಹಾರಾಜ! ಆಗ್ನೇಯಾಸ್ತ್ರದ ತೇಜಸ್ಸಿನಿಂದ ಸಂಪೂರ್ಣವಾಗಿ ದಗ್ಧವಾಗಿ ಹೋಗಿದ್ದ ಪಾಂಡವರ ಒಂದು ಅಕ್ಷೌಹಿಣೀಸೈನ್ಯವನ್ನು ಗುರುತಿಸುವುದಕ್ಕೆ ಕೂಡ ಸಾಧ್ಯವಾಗುತ್ತಿರಲಿಲ್ಲ. ಆಕಾಶದಲ್ಲಿ ಕತ್ತಲೆಯನ್ನು ಹೋಗಲಾಡಿಸುವ ಸೂರ್ಯ-ಚಂದ್ರರೋ ಪಾದಿಯಲ್ಲಿ ಆ ಮಹಾಸ್ತ್ರದಿಂದ ವಿಮುಕ್ತರಾದ ಮಹಾಧನುಷ್ಮಂತರಾದ, ವೀರರಾದ ಕೇಶವಾರ್ಜುನರು ಒಟ್ಟಿಗೆ ಕಾಣಿಸಿಕೊಂಡರು. ಆಗ್ನೇಯ ಮಹಾಸ್ತ್ರದ ಪ್ರಭಾವವು ಕೇಶವಾರ್ಜುನರ ಮೇಲೆ ಯಾವ ವಿಧವಾದ

ಪರಿಣಾಮವನ್ನೂ ಉಂಟುಮಾಡಿರಲಿಲ್ಲ. ಗಾಂಡೀವಿ-ಕೃಷ್ಣರು ಅಕ್ಷತರಾಗಿದ್ದರು. ಅವರ ಶರೀರದ ಮೇಲೆ ಒಂದು ಗಾಯವೂ ಆಗಿರಲಿಲ್ಲ.



ನಿನ್ನ ಸೈನಿಕರಿಗೆ ಯಾವಾಗಲೂ ಭಯಂಕರವಾಗಿಯೇ ಕಾಣುತ್ತಿದ್ದ, ಅರ್ಜುನನ ಮಹಾರಥವು ಮಹಾಸ್ತ್ರದಿಂದ ವಿಮುಕ್ತವಾಗಿ ಪತಾಕೆ, ಧ್ವಜ, ಕುದುರೆಗಳು, ತೋಳುಮರ ಮತ್ತು ಆಯುಧಗಳೊಡನೆ ನಿನ್ನ ಸೈನ್ಯವನ್ನು ಭಯಗೊಳಿಸುತ್ತಾ ಪುನಃ ಬೆಳಗಿತು. ಪಾಂಡವರು ಪರಮಹೃಷ್ಟರಾಗಿ ಶಂಖ-ಭೇರೀನಿನಾದಗಳೊಡನೆ ಕೋಲಾಹಲಧ್ವನಿಮಾಡಿದರು. ಅಗ್ನಿಯ ಜ್ವಾಲೆಗಳಿಂದ ಸುತ್ತುವರಿಯಲ್ಪಟ್ಟಿದ್ದ ಆ ಮಹಾಸ್ತ್ರವು ಅರ್ಜುನನ ಮೇಲೆ ಹಾರಿಬಿದ್ದುದನ್ನು ಕಂಡಿದ್ದ ಎರಡೂ ಪಕ್ಷಗಳ ಸೈನಿಕರು, ಕೃಷ್ಣಾರ್ಜುನರು ಹತರಾಗಿಹೋದರೆಂದೇ ಭಾವಿಸಿದ್ದರು. ಆಗ್ನೇಯಾಸ್ತ್ರವು ಉಪಶಮನ

ವಾದೊಡನೆಯೇ ಇಬ್ಬರೂ ಜೊತೆಯಲ್ಲಿ ಕಾಣಿಸಿಕೊಂಡುದನ್ನು ನೋಡಿ ಪಾಂಡವರು ಪರಮಹೃಷ್ಟರಾದರು.

ಸ್ವಲ್ಪವೂ ಗಾಯಗೊಳ್ಳದಿದ್ದ, ಸಂತೋಷಭರಿತರಾಗಿದ್ದ ಕೃಷ್ಣಾರ್ಜುನರಿಬ್ಬರೂ ಶಂಖಗಳನ್ನು ಗಟ್ಟಿಯಾಗಿ ಊದಿದರು. ಅದರಿಂದ ಹರ್ಷಿತರಾದ ಪಾಂಡವರನ್ನು ನೋಡಿದ ನಿನ್ನ ಮಕ್ಕಳು ಒಡನೆಯೇ ವ್ಯಥಿತರಾದರು. ಮಹಾತ್ಮರಿಬ್ಬರೂ ಮಹಾಸ್ತ್ರದಿಂದ ವಿಮುಕ್ತರಾದುದನ್ನು ಕಂಡು ಅಶ್ವತ್ಥಾಮನೂ ಬಹಳ ದುಃಖಿತನಾದನು. 'ಇದು ಏಕೆ ಹೀಗಾಯಿತು?'– ಎಂದು ಮುಹೂರ್ತಕಾಲ ಚಿಂತಿಸಿದನು. ಚಿಂತೆಗೂ ಮತ್ತು ಶೋಕಕ್ಕೂ ಆಶ್ರಯಭೂತನಾಗಿದ್ದ ಅಶ್ವತ್ಥಾಮನು ಸ್ವಲ್ಪಹೊತ್ತು ಹಾಗೆಯೇ ಚಿಂತಿಸುತ್ತಿದ್ದು ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಉದಾಸೀನಭಾವವನ್ನು ತಾಳಿದನು.

**ತತೋ ದ್ರೌಣಿರ್ಧನುಸ್ತ್ಯಕ್ತ್ವಾ ರಥಾತ್ಪ್ರಸ್ಕಂದ್ಯ ವೇಗಿತಃ ।**
**ಧಿಗ್ಧಿಕ್ಸರ್ವಮಿದಂ ಮಿಥ್ಯೇತ್ಯುಕ್ತ್ವಾ ಸಮ್ಪ್ರಾದ್ರವದ್ರಣಾತ್ ॥೪೭॥**

ಅನಂತರ ಅಶ್ವತ್ಥಾಮನು ಧನುಸ್ಸನ್ನು ಬಿಸುಟು ರಥದಿಂದ ಕೆಳಕ್ಕೆ ಧುಮುಕಿ 'ಧಿಕ್ಕಾರ-ಧಿಕ್ಕಾರ. ಎಲ್ಲವೂ ಸುಳ್ಳು; ಯಾವುದೂ ಸತ್ಯವಲ್ಲ'– ಎಂದು ಕೂಗಿಕೊಳ್ಳುತ್ತಾ ರಣಾಂಗಣವನ್ನು ಬಿಟ್ಟು ವೇಗದಿಂದ ಓಡಿಹೋದನು.

**ತತಃ ಸ್ನಿಗ್ಧಾಮ್ಬುದಾಭಾಸಂ ವೇದಾವಾಸಮಕಲ್ಮಷಮ್ ।**
**ವೇದವ್ಯಾಸಂ ಸರಸ್ವತ್ಯಾವಾಸಂ ವ್ಯಾಸಂ ದದರ್ಶ ಹ ॥೪೮॥**

ಹೀಗೆ ಅಶ್ವತ್ಥಾಮನು ಓಡಿಹೋಗುತ್ತಿದ್ದಾಗ ದಟ್ಟವಾದ ಕಾಲಮೇಘದ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ, ವೇದಗಳಿಗೆ ಆಶ್ರಯಸ್ಥಾನರಾದ, ಕಲ್ಮಷರಹಿತರಾದ, ವೇದಗಳನ್ನು ವಿಂಗಡಿಸಿದ, ಸರಸ್ವತಿಗೆ ಆವಾಸಸ್ಥಾನರಾದ ವೇದವ್ಯಾಸರನ್ನು ಸಂದರ್ಶಿಸಿದನು.

ಕುರುಕುಲಾವತಂಸನೇ! ತನ್ನ ಮುಂದೆ ವ್ಯಾಸರು ನಿಂತಿರುವುದನ್ನು ನೋಡಿ ಅಶ್ವತ್ಥಾಮನು ಮಹರ್ಷಿಗಳಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ, ಬಹಳ ದೀನನಾಗಿ ಗದ್ಗದಧ್ವನಿಯಿಂದ ಹೇಳಿದನು:

**ಭೋ ಭೋ ಮಾಯಾ ಯದೃಚ್ಛಾ ವಾ ನ ವಿದ್ಮಃ ಕಿಮಿದಂ ಭವೇತ್ ।**
**ಅಸ್ತ್ರಂ ತ್ವಿದಂ ಕಥಂ ಮಿಥ್ಯಾ ಮಮ ಕಶ್ಚ ವ್ಯತಿಕ್ರಮಃ ॥೫೦॥**

"ಭೋ ಭೋ ಮಹರ್ಷಿಗಳೇ! ಇದೇನು ಮಾಯೆಯೋ? ದೈವೇಚ್ಛೆಯೋ? ಸ್ವೇಚ್ಛೆಯೋ? ಇದೇನೆಂಬುದೇ ನನಗೆ ತಿಳಿಯದುದಾಗಿದೆ. ನಾನು ಬಿಟ್ಟ ಅಜೇಯವಾದ ಆಗ್ನೇಯಾಸ್ತ್ರವು ಮಿಥ್ಯೆಯಾಗಿ ಹೇಗೆ ಪರಿಣಮಿಸಿತು? ಹೀಗಾದುದಕ್ಕೆ ನನ್ನದೇನಾದರೂ ದೋಷವಿರುವುದೇ?



**ಅಧರೋತ್ತರಮೇತದ್ವಾ ಲೋಕಾನಾಂ ವಾ ಪರಾಭವಃ ।**
**ಯದಿಮೌ ಜೀವತಃ ಕೃಷ್ಣೌ ಕಾಲೋ ಹಿ ದುರತಿಕ್ರಮಃ ॥೫೧॥**

ಈ ಆಗ್ನೇಯಾಸ್ತ್ರದ ಪ್ರಭಾವವೇನಾದರೂ ತಲೆಕೆಳಗಾಯಿತೇ?

(ಪ್ರಭಾವವು ಮಿಥ್ಯೆಯಾಗಿ ಪರಿಣಮಿಸಿತೇ?) ಸಂಪೂರ್ಣಲೋಕಗಳಿಗೂ ಪರಾಭವವೆಂಬುದೇ ಸಿದ್ಧವಾಗಿರುವುದೇ? ಎಂತಹುದೇ ಮಹತ್ತ್ವದ ಅಸ್ತ್ರವಿದ್ದರೂ ಈ ಲೋಕದಲ್ಲಿ ಜಯಗಳಿಸಲು ಸಾಧ್ಯವೇ ಇಲ್ಲವೇ? ಏಕೆಂದರೆ, ನಾನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನಂತರವೂ ಈ ಕೃಷ್ಣಾರ್ಜುನರಿಬ್ಬರೂ ಜೀವಿಸಿಯೇ ಇದ್ದಾರೆ. ನನ್ನ ಆಗ್ನೇಯಾಸ್ತ್ರವನ್ನೂ ಸುಳ್ಳುಮಾಡಿ ಇವರಿಂದು ಬದುಕಿರುವುದೆಂದರೆ ಇದು ಆಗ್ನೇಯಾಸ್ತ್ರದ ಪರಾಭವವು ಮಾತ್ರವಲ್ಲ; ನನ್ನ ಪರಾಭವವು ಮಾತ್ರವಲ್ಲ; ಎಲ್ಲ ಲೋಕಗಳ ಪರಾಭವವೂ ಆಗಿದೆ. ಆಗ್ನೇಯಾಸ್ತ್ರದಿಂದಲೇ ಮುಕ್ತರಾಗಿರುವ ಇವರನ್ನು ಯಾವ ಲೋಕದ ಯಾವ ಜನರೂ ಏನೂ ಮಾಡಲಾರರು. ಕಾಲವು ನಿಶ್ಚಯವಾಗಿಯೂ ಅನತಿಕ್ರಮಣೀಯವಾದುದೇ. ಕಾಲವನ್ನು ಅತಿಕ್ರಮಿಸಲು ಯಾರಿಂದಲೂ ಸಾಧ್ಯವೇ ಇಲ್ಲ.

**ನಾಸುರಾ ನ ಚ ಗನ್ಧರ್ವಾ ನ ಪಿಶಾಚಾ ನ ರಾಕ್ಷಸಾಃ ।**
**ನ ಸರ್ಪಾ ಯಕ್ಷಪತಗಾ ನ ಮನುಷ್ಯಾಃ ಕಥಂಚನ ॥೫೨॥**

**ಉತ್ಸಹನ್ತೇಽನ್ಯಥಾ ಕರ್ತುಮೇತದಸ್ತ್ರಂ ಮಯೇರಿತಮ್ ।**
**ತದಿದಂ ಕೇವಲಂ ಹತ್ವಾ ಶಾನ್ತಮಕ್ಷೌಹಿಣೀಂ ಜ್ವಲತ್ ॥೫೩॥**

ನನ್ನಿಂದ ಬಿಡಲ್ಪಟ್ಟ ಈ ಮಹಾಸ್ತ್ರವನ್ನು ಅಸುರ-ಗಂಧರ್ವರಾಗಲೀ, ಪಿಶಾಚ-ರಾಕ್ಷಸರಾಗಲೀ, ಸರ್ಪ-ಯಕ್ಷ-ಪಕ್ಷಿಗಳಾಗಲೀ, ಮನುಷ್ಯರಾಗಲೀ ವ್ಯರ್ಥಗೊಳಿಸಲು ಖಂಡಿತವಾಗಿಯೂ ಸಮರ್ಥರಲ್ಲ. ಇವರಾರಿಗೂ ಈ ಮಹಾಸ್ತ್ರವನ್ನು ಎದುರಿಸಲು ಕೂಡ ಸಾಧ್ಯವಿಲ್ಲ. ಇಂತಹ ಅಮೋಘವಾದ ಜಾಜ್ವಲ್ಯಮಾನವಾದ ಮಹಾಸ್ತ್ರವು ಒಂದು ಅಕ್ಷೌಹಿಣೀಸೈನ್ಯವನ್ನು ಮಾತ್ರವೇ ಸಂಹರಿಸಿ ಉಪಶಮನಗೊಂಡಿತು.

ಪರಮದಾರುಣವಾದ, ಸಕಲರನ್ನೂ ಸಂಹಾರಮಾಡುವ ಈ ಮಹಾಸ್ತ್ರವನ್ನು ನಾನು ಪ್ರಯೋಗಿಸಿದೆನು. ಆದರೆ ಮರಣಧರ್ಮವಿರುವ (ಮರ್ತ್ಯರಾದ) ಕೇಶವಾರ್ಜುನರನ್ನು ಈ ಮಹಾಸ್ತ್ರವು ಯಾವ ಕಾರಣಕ್ಕಾಗಿ ಸಂಹರಿಸಲಿಲ್ಲ? ಭಗವನ್! ನನ್ನಿಂದ ಪ್ರಶ್ನಿಸಲ್ಪಟ್ಟ ನೀವು ಈ ವಿಷಯ

ವನ್ನು ಯಥಾವತ್ತಾಗಿ ಹೇಳಿರಿ. ನಿಮ್ಮಿಂದ ಈ ವಿಷಯವನ್ನು ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ."

"ಅಶ್ವತ್ಥಾಮನೇ! ನಿನಗಾಗಿರುವ ವಿಸ್ಮಯದ ಅನುಭವದಿಂದಾಗಿ ನೀನು ಬಹಳ ಮಹತ್ತರವಾದ ಪ್ರಶ್ನೆಯನ್ನೇ ಕೇಳಿರುವೆ. ನಿನ್ನ ಪ್ರಶ್ನೆಗೆ ಸಂಬಂಧಿಸಿದಂತೆ ಎಲ್ಲ ವಿಷಯಗಳನ್ನೂ ನಿನ್ನೊಡನೆ ಹೇಳುತ್ತೇನೆ. ಮನಸ್ಸನ್ನು ಸಮಾಧಾನಕ್ಕೆ ತಂದುಕೊಂಡು ನಾನು ಹೇಳುವುದನ್ನು ಕೇಳು:

**ಯೋಽಸೌ ನಾರಾಯಣೋ ನಾಮ ಪೂರ್ವೇಷಾಮಪಿ ಪೂರ್ವಜಃ ।**
**ಅಜಾಯತ ಚ ಕಾರ್ಯಾರ್ಥಂ ಪುತ್ರೋ ಧರ್ಮಸ್ಯ ವಿಶ್ವಕೃತ್ ॥**

ನಮ್ಮ ಪೂರ್ವಜರಿಗೂ ಪೂರ್ವಜನಾದ, ಈ ಜಗತ್ತಿಗೇ ಕಾರಣಭೂತನಾದ ನಾರಾಯಣನೆಂಬ ಹೆಸರಿನ ಭಗವಂತನು ವಿಶೇಷಕಾರ್ಯಾರ್ಥವಾಗಿ ಒಮ್ಮೆ ಧರ್ಮನ ಪುತ್ರನಾಗಿ ಅವತರಿಸಿದನು.

ಅಗ್ನಿಗೆ ಮತ್ತು ಪ್ರಜ್ವಲಿಸುವ ಸೂರ್ಯನಿಗೆ ಸಮಾನವಾದ ಕಾಂತಿಯನ್ನು ಹೊಂದಿದ್ದ ಮಹಾತೇಜಸ್ವಿಯಾದ ಆ ನಾರಾಯಣನು ಹಿಮವತ್ಪರ್ವತ ಪ್ರದೇಶದಲ್ಲಿ ಕೈಗಳೆರಡನ್ನೂ ಮೇಲೆತ್ತಿಕೊಂಡು ಅತಿಕಠೋರವಾದ ತಪಸ್ಸನ್ನು ಮಾಡುತ್ತಿದ್ದನು.

**ಷಷ್ಟಿಂ ವರ್ಷಸಹಸ್ರಾಣಿ ತಾವನ್ತ್ಯೇವ ಶತಾನಿ ಚ ।**
**ಅಶೋಷಯತ್ತದಾಽತ್ಮಾನಂ ವಾಯುಭಕ್ಷೋಽಮ್ಬುಜೇಕ್ಷಣಃ ॥೬೦॥**

ಅಂಬುಜಾಕ್ಷನಾದ ಶ್ರೀಮನ್ನಾರಾಯಣನು ಅರುವತ್ತಾರು ಸಾವಿರ ವರ್ಷಗಳ ಪರ್ಯಂತವಾಗಿ ವಾಯುವನ್ನೇ ಆಹಾರವನ್ನಾಗಿ ತೆಗೆದುಕೊಳ್ಳುತ್ತಾ ತನ್ನ ತಪಸ್ಸಿನಿಂದ ಶರೀರವನ್ನು ಕೃಶಗೊಳಿಸಿದನು. ಪುನಃ ಅವನು ಒಂದು ಲಕ್ಷದ ಮೂವತ್ತೆರಡು ಸಾವಿರ ವರ್ಷಗಳ ಪರ್ಯಂತವಾಗಿ ಅದೇ ವಿಧವಾದ ತಪಸ್ಸುಮಾಡಿ ತನ್ನ ಅಮಿತವಾದ ತೇಜಸ್ಸಿನಿಂದ ಭೂಮಿಗೂ ಮತ್ತು ಆಕಾಶಕ್ಕೂ ಮಧ್ಯದಲ್ಲಿದ್ದ ಸ್ಥಳವನ್ನು ತುಂಬಿದನು.

**ಸ ತೇನ ತಪಸಾ ತಾತ ಬ್ರಹ್ಮಭೂತೋ ಯದಾಭವತ್ ।**
**ತತೋ ವಿಶ್ವೇಶ್ವರಂ ಯೋನಿಂ ವಿಶ್ವಸ್ಯ ಜಗತಃ ಪತಿಮ್ ॥೬೧॥**

**ದದರ್ಶ ಭೃಶದುರ್ಧರ್ಷಂ ಸರ್ವದೇವೈರಭಿಷ್ಟುತಮ್ ।**
**ಅಣೀಯಾಂಸಮಣುಭ್ಯಶ್ಚ ಬೃಹದ್ಭ್ಯಶ್ಚ ಬೃಹತ್ತಮಮ್ ॥೬೨॥**

ವತ್ಸ ಅಶ್ವತ್ಥಾಮಾ! ಅಂತಹ ಕಠೋರವಾದ ತಪಸ್ಸಿನಿಂದ ನಾರಾಯಣನು ಬ್ರಹ್ಮಸ್ವರೂಪಸ್ಥಿತಿಯಲ್ಲಿರುವಾಗ ವಿಶ್ವಕ್ಕೇ ಯೋನಿಸ್ವರೂಪನಾದ, ಸಕಲಜಗತ್ತುಗಳಿಗೂ ಪತಿಯಾದ, ಅತ್ಯಂತದುರ್ಧರ್ಷನಾದ, ಸರ್ವದೇವತೆಗಳಿಂದಲೂ ಸ್ತುತ್ಯನಾದ, ಅಣುಗಳಿಗೂ ಅಣುವಾದ (ಅಣೋರಣೀಯನಾದ) ದೊಡ್ಡವುಗಳಿಗೂ ಅತಿದೊಡ್ಡವನಾದ (ಮಹತೋಮಹೀಯನಾದ) ವಿಶ್ವೇಶ್ವರನನ್ನು ಸಂದರ್ಶಿಸಿದನು.

**ರುದ್ರಮೀಶಾನಮೃಷಭಂ ಹರಂ ಶಮ್ಭುಂ ಕಪರ್ದಿನಮ್ ।**
**ಚೇಕಿತಾನಂ ಪರಾಂ ಯೋನಿಂ ತಿಷ್ಠತೋ ಗಚ್ಛತಶ್ಚ ಹ ॥೬೩॥**

ದುಃಖವನ್ನು ದೂರಗೊಳಿಸುವ ರುದ್ರನನ್ನು, ಎಲ್ಲ ಲೋಕಪಾಲಕರಿಗೂ ಶ್ರೇಷ್ಠನಾದ ಈಶಾನನನ್ನು, ಪಾಪಹಾರಕನಾದ ಹರನನ್ನು, ಕಲ್ಯಾಣಪ್ರದನಾದ ಶಂಭುವನ್ನು, ಜಟಾಜೂಟಧರನಾದ ಕಪರ್ದಿಯನ್ನು, ಜ್ಞಾನಿಯಾದ ಚೇಕಿತಾನನನ್ನು, ಸ್ಥಾವರ-ಜಂಗಮಗಳೆರಡಕ್ಕೂ ಉಗಮಸ್ಥಾನನಾದ ಪರಶಿವನನ್ನು ನಾರಾಯಣನು ಸಂದರ್ಶಿಸಿದನು.

**ದುರ್ವಾರಣಂ ದುರ್ದೃಶಂ ತಿಗ್ಮಮನ್ಯುಂ**
**ಮಹಾತ್ಮಾನಂ ಸರ್ವಹರಂ ಪ್ರಚೇತಸಮ್ ।**
**ದಿವ್ಯಂ ಚಾಪಮಿಷುಧೀ ಚಾದದಾನಂ**
**ಹಿರಣ್ಯವರ್ಮಾಣಮನನ್ತವೀರ್ಯಮ್ ॥೬೪॥**

ಯಾರಿಂದಲೂ ತಡೆಯಲು ಅಸಾಧ್ಯನಾದ, ನೋಡಲು ಅಸಾಧ್ಯನಾದ, ಬಹಳತೀಕ್ಷ್ಣವಾದ ಕೋಪವುಳ್ಳ ಮಹಾತ್ಮನಾದ, ವಿಶ್ವದಲ್ಲಿರುವ ಸರ್ವವಸ್ತುವನ್ನೂ ಪ್ರಳಯಕಾಲದಲ್ಲಿ ನಾಶಗೊಳಿಸುವ, ಸಂತೋಷಯುಕ್ತವಾದ ಮನಸ್ಸಿನಿಂದ ಕೂಡಿರುವ, ದಿವ್ಯವಾದ ಧನುಸ್ಸನ್ನೂ ಮತ್ತು ಬತ್ತಳಿಕೆಗಳನ್ನೂ ಧರಿಸಿರುವ, ಸುವರ್ಣಮಯವಾದ ಕವಚವನ್ನು ಧರಿಸಿರುವ, ಪರಿಮಿತಿಯಿಲ್ಲದ ವೀರ್ಯದಿಂದ ಕೂಡಿರುವ ವಿಶ್ವೇಶ್ವರನನ್ನು ನಾರಾಯಣನು ಸಂದರ್ಶಿಸಿದನು.

ಪಿನಾಕಿನಂ ವಜ್ರಿಣಂ ದೀಪ್ತಶೂಲಂ
ಪರಶ್ವಧಿಂ ಗದಿನಂ ಚಾಯತಾಸಿಮ್ ।
ಶುಭ್ರಂ ಜಟಿಲಂ ಮುಸಲಿನಂ ಚನ್ದ್ರಮೌಲಿಂ
ವ್ಯಾಘ್ರಾಜಿನಂ ಪರಿಘಿಣಂ ದಣ್ಡಪಾಣಿಮ್ ॥೬೫॥

ಪಿನಾಕಹಸ್ತನಾದ, ವಜ್ರಪಾಣಿಯಾದ, ಪ್ರದೀಪ್ತನಾದ, ಶೂಲವನ್ನು ಹಿಡಿದಿರುವ, ಗಂಡುಗೊಡಲಿಯನ್ನೂ-ಗದೆಯನ್ನೂ-ದೀರ್ಘವಾದ ಕತ್ತಿಯನ್ನೂ-ಮುಸಲವನ್ನೂ ಹೊಂದಿರುವ, ಶುಭ್ರವರ್ಣನಾದ, ಜಟಾಧಾರಿಯಾದ, ತಲೆಯಲ್ಲಿ ಚಂದ್ರನನ್ನು ಧರಿಸಿರುವ, ವ್ಯಾಘ್ರದ ಚರ್ಮವನ್ನು ಹೊದೆದಿರುವ, ಪರಿಘವನ್ನು ಧರಿಸಿರುವ, ದಂಡಪಾಣಿಯಾದ ವಿಶ್ವೇಶ್ವರನನ್ನು ನಾರಾಯಣನು ಸಂದರ್ಶಿಸಿದನು.

ಶುಭಾಙ್ಗದಂ ನಾಗಯಜ್ಞೋಪವೀತಂ
ವಿಶ್ವೈರ್ಗಣೈಃ ಶೋಭಿತಂ ಭೂತಸಂಘೈಃ ।
ಏಕೀಭೂತಂ ತಪಸಾಂ ಸಂನಿಧಾನಂ
ವಯೋಽತಿಗೈಃ ಸುಷ್ಟುತಮಿಷ್ಟವಾಗ್ಭಿಃ ॥೬೬॥

ಮಂಗಳಕರವಾದ ಅಂಗದವನ್ನು ಧರಿಸಿರುವ, ನಾಗರಹಾವನ್ನೇ ಯಜ್ಞೋಪವೀತವನ್ನಾಗಿ ಮಾಡಿಕೊಂಡಿರುವ, ಪಾರಿಷದಸ್ವರೂಪರಾದ ಸಂಪೂರ್ಣಭೂತಸಮುದಾಯಗಳಿಂದ ಸುಶೋಭಿತನಾದ, ಅದ್ವಿತೀಯನಾದ, ತಪಸ್ಸುಗಳಿಗೆ ಏಕೈಕ ನಿಧಿಪ್ರಾಯನಾದ, ವೃದ್ಧಜನರಿಂದ ಪ್ರಿಯವಚನಗಳಿಂದ ಸ್ತುತಿಸಲ್ಪಡುವ ವಿಶ್ವೇಶ್ವರನನ್ನು ನಾರಾಯಣನು ಸಂದರ್ಶಿಸಿದನು.

ಜಲಂ ದಿಶಂ ಖಂ ಕ್ಷಿತಿಂ ಚನ್ದ್ರಸೂರ್ಯೌ
ತಥಾ ವಾಯ್ವಗ್ನೀ ಪ್ರಮಿಮಾಣಂ ಜಗಚ್ಚ ।
ನಾಲಂ ದ್ರಷ್ಟುಂ ಯಂ ಜನಾ ಭಿನ್ನವೃತ್ತಾ
ಬ್ರಹ್ಮದ್ವಿಷಘ್ನಮಮೃತಸ್ಯ ಯೋನಿಮ್ ॥೬೭॥

ನೀರು, ದಿಕ್ಕುಗಳು, ಆಕಾಶ, ಪೃಥ್ವಿ, ಚಂದ್ರ-ಸೂರ್ಯರು, ವಾಯು ಅಗ್ನಿ, ಜಗತ್ತು–ಇವುಗಳೆಲ್ಲವನ್ನೂ ಅಳೆಯುವ ಕಾಲಸ್ವರೂಪನಾದ, ಬ್ರಹ್ಮದ್ವೇಷಿಗಳ ವಿನಾಶಕನಾದ, ಮೋಕ್ಷಕ್ಕೆ ಮುಖ್ಯಕಾರಣನಾದ, ದುರಾಚಾರಿ

ಗಳಾದವರಿಂದ ಸಂದರ್ಶಿಸಲ್ಪಡದ (ದುರಾಚಾರಿಗಳಿಗೆ ದುರ್ಲಭನಾದ) ವಿಶ್ವೇಶ್ವರನನ್ನು ನಾರಾಯಣನು ಸಂದರ್ಶಿಸಿದನು.

ಯಂ ಪಶ್ಯನ್ತಿ ಬ್ರಾಹ್ಮಣಾಃ ಸಾಧುವೃತ್ತಾಃ
ಕ್ಷೀಣೇ ಪಾಪೇ ಮನಸಾ ವೀತಶೋಕಾಃ ।
ತಂ ನಿಷ್ಟತನ್ತಂ ತಪಸಾ ಧರ್ಮಮೀಡ್ಯಂ
ತದ್ಭಕ್ತ್ಯಾ ವೈ ವಿಶ್ವರೂಪಂ ದದರ್ಶ
ದೃಷ್ಟ್ವಾ ಚೈನಂ ವಾಙ್ಮನೋಬುದ್ಧಿ ದೇಹೈಃ
ಸಂಹೃಷ್ಟಾತ್ಮಾ ಮುಮುದೇ ವಾಸುದೇವಃ ॥೬೮॥

ಶೋಕರಹಿತರಾದ, ಸದಾಚಾರಸಂಪನ್ನರಾದ ಬ್ರಾಹ್ಮಣರು ಪಾಪವು ಕ್ಷೀಣಿಸಿದನಂತರ ಆ ಮಹಾನುಭಾವನನ್ನು ಮನಸ್ಸಿನಿಂದ ಕಾಣುತ್ತಾರೆ. ಪರಮೇಶ್ವರನಲ್ಲಿಯೇ ನಿಷ್ಠನಾಗಿದ್ದ ವಾಸುದೇವನು ತಪಸ್ಸಿನಿಂದಲೂ ಮತ್ತು ಭಕ್ತಿಯಿಂದಲೂ ವಿಶ್ವರೂಪನಾದ ಪರಮೇಶ್ವರನನ್ನು ನೋಡಿದನು. ವಾಕ್ಕು, ಮನಸ್ಸು, ಬುದ್ಧಿ ಮತ್ತು ದೇಹಗಳಿಂದಲೂ ಸಂತುಷ್ಟಾತ್ಮನಾಗಿ ವಿಶ್ವೇಶ್ವರನನ್ನು ನೋಡಿ ವಾಸುದೇವನು ಆನಂದಾನುಭವವನ್ನು ಪಡೆದುಕೊಂಡನು.

ಅಕ್ಷಮಾಲಾಪರಿಕ್ಷಿಪ್ತಂ ಜ್ಯೋತಿಷಾಂ ಪರಮಂ ನಿಧಿಮ್ ।
ತತೋ ನಾರಾಯಣೋ ದೃಷ್ಟ್ವಾ ವವನ್ದೇ ವಿಶ್ವಸಮ್ಭವಮ್ ॥೬೯॥

ರುದ್ರಾಕ್ಷಮಾಲೆಗಳಿಂದ ವಿಭೂಷಿತನಾಗಿದ್ದ, ತೇಜಸ್ಸುಗಳಿಗೆ ನಿಧಿ ಪ್ರಾಯನಾದ, ವಿಶ್ವಜನಕನಾದ ವಿಶ್ವೇಶ್ವರನನ್ನು ನೋಡಿ ನಾರಾಯಣ ಋಷಿಯು ಅಭಿವಾದನಪೂರ್ವಕವಾಗಿ ನಮಸ್ಕರಿಸಿದನು.

ವರದಂ ಪೃಥುಚಾರ್ವಙ್ಗ್ಯಾ ಪಾರ್ವತ್ಯಾ ಸಹಿತಂ ಪ್ರಭುಮ್ ।
ಕ್ರೀಡಮಾನಂ ಮಹಾತ್ಮಾನಂ ಭೂತಸಙ್ಘಗಣೈರ್ವೃತಮ್ ।
ಅಜಮೀಶಾನಮವ್ಯಕ್ತಂ ಕಾರಣಾತ್ಮಾನಮಚ್ಯುತಮ್ ॥೭೦॥

ಹೃಷ್ಟ-ಪುಷ್ಟಳಾಗಿಯೂ ಮತ್ತು ಮನೋಹರಳಾಗಿಯೂ ಇದ್ದ ಪಾರ್ವತಿಯೊಡನೆ ಕ್ರೀಡಿಸುತ್ತಿದ್ದ, ವರದನಾದ, ಮಹಾತ್ಮನಾದ, ಭೂತ

ಸಮೂಹಗಳಿಂದ ಪರಿವೃತನಾಗಿದ್ದ, ಜನ್ಮರಹಿತನಾದ, *ಈಶಾನನಾದ, ಎಲ್ಲರಿಗೂ ಸ್ವಾಮಿಯಾದ, ಅವ್ಯಕ್ತನಾದ, ಕಾರಣಸ್ವರೂಪನಾದ, ಅಚ್ಯುತನಾದ ವಿಶ್ವೇಶ್ವರನನ್ನು ನಾರಾಯಣನು ಅಭಿವಾದನಪೂರ್ವಕವಾಗಿ ನಮಸ್ಕರಿಸಿದನು.

**ಅಭಿವಾದ್ಯಾಥ ರುದ್ರಾಯ ಸದ್ಯೋಽನ್ಧಕನಿಪಾತಿನೇ ।**
**ಪದ್ಮಾಕ್ಷಸ್ತಂ ವಿರೂಪಾಕ್ಷಮಭಿತುಷ್ಟಾವ ಭಕ್ತಿಮಾನ್ ॥೭೧॥**

ಪರಮಭಕ್ತನಾದ ಪದ್ಮಾಕ್ಷನಾದ ಶ್ರೀಮನ್ನಾರಾಯಣನು ಅಂಧಕಾಸುರ ಸಂಹಾರಕನಾದ ರುದ್ರನಿಗೆ ಒಡನೆಯೇ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ವಿರೂಪಾಕ್ಷನನ್ನು ಸ್ತುತಿಸಿದನು.

**ತ್ವತ್ಸಮ್ಭೂತಾಭೂತಕೃತೋ ವರೇಣ್ಯ**
**ಗೋಪ್ತಾರೋಽಸ್ಯಭುವನಸ್ಯಾದಿದೇವ ।**
**ಆವಿಶ್ಯೇಮಾಂ ಧರಣೀಂ ಯೇಽಭ್ಯರಕ್ಷ-**
**ನ್ಪುರಾ ಪುರಾಣೀಂ ತವ ದೇವಸೃಷ್ಟಿಮ್ ॥೭೨॥**

“ಸರ್ವಶ್ರೇಷ್ಠನೇ! ಆದಿದೇವನೇ! ಈ ಪ್ರಪಂಚಕ್ಕೆ ಬಂದು ನಿನ್ನ ಪುರಾತನವಾದ ದಿವ್ಯಸೃಷ್ಟಿಯನ್ನು ಯಾರು ರಕ್ಷಿಸುತ್ತಿದ್ದರೋ, ಈಗ ಈ ವಿಶ್ವವನ್ನು ಯಾರು ರಕ್ಷಿಸುತ್ತಿದ್ದಾರೆಯೋ ಮತ್ತು ಈ ವಿಶ್ವವೆಲ್ಲವನ್ನೂ ಯಾರು ಸೃಷ್ಟಿಮಾಡಿದರೋ–ಅವರೆಲ್ಲರೂ ನಿನ್ನಿಂದ ಹುಟ್ಟಿದವರೇ ಆಗಿದ್ದಾರೆ. (ಜಗತ್ತಿನ ಉತ್ಪತ್ತಿಗೆ ಕಾರಣನಾದ ಪ್ರಜಾಪತಿ, ರಕ್ಷಣೆಗೆ ಕಾರಣವಾದ ವಿಷ್ಣು-ಇವರಿಬ್ಬರೂ ನಿನ್ನಿಂದಲೇ ಜನ್ಮತಾಳಿದ್ದಾರೆ.)

**ಸುರಾಸುರಾನ್ನಾಗರಕ್ಷಃ ಪಿಶಾಚ-**
**ನ್ನರಾನ್ಸುಪರ್ಣಾನಥ ಗನ್ಧರ್ವಯಕ್ಷಾನ್ ।**
**ಪೃಥಗ್ವಿಧಾನ್ಭೂತಸಂಘಾಂಶ್ಚ ವಿಶ್ವಾಂ-**
**ಸ್ತ್ವತ್ಸಮ್ಭೂತಾನ್ವಿದ್ಮ ಸರ್ವಾಂಸ್ತಥೈವ ॥೭೩॥**

---

* ಈಶಾನಃ - ಶಿವನ ಎಂಟು ಮೂರ್ತಿಗಳಲ್ಲಿ ಒಂದು ಮೂರ್ತಿಗೆ ಈಶಾನ ಎಂದು ಹೆಸರು. ಶಿವನನ್ನು ಅಷ್ಟಮೂರ್ತಿ ಎಂದೂ ಕರೆಯುತ್ತಾರೆ. ಅಷ್ಟಮೂರ್ತಿಗಳು: ಶರ್ವ, ಭವ, ರುದ್ರ, ಉಗ್ರ, ಭೀಮ, ಪಶುಪತಿ, ಮಹಾದೇವ ಮತ್ತು ಈಶಾನ.

ಐನ್ದ್ರಂ ಯಾಮ್ಯಂ ವಾರುಣಂ ವೈತ್ತಪಾಲ್ಯಂ
ಪೈತ್ರಂ ತ್ವಾಷ್ಟ್ರಂ ಕರ್ಮ ಸೌಮ್ಯಂ ಚ ತುಭ್ಯಮ್ ॥

ದೇವತೆಗಳು, ಅಸುರರು, ನಾಗ-ರಾಕ್ಷಸ-ಪಿಶಾಚರು, ಮನುಷ್ಯರು, ಗರುಡನೇ ಮೊದಲಾದ ಪಕ್ಷಿಗಳು, ಗಂಧರ್ವ-ಯಕ್ಷರು ಇವರೇ ಅಲ್ಲದೇ ನಾನಾಪ್ರಕಾರವಾದ ಸರ್ವಪ್ರಾಣಿವಿಶೇಷಗಳೂ ನಿನ್ನಿಂದಲೇ ಹುಟ್ಟಿವೆಯೆಂದು ನಾನು ತಿಳಿಯುತ್ತೇನೆ. ಈ ಕಾರಣದಿಂದಲೇ ಇಂದ್ರನಿಗೆ ಸಂಬಂಧಿಸಿದ ಕರ್ಮಗಳು, ಯಮ-ವರುಣ-ಕುಬೇರರಿಗೆ ಸಂಬಂಧಿಸಿದ ಕರ್ಮಗಳು, ಪಿತೃಗಳಿಗೆ ಸಂಬಂಧಿಸಿದ ಕರ್ಮಗಳು, ತ್ವಷ್ಟ್ರಾ ಮತ್ತು ಸೋಮನಿಗೆ ಸಂಬಂಧಿಸಿದ ಕರ್ಮಗಳು ಪರ್ಯಾಯದಲ್ಲಿ ನಿನಗೇ ಸೇರುತ್ತವೆಯೆಂದು ನಾನು ಭಾವಿಸಿದ್ದೇನೆ. (ನೀನೇ ಅವರೆಲ್ಲರಲ್ಲಿಯೂ ಅವಿರ್ಭವಿಸಿರುವೆ ಯಾದುದರಿಂದ ಇಂದ್ರಾದಿಗಳನ್ನು ಕುರಿತು ಮಾಡುವ ಯಜ್ಞ-ದಾನ-ತಪಸ್ಸುಗಳು ನಿನ್ನನ್ನೇ ಸೇರುತ್ತವೆ.)

ರೂಪಂ ಜ್ಯೋತಿಃ ಶಬ್ದ ಆಕಾಶ ವಾಯುಃ
ಸ್ಪರ್ಶಃ ಸ್ವಾದ್ಯಂ ಸಲಿಲಂ ಗನ್ಧ ಉರ್ವೀ ।
ಕಾಲೋ ಬ್ರಹ್ಮಾ ಬ್ರಹ್ಮ ಚ ಬ್ರಾಹ್ಮಣಾಶ್ಚ
ತ್ವತ್ಸಮ್ಭೂತಂ ಸ್ಥಾಸ್ನು ಚರಿಷ್ಣು ಚೇದಮ್ ॥೭೪॥

ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳೂ, ಆಕಾಶ-ವಾಯು-ನೀರು-ತೇಜಸ್ಸುಗಳೂ, ಭೂಮಿಯೂ, ಕಾಲ, ಬ್ರಹ್ಮಾ, ವೇದ, ಬ್ರಾಹ್ಮಣರೂ ಮತ್ತು ಸ್ಥಾವರ-ಜಂಗಮಗಳೂ ನಿನ್ನಿಂದಲೇ ಹುಟ್ಟಿವೆ.

ಅದ್ಭ್ಯಃ ಸ್ತೋಕಾ ಯಾನ್ತಿ ಯಥಾ ಪೃಥಕ್ತ್ವಂ
ತಾಭಿಶ್ಚೈಕ್ಯಂ ಸಂಕ್ಷಯೇ ಯಾನ್ತಿ ಭೂಯಃ ।
ಏವಂ ವಿದ್ವಾನ್ಪ್ರಭವಂ ಚಾಪ್ಯಯಂ ಚ
ಮತ್ವಾ ಭೂತಾನಾಂ ತವ ಸಾಯುಜ್ಯಮೇತಿ ॥೭೫॥

ಜಲರಾಶಿಯಿಂದ ಆವಿಯ ರೂಪದಲ್ಲಿ ಹೊರಟ ತುಂತುರುಗಳು ಸ್ವಲ್ಪಕಾಲದವರೆಗೆ ನಾನಾರೂಪಗಳಲ್ಲಿ ಪ್ರತ್ಯೇಕವಾಗಿದ್ದು ಪ್ರಳಯವಾಗುತ್ತಲೇ ಜಲರಾಶಿಯಲ್ಲಿ ಒಂದಾಗಿ ಸೇರಿಕೊಂಡುಬಿಡುವಂತೆ–ಸಕಲ ಪ್ರಾಣಿ

ಗಳೂ ನಿನ್ನಿಂದಲೇ ಹೊರಟು ಪುನಃ ನಿನ್ನಲ್ಲಿಯೇ ಲಯವಾಗುವುವೆಂಬ ರಹಸ್ಯವನ್ನರಿತು ವಿದ್ವಾಂಸನಾದವನು ನಿನ್ನ ದಿವ್ಯಸಾಯುಜ್ಯವನ್ನು ಹೊಂದುತ್ತಾನೆ.

*ದಿವ್ಯಾಮೃತೌ ಮಾನಸೌ ದ್ವೌ ಸುಪರ್ಣೌ
ವಾಚಾ ಶಾಖಾಃ ಪಿಪ್ಪಲಾ ಸಪ್ತ ಗೋಪಾಃ ।
ದಶಾಪ್ಯನ್ಯೇ ಯೇ ಪುರಂ ಧಾರಯನ್ತಿ
ತ್ವಯಾ ಸೃಷ್ಟಾಸ್ತ್ವಂ ಹಿ ತೇಭ್ಯಃ ಪರೋ ಹಿ ॥೭೭॥

ದಿವ್ಯವಾಗಿಯೂ ಅಮೃತಸ್ವರೂಪವಾಗಿಯೂ ಇರುವ ಸುಂದರವಾದ ರೆಕ್ಕೆಗಳುಳ್ಳ ಎರಡು ಪಕ್ಷಿಗಳು (ಈಶ್ವರ-ಜೀವ) ಅಂತಃಕರಣದಲ್ಲಿ ನೆಲೆಸಿವೆ. ಸಪ್ತಧಾತುರೂಪವಾದ (ಮಹತ್-ಅಹಂಕಾರ-ಪಂಚತನ್ಮಾತ್ರಗಳು) ಏಳು ಅಶ್ವತ್ಥವೃಕ್ಷಗಳಿವೆ. ಇವು ಆ ಎರಡು ಪಕ್ಷಿಗಳನ್ನೂ ರಕ್ಷಿಸುತ್ತವೆ. ವೇದಗಳೇ ಆ ಅಶ್ವತ್ಥವೃಕ್ಷಗಳ ವಿವಿಧಶಾಖೆಗಳಾಗಿವೆ ಮತ್ತು ಹತ್ತು (ಇಂದ್ರಿಯಗಳು) ಪಾಂಚಭೌತಿಕಾತ್ಮವಾದ ಈ ಶರೀರರೂಪವಾದ ಪುರವನ್ನು ಧಾರಣೆ ಮಾಡಿವೆ. ಇವುಗಳೆಲ್ಲವನ್ನೂ ನೀನೇ ಸೃಷ್ಟಿಸಿದವನು. ಆದರೆ ಇವುಗಳೆಲ್ಲಕ್ಕಿಂತಲೂ (ಅವುಗಳಿಂದಲೂ) ನೀನು ಬೇರೆಯವನಾಗಿರುವೆ.

---

* ಈ ಶ್ಲೋಕವು ಸಮನ್ವಯಮಾಡಲು ಸ್ವಲ್ಪಕಷ್ಟ. "ದ್ವಾಸುಪರ್ಣಾ ಸಯುಜಾ ಸಖಾಯೌ ಸಮಾನಂ ವೃಕ್ಷಂ ಪರಿಷಸ್ವಜಾತೇ'' 'ಸರ್ವದಾ ಜೊತೆಯಲ್ಲಿರುವ ಎರಡು ಪಕ್ಷಿಗಳು ಒಂದೇ ವೃಕ್ಷವನ್ನು ಆಲಿಂಗಿಸಿಕೊಂಡಿವೆ'-ಎಂಬ ಅರ್ಥಬರುವ ಮಂಡೂಕೋಪ ನಿಷತ್ತಿನ ಮಂತ್ರದಂತೆ ಇದೆ ಈ ಶ್ಲೋಕ. ಅದರೆ ಅರ್ಥದಲ್ಲಿ ಒಂದಕ್ಕೊಂದಕ್ಕೆ ಅಂತರವಿದೆ. ವೃಕ್ಷಕ್ಕೆ ಬದಲಾಗಿ ಇಲ್ಲಿ 'ಮಾನಸೌ' ಮನಸ್ಸಿನಲ್ಲಿರತಕ್ಕುವುಗಳು-ಮನುಷ್ಯನ ಅಂತಃಕರಣ ದಲ್ಲಿರತಕ್ಕುವುಗಳು ಎಂದು ಅರ್ಥಮಾಡಬಹುದಾಗಿದೆ. 'ದಿವ್ಯಾಮೃತೌ' ದಿವ್ಯವಾದುವುಗಳು ಮತ್ತು ಅಮೃತಸ್ವರೂಪವಾದುವುಗಳು ಎಂದು ಇದಕ್ಕೆ ನಾವು ಅರ್ಥಮಾಡಿರುತ್ತೇವೆ. ನೀಲಕಂಠರ ವ್ಯಾಖ್ಯೆಯಿರುವ ಪಾಠದಲ್ಲಿ ದಿವ್ಯಾವೃತೌ ಎಂಬುದಾಗಿದೆ. ಅದನ್ನವರು ವ್ಯಾಖ್ಯಾನಿಸುತ್ತಾ 'ದಿವಿ ಹಾರ್ದಾಕಾಶೇ ಭವೌ ದಿವ್ಯೌ'-ಹೃದಯಕಾಶದಲ್ಲಿರತಕ್ಕುವುಗಳು. ದಿವ್ಯಗಳು. ಆವೃತೌ-ದಿವ್ಯಾವೃತಾವೀಶ್ವರಜೀವೌ- ದಿವ್ಯಾಕಾಶದಿಂದ ಆವೃತವಾಗಿರತಕ್ಕುವು ಗಳು ಎರಡು ಪಕ್ಷಿಗಳು ಜೀವೇಶ್ವರರು; ಮಾನಸೌ- ತಥಾಪಿ-ಹೃದಯಾಕಾಶದಿಂದ ಆವೃತವಾಗಿದ್ದರೂ ಮನಸ್ಯೇವ-ಮನಸ್ಸಿನಲ್ಲಿಯೇ ಶಾಸ್ತೃ-ಶಾಸ್ಯಭಾವೇನ ಅಭಿವ್ಯಕ್ತೌ-ಶಾಸ್ಯ-ಶಾಸಕಭಾವದಿಂದ ಅಭಿವ್ಯಕ್ತರಾಗಿರುವ ದ್ವೌ ಸುಪರ್ಣೌ ಪಕ್ಷಿವದುಪಾಧ್ಯಸಂಗಿನೌ

**ಭೂತಂ ಭವ್ಯಂ ಭವಿತಾ ಚಾಪ್ಯಧೃಷ್ಯಂ**
**ತ್ವತ್ಸಮ್ಭೂತಾ ಭುವನಾನೀಹ ವಿಶ್ವಾ ।**
**ಭಕ್ತಂ ಚ ಮಾಂ ಭಜಮಾನಂ ಭಜಸ್ವ**
**ಮಾ ರೀರಿಷೋ ಮಾಮಹಿತಾಹಿತೇನ ॥೭೭॥**

ಎದುರಿಸಲು ಅಸಾಧ್ಯವಾದ (ಅನತಿಕ್ರಮಣೀಯವಾದ) ಭೂತ ಭವಿಷ್ಯದ್ವರ್ತಮಾನ ಕಾಲಗಳು, ಸಂಪೂರ್ಣ ವಿಶ್ವಗಳು ಮತ್ತು ಭುವನಗಳು ನಿನ್ನಿಂದಲೇ ಹುಟ್ಟಿರತಕ್ಕುವುಗಳು. ನಿನ್ನನ್ನು ಸ್ತೋತ್ರಮಾಡುತ್ತಿರುವ ಭಕ್ತನಾದ ನನ್ನನ್ನು ಪರಿಪಾಲಿಸು. ಅಹಿತಕಾರಿಗಳಾದ ಕಾಮಾದಿಗಳನ್ನು ನನ್ನ ಮನಸ್ಸಿನಲ್ಲಿಡುವುದರ ಮೂಲಕವಾಗಿ ನನ್ನನ್ನು ಹಿಂಸಿಸಬೇಡ. **(ಅಹಿತಾಹಿತೇನ ಅಹಿತಾನಾಂ= ಕಾಮಾದೀನಾಂ ಅಹಿತಂ=ಆಧಾನಂ ಮಚ್ಚೇತಸಿ ಪ್ರವೇಶಃ ತೇನ ಮಾರೀರಿಷಃ)**

**ಆತ್ಮಾನಂ ತ್ವಾಮಾತ್ಮನೋಽನನ್ಯಬೋಧಂ**
**ವಿದ್ವಾನೇವಂ ಗಚ್ಛತಿ ಬ್ರಹ್ಮಶುಕ್ರಮ್ ।**
**ಅಸ್ತೌಷಂ ತ್ವಾಂ ತವ ಸಮ್ಮಾನಮಿಚ್ಛ-**
**ನ್ವಿಚಿನ್ವನ್ವೈ ಸದೃಶಂ ದೇವವರ್ಯ ।**
**ಸುದುರ್ಲಭಾನ್ದೇಹಿ ವರಾನ್ಮಮೇಷ್ಟಾ-**
**ನಭಿಷ್ಟುತಃ ಪ್ರವಿಕಾರ್ಷೀಶ್ಚ ಮಾಯಾಮ್ ॥೭೮॥**

---

ತೋರಿಕೆಗೆ ಎರಡು ಪಕ್ಷಿಗಳು ಸೇರಿ ಕುಳಿತಿರುವಂತೆ ಕುಳಿತಿರುವ (ಜೀವೇಶ್ವರ-ಪರಮೇಶ್ವರರು) **ತಯೋಃ ಅಧಿಷ್ಠೇಯಾಃ ಸಪ್ತಪಿಪ್ಪಲಾಃ ಅಶ್ವತ್ಥಾಃ ವಾಚಾ ಶಾಖಾಃ ವಾಙ್ಮಾತ್ರೇಣ ಶಾಖಾಃ (ಶಾಖಾವತ್ ಖೇ ಆಕಾಶೇ ಶೇರತೇ ಇತಿ ಶಾಖಾಃ ಅನೃತಾ ಇತ್ಯರ್ಥಃ)**-ಏಳು ಅಶ್ವತ್ಥಗಳು ಕೇವಲ ಮಾತಿನಲ್ಲಿಯೇ ಇರತಕ್ಕುವುಗಳು. ಕಣ್ಣಿಗೆ ಕಾಣಿಸತಕ್ಕುವುಗಳಲ್ಲ. ಅವುಗಳು ಯಾವುವೆಂದರೆ **ಮಹದಹಂಕಾರ ತನ್ಮಾತ್ರಾಖ್ಯಾಃ ಪ್ರಕೃತೀ ಮಾನಸೌ ಪ್ರಾಗುಕ್ತೌ ತಾಭ್ಯಾಂ ಸಹ ಏಕಾದಶ**-ಎರಡು ಪಕ್ಷಿಗಳು (ಜೀವಾತ್ಮರು-ಪರಮಾತ್ಮರು ಶಬ್ದಸ್ಪರ್ಶರೂಪರಸಗಂಧ ಎಂಬ ಐದು ತನ್ಮಾತ್ರಗಳು, ಮಹತ್ತು, ಅಹಂಕಾರ, ಪ್ರಕೃತಿ, ಮನಸ್ಸು ಒಟ್ಟು ಹನ್ನೊಂದು; **ತೇಷಾಮೇಕಾದಶಾನಾಂ ಗೋಪ್ತಾರಃ** ಈ ಹನ್ನೊಂದನ್ನು ರಕ್ಷಿಸತಕ್ಕುವುಗಳು **ದಶೇನ್ದ್ರಿಯಾಣಿ** ಹತ್ತು ಇಂದ್ರಿಯಗಳು. ಶ್ರೋತ್ರ, ತ್ವಕ್ಕು, ಚಕ್ಷುಸ್ಸು, ಜಿಹ್ವೆ ಮತ್ತು ನಾಸಿಕ ಇವುಗಳು, ಐದು ಜ್ಞಾನೇಂದ್ರಿಯಗಳು. ವಾಕ್ಕು, ಪಾಣಿ, ಪಾದ, ಪಾಯು ಮತ್ತು ಉಪಸ್ಥ ಇವು ಐದು

ಆತ್ಮಸ್ವರೂಪನಾದ ನಿನ್ನನ್ನು ತನಗಿಂತಲೂ ಬೇರೆಯವನಲ್ಲವೆಂಬುದನ್ನು ತಿಳಿದುಕೊಂಡ ವಿದ್ವಾಂಸನು ಈ ವಿಷಯವನ್ನೇ ಮನಸ್ಸಿನಲ್ಲಿ ಅನುಸಂಧಾನಮಾಡುತ್ತಾ ವಿಶುದ್ಧವಾದ ಬ್ರಹ್ಮವಸ್ತುವನ್ನು ಹೊಂದುತ್ತಾನೆ. ದೇವಶ್ರೇಷ್ಠನೇ! ನಾನು ನಿನ್ನನ್ನು ಗೌರವಿಸಿ ಸತ್ಕರಿಸಬೇಕೆಂಬ ಇಚ್ಛೆಯಿಂದ ಸ್ತೋತ್ರಮಾಡಿದ್ದೇನೆ. ಸ್ತುತಿಗೆ ಸರ್ವಥಾ ಯೋಗ್ಯನಾದ ಪರಮೇಶ್ವರನಾದ ನಿನ್ನನ್ನು ನಾನು ಬಹಳ ಕಾಲದಿಂದಲೂ ಅನ್ವೇಷಣೆಮಾಡುತ್ತಲೇ ಇದ್ದೆನು. ಇಂದು ನೀನು ನನಗೆ ದರ್ಶನವಿತ್ತಿರುವೆ. ನನ್ನಿಂದ ಸ್ತುತನಾದ ನೀನು ಮಾಯೆಯನ್ನು ದೂರಗೊಳಿಸಿ, ನನಗೆ ಇಷ್ಟವಾದ, ಬೇರೆ ಯಾರಿಂದಲೂ ಪಡೆದುಕೊಳ್ಳಲು ಅಸಾಧ್ಯವಾದ ವರವನ್ನು ದಯಪಾಲಿಸು."

ದ್ರೋಣಪುತ್ರ! ನಾರಾಯಣಮಹರ್ಷಿಯು ಹೀಗೆಂದು ಪ್ರಾರ್ಥಿಸಲಾಗಿ, ಅಚಿಂತ್ಯರೂಪನಾದ, ಪಿನಾಕಧರನಾದ, ನೀಲಕಂಠನಾದ ಭಗವಾನ್

---

ಕರ್ಮೇಂದ್ರಿಯಗಳು. ತಾನಿ ಹಿ ಸಂಸಾರಜಾಶ್ವತ್ಥಮೂಲಾವಾಸನಾ ವರ್ಧಯನ್ತಿ. ಊರ್ಧ್ವಮೂಲವಾದ ಅಶ್ವತ್ಥವೆಂಬ ಸಂಸಾರದಲ್ಲಿ ಹುಟ್ಟಿ ಪ್ರಾಪಂಚಿಕವಾಸನೆಯನ್ನು ಹೆಚ್ಚಿಸತಕ್ಕುವುಗಳೂ ಈ ಹತ್ತು ಇಂದ್ರಿಯಗಳೇ ಆಗಿವೆ. ಯೇ ಪುರಂ ಪಾಂಚಭೌತಿಕಂ ಪುರಂ ಧಾರಯಂತಿ ಈ ಹತ್ತು ಇಂದ್ರಿಯಗಳು ಪಾಂಚಭೌತಿಕವಾದ ಶರೀರವನ್ನು ಧರಿಸಿರುತ್ತವೆ. (ಶರೀರದಲ್ಲಿರುತ್ತವೆ.) **ತೇಭ್ಯಶ್ಚ ಷಡ್ವಿಂಶತೇಃ ಅನ್ಯಂ**-ಈ ಇಪ್ಪತ್ತಾರು ತತ್ತ್ವಗಳಿಗಿಂತ ಮಿಗಿಲಾದವನು ಪರಮಾತ್ಮ. **ಸಪ್ತವಿಂಶಸ್ತ್ವಮಸಿ** ಇಪ್ಪತ್ತೇಳನೆಯವನಾದ ಪರಮಾತ್ಮನು ನೀನೇ ಆಗಿರುವೆ-ಇದು ಶ್ರೀ ನೀಲಕಂಠರ ವ್ಯಾಖ್ಯೆಯಾಗಿದೆ.ಈ ಶ್ಲೋಕಕ್ಕೆ ಪಾಠಾಂತರವೂ ಇದೆ. **ದಿವ್ಯಾಮೃತೌ ಮಾನಸೌ ದ್ವೌ ಸುಪರ್ಣಾವವಾಕ್ಶಾಖಂ ಪಿಪ್ಪಲಃ ಸಪ್ತ ಗೋಪ್ತಾ। ದಿಶಾಪ್ಯನ್ಯೇ ಯೇ ಪುರಂ ಧಾರಯನ್ತಿ ತ್ವಯಾ ಸೃಷ್ಟಾಸ್ತೇ ಹಿ ತೇಭ್ಯಃ ಪರಸ್ತ್ವಮ್।** ಇಲ್ಲಿರುವ ವ್ಯತ್ಯಾಸವೆಂದರೆ ಮುಖ್ಯವಾಗಿ **ಅವಾಕ್ಶಾಖಃ ಪಿಪ್ಪಲಃ**-ಇದು ಊರ್ಧ್ವಮೂಲಮವಾಕ್ಶಾಖಂ ಎಂಬ ಗೀತೆಯ ಶ್ಲೋಕಕ್ಕೆ ಅನುಗುಣವಾಗಿದೆ. ಪಿಪ್ಪಲಃ ಅಶ್ವತ್ಥವೃಕ್ಷವೆಂಬ ಸಂಸಾರವೃಕ್ಷವು ಊರ್ಧ್ವಮೂಲವಾಗಿಯೂ ಅವಾಕ್ಶಾಖವಾಗಿಯೂ ಕೆಳಭಾಗದಲ್ಲಿ ರೆಂಬೆಗಳುಳ್ಳದ್ದಾಗಿಯೂ ಇರತಕ್ಕುದು. ಮುಂದಕ್ಕೆ **ಸಪ್ತಗೋಪಾಃ** ಎಂಬುದೂ ಸರಿಯಾಗಿ ಹೊಂದಿಕೊಳ್ಳುತ್ತದೆ. ಇದುವರೆಗಿನ ನಿರೂಪಣೆಯಲ್ಲಿ ಪಂಚತನ್ಮಾತ್ರೆಗಳನ್ನೂ ಮಹದಹಂಕಾರಗಳನ್ನೂ ಏಳು ಅಶ್ವತ್ಥವೃಕ್ಷಗಳಿಗೆ ಹೋಲಿಸಿರುವುದು ಎಲ್ಲೂ ಕಂಡುಬಂದಿರುವುದಿಲ್ಲ. **'ವಾಚಾಶಾಖಾಃ'**-ವಾಙ್ಮಾತ್ರೇಣ ಶಾಖಾಃ-ಕೇವಲ ಮಾತಿನಿಂದ ಶಾಖೆಗಳಾಗಿರುವ-ಈ ವಾಕ್ಯಕ್ಕೆ ಸಮಂಜಸವಾಗಿ ಅರ್ಥಮಾಡಬೇಕಾದರೆ ಬಹಳ ಕಷ್ಟವೇ ಸರಿ. ವ್ಯಾಖ್ಯಾನಕಾರರೂ ಬಹಳ ಶ್ರಮಿಸಿದ್ದಾರೆ. ಆದರೂ ಅರ್ಥವೂ ಸಮಂಜಸವಾಯಿತು ಎಂಬ ಭಾವನೆಯು ಬರುವುದಿಲ್ಲ. ಆದುದರಿಂದ ಪಾಠಾಂತರದ ಪಾಠವೇ ಸರಿ-ಎಂಬ ಅಭಿಪ್ರಾಯವು ನಮ್ಮದಾಗಿದೆ.

ಶಿವನು ವರಾರ್ಹನಾದ ದೇವಮುಖ್ಯನಾದ ನಾರಾಯಣನಿಗೆ ಅನೇಕವರಗಳನ್ನು ದಯಪಾಲಿಸಿದನು. ಅನಂತರ ನಾರಾಯಣನನ್ನು ಕುರಿತು ಶಿವನು ಹೇಳಿದನು:

**ಮತ್ಪ್ರಸಾದಾನ್ಮನುಷ್ಯೇಷು ದೇವಗನ್ಧರ್ವಯೋನಿಷು ।**
**ಅಪ್ರಮೇಯಬಲಾತ್ಮಾ ತ್ವಂ ನಾರಾಯಣ ಭವಿಷ್ಯಸಿ ॥೮೦॥**

"ನಾರಾಯಣ! ನೀನು ನನ್ನ ವರಪ್ರಸಾದದಿಂದಾಗಿ ಮನುಷ್ಯರಲ್ಲಿ ಮತ್ತು ದೇವ-ಗಂಧರ್ವರಲ್ಲಿ ಅಪ್ರಮೇಯವಾದ ಬಲಪರಾಕ್ರಮವುಳ್ಳವನಾಗುವೆ.

**ನ ಚ ತ್ವಾಂ ಪ್ರಸಹಿಷ್ಯನ್ತಿ ದೇವಾಸುರಮಹೋರಗಾಃ ।**
**ನ ಪಿಶಾಚಾ ನ ಗನ್ಧರ್ವಾ ನ ಯಕ್ಷಾ ನ ಚ ರಾಕ್ಷಸಾಃ ॥೮೧॥**

**ನ ಸುಪರ್ಣಾಸ್ತಥಾ ನಾಗಾ ನ ಚ ವಿಶ್ವೇ ವಿಯೋನಿಜಾಃ ।**
**ನ ಕಶ್ಚಿತ್ತ್ವಾಂ ಚ ದೇವೋಽಪಿ ಸಮರೇಷು ವಿಜೇಷ್ಯತಿ ॥೮೨॥**

ದೇವಾಸುರರು, ದೊಡ್ಡ ದೊಡ್ಡ ಸರ್ಪಗಳು, ಪಿಶಾಚ-ಗಂಧರ್ವ-ಯಕ್ಷ-ರಾಕ್ಷಸರು, ಸುಪರ್ಣ-ನಾಗರು, ಸಿಂಹ-ವ್ಯಾಘ್ರಾದಿ ಇತರ ಪಶು ಪ್ರಾಣಿಗಳೂ ಸಹ ನಿನ್ನ ರಭಸವನ್ನು ಸಹಿಸಿಕೊಳ್ಳಲಾರರು. ಯಾವ ದೇವತೆಯೇ ಆಗಲಿ, ನಿನ್ನನ್ನು ಯುದ್ಧದಲ್ಲಿ ಜಯಿಸಲಾರನು.

**ನ ಶಸ್ತ್ರೇಣ ನ ವಜ್ರೇಣ ನಾಗ್ನಿನಾ ನ ಚ ವಾಯುನಾ ।**
**ನ ಚಾರ್ದ್ರೇಣ ನ ಶುಷ್ಕೇಣ ತ್ರಸೇನ ಸ್ಥಾವರೇಣ ಚ ॥೮೩॥**

**ಕಶ್ಚಿತ್ತವ ರುಜಾಂ ಕರ್ತಾ ಮತ್ಪ್ರಸಾದಾತ್ಕಥಂಚನ ।**
**ಅಪಿ ವೈ ಸಮರಂ ಗತ್ವಾ ಭವಿಷ್ಯಸಿ ಮಮಾಧಿಕಃ ॥೮೪॥**

ಶಸ್ತ್ರ, ವಜ್ರಾಯುಧ, ಅಗ್ನಿ, ವಾಯು, ಹಸಿಯಾದುದು, ಒಣಗಿದುದು, ಸ್ಥಾವರ-ಜಂಗಮಗಳು ಯಾವುವೂ ನನ್ನ ಅನುಗ್ರಹದಿಂದಾಗಿ ನಿನ್ನನ್ನು ಗಾಯಗೊಳಿಸಲಾರವು. ನೀನು ಸಮರಾಂಗಣಕ್ಕೆ ಹೋದ

ಸಮಯದಲ್ಲಿ ನಾನೇ ನಿನ್ನನ್ನು ಎದುರಿಸಿದರೂ ನನಗಿಂತಲೂ ನೀನೇ ಅಧಿಕಬಲಶಾಲಿಯಾಗಿರುವೆ. (ಯುದ್ಧದಲ್ಲಿ ನೀನೇ ಜಯಗಳಿಸುವೆ.)"

ಅಶ್ವತ್ಥಾಮನೇ! ಶ್ರೀಕೃಷ್ಣನು ಬಹಳ ಮೊದಲೇ ನಾರಾಯಣ ಮುನಿಯಾಗಿ ಶಿವನನ್ನು ಕುರಿತು ತಪಸ್ಸುಮಾಡಿ ಈ ವರಗಳನ್ನು ಪಡೆದುಕೊಂಡಿದ್ದನು. ಈ ವಿಷಯವನ್ನು ನೀನು ಗ್ರಹಿಸಬೇಕಾಗಿದೆ. ಶಿವನಿಂದ ವರಪಡೆದ ಆ ದೇವನೇ ಈಗ ಶ್ರೀಕೃಷ್ಣನಾಗಿ ತನ್ನ ಮಾಯೆಯಿಂದ ಜಗತ್ತನ್ನು ವಿಮೋಹಗೊಳಿಸುತ್ತಾ ಸಂಚರಿಸುತ್ತಿದ್ದಾನೆ.

**ತಸ್ಯೈವ ತಪಸಾ ಜಾತಂ ನರಂ ನಾಮ ಮಹಾಮುನಿಮ್ ।**
**ತುಲ್ಯಮೇತೇನ ದೇವೇನ ತಂ ಜಾನೀಹ್ಯರ್ಜುನಂ ಸದಾ ॥೮೬॥**

ನಾರಾಯಣಮಹರ್ಷಿಯ ತಪಸ್ಸಿನಿಂದಲೇ ಹುಟ್ಟಿದ ನರನೆಂಬ ಮಹಾಮುನಿಯೂ ಸಹ ದೇವದೇವನಾದ ಶ್ರೀಕೃಷ್ಣನಿಗೆ ಸಮಾನವಾದ ಪರಾಕ್ರಮವುಳ್ಳವನೇ ಆಗಿದ್ದಾನೆ. ನಾರಾಯಣನ ಜೊತೆಯಲ್ಲಿ ನರನಾಗಿದ್ದವನೇ ಈಗ ಅರ್ಜುನನಾಗಿ ಅವತರಿಸಿದ್ದಾನೆ.

**ತಾವೇತೌ ಪೂರ್ವದೇವಾನಾಂ ಪರಮೋಪಚಿತಾವೃಷೀ ।**
**ಲೋಕಯಾತ್ರಾವಿಧಾನಾರ್ಥಂ ಸಂಜಾಯೇತೇ ಯುಗೇ ಯುಗೇ ॥೮೭॥**

ಈ ಇಬ್ಬರು ನರ-ನಾರಾಯಣಮಹರ್ಷಿಗಳು ಪೂರ್ವದೇವತೆಗಳಿಗಿಂತಲೂ ಅಧಿಕರಾದವರು. ಲೋಕಗಳನ್ನು ಧರ್ಮಪಥದಲ್ಲಿ ಹೋಗುವಂತೆ ಮಾಡುವಸಲುವಾಗಿ ಯುಗ-ಯುಗಗಳಲ್ಲಿಯೂ ಅವತರಿಸುತ್ತಿರುತ್ತಾರೆ.

ಮಹಾಮತಿಯೇ! ನೀನೂ ಸಹ ಪೂರ್ವಜನ್ಮದಲ್ಲಿ ಭಗವಾನ್ ನಾರಾಯಣನಂತೆಯೇ ಪ್ರಾಜ್ಞನಾಗಿ ಸತ್ಕರ್ಮಗಳನ್ನೂ, ದೊಡ್ಡ-ದೊಡ್ಡ ತಪಸ್ಸುಗಳನ್ನೂ ಮಾಡುತ್ತಾ, ಅದರ ಪ್ರಭಾವದಿಂದ ತೇಜಸ್ಸನ್ನೂ ಕೋಪವನ್ನೂ ಹೊಂದಿದವನಾಗಿ, ರುದ್ರನ ಭಕ್ತನಾಗಿ, ಸಂಪೂರ್ಣಜಗತ್ತೂ ಶಂಕರಮಯವಾಗಿರುವುದೆಂದು ತಿಳಿದು, ಶಂಕರನನ್ನು ಒಲಿಸಿಕೊಳ್ಳುವ ಸಲುವಾಗಿ ನಾನಾವಿಧವಾದ ಕಠೋರವಾದ ನಿಯಮ-ವ್ರತಾದಿಗಳಿಂದ ದೇಹವನ್ನು ದುರ್ಬಲಗೊಳಿಸಿರುವೆ.

**ಶುಭ್ರಮತ್ರ ಭವಾನ್ಕೃತ್ವಾ ಮಹಾಪುರುಷವಿಗ್ರಹಮ್ ।**
**ಈಜಿವಾಂಸ್ತ್ವಂ ಜಪ್ಯೈರ್ಹೋಮ್ಯೈರುಪಹಾರ್ಯೈಶ್ಚ ಮಾನದ ॥೯೦॥**

ಮಾನದನೇ! ನೀನು ಪರಮಪುರುಷನಾದ ಭಗವಾನ್ ಶಂಕರನ ಉಜ್ವಲವಾದ ಮೂರ್ತಿಯನ್ನು ಪ್ರತಿಷ್ಠಾಪಿಸಿ ಹೋಮ-ಜಪ ಮತ್ತು ಉಪಹಾರಗಳಿಂದ ಪರಶಿವನನ್ನು ಆರಾಧಿಸುತ್ತಿದ್ದೆ.

**ಜನ್ಮಕರ್ಮತಪೋಯೋಗಾಸ್ತಯೋಸ್ತವ ಚ ಪುಷ್ಕಲಾಃ ।**
***ತಾಭ್ಯಾಂ ಲಿಙ್ಗೇಽರ್ಚಿತೋ ದೇವಸ್ತ್ವಯಾರ್ಚಾಯಾಂ ಯುಗೇ ಯುಗೇ॥೯೨॥**

ಈ ರೀತಿಯಲ್ಲಿ ನಿನ್ನ ಮತ್ತು ನರ-ನಾರಾಯಣರ ಜನ್ಮ, ಕರ್ಮ, ತಪಸ್ಸು ಮತ್ತು ಯೋಗಗಳು ಸಮೃದ್ಧವಾಗಿವೆ. ಅವರಿಬ್ಬರೂ ಲಿಂಗರೂಪಿಯಾದ ಮಹಾದೇವನನ್ನು ಅರ್ಚಿಸಿದರು. ನೀನು ಪ್ರತಿಮಾರೂಪದ ವಿಶ್ವೇಶ್ವರನನ್ನು ಪೂಜಿಸಿದೆ. ಪ್ರತಿಯೊಂದು ಯುಗದಲ್ಲಿಯೂ ಈಶ್ವರನ ಪೂಜೆಯನ್ನು ನೀವು ಇದೇ ರೀತಿಯಲ್ಲಿ ಮಾಡಿಕೊಂಡುಬಂದಿರುವಿರಿ.

ವಿದ್ವಾಂಸನೇ! ಈ ರೀತಿಯಲ್ಲಿ ಪೂರ್ವಜನ್ಮದ ಶರೀರದಲ್ಲಿ ನಿನ್ನಿಂದ

---

* ಈ ಶ್ಲೋಕದಲ್ಲಿ ನರ-ನಾರಾಯಣರ ಶಿವಾರ್ಚನೆಯ ಅತಿಶಯವನ್ನು ಈ ಶ್ಲೋಕವು ಸೂಚಿಸುವುದೆಂದು ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ. ತವ ತಯೋಶ್ಚ ವಿಶೇಷಹೇತುಂ ಶೃಣು ಇತ್ಯಾಹ ತಾಭ್ಯಾಮಿತಿ ಲಿಙ್ಗೇ = ಸೂಕ್ಷ್ಮಶರೀರೇ ಅರ್ಚಾಯಾಂ ಪ್ರತಿಮಾಯಾಂ ಅಯಂ ಭಾವಃ ಚತುರ್ಣಾಂ ಸನ್ನಿಧಾನೇನ ಯತ್ಫಲಂ ತದಶಾಶ್ವತಂ ದ್ವಯೋಸ್ತು ಸನ್ನಿಧಾನೇನ ಶಾಶ್ವತಂ ಪ್ರಾಪ್ಯತೇ ಪದಮ್-ಎಂದು ದಕ್ಷಸ್ಮೃತಿಯಲ್ಲಿ ಹೇಳಿರುವಂತೆ ನಾಲ್ಕರ ಸನ್ನಿಧಾನದಿಂದ ಪ್ರಾಪ್ತವಾಗುವ ಫಲವು ಅಶಾಶ್ವತವಾದುದು. ಎರಡರ ಸನ್ನಿಧಾನದಿಂದ ಪ್ರಾಪ್ತವಾಗುವ ಫಲವು ಶಾಶ್ವತವಾದುದು. ಪ್ರತಿಮೆಯಲ್ಲಿ ಶಿವನನ್ನು ಅರ್ಚಿಸುವವರಿಗೆ ಆತ್ಮ-ಮನಸ್ಸು-ಇಂದ್ರಿಯ ಮತ್ತು ವಿಷಯಗಳ ಸಾನ್ನಿಧ್ಯವಿರುತ್ತದೆ. ಲಿಙ್ಗೇ ತದರ್ಚತಸ್ತು ಆತ್ಮಮನಸೋಃ ದ್ವಯೋರೇವ ಸಾನ್ನಿಧ್ಯಮಸ್ತಿ ಲಿಂಗದಲ್ಲಿ ಅರ್ಚಿಸುವವರಿಗೆ ಆತ್ಮ ಮತ್ತು ಮನಸ್ಸುಗಳ ಸಾನ್ನಿಧ್ಯವು ಮಾತ್ರವೇ ಇರುತ್ತದೆ. ತಯೋರರ್ಚಕತ್ವಸಾಮ್ಯೇಽಪಿ ಪ್ರಕಾರಭೇದಾತ್ಫಲಭಾಗಿತಾ. ನರ-ನಾರಾಯಣರೂ ಮತ್ತು ಅಶ್ವತ್ಥಾಮನೂ ಹಿಂದಿನ ಯುಗಗಳಲ್ಲಿ ಶಿವಾರ್ಚನೆಯನ್ನೇ ಮಾಡುತ್ತಿದ್ದರೂ ಇಬ್ಬರ ಅರ್ಚನೆಯಲ್ಲಿಯೂ ಭೇದವಿದ್ದುದರಿಂದ ಅವರಿಗೆ ಲಭಿಸಿದ ಫಲದಲ್ಲಿಯೂ ಭೇದವುಂಟಾಯಿತು.

ಪೂಜಿತನಾದ ಶಂಕರನು ಪರಮಸಂತುಷ್ಟನಾಗಿ ನಿನ್ನ ಮನೋವಾಂಛಿತವಾದ ಅನೇಕ ವರಗಳನ್ನೂ ದಯಪಾಲಿಸಿದ್ದಾನೆ.

**ಸರ್ವರೂಪಂ ಭವಂ ಜ್ಞಾತ್ವಾ ಲಿಙ್ಗೇ ಯೋऽರ್ಚಯತಿ ಪ್ರಭುಮ್।**
**ಆತ್ಮಯೋಗಾಶ್ಚ ತಸ್ಮಿನ್ವೈ ಶಾಸ್ತ್ರಯೋಗಾಶ್ಚ ಶಾಶ್ವತಾಃ ॥೯೩॥**

ಯಾರು ಭಗವಂತನಾದ ಶಂಕರನನ್ನು ಸರ್ವಸ್ವರೂಪನೆಂದು ಭಾವಿಸಿ ಲಿಂಗದ ರೂಪದಲ್ಲಿ ಪೂಜೆಯನ್ನು ಮಾಡುತ್ತಾರೆಯೋ–ಅವರಲ್ಲಿ ಸನಾತನವಾದ ಆತ್ಮಯೋಗವೂ (ಆತ್ಮ-ಪರಮಾತ್ಮತತ್ತ್ವಜ್ಞಾನವೂ) ಶಾಸ್ತ್ರ ಯೋಗವೂ (ವೇದ-ಶಾಸ್ತ್ರಗಳ ಜ್ಞಾನವೂ) ಪ್ರತಿಷ್ಠಿತವಾಗಿರುತ್ತದೆ.

**ಏವಂ ದೇವಾ ಯಜನ್ತೋ ಹಿ ಸಿದ್ಧಾಶ್ಚ ಪರಮರ್ಷಯಃ ।**
**ಪ್ರಾರ್ಥಯನ್ತೇ ಪರಂ ಲೋಕೇ ಸ್ಥಾಣುಮೇಕಂ ಸ ಸರ್ವಕೃತ್ ॥೯೪॥**

ಈ ಪ್ರಕಾರವಾಗಿ ಆರಾಧನೆಮಾಡುತ್ತಾ ದೇವತೆಗಳೂ, ಸಿದ್ಧರೂ ಮತ್ತು ಶ್ರೇಷ್ಠರಾದ ಋಷಿಗಳೂ ಇಷ್ಟಾರ್ಥವನ್ನು ಪಡೆದುಕೊಳ್ಳುವ ಸಲುವಾಗಿ ಸರ್ವೋತ್ಕೃಷ್ಟನಾದ ಶಂಕರನೊಬ್ಬನನ್ನೇ ಪ್ರಾರ್ಥನೆಮಾಡುತ್ತಾರೆ. ಏಕೆಂದರೆ ಅವನೇ ಎಲ್ಲವನ್ನೂ ಮಾಡುವವನಾಗಿದ್ದಾನೆ.

**ಸ ಏಷ ರುದ್ರಭಕ್ತಶ್ಚ ಕೇಶವೋ ರುದ್ರಸಮ್ಭವಃ ।**
**ಕೃಷ್ಣ ಏವ ಹಿ ಯಷ್ಟವ್ಯೋ ಯಜ್ಞೈಶ್ಚೈವ ಸನಾತನಃ ॥೯೫॥**

ಶ್ರೀಕೃಷ್ಣನು ಶಂಕರನ ಭಕ್ತನಾಗಿದ್ದಾನೆ ಮತ್ತು ಅವನಿಂದಲೇ ಜನ್ಮತಾಳಿದ್ದಾನೆ. ಆದುದರಿಂದ ಯಜ್ಞಗಳ ಮೂಲಕವಾಗಿ ಸನಾತನನಾದ ಶ್ರೀಕೃಷ್ಣನನ್ನೇ ಆರಾಧಿಸಬೇಕು.

**ಸರ್ವಭೂತಭವಂ ಜ್ಞಾತ್ವಾ ಲಿಙ್ಗಮರ್ಚತಿ ಯಃ ಪ್ರಭೋಃ ।**
**ತಸ್ಮಿನ್ನಭ್ಯಧಿಕಾಂ ಪ್ರೀತಿಂ ಕರೋತಿ ವೃಷಭಧ್ವಜಃ ॥೯೬॥**

ಶಿವಲಿಂಗವನ್ನು ಸರ್ವಪ್ರಾಣಿಗಳ ಉತ್ಪತ್ತಿಗೆ ಕಾರಣವೆಂದು ತಿಳಿದು ಯಾರು ಅರ್ಚನೆಮಾಡುತ್ತಾರೆಯೋ–ಅವರಲ್ಲಿ ವೃಷಭಧ್ವಜನಾದ ಪರ ಮೇಶ್ವರನು ವಿಶೇಷವಾದ ಪ್ರೀತಿಯನ್ನು ತೋರುತ್ತಾನೆ."

ಸಂಜಯನು ಹೇಳುತ್ತಾನೆ:

"ಮಹಾರಾಜ! ವ್ಯಾಸರ ಮಾತುಗಳನ್ನು ಕೇಳಿ ಮಹಾರಥನಾದ ಅಶ್ವತ್ಥಾಮನು ರುದ್ರನಿಗೆ ನಮಸ್ಕರಿಸಿದನು. ಶ್ರೀಕೃಷ್ಣನ ಮಹತ್ತ್ವವನ್ನೂ ಅಂಗೀಕರಿಸಿದನು.

ಶಿವ-ನಾರಾಯಣರ ದಿವ್ಯಾಖ್ಯಾನವನ್ನು ಕೇಳಿ ರೋಮಾಂಚಿತನಾದ ಜಿತೇಂದ್ರಿಯನಾದ ಅಶ್ವತ್ಥಾಮನು ಮಹರ್ಷಿಗಳಾದ ವ್ಯಾಸರಿಗೆ ನಮಸ್ಕರಿಸಿ ಅನಂತರ ತನ್ನ ಸೈನ್ಯದ ಕಡೆಗೆ ನೋಡಿ ಶಿಬಿರಕ್ಕೆ ಹಿಂದಿರುಗುವಂತೆ ಆಜ್ಞಾಪಿಸಿದನು. ಯುದ್ಧದಲ್ಲಿ ದ್ರೋಣರ ಸಂಹಾರವಾದನಂತರ ಪಾಂಡವರ ಮತ್ತು ದೀನರಾದ ಕೌರವರ ಸೈನ್ಯಗಳು ತಮ್ಮ-ತಮ್ಮ ಶಿಬಿರಗಳಿಗೆ ತೆರಳಿದುವು. ವೇದ-ವೇದಾಂಗಪಾರಂಗತರಾದ ಬ್ರಾಹ್ಮಣಶ್ರೇಷ್ಠರಾದ ದ್ರೋಣರು ಐದು ದಿನಗಳು ಯುದ್ಧಮಾಡಿ ಅಸಂಖ್ಯಾತರಾದ ಶತ್ರುಸೈನಿಕರನ್ನು ಸಂಹರಿಸಿ ಬ್ರಹ್ಮಲೋಕಕ್ಕೆ ಹೊರಟುಹೋದರು."

೨೦೧ನೆಯ ಅಧ್ಯಾಯವು ಮುಗಿಯಿತು.

೨೦೨ನೆಯ ಅಧ್ಯಾಯ ನಾರಾಯಣಾಸ್ತ್ರಮೋಕ್ಷಪರ್ವ (ಮುಂದುವರಿದಿದೆ.)

## ವ್ಯಾಸರು ಅರ್ಜುನನಿಗೆ ಶಿವನ ಮಹಿಮೆಯನ್ನು ಹೇಳಿದುದು: ದ್ರೋಣಪರ್ವದ ಪಠನದ ಫಲ ಮತ್ತು ಶ್ರವಣಫಲ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

"ಸಂಜಯ! ಅತಿರಥರಾದ ದ್ರೋಣರು ಪಾರ್ಷತನಿಂದ ಹತರಾಗಲಾಗಿ ನನ್ನ ಮಕ್ಕಳು ಮತ್ತು ಪಾಂಡವರು ಮುಂದೇನು ಮಾಡಿದರು?"

"ಮಹಾರಾಜ! ಅತಿರಥರಾದ ದ್ರೋಣರು ಧೃಷ್ಟದ್ಯುಮ್ನನಿಂದ ಹತರಾಗಲಾಗಿ, ಕೌರವರ ಸೈನ್ಯವು ಭಗ್ನವಾಗಿ ಹೋಗಲಾಗಿ, ಕುಂತಿಯ ಮಗನಾದ ಧನಂಜಯನು ತನ್ನ ವಿಜಯಕ್ಕೆ ಕಾರಣವಾಗಿದ್ದ ಅತ್ಯಾಶ್ಚರ್ಯಕರವಾದ ಘಟನೆಯನ್ನು ನೋಡಿ ಆ ಸಮಯದಲ್ಲಿ ಆಕಸ್ಮಿಕವಾಗಿ ಬಂದ ವ್ಯಾಸರನ್ನು ಪ್ರಶ್ನಿಸಿದನು:

**ಸಂಗ್ರಾಮೇ ನ್ಯಹನಂ ಶತ್ರೂಞ್ಶರೌಘೈರ್ವಿಮಲೈರಹಮ್ ।**
**ಅಗ್ರತೋ ಲಕ್ಷಯೇ ಯಾನ್ತಂ ಪುರುಷಂ ಪಾವಕಪ್ರಭಮ್ ॥೪॥**

"ಮಹರ್ಷಿಗಳೇ! ನಾನು ಶುದ್ಧವಾದ ಬಾಣಗಳ ಸಮೂಹಗಳಿಂದ ಶತ್ರುಗಳನ್ನು ಸಂಹರಿಸಿದೆನು. ಆ ಸಮಯದಲ್ಲಿ ನಾನು ಹೋಗುತ್ತಿದ್ದ ಮಾರ್ಗದಲ್ಲಿ ಅಗ್ನಿಯ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ಪುರುಷನೊಬ್ಬನು ನನ್ನ ಮುಂದೆ ಹೋಗುತ್ತಿದ್ದುದನ್ನು ನೋಡಿದೆನು.



ಜ್ವಲನ್ತಂ ಶೂಲಮುದ್ಯಮ್ಯ ಯಾಂ ದಿಶಂ ಪ್ರತಿಪದ್ಯತೇ ।
ತಸ್ಯಾಂ ದಿಶಿ ವಿದೀರ್ಯನ್ತೇ ಶತ್ರವೋ ಮೇ ಮಹಾಮುನೇ ॥೫॥

ಆ ಮಹಾಪುರುಷನು ಶೂಲವನ್ನೆತ್ತಿಕೊಂಡು ಯಾವ ದಿಕ್ಕಿಗೆ ಹೋಗುತ್ತಿದ್ದನೋ ಆ ದಿಕ್ಕಿನಲ್ಲಿ ನನ್ನ ಶತ್ರುಗಳು ವಿಧ್ವಂಸಿತರಾಗುತ್ತಿದ್ದರು.

**ತೇನ ಭಗ್ನಾನರೀನ್ಸರ್ವಾನ್ಮದ್ಭಗ್ನಾನ್ಮನ್ಯತೇ ಜನಃ ।**
**ತೇನ ಭಗ್ನಾನಿ ಸೈನ್ಯಾನಿ ಪೃಷ್ಠತೋಽನುವ್ರಜಾಮ್ಯಹಮ್ ॥೬॥**

ನನ್ನ ಮುಂದೆ ಹೋಗುತ್ತಿದ್ದ ಆ ಮಹಾಪುರುಷನೇ ನನ್ನ ಎಲ್ಲ ಶತ್ರುಗಳನ್ನೂ ವಿಧ್ವಂಸಮಾಡುತ್ತಿದ್ದನು. ಆದರೆ ಜನಗಳು ಮಾತ್ರ ಶತ್ರುಗಳು ನನ್ನಿಂದ ವಿಧ್ವಂಸಿತರಾಗುತ್ತಿದ್ದಾರೆಂದು ಭಾವಿಸುತ್ತಿದ್ದರು. ಆದರೆ ವಸ್ತುಸ್ಥಿತಿಯು ಹೀಗಿದ್ದಿತು. ಅವನು ಶತ್ರುಸೈನಿಕರನ್ನು ಧ್ವಂಸಮಾಡುತ್ತಾ ಮುಂದೆ ಹೋಗುತ್ತಿದ್ದನು. ನಾನು ಮಾತ್ರ ಅವನ ಹಿಂದೆ ಅವನನ್ನೇ ಅನುಸರಿಸಿ ಹೋಗುತ್ತಿದ್ದೆನು. ಮಹರ್ಷಿಗಳೇ! ನಾನು ನೋಡಿದ ಸೂರ್ಯನಿಗೆ ಸಮಾನವಾದ ತೇಜಸ್ಸನ್ನು ಹೊಂದಿದ್ದ, ಶೂಲಪಾಣಿಯಾದ ಆ ಮಹಾಪುರುಷನಾರು?

**ನ ಪದ್ಭ್ಯಾಂ ಸ್ಪೃಶತೇ ಭೂಮಿಂ ನ ಚ ಶೂಲಂ ವಿಮುಞ್ಚತಿ ।**
**ಶೂಲಾಚ್ಛೂಲಸಹಸ್ರಾಣಿ ನಿಷ್ಪೇತುಸ್ತಸ್ಯ ತೇಜಸಾ ॥೮॥**

ಆ ಮಹಾಪುರುಷನು ಕಾಲುಗಳಿಂದ ಭೂಮಿಯನ್ನು ಸ್ಪರ್ಶಿಸುತ್ತಿರಲಿಲ್ಲ. (ಆಕಾಶದಲ್ಲಿಯೇ ನಡೆದು ಹೋಗುತ್ತಿದ್ದನು.) ಶೂಲವನ್ನು ಕೈಯಿಂದ ಬಿಡುತ್ತಿರಲಿಲ್ಲ. ಆದರೆ ಅವನ ತೇಜಸ್ಸಿನಿಂದ ಅವನು ಹಿಡಿದಿದ್ದ ಒಂದೇ ಶೂಲದಿಂದಲೇ ಸಾವಿರಾರು ಶೂಲಗಳು ಹೊರಬಂದು ಶತ್ರುಗಳ ಮೇಲೆ ಬೀಳುತ್ತಿದ್ದುವು. ಆ ಮಹಾಪುರುಷನಾರೆಂಬುದನ್ನು ದಯಮಾಡಿ ಹೇಳಿರಿ."

**ಪ್ರಜಾಪತೀನಾಂ ಪ್ರಥಮಂ ತೈಜಸಂ ಪುರುಷಂ ಪ್ರಭುಮ್ ।**
**ಭುವನಂ ಭೂರ್ಭುವಂ ದೇವಂ ಸರ್ವಲೋಕೇಶ್ವರಂ ಪ್ರಭುಮ್ ॥**
**ಈಶಾನಂ ವರದಂ ಪಾರ್ಥ ದೃಷ್ಟವಾನಸಿ ಶಙ್ಕರಮ್ ।**
**ತಂ ಗಚ್ಛ ಶರಣಂ ದೇವಂ ವರದಂ ಭುವನೇಶ್ವರಮ್ ॥೧೦॥**

"ಪಾರ್ಥ! ಪ್ರಜಾಪತಿಗಳೆಲ್ಲರಿಗೂ ಮೊದಲಿಗನಾದ, ತೇಜಃಸ್ವರೂಪನಾದ, ಸರ್ವಸಮರ್ಥನಾದ, ಭೂಲೋಕ-ಭುವೋಲೋಕಸ್ವರೂಪನಾದ, ಸಕಲಲೋಕಗಳಿಗೂ ಈಶ್ವರನಾದ, ಈಶಾನನಾದ, ದೇವದೇವನಾದ, ವರದನಾದ ಶಂಕರನನ್ನು ನೋಡಿರುವೆ. ಆ ವಿಶ್ವೇಶ್ವರನಿಗೆ ಶರಣಾಗತನಾಗು.

**ಮಹಾದೇವಂ ಮಹಾತ್ಮಾನಮೀಶಾನಂ ಜಟಿಲಂ ವಿಭುಮ್ ।**
**ತ್ರ್ಯಕ್ಷಂ ಮಹಾಭುಜಂ ರುದ್ರಂ ಶಿಖಿನಂ ಚೀರವಾಸಸಮ್ ॥೧೧॥**

ಎಲ್ಲ ದೇವತೆಗಳಿಗಿಂತಲೂ ದೊಡ್ಡವನಾದ ಮಹಾದೇವನನ್ನು, ವಿಶಾಲಹೃದಯನಾದ ಮಹಾತ್ಮನನ್ನು, ಎಲ್ಲರ ಮೇಲೂ ಅಧಿಕಾರ ನಡೆಸುವ ಈಶಾನನನ್ನು, ಜಟಾಧರನಾದ ಜಟಿಲನನ್ನು, ಮೂರು ಕಣ್ಣುಗಳನ್ನು ಹೊಂದಿರುವ ತ್ರ್ಯಂಬಕನನ್ನು, ಮಹಾಭುಜನನ್ನು, ರೋದನ ಮಾಡುವ ರುದ್ರನನ್ನು, ಶಿಖಾಯುಕ್ತನಾದ ಶಿಖಿಯನ್ನು, ವಲ್ಕಲಧರನಾದ ಚೀರವಾಸನನ್ನು ಶರಣುಹೊಂದು.

**ಮಹಾದೇವಂ ಹರಂ ಸ್ಥಾಣುಂ ವರದಂ ಭುವನೇಶ್ವರಮ್ ।**
**ಜಗತ್ಪ್ರಧಾನಮಜಿತಂ ಜಗತ್ಪ್ರೀತಿಮಧೀಶ್ವರಮ್ ॥೧೨॥**

ಮಹಾದೇವನಾದ, ಹರನಾದ, ಸ್ಥಾಣುವಾದ, ವರದನಾದ, ಭುವನೇಶ್ವರನಾದ, ಜಗತ್ತಿಗೇ ಪ್ರಧಾನಭೂತನಾದ, ಜಯಿಸಲು ಅಸಾಧ್ಯನಾದ, ಲೋಕದಲ್ಲಿ ಪ್ರೀತಿಯುಳ್ಳವನಾದ, ಈಶ್ವರೇಶ್ವರನಾದ ವಿಶ್ವೇಶ್ವರನನ್ನು ಶರಣುಹೊಂದು.

**ಜಗದ್ಯೋನಿಂ ಜಗದ್ಬೀಜಂ ಜಯಿನಂ ಜಗತೋ ಗತಿಮ್ ।**
**ವಿಶ್ವಾತ್ಮಾನಂ ವಿಶ್ವಸೃಜಂ ವಿಶ್ವಮೂರ್ತಿಂ ಯಶಸ್ವಿನಮ್ ॥೧೩॥**

ಜಗದುತ್ಪತ್ತಿಸ್ಥಾನನಾದ, ಜಗತ್ತಿನ ಉತ್ಪತ್ತಿಗೆ ಬೀಜರೂಪನಾದ, ವಿಜಯಿಯಾದ, ಜಗತ್ತಿಗೇ ಆಶ್ರಯನಾದ, ಸಕಲಜಗತ್ತಿಗೂ ಆತ್ಮಸ್ವರೂಪನಾದ, ವಿಶ್ವವನ್ನೇ ಸೃಷ್ಟಿಸಿದ, ವಿಶ್ವಮೂರ್ತಿಯಾದ, ಯಶೋವಂತನಾದ ವಿಶ್ವೇಶ್ವರನನ್ನು ಶರಣುಹೊಂದು.

**ವಿಶ್ವೇಶ್ವರಂ ವಿಶ್ವನರಂ ಕರ್ಮಣಾಮೀಶ್ವರಂ ಪ್ರಭುಮ್ ।**
**ಶಮ್ಭುಂ ಸ್ವಯಮ್ಭುಂ ಭೂತೇಶಂ ಭೂತಭವ್ಯಭವೋದ್ಭವಮ್ ॥೧೪॥**

ವಿಶ್ವೇಶ್ವರನಾದ, ವಿಶ್ವನಿಯಂತೃವಾದ, ಕರ್ಮಾಧ್ಯಕ್ಷನಾದ, ಪ್ರಭುವಾದ, ಮಂಗಳಕರನಾದ, ಸ್ವಯಂಭುವಾದ, ಭೂತೇಶನಾದ, ಭೂತ-ವರ್ತಮಾನ-ಭವಿಷ್ಯತ್ತುಗಳಿಗೆ ಕಾರಣನಾದ ಶಂಕರನನ್ನು ಆಶ್ರಯಿಸು.

**ಯೋಗಂ ಯೋಗೇಶ್ವರಂ ಸರ್ವಂ ಸರ್ವಲೋಕೇಶ್ವರೇಶ್ವರಮ್ ।**
**ಸರ್ವಶ್ರೇಷ್ಠಂ ಜಗಚ್ಛ್ರೇಷ್ಠಂ ವರಿಷ್ಠಂ ಪರಮೇಷ್ಠಿನಮ್ ॥೧೫॥**

ಯೋಗವೂ-ಯೋಗೇಶ್ವರನೂ ಆಗಿರುವ, ಸರ್ವಸ್ವರೂಪನಾದ, ಸರ್ವಲೋಕದ ಈಶ್ವರರಿಗೂ ಈಶ್ವರನಾದ, ಸರ್ವಶ್ರೇಷ್ಠನಾದ, ಸಕಲ ಜಗತ್ತುಗಳಿಗೂ ಶ್ರೇಷ್ಠನಾದ, ಶ್ರೇಷ್ಠತಮನಾದ ಪರಮೇಷ್ಠಿಯನ್ನು ಆಶ್ರಯಿಸು.

**ಲೋಕತ್ರಯವಿಧಾತಾರಮೇಕಂ ಲೋಕತ್ರಯಾಶ್ರಯಮ್ ।**
**ಶುದ್ಧಾತ್ಮಾನಂ ಭವಂ ಭೀಮಂ ಶಶಾಙ್ಕಕೃತಶೇಖರಮ್ ॥೧೬॥**

ಮೂರು ಲೋಕಗಳನ್ನೂ ಸೃಷ್ಟಿಸಿದ ಮತ್ತು ಮೂರು ಲೋಕಗಳಿಗೂ ಏಕೈಕಾಶ್ರಯನಾದ, ಶುದ್ಧಾತ್ಮನಾದ, ಭವನಾದ, ಭಯಂಕರನಾದ, ಮುಡಿಯಲ್ಲಿ ಚಂದ್ರನನ್ನು ಧರಿಸಿರುವ ಚಂದ್ರಶೇಖರನನ್ನು ಆಶ್ರಯಿಸು.

**ಶಾಶ್ವತಂ ಭೂಧರಂ ದೇವಂ ಸರ್ವವಾಗೀಶ್ವರೇಶ್ವರಮ್ ।**
**ಸುದುರ್ಜಯಂ ಜಗನ್ನಾಥಂ ಜನ್ಮಮೃತ್ಯುಜರಾತಿಗಮ್ ॥೧೭॥**

ಸನಾತನನಾದ, ಪೃಥ್ವಿಯನ್ನು ಧರಿಸಿರುವ, ಎಲ್ಲ ವಾಗೀಶ್ವರರಿಗೂ ಈಶ್ವರನಾದ, ಜಯಿಸಲು ಅಸಾಧ್ಯನಾದ, ಜಗತ್ತಿಗೆ ಒಡೆಯನಾದ, ಹುಟ್ಟು-ಸಾವು ಮತ್ತು ಮುಪ್ಪು ಗಳೆಂಬ ವಿಕಾರಗಳಿಗೆ ಅತೀತನಾದ ಪರಮೇಶ್ವರನನ್ನು ಶರಣುಹೊಂದು.

**ಜ್ಞಾನಾತ್ಮಾನಂ ಜ್ಞಾನಗಮ್ಯಂ ಜ್ಞಾನಶ್ರೇಷ್ಠಂ ಸುದುರ್ವಿದಮ್ ।**
**ದಾತಾರಂ ಚೈವ ಭಕ್ತಾನಾಂ ಪ್ರಸಾದವಿಹಿತಾನ್ವರಾನ್ ॥೧೮॥**

ಜ್ಞಾನಸ್ವರೂಪನಾದ, ಜ್ಞಾನದಿಂದಲೇ ತಿಳಿಯಲ್ಪಡತಕ್ಕವನಾದ, ಶ್ರೇಷ್ಠವಾದ ಜ್ಞಾನಸ್ವರೂಪವೇ ಆಗಿರುವ, ತಿಳಿಯಲು ಅಸಾಧ್ಯನಾದ, ಭಕ್ತರಿಗೆ ಕೃಪಾಪೂರ್ವಕವಾದ ಉತ್ತಮವರಗಳನ್ನು ನೀಡುವ ಪರಮೇಶ್ವರನನ್ನು ಆಶ್ರಯಿಸು.

**ತಸ್ಯ ಪಾರಿಷದಾ ದಿವ್ಯಾ ರೂಪೈರ್ನಾನಾವಿಧೈರ್ವಿಭೋಃ ।**
**ವಾಮನಾ ಜಟಿಲಾ ಮುಣ್ಡಾ ಹ್ರಸ್ವಗ್ರೀವಾ ಮಹೋದರಾಃ ॥೧೯॥**

**ಮಹಾಕಾಯಾ ಮಹೋತ್ಸಾಹಾ ಮಹಾಕರ್ಣಾಸ್ತಥಾಪರೇ ।**
**ಆನನೈರ್ವಿಕೃತೈಃ ಪಾದೈಃ ಪಾರ್ಥ ವೇಷೈಶ್ಚ ವೈಕೃತೈಃ ॥೨೦॥**

ವಿಭುವಾದ ಶ್ರೀಶಂಕರನ ದಿವ್ಯವಾದ ಪರಿಷದ್ಗಣಗಳು ನಾನಾವಿಧವಾದ ರೂಪಗಳಿಂದ ಪರಿಶೋಭಿಸುತ್ತಿರುತ್ತಾರೆ. ಅವರಲ್ಲಿ ಕೆಲವರು ಕುಳ್ಳರು, ಕೆಲವರು ಜಟಾಧಾರಿಗಳು, ತಲೆಯನ್ನು ಮುಂಡನ ಮಾಡಿಕೊಂಡಿರುವವರು ಕೆಲವರು; ಮೋಟಾದ ಕುತ್ತಿಗೆಯುಳ್ಳವರು, ದೊಡ್ಡದಾದ ಹೊಟ್ಟೆಯುಳ್ಳ ವರು, ದೊಡ್ಡದಾದ ದೇಹವುಳ್ಳವರು, ದೊಡ್ಡದಾದ ಕಿವಿಗಳುಳ್ಳವರು, ವಿಕಾರವಾದ ಮುಖ-ಕಾಲುಗಳುಳ್ಳವರು, ವಿಕಾರವಾದ ವೇಷ-ಭೂಷಣಾದಿ ಗಳನ್ನು ಧರಿಸಿಕೊಂಡಿರುವವರು ಕೆಲವರು-ಹೀಗೆ ನಾನಾರೀತಿಯ ಸಭಿಕರು ಶ್ರೀಶಂಕರನ ಆಸ್ಥಾನದಲ್ಲಿರುತ್ತಾರೆ. ಅವರೆಲ್ಲರೂ ಅತ್ಯಂತೋತ್ಸಾಹದಿಂದ ಕೂಡಿದವರಾಗಿರುತ್ತಾರೆ.

**ಈದೃಶೈಃ ಸ ಮಹಾದೇವಃ ಪೂಜ್ಯಮಾನೋ ಮಹೇಶ್ವರಃ ।**
**ಸ ಶಿವಸ್ತಾತ ತೇಜಸ್ವೀ ಪ್ರಸಾದಾದ್ಯಾತಿ ತೇಽಗ್ರತಃ ॥೨೧॥**

ಇಂತಹ ಭೂತಗಣಗಳಿಂದ ಪೂಜಿಸಲ್ಪಡುತ್ತಿರುವ ಮಹಾದೇವನಾದ ಆ ಮಹೇಶ್ವರನೇ ತೇಜಸ್ವಿಯಾದ ಆ ಮಹಾಪುರುಷನ ರೂಪದಲ್ಲಿ ನಿನ್ನ ಮೇಲಿನ ಕೃಪೆಯಿಂದ ನಿನ್ನ ಮುಂದೆ ಹೋಗುತ್ತಿದ್ದಾನೆ.

**ತಸ್ಮಿನ್ಘೋರೇ ಸದಾ ಪಾರ್ಥ ಸಂಗ್ರಾಮೇ ರೋಮಹರ್ಷಣೇ ।**
**ದ್ರೌಣಿಕರ್ಣಕೃಪೈರ್ಗುಪ್ತಾಂ ಮಹೇಷ್ವಾಸೈಃ ಪ್ರಹಾರಿಭಿಃ ॥೨೨॥**

**ಕಸ್ತಾಂ ಸೇನಾಂ ತದಾ ಪಾರ್ಥ ಮನಸಾಪಿ ಪ್ರಧರ್ಷಯೇತ್ ।**
**ಋತೇ ದೇವಾನ್ಮಹೇಷ್ವಾಸಾದ್ಬಹುರೂಪಾನ್ಮಹೇಶ್ವರಾತ್ ॥೨೩॥**

ಪಾರ್ಥ! ರೋಮಾಂಚಕರವಾದ ಆ ಘೋರಸಂಗ್ರಾಮದಲ್ಲಿ ಮಹಾಧನುಷ್ಮಂತರಾದ, ಪ್ರಹಾರಕುಶಲರಾದ ಅಶ್ವತ್ಥಾಮ-ಕರ್ಣ-ಕೃಪರಿಂದ ಅಭಿರಕ್ಷಿತವಾದ ಕುರುಸೇನೆಯನ್ನು ಮಹಾಧನುಷ್ಮಂತನಾದ ಬಹುರೂಪ ಧಾರಿಯಾದ ಮಹೇಶ್ವರನ ಹೊರತಾಗಿ ಮತ್ತಾರಿಂದ ತಾನೇ ಎದುರಿಸಲು ಸಾಧ್ಯವಾಗುತ್ತಿದ್ದಿತು?

**ಸ್ಥಾತುಮುತ್ಸಹತೇ ಕಶ್ಚಿನ್ನ ತಸ್ಮಿನ್ನಗ್ರತಃ ಸ್ಥಿತೇ ।**
**ನ ಹಿ ಭೂತಂ ಸಮಂ ತೇನ ತ್ರಿಷು ಲೋಕೇಷು ವಿದ್ಯತೇ ॥೨೪॥**

ಮಹೇಶ್ವರನು ಮುಂದೆ ನಿಂತುದೇ ಆದರೆ ಯಾವನೂ ಅವನೆದುರಿನಲ್ಲಿ ನಿಲ್ಲಲು ಉತ್ಸಾಹಿತನಾಗುವುದಿಲ್ಲ (ಸಮರ್ಥನಾಗುವುದಿಲ್ಲ.) ಮೂರು ಲೋಕಗಳಲ್ಲಿಯೂ ಅವನಿಗೆ ಸಮಾನವಾದ ಪರಾಕ್ರಮವುಳ್ಳ ಪ್ರಾಣಿಯೇ ಯಾವುದೂ ಇರುವುದಿಲ್ಲ.

**ಗನ್ಧೇನಾಪಿ ಹಿ ಸಂಗ್ರಾಮೇ ತಸ್ಯ ಕ್ರುದ್ಧಸ್ಯ ಶತ್ರವಃ ।**
**ವಿಸಂಜ್ಞಾ ಹತಭೂಯಿಷ್ಠಾ ವೇಪನ್ತಿ ಚ ಪತನ್ತಿ ಚ ॥೨೫॥**

ಕ್ರುದ್ಧನಾದ ರುದ್ರನ ವಾಸನೆಯು ರಣಾಂಗಣದಲ್ಲಿ ಬಂದರೂ ಸಾಕು; ಶತ್ರುಗಳು ಮೃತಪ್ರಾಯರಾಗಿ ಮೂರ್ಛೆಹೊಂದುತ್ತಾರೆ; ನಡುಗುತ್ತಾರೆ; ಕೆಳಗೆ ಬೀಳುತ್ತಾರೆ.

**ತಸ್ಮೈ ನಮಸ್ತು ಕುರ್ವನ್ತೋ ದೇವಾಸ್ತಿಷ್ಠನ್ತಿ ವೈ ದಿವಿ ।**
**ಯೇ ಚಾನ್ಯೇ ಮಾನವಾ ಲೋಕೇ ತೇ ಚ ಸ್ವರ್ಗಜಿತೋ ನರಾಃ॥**

ಅವನಿಗೆ ನಮಸ್ಕಾರಮಾಡುವ ದೇವತೆಗಳು ಸದಾಕಾಲದಲ್ಲಿಯೂ ಸ್ವರ್ಗಲೋಕದಲ್ಲಿಯೇ ಇರುತ್ತಾರೆ. (ಪರಮೇಶ್ವರನಿಗೆ ನಮಸ್ಕರಿಸುತ್ತಲೇ ಇರುವುದರಿಂದ ಅವರು ಯಾವುದೇ ಕಾರಣದಿಂದಲೂ ಚ್ಯುತರಾಗುವುದಿಲ್ಲ.) ಈ ಲೋಕದಲ್ಲಿರುವ ಇತರ ಮಾನವರೂ ಅವನಿಗೆ ನಮಸ್ಕಾರಮಾಡಿ ಸ್ವರ್ಗವನ್ನು ಜಯಿಸುತ್ತಾರೆ. (ಕಾಲಾನಂತರದಲ್ಲಿ ಸ್ವರ್ಗವನ್ನು ಪಡೆದು ಕೊಳ್ಳುತ್ತಾರೆ.)

**ಯೇ ಭಕ್ತಾ ವರದಂ ದೇವಂ ಶಿವಂ ರುದ್ರಮುಮಾಪತಿಮ್ ।**
**ಅನನ್ಯಭಾವೇನ ಸದಾ ಸರ್ವೇಶಂ ಸಮುಪಾಸತೇ ।**
**ಇಹಲೋಕೇ ಸುಖಂ ಪ್ರಾಪ್ಯ ತೇ ಯಾನ್ತಿ ಪರಮಾಂ ಗತಿಮ್ ॥**

ಯಾವ ಭಕ್ತರು ದೇವದೇವನಾದ ಶಿವನನ್ನು, ರುದ್ರನನ್ನು, ಉಮಾಪತಿಯನ್ನು, ಸರ್ವೇಶನನ್ನು ಅನನ್ಯಭಕ್ತಿಯಿಂದ ನಿರಂತರವಾಗಿ ಉಪಾಸನೆಮಾಡುತ್ತಾರೆಯೋ-ಅವರೆಲ್ಲರೂ ಈ ಲೋಕದಲ್ಲಿಯೂ ಸುಖ ವಾಗಿದ್ದು ಅವಸಾನಾನಂತರದಲ್ಲಿ ಉತ್ತಮಗತಿಯನ್ನೂ ಪಡೆಯುತ್ತಾರೆ.

**ನಮಸ್ಕುರುಷ್ವ ಕೌನ್ತೇಯ ತಸ್ಮೈ ಶಾನ್ತಾಯ ವೈ ಸದಾ ।**
**ರುದ್ರಾಯ ಶಿತಿಕಣ್ಠಾಯ ಕನಿಷ್ಠಾಯ ಸುವರ್ಚಸೇ ।**
**ಕಪರ್ದಿನೇ ಕರಾಲಾಯ ಹರ್ಯಕ್ಷವರದಾಯ ಚ ॥೨೯॥**

ಕೌಂತೇಯ! ಶಾಂತಸ್ವರೂಪನಾದ ಶಿತಿಕಂಠನಿಗೆ, ಕನಿಷ್ಠನಿಗೆ (ಸೂಕ್ಷ್ಮಾತಿಸೂಕ್ಷ್ಮನಿಗೆ), ಉತ್ತಮತೇಜೋವಿಶಿಷ್ಟನಿಗೆ, ಜಟಾಜೂಟಧರನಿಗೆ, ವಿಕರಾಲಸ್ವರೂಪನಿಗೆ, ಪಿಂಗಲನೇತ್ರನಿಗೆ, ಕುಬೇರವರದನಿಗೆ ನೀನು ನಮಸ್ಕರಿಸು.



ಯಾಮ್ಯಾಯಾವ್ಯಕ್ತಕೇಶಾಯ ಸದ್ವೃತ್ತೇ ಶಙ್ಕರಾಯ ಚ ।
ಕಾಮ್ಯಾಯ ಹರಿನೇತ್ರಾಯ ಸ್ಥಾಣವೇ ಪುರುಷಾಯ ಚ ॥೩೦॥
ಹರಿಕೇಶಾಯ ಮುಣ್ಡಾಯ ಕೃಶಾಯೋತ್ತಾರಣಾಯ ಚ ।
ಭಾಸ್ಕರಾಯ ಸುತೀರ್ಥಾಯ ದೇವದೇವಾಯ ರಂಹಸೇ ॥೩೧॥

ಯಮನಿಗೆ ಅನುಕೂಲನಾದ ಕಾಲಸ್ವರೂಪನಿಗೆ, ಅವ್ಯಕ್ತಸ್ವರೂಪವಾದ ಆಕಾಶವೇ ತಲೆಗೂದಲಾಗಿ ಉಳ್ಳವನಿಗೆ, ಸದಾಚಾರಸಂಪನ್ನನಿಗೆ, ಶುಭಕರ ನಿಗೆ, ಕಮನೀಯವಿಗ್ರಹನಿಗೆ, ಪಿಂಗಳನೇತ್ರನಿಗೆ, ಸ್ಥಾಣುವಿಗೆ, ಮಹಾಪುರುಷ ನಿಗೆ, ಕಂದುಬಣ್ಣದ ಕೂದಲುಳ್ಳವನಿಗೆ, ಯಾಜಮಾನ್ಯವನ್ನು ವಹಿಸಿ ಮುಂಡ ನಾಗಿರತಕ್ಕವನಿಗೆ, ತಪಸ್ಸಿನಿಂದ ಕೃಶನಾಗಿರತಕ್ಕವನಿಗೆ, ಭವಸಾಗರವನ್ನು ದಾಟಿಸುವವನಿಗೆ, ಸೂರ್ಯಸ್ವರೂಪನಿಗೆ, ಉತ್ತಮತೀರ್ಥನಿಗೆ, ದೇವ ದೇವನಿಗೆ, ವೇಗವಂತನಿಗೆ ನಮಸ್ಕರಿಸು, ಅರ್ಜುನ!

**ಬಹುರೂಪಾಯ ಸರ್ವಾಯ ಪ್ರಿಯಾಯ ಪ್ರಿಯವಾಸಸೇ ।**
**ಉಷ್ಣೀಷಿಣೇ ಸುವಕ್ತ್ರಾಯ ಸಹಸ್ರಾಕ್ಷಾಯ ಮೀಢುಷೇ ॥೩೨॥**

ಅನೇಕರೂಪಧರನಿಗೆ, ಸರ್ವಸ್ವರೂಪನಿಗೆ, ಸರ್ವರಿಗೂ ಪ್ರಿಯನಾಗಿರ ತಕ್ಕವನಿಗೆ, ಮುನಿಜನಪ್ರಿಯವಾದ ವಲ್ಕಲಾದಿಗಳನ್ನು ಧರಿಸಿರತಕ್ಕವನಿಗೆ, ಶಿರಸ್ತ್ರಾಣವನ್ನು ಧರಿಸಿರುವವನಿಗೆ, ಸುಂದರವಾದ ಮುಖವುಳ್ಳವನಿಗೆ, ಸಹಸ್ರನೇತ್ರನಿಗೆ, ಮಳೆಗರೆಯುವವನಿಗೆ ನಮಸ್ಕಾರಮಾಡು.

**ಗಿರಿಶಾಯ ಪ್ರಶಾನ್ತಾಯ ಯತಯೇ ಚೀರವಾಸಸೇ ।**
**ಹಿರಣ್ಯಬಾಹವೇ ರಾಜ್ಞೇ ಉಗ್ರಾಯ ಪತಯೇ ದಿಶಾಮ್ ॥೩೩॥**

ಪರ್ವತದಲ್ಲಿ ಮಲಗುವವನಿಗೆ, ಪರಮಶಾಂತನಿಗೆ, ಯತಿಸ್ವರೂಪ ನಿಗೆ, ನಾರುಮಡಿಯನ್ನುಡುವವನಿಗೆ, ಹಿರಣ್ಯಬಾಹುವಿಗೆ (ಸುವರ್ಣಾಭರಣ ಗಳಿಂದ ವಿಭೂಷಿತವಾದ ತೋಳುಗಳುಳ್ಳವನಿಗೆ), ದೀಪ್ತಿಮಂತನಿಗೆ, ಭಯಂಕರಸ್ವರೂಪನಿಗೆ, ದಿಕ್ಕುಗಳ ಅಧಿಪತಿಗೆ ನಮಸ್ಕಾರಮಾಡು.

**ಪರ್ಜನ್ಯಪತಯೇ ಚೈವ ಭೂತಾನಾಂ ಪತಯೇ ನಮಃ ।**
**ವೃಕ್ಷಾಣಾಂ ಪತಯೇ ಚೈವ ಗವಾಂ ಚ ಪತಯೇ ನಮಃ ॥೩೪॥**

ಮೇಘಗಳ ಅಧಿಪತಿಗೆ, ಭೂತಗಳ ಪತಿಗೆ ನಮಸ್ಕಾರವಿರಲಿ. ವೃಕ್ಷಗಳ ಪತಿಗೆ, ಗೋಪತಿಗೆ ನಮಸ್ಕಾರವಿರಲಿ.

**ವೃಕ್ಷೈರಾವೃತಕಾಯಾಯ ಸೇನಾನ್ಯೇ ಮಧ್ಯಮಾಯ ಚ ।**
**ಸ್ರುವಹಸ್ತಾಯ ದೇವಾಯ ಧನ್ವಿನೇ ಭಾರ್ಗವಾಯ ಚ ॥೩೫॥**

ವೃಕ್ಷಗಳಿಂದ ಆವೃತವಾದ ಶರೀರವುಳ್ಳವನಿಗೆ, ಸೇನಾನಿಗೆ, ಶರೀರಮಧ್ಯವರ್ತಿಯಾದ ಅಂತರ್ಯಾಮಿಗೆ, ಯಜ್ಞದ ಯಜಮಾನನಾಗಿ ಕೈಯಲ್ಲಿ ಸ್ರುವವನ್ನು ಹಿಡಿದಿರುವವನಿಗೆ, ದಿವ್ಯಸ್ವರೂಪನಿಗೆ, ಧನುಷ್ಮಂತನಿಗೆ, ಪರಶುರಾಮಸ್ವರೂಪನಿಗೆ ನಮಸ್ಕಾರವಿರಲಿ.

**ಬಹುರೂಪಾಯ ವಿಶ್ವಸ್ಯ ಪತಯೇ ಮುಞ್ಜವಾಸಸೇ ।**
**ಸಹಸ್ರಶಿರಸೇ ಚೈವ ಸಹಸ್ರನಯನಾಯ ಚ ।**
**ಸಹಸ್ರಬಾಹವೇ ಚೈವ ಸಹಸ್ರಚರಣಾಯ ಚ ॥೩೬॥**

ಬಹುರೂಪನಿಗೆ, ವಿಶ್ವಪತಿಗೆ, ಮೌಂಜಿಯನ್ನು ಧರಿಸಿರುವವನಿಗೆ, ಸಹಸ್ರಶೀರ್ಷನಿಗೆ, ಸಹಸ್ರಾಕ್ಷನಿಗೆ, ಸಹಸ್ರಬಾಹುವಿಗೆ, ಸಹಸ್ರಪಾದನಿಗೆ ನಮಸ್ಕಾರವಿರಲಿ.

**ಶರಣಂ ಗಚ್ಛ ಕೌನ್ತೇಯ ವರದಂ ಭುವನೇಶ್ವರಮ್ ।**
**ಉಮಾಪತಿಂ ವಿರೂಪಾಕ್ಷಂ ದಕ್ಷಯಜ್ಞನಿಬರ್ಹಣಮ್ ॥೩೭॥**
**ಪ್ರಜಾನಾಂ ಪತಿಮವ್ಯಗ್ರಂ ಭೂತಾನಾಂ ಪತಿಮವ್ಯಯಮ್ ॥೩೮॥**

ಕೌಂತೇಯ! ವರದನಿಗೆ, ಭುವನೇಶ್ವರನಿಗೆ, ಉಮಾಪತಿಗೆ ಮುಕ್ಕಣ್ಣನಿಗೆ, ದಕ್ಷಯಜ್ಞವಿನಾಶಕನಿಗೆ, ಪ್ರಜಾಪತಿಗೆ, ಏಕಾಗ್ರಚಿತ್ತನಿಗೆ, ಅವಿನಾಶಿಯಾದ ನಾಶರಹಿತನಿಗೆ (ಭೂಪತಿಗೆ) ಶರಣಾಗತನಾಗು.

**ಕಪರ್ದಿನಂ ವೃಷಾವರ್ತಂ ವೃಷನಾಭಂ ವೃಷಧ್ವಜಮ್ ।**
**ವೃಷದರ್ಪಂ ವೃಷಪತಿಂ ವೃಷಶೃಙ್ಗಂ ವೃಷರ್ಷಭಮ್ ॥೩೯॥**
**ವೃಷಾಙ್ಕಂ ವೃಷಭೋದಾರಂ ವೃಷಭಂ ವೃಷಭೇಕ್ಷಣಮ್ ।**
**ವೃಷಾಯುಧಂ ವೃಷಶರಂ ವೃಷಭೂತಂ ವೃಷೇಶ್ವರಮ್ ॥೪೦॥**

ಜಟಾಧಾರಿಯಾದ, ಶ್ರೇಷ್ಠರಾದ ಬ್ರಹ್ಮಾದಿಗಳನ್ನೂ ಸಹ ಮಾಯೆಯಿಂದ ಭ್ರಾಂತರನ್ನಾಗಿ ಮಾಡುವ, ಎಲ್ಲ ಲೋಕಗಳಿಗೂ ಆಶ್ರಯನಾಗಿರುವುದರಿಂದ ಶ್ರೇಷ್ಠವಾದ ನಾಭಿಯಂತಿರುವ, ವೃಷಭಧ್ವಜನಾದ, ತ್ರೈಲೋಕ್ಯಗಳನ್ನೂ ಸಂಹಾರಮಾಡುವ ಸಾಮರ್ಥ್ಯವಿರುವುದರಿಂದ ದರ್ಪಿತನಾಗಿರುವ, ಧರ್ಮಾಧ್ಯಕ್ಷನಾದ, ಧರ್ಮಕ್ಕೆ ಶಿಖರಪ್ರಾಯನಾದ, ಫಲದಾಯಕರಾದ ಇಂದ್ರಾದಿಗಳಿಗೂ ಸಹ ಶ್ರೇಷ್ಠನಾಗಿರುವ, ಧ್ವಜದಲ್ಲಿ

ಬಸವನನ್ನು ಚಿಹ್ನೆಯಾಗಿ ಹೊಂದಿರುವ, ಧರ್ಮಕಾರ್ಯಗಳನ್ನು ಮಾಡುವವರಿಗೆ ಬಹುಫಲಪ್ರದನಾದ, ಧರ್ಮಮಾರ್ಗದಿಂದಲೇ ಸಾಕ್ಷಾತ್ಕೃತ ನಾಗುವ (ಯೋಗಧರ್ಮೈಕಗಮ್ಯನಾದ), ಎತ್ತಿನ ಕಣ್ಣುಗಳಂತಿರುವ ಕಣ್ಣುಗಳನ್ನು ಹೊಂದಿರುವ, ಶ್ರೇಷ್ಠವಾದ ಆಯುಧಗಳನ್ನು ಹೊಂದಿರುವ, ವಿಷ್ಣುವನ್ನೇ ಬಾಣವಾಗಿ ಹೊಂದಿರುವ, ಧರ್ಮವೇ ಮೂರ್ತಿಮತ್ತಾಗಿರುವ, ಧರ್ಮಕ್ಕೆ ಒಡೆಯನಾದ ಪರಮೇಶ್ವರನಿಗೆ ಶರಣಾಗತನಾಗು."

ಮಹೇಶನ ವಿಷಯವಾಗಿ ಅರ್ಜುನನಿಗೆ ಹೇಳುತ್ತಿದ್ದ ವ್ಯಾಸರು ಭಕ್ತಿಪರವಶರಾಗಿ ತಾವೇ ಸ್ತೋತ್ರಮಾಡಲು ಪ್ರಾರಂಭಿಸಿದರು.

**ಮಹೋದರಂ ಮಹಾಕಾಯಂ ದ್ವೀಪಿಚರ್ಮನಿವಾಸಿನಮ್ ।**
**ಲೋಕೇಶಂ ವರದಂ ಮುಣ್ಡಂ ಬ್ರಹ್ಮಣ್ಯಂ ಬ್ರಾಹ್ಮಣಪ್ರಿಯಮ್ ॥೪೧॥**
**ತ್ರಿಶೂಲಪಾಣಿಂ ವರದಂ ಖಡ್ಗಚರ್ಮಧರಂ ಪ್ರಭುಮ್ ।**
**ಪಿನಾಕಿನಂ ಖಡ್ಗಧರಂ ಲೋಕಾನಾಂ ಪತಿಮೀಶ್ವರಮ್ ।**
**ಪ್ರಪದ್ಯೇ ಶರಣಂ ದೇವಂ ಶರಣ್ಯಂ ಚೀರವಾಸಸಮ್ ॥೪೨॥**

"ಅನೇಕಕೋಟಿಬ್ರಹ್ಮಾಂಡಕ್ಕೂ ಆಶ್ರಯಭೂತವಾದ ವಿಶಾಲವಾದ ಉದರವನ್ನು ಹೊಂದಿರುವ, ಮೂರುಲೋಕಗಳೇ ಶರೀರರೂಪನಾಗಿರುವ, ವ್ಯಾಘ್ರಚರ್ಮಧರನಾದ, ಲೋಕಸ್ವಾಮಿಯಾದ, ಭಕ್ತವರದನಾದ, ಮುಂಡಿತ ಮಸ್ತಕನಾದ, ಬ್ರಾಹ್ಮಣಹಿತೈಷಿಯಾದ, ಬ್ರಾಹ್ಮಣಪ್ರಿಯನಾದ, ತ್ರಿಶೂಲಪಾಣಿ ಯಾದ, ಖಡ್ಗವನ್ನೂ-ಗುರಾಣಿಯನ್ನೂ ಧರಿಸಿರುವ, ಪ್ರಭುವಾದ, ಪಿನಾಕ ಪಾಣಿಯಾದ, ಖಡ್ಗಧರನಾದ, ಲೋಕಪತಿಯಾದ, ಈಶ್ವರನಾದ, ಶರಣಾ ಗತರಕ್ಷಕನಾದ, ವಲ್ಕಲಧರನಾದ ಪರಮೇಶ್ವರನನ್ನು ಶರಣುಹೊಂದುತ್ತೇನೆ.

**ನಮಸ್ತಸ್ಮೈ ಸುರೇಶಾಯ ಯಸ್ಯ ವೈಶ್ರವಣಃ ಸಖಾ ॥೪೩॥**
**ಸುವಾಸಸೇ ನಮಸ್ತುಭ್ಯಂ ಸುವ್ರತಾಯ ಸುಧನ್ವಿನೇ ।**
**ಧನುರ್ಧರಾಯ ದೇವಾಯ ಪ್ರಿಯಧನ್ವಾಯ ಧನ್ವಿನೇ ॥೪೪॥**
**ಧನ್ವನ್ತರಾಯ ಧನುಷೇ ಧನ್ವಾಚಾರ್ಯಾಯ ತೇ ನಮಃ ।**
**ಉಗ್ರಾಯುಧಾಯ ದೇವಾಯ ನಮಃ ಸುರವರಾಯ ಚ ॥೪೫॥**

ಕುಬೇರಸಖನಾದ, ಸುರೇಶ್ವರನಾದ ಶಿವನಿಗೆ ನಮಸ್ಕಾರಮಾಡುತ್ತೇನೆ. ಉತ್ತಮವಾದ ವಸ್ತ್ರವನ್ನು ಧರಿಸಿರುವ, ಸುವ್ರತನಾದ, ಶ್ರೇಷ್ಠವಾದ ಧನುಸ್ಸನ್ನು ಹೊಂದಿರುವ ನಿನಗೆ ನಮಸ್ಕರಿಸುತ್ತೇನೆ. ಧನುರ್ಧರನಾದ, ದೇವದೇವನಾದ, ಪ್ರಿಯವಾದ ಧನುಸ್ಸನ್ನು ಹೊಂದಿರುವ, ಧನುಷ್ಮಂತನಾದ, ಇತರ ಅನೇಕ ಧನುಸ್ಸುಗಳನ್ನೂ ಹೊಂದಿರುವ, ಧನುಸ್ಸ್ವರೂಪನಾದ, ಧನುರ್ವೇದಕ್ಕೆ ಆಚಾರ್ಯನಾದ ನಿನಗೆ ನಮಸ್ಕಾರವು. ಭಯಂಕರವಾದ ಆಯುಧಗಳನ್ನು ಧರಿಸಿರುವ ಸುರಶ್ರೇಷ್ಠನಾದ ದೇವನಿಗೆ ನಮಸ್ಕಾರವು.

**ನಮೋಽಸ್ತು ಬಹುರೂಪಾಯ ನಮೋಽಸ್ತು ಬಹುಧನ್ವಿನೇ ।**
**ನಮೋಽಸ್ತ ಸ್ಥಾಣವೇ ನಿತ್ಯಂ ನಮಸ್ತಸ್ಮೈ ತಪಸ್ವಿನೇ ॥೪೬॥**

ಬಹುರೂಪನಾದ ನಿನಗೆ ನಮಸ್ಕಾರವಿರಲಿ. ಬಹುಧನುಸ್ಸುಗಳನ್ನು ಧರಿಸಿರುವ ನಿನಗೆ ನಮಸ್ಕಾರವಿರಲಿ. ಸ್ಥಾಣುರೂಪನಾದ (ಅಚಲನಾದ) ನಿನಗೆ ಅನುದಿನವೂ ನನ್ನ ನಮಸ್ಕಾರಗಳು. ಮಹಾತಪಸ್ವಿಯಾದ ಶಿವನಿಗೆ ನಮಸ್ಕಾರವು.

**ನಮೋಽಸ್ತು ತ್ರಿಪುರಘ್ನಾಯ ಭಗಘ್ನಾಯ ಚ ವೈ ನಮಃ ।**
**ವನಸ್ಪತೀನಾಂ ಪತಯೇ ನರಾಣಾಂ ಪತಯೇ ನಮಃ ॥೪೭॥**

ತ್ರಿಪುರವಿನಾಶಕನಾದ ನಿನಗೆ ನಮಸ್ಕಾರವಿರಲಿ. ಭಗನೇತ್ರಾಪಹಾರಕನಾದ ಶಿವನಿಗೆ ನಮಸ್ಕರಿಸುತ್ತೇನೆ. ವನಸ್ಪತಿಗಳ ಒಡೆಯನಾದ ರುದ್ರನಿಗೆ ನಮಸ್ಕಾರ. ನರಪತಿಯಾದ ತ್ರ್ಯಂಬಕನಿಗೆ ನಮಸ್ಕಾರವಿರಲಿ.

**ಮಾತೃಣಾಂ ಪತಯೇ ಚೈವ ಗಣಾನಾಂ ಪತಯೇ ನಮಃ ।**
**ಗವಾಂ ಚ ಪತಯೇ ನಿತ್ಯಂ ಯಜ್ಞಾನಾಂ ಪತಯೇ ನಮಃ ॥೪೮॥**

ಸಪ್ತಮಾತೃಕೆಯರ ಅಧಿಪತಿಯಾದ ಪರಮೇಶ್ವರನನ್ನೂ ಗಣಗಳ ಪತಿಯಾದ ಈಶ್ವರನನ್ನೂ ನಮಸ್ಕರಿಸುತ್ತೇನೆ. ಗೋಪತಿಗೂ, ಯಜ್ಞಪತಿಗೂ ನಿತ್ಯನಮಸ್ಕಾರವಿರಲಿ.

**ಅಪಾಂ ಚ ಪತಯೇ ನಿತ್ಯಂ ದೇವಾನಾಂ ಪತಯೇ ನಮಃ ।**
**ಪೂಷ್ಣೋ ದನ್ತವಿನಾಶಾಯ ತ್ರ್ಯಕ್ಷಾಯ ವರದಾಯ ಚ ।**
**ನೀಲಕಣ್ಠಾಯ ಪಿಙ್ಗಾಯ ಸ್ವರ್ಣಕೇಶಾಯ ವೈ ನಮಃ ॥೪೯॥**

ಜಲಪತಿಯೂ ದೇವಪತಿಯೂ ಆದ ಪರಮೇಶ್ವರನಿಗೆ ನಮಸ್ಕರಿಸುತ್ತೇನೆ. ಪೂಷನ ಹಲ್ಲುಮುರಿದ ದಂತಘ್ನನಿಗೂ, ಮುಕ್ಕಣ್ಣನಿಗೂ, ವರದನಿಗೂ, ನೀಲಕಂಠನಿಗೂ, ಪಿಂಗಲನಿಗೂ, ಸುವರ್ಣಮಯವಾದ ಕೂದಲನ್ನು ಹೊಂದಿರುವ ಪರಮೇಶ್ವರನಿಗೂ ಕೈಜೋಡಿಸಿ ನಮಿಸುತ್ತೇನೆ.

**ಕರ್ಮಾಣಿ ಯಾನಿ ದಿವ್ಯಾನಿ ಮಹಾದೇವಸ್ಯ ಧೀಮತಃ।**
**ತಾನಿ ತೇ ಕೀರ್ತಯಿಷ್ಯಾಮಿ ಯಥಾಪ್ರಜ್ಞಂ ಯಥಾಶ್ರುತಮ್ ॥೫೦॥**

ಅರ್ಜುನ! ಧೀಮಂತನಾದ ಮಹಾದೇವನ ದಿವ್ಯಕರ್ಮಗಳು ಯಾವುಗಳಿವೆಯೋ–ಆ ಎಲ್ಲ ಶುಭಕರ್ಮಗಳನ್ನೂ ನನಗೆ ತಿಳಿದಿರುವಷ್ಟು, ನಾನು ಕೇಳಿರುವಷ್ಟು ಹೇಳುತ್ತೇನೆ.

**ನ ಸುರಾ ನಾಸುರಾ ಲೋಕೇ ನ ಗನ್ಧರ್ವಾ ನ ರಾಕ್ಷಸಾಃ।**
**ಸುಖಮೇಧನ್ತಿ ಕುಪಿತೇ ತಸ್ಮಿನ್ನಪಿ ಗುಹಾಗತಾಃ ॥೫೧॥**

ಮಹಾದೇವನೇನಾದರೂ ಕೋಪಗೊಂಡನೆಂದರೆ ದೇವತೆಗಳಾಗಲೀ, ಅಸುರರಾಗಲೀ, ಗಂಧರ್ವ-ರಾಕ್ಷಸರಾಗಲೀ ಸುಖವಾಗಿರಲಾರರು. ಅವರು ಗುಹಾಪ್ರವೇಶಮಾಡಿದರೂ ಅಲ್ಲಿಯೂ ಅವರು ಸುಖದಿಂದಿರಲು ಸಾಧ್ಯವಾಗುವುದಿಲ್ಲ.

ಹಿಂದೊಮ್ಮೆ ಯಜ್ಞದೀಕ್ಷಿತನಾಗಿದ್ದ ದಕ್ಷನು ವಿಧಿವತ್ತಾಗಿ ಮಾಡಿದ ಯಜ್ಞವನ್ನು ಕೋಪಾಭಿಭೂತನಾಗಿದ್ದ ಪರಶಿವನು ಧ್ವಂಸಮಾಡಿದನು. ಆ ಸಮಯದಲ್ಲವನು ಬಹಳ ನಿರ್ದಯನಾಗಿದ್ದನು. ಧನುಸ್ಸಿನ ಮೂಲಕವಾಗಿ ಬಾಣವನ್ನು ಬಿಟ್ಟು ಬಹಳ ಗಟ್ಟಿಯಾಗಿ ಗರ್ಜನೆಮಾಡುತ್ತಿದ್ದನು.

ಮಹೇಶ್ವರನು ಕುಪಿತನಾಗಲಾಗಿ, ಯಜ್ಞವೂ ಸಹ ಬಹಳ ಬೇಗ ಹಾಳಾಗಿ ಹೋಗಲಾಗಿ, ದೇವತೆಗಳು ಯಾರಿಂದಲೂ ಸುಖವನ್ನಾಗಲೀ ಶಾಂತಿಯನ್ನಾಗಲೀ ಪಡೆಯಲಿಲ್ಲ. ಮಹಾದೇವನ ಧನುಸ್ಸಿನ ಟೇಂಕಾರಧ್ವನಿಯಿಂದಲೇ ಎಲ್ಲ ಲೋಕಗಳೂ ವ್ಯಾಕುಲಗೊಂಡು ಅವನ ವಶವಾದುವು. ದೇವಾಸುರರು ಕೆಳಗೆ ಬಿದ್ದರು. ಆ ಸಮಯದಲ್ಲಿ ಸಮುದ್ರದ ನೀರು ಉಕ್ಕೇರಿಬಂದಿತು. ಭೂಮಿಯು ನಡುಗಿತು. ಪರ್ವತಗಳು ಸೀಳಿ

ಹೋದುವು. ದಿಗ್ಗಜಗಳು ಭ್ರಾಂತವಾದುವು. ಲೋಕಗಳು ಘೋರಾಂಧಕಾರ ದಿಂದ ಆಚ್ಛಾದಿತವಾಗಿ ಕಾಣಿಸುತ್ತಿರಲಿಲ್ಲ. ಕುಪಿತನಾದ ಪರಮೇಶ್ವರನು ಸೂರ್ಯನ ಸಮೇತವಾಗಿ ಎಲ್ಲ ಜ್ಯೋತಿಗಳ ಬೆಳಕನ್ನೂ ನಷ್ಟಗೊಳಿಸಿದನು. ಮಹರ್ಷಿಗಳೂ ಭೀತರಾಗಿ ಗಾಬರಿಗೊಂಡರು. ಅವರು ಎಲ್ಲ ಪ್ರಾಣಿಗಳಿಗೂ ಮತ್ತು ತಮಗೂ ಸುಖವಾಗಲೆಂದು ಪುಣ್ಯಾಹವಾಚನವೇ ಮೊದಲಾದ ಶಾಂತಿಕರ್ಮಗಳನ್ನು ಮಾಡಿದರು.

ಶಂಕರನು ದಕ್ಷಯಜ್ಞದಲ್ಲಿ ಪುರೋಡಾಶವನ್ನು ಭಕ್ಷಿಸುತ್ತಿದ್ದ ಪೂಷನನ್ನು ಆಕ್ರಮಿಸಿ ಅಟ್ಟಹಾಸದಿಂದ ನಗುತ್ತಾ ಅವನ ಹಲ್ಲುಗಳೆಲ್ಲವನ್ನೂ ಕಿತ್ತುಬಿಟ್ಟನು. ಅದನ್ನು ನೋಡಿದ ದೇವತೆಗಳು ತಲೆತಗ್ಗಿಸಿಕೊಂಡು ಗಡ-ಗಡನೆ ನಡುಗುತ್ತಾ ದಕ್ಷನ ಯಜ್ಞಶಾಲೆಯಿಂದ ಹೊರಬಂದರು. ಪುನಃ ಶಿವನು ದೇವತೆಗಳ ಮೇಲೆ ಪ್ರಯೋಗಿಸಲು ನಿಶಿತವಾದ, ಧೂಮಯುಕ್ತವಾಗಿದ್ದ, ಕಿಡಿಗಳಿಂದ ಕೂಡಿದ್ದ, ವಿದ್ಯುತ್ತಿನಿಂದ ಕೂಡಿದ್ದ ಮೇಘಗಳೋಪಾದಿಯಲ್ಲಿ ಕಾಣುತ್ತಿದ್ದ ಬಾಣಗಳನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿದನು. ಕುಪಿತನಾಗಿದ್ದ ಮಹೇಶ್ವರನನ್ನು ನೋಡಿ ಎಲ್ಲ ದೇವತೆಗಳೂ ಅವನಿಗೆ ನಮಸ್ಕರಿಸಿ ಅವನನ್ನು ಸಮಾಧಾನ ಗೊಳಿಸಿ ರುದ್ರನಿಗೆ ಸಂಪೂರ್ಣವಾದ ಯಜ್ಞಭಾಗವನ್ನೂ ಕಲ್ಪಿಸಿದರು. ಭಯಭೀತರಾದ ದೇವತೆಗಳು ಶಂಕರನಿಗೇ ಶರಣುಹೋದರು. ಈಶ್ವರನ ಕೋಪವು ಶಾಂತವಾದನಂತರ ಪುನಃ ಆ ಯಜ್ಞವನ್ನು ಪೂರ್ಣಗೊಳಿಸಿದರು. ಆ ದಿನಗಳಲ್ಲಿ ದೇವತೆಗಳು ಸಂಪೂರ್ಣವಾಗಿ ಸೋತುಹೋಗಿದ್ದರು. ಈಗಲೂ ಸಹ ದೇವತೆಗಳು ರುದ್ರನ ವಿಷಯದಲ್ಲಿ ಭಯದಿಂದಲೇ ಇದ್ದಾರೆ.

ಅರ್ಜುನ! ರುದ್ರನ ಮಾಹಾತ್ಮ್ಯವನ್ನು ಕುರಿತು ಮತ್ತೊಂದು ಇತಿಹಾಸವನ್ನು ಹೇಳುವೆನು, ಕೇಳು:

ಮಹಾವೀರ್ಯವಂತರಾದ ಅಸುರರಿಗೆ ಮೂರು ಪಟ್ಟಣಗಳಿದ್ದುವು. ಆ ಮೂರು ಪಟ್ಟಣಗಳಲ್ಲಿ ಒಂದು ಲೋಹಮಯವೂ, ಮತ್ತೊಂದು ರಜತಮಯವೂ ಆಗಿದ್ದಿತು. ಮೂರನೆಯದು ಅತ್ಯಂತವಿಶಾಲವಾಗಿದ್ದು ಚಿನ್ನದಿಂದಲೇ ಕಟ್ಟಲ್ಪಟ್ಟಿದ್ದಿತು.

ಚಿನ್ನದ ಪಟ್ಟಣವು ಕಮಲಾಕ್ಷನೆಂಬ ಅಸುರನಿಗೆ ಸೇರಿದ್ದಿತು.

ತಾರಕಾಕ್ಷನೆಂಬ ರಾಕ್ಷಸನಿಗೆ ಬೆಳ್ಳಿಯ ಪಟ್ಟಣವೂ, ವಿದ್ಯುನ್ಮಾಲಿ ಎಂಬ ರಾಕ್ಷಸನಿಗೆ ಕಬ್ಬಿಣದ ಪಟ್ಟಣವೂ ಸೇರಿದ್ದಿತು. ಇಂದ್ರನು ಸರ್ವಾಯುಧಗಳಿಂದಲೂ ಆ ಮೂರು ಪಟ್ಟಣಗಳನ್ನು ಭೇದಿಸಲು ಸಮರ್ಥನಾಗಲಿಲ್ಲ. ಆಗ ಭಯಪೀಡಿತರಾದ ದೇವತೆಗಳೆಲ್ಲರೂ ರುದ್ರನನ್ನೇ ಮರೆಹೊಕ್ಕರು. ಇಂದ್ರನೊಡನೆ ಕೂಡಿದ ದೇವತೆಗಳೆಲ್ಲರೂ ಒಟ್ಟಾಗಿ ಸೇರಿ ಮಹಾತ್ಮನಾದ ಉಮಾಪತಿಯನ್ನು ಕುರಿತು ಹೇಳಿದರು:

"ಮಹಾನುಭಾವ! ತ್ರಿಪುರವಾಸಿಗಳಾದ ಘೋರರೂಪಿಗಳಾದ ಈ ರಾಕ್ಷಸರು ಬ್ರಹ್ಮನಿಂದ ವರಗಳನ್ನು ಪಡೆದುಕೊಂಡು ಆ ವರದಿಂದಲೇ ದರ್ಪಿತರಾಗಿ ಲೋಕವನ್ನೇ ಬಹಳವಾಗಿ ಪೀಡಿಸುತ್ತಿದ್ದಾರೆ. ದೇವ ದೇವೇಶ! ಮಹಾದೇವ! ನಿನ್ನ ಹೊರತಾಗಿ ಬೇರೆ ಯಾರಿಗೂ ಆ ರಾಕ್ಷಸರನ್ನು ಯಾವುದೇ ಉಪಾಯದಿಂದಲೂ ಸಂಹರಿಸಲು ಸಾಧ್ಯವಾಗುವುದಿಲ್ಲ. ಆದುದರಿಂದ ದೇವತೆಗಳ ಶತ್ರುಗಳಾದ ಅವರನ್ನು ದಯಮಾಡಿ ನೀನು ಸಂಹರಿಸು.

ಭುವನೇಶ್ವರನೇ! ನೀನೇನಾದರೂ ತ್ರಿಪುರಾಸುರರನ್ನು ಸಂಹರಿಸಿದ್ದೇ ಆದರೆ ಎಲ್ಲ ಕರ್ಮಗಳಲ್ಲಿಯೂ ತತ್ಕರ್ಮಾಂಗವಾಗಿ ಕಟ್ಟುವ ಪಶುವು ರುದ್ರನ ಭಾಗವಾಗುತ್ತದೆ.

**ಸ ತಥೋಕ್ತಸ್ತಥೇತ್ಯುಕ್ತ್ವಾ ದೇವಾನಾಂ ಹಿತಕಾಮ್ಯಯಾ ।**
**ಗನ್ಧಮಾದನವಿನ್ಧ್ಯೌ ಚ ಕೃತ್ವಾ ವಂಶಧ್ವಜೌ ಹರಃ ।**
**ಪೃಥ್ವೀಂ ಸಸಾಗರವನಾಂ ರಥಂ ಕೃತ್ವಾ ತು ಶಙ್ಕರಃ ॥೭೧॥**

**ಅಕ್ಷಂ ಕೃತ್ವಾ ತು ನಾಗೇನ್ದ್ರಂ ಶೇಷಂ ನಾಮ ತ್ರಿಲೋಚನಃ ।**
**ಚಕ್ರೇ ಕೃತ್ವಾ ತು ಚನ್ದ್ರಾರ್ಕೌ ದೇವ ದೇವಃ ಪಿನಾಕಧೃಕ್ ॥೭೨॥**

**ಅಣೀ ಕೃತ್ವೈಲಪತ್ರಂ ಚ ಪುಷ್ಪದನ್ತಂ ಚ ತ್ರ್ಯಮ್ಬಕಃ ।**
**ಯೂಪಂ ಕೃತ್ವಾ ತು ಮಲಯಮವನಾಹಂ ಚ ತಕ್ಷಕಮ್ ॥೭೩॥**

ಹೀಗೆ ದೇವತೆಗಳಿಂದ ಪ್ರಾರ್ಥಿತನಾದ ಪರಮೇಶ್ವರನು, ದೇವತೆಗಳ

ಹಿತಾರ್ಥವಾಗಿ ಹಾಗೆಯೇ ಆಗಲೆಂದು ಹೇಳಿ, ಗಂಧಮಾಧನ ಮತ್ತು ವಿಂಧ್ಯಪರ್ವತಗಳನ್ನು ತನ್ನ ಧ್ವಜದ ಎರಡು ವೇಣುದಂಡಗಳನ್ನಾಗಿ ಮಾಡಿಕೊಂಡನು. ಸಮುದ್ರ ಮತ್ತು ಅರಣ್ಯಗಳಿಂದ ಯುಕ್ತವಾದ ಭೂಮಿಯನ್ನೇ ರಥವನ್ನಾಗಿ ಮಾಡಿಕೊಂಡನು. ತ್ರಿಲೋಚನನು ಶೇಷನೆಂಬ ಹೆಸರಿನ ನಾಗೇಂದ್ರನನ್ನು ಆ ಮಹಾರಥದ ಅಚ್ಚುಮರವನ್ನಾಗಿ ಕಲ್ಪಿಸಿ ಕೊಂಡನು. ದೇವದೇವನಾದ ಪಿನಾಕಧರನಾದ ಪರಮೇಶ್ವರನು ಚಂದ್ರ-ಸೂರ್ಯರನ್ನೇ ತನ್ನ ರಥದ ಎರಡು ಚಕ್ರಗಳನ್ನಾಗಿ ಮಾಡಿಕೊಂಡನು. ತ್ರ್ಯಂಬಕನು ಐಲಪತ್ರನನ್ನೂ ಮತ್ತು ಪುಷ್ಪದಂತನನ್ನೂ ಆ ಮಹಾಚಕ್ರಗಳ ಕಡಾಣಿಗಳನ್ನಾಗಿ ಮಾಡಿಕೊಂಡನು. ಮಲಯಪರ್ವತವನ್ನೇ ರಥದ ನೊಗವನ್ನಾಗಿ ಮಾಡಿಕೊಂಡು ತಕ್ಷಕನಾಗನನ್ನು ನೊಗಕ್ಕೆ ಬಿಗಿಯುವ ಹಗ್ಗವನ್ನಾಗಿ ಮಾಡಿಕೊಂಡನು.

ಈ ರೀತಿಯಲ್ಲಿ ಪ್ರತಾಪವಂತನಾದ ಶರ್ವನು ಇತರ ಪ್ರಾಣಿಗಳನ್ನೂ ನೊಗಕ್ಕೆ ಸಂಬಂಧಿಸಿದ ವಸ್ತುಗಳನ್ನಾಗಿ ಮಾಡಿಕೊಂಡನು. ಅನಂತರ ಮಹೇಶ್ವರನು ನಾಲ್ಕು ವೇದಗಳನ್ನೇ ರಥದ ನಾಲ್ಕು ಕುದುರೆಗಳನ್ನಾಗಿ ಮಾಡಿಕೊಂಡನು.

**ಉಪವೇದಾನ್ಖಲೀನಾಂಶ್ಚ ಕೃತ್ವಾ ಲೋಕತ್ರಯೇಶ್ವರಃ ।**
**ಗಾಯತ್ರೀಂ ಪ್ರಗ್ರಹಂ ಕೃತ್ವಾ ಸಾವಿತ್ರೀಂ ಚ ಮಹೇಶ್ವರಃ ॥೭೫॥**

ತ್ರಿಲೋಕಾಧಿಪತಿಯಾದ ಮಹೇಶ್ವರನು ಆಯುರ್ವೇದ, ಧನುರ್ವೇದ, ಗಾಂಧರ್ವವೇದ ಮತ್ತು ಪಶ್ಚಿಮಾಮ್ನಾಯಗಳೆಂಬ ಉಪವೇದಗಳನ್ನು ಲಗಾಮುಗಳನ್ನಾಗಿ ಮಾಡಿಕೊಂಡು ಗಾಯತ್ರೀ ಮತ್ತು ಸಾವಿತ್ರಿಯರನ್ನು ಹಗ್ಗವನ್ನಾಗಿ ಮಾಡಿಕೊಂಡನು.

**ಕೃತ್ವೋಂಕಾರಂ ಪ್ರತೋದಂ ಚ ಬ್ರಹ್ಮಾಣಂ ಚೈವ ಸಾರಥಿಮ್ ।**
**ಗಾಣ್ಡಿವಂ ಮನ್ದರಂ ಕೃತ್ವಾ ಗುಣಂ ಕೃತ್ವಾ ತು ವಾಸುಕಿಮ್ ॥೭೬॥**
**ವಿಷ್ಣುಂ ಶರೋತ್ತಮಂ ಕೃತ್ವಾ ಶಲ್ಯಮಗ್ನಿಂ ತಥೈವ ಚ ।**
**ವಾಯುಂ ಕೃತ್ವಾಥ ವಾಜಾಭ್ಯಾಂ ಪುಙ್ಖೇ ವೈವಸ್ವತಂ ಯಮಮ್ ॥**

ಓಂಕಾರವನ್ನೇ ಚಾವಟಿಯನ್ನಾಗಿ ಮಾಡಿಕೊಂಡ ಪರಮೇಶ್ವರನು

ಬ್ರಹ್ಮನನ್ನೇ ರಥಕ್ಕೆ ಸಾರಥಿಯನ್ನಾಗಿ ನಿಯಮಿಸಿಕೊಂಡನು. ಮಂದರಪರ್ವತವನ್ನೇ ಗಾಂಡೀವಧನುಸ್ಸನ್ನಾಗಿ ಮಾಡಿಕೊಂಡು ವಾಸುಕಿಯನ್ನೇ ಶಿಂಜಿನಿಯನ್ನಾಗಿ ಮಾಡಿಕೊಂಡನು. ವಿಷ್ಣುವನ್ನು ಶ್ರೇಷ್ಠವಾದ ಬಾಣವನ್ನಾಗಿ ಮಾಡಿಕೊಂಡು ಅಗ್ನಿಯನ್ನು ಬಾಣಾಗ್ರದ ಅಲುಗನ್ನಾಗಿ ಪರಮೇಶ್ವರನು ಮಾಡಿಕೊಂಡನು. ವಾಯುವಿನಿಂದಲೇ ಆ ಎರಡು ಬಾಣಗಳಿಗೂ ರೆಕ್ಕೆಗಳನ್ನು ಕಲ್ಪಿಸಿ ವೈವಸ್ವತಯಮನನ್ನು ಆ ಬಾಣಗಳ ಮೂಲಭಾಗದಲ್ಲಿ ಸ್ಥಾಪಿಸಿದನು.

**ವಿದ್ಯುತ್ಕೃತ್ವಾಥ ನಿಶ್ರಾಣಂ ಮೇರುಂ ಕೃತ್ವಾಥ ವೈ ಧ್ವಜಮ್ ।**
**ಆರುಹ್ಯ ಸ ರಥಂ ದಿವ್ಯಂ ಸರ್ವದೇವಮಯಂ ಶಿವಃ ॥೭೮॥**

**ತ್ರಿಪುರಸ್ಯ ವಧಾರ್ಥಾಯ ಸ್ಥಾಣುಃ ಪ್ರಹರತಾಂ ವರಃ ।**
**ಅಸುರಾಣಾಮನ್ತಕರಃ ಶ್ರೀಮಾನತುಲವಿಕ್ರಮಃ ॥೭೯॥**

ವಿದ್ಯುತ್ತನ್ನೇ ತನ್ನ ಬಾಣಗಳ ಅಲುಗುಗಳನ್ನಾಗಿ ಮಾಡಿಕೊಂಡನು. ಪರಮೇಶ್ವರನು ಮೇರುಪರ್ವತವನ್ನೇ ತನ್ನ ರಥದ ಧ್ವಜವನ್ನಾಗಿ ಮಾಡಿಕೊಂಡನು. ಅನಂತರ ಯೋಧಶ್ರೇಷ್ಠನಾದ, ರಾಕ್ಷಸಾಂತಕರನಾದ, ಶ್ರೀಮಂತನಾದ, ಅತುಲವಿಕ್ರಮನಾದ, ಸ್ಥಿರನಾದ ಹರನು ತ್ರಿಪುರಾಸುರರ ವಧೆಗಾಗಿ ಸರ್ವದೇವಮಯವಾಗಿದ್ದ, ದಿವ್ಯವಾಗಿದ್ದ ಆ ರಥವನ್ನು ಹತ್ತಿದನು.

ಆ ಸಮಯದಲ್ಲಿ ದೇವತೆಗಳೂ ಮತ್ತು ತಪೋಧನರಾದ ಋಷಿಗಳೂ ಪರಮೇಶ್ವರನನ್ನು ಸ್ತೋತ್ರಮಾಡುತ್ತಿದ್ದರು. ಪ್ರಭುವಾದ ಪರಮೇಶ್ವರನು ದಿವ್ಯವಾದ, ಅಪ್ರತಿಮವಾದ, ಮಹೇಶ್ವರನ ಸಂಬಂಧವಾದ ಸ್ಥಾನವನ್ನು (ರಥ) ಕಲ್ಪಿಸಿ ಒಂದು ಸಾವಿರವರ್ಷಗಳ ಕಾಲ ಅಚಲನಾಗಿ ಆ ರಥದಲ್ಲಿಯೇ ನಿಂತಿದ್ದನು. ಯಾವಾಗ ರಾಕ್ಷಸರ ಆ ಮೂರು ಪಟ್ಟಣಗಳೂ ಒಟ್ಟಾಗಿ ಸೇರಿದುವೋ–ಆಗ ಪರಮೇಶ್ವರನು ವಿಷ್ಣು-ವಾಯು-ವೈವಸ್ವತರೂಪವಾದ ಮೂರು ಗಿಣ್ಣುಗಳಿದ್ದ ಮತ್ತು ಗಾರ್ಹಪತ್ಯ-ದಕ್ಷಿಣಾಗ್ನಿ-ಅಹವನೀಯಗಳೆಂಬ ಮೂರು ಮೊನೆಗಳಿದ್ದ ಬಾಣದಿಂದ ಆ ಮೂರು ಪುರಗಳನ್ನೂ ಭೇದಿಸಿದನು. ಆ ಸಮಯದಲ್ಲಿ ದಾನವರು ತಮ್ಮ ಪಟ್ಟಣಗಳನ್ನಾಗಲೀ–ಕಾಲನಿಂದಲೂ, ಅಗ್ನಿಯಿಂದಲೂ, ವೈಷ್ಣವತೇಜಸ್ಸಿನಿಂದಲೂ ಮತ್ತು ಸೋಮನ ತೇಜಸ್ಸಿನಿಂದಲೂ ಸಮಾಯುಕ್ತವಾಗಿದ್ದ ಆ ಬಾಣವನ್ನಾಗಲೀ ನೋಡಲು ಕೂಡ ಸಮರ್ಥರಾಗಲಿಲ್ಲ. ಆ ಸಮಯ

ದಲ್ಲಿ ಮೂರು ಪಟ್ಟಣಗಳನ್ನೂ ದಹಿಸುತ್ತಿದ್ದ ಮಹಾದೇವನನ್ನು ನೋಡುವ ಸಲುವಾಗಿ ಪಾರ್ವತಿಯು ಅಲ್ಲಿಗೆ ಹೋದಳು. ಅಲ್ಲಿದ್ದ ಪಂಚಶಿಖೆಗಳಿಂದ ಕೂಡಿದ್ದ ಬಾಲಕನೊಬ್ಬನನ್ನು ತೊಡೆಯಮೇಲೆತ್ತಿ ಕುಳ್ಳಿರಿಸಿಕೊಂಡಳು. ಇವನಾರಿರಬಹುದೆಂದು ಜಿಜ್ಞಾಸೆಮಾಡುತ್ತಿದ್ದ ಉಮಾದೇವಿಯು 'ಇವನಾರೆಂಬುದು ನಿಮಗೆ ತಿಳಿದಿರುವುದೇ?' ಎಂದು ದೇವತೆಗಳನ್ನು ಕೇಳಿದಳು. ಮಹಾತೇಜಸ್ಸಿನಿಂದ ಬೆಳಗುತ್ತಿದ್ದ ಆ ಮಗುವನ್ನು ನೋಡಿ ಅಸೂಯೆಗೊಂಡ ಇಂದ್ರನು ವಜ್ರಾಯುಧದಿಂದ ಆ ಮಗುವನ್ನು ಪ್ರಹರಿಸಲು ಹೋದನು. ಆ ಸಮಯದಲ್ಲಿ ಸರ್ವಲೋಕೇಶ್ವರನಾದ ಭಗವಾನ್ ಶಂಕರನು ಗಟ್ಟಿಯಾಗಿ ನಗುತ್ತಾ ಕ್ರುದ್ಧನಾಗಿದ್ದ ಇಂದ್ರನ ವಜ್ರಾಯುಧಯುಕ್ತವಾಗಿದ್ದ ತೋಳನ್ನು ಸ್ತಂಭನಗೊಳಿಸಿದನು. (ತೋಳನ್ನು ಚಲಿಸದಂತೆ ಮಾಡಿದನು.) ಸ್ತಂಭಿತವಾದ ಭುಜದಿಂದ ಕೂಡಿದ್ದ ಇಂದ್ರನು ಒಡನೆಯೇ ದೇವಗಣಗಳಿಂದ ಪರಿವೃತನಾಗಿ ಅವಿನಾಶಿಯಾದ, ಪ್ರಭುವಾದ ಬ್ರಹ್ಮನ ಬಳಿಗೆ ಹೋದನು.*

ದೇವತೆಗಳೆಲ್ಲರೂ ಬ್ರಹ್ಮನಿಗೆ ತಲೆಬಾಗಿ ನಮಸ್ಕರಿಸಿ ಕೈಜೋಡಿಸಿ ಕೊಂಡು ಹೇಳಿದರು: "ಬ್ರಹ್ಮದೇವ! ಪಾರ್ವತಿಯ ತೊಡೆಯಮೇಲಿರುವ ಅದ್ಭುತವಾದ ಆ ಪ್ರಾಣಿಯು ಯಾವುದು? ಪಂಚಶಿಖೆಗಳುಳ್ಳ ಬಾಲಕನಂತೆ ಅದು ಕಾಣುತ್ತಿದ್ದುದರಿಂದ ನಾವು ಅದು ಯಾರೆಂಬುದನ್ನು ತಿಳಿಯದೇ ಉಪೇಕ್ಷಿಸಿದೆವು. ಯುದ್ಧಮಾಡದೆಯೇ ಆ ಮಗುವು ಲೀಲೆಯಿಂದ ಇಂದ್ರ

---

*ವ್ಯಾಖ್ಯಾನಕಾರರು ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ಈ ಕಥೆಗಳನ್ನು ವಿವರಿಸಿದ್ದಾರೆ. ಅವರ ವ್ಯಾಖ್ಯೆಯು ಹೀಗಿದೆ: **ಪೂರ್ವಂ ದಕ್ಷಯಜ್ಞಧ್ವಂಸನಮುಕ್ತಂ ತಸ್ಯ ತಾತ್ಪರ್ಯಂ–ಈಶ್ವರೇऽನರ್ಪಿತೋ ಯಜ್ಞೋ ವಿಧ್ವಂಸತೇ**-ಮೊದಲು ದಕ್ಷಯಜ್ಞಧ್ವಂಸದ ಪ್ರಕರಣವು ಹೇಳಲ್ಪಟ್ಟಿತು. 'ಇದರಿಂದ ಈಶ್ವರನಿಗೆ ಅರ್ಪಿತವಾಗದಿರುವ ಯಜ್ಞವು ಹಾಳಾ ಗುತ್ತದೆ '-ಎಂಬ ತತ್ತ್ವದ ಪ್ರತಿಪಾದನೆಯಾಯಿತು. **ತತಶ್ಚ ಯಜ್ಞಕರ್ತಾರೋ ಋತ್ವಿಜಶ್ಚ ನಶ್ಯನ್ತೀತ್ಯುಕ್ತಂ**-ಅನಂತರ 'ಯಜ್ಞವನ್ನು ನಿರ್ವಹಿಸುವ ಋತ್ವಿಜರೂ ಯಜಮಾನರೂ ವಿನಾಶಹೊಂದುತ್ತಾರೆ'-ಎಂಬ ತತ್ತ್ವವು ಹೇಳಲ್ಪಟ್ಟಿದೆ. ಇದರಿಂದ **ಈಶ್ವರಪ್ರೀತ್ಯರ್ಥಂ ಕರ್ಮಾಣಿ ಕಾರ್ಯಾಣೀತಿದರ್ಶಿತಮ್**-ಈಶ್ವರಪ್ರೀತ್ಯರ್ಥವಾಗಿ ಕರ್ಮಗಳನ್ನು ಮಾಡಬೇಕೆಂಬುದು ಸೂಚಿತವಾಯಿತು. ತತಸ್ತ್ರಿಪುರವಧ ಉಕ್ತಃ- ಅನಂತರ ತ್ರಿಪುರವಧೆಯು ಹೇಳಲ್ಪಟ್ಟಿತು. ಅದರ ತಾತ್ಪರ್ಯವು ಹೀಗಿದೆ: **ಸ್ಥೂಲಸೂಕ್ಷ್ಮಕಾರಣಾನಿ ತ್ರೀಣಿ ಶರೀರಾಣಿ ಪುರಾಣಿ**-ಮನುಷ್ಯನಲ್ಲಿರುವ ಸ್ಥೂಲ, ಸೂಕ್ಷ್ಮ ಮತ್ತು ಕಾರಣಗಳೆಂಬ ಮೂರು ಶರೀರಗಳೇ ತ್ರಿಪುರಗಳು. **ಕ್ರಮಾತ್ ಬಹುಪ್ರೀತ್ಯಲ್ಪಸುಖಕರತ್ವಾಭ್ಯಾಂ ಮೋಹಮಯತ್ವೇನ ಚ ಸೌವರ್ಣರಾಜತಾಯಸಾನಿ** ಬಹುಪ್ರೀತಿ, ಅಲ್ಪಸುಖ ಮತ್ತು ಮೋಹಕರಗಳಾಗಿರುವುದರಿಂದ

ಸಹಿತರಾದ ನಮ್ಮೆಲ್ಲರನ್ನೂ ಜಯಿಸಿಬಿಟ್ಟಿತು. ಆ ಮಗುವು ಯಾವುದೆಂಬುದನ್ನು ನಿನ್ನಿಂದ ಕೇಳಿ ತಿಳಿದುಕೊಳ್ಳಲು ನಾವಿಲ್ಲಿಗೆ ಬಂದಿರುತ್ತೇವೆ.”

ಅರ್ಜುನ! ದೇವತೆಗಳ ಮಾತನ್ನು ಕೇಳಿ ಬ್ರಹ್ಮವಿದರಲ್ಲಿ ಶ್ರೇಷ್ಠನಾದ ಬ್ರಹ್ಮನು ಸ್ವಲ್ಪಹೊತ್ತು ಚಿಂತಿಸಿ ಅಮಿತತೇಜಸ್ಸಿನಿಂದ ಕೂಡಿರುವ ಆ ಬಾಲಕನೇ ಶ್ರೀಶಂಕರನೆಂಬುದನ್ನು ತಿಳಿದುಕೊಂಡನು. ಅನಂತರ ಬ್ರಹ್ಮನು ಇಂದ್ರನೇ ಮೊದಲಾದ ಸುರಶ್ರೇಷ್ಠರನ್ನು ಕುರಿತು ಹೇಳಿದನು:

“ಚರಾಚರಾತ್ಮಕವಾದ ಜಗತ್ತಿಗೂ ಭಗವಂತನಾದ ಹರನೇ ಸ್ವಾಮಿಯು. ಮಹೇಶ್ವರನಿಗಿಂತಲೂ ಮಿಗಿಲಾದ ವಸ್ತುವೇ ಬ್ರಹ್ಮಾಂಡದಲ್ಲಿ ಯಾವುದೂ ಇರುವುದಿಲ್ಲ. ನೀವು ಉಮೆಯೊಡನೆ ನೋಡಿದ ಅತ್ಯಂತಕಾಂತಿಯಿಂದ ಬೆಳಗುತ್ತಿದ್ದ ಆ ಮಗುವೇ ಪರಶಿವನು. ಪಾರ್ವತಿಯನ್ನು ಪ್ರಸನ್ನಗೊಳಿಸಲು ಶಂಕರನು ಬಾಲಕನ ರೂಪವನ್ನು ಧರಿಸಿದ್ದಾನೆ. ನನ್ನೊಡನೆ ನೀವೆಲ್ಲರೂ ಆ ಬಾಲಕನಿರುವೆಡೆಗೆ ಬನ್ನಿರಿ.”

ಅರ್ಜುನ! ನಿಜವಾಗಿಯೂ ಆ ಬಾಲಕನೇ ಸರ್ವಲೋಕೇಶ್ವರನಾದ ಪ್ರಭುವಾದ ಈಶ್ವರನಾಗಿದ್ದನು. ಆದರೆ ಬಾಲಸೂರ್ಯನ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಭುವನೇಶ್ವರನಾದ ಆ ಬಾಲಕನನ್ನು ಪ್ರಜಾಪತಿಗಳಿಂದ ಕೂಡಿದ ದೇವತೆಗಳೂ ಮೊದಲು ಗುರುತಿಸಲಾರದೇ ಹೋದರು.

---

ತ್ರಿಪುರಗಳು. ಸುವರ್ಣ-ರಜತ ಮತ್ತು ಆಯಸಮಯವಾಗಿರುವುದನ್ನು ಸೂಚಿಸಲ್ಪಡುತ್ತವೆ. ಸ್ಥೂಲಶರೀರವು ಸುವರ್ಣಮಯವಾದುದು. ಸೂಕ್ಷ್ಮಶರೀರವು ರಜತಮಯವಾದುದು. ಕಾರಣಶರೀರವು ಲೋಹಮಯವಾದುದು. **ಕಾಮಾದಯೋSಸುರಾಃ**= ಕಾಮ-ಕ್ರೋಧಾದಿಗಳೇ ಅಸುರರು. **ಶಮಾದಯೋ ದೇವಾಃ**=ಶಮದಮಾದಿಗಳೇ ದೇವತೆಗಳು. **ತೇಷಾಂ ಪ್ರೀತಿಕರೋ ರುದ್ರಃ ಪೃಥಿವ್ಯಾಖ್ಯಂ ರಥಮಾಸ್ಥಾಯ ತಸ್ಯ ಚಾಲಕೇ ಚನ್ದ್ರ ಸೂರ್ಯಾಖ್ಯೇ ಮನಶ್ಚಕ್ಷುಷೀ ಚಕ್ರೇ।** ಶಮದಮಾದಿ ದೇವತೆಗಳಿಗೆ ಪ್ರೀತಿಕರನಾದ ಆತ್ಮಸ್ವರೂಪನಾದ ರುದ್ರನು ಪೃಥಿವೀರೂಪವಾದ ದೇಹವೆಂಬ ರಥದಲ್ಲಿ ಕುಳಿತು ಆ ರಥವನ್ನು ನಡೆಸುವ ಸಲುವಾಗಿ ಚಂದ್ರ-ಸೂರ್ಯರೆಂಬ ಹೆಸರಿನ ಮನಸ್ಸನ್ನೂ ಕಣ್ಣುಗಳನ್ನೂ ರಥದ ಚಕ್ರಗಳ ರೂಪವಾಗಿ ಕಲ್ಪಿಸಿದನು. **ವೇದಾಶ್ಚ ಗಮ್ಯಸ್ಥಾನಪ್ರಾಪಕತ್ವೇನ ಹಯಾಃ**=ತಲುಪಬೇಕಾದ ಸ್ಥಾನಕ್ಕೆ ವೇದಗಳು ಮನುಷ್ಯನನ್ನು ಒಯ್ಯುವ ಕಾರಣದಿಂದ ಅವುಗಳೇ ಕುದುರೆಗಳ ರೂಪದಲ್ಲಿವೆ. **ಶರೋ ವಿಷ್ಣ್ವಧಿಷ್ಠಿತಾ ಸೂಕ್ಷ್ಮಬುದ್ಧಿಃ** ವಿಷ್ಣುವಿನಿಂದ ಅಧಿಷ್ಠಿತವಾದ

ಅನಂತರ ಬ್ರಹ್ಮನು ಬಾಲಕನ ಸಮೀಪಕ್ಕೆ ಹೋಗಿ ನೋಡಿ ಅವನು ಎಲ್ಲರಿಗಿಂತಲೂ ಶ್ರೇಷ್ಠನಾದವನೆಂಬುದನ್ನು ತಿಳಿದುಕೊಂಡು ನಮಸ್ಕರಿಸಿ ಸ್ತುತಿಸಲು ಉಪಕ್ರಮಿಸಿದನು:

**ತ್ವಂ ಯಜ್ಞೋ ಭುವನಸ್ಯಾಸ್ಯ ತ್ವಂ ಗತಿಸ್ತ್ವಂ ಪರಾಯಣಮ್ ।**
**ತ್ವಂ ಭವಸ್ತ್ವಂ ಮಹಾದೇವಸ್ತ್ವಂ ಧಾಮ ಪರಮಂ ಪದಮ್ ।**
**ತ್ವಯಾ ಸರ್ವಮಿದಂ ವ್ಯಾಪ್ತಂ ಜಗತ್ಸ್ಥಾವರಜಙ್ಗಮಮ್ ॥೯೬॥**

"ನೀನು ಯಜ್ಞರೂಪನಾಗಿರುವೆ. ಈ ಜಗತ್ತಿಗೇ ನೀನು ದಿಕ್ಕಾಗಿರುವೆ ಮತ್ತು ಆಶ್ರಯಸ್ಥಾನನಾಗಿರುವೆ. ನೀನೇ ಭವನು. ನೀನೇ ಮಹಾದೇವನು. ನೀನೇ ಪರಮಧಾಮವು. ನಿನ್ನಿಂದಲೇ ಸ್ಥಾವರ-ಜಂಗಮಾತ್ಮಕವಾದ ಈ ಸಕಲಜಗತ್ತೂ ವ್ಯಾಪ್ತವಾಗಿದೆ.

**ಭಗವನ್ಭೂತಭವ್ಯೇಶ ಲೋಕನಾಥ ಜಗತ್ಪತೇ ।**
**ಪ್ರಸಾದಂ ಕುರು ಶಕ್ರಸ್ಯ ತ್ವಯಾ ಕ್ರೋಧಾರ್ದಿತಸ್ಯ ವೈ ॥೯೭॥**

ಭಗವನ್! ವರ್ತಮಾನ-ಭವಿಷ್ಯತ್ತುಗಳಿಗೂ ಸ್ವಾಮಿಯೇ! ಲೋಕನಾಥ! ಜಗತ್ಪತಿಯೇ! ನಿನ್ನ ಕ್ರೋಧಾಗ್ನಿಗೆ ಸಿಕ್ಕಿ ಪೀಡಿತನಾಗಿರುವ ಶಕ್ರನಿಗೆ ಕೃಪೆದೋರು."

ಅರ್ಜುನ! ಪದ್ಮಯೋನಿಯಾದ ಬ್ರಹ್ಮನ ಮಾತನ್ನು ಕೇಳಿ ಪ್ರೀತನಾದ ಮಹೇಶ್ವರನು ಪ್ರಸನ್ನವದನನಾಗಿ ಅಟ್ಟಹಾಸದಿಂದ ನಗತೊಡಗಿದನು. ಅನಂತರ ದೇವತೆಗಳು ಉಮೆಯನ್ನೂ ಮತ್ತು ರುದ್ರನನ್ನೂ

---

ಸೂಕ್ಷ್ಮಬುದ್ಧಿಯೇ ಬಾಣ. ಏಕಾಗ್ರೇಣ ಶರೀರತ್ರಯಭೇದೇ ತುರ್ಯೇ ಬ್ರಹ್ಮಣಿ ಸಾಕ್ಷಾತ್ಕೃತೇ ಸತಿ ಕಾಮಾದಯೋ ನಶ್ಯನ್ತಿ ಫಲಭೂತಾಶ್ಚ ಶಮಾದಯೋ ವರ್ಧನ್ತೇ–ಬುದ್ಧಿಯ ಏಕಾಗ್ರತೆಯಿಂದ ಮೂರು ಪುರಗಳನ್ನೂ (ಶರೀರಗಳನ್ನೂ) ಭೇದಿಸಿಕೊಂಡು ನಾಲ್ಕನೆಯ ಪರಬ್ರಹ್ಮವಸ್ತುವನ್ನು ಸಾಕ್ಷಾತ್ಕಾರಮಾಡಿಕೊಂಡುದೇ ಆದರೆ ಕಾಮಾದಿ ರಾಕ್ಷಸರೆಲ್ಲರೂ ವಿನಾಶಹೊಂದುತ್ತಾರೆ. ತೇಷು ಚ ವರ್ಧಮಾನೇಷು ರುದ್ರೋ ಬಾಲವತ್ ರಾಗದ್ವೇಷಶೂನ್ಯೋ ಬ್ರಹ್ಮವಿದ್ಯಾಪರನಾಮ್ನ್ಯಾ ಉಮಾಯಾ ವಶಗೋ ಭವತಿ ಇತ್ಯೇದದತ್ರ ಪ್ರದರ್ಶ್ಯತೇ. ಶಮ-ದಮಾದಿಗಳು ವರ್ಧಿಸಲಾಗಿ ಆತ್ಮಸ್ವರೂಪನಾದ ರುದ್ರನು ಬಾಲಕನಂತೆ ರಾಗದ್ವೇಷಶೂನ್ಯನಾಗಿ ಬ್ರಹ್ಮವಿದ್ಯಾಸ್ವರೂಪಳಾದ ಉಮೆಯ ವಶನಾಗುತ್ತಾನೆ. ಈ ತತ್ತ್ವವು ಈ ತ್ರಿಪುರವಿಧ್ವಂಸನದ ಕಥೆಯಲ್ಲಡಗಿದೆ.

ಸ್ತೋತ್ರ ಮತ್ತು ಅರ್ಚನೆಗಳಿಂದ ಪ್ರಸನ್ನಗೊಳಿಸಿದರು. ವಜ್ರಾಯುಧಸಹಿತವಾಗಿ ಸ್ತಂಭೀಭೂತವಾಗಿದ್ದ ಇಂದ್ರನ ಬಾಹುವು ಮೊದಲಿನಂತೆಯೇ ಚಲಿಸತೊಡಗಿತು. ದಕ್ಷಯಜ್ಞವಿನಾಶಕನಾದ, ತ್ರಿದಶಶ್ರೇಷ್ಠನಾದ, ವೃಷಧ್ವಜನಾದ ಭಗವಾನ್ ಶಂಕರನು ಪತ್ನಿಯೊಡನೆ ದೇವತೆಗಳನ್ನು ಅನುಗ್ರಹಿಸಿದನು.

ಸ ವೈ ರುದ್ರಃ ಸ ಚ ಶಿವಃ ಸೋಽಗ್ನಿಃ ಸರ್ವಶ್ಚ ಸರ್ವವಿತ್ ।
ಸ ಚೇನ್ದ್ರಶ್ಚೈವ ವಾಯುಶ್ಚ ಸೋಽಶ್ವಿನೌ ಚ ಸ ವಿದ್ಯುತಃ ॥
ಸ ಭವಃ ಸ ಚ ಪರ್ಜನ್ಯೋ ಮಹಾದೇವಃ ಸನಾತನಃ ।
ಸ ಚನ್ದ್ರಮಾಃ ಸ ಚೇಶಾನಃ ಸ ಸೂರ್ಯೋ ವರುಣಶ್ಚ ಸಃ ॥
ಸ ಕಾಲಃ ಸೋಽನ್ತಕೋ ಮೃತ್ಯುಃ ಸ ಯಮೋ ರಾತ್ರ್ಯಹಾನಿ ತು ।
ಮಾಸಾರ್ಧಮಾಸಾ ಋತವಃ ಸಂಧ್ಯೇ ಸಂವತ್ಸರಶ್ಚ ಸಃ ॥೧೦೪॥
ಧಾತಾ ಚ ಸ ವಿಧಾತಾ ಚ ವಿಶ್ವಾತ್ಮಾ ವಿಶ್ವಕರ್ಮಕೃತ್ ।
ಸರ್ವಾಸಾಂ ದೇವತಾನಾಂ ಚ ಧಾರಯತ್ಯವಪುರ್ವಪುಃ ॥೧೦೫॥
ಸರ್ವದೇವೈಃ ಸ್ತುತೋ ದೇವಃ ಸೈಕಧಾ ಬಹುಧಾ ಚ ಸಃ ।
ಶತಧಾ ಸಹಸ್ರಧಾ ಚೈವ ಭೂಯಃ ಶತಸಹಸ್ರಧಾ ॥೧೦೬॥

ಅರ್ಜುನ! ಅವನೇ ರುದ್ರನು, ಅವನೇ ಶಿವನು, ಅವನೇ ಅಗ್ನಿಯು, ಅವನೇ ಸರ್ವಸ್ವರೂಪನು ಮತ್ತು ಸರ್ವಜ್ಞನು. ಇಂದ್ರ-ವಾಯುಗಳೂ ಅವನೇ ಆಗಿದ್ದಾನೆ. ಅಶ್ವಿನೀದೇವತೆಗಳೂ ಮತ್ತು ವಿದ್ಯುತ್ತೂ ಸಹ ಅವನ ಸ್ವರೂಪಗಳೇ ಆಗಿವೆ.

ಅವನೇ ಭವನು, ಪರ್ಜನ್ಯನು, ಮಹಾದೇವನು, ಸನಾತನನು. ಅವನೇ ಚಂದ್ರನೂ, ಈಶಾನನೂ, ಸೂರ್ಯನೂ ಮತ್ತು ವರುಣನೂ ಆಗಿದ್ದಾನೆ. ಅವನೇ ಕಾಲನೂ, ಅಂತಕನೂ, ಮೃತ್ಯುವೂ, ಯಮನೂ ಆಗಿದ್ದಾನೆ. ಹಗಲು-ರಾತ್ರಿಗಳು, ಮಾಸ-ಪಕ್ಷಗಳು, ಋತುಗಳು, ಎರಡು ಸಂಧ್ಯಾಕಾಲಗಳು ಮತ್ತು ಸಂವತ್ಸರ–ಇವೂ ಅವನ ಸ್ವರೂಪಗಳೇ ಆಗಿವೆ. ಅವನೇ ಧಾತನೂ ವಿಧಾತನೂ ಆಗಿದ್ದಾನೆ. ವಿಶ್ವವನ್ನೇ ಆತ್ಮವಾಗಿ

ಹೊಂದಿರತಕ್ಕವನೂ ವಿಶ್ವದ ಕರ್ಮಗಳೆಲ್ಲವನ್ನೂ ಮಾಡುವವನೂ ಅವನೇ ಆಗಿರುತ್ತಾನೆ. ಶರೀರರಹಿತನಾಗಿರುವ ಪರಮೇಶ್ವರನು ಎಲ್ಲ ದೇವತೆಗಳ ಶರೀರಗಳನ್ನೂ ಧರಿಸಿದ್ದಾನೆ. ಎಲ್ಲ ದೇವತೆಗಳೂ ಅವನನ್ನು ಸದಾಕಾಲ ದಲ್ಲಿಯೂ ಸ್ತುತಿಸುತ್ತಿರುತ್ತಾರೆ. ಅವನು ಏಕರೂಪನೂ ಬಹುರೂಪನೂ ಆಗಿದ್ದಾನೆ. ನೂರಾರು-ಸಾವಿರಾರು-ಲಕ್ಷೋಪಲಕ್ಷರೂಪಗಳಿಂದ ಅವನು ವಿರಾಜಿಸುತ್ತಿರುತ್ತಾನೆ.

**ದ್ವೇ ತನೂ ತಸ್ಯ ದೇವಸ್ಯ ವೇದಜ್ಞಾ ಬ್ರಾಹ್ಮಣಾ ವಿದುಃ ।**
**ಘೋರಾ ಚಾನ್ಯಾ ಶಿವಾ ಚಾನ್ಯಾ ತೇ ತನೂ ಬಹುಧಾ ಪುನಃ ॥೧೦೭॥**

ಪರಶಿವನಿಗೆ ಎರಡು ದೇಹಗಳಿವೆ. ಇದನ್ನು ವೇದಜ್ಞರಾದ ಬ್ರಾಹ್ಮಣರು ತಿಳಿದಿರುತ್ತಾರೆ. ಒಂದು ಘೋರಶರೀರ. ಮತ್ತೊಂದು ಮಂಗಳಮಯವಾದ ಶರೀರ. ಆ ಎರಡು ಶರೀರಗಳೂ ಸಹ ಅನೇಕ ಪ್ರಕಾರವಾಗಿರುತ್ತವೆ.

**ಘೋರಾ ತು ಯಾ ತನುಸ್ತಸ್ಯ ಸೋಽಗ್ನಿರ್ವಿಷ್ಣುಃ ಸ ಭಾಸ್ಕರಃ ।**
**ಸೌಮ್ಯಾ ತು ಪುನರೇವಾಸ್ಯ ಆಪೋ ಜ್ಯೋತೀಂಷಿ ಚನ್ದ್ರಮಾಃ ॥**

ಅವನ ಘೋರಶರೀರವು ಅಗ್ನಿ, ವಿಷ್ಣು ಮತ್ತು ಭಾಸ್ಕರರ ರೂಪದಲ್ಲಿದೆ. ಸೌಮ್ಯಶರೀರವು ನೀರು, ನಕ್ಷತ್ರಗಳು ಮತ್ತು ಚಂದ್ರನ ರೂಪದಲ್ಲಿದೆ.

**ವೇದಾಃ ಸಾಙ್ಗೋಪನಿಷದಃ ಪುರಾಣಾಧ್ಯಾತ್ಮನಿಶ್ಚಯಾಃ ।**
**ಯದತ್ರ ಪರಮಂ ಗುಹ್ಯಂ ಸ ವೈ ದೇವೋ ಮಹೇಶ್ವರಃ ॥೧೦೯॥**

ವೇದ-ವೇದಾಂಗಗಳ, ಉಪನಿಷತ್ತುಗಳ, ಪುರಾಣಗಳ, ಆಧ್ಯಾತ್ಮಶಾಸ್ತ್ರಗಳ ಸಿದ್ಧಾಂತವು ಯಾವುದಿರುವುದೋ ಮತ್ತು ಅವುಗಳಲ್ಲಿ ಯಾವ ಪರಮಗಹನವಾದ ವಿಷಯವೊಂದು ಅಡಗಿರುವುದೋ ಅದೇ ಈಶ್ವರ ತತ್ತ್ವ. ಅವನೇ ದೇವದೇವನಾದ ಮಹೇಶ್ವರನು.

ಅರ್ಜುನ! ಹುಟ್ಟು-ಸಾವುಗಳಿಲ್ಲದ ಭಗವಂತನಾದ ಮಹಾದೇವನು

ಇಂತಹ ಅಪಾರವಾದ ಮಹಿಮೆಗಳುಳ್ಳವನು. ಒಂದು ಸಾವಿರ ವರ್ಷಗಳ ಪರ್ಯಂತವಾಗಿ ಎಡೆಬಿಡದೇ ಹೇಳುತ್ತಿದ್ದರೂ ಆ ಭಗವಂತನ ಎಲ್ಲ ಗುಣಗಳನ್ನೂ ಹೇಳಲು ನನ್ನಿಂದ ಸಾಧ್ಯವಾಗುವುದಿಲ್ಲ.

**ಸರ್ವೈರ್ಗ್ರಹೈರ್ಗೃಹೀತಾನ್ವೈ ಸರ್ವಪಾಪಸಮನ್ವಿತಾನ್ ।**
**ಸ ಮೋಚಯತಿ ಸುಪ್ರೀತಃ ಶರಣ್ಯಃ ಶರಣಾಗತಾನ್ ॥೧೧೧॥**

ಸಮಸ್ತಗ್ರಹಗಳ ಬಾಧೆಯಿಂದ ಪೀಡಿತರಾದವರನ್ನೂ, ಸರ್ವಪಾಪಗಳಿಂದ ಯುಕ್ತರಾದವರನ್ನೂ–ಅವರು ಶಿವನಿಗೆ ಶರಣಾಗತರಾದರೆ–ಶರಣ್ಯನಾದ (ಶರಣಾಗತರಕ್ಷಕನಾದ) ಮಹೇಶ್ವರನು ಸುಪ್ರೀತನಾಗಿ ಅವರನ್ನು ಗ್ರಹಬಾಧೆಗಳಿಂದಲೂ, ಸರ್ವಪಾಪಗಳಿಂದಲೂ ವಿಮೋಚನೆಮಾಡುತ್ತಾನೆ.

**ಆಯುರಾರೋಗ್ಯಮೈಶ್ವರ್ಯಂ ವಿತ್ತಂ ಕಾಮಾಂಶ್ಚ ಪುಷ್ಕಲಾನ್ ।**
**ಸ ದದಾತಿ ಮನುಷ್ಯೇಭ್ಯಃ ಸ ಚೈವಾಕ್ಷಿಪತೇ ಪುನಃ ॥೧೧೨॥**

ಸುಪ್ರೀತನಾದ ಪರಮೇಶ್ವರನು ಆಯುಸ್ಸು, ಆರೋಗ್ಯ, ಐಶ್ವರ್ಯ, ಹಣ, ಬೇಕಾದ ಕಾಮನೆಗಳು–ಎಲ್ಲವನ್ನೂ ಮನುಷ್ಯರಿಗೆ ದಯಪಾಲಿಸುತ್ತಾನೆ. ಅವನೇನಾದರೂ ಕೋಪಗೊಂಡರೆ ಮನುಷ್ಯನಲ್ಲಿರುವ ಆ ಎಲ್ಲ ಸಂಪತ್ತುಗಳನ್ನೂ ವಿನಾಶಗೊಳಿಸುತ್ತಾನೆ. ಇಂದ್ರಾದಿ ದೇವತೆಗಳಲ್ಲಿರುವ ಐಶ್ವರ್ಯವೂ ಈಶ್ವರನ ಐಶ್ವರ್ಯವೆಂದೇ ಹೇಳುತ್ತಾರೆ. ಅವನು ಈಶ್ವರನಾಗಿರುವುದರಿಂದಲೇ ಲೋಕದಲ್ಲಿರುವ ಮನುಷ್ಯರ ಶುಭಾಶುಭ ಕರ್ಮಗಳಿಗೆ ತಕ್ಕುದಾದ ಫಲವನ್ನು ಕೊಡುತ್ತಾನೆ. ಆದುದರಿಂದ ಅವನನ್ನು ಸಕಲ ಕಾಮನೆಗಳ ಈಶ್ವರನೆಂದು ಹೇಳುತ್ತಾರೆ.

ಮಹಾಭೂತಗಳಿಗೆ ಈಶ್ವರನಾದುದರಿಂದ ಅವನನ್ನು ಮಹೇಶ್ವರನೆಂದೂ ಕರೆಯುತ್ತಾರೆ. ನಾನಾಪ್ರಕಾರವಾದ ಬಹುಸಂಖ್ಯಾಕರೂಪಗಳಿಂದ ಅವನು ವಿಶ್ವವನ್ನೇ ವ್ಯಾಪಿಸಿದ್ದಾನೆ. ಆ ಮಹಾದೇವನ ಮುಖವು ಸಮುದ್ರದಲ್ಲಿ ಅಧಿಷ್ಠಾನಹೊಂದಿದೆ. ಆ ಮುಖವು ನೀರಿನ ರೂಪವಾದ ಹವಿಸ್ಸನ್ನು ಕುಡಿಯುತ್ತಾ ವಡವಾಮುಖ ಅಥವಾ 'ವಾಡವಾಗ್ನಿ' ಎಂದು ಪ್ರಸಿದ್ಧಿಯನ್ನು ಹೊಂದಿದೆ.

**ಏಷ ಚೈವ ಶ್ಮಶಾನೇಷು ದೇವೋ ವಸತಿ ನಿತ್ಯಶಃ ।**
**ಯಜನ್ತ್ಯೇನಂ ಜನಾಸ್ತತ್ರ ವೀರಸ್ಥಾನ ಇತೀಶ್ವರಮ್ ॥೧೧೭॥**

ಆ ಮಹಾದೇವನೇ ಶ್ಮಶಾನದಲ್ಲಿ (ಮಹಾಶ್ಮಶಾನವೆಂದು ಪ್ರಸಿದ್ಧವಾಗಿರುವ ವಾರಣಾಸಿಯಲ್ಲಿ) ನಿತ್ಯವೂ ವಾಸವಾಗಿರುತ್ತಾನೆ. ಅಲ್ಲಿ ಅವನನ್ನು ಜನರು 'ವೀರಸ್ಥಾನೇಶ್ವರ' ಎಂಬ ಹೆಸರಿನಿಂದ ಆರಾಧಿಸುತ್ತಾರೆ.

ಅವನಿಗೆ ದೇದೀಪ್ಯಮಾನವಾದ ಮತ್ತು ಘೋರವಾದ ಅನೇಕ ರೂಪ ಗಳಿವೆ. ಲೋಕದಲ್ಲಿ ಈ ರೂಪಗಳೆಲ್ಲವನ್ನೂ ಮನುಷ್ಯರು ಪೂಜಿಸುತ್ತಾರೆ ಮತ್ತು ಪರಮೇಶ್ವರನ ನಾಮಸಂಕೀರ್ತವನ್ನು ಕೀರ್ತನಮಾಡುತ್ತಾರೆ. ಅವನ ಮಹತ್ತ್ವದ ಕಾರಣದಿಂದಲೂ, ಸರ್ವವ್ಯಾಪಕತೆಯ ಕಾರಣದಿಂದಲೂ, ಅವನು ಮಾಡಿರುವ ಅನೇಕವಾದ ಅದ್ಭುತಕರ್ಮಗಳಿಂದಲೂ ಅವನಿಗೆ ಅನ್ವರ್ಥವಾದ ಅನೇಕ ನಾಮಧೇಯಗಳಿವೆ. ಯಜುರ್ವೇದದಲ್ಲಿಯೂ ಪರಮಾತ್ಮನಾದ ಶಿವನ ಸ್ತುತಿಯು ಹೇಳಲ್ಪಟ್ಟಿದೆ. ಶತರುದ್ರೀಯವೆಂಬ ಹೆಸರಿನಿಂದ ಆ ಮಹಾಮಂತ್ರವು ಪ್ರಸಿದ್ಧವಾಗಿದೆ. ಅನಂತರುದ್ರ ಎಂಬ ಹೆಸರಿನಿಂದಲೂ ವಿಖ್ಯಾತವಾದ ರುದ್ರಾಧ್ಯಾಯದಿಂದ ಮಹಾತ್ಮನಾದ ರುದ್ರನ ಉಪಸ್ಥಾನವನ್ನು ವೇದವಿದರು ಮಾಡುತ್ತಾರೆ.

ದಿವ್ಯವಾದ ಮತ್ತು ಮಾನುಷವಾದ ಕಾಮೋಪಭೋಗಗಳಿಗೆ ಮಹೇಶ್ವರನೇ ಪ್ರಭುವಾಗಿದ್ದಾನೆ. ಅವನು ವಿಶಾಲವಾದ ವಿಶ್ವವನ್ನೂ ವ್ಯಾಪಿಸಿರುವುದರಿಂದ ಮಹೇಶ್ವರನನ್ನು ವಿಭುವೆಂದೂ ಪ್ರಭುವೆಂದೂ ಕರೆಯುತ್ತಾರೆ.

**ಜ್ಯೇಷ್ಠಂ ಭೂತಂ ವದನ್ತ್ಯೇನಂ ಬ್ರಾಹ್ಮಣಾ ಮುನಯಸ್ತಥಾ ।**
**ಪ್ರಥಮೋ ಹ್ಯೇಷ ದೇವಾನಾಂ ಮುಖಾದಸ್ಯಾನಲೋಽಭವತ್ ॥**

ಬ್ರಾಹ್ಮಣರೂ ಮತ್ತು ಮುನಿಗಳೂ ಈ ಪರಶಿವನನ್ನು ಸರ್ವಜ್ಯೇಷ್ಠ ನೆಂದು ಹೇಳುತ್ತಾರೆ. ದೇವತೆಗಳಿಗೆಲ್ಲರಿಗೂ ಇವನೇ ಮೊದಲಿಗನು. ಪರಮೇಶ್ವರನ ಮುಖದಿಂದಲೇ ಅಗ್ನಿಯು ಹುಟ್ಟಿದನು.

**ಸರ್ವಥಾ ಯತ್ಪಶೂನ್ಪಾತಿ ತೈಶ್ಚ ಯದ್ರಮತೇ ಪುನಃ ।**
**ತೇಷಾಮಧಿಪತಿರ್ಯಚ್ಚ ತಸ್ಮಾತ್ಪಶುಪತಿಃ ಸ್ಮೃತಃ ॥೧೨೩॥**

ಸರ್ವಪಶುಗಳನ್ನೂ (ಪ್ರಾಣಿಗಳನ್ನೂ) ಸರ್ವಪ್ರಕಾರದಿಂದಲೂ ಪರಿಪಾಲನೆ ಮಾಡುವುದರಿಂದಲೂ, ಪಶುಗಳೊಡನೆ ಕ್ರೀಡಿಸುವುದರಿಂದಲೂ, ಪಶುಗಳಿಗೆ ಅಧಿಪತಿಯಾಗಿರುವುದರಿಂದಲೂ-ಪರಮೇಶ್ವರನಿಗೆ ಪಶುಪತಿಯೆಂಬ ಹೆಸರು ಬಂದಿರುತ್ತದೆ.

**ದಿವ್ಯಂ ಚ ಬ್ರಹ್ಮಚರ್ಯೇಣ ಲಿಙ್ಗಮಸ್ಯ ಯಥಾ ಸ್ಥಿತಮ್ ।**
**ಮಹಯತ್ಯೇಷ ಲೋಕಾಂಶ್ಚ ಮಹೇಶ್ವರ ಇತಿ ಸ್ಮೃತಃ ॥೧೨೪॥**

ಇವನ ದಿವ್ಯಲಿಂಗವು (ಪ್ರತೀಕವು) ಬ್ರಹ್ಮಚರ್ಯೆಯಲ್ಲಿಯೇ ಸ್ಥಿರವಾಗಿರುವುದರಿಂದಲೂ, ಇವನು ಲೋಕಗಳನ್ನು ಮಹಿಮಾನ್ವಿತಗಳನ್ನಾಗಿ ಮಾಡುವುದರಿಂದಲೂ ಪರಶಿವನು ಮಹೇಶ್ವರನೆಂಬ ಹೆಸರಿನಿಂದಲೂ ಪ್ರಸಿದ್ಧನಾಗಿರುತ್ತಾನೆ. ಶ್ರೇಷ್ಠವಾದ ಸ್ಥಾನದಲ್ಲಿ ಉಪಸ್ಥಿತನಾಗಿರುವ ಲಿಂಗರೂಪಿಯಾದ ಮಹೇಶ್ವರನನ್ನು ಋಷಿಗಳೂ, ದೇವತೆಗಳೂ, ಗಂಧರ್ವಾಪ್ಸರೆಯರೂ ಅರ್ಚನೆಮಾಡುತ್ತಾರೆ. ಲಿಂಗದ ರೂಪದಲ್ಲಿರುವ ಈಶನನ್ನು ಅರ್ಚಿಸಿದ್ದೇ ಆದರೆ ಮಹೇಶ್ವರನು ಅತ್ಯಂತಸಂತೋಷಪಡುತ್ತಾನೆ. ಸುಖಿಯಾಗುತ್ತಾನೆ. ಪರಮಪ್ರೀತನಾಗುತ್ತಾನೆ. ಪ್ರಹೃಷ್ಟನಾಗುತ್ತಾನೆ.

**ಯದಸ್ಯ ಬಹುಧಾ ರೂಪಂ ಭೂತಭವ್ಯಭವಸ್ಥಿತಮ್ ।**
**ಸ್ಥಾವರಂ ಜಙ್ಗಮಂ ಚೈವ ಬಹುರೂಪಸ್ತತಃ ಸ್ಮೃತಃ ॥೧೨೭॥**

ಈತನಿಗೆ ಭೂತ-ಭವಿಷ್ಯ ಮತ್ತು ವರ್ತಮಾನಕಾಲಗಳಲ್ಲಿ ಚಲಿಸುವ ಮತ್ತು ಸ್ಥಿರವಾಗಿರುವ ಅನೇಕರೂಪಗಳಿರುತ್ತವೆ. ಆದುದರಿಂದಲೇ ವಿಶ್ವೇಶನನ್ನು ಬಹುರೂಪನೆಂದೂ ಕರೆಯುತ್ತಾರೆ.

**ಏಕಾಕ್ಷೋ ಜಾಜ್ವಲನ್ನಾಸ್ತೇ ಸರ್ವತೋಽಕ್ಷಿಮಯೋಽಪಿ ವಾ ।**
**ಕ್ರೋಧಾದ್ಯಶ್ಚಾವಿಶಲ್ಲೋಕಾಂಸ್ತಸ್ಮಾತ್ಸರ್ವ ಇತಿ ಸ್ಮೃತಃ ॥೧೨೮॥**

ಯದ್ಯಪಿ ಈಶ್ವರನಿಗೆ ಎಲ್ಲ ಕಡೆಗಳಲ್ಲೂ ಕಣ್ಣುಗಳಿದ್ದರೂ (ಸಹಸ್ರಾಕ್ಷನಾಗಿದ್ದರೂ) ಅವನಿಗೆ ಅಗ್ನಿಮಯವಾದ ವಿಲಕ್ಷಣವಾದ ಕಣ್ಣೊಂದು ಪ್ರತ್ಯೇಕವಾಗಿಯೇ ಇದೆ. ಅವನು ಯಾವಾಗಲೂ ಕ್ರೋಧದಿಂದ ಪ್ರಜ್ವಲಿ

ಸುತ್ತಿರುತ್ತಾನೆ. ವಿರೂಪಾಕ್ಷನು ಎಲ್ಲ ಲೋಕಗಳನ್ನೂ ವ್ಯಾಪಿಸಿರುವುದರಿಂದ ಈಶ್ವರನನ್ನು ಸರ್ವ ಎಂಬ ಹೆಸರಿನಿಂದಲೂ ಕರೆಯುತ್ತಾರೆ.

**ಧೂಮ್ರರೂಪಂ ಚ ಯತ್ತಸ್ಯ ಧೂರ್ಜಽಸ್ತೇನ ಚೋಚ್ಯತೇ ।**
**ವಿಶ್ವೇದೇವಾಶ್ಚ ಯತ್ತಸ್ಮಿನ್ವಿಶ್ವರೂಪಸ್ತತಃ ಸ್ಮೃತಃ ॥೧೨೯॥**

ಪರಶಿವನು ಧೂಮ್ರವರ್ಣದವನಾಗಿರುವುದರಿಂದ ಅವನನ್ನು ಧೂರ್ಜಟಿಯೆಂದೂ ಕರೆಯುತ್ತಾರೆ. ವಿಶ್ವೇದೇವತೆಗಳೂ ಅವನಲ್ಲಿ ಪ್ರತಿಷ್ಠಿತ ರಾಗಿರುವುದರಿಂದ ಶಿವನು 'ವಿಶ್ವರೂಪ' ಎಂಬ ಹೆಸರಿನಿಂದಲೂ ಪ್ರಸಿದ್ಧನಾಗಿರುತ್ತಾನೆ.

**ತಿಸ್ರೋ ದೇವೀರ್ಯದಾ ಚೈವ ಭಜತೇ ಭುವನೇಶ್ವರಃ ।**
**ದ್ಯಾಮಪಃ ಪೃಥಿವೀಂ ಚೈವ ತ್ರ್ಯಮ್ಬಕಶ್ಚ ತತಃ ಸ್ಮೃತಃ ॥೧೩೦॥**

ಭುವನೇಶ್ವರನು *ದ್ಯೌ ಎಂಬ ದೇವಿಯನ್ನೂ, ಅಪ್ ಎಂಬ ದೇವಿಯನ್ನೂ, ಪೃಥಿವೀ ಎಂಬ ದೇವಿಯನ್ನೂ (ಮೂವರು ದೇವಿಯರನ್ನು) ರಕ್ಷಿಸುತ್ತಾನಾದುದರಿಂದ ಇವನಿಗೆ ತ್ರ್ಯಂಬಕನೆಂಬ ಹೆಸರು ಬಂದಿದೆ.

**ಸಮೇಧಯತಿ ಯನ್ನಿತ್ಯಂ ಸರ್ವಾರ್ಥಾನ್ಸರ್ವಕರ್ಮಸು ।**
**ಶಿವಮಿಚ್ಛನ್ಮನುಷ್ಯಾಣಾಂ ತಸ್ಮಾದೇಷ ಶಿವಃ ಸ್ಮೃತಃ ॥೧೩೧॥**

ಮನುಷ್ಯರಿಗೆ ಕಲ್ಯಾಣವನ್ನು ಬಯಸಿ ಸರ್ವಕರ್ಮಗಳಲ್ಲಿಯೂ ಸರ್ವಪದಾರ್ಥಗಳನ್ನೂ ಫಲಗಳನ್ನೂ ನಿತ್ಯವೂ ವೃದ್ಧಿಪಡಿಸುತ್ತಾನಾದುದರಿಂದ ಮಹಾದೇವನು ಶಿವನೆಂಬ ಹೆಸರನ್ನು ಪಡೆದಿರುತ್ತಾನೆ.

**ಸಹಸ್ರಾಕ್ಷೋಽಯುತಾಕ್ಷೋ ವಾ ಸರ್ವತೋಽಕ್ಷಿಮಯೋಽಪಿ ವಾ ।**
**ಯಚ್ಚ ವಿಶ್ವಂ ಮಹತ್ಪಾತಿ ಮಹಾದೇವಸ್ತತಃ ಸ್ಮೃತಃ ॥೧೩೨॥**

---

* ಸಂಸ್ಕೃತದಲ್ಲಿ ದ್ಯೌರಪ್ ಪೃಥಿವೀ ಶಬ್ದಗಳು ಸ್ತ್ರೀಲಿಂಗಶಬ್ದಗಳಾಗಿವೆ. ಆದುದರಿಂದ ಈ ಮೂವರನ್ನೂ ಮೂವರು ದೇವಿಯರೆಂದು ಈ ಶ್ಲೋಕದಲ್ಲಿ ಹೇಳಿದ್ದಾರೆ. ಮೂವರು ಅಂಬೆಯರನ್ನು (ಲೋಕಮಾತೆಯರನ್ನು) ರಕ್ಷಿಸುವುದರಿಂದ ಅವನು ತ್ರ್ಯಂಬಕ. ಅಂಬಕ ಎಂದರೆ ಕಣ್ಣು. ಮೂರುಕಣ್ಣುಗಳುಳ್ಳವನು ತ್ರ್ಯಂಬಕ–ಎಂಬುದು ಮತ್ತೊಂದು ಪರ್ಯಾಯದಲ್ಲಿ ಬರುತ್ತದೆ.

ವಿಶ್ವೇಶ್ವರನು ಸಹಸ್ರಾಕ್ಷನಾಗಿರಲಿ, ದಶಸಹಸ್ರಾಕ್ಷನಾಗಿರಲಿ, ನಖ-ಶಿಖಾಂತವಾಗಿ ಕಣ್ಣುಗಳಿಂದಲೇ ಕೂಡಿರಲಿ–ಈ ಮಹಾವಿಶ್ವವನ್ನೂ ತನ್ನ ಅಮಿತವಾದ ಕಣ್ಣುಗಳಿಂದ ನೋಡುತ್ತಾ ಅದನ್ನು ಸರ್ವದಾ ರಕ್ಷಿಸುತ್ತಿರುವುದರಿಂದ ಇವನು ಮಹಾದೇವನಾದನು.

**ಮಹತ್ಪೂರ್ವಂ ಸ್ಥಿತೋ ಯಚ್ಚ ಪ್ರಣೋತ್ಪತ್ತಿಸ್ಥಿತಶ್ಚ ಯತ್ ।**
**ಸ್ಥಿತಲಿಙ್ಗಶ್ಚ ಯನ್ನಿತ್ಯಂ ತಸ್ಮಾತ್ಸ್ಥಾಣುರಿತಿ ಸ್ಮೃತಃ ॥೧೩೩॥**

ಪೂರ್ವಕಾಲದಿಂದಲೂ ಪರಮೇಶ್ವರನು ಮಹಾರೂಪದಿಂದಲೇ ಬೆಳಗುತ್ತಿದ್ದಾನೆ. ಪ್ರಾಣಿಗಳ ಉತ್ಪತ್ತಿಗೆ ಮತ್ತು ಉಳಿವಿಗೆ ಅವನೇ ಕಾರಣನಾಗಿರುತ್ತಾನೆ. ಲಿಂಗಮಯಶರೀರದಲ್ಲಿಯೇ ಅವನು ಸದಾ ಉಪಸ್ಥಿತನಾಗಿರುತ್ತಾನೆ. ಆದುದರಿಂದಲೇ ಅವನು 'ಸ್ಥಾಣು' ಎಂಬ ಹೆಸರಿನಿಂದಲೂ ಪ್ರಸಿದ್ಧನಾಗಿದ್ದಾನೆ.

**ಸೂರ್ಯಾಚನ್ದ್ರಮಸೋರ್ಲೋಕೇ ಪ್ರಕಾಶನ್ತೇ ರುಚಶ್ಚ ಯಾಃ ।**
**ತಾಃ ಕೇಶಸಙ್ಜ್ಞಿತಾಸ್ತ್ರ್ಯಕ್ಷೇ ವ್ಯೋಮಕೇಶಸ್ತತಃ ಸ್ಮೃತಃ ॥೧೩೪॥**

ಲೋಕದಲ್ಲಿ ಪ್ರಕಾಶಿಸುತ್ತಿರುವ ಸೂರ್ಯ-ಚಂದ್ರರ ಆಕಾಶದಲ್ಲಿರುವ ಕಿರಣಗಳು ಪರಮೇಶ್ವರನ ಕೇಶಗಳೆಂಬ ಸಂಜ್ಞೆಯನ್ನು ಪಡೆದಿವೆ. ಆದುದರಿಂದಲೇ ಈಶ್ವರನನ್ನು ವ್ಯೋಮಕೇಶ ಎಂದೂ ಕರೆಯುತ್ತಾರೆ.

**ಭೂತಂ ಭವ್ಯಂ ಭವಿಷ್ಯಂ ಚ ಸರ್ವಂ ಜಗದಶೇಷತಃ ।**
**ಭವ ಏವ ತತೋ ಯಸ್ಮಾದ್ಭೂತಭವ್ಯಭವೋದ್ಭವಃ ॥೧೩೫॥**

ಭೂತ-ಭವ್ಯ-ಭವಿಷ್ಯತ್ಕಾಲಗಳಲ್ಲಿ ಸಂಭವಿಸುವ ವಸ್ತುಗಳು, ಅಶೇಷವಾದ ಈ ಜಗತ್ತು–ಎಲ್ಲವೂ ಭವನಿಂದಲೇ ಉತ್ಪನ್ನವಾಗಿವೆ. ಆದುದರಿಂದಲೇ ವಿಶ್ವೇಶನು ಭೂತಭವ್ಯಭವೋದ್ಭವನೂ ಆಗಿದ್ದಾನೆ.

**ಕಪಿಃ ಶ್ರೇಷ್ಠ ಇತಿ ಪ್ರೋಕ್ತೋ ಧರ್ಮಶ್ಚ ವೃಷ ಉಚ್ಯತೇ ।**
**ಸ ದೇವದೇವೋ ಭಗವಾನ್ಕೀರ್ತ್ಯತೇಽತೋ ವೃಷಾಕಪಿಃ ॥೧೩೬॥**

ಕಪಿಃ-ಎಂದರೆ ಶ್ರೇಷ್ಠ ಎಂಬ ಅರ್ಥವನ್ನು ಹೇಳುತ್ತಾರೆ. ವೃಷಃ ಎಂದರೆ ಧರ್ಮ ಎಂದರ್ಥ. ಶ್ರೇಷ್ಠವಾದ ಆ ಧರ್ಮಸ್ವರೂಪನೇ ಭಗ

ವಂತನಾದ ದೇವದೇವನಾದ ಪರಮೇಶ್ವರ. ಆದುದರಿಂದ ವಿಶ್ವೇಶ್ವರನನ್ನು 'ವೃಷಾಕಪಿ' ಎಂಬ ಹೆಸರಿನಿಂದಲೂ ಕರೆಯುತ್ತಾರೆ.

**ಬ್ರಹ್ಮಾಣಮಿನ್ದ್ರಂ ವರುಣಂ ಯಮಂ ಧನದಮೇವ ಚ ।**
**ನಿಗೃಹ್ಯ ಹರತೇ ಯಸ್ಮಾತ್ತಸ್ಮಾದ್ಧರ ಇತಿ ಸ್ಮೃತಃ ॥೧೩೭॥**

ಬ್ರಹ್ಮನನ್ನೂ, ಇಂದ್ರನನ್ನೂ, ವರುಣನನ್ನೂ, ಯಮನನ್ನೂ ಮತ್ತು ಕುಬೇರನನ್ನೂ ನಿಗ್ರಹಿಸಿ ಅವರಲ್ಲಿರುವ ಐಶ್ವರ್ಯವನ್ನು ಈಶ್ವರನು ಹರಣಮಾಡುತ್ತಾನಾದುದರಿಂದ ಪರಶಿವನು ಹರನೆಂಬ ಹೆಸರಿನಿಂದಲೂ ಪ್ರಸಿದ್ಧನಾಗಿರುತ್ತಾನೆ.

**ನಿಮೀಲಿತಾಭ್ಯಾಂ ನೇತ್ರಾಭ್ಯಾಂ ಬಲಾದ್ದೇವೋ ಮಹೇಶ್ವರಃ ।**
**ಲಲಾಟೇ ನೇತ್ರಮಸೃಜತ್ತೇನ ತ್ರ್ಯಕ್ಷಃ ಸ ಉಚ್ಯತೇ ॥೧೩೮॥**

ಭಗವಾನ್ ಮಹೇಶ್ವರನು ಸ್ವಾಭಾವಿಕವಾಗಿರುವ ತನ್ನೆರಡು ಕಣ್ಣುಗಳನ್ನೂ ಭದ್ರವಾಗಿ ಮುಚ್ಚಿಕೊಂಡು ಬಲಾತ್ಕಾರಪೂರ್ವಕವಾಗಿ ಹಣೆಯಲ್ಲಿಯೇ ಒಂದು ಕಣ್ಣನ್ನು ಸೃಷ್ಟಿಸಿಕೊಂಡನು. ಆದುದರಿಂದ ಅವನನ್ನು *ತ್ರ್ಯಕ್ಷನೆಂದೂ ಕರೆದರು.

**ವಿಷಮಸ್ಥಃ ಶರೀರೇಷು ಸಮಶ್ಚ ಪ್ರಾಣಿನಾಮಿಹ ।**
**ಸ ವಾಯುರ್ವಿಷಮಸ್ಥೇಷು ಪ್ರಾಣೋಽಪಾನಃ ಶರೀರಿಷು ॥೧೩೯॥**

ಪ್ರಾಣಿಗಳ ಶರೀರಗಳಲ್ಲಿ ವಿಷಮಸಂಖ್ಯೆಯಲ್ಲಿರುವ ಪಂಚಪ್ರಾಣಗಳ ಮಧ್ಯದಲ್ಲಿ ಈ ಈಶ್ವರನಿರುತ್ತಾನೆ. ವಿಷಮಸ್ಥನಾಗಿದ್ದರೂ ಇವನು ಸರ್ವ ಪ್ರಾಣಿಗಳಲ್ಲಿಯೂ ಸಮನಾಗಿಯೇ ಇರುತ್ತಾನೆ. (ಸರ್ವಪ್ರಾಣಿಗಳ ಹೃದಯ ಗಳಲ್ಲಿಯೂ ಆತ್ಮರೂಪನಾಗಿರುತ್ತಾನೆ.) ವಿಷಮಸ್ಥಿತಿಯಲ್ಲಿರುವ ಬಡವ-ಬಲ್ಲಿದ, ಉಚ್ಚ-ನೀಚ, ಪಂಡಿತ-ಪಾಮರ ಇತ್ಯಾದಿ ಅನೇಕ ಏರುಪೇರು ಗಳಿಂದ ಕೂಡಿರುವ ಮನುಷ್ಯರಲ್ಲಿ ದಯಾಮಯನಾದ ಪರಮೇಶ್ವರನು ಪ್ರಾಣಾಪಾನವಾಯುರೂಪನಾಗಿ ಸರ್ವಸಮತ್ವದಿಂದಿರುತ್ತಾನೆ. (ಪ್ರಾಣಾ ಪಾನವಾಯುಗಳಿಗೆ ಪ್ರಾಣಿಗಳಲ್ಲಿ ಯಾವ ತಾರತಮ್ಯವೂ ಇರುವುದಿಲ್ಲ.)

---

* ಪಾರ್ವತಿಯು ಶಿವನ ಎರಡು ಕಣ್ಣುಗಳನ್ನೂ ಮುಚ್ಚಿದಳು. ಆಗ ಶಿವನು ಮೂರನೆಯ ಕಣ್ಣನ್ನು ತೆರೆದನು-ಎಂಬುದೊಂದು ಕಥೆಯೂ ಇದೆ.

ಯಾವ ಮನುಷ್ಯನೇ ಆಗಲಿ ಮಹಾತ್ಮನಾದ ಈಶ್ವರನ ಲಿಂಗವನ್ನಾಗಲೀ, ಪ್ರತಿಮೆಯನ್ನಾಗಲೀ ಪೂಜೆಮಾಡಬೇಕು. ಈಶ್ವರನ ಪ್ರತೀಕವಾದ ಲಿಂಗವನ್ನು ಅನುದಿನವೂ ಪೂಜೆಮಾಡುವವನು ಮಹತ್ತರವಾದ ಸಂಪತ್ತನ್ನು ಹೊಂದುತ್ತಾನೆ.

**ಊರುಭ್ಯಾಮರ್ಧಮಾಗ್ನೇಯಂ ಸೋಮಾರ್ಧಂ ಚ ಶಿವಾ ತನುಃ ।**
**ಆತ್ಮನೋಽರ್ಧಂ ತಥಾ ಚಾಗ್ನಿಃ ಸೋಮೋಽರ್ಧಂ ಪುನರುಚ್ಯತೇ ॥**

ಈಶ್ವರನ ತೊಡೆಗಳಿಂದ ಕೆಳಗಣ ಅರ್ಧಶರೀರವು ಆಗ್ನೇಯಶರೀರ ಅಥವಾ ಘೋರಶರೀರವೆಂದು ಹೇಳಲ್ಪಟ್ಟಿದೆ. ಮೇಲಿನ ಅರ್ಧಭಾಗವನ್ನು ಸೋಮಶರೀರ ಅಥವಾ ಮಂಗಳಶರೀರ ಎಂದು ಕರೆಯುತ್ತಾರೆ. ಮತ್ತೆ ಕೆಲವರು ಈಶ್ವರನ ಶರೀರದ ಬಲಗಡೆಯ ಅರ್ಧಭಾಗವನ್ನು ಅಗ್ನಿಯೆಂದೂ-ಘೋರರೂಪವೆಂದೂ, ಎಡದ ಅರ್ಧಭಾಗವನ್ನು ಸೋಮವೆಂದೂ-ಶಿವಶರೀರವೆಂದೂ ಕರೆಯುತ್ತಾರೆ.

**ತೈಜಸೀ ಮಹತೀ ದೀಪ್ತಾ ದೇವೇಭ್ಯೋಽಸ್ಯ ಶಿವಾ ತನುಃ ।**
**ಭಾಸ್ವತೀ ಮಾನುಷೇಷ್ವಸ್ಯ ತನುರ್ಘೋರಾಗ್ನಿರುಚ್ಯತೇ ॥೧೪೨॥**

ಅವನ ಶಿವಮಯಶರೀರವು ಅಥವಾ ಸೋಮಶರೀರವು ತೇಜೋಮಯವಾಗಿಯೂ ಕಾಂತಿಯುಕ್ತವಾಗಿಯೂ ಇದೆ. ಆ ಶರೀರವು ದೇವತೆಗಳಿಗೆ ಸಂಬಂಧಿಸಿದ್ದಾಗಿದೆ. ಮನುಷ್ಯಲೋಕದಲ್ಲಿ ಪರಮೇಶ್ವರನ ಪ್ರಕಾಶಮಾನವಾದ ಘೋರಶರೀರವಿದೆ. ಅದನ್ನು ಅಗ್ನಿ ಶರೀರವೆಂದೂ ಕರೆಯುತ್ತಾರೆ.

**ಬ್ರಹ್ಮಚರ್ಯಂ ಚರತ್ಯೇಷ ಶಿವಾ ಯಾಸ್ಯ ತನುಸ್ತಯಾ ।**
**ಯಾಸ್ಯ ಘೋರತರಾ ಮೂರ್ತಿಃ ಸರ್ವಾನತ್ತಿ ತಯೇಶ್ವರಃ ॥೧೪೩॥**

ಶಿವಾತನುವಿನಿಂದ (ಸೋಮಶರೀರದಿಂದ) ಪರಮೇಶ್ವರನು ಜಗತ್ತಿನ ರಕ್ಷಣೆಗಾಗಿ ಬ್ರಹ್ಮಚರ್ಯವ್ರತವನ್ನು ಪರಿಪಾಲಿಸುತ್ತಾನೆ. ಘೋರತನುವಿನ ಮೂಲಕವಾಗಿ (ಅಗ್ನಿಶರೀರದಿಂದ) ಲೋಕದ ಎಲ್ಲ ಪ್ರಾಣಿಗಳನ್ನೂ ಸಂಹಾರಮಾಡುತ್ತಾನೆ.

**ಯನ್ನಿರ್ದಹತಿ ಯತ್ತೀಕ್ಷ್ಣೋ ಯದುಗ್ರೋ ಯತ್ಪ್ರತಾಪವಾನ್ ।**
**ಮಾಂಸಶೋಣಿತಮಜ್ಜಾದೋ ಯತ್ತತೋ ರುದ್ರ ಉಚ್ಯತೇ ॥೧೪೪॥**

ಪ್ರತಾಪವಂತನಾದ ಈಶ್ವರನು ಪ್ರಳಯಕಾಲದಲ್ಲಿ ಅತ್ಯಂತತೀಕ್ಷ್ಣನಾಗಿ ಉಗ್ರರೂಪವನ್ನು ತಾಳಿ ಎಲ್ಲ ಪ್ರಾಣಿಗಳನ್ನೂ ದಹಿಸುತ್ತಾನೆ ಮತ್ತು ತನ್ಮೂಲಕವಾಗಿ ಎಲ್ಲ ಪ್ರಾಣಿಗಳ ರಕ್ತಮಾಂಸ ಮತ್ತು ಮಜ್ಜೆಗಳನ್ನೂ ಭಕ್ಷಿಸುತ್ತಾನೆ. ಆದುದರಿಂದ ರೌದ್ರಭಾವದ ಕಾರಣದಿಂದ ಶಿವನನ್ನು 'ರುದ್ರ' ಎಂಬ ಹೆಸರಿನಿಂದಲೂ ಕರೆಯುತ್ತಾರೆ.

**ಏಷ ದೇವೋ ಮಹಾದೇವೋ ಯೋಽಸೌ ಪಾರ್ಥ ತವಾಗ್ರತಃ ।**
**ಸಂಗ್ರಾಮೇ ಶಾತ್ರವಾನ್ನಿಘ್ನಂಸ್ತ್ವಯಾ ದೃಷ್ಟಃ ಪಿನಾಕಧೃಕ್ ॥**

ಯುದ್ಧದ ಸಮಯದಲ್ಲಿ ನಿನ್ನ ಮುಂದುಗಡೆ ಶತ್ರುಗಳನ್ನು ಸಂಹರಿಸುತ್ತಾ ಹೋಗುತ್ತಿದ್ದವನು-ಪಿನಾಕಪಾಣಿಯಾದ ಈ ಮಹಾದೇವನೇ ಆಗಿದ್ದಾನೆ. ಅವನನ್ನೇ ನೀನು ನೋಡಿರುವೆ.

ಸಿಂಧುರಾಜನನ್ನು ವಧಿಸುವ ಸಲುವಾಗಿ ನೀನು ಪ್ರತಿಜ್ಞೆಮಾಡಿದಾಗ ಶ್ರೀಕೃಷ್ಣನು ಹಿಮವತ್ಪರ್ವತದ ಶಿಖರದಲ್ಲಿದ್ದ ಮಹಾದೇವನನ್ನೇ ನಿನಗೆ ಸ್ವಪ್ನದಲ್ಲಿ ತೋರಿಸಿದನು. ಆ ಭಗವಂತನೇ ಯುದ್ಧಸಮಯದಲ್ಲಿ ನಿನ್ನ ಮುಂದೆ ಹೋಗುತ್ತಿರುತ್ತಾನೆ. ಅವನು ದಯಪಾಲಿಸಿದ ಅಸ್ತ್ರಗಳಿಂದಲೇ ನೀನು ಅನೇಕದೈತ್ಯರನ್ನೂ ಸಂಹಾರಮಾಡಿರುವೆ.

**ಧನ್ಯಂ ಯಶಸ್ಯಮಾಯುಷ್ಯಂ ಪುಣ್ಯಂ ವೇದೈಶ್ಚ ಸಮ್ಮಿತಮ್ ।**
**ದೇವದೇವಸ್ಯ ತೇ ಪಾರ್ಥ ವ್ಯಾಖ್ಯಾತಂ ಶತರುದ್ರಿಯಮ್ ॥೧೪೮॥**

ಪಾರ್ಥ! ನಾನು ಹೇಳಿದುದು ವೇದೋದಿತವಾದ ದೇವದೇವನಾದ ಶಂಕರನ ಶತರುದ್ರೀಯದ ವ್ಯಾಖ್ಯಾನವಾಗಿದೆ. ಈ ವ್ಯಾಖ್ಯಾನವೂ ವೇದಕ್ಕೆ ಸಮಾನವಾಗಿದೆ. ಪರಮಪವಿತ್ರವಾಗಿದೆ. ಧನ, ಯಶಸ್ಸು ಮತ್ತು ಆಯುಷ್ಯಗಳನ್ನು ವರ್ಧಿಸುವುದಾಗಿದೆ.

**ಸರ್ವಾರ್ಥಸಾಧನಂ ಪುಣ್ಯಂ ಸರ್ವಕಿಲ್ಬಿಷನಾಶನಮ್ ।**
**ಸರ್ವಪಾಪಪ್ರಶಮನಂ ಸರ್ವದುಃಖಭಯಾಪಹಮ್ ॥೧೪೯॥**

ಈ ಸ್ತೋತ್ರಪಠನದಿಂದ ಸಕಲವಿಧವಾದ ಮನೋರಥಗಳೂ ಈಡೇರುತ್ತವೆ. ಇದು ಪುಣ್ಯಪ್ರದವಾದುದು. ಸಕಲವಿಧವಾದ ರೋಗಗಳನ್ನೂ

ನಿವಾರಿಸುತ್ತದೆ. ಸಕಲವಿಧವಾದ ಪಾಪಗಳನ್ನೂ ನಾಶಗೊಳಿಸುತ್ತದೆ. ಸಕಲವಿಧವಾದ ದುಃಖಗಳನ್ನೂ ಹೋಗಲಾಡಿಸುತ್ತದೆ ಮತ್ತು ಭಯವನ್ನೂ ದೂರಮಾಡುತ್ತದೆ.

**ಚತುರ್ವಿಧಮಿದಂ ಸ್ತೋತ್ರಂ ಯಃ ಶೃಣೋತಿ ನರಃ ಸದಾ ।**
**ವಿಜಿತ್ಯ ಶತ್ರೂನ್ಸರ್ವಾನ್ಸ ರುದ್ರಲೋಕೇ ಮಹೀಯತೇ ॥೧೫೦॥**

ಯಾವ ಮನುಷ್ಯನು ಶ್ರೀಶಂಕರನ ಬ್ರಹ್ಮ, ವಿಷ್ಣು, ಈಶ್ವರ ಮತ್ತು ನಿರ್ಗುಣನಿರಾಕಾರ-ಈ ನಾಲ್ಕು ರೂಪಗಳನ್ನೂ ಸ್ತುತಿಸುವ ಈ ಶತರುದ್ರೀಯ ಸ್ತೋತ್ರವನ್ನು ಕೇಳುತ್ತಾನೆಯೋ–ಅವನು ತನ್ನ ಎಲ್ಲ ಶತ್ರುಗಳನ್ನೂ ಜಯಿಸಿ ರುದ್ರಲೋಕದಲ್ಲಿ ವಿರಾಜಿಸುತ್ತಾನೆ.

**ಚರಿತಂ ಮಹಾತ್ಮನೋ ನಿತ್ಯಂ ಸಾಂಗ್ರಾಮಿಕಮಿದಂ ಸ್ಮೃತಮ್ ।**
**ಪಠನ್ವೈ ಶತರುದ್ರೀಯಂ ಶೃಣ್ವಂಶ್ಚ ಸತತೋತ್ಥಿತಃ ॥೧೫೧॥**
**ಭಕ್ತೋ ವಿಶ್ವೇಶ್ವರಂ ದೇವಂ ಮಾನುಷೇಷು ಚ ಯಃ ಸದಾ।**
**ವರಾನ್ಕಾಮಾನ್ಸ ಲಭತೇ ಪ್ರಸನ್ನೇ ತ್ರ್ಯಮ್ಬಕೇ ನರಃ ॥೧೫೨॥**

ಮಹಾತ್ಮನಾದ ಶಂಕರನ ಈ ಚರಿತ್ರೆಯ ಶ್ರವಣವು ಸಂಗ್ರಾಮದಲ್ಲಿ ಸದಾ ವಿಜಯವನ್ನು ಗಳಿಸಿಕೊಡುತ್ತದೆ. ಮನುಷ್ಯರಲ್ಲಿ ಯಾವ ಭಕ್ತನು ಸರ್ವಕಾಲದಲ್ಲಿಯೂ ಜಾಗರೂಕನಾಗಿದ್ದುಕೊಂಡು ಇಲ್ಲಿ ಹೇಳಿರುವ ಶತರುದ್ರೀಯವನ್ನು ಪಠನಮಾಡುತ್ತಿರುತ್ತಾನೆಯೋ, ಕೇಳುತ್ತಿರುತ್ತಾನೆಯೋ, ದೇವದೇವನಾದ ವಿಶ್ವೇಶ್ವರನನ್ನು ಪೂಜಿಸುತ್ತಿರುತ್ತಾನೆಯೋ ಅಂತಹ ಶಿವಭಕ್ತನು, ತ್ರ್ಯಂಬಕನು ಪ್ರಸನ್ನನಾಗಲಾಗಿ ಸಮಸ್ತವಾದ ಕಾಮನೆಗಳನ್ನೂ ಪಡೆದುಕೊಳ್ಳುತ್ತಾನೆ.

**ಗಚ್ಛ ಯುಧ್ಯಸ್ವ ಕೌನ್ತೇಯ ನ ತವಾಸ್ತಿ ಪರಾಜಯಃ।**
**ಯಸ್ಯ ಮನ್ತ್ರೀ ಚ ಗೋಪ್ತಾ ಚ ಪಾರ್ಶ್ವಸ್ಥೋ ಹಿ ಜನಾರ್ದನಃ ॥**

ಅರ್ಜುನ! ಹೊರಡು! ಯುದ್ಧಮಾಡು. ನಿನಗೆ ಪರಾಜಯವೆಂಬುದೇ ಇಲ್ಲ. ಏಕೆಂದರೆ: ನಿನಗೆ ಮಂತ್ರಿಯೂ ಮತ್ತು ರಕ್ಷಕನೂ ಆಗಿರುವ ಜನಾರ್ದನನು ನಿನ್ನ ಪಕ್ಕದಲ್ಲಿಯೇ ಸದಾ ಇರುತ್ತಾನೆ."

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಪರಾಶರರ ಮಕ್ಕಳಾದ ವ್ಯಾಸಮಹರ್ಷಿಗಳು ಯುದ್ಧಸಮಯದಲ್ಲಿ ಅರ್ಜುನನೊಡನೆ ಹೀಗೆ ಹೇಳಿ ಎಲ್ಲಿಂದ ಬಂದಿದ್ದರೋ ಅಲ್ಲಿಗೇ ಪ್ರಯಾಣಮಾಡಿದರು. ಮಹಾಬಲರಾದ ಬ್ರಾಹ್ಮಣಶ್ರೇಷ್ಠರಾದ ದ್ರೋಣರು ಘೋರವಾದ ಮತ್ತು ಮಹತ್ತ್ವಪೂರ್ಣವಾದ ಯುದ್ಧವನ್ನು ಐದು ದಿವಸಗಳವರೆಗೆ ಮಾಡಿ ಮಡಿದು ಬ್ರಹ್ಮಲೋಕಕ್ಕೆ ತೆರಳಿದರು.

**ಸ್ವಧೀತೇ ಯತ್ಫಲಂ ವೇದೇ ತದಸ್ಮಿನ್ನಪಿ ಪರ್ವಣಿ ।**
**ಕ್ಷತ್ರಿಯಾಣಾಮಭೀರೂಣಾಂ ಯುಕ್ತಮತ್ರ ಮಹದ್ಯಶಃ ॥೧೫೬॥**

ವೇದಪಾರಾಯಣದಿಂದ ಯಾವ ಫಲವು ಪ್ರಾಪ್ತವಾಗುವುದೋ ಈ ದ್ರೋಣಪರ್ವವನ್ನು ಪಾರಾಯಣಮಾಡುವುದರಿಂದಲೂ ಅದೇ ಫಲವೇ ಪ್ರಾಪ್ತವಾಗುತ್ತದೆ. ಈ ಪರ್ವದಲ್ಲಿ ಧೈರ್ಯಶಾಲಿಗಳಾದ ಕ್ಷತ್ರಿಯಯೋಧರ ಮಹಾಯಶಸ್ಸಿನ ಕಥನವಿದೆ.

**ಯ ಇದಂ ಪಠತೇ ಪರ್ವ ಶೃಣುಯಾದ್ವಾಪಿ ನಿತ್ಯಶಃ ।**
**ಸ ಮುಚ್ಯತೇ ಮಹಾಪಾಪೈಃ ಕೃತೈರ್ಘೋರೈಶ್ಚ ಕರ್ಮಭಿಃ ॥೧೫೭॥**

ಯಾವನು ಈ ಪರ್ವವನ್ನು ಅನುದಿನವೂ ಓದುತ್ತಾನೆಯೋ ಅಥವಾ ಕೇಳುತ್ತಾನೆಯೋ–ಅವನು ಘೋರಕರ್ಮಗಳಿಂದ ಪ್ರಾಪ್ತವಾದ ಮಹಾ ಪಾಪಗಳಿಂದಲೂ ಮುಕ್ತಿಯನ್ನು ಪಡೆಯುತ್ತಾನೆ.

**ಯಜ್ಞಾವಾಪ್ತಿರ್ಬ್ರಾಹ್ಮಣಸ್ಯೇಹ ನಿತ್ಯಂ**
**ಘೋರೇ ಯುದ್ಧೇ ಕ್ಷತ್ರಿಯಾಣಾಂ ಯಶಶ್ಚ ।**
**ಶೇಷೌ ವರ್ಣೌ ಕಾಮಮಿಷ್ಟಂ ಲಭೇತೇ**
**ಪುತ್ರಾನ್ಪೌತ್ರಾನ್ನಿತ್ಯಮಿಷ್ಟಾಂಸ್ತಥೈವ ॥೧೫೮॥**

ಈ ದ್ರೋಣಪರ್ವವನ್ನು ಅನುದಿನವೂ ಓದುವ ಅಥವಾ ಓದಿದು ದನ್ನು ಕೇಳುವ ಬ್ರಾಹ್ಮಣನು ಯಜ್ಞಮಾಡಿದುದರಿಂದ ಪ್ರಾಪ್ತವಾಗಬಹು ದಾದ ಫಲವನ್ನು ಪಡೆದುಕೊಳ್ಳುತ್ತಾನೆ. ಕ್ಷತ್ರಿಯನಾದವನು ಘೋರವಾದ ಯುದ್ಧದಲ್ಲಿ ಯಶಸ್ಸನ್ನು ಗಳಿಸಿಕೊಳ್ಳುತ್ತಾನೆ. ಉಳಿದ ಎರಡು ವರ್ಣ ದವರಾದ ವೈಶ್ಯ-ಶೂದ್ರರು ಇಷ್ಟವಾದ ಕಾಮನೆಗಳನ್ನು ಪಡೆದುಕೊಳ್ಳು

ತ್ತಾರೆ. ಹಾಗೂ ಪುತ್ರರು-ಪೌತ್ರರು-ಇಷ್ಟವಾದ ವಸ್ತುಗಳು ಈ ಎಲ್ಲವನ್ನೂ ಪಡೆದುಕೊಂಡು ಸುಖಿಗಳಾಗಿರುತ್ತಾರೆ.

೨೦೨ನೆಯ ಅಧ್ಯಾಯವು ಮುಗಿಯಿತು.

ದ್ರೋಣಪರ್ವವು ಮುಗಿಯಿತು.

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ।
ದೇಶೋऽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸನ್ತು ನಿರ್ಭಯಾಃ॥
ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ ।
ಅಧನಾಃ ಸಧನಾಃ ಸನ್ತು ಜೀವನ್ತು ಶರದಾಂ ಶತಮ್ ॥

ಕಾಯೇನ ವಾಚಾ ಮನಸೇನ್ದ್ರಿಯೈರ್ವಾ
ಬುಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋऽಸ್ತುತೇ ॥

ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು
ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು
ಓಂ ತತ್ಸತ್

## ಹದಿನೈದನೆಯ ದಿನದ ಯುದ್ಧದ ವಿಶ್ಲೇಷಣೆ

## (ಮುಂದುವರಿದಿದೆ.)

೧೯೩ನೆಯ ಅಧ್ಯಾಯ: ದ್ರೋಣರು ಹತರಾದನಂತರ ಕೌರವಸೈನಿಕರೂ ಮತ್ತು ಕೌರವಪ್ರಮುಖರೂ ರಣರಂಗದಿಂದ ಪಲಾಯನ ಮಾಡಿದ ವರ್ಣನೆಯಿದೆ. ಆ ವೇಳೆಗೆ ಬೇರೊಂದು ವಿಭಾಗದಲ್ಲಿ ಶಿಖಂಡಿಯೊಡನೆ ಯುದ್ಧದಲ್ಲಿ ತೊಡಗಿದ್ದ ಅಶ್ವತ್ಥಾಮನು ಅಲ್ಲಿಗೆ ಬಂದು ಕೌರವಸೈನಿಕರು ಓಡಿಹೋಗುತ್ತಿರುವುದನ್ನು ಗಮನಿಸಿ, ದುರ್ಯೋಧನನನ್ನು ಕುರಿತು ಪಲಾಯನದ ಕಾರಣವನ್ನು ಪ್ರಶ್ನಿಸುತ್ತಾನೆ. ದುರ್ಯೋಧನನು ದ್ರೋಣರ ಮರಣವಾರ್ತೆಯನ್ನು ತಾನೇ ತಿಳಿಸದೇ ನಡೆದ ವೃತ್ತಾಂತವನ್ನು ಅಶ್ವತ್ಥಾಮನಿಗೆ ತಿಳಿಸುವಂತೆ ಕೃಪರನ್ನು ಪ್ರಾರ್ಥಿಸುತ್ತಾನೆ. ಕೃಪರು ನಡೆದ ವೃತ್ತಾಂತವನ್ನು ಸಂಕ್ಷೇಪವಾಗಿ ತಿಳಿಸುತ್ತಾರೆ. ಹಾಗೆ ಹೇಳುವಾಗ ಅಶ್ವತ್ಥಾಮನು ಹತನಾದನೆಂದು ಭೀಮಸೇನನು ಹೇಳಿದುದು; ಅವನ ಮಾತಿನಲ್ಲಿ ಸಂದೇಹಿಸಿದ ದ್ರೋಣರು ಧರ್ಮರಾಜನನ್ನು ಕೇಳಿದುದು–ಈ ವಿಷಯಗಳನ್ನೂ ಹೇಳುತ್ತಾರೆ. "ಅಶ್ವತ್ಥಾಮಾ ಎಂಬ ಹೆಸರಿನ ಆನೆಯನ್ನು ಭೀಮನು ಸಂಹರಿಸಿದುದನ್ನು ಕಂಡು ಯುಧಿಷ್ಠಿರನು ದ್ರೋಣರ ಸಮೀಪಕ್ಕೆ ಹೋಗಿ ಹೇಳುತ್ತಾನೆ: **ಯಸ್ಯಾರ್ಥೇ ಶಸ್ತ್ರಮಾದತ್ಸೇ ಯಮವೇಕ್ಷ್ಯ ಚ ಜೀವಸಿ। ಪುತ್ರಸ್ತೇ ದಯಿತೋ ನಿತ್ಯಂ ಸೋಽಶ್ವತ್ಥಾಮಾ ನಿಪಾತಿತಃ॥**" ಅರ್ಥಾತ್ ಇಲ್ಲಿ ಧರ್ಮರಾಜನೇ ಅಶ್ವತ್ಥಾಮನು ಸತ್ತುಹೋದನೆಂದು ಸ್ಪಷ್ಟವಾಗಿ ಹೇಳುತ್ತಾನೆ. ಹೀಗೆ ಹೇಳಲು ಯುಧಿಷ್ಠಿರನಿಗೆ ಅಶ್ವತ್ಥಾಮನೆಂಬ ಹೆಸರಿನ ಆನೆಯನ್ನು ಕೊಂದುದನ್ನು ನೋಡಬೇಕಾದ ಅವಶ್ಯಕತೆ ಇರಲಿಲ್ಲ. 'ನಿನ್ನ ಮಗನು ಸತ್ತುಹೋದನು' ಎಂದು ಹೇಳಿದ ಮೇಲೆ **ಅವ್ಯಕ್ತಮಬ್ರವೀದ್ರಾಜನ್ಹತಃ ಕುಞ್ಜರ ಇತ್ಯುತ ।** ಎನ್ನುವ ವಾಕ್ಯವೂ ಮುಂದಿನ ಶ್ಲೋಕದಲ್ಲಿ ಬರುತ್ತದೆ. ಯುಧಿಷ್ಠಿರನು ಯಾವ ಪುರುಷಾರ್ಥದ ಸಾಧನೆಗಾಗಿ 'ನಿನ್ನ ಮಗನು ಸತ್ತುಹೋದನು'– ಎಂದು ಮೊದಲು ಸ್ಪಷ್ಟವಾಗಿ ಹೇಳಿ, ಅನಂತರ ಅವ್ಯಕ್ತವಾಗಿ 'ಕುಂಜರವು ಸತ್ತಿತು'

ಎಂದೂ ಹೇಳಿದನೋ ತಿಳಿಯದು. ಒಟ್ಟಿನಲ್ಲಿ ಈ ಪ್ರಕರಣವು ಬಹಳ ಅಸಂಗತವಾಗಿ ಕಾಣುತ್ತದೆ. ಧರ್ಮರಾಜನ ಬಾಯಿಂದ ಈ ಮಾತೇ ಬರಬಾರದು. ಈ ಕಾರಣದಿಂದಲೇ ಹಿಂದೆ ವ್ಯಾಸರೂ ಸಹ 'ಅವ್ಯಕ್ತಮಬ್ರವೀದ್ರಾಜನ್ಹತಃ ಕುಞ್ಜರ ಇತ್ಯುತ I' ಎಂದು ಹೇಳಿದ್ದಾರೆ. 'ಅಶ್ವತ್ಥಾಮನು ಹತನಾದನು' ಎಂದು ಹೇಳಿ ಅನಂತರ ಮೆಲ್ಲಗೆ ಈ ಮಾತನ್ನು ಹೇಳಿದನು-ಎಂದೂ ಅವರು ಹೇಳಿಲ್ಲ. ಅದನ್ನು ವಾಚಕರೇ ಅಧ್ಯಾಹಾರಮಾಡಿಕೊಳ್ಳಬೇಕಾಗುತ್ತದೆ. ಹೀಗಿರುವಾಗ 'ನಿನ್ನ ಮಗನು ಸತ್ತುಹೋಗಿದ್ದಾನೆ' ಎಂದು ನೇರವಾಗಿ ಯುಧಿಷ್ಠಿರನು ದ್ರೋಣರೊಡನೆ ಹೇಳುತ್ತಾನೆಯೇ? ಈ ಮಾತನ್ನು ೧೯೨ನೆಯ ಅಧ್ಯಾಯದಲ್ಲಿ ಭೀಮನು ಹೇಳಿರುವ ಪ್ರಸಂಗವಿದೆ. (ಶ್ಲೋ.೪೧) ಆದುದರಿಂದ ಇಲ್ಲಿರುವ ೧೨ಶ್ಲೋಕಗಳೂ ಹೆಚ್ಚಿನವು. ಹೇಗೋ ಸೇರಿಕೊಂಡುಬಿಟ್ಟಿವೆ. ಇದನ್ನು ಹೀಗೆ ಸೇರಿಸಬೇಕಾಗಿದೆ.

**ಉಪಾಸೃತ್ಯ ತದಾ ದ್ರೋಣಮುಚ್ಚೈರಿದಮುವಾಚ ಹ ॥೫೬॥**

ದ್ರೋಣರ ಸಮೀಪಕ್ಕೆ ಹೋಗಿ 'ಇದಂ' ಎಂದರೆ 'ಅಶ್ವತ್ಥಾಮಾ' ಎಂಬ ಆನೆಯು ಸತ್ತ ವಿಷಯವನ್ನೇ ಗಟ್ಟಿಯಾಗಿ ಹೇಳಿದನು. ಆದರೆ ಹಾಗೆ ಹೇಳುವಾಗ (ಮುಂದಿನ ಎರಡು ಶ್ಲೋಕಗಳನ್ನು ಬಿಟ್ಟು)

**ಅವ್ಯಕ್ತಮಬ್ರವೀದ್ರಾಜಾ ಹತಃ ಕುಞ್ಜರ ಇತ್ಯುತ ॥೫೯॥**

'ಹತಃ ಕುಞ್ಜರಃ' ಎಂಬ ವಾಕ್ಯವನ್ನು ಅವ್ಯಕ್ತವಾಗಿ-ಅಸ್ಪಷ್ಟವಾಗಿ ಹೇಳಿದನು.' ಇಲ್ಲಿಯೂ ಸಹ 'ಅಶ್ವತ್ಥಾಮಾ ಹತಃ' ಎಂದು ಯುಧಿಷ್ಠಿರನು ಹೇಳಿದನೆಂದು ಹೇಳುವುದಿಲ್ಲ. ಇದು ಕೇವಲ ಊಹ್ಯವಾಗಿಯೇ ಉಳಿಯುತ್ತದೆ. ಎರಡು ಕಡೆಗಳಲ್ಲಿಯೂ ಗಮನಿಸಬೇಕಾಗಿರುವ ಮತ್ತೊಂದು ಅಂಶವೆಂದರೆ: 'ಅಶ್ವತ್ಥಾಮಾ' ಎಂಬುದನ್ನು ಯುಧಿಷ್ಠಿರನು ಗಟ್ಟಿಯಾಗಿ ಹೇಳುತ್ತಾನೆಯೇ ಹೊರತು 'ಹತಃ' ಎಂಬ ಶಬ್ದವನ್ನೂ ಸಹ ಅವ್ಯಕ್ತವಾಗಿಯೇ ಹೇಳುತ್ತಾನೆ. ಒಂದು ಸುಳ್ಳು ಹೇಳಬೇಕಾದರೂ ಯುಧಿಷ್ಠಿರನು ಎಷ್ಟು ಸಂಕೋಚಪಡುವನೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಹೀಗಿರುವಾಗ 'ಪುತ್ರಸ್ತೇ ನಿಪಾತಿತಃ' ಎಂದು ಯುಧಿಷ್ಠಿರನು ಹೇಗೆ

ಹೇಳುತ್ತಾನೆ? ಅವನಿಗದನ್ನು ಹೇಳಲು ಹೇಗೆ ಸಾಧ್ಯವಾಗುತ್ತದೆ? ಆದರೆ ದುರದೃಷ್ಟವಶಾತ್ ಈ ಎರಡು ಶ್ಲೋಕಗಳೂ ಎಲ್ಲ ಪ್ರತಿಗಳಲ್ಲಿಯೂ ಇವೆ.

೧೯೪ನೆಯ ಅಧ್ಯಾಯ: ಈ ಅಧ್ಯಾಯದಲ್ಲಿ ಧೃತರಾಷ್ಟ್ರನು ಅಶ್ವತ್ಥಾಮನನ್ನು ಬಹಳವಾಗಿ ಹೊಗಳಿ ತಂದೆಯ ಹತ್ಯೆಗೆ ಮಗನ ಪ್ರತಿಕ್ರಿಯೆ ಏನೆಂದು ಪ್ರಶ್ನಿಸುತ್ತಾನೆ.

೧೯೫ನೆಯ ಅಧ್ಯಾಯ: ಅಶ್ವತ್ಥಾಮನಿಗೆ ತನ್ನ ತಂದೆಯು ಧರ್ಮ ಯುದ್ಧದಲ್ಲಿ ಹತನಾಗದೇ ಪ್ರಾಯೋಪವೇಶಮಾಡಿದ್ದಾಗ ಧೃಷ್ಟದ್ಯುಮ್ನನಿಂದ ಹತನಾದನೆಂಬುದನ್ನು ಕೇಳಿ ಮಹಾಕೋಪವುಂಟಾಗುತ್ತದೆ. ಧೃಷ್ಟದ್ಯುಮ್ನನು ದ್ರೋಣರ ಕೇಶಗ್ರಹಣಮಾಡಿದನೆಂಬುದನ್ನು ನೆನೆದೊಡನೆಯೇ ಅವನ ಕೋಪವು ಇಮ್ಮಡಿಯಾಗುತ್ತದೆ. ಸುಳ್ಳುಹೇಳಿದುದಕ್ಕಾಗಿ ಯುಧಿಷ್ಠಿರನನ್ನೂ, ಕೇಶಗ್ರಹಣಮಾಡಿ ತಲೆಯನ್ನು ಕತ್ತರಿಸಿದುದಕ್ಕಾಗಿ ಧೃಷ್ಟದ್ಯುಮ್ನನನ್ನೂ-ಅಶ್ವತ್ಥಾಮನು ಬಹಳವಾಗಿ ನಿಂದಿಸುತ್ತಾನೆ. ಆದರೆ ಪಾಂಚಾಲರನ್ನೂ ಧೃಷ್ಟದ್ಯುಮ್ನನನ್ನೂ ಸಂಹರಿಸುತ್ತೇನೆಂದು ಶಪಥಮಾಡುವನೇ ಹೊರತು ಯುಧಿಷ್ಠಿರನನ್ನು ಸಂಹರಿಸುವುದಾಗಿ ಅವನು ಶಪಥಮಾಡುವುದಿಲ್ಲ. ತನ್ನ ಪರಾಕ್ರಮವೆಷ್ಟೆಂಬುದನ್ನು ದುರ್ಯೋಧನನೊಡನೆ ಹೇಳಿಕೊಳ್ಳುತ್ತಾನೆ. ಶತ್ರುಗಳ ಮೇಲೆ ನಾರಾಯಣಾಸ್ತ್ರವನ್ನು ಪ್ರಯೋಗಿಸುವುದಾಗಿ ಹೇಳಿ ಅದರ ಪೂರ್ವೇತಿಹಾಸವನ್ನು ದುರ್ಯೋಧನನಿಗೆ ತಿಳಿಸುತ್ತಾನೆ.

ಮಹಾವಿಷ್ಣುವು ದ್ರೋಣರಿಗೆ ನಾರಾಯಣಾಸ್ತ್ರವನ್ನು ಅನುಗ್ರಹಿಸಿ ಅದರ ಪ್ರಯೋಗನಿಯಮಗಳನ್ನು ಹೇಳುತ್ತಾನೆ: 'ಅವಧ್ಯರಾದವರನ್ನೂ ಈ ಮಹಾಸ್ತ್ರವು ವಧಿಸುವುದರಿಂದ ಇದನ್ನು ಪ್ರಯೋಗಿಸಲೇಬಾರದು-**ಅವಧ್ಯಮಪಿ ಹನ್ಯಾದ್ಧಿ ತಸ್ಮಾನ್ನೈತತ್ಪ್ರಯೋಜಯೇತ್** । ಅವಧ್ಯರಾದವರ ಮೇಲೆ ಇದನ್ನು ಪ್ರಯೋಗಿಸಿದರೆ ಪ್ರಯೋಕ್ತೃವೇ ತೊಂದರೆಗೆ ಒಳಗಾಗುತ್ತಾನೆ-**ಸರ್ವಥಾ ಪೀಡಿತೋ ಹಿ ಸ್ಯಾದವಧ್ಯಾನ್ಪೀಡಯನ್ರಣೇ** ॥೩೭॥

ನಾರಾಯಣಾಸ್ತ್ರಕ್ಕೆ ಪ್ರತ್ಯಸ್ತ್ರವಿಲ್ಲ. ಶರಣಾಗತಿಯೇ ಪ್ರತ್ಯಸ್ತ್ರ.:

**ಅಥ ಸಂಖ್ಯೇ ರಥಸ್ಯೈವ ಶಸ್ತ್ರಾಣಾಂ ಚ ವಿಸರ್ಜನಮ್ ।**
**ಪ್ರಯಾಚತಾನಾಂ ಚ ಶತ್ರೂಣಾಂ ಗಮನಂ ಶರಣಸ್ಯ ಚ ॥೩೬॥**
**ಏತೇ ಪ್ರಶಮನೇ ಯೋಗಾಃ......**

ರಥವನ್ನು ಬಿಟ್ಟು ಕೆಳಗಿಳಿಯುವುದು; ಶಸ್ತ್ರಾಸ್ತ್ರಗಳನ್ನು ಕೆಳಗಿಡುವುದು; ಅಭಯವನ್ನು ಯಾಚಿಸುವುದು; ಶತ್ರುಗಳ ಆಶ್ರಯವನ್ನೇ ಪಡೆಯುವುದು. ಅರ್ಥಾತ್ ನಾರಾಯಣಮಹಾಸ್ತ್ರವು ಶತ್ರುಪಕ್ಷದವರನ್ನು ಶರಣಾಗತರನ್ನಾಗಿಸದೆ ಹಿಂದಿರುಗುವುದಿಲ್ಲ.'

ಇದಾದನಂತರ **ತಜ್ಜಗ್ರಾಹ ಪಿತಾ ಮಹ್ಯಮಬ್ರವೀಚ್ಚೈವ ಸ ಪ್ರಭುಃ।** ಎಂಬ ಶ್ಲೋಕವಿದೆ. 'ನನ್ನ ತಂದೆಯು ಆ ಅಸ್ತ್ರವನ್ನು ನನಗಾಗಿಯೇ ಪಡೆದುಕೊಂಡನು. ಅನಂತರ ಆ ಪ್ರಭುವು ಹೇಳಿದನು:

**ತ್ವಂ ವಧಿಷ್ಯಸಿ ಸರ್ವಾಣಿ ಶಸ್ತ್ರವರ್ಷಾಣ್ಯನೇಕಶಃ ।**
**ಅನೇನಾಸ್ತ್ರೇಣ ಸಂಗ್ರಾಮೇ ತೇಜಸಾ ಚ ಜ್ವಲಿಷ್ಯಸಿ ॥೩೮॥**

"ಅನೇಕ ಶಸ್ತ್ರಸಮೂಹಗಳನ್ನು ನೀನು ಯುದ್ಧದಲ್ಲಿ ಹಲವು ಬಾರಿ ನಾಶಮಾಡುವೆ. ಈ ಅಸ್ತ್ರವನ್ನು ನೀನು ಹೊಂದಿರುವುದರಿಂದ ನೀನು ತೇಜಸ್ಸಿನಿಂದಲೂ ಪ್ರಜ್ವಲಿಸುವೆ"–ಎಂದು ನಾರಾಯಣನು ದ್ರೋಣರಿಗೆ ಹೇಳಿದುದನ್ನು ಅಶ್ವತ್ಥಾಮನು ದುರ್ಯೋಧನನಿಗೆ ಹೇಳುತ್ತಾನೆ. ಈ ಪ್ರಕರಣದಲ್ಲಿ ಒಂದು ಸ್ವಾರಸ್ಯವಿದೆ. ದ್ರೋಣರು ನಾರಾಯಣಾಸ್ತ್ರವನ್ನು ತಮ್ಮ ಮಗನ ಸಲುವಾಗಿ ತೆಗೆದುಕೊಂಡುದುದರಿಂದ ಯದ್ಯಪಿ ಮೇಲಿನ ಮಾತನ್ನು ನಾರಾಯಣನು ದ್ರೋಣರಿಗೆ ಹೇಳಿದ್ದರೂ ಈ ಮಾತುಗಳು ಅಶ್ವತ್ಥಾಮನಲ್ಲಿ ಸತ್ಯವಾಗಿ ಪರಿಣಮಿಸಿದುವು. ದ್ರೋಣರು ನಾರಾಯಣಾಸ್ತ್ರವನ್ನು ಪ್ರಯೋಗ ಮಾಡುವುದಿಲ್ಲ. ಅಶ್ವತ್ಥಾಮನೇ ನಾರಾಯಣಾಸ್ತ್ರಪ್ರಯೋಗಮಾಡುತ್ತಾನೆ. ಅನೇಕ ಶಸ್ತ್ರಾಸ್ತ್ರಗಳನ್ನು ಸುರಿಸುತ್ತಾನೆ ಮತ್ತು ಈ ಮಹಾಸ್ತ್ರವಿದ್ದುದರಿಂದಲೇ ತೇಜಸ್ಸಿನಿಂದ ಪ್ರಜ್ವಲಿಸುತ್ತಾನೆ.

ಮಹಾತ್ಮರ ಸಂಕಲ್ಪಸಿದ್ಧಿ ಎಂದರೆ ಇದೇ ಅಲ್ಲವೇ!

ಅಶ್ವತ್ಥಾಮನು ವೀರೋದ್ಗಾರವನ್ನು ಕೇಳಿದೊಡನೆಯೇ ಕೌರವರ ಸೇನೆಯಲ್ಲಿ ಭೇರಿ-ಡಿಂಡಿಮಾದಿಗಳ ಶಬ್ದವಾಗುತ್ತದೆ. ದ್ರೋಣರ ಅವಸಾನ

ವಾದೊಡನೆಯೇ ಕೌರವಸೈನ್ಯದಲ್ಲಾಗುತ್ತಿದ್ದ ವೀರಗರ್ಜನೆಯನ್ನು ಕೇಳಿ ಪಾಂಡವರಿಗೆ ಅಚ್ಚರಿಯಾಗುತ್ತದೆ. ಕಾರಣವನ್ನು ತಿಳಿಯಲು ಪಾಂಡವರು ಮಂತ್ರಾಲೋಚನೆಯನ್ನು ಮಾಡುತ್ತಾರೆ. ಅಶ್ವತ್ಥಾಮನು ಮಹಾ ನಾರಾಯಣಾಸ್ತ್ರವನ್ನು ಪ್ರಯೋಗಿಸುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೧೯೬ನೆಯ ಅಧ್ಯಾಯ: ಈ ಅಧ್ಯಾಯದ ಮೊದಲನೆಯ ನಾಲ್ಕು ಶ್ಲೋಕಗಳಲ್ಲಿ ನಾರಾಯಣಾಸ್ತ್ರಪ್ರಯೋಗದಿಂದಾದ ಪರಿಣಾಮವನ್ನು ಸಂಜಯನು ಧೃತರಾಷ್ಟ್ರನಿಗೆ ಸೂಕ್ಷ್ಮರೀತಿಯಲ್ಲಿ ತಿಳಿಸುತ್ತಾನೆ. ಧೃತರಾಷ್ಟ್ರನು ಯುಧಿಷ್ಠಿರನ ಪ್ರತಿಕ್ರಿಯೆಯು ಏನೆಂಬುದನ್ನು ಕೇಳಿದನಂತರ ಕಥೆಯು ಯುಧಿಷ್ಠಿರನ ಬಿಡಾರದ ಕಡೆಗೆ ಹರಿಯುತ್ತದೆ.

ಪಾಂಡವರು ಪರಸ್ಪರವಾಗಿ ಮಂತ್ರಾಲೋಚನೆಯನ್ನು ನಡೆಸುತ್ತಿದ್ದಾಗ ಯುಧಿಷ್ಠಿರನು ದ್ರೋಣರ ಪತನದಿಂದ ವ್ಯಾಕುಲರಾಗಿರಬೇಕಾಗಿದ್ದ ಕೌರವರು ವೀರಗರ್ಜನೆಯನ್ನು ಮಾಡುತ್ತಿರುವುದಕ್ಕೆ ಕಾರಣವೇನಿರಬಹುದೆಂದು ಅರ್ಜುನನನ್ನು ಪ್ರಶ್ನಿಸುತ್ತಾನೆ. 'ಇಂದ್ರನೇ ಕೌರವರ ಸಹಾಯಕ್ಕೆ ಬಂದಿರ ಬಹುದೋ?' ಎಂದು ಯುಧಿಷ್ಠಿರನು ಶಂಕಿಸುತ್ತಾನೆ. ಅದಕ್ಕುತ್ತರವಾಗಿ ಅರ್ಜುನನು, ಅಶ್ವತ್ಥಾಮನು ಯುದ್ಧಕ್ಕೆ ಬರುತ್ತಿದ್ದಾನೆಂದು ಹೇಳಿ ದ್ರೋಣರನ್ನು ಸಂಹರಿಸಿದುದು ಮಹಾಪಾಪವೆಂದು ಯುಧಿಷ್ಠಿರನಿಗೆ ಒತ್ತಿ ಒತ್ತಿ ಹೇಳುತ್ತಾನೆ. ರಾಜ್ಯಲೋಭದಿಂದ ಸುಳ್ಳುಹೇಳಿದುದಕ್ಕಾಗಿ ಅಣ್ಣನನ್ನು ಅರ್ಜುನನು ಖಂಡಿಸುತ್ತಾನೆ. ಅರ್ಜುನನ ಮಾತುಗಳನ್ನು ಓದಿದರೆ ಅವನು ಧರ್ಮರಾಜ ನನ್ನೂ ಅತಿಶಯಿಸುವ ಧರ್ಮಮೂರ್ತಿಯೆಂದು ಅನಿಸದೇ ಇರದು.

೧೯೭ನೆಯ ಅಧ್ಯಾಯ: ಈ ಅಧ್ಯಾಯದಲ್ಲಿ ಭೀಮಸೇನ ಮತ್ತು ಧೃಷ್ಟದ್ಯುಮ್ನರು ದ್ರೋಣರ ವಧೆಯನ್ನು ಸಮರ್ಥಿಸುತ್ತಾರೆ. 'ನೀನು ಧಾರ್ಮಿಕನಾಗಿದ್ದರೂ ಅಧರ್ಮವು ಯಾವುದು?–ಎಂದು ನಿಷ್ಕರ್ಷಿಸುವ ಸಾಮರ್ಥ್ಯವು ನಿನಗಿಲ್ಲ' ಎನ್ನುತ್ತಾನೆ ಭೀಮಸೇನ. ಅಧರ್ಮಮೇನಂ ವಿಪುಲಂ ಧಾರ್ಮಿಕಃ ಸನ್ನ ಬುಧ್ಯಸೇ (೧೬). ಅಶ್ವತ್ಥಾಮನನ್ನು ಹೊಗಳಿದುದಕ್ಕೂ ಭೀಮನು ಆಕ್ಷೇಪಿಸುತ್ತಾನೆ. ೧೮ನೆಯ ಶ್ಲೋಕದ

ಪೂರ್ವಾರ್ಧವು ಹೀಗಿದೆ. 'ಸ್ವಯಮೇವಾತ್ಮನೋ ದೋಷಾನ್ಬ್ರುವಾಣಃ ಕಿಂ ನ ಲಜ್ಜಸೇ । ನಿನ್ನಲ್ಲಿರುವ ದೋಷಗಳನ್ನು ನೀನೇ ಹೇಳಿಕೊಳ್ಳಲು ನಿನಗೆ ನಾಚಿಕೆಯಾಗುವುದಿಲ್ಲವೆ?' –ಎನ್ನುತ್ತಾನೆ ಭೀಮಸೇನ. ತಮ್ಮಲ್ಲಿರುವ ದೋಷಗಳನ್ನು ಹೇಳಿಕೊಳ್ಳುವುದೂ ಮತ್ತು ಆ ದೋಷಗಳನ್ನು ತಿದ್ದಿಕೊಳ್ಳುವುದೂ ಶ್ರೇಷ್ಠವಾದ ಗುಣವೆನ್ನುತ್ತಾರೆ. ತನ್ನಲ್ಲಿರುವ ದುರ್ಗುಣಗಳನ್ನು ಹೇಳಲು ಮನುಷ್ಯನಿಗೆ ಧೈರ್ಯವು ಬೇಕು. ಸಾಧಾರಣಮನುಷ್ಯರಿಂದ ಇದು ಸಾಧ್ಯವಾಗುವುದಿಲ್ಲ. ಭೀಮಸೇನ 'ತನ್ನ ದೋಷಗಳನ್ನು ಬಹಿರಂಗಪಡಿಸುವುದು ಉಚಿತವಲ್ಲ' –ಎಂಬ ಅಭಿಪ್ರಾಯಪಟ್ಟಿದ್ದಾನೆ. ಇಲ್ಲಿ ದೋಷ ಎಂದರೆ ಪರಾಕ್ರಮದಲ್ಲಿನ ನ್ಯೂನತೆ ಎಂದು ಅರ್ಥಮಾಡಬೇಕು. ಈ ವಿಷಯವನ್ನು ಕ್ರೋಢೀಕರಿಸಿ ಹೀಗೆ ಹೇಳಬಹುದಾಗಿದೆ: ಭೀಮನು ಅರ್ಜುನನನ್ನು ಆಕ್ಷೇಪಿಸುವಂತೆ ಹೇಳುತ್ತಾನೆ: "ಶಕ್ತಿಯಿದ್ದರೂ ಧರ್ಮದೃಷ್ಟಿಯಿಂದ ಕೋಪಮಾಡಿಕೊಳ್ಳದೆ ಹದಿಮೂರು ವರ್ಷಗಳಕಾಲ ಕಷ್ಟವನ್ನು ಸಹಿಸಿದುದಕ್ಕಾಗಿ ನಿನ್ನನ್ನು ಪ್ರಶಂಸಿಸುತ್ತೇನೆ. ಆದರೆ ಧರ್ಮಿಷ್ಠರ ರಾಜ್ಯವನ್ನು ಮೋಸದಿಂದ ಅಪಹರಿಸಿದುದು ದೊಡ್ಡ ಅಧರ್ಮ. ಅದನ್ನು ನೀನು ತಿಳಿಯಬೇಕು. ಶತ್ರುಗಳನ್ನು ಕೊಲ್ಲುವೆನೆಂದು ನೀನು ಹೇಳಿದ ಮಾತನ್ನು ನೀನು ಉಳಿಸಿಕೊಳ್ಳಬೇಕು. ಶ್ರೀಕೃಷ್ಣನಿರುವಾಗ ನಿನಗಿಂತಲೂ ಪರಾಕ್ರಮದಲ್ಲಿ ನಿಹೀನನಾದ ಅಶ್ವತ್ಥಾಮನನ್ನು ಹೊಗಳಬಾರದು."

ದ್ರೋಣರ ವಧೆಯು ಅಧರ್ಮವೆಂಬುದನ್ನು ಅವನು ನಿರಾಕರಿಸು ವುದಿಲ್ಲ. ಅದು ದೊಡ್ಡ ಅಧರ್ಮವನ್ನು ಎದುರಿಸಲು ಮಾಡಿದ ಅನಿವಾರ್ಯ ವಾದ ಅಧರ್ಮ-ಎಂಬುದು ಭೀಮನ ಅಭಿಪ್ರಾಯವೆಂದು ಭಾವಿಸಬಹುದು.

ಶತ್ರುಪಕ್ಷಕ್ಕೆ ತಿಳಿಯುವ ರೀತಿಯಲ್ಲಿ ತನ್ನಲ್ಲಿರುವ ಅಥವಾ ತನ್ನ ಪಕ್ಷದಲ್ಲಿರುವ ದೋಷಗಳನ್ನು (ನ್ಯೂನತೆಗಳನ್ನು) ಹೊರಗೆಡಹಬಾರದು. ಈ ದೃಷ್ಟಿಯಿಂದ ಭೀಮನ ಮಾತು ಸಮಂಜಸವಾಗಿದೆ. ಮುಂದೆ ಭೀಮಸೇನನು ತನ್ನ ಪರಾಕ್ರಮವನ್ನು ವಿವರಿಸುತ್ತಾನೆ. ಆತ್ಮಶ್ಲಾಘನೆ ಮಾಡಿಕೊಳ್ಳುತ್ತಾನೆ. ಯುದ್ಧಸಮಯದಲ್ಲಿ ಆತ್ಮನಿಂದನೆಯು ದೋಷ ಪೂರ್ಣವಾದುದು; ಆತ್ಮಶ್ಲಾಘನೆಯು ಅಪೇಕ್ಷಣೀಯ-ಎಂಬುದು ಭೀಮನ

ಅಭಿಪ್ರಾಯವಾಗಿರುವಂತೆ ತೋರುತ್ತದೆ. ಒಂದು ಪುಸ್ತಕದಲ್ಲಿ ಈ ವಿಧವಾದ ತರ್ಕಕ್ಕೆ ಅವಕಾಶವೇ ಇಲ್ಲದಂತೆ ೧೮ನೆಯ ಶ್ಲೋಕದ ಪೂರ್ವಾರ್ಧವು ಹೀಗಿದೆ. 'ಸ್ವಯಮೇವಾತ್ಮನೋ ವಕ್ತುಂ ನ ಯುಕ್ತಂ ಗುಣಸಂಸ್ತವಮ್' 'ತಾನೇ ತನ್ನ ಗುಣಗಳ ಶ್ಲಾಘನೆಯನ್ನು ಮಾಡಿಕೊಳ್ಳುವುದು ಯುಕ್ತವಲ್ಲ. (ಆದರೂ ಸಹ ಈ ಸಮಯದಲ್ಲಿ ನನ್ನ ಪರಾಕ್ರಮವೆಷ್ಟೆಂಬುದನ್ನು ಪ್ರಕಟಪಡಿಸುತ್ತೇನೆ.)' ಮುಂದಿನ ಶ್ಲೋಕಗಳೂ ಈ ವಾಕ್ಯಕ್ಕೆ ಹೊಂದಿಕೊಳ್ಳುತ್ತವೆ.

ಧೃಷ್ಟದ್ಯುಮ್ನನ ಮಾತುಗಳೂ ಯುಕ್ತಿಯುಕ್ತವಾಗಿವೆ. ಯಾವುದೇ ದೃಷ್ಟಿಯಿಂದ ನೋಡಿದರೂ ತಾನು ದ್ರೋಣರನ್ನು ಸಂಹರಿಸಿದುದು ಸರಿ ಎಂದು ತನ್ನ ಕಾರ್ಯವನ್ನು ಹೃದಯಂಗಮವಾಗಿ ಸಮರ್ಥಿಸಿಕೊಳ್ಳುತ್ತಾನೆ. ಕಟ್ಟಕಡೆಗೆ 'ಯುಧಿಷ್ಠಿರನೂ ಸುಳ್ಳುಗಾರನಲ್ಲ; ನಾನೂ ಅಧಾರ್ಮಿಕನಲ್ಲ' –ಎಂದು ಘೋಷಿಸಿ ಮಾತನ್ನು ಮುಗಿಸುತ್ತಾನೆ.

೧೯೮ನೆಯ ಅಧ್ಯಾಯ: ಧೃಷ್ಟದ್ಯುಮ್ನನ ಮಾತನ್ನು ಕೇಳಿ ಧೃತರಾಷ್ಟ್ರನಿಗೆ ಖತಿಯುಂಟಾಗುತ್ತದೆ. 'ಧೃಷ್ಟದ್ಯುಮ್ನನ ಮಾತಿಗೆ ಪ್ರತಿಯಾಗಿ ಯಾರೂ ಏನೂ ಹೇಳಲೇ ಇಲ್ಲವೇ?' –ಎಂದು ಧೃತರಾಷ್ಟ್ರನು ಪ್ರಶ್ನಿಸುತ್ತಾನೆ. ಅರ್ಜುನನು ಧೃಷ್ಟದ್ಯುಮ್ನನ ಮಾತನ್ನು ಧಿಕ್ಕರಿಸುತ್ತಾನೆ. ಪಾಂಡವರು ನಾಚಿಕೆಯಿಂದ ತಲೆತಗ್ಗಿಸಿಕೊಂಡು ಕುಳಿತಿರುತ್ತಾರೆ. ಅನಂತರ ಸಾತ್ಯಕಿಯು ಧೃಷ್ಟದ್ಯುಮ್ನನನ್ನು ಖಂಡಿಸಿ ಮಾತನಾಡುತ್ತಾನೆ. ಕಡೆಗೆ ಗದೆಯಿಂದ ಧೃಷ್ಟದ್ಯುಮ್ನನನ್ನು ಅಪ್ಪಳಿಸಲು ನಿಶ್ಚಯಿಸುತ್ತಾನೆ. ಧೃಷ್ಟದ್ಯುಮ್ನನ ಮಾತುಗಳು ಈ ಪ್ರಕರಣದಲ್ಲಿಯೂ ಯುಕ್ತಿಯುಕ್ತವಾಗಿಯೇ ಕಾಣುತ್ತವೆ. ಅವನ ಮಾತಿನ ಕಡೆಯಲ್ಲಿ 'ಧರ್ಮವು ದುರ್ಜ್ಞೇಯ. ತಿಳಿಯಲು ಅಸಾಧ್ಯವಾದುದು. ಅಧರ್ಮವೂ ಸಹ ದುರ್ವಿದಃ= ತಿಳಿದುಕೊಳ್ಳಲು ಬಹಳ ಕಷ್ಟವಾದುದು'–ಎಂದೆನ್ನುತ್ತಾನೆ. ಧರ್ಮಾಧರ್ಮಗಳು ಬಹಳ ಸೂಕ್ಷ್ಮವಾದುವುಗಳು. ಒಂದೇ ಕಾರ್ಯವನ್ನು ಧರ್ಮಕಾರ್ಯವೆಂದೂ ಪ್ರತಿಪಾದಿಸಬಹುದು; ಅಧರ್ಮಕಾರ್ಯವೆಂದೂ ಪ್ರತಿಪಾದಿಸಬಹುದು. ದ್ರೋಣರನ್ನು ಕೊಂದುದು ಅರ್ಜುನನ ದೃಷ್ಟಿಯಲ್ಲಿ ಅಧರ್ಮ. ಅದನ್ನವನು ಚೆನ್ನಾಗಿಯೇ ಪ್ರತಿಪಾದಿಸುತ್ತಾನೆ. ಧೃಷ್ಟದ್ಯುಮ್ನನ ದೃಷ್ಟಿಯಲ್ಲಿ ದ್ರೋಣರನ್ನು

ಕೊಂದುದು ಧರ್ಮ. 'ನಾನು ಹುಟ್ಟಿದ್ದೇ ಅದಕ್ಕೆ' ಎನ್ನುತ್ತಾನೆ ಪಾರ್ಷತ. ಇದೂ ಸಹ ಯಥಾರ್ಥವಾದುದೇ. ವಿರೋಧಿಗಳೂ ಸಹ ತಲೆದೂಗುವ ರೀತಿಯಲ್ಲಿ ಧೃಷ್ಟದ್ಯುಮ್ನನು ತನ್ನ ಕಾರ್ಯವನ್ನು ಸಮರ್ಥಿಸಿ ಕೊಳ್ಳುತ್ತಾನೆ. ಈ ಧರ್ಮಾಧರ್ಮಗಳ ಜಿಜ್ಞಾಸೆಯು ಇಂದಿನವರೆಗೂ ಹಾಗೆಯೇ ನಡೆದುಕೊಂಡು ಬಂದಿದೆ.

ಧೃಷ್ಟದ್ಯುಮ್ನನ ಮಾತನ್ನು ಕೇಳಿ ಕುಪಿತನಾದ ಸಾತ್ಯಕಿಯು ಗದೆಯನ್ನು ಎತ್ತಿಕೊಂಡು ಪಾರ್ಷತನನ್ನು ಸಂಹರಿಸಲು ರಥದಿಂದಿಳಿದು ಹೋಗುತ್ತಾನೆ. ಶ್ರೀಕೃಷ್ಣನ ಸಲಹೆಯಂತೆ ಭೀಮನು ಅವನನ್ನು ಕಷ್ಟಪಟ್ಟು ತಡೆಯುತ್ತಾನೆ. ಸಹದೇವನು ಶೈನೇಯನನ್ನು ಸವಿಮಾತುಗಳಿಂದ ಸಮಾಧಾನಪಡಿಸುತ್ತಾನೆ. ಪುನಃ ಧೃಷ್ಟದ್ಯುಮ್ನನು ಚುಚ್ಚುಮಾತುಗಳನ್ನಾಡುತ್ತಾನೆ. ಆಗ ಶ್ರೀಕೃಷ್ಣ-ಯುಧಿಷ್ಠಿರರು ಇಬ್ಬರನ್ನೂ ಸಮಾಧಾನಪಡಿಸುತ್ತಾರೆ. ಎಲ್ಲರೂ ಸೇರಿ ಕೌರವರೊಡನೆ ಯುದ್ಧಕ್ಕೆ ಹೋಗುತ್ತಾರೆ.

ಈ ಪ್ರಕರಣದಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ: ಈ ಎಲ್ಲಕ್ಕೂ ಸೂತ್ರಧಾರಿಯಾದ ಶ್ರೀಕೃಷ್ಣನ ಪ್ರಸ್ತಾಪವನ್ನೇ ಯಾರೂ ಮಾಡುವುದಿಲ್ಲ. ದ್ರೋಣರ ಮುಂದೆ 'ಅವರ ಮಗನು ಸತ್ತುಹೋದನು' ಎಂದು ಹೇಳಬೇಕೆಂಬ ಯೋಜನೆಯನ್ನು ಸಿದ್ಧಪಡಿಸಿದವನೇ ಶ್ರೀಕೃಷ್ಣ- **ಅಶ್ವತ್ಥಾಮ್ನಿ ಹತೇ... ತಂ ಹತಂ ಸಂಯುಗೇ ಕಶ್ಚಿದಸ್ಮೈ ಶಂಸತು-** ಅಧ್ಯಾಯ ೧೯೦-೧೨. ದ್ರೋಣರು ಯುಧಿಷ್ಠಿರನನ್ನು ಕೇಳಿದಾಗಲೂ ಶ್ರೀಕೃಷ್ಣನೇ ಯುಧಿಷ್ಠಿರನಿಗೆ ಈ ಒಂದು ಸುಳ್ಳನ್ನು ಹೇಳುವಂತೆ ಒತ್ತಾಯ ಪಡಿಸುತ್ತಾನೆ. **ಸ ಭವಾಂಸ್ತ್ರಾತು ನೋ ದ್ರೋಣಾತ್ಸತ್ಯಾಜ್ಜ್ಯಾಯೋಽನೃತಂ ವಚಃ॥೪೭॥** (ಅಧ್ಯಾಯ ೧೯೦). ಇವೆಲ್ಲವೂ ಅರ್ಜುನನ ಸಮಕ್ಷಮ ದಲ್ಲಿಯೇ ನಡೆಯುತ್ತದೆ. ಕಾರ್ಯಕ್ಕೆ ಪ್ರೇರಕನಾದ ಶ್ರೀಕೃಷ್ಣನ ವಿಷಯದಲ್ಲಿ ಅರ್ಜುನನು ಒಂದು ಮಾತನ್ನೂ ಆಡುವುದಿಲ್ಲ. ಶ್ರೀಕೃಷ್ಣನು ಹೇಳಿದಂತೆ ತಾನು ನಡೆದೆನೆಂದು ಹೇಳಿ ಯುಧಿಷ್ಠಿರನೂ ತನ್ನ ಹೊಣೆಯನ್ನು ಕಳೆದುಕೊಳ್ಳಲು ಯತ್ನಿಸುವುದಿಲ್ಲ.

೧೯೯ನೆಯ ಅಧ್ಯಾಯ: ಈ ಅಧ್ಯಾಯದಲ್ಲಿಯೂ ಅಶ್ವತ್ಥಾಮನು ಪುನಃ ಪ್ರತಿಜ್ಞೆಮಾಡುತ್ತಾನೆ: **ಯಸ್ಮಾದ್ಯುಧ್ಯನ್ತಮಾಚಾರ್ಯಂ ಧರ್ಮ ಕಞ್ಚುಕಮಾಸ್ಥಿತಃ। ಮುಞ್ಚ ಶಸ್ತ್ರಮಿತಿ ಪ್ರಾಹ ಕುನ್ತೀಪುತ್ರೋ ಯುಧಿಷ್ಠಿರಃ**

II(೫) ಯುಧಿಷ್ಠಿರನು ಆಚಾರ್ಯರನ್ನು ಕುರಿತು 'ಮುಞ್ಚ ಶಸ್ತ್ರಮಿತಿ ಪ್ರಾಹ' 'ಶಸ್ತ್ರಸಂನ್ಯಾಸಮಾಡು' ಎಂದು ಹೇಳಿದ್ದರಿಂದ–ಎಂದು ಹೇಳುತ್ತಾನೆ. ಈ ಹಿಂದೆ ಯುಧಿಷ್ಠಿರನು ದ್ರೋಣರನ್ನು ಕುರಿತು ಶಸ್ತ್ರಗಳನ್ನು ಕೆಳಗಿಡಿರೆಂದು ಹೇಳಿರುವ ವಾಕ್ಯಗಳೇ ಬಂದಿರುವುದಿಲ್ಲ. 'ಅವ್ಯಕ್ತಮಬ್ರ ವೀದ್ರಾಜನ್ಹತಃ ಕುಞ್ಜರ ಇತ್ಯುತ' 'ಅಶ್ವತ್ಥಾಮಾ ಎಂದು ಹೇಳಿದನಂತರ ಹತಃ ಕುಞ್ಜರಃ ಎಂದೂ ಮೆಲ್ಲಗೆ ಹೇಳಿದನು' –ಎಂದಿದೆ. ದ್ರೋಣರ ಶಸ್ತ್ರಸಂನ್ಯಾಸಕ್ಕೆ ಈ ಮಾತೇ ಮೂಲಕಾರಣವೆಂದು ಭಾವಿಸಿ ಅಶ್ವತ್ಥಾಮನು ಹೀಗೆ ಹೇಳಿರಬಹುದು. ಅಶ್ವತ್ಥಾಮನು ಪಾಂಡವರ ಸೈನ್ಯವನ್ನು ಹೊಡೆದೋಡಿ ಸುವೆನೆಂದೂ, ಧೃಷ್ಟದ್ಯುಮ್ನನನ್ನು ಸಂಹರಿಸುವೆನೆಂದೂ- ಪ್ರತಿಜ್ಞೆಮಾಡಿ ಕೌರವರ ಸೈನ್ಯವನ್ನು ಹುರಿದುಂಬಿಸುತ್ತಾನೆ. ಪುನಃ ಘೋರವಾದ ಯುದ್ಧವು ಪ್ರಾರಂಭವಾಗುತ್ತದೆ. ಅಶ್ವತ್ಥಾಮನು ನಾರಾಯಣಾಸ್ತ್ರವನ್ನು ಪ್ರಯೋಗ ಮಾಡುತ್ತಾನೆ. ಆ ಮಹಾಸ್ತ್ರದ ಅದ್ಭುತವರ್ಣನೆಯು ಇಲ್ಲಿದೆ. ಎದುರಿಸಿದವ ರನ್ನು ಆ ಮಹಾಸ್ತ್ರವು ತಪ್ಪದೇ ಸಂಹರಿಸುತ್ತದೆ; ಶರಣಾಗತರಾದವರನ್ನು ಅದು ಸಂಹರಿಸುವುದಿಲ್ಲ. ಇದೇ ಆ ಮಹಾಸ್ತ್ರದ ಗುಟ್ಟು. ಇಲ್ಲಿ ಬರುವ ಯುಧಿಷ್ಠಿರನು ಸಂಕಟಪಟ್ಟು ಹೇಳುವ ಮಾತುಗಳೂ ಬಹಳ ಸ್ವಾರಸ್ಯವಾಗಿವೆ. ಅರ್ಜುನನು ೧೯೬ನೆಯ ಅಧ್ಯಾಯದಲ್ಲಿ ಹೇಳಿದ ಮಾತುಗಳಿಗೆ ಸರಿಯಾದ, ಅರ್ಜುನನ ಮನಸ್ಸನ್ನು ನೋಯಿಸುವಂತಹ ಮಾತುಗಳನ್ನು ಯುಧಿಷ್ಠಿರನಾಡುತ್ತಾನೆ. ಧೃತರಾಷ್ಟ್ರನ ಮಾತಿಗೆ ಉತ್ತರಹೇಳುವಾಗ ಸಂಜಯನು ಈ ವಿಷಯವನ್ನೇ ಎತ್ತಿಹೇಳುತ್ತಾನೆ. 'ಯುಧಿಷ್ಠಿರಸ್ಯ ತೈರ್ವಾಕ್ಯೈರ್ಮರ್ಮಣ್ಯಪಿ ಚ ಘಟ್ಟಿತೇ–ಮರ್ಮಸ್ಥಳಗಳನ್ನೂ ಭೇದಿಸುವಂತಹ ಯುಧಿಷ್ಠಿರನ ವ್ಯಂಗ್ಯೋಕ್ತಿ ಗಳಿಂದ ಸಂಕಟಪಡುತ್ತಿದ್ದ' (೨೦೧-೧೧). ಯುಧಿಷ್ಠಿರನ ಆರ್ತನಾದವನ್ನು ಕೇಳಿದ ಶ್ರೀಕೃಷ್ಣನು ನಾರಾಯಣಾಸ್ತ್ರದ ನಿವಾರಣೋಪಾಯವನ್ನು ಸೂಚಿಸುತ್ತಾನೆ. ಅವನ ಮಾತಿನಂತೆ ಎಲ್ಲರೂ ಅಸ್ತ್ರಗಳನ್ನು ಕೆಳಗಿಟ್ಟು ಶರಣಾಗತರಾಗುತ್ತಾರೆ. ಆದರೆ ಭೀಮಸೇನನು ಮಾತ್ರ ಶ್ರೀಕೃಷ್ಣನ ಮಾತಿಗೆ ಒಪ್ಪುವುದಿಲ್ಲ. ಗದೆಯಿಂದಲೇ ನಾರಾಯಣಾಸ್ತ್ರವನ್ನು ಧ್ವಂಸಮಾಡಿ ಬಿಡುವೆನೆಂದು ಹೊರಡುತ್ತಾನೆ. ಗಾಂಡೀವವನ್ನು ಕೆಳಗಿಡಕೂಡದೆಂದು ಅರ್ಜುನನಿಗೂ ಸಲಹೆ ಮಾಡುತ್ತಾನೆ. ಆದರೆ ಅರ್ಜುನನು ನಾರಾಯಣಾಸ್ತ್ರವು

ಬಂದಾಗ ಗಾಂಡೀವಧನುಸ್ಸನ್ನು ಕೆಳಗಿಡುವೆನೆಂಬ ಪ್ರತಿಜ್ಞೆಯನ್ನು ತಾನು ಹಿಂದೆಯೇ ಮಾಡಿಬಿಟ್ಟಿರುವುದಾಗಿ ಹೇಳುತ್ತಾನೆ. (೫೩). ನಾರಾಯಣಾಸ್ತ್ರದ ಎಲ್ಲ ಬಾಣಗಳೂ ಭೀಮಸೇನನನ್ನೇ ಪೀಡಿಸುತ್ತವೆ. ಪಾಂಡವಸೈನಿಕರು ಭೀಮಸೇನನನ್ನು ಕಾಣದೇ ಹಾಹಾಕಾರಮಾಡುತ್ತಾರೆ.

೨೦೦ನೆಯ ಅಧ್ಯಾಯ: ನಾರಾಯಣಾಸ್ತ್ರದ ತಾಪವನ್ನು ಶಾಂತಗೊಳಿಸುವ ಸಲುವಾಗಿ ಅರ್ಜುನನು ಭೀಮಸೇನನನ್ನು ವಾರುಣಾಸ್ತ್ರದಿಂದ ಮುಚ್ಚುತ್ತಾನೆ. ಆದರೆ ಅದರಿಂದ ಹೆಚ್ಚೇನೂ ಪ್ರಯೋಜನವಾಗುವುದಿಲ್ಲ. ಮಹಾಸ್ತ್ರವು ಪ್ರಪಂಚವನ್ನೇ ದಹಿಸುತ್ತಿರುತ್ತದೆ. ಕಡೆಯದಾಗಿ ಕೃಷ್ಣಾರ್ಜುನರಿಬ್ಬರೂ ಸೇರಿ ಭೀಮಸೇನನನ್ನು ರಥದಿಂದ ಕೆಳಗಿಳಿಸುತ್ತಾರೆ. ಒಡನೆಯೇ ನಾರಾಯಣಾಸ್ತ್ರವು ಪ್ರಶಾಂತವಾಗುತ್ತದೆ. ದುರ್ಯೋಧನನು ಅಶ್ವತ್ಥಾಮನಿಗೆ ಆ ನಾರಾಯಣಾಸ್ತ್ರವನ್ನೇ ಪುನಃ ಪ್ರಯೋಗಿಸುವಂತೆ ಪ್ರೇರಿಸುತ್ತಾನೆ. ಆದರೆ ಅಶ್ವತ್ಥಾಮನು ಅದಕ್ಕೆ ಒಪ್ಪುವುದಿಲ್ಲ. ಹಾಗೆ ಮಾಡಿದಲ್ಲಿ ಅದು ತನ್ನನ್ನೇ ಸಂಹರಿಸುವುದೆಂದು ಹೇಳುತ್ತಾನೆ. ಆಗ ದುರ್ಯೋಧನನು ಬೇರೆಯ ಮಹಾಸ್ತ್ರಗಳನ್ನಾದರೂ ಪ್ರಯೋಗಿಸುವಂತೆ ಪ್ರೇರಿಸುತ್ತಾನೆ. ಮುಂದೆ ಅಶ್ವತ್ಥಾಮನಿಗೂ ಧೃಷ್ಟದ್ಯುಮ್ನನಿಗೂ ಮಹಾಸಂಗ್ರಾಮವು ನಡೆಯುತ್ತದೆ. ಪಾರ್ಷತನು ಪರಾಜಿತನಾಗುತ್ತಾನೆ. ಆ ಸಮಯದಲ್ಲಿ ಸಾತ್ಯಕಿಯು ದ್ರೌಣಿಯೊಡನೆ ಯುದ್ಧದಲ್ಲಿ ತೊಡಗುತ್ತಾನೆ. ಅಶ್ವತ್ಥಾಮನು ಮೂರ್ಛಿತನಾಗುತ್ತಾನೆ. ಮೂರ್ಛೆಯು ತಿಳಿದನಂತರವೂ ಅಶ್ವತ್ಥಾಮ-ಸಾತ್ಯಕಿಯರ ನಡುವೆ ಘೋರಯುದ್ಧವಾಗುತ್ತದೆ. ಸಾತ್ಯಕಿಯು ಅಶ್ವತ್ಥಾಮನ ಬಾಣದಿಂದ ಗಾಢವಾಗಿ ಗಾಯಗೊಂಡು ಪೀಠದ ಪಕ್ಕಕ್ಕೆ ಜರುಗಿ ಕುಳಿತುಕೊಳ್ಳುತ್ತಾನೆ. ಸಾರಥಿಯು ಸಾತ್ಯಕಿಯನ್ನು ಬೇರೆಯ ಕಡೆಗೆ ಒಯ್ಯುತ್ತಾನೆ. ಅನಂತರ ಅಶ್ವತ್ಥಾಮನು ಧೃಷ್ಟದ್ಯುಮ್ನನನ್ನೂ ಪ್ರಹರಿಸಿ ಮೂರ್ಛೆಗೊಳಿಸುತ್ತಾನೆ. ಅನಂತರ ಪಂಚಪಾಂಡವಯೋಧರು ಅಶ್ವತ್ಥಾಮನನ್ನು ಆಕ್ರಮಿಸುತ್ತಾರೆ. ಭೀಮಾರ್ಜುನರನ್ನು ಬಿಟ್ಟು ಉಳಿದ ಮೂವರನ್ನೂ ಅಶ್ವತ್ಥಾಮನು ಅರ್ಜುನನ ಎದುರಿನಲ್ಲಿಯೇ ಸಂಹರಿಸುತ್ತಾನೆ. ಅನಂತರ ಭೀಮನಿಗೂ ದ್ರೌಣಿಗೂ ಘೋರವಾದ ಯುದ್ಧವು ನಡೆಯುತ್ತದೆ. ಕಡೆಗೆ ಅಶ್ವತ್ಥಾಮನು ಭೀಮಸೇನನ ಸಾರಥಿಯನ್ನು

ಪ್ರಹರಿಸುತ್ತಾನೆ. ಸಾರಥಿಯು ಮೂರ್ಛಿತನಾಗುತ್ತಾನೆ. ಕಡಿವಾಣದ ಹಿಡಿತದಿಂದ ತಪ್ಪಿಸಿಕೊಂಡ ಕುದುರೆಗಳು ಭೀಮಸೇನನ ರಥವನ್ನು ಸೆಳೆದುಕೊಂಡು ರಣಾಂಗಣದಿಂದಲೇ ಓಡಿಹೋಗುತ್ತವೆ. ಅನಂತರ ಪಾಂಡವರ ಕಡೆಯವರೆಲ್ಲರೂ ಓಡಿಹೋಗುತ್ತಾರೆ. ಅರ್ಜುನನೂ ಭೀಮನ ಜೊತೆಯಲ್ಲಿಯೇ ಯುದ್ಧಮಾಡುತ್ತಿದ್ದನು. ಭೀಮನೊಬ್ಬನೇ ಅಶ್ವತ್ಥಾಮನೊಡನೆ ಯುದ್ಧಮಾಡುತ್ತಿದ್ದಾಗ ಅರ್ಜುನನು ಏನು ಮಾಡುತ್ತಿದ್ದನು? ಅವನೇಕೆ ಭೀಮಸೇನನೊಡನೆ ಸೇರಿಕೊಂಡು ಅಶ್ವತ್ಥಾಮನೊಡನೆ ಯುದ್ಧಮಾಡಲಿಲ್ಲ?–ಎಂಬುದಕ್ಕೆ ಇಲ್ಲಿ ಉತ್ತರವೂ ಸಿಕ್ಕುವುದಿಲ್ಲ. ಅಶ್ವತ್ಥಾಮನು ಪಂಚಪಾಂಡವಯೋಧರಲ್ಲೊಬ್ಬನಾದ ಅರ್ಜುನನ ಮೇಲೆ ಬಾಣಬಿಟ್ಟನೆಂಬುದಕ್ಕೆ ವಾಕ್ಯವಿದೆ. **ತತೋಽರ್ಜುನಂ ಷಡ್ಭಿರಥಾಜಘಾನ (೮೦).** ಅದಕ್ಕೆ ಅರ್ಜುನನ ಪ್ರತಿಕ್ರಿಯೆಯೇನೆಂಬುದು ಈ ಅಧ್ಯಾಯದ ಕಡೆಯವರೆಗೂ ಬರುವುದಿಲ್ಲ. ಇಬ್ಬರು ಮಹಾವೀರರು ಯುದ್ಧಮಾಡುತ್ತಿರುವಾಗ ಮಧ್ಯದಲ್ಲಿ ಪ್ರವೇಶಿಸುವುದು ಅನುಚಿತವೆಂದು ಭಾವಿಸಿ ಅರ್ಜುನನು ಸುಮ್ಮನಿದ್ದಿರಬಹುದೆಂದು ಊಹಿಸಬೇಕಾಗುತ್ತದೆ.

೨೦೧ನೆಯ ಅಧ್ಯಾಯ: ಅರ್ಜುನನೊಬ್ಬನೇ ಆಚಾರ್ಯಪುತ್ರನನ್ನು ಎದುರಿಸುತ್ತಾನೆ. ಆ ಸಮಯದಲ್ಲಿ ಅರ್ಜುನನು ದ್ರೌಣಿಯನ್ನು ಕುರಿತು ಯುದ್ಧಕಾಲಕ್ಕೆ ಅನುಗುಣವಾದ ಕಟುವಾಕ್ಯಗಳನ್ನಾಡುತ್ತಾನೆ. ಆದರೆ ಯಾವುದೇ ಸಂದರ್ಭದಲ್ಲಿಯೂ ಇಂತಹ ಕಟುವಾಕ್ಯಗಳು ಅರ್ಜುನನ ಬಾಯಿಂದ ಬರಲಾರವೆಂಬುದು ಧೃತರಾಷ್ಟ್ರನ ಅಭಿಪ್ರಾಯವಾಗಿರುತ್ತದೆ. (ಈ ಕಾರಣದಿಂದಲೇ ಹಿಂದೆ ಅರ್ಜುನನು ಕರ್ಣನೊಡನೆ ಆಡಿದ ಕಠಿನೋಕ್ತಿಗಳು ಹೆಚ್ಚು ಪಾಠವಿರಬಹುದೆಂದು ಅಭಿಪ್ರಾಯಪಟ್ಟಿದ್ದೆವು.) ಇಂತಹ ಕಟುವಾಕ್ಯ ಗಳನ್ನು ಅರ್ಜುನನು ಹೇಳಲು ಕಾರಣವೇನೆಂದು ರಾಜನು ಸಂಜಯನನ್ನು ಕೇಳುತ್ತಾನೆ. ಅದಕ್ಕೆ ಕಾರಣವನ್ನು ಸಂಜಯನು ಪಟ್ಟಿಮಾಡಿ ಹೇಳುತ್ತಾನೆ. ಕಠಿನೋಕ್ತಿಯನ್ನಾಡಿದುದು ಸಮಂಜಸವಾಗಿಯೇ ಕಾಣುತ್ತದೆ.

ಅರ್ಜುನನ ಮಾತನ್ನು ಕೇಳಿ ಕುಪಿತನಾದ ದ್ರೌಣಿಯು ಆಗ್ನೇಯಾಸ್ತ್ರವನ್ನು ಪ್ರಯೋಗಿಸುತ್ತಾನೆ.

ಇದುವರೆಗಿನ ಯುದ್ಧದಲ್ಲಿ ಅನೇಕರು ಹಲವು ಬಾರಿ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿರುವ ಪ್ರಸಂಗ ಬಂದಿದೆ. ಆದರೆ ಅದರ ಪರಿಣಾಮವು ಇಲ್ಲಿ ವರ್ಣಿಸಿರುವಷ್ಟು ಭಯಂಕರರೀತಿಯಲ್ಲಿ ವರ್ಣಿತವಾಗಿಲ್ಲ. ಇದರಿಂದ ಮಹಾಸ್ತ್ರಗಳಲ್ಲಿಯೂ ಪ್ರಭೇದಗಳಿರಬಹುದೆಂಬುದನ್ನು ಗಮನಿಸಬಹುದಾಗಿದೆ. ಹೆಸರು ಒಂದೇ ಆಗಿದ್ದರೂ ಪರಿಣಾಮಗಳು ಬೇರೆ-ಬೇರೆಯಾಗಿಯೇ ಇರುತ್ತವೆ. ಬ್ರಹ್ಮಾಸ್ತ್ರಪ್ರಯೋಗದ ಪ್ರಸ್ತಾಪಬಂದಾಗಲೂ ಕೆಲವೆಡೆಗಳಲ್ಲಿ ಅದರ ಪರಿಣಾಮವನ್ನು ಅದ್ಭುತವಾಗಿ ವರ್ಣಿಸಿರುತ್ತಾರೆ. ಮತ್ತೆ ಕೆಲವೆಡೆಗಳಲ್ಲಿ ಪರಿಣಾಮವೇ ಇಲ್ಲವೆಂಬಂತಿರುತ್ತದೆ. ಇಲ್ಲಿ ಅಶ್ವತ್ಥಾಮನು ಪ್ರಯೋಗಿಸಿದ ಆಗ್ನೇಯಾಸ್ತ್ರದ ಪರಿಣಾಮವು ಅದ್ಭುತವಾದುದು; ಅಚಿಂತ್ಯವಾದುದು. ನಾರಾಯಣಾಸ್ತ್ರದ ಮತ್ತು ಆಗ್ನೇಯಾಸ್ತ್ರದ ಪರಿಣಾಮವನ್ನು ಅಧ್ಯಯನಮಾಡಿರುವ ಆಧುನಿಕ ಪಂಡಿತರು ಇದು ಅಣುಯುದ್ಧವಿರಬಹುದೆಂದು ಶಂಕಿಸುತ್ತಾರೆ. We are not the first ಎಂಬ ಪುಸ್ತಕದಲ್ಲಿ 'ಆಂಡ್ರ್ಯೂಥಾಮಸ್' ಎಂಬುವರು ಹೀಗೆ ಅಭಿಪ್ರಾಯಪಟ್ಟಿದ್ದಾರೆ. 'India where age old documents describe with dreadful detail an atomic war ಇಂಡಿಯಾದಲ್ಲಿ ಅನೇಕ ಸಾವಿರ ವರ್ಷಗಳ ಹಿಂದಿನ ಆಧಾರಗಳು ಭಯಂಕರವಾದ ಅಣ್ವಸ್ತ್ರದ ಪರಿಣಾಮವನ್ನು ವಿವರವಾಗಿ ವರ್ಣಿಸುತ್ತವೆ."

ಇದಕ್ಕೆ ಸಾಕ್ಷೀಭೂತವಾಗಿ ಅವರು ಮಹಾಭಾರತದ ದ್ರೋಣಪರ್ವದ ಆಗ್ನೇಯಾಸ್ತ್ರ-ನಾರಾಯಣಾಸ್ತ್ರಗಳ ಪರಿಣಾಮವನ್ನು ವಿಶ್ಲೇಷಿಸುತ್ತಾ ಹೀಗೆ ಹೇಳಿದ್ದಾರೆ:

A blazing missile possessed of the radiance of smokeless fire was discharged. A thick gloom suddenly encompassed the heavens. Clouds roared into the higher air showering blood. The world, scorched by the heat of that weapon seemed to be in fever.

ಸೋಽಭಿಮನ್ತ್ರ್ಯ ಶರಂ ದೀಪ್ತಂ ವಿಧೂಮಮಿವ ಪಾವಕಮ್ ।
ಸರ್ವತಃ ಕ್ರೋಧಮಾವಿಶ್ಯ ಚಿಕ್ಷೇಪ ಪರವೀರಹಾ ॥೧೮॥
ಉಲ್ಕಾಶ್ಚ ಗಗನಾತ್ಪೇತುರ್ದಿಶಶ್ಚ ನ ಚಕಾಶಿರೇ ।
ತಮಶ್ಚ ಸಹಸಾ ರೌದ್ರಂ ಚಮೂಮವತತಾರ ತಾಮ್ ॥೧೯॥
ರುಧಿರಂ ಚಾಪಿ ವರ್ಷನ್ತೋ ವಿನೇದುಸ್ತೋಯದಾ ದಿವಿ ॥೨೧॥
ಭ್ರಾನ್ತಸರ್ವಮಹಾಭೂತಮಾವರ್ತಿತದಿವಾಕರಮ್ ।
ತ್ರೈಲೋಕ್ಯಮಭಿಸಂತಪ್ತಂ ಜ್ವರಾವಿಷ್ಟಮಿವಾಭವತ್ ॥೨೩॥

ಮೇಲಿನ ವಿಶ್ಲೇಷಣವು ಈ ಶ್ಲೋಕಗಳ ಸಾಮಾನ್ಯವಾದ ಭಾಷಾಂತರವೇ ಆಗಿರುತ್ತದೆ. ಶ್ರೀ ಆಂಡ್ರ್ಯೂ ಥಾಮಸ್‌ರವರು ಮುಂದುವರಿದು ಹೇಳುತ್ತಾರೆ:

“Thus describes the Dronaparva a page of the unknown past of mankind. One can almost visualize the mushroom cloud of an atomic bomb explosion and atomic radiation.”

ನಮ್ಮ ಅಭಿಪ್ರಾಯದಲ್ಲಿ ಇದು ಯಂತ್ರಯುಗ. ಅದು ಮಂತ್ರ ಯುಗ. ಇಂದು ಯಂತ್ರಗಳ ಮೂಲಕ ಸಾಧಿಸಲು ಆಗದೇ ಇದ್ದುದನ್ನೂ ಅಂದವರು ಮಂತ್ರಗಳ ಮೂಲಕವಾಗಿ ಸಾಧಿಸುತ್ತಿದ್ದರು. ದೇಶದ ಬೊಕ್ಕಸ ವನ್ನು ಅದಕ್ಕಾಗಿ ವೆಚ್ಚಮಾಡುತ್ತಿರಲಿಲ್ಲ. ಸಂಯಮದಿಂದಲೂ, ಪರಿಶುದ್ಧತೆ ಯಿಂದಲೂ ಇದ್ದು ಅವರು ಮಹಾಸ್ತ್ರಗಳ ಮಂತ್ರಗಳನ್ನು ಸಿದ್ಧಿಮಾಡಿಕೊಳ್ಳುತ್ತಿದ್ದರು. ಪಾಶುಪತಾಸ್ತ್ರವನ್ನು ಪಡೆಯುವ ಸಲುವಾಗಿ ಅರ್ಜುನನು ಅನೇಕವರ್ಷಗಳ ಕಾಲ ತಪಸ್ಸನ್ನು ಮಾಡಿದನು. ಹೀಗೆ ಹಿಂದಿನ ನಮ್ಮ ಭಾರತೀಯರು ಅಸಾಧಾರಣವಾದ ಅಸ್ತ್ರಗಳನ್ನು ಆಚಾರ್ಯರ ಉಪದೇಶದಿಂದಲೂ, ತಪಸ್ಸಿನಿಂದಲೂ ಪಡೆದುಕೊಳ್ಳುತ್ತಿದ್ದರು. ಮಹಾಸ್ತ್ರಗಳ ಪರಿಣಾಮವು ಮೇಲೆ ಸೂಚಿಸಿರುವಂತೆ ಅಣುಬಾಂಬಿನಷ್ಟೇ ಮಹತ್ತ್ವದ್ದಾಗಿ ಅಥವಾ ಅಣುಬಾಂಬಿಗಿಂತಲೂ ಹೆಚ್ಚಿನದಾಗಿರು ತ್ತಿದ್ದಿತು. ಆದರೆ ಒಂದು ವಿಶೇಷವೆಂದರೆ: ಅಸ್ತ್ರಕ್ಕೆ ಪ್ರತ್ಯಸ್ತ್ರವಿದ್ದು ವಿಶ್ವವು ಹಾಳಾಗಲು ಅವಕಾಶವಿರುತ್ತಿರಲಿಲ್ಲ. ಇದೇ ಪ್ರಕರಣದಲ್ಲಿ ಬಂದಿ

ರುವಂತೆ ನಾರಾಯಣಾಸ್ತ್ರಕ್ಕೆ ಶರಣಾಗತಿಯೇ ಪ್ರತ್ಯಸ್ತ್ರ. ಆಗ್ನೇಯಾಸ್ತ್ರಕ್ಕೆ ಬ್ರಹ್ಮಾಸ್ತ್ರವೇ ಪ್ರತ್ಯಸ್ತ್ರ. ಅಂತಹ ಪ್ರತ್ಯಸ್ತ್ರಗಳನ್ನು ಆಧುನಿಕ ವಿಜ್ಞಾನಿಗಳು ಇನ್ನೂ ಕಂಡುಹಿಡಿದಿಲ್ಲ. ವಿಶ್ವದ ಐಶ್ವರ್ಯವನ್ನೇ ಸೂರೆಗೊಂಡರೂ ಅದು ಸಾಧ್ಯವಿಲ್ಲವೆಂದೇ ತೋರುತ್ತದೆ.

ವಿಶ್ವವನ್ನು ನಾಲ್ಕುಬಾರಿ ಹಾಳುಮಾಡುವಷ್ಟು ಅಣುಬಾಂಬುಗಳ ದಾಸ್ತಾನು ಇಂದು ಪ್ರಪಂಚದಲ್ಲಿದೆ. ಆದರೆ ಅದಕ್ಕೆ ನಿವಾರಣೋಪಾಯವನ್ನು ಇದುವರೆಗೆ ಯಾರೂ ಕಂಡುಹಿಡಿದಿಲ್ಲ. ಅದನ್ನು ಪ್ರಯೋಗಿಸದಿರುವು ದೊಂದೇ ಸದ್ಯಕ್ಕೆ ಅದರ ನಿವಾರಣೋಪಾಯವಾಗಿದೆ. ಆದರೆ ನಮ್ಮ ಪೂರ್ವಜರು ಈ ನಿವಾರಣೋಪಾಯದ ದಿಕ್ಕಿನಲ್ಲಿಯೂ ಬಹಳ ಮುಂದೆ ಹೋಗಿದ್ದರು. ಉಪಸಂಹಾರಪ್ರಕ್ರಿಯೆಯಿಲ್ಲದೇ ಅಸ್ತ್ರೋಪದೇಶವೇ ಆಗುತ್ತಿರ ಲಿಲ್ಲ. ಪ್ರಯೋಕ್ತೃವಿಗೆ ಉಪಸಂಹರಿಸುವ ಇಚ್ಛೆಯಿಲ್ಲದಿದ್ದರೂ ಎದುರಾಳಿ ಯಾದರೂ ಪ್ರತ್ಯಸ್ತ್ರವನ್ನು ಪ್ರಯೋಗಿಸಿ ಎಂತಹ ಮಾರಕಾಸ್ತ್ರವನ್ನಾದರೂ ಉಪಶಮನಗೊಳಿಸುವ ಸಾಧ್ಯತೆಯಿದ್ದಿತು. ಇದನ್ನು ನಾವು ಮಹಾಭಾರತ ಯುದ್ಧದಲ್ಲಿ ಮೊದಲಿನಿಂದ ಕಡೆಯವರೆಗೂ ಕಾಣಬಹುದಾಗಿದೆ.

ದ್ರೌಣಿಯು ಪ್ರಯೋಗಿಸಿದ ಆಗ್ನೇಯಾಸ್ತ್ರದಿಂದ ಒಂದು ಅಕ್ಷೌಹಿಣೀ ಸೈನಿಕರು ಮರಣಹೊಂದುತ್ತಾರೆ. ಯದ್ಯಪಿ ಅಶ್ವತ್ಥಾಮನು ಆಗ್ನೇಯಾಸ್ತ್ರವನ್ನು ಅರ್ಜುನನನ್ನು ಉದ್ದೇಶಿಸಿ ಪ್ರಯೋಗಿಸಿದ್ದರೂ ಆ ಮಹಾಸ್ತ್ರವು ಅವನನ್ನು ಏನೂ ಮಾಡುವುದಿಲ್ಲ. ಅಸ್ತ್ರದಿಂದ ಪ್ರಾದುರ್ಭೂತವಾದ ಕತ್ತಲಿನಿಂದಾಗಿ ಅರ್ಜುನನೂ ಮುಚ್ಚಿಹೋಗುತ್ತಾನೆ. ಅನಂತರ ಅರ್ಜುನನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಆಗ್ನೇಯಾಸ್ತ್ರವನ್ನು ಉಪಶಮನಗೊಳಿಸುತ್ತಾನೆ. ಪಾಂಡವರು ಹರ್ಷಿತರಾಗುತ್ತಾರೆ. ಅದನ್ನು ನೋಡಿ ಕೌರವರು ಬಹಳ ವ್ಯಥಿತರಾಗುತ್ತಾರೆ.

**ದೃಷ್ಟ್ವಾ ಪ್ರಮುದಿತಾನ್ಪಾರ್ಥಾಂಸ್ತ್ವದೀಯಾ ವ್ಯಥಿತಾ ಭೃಶಮ್ ॥೪೪॥**

ಇಲ್ಲಿಂದ ಮುಂದಕ್ಕೆ ಮತ್ತೊಂದು ಪ್ರಕರಣವು ಪ್ರಾರಂಭವಾಗುತ್ತದೆ. ಕೃಷ್ಣಾರ್ಜುನರು ವಿಮುಕ್ತರಾದುದನ್ನು ಕಂಡು ಅಶ್ವತ್ಥಾಮನು ಖಿನ್ನನಾಗಿ ರಣರಂಗವನ್ನೇ ಬಿಟ್ಟೋಡುತ್ತಾನೆ. ಇವನ ಬೇಸರಕ್ಕೆ ಕಾರಣವೆಂದರೆ

ಮಹಾಸ್ತ್ರವು ಅರ್ಜುನನನ್ನು ಸಂಹರಿಸದೇ ಇದ್ದುದು. ಆಗ್ನೇಯ ಮಹಾಸ್ತ್ರವು ಒಂದು ಅಕ್ಷೌಹಿಣೀಸೈನಿಕರನ್ನು ಸಂಹರಿಸಿತೇ ಹೊರತು ಬೇರಾವ ಮಹಾರಥರನ್ನೂ ಸಂಹರಿಸಲಿಲ್ಲ. ಇವನು ಆ ಮಹಾಸ್ತ್ರವನ್ನು ಬಿಡುವುದೂ ಸಹ ದೃಶ್ಯಾದೃಶ್ಯಾನರಿಗಣಾನುದ್ದಿಶ್ಯ (೧೬) ಕಣ್ಣಿಗೆ ಕಾಣಿಸುವ ಮತ್ತು ಕಾಣಿಸದೇ ಇರುವ ಶತ್ರುಸಮೂಹದ ಮೇಲೆ. ಆಗ್ನೇಯಾಸ್ತ್ರವನ್ನು ಬಿಟ್ಟುದಕ್ಕೆ ಯುಧಿಷ್ಠಿರನ ಪ್ರತಿಕ್ರಿಯೆ ಏನೆಂಬುದೂ ಇಲ್ಲಿ ವ್ಯಕ್ತವಾಗಿಲ್ಲ. ಆದರೆ ಅಶ್ವತ್ಥಾಮನು-ಆ ಮಹಾಸ್ತ್ರವು ಕೃಷ್ಣಾರ್ಜುನರನ್ನು ಸಂಹರಿಸಲಿಲ್ಲವೆಂದು ಖಿನ್ನನಾಗಿ ಓಡಿಹೋಗುತ್ತಾನೆ. ಆ ಸಮಯಕ್ಕೆ ವ್ಯಾಸರು ಬರುತ್ತಾರೆ. ವ್ಯಾಸರು ಕೃಷ್ಣಾರ್ಜುನರ ಪೂರ್ವೇತಿಹಾಸವನ್ನು ಹೇಳುತ್ತಾರೆ: ನಾರಾಯಣನು ಸನಾತನನು. ಅವನು ಲೋಕಕಾರ್ಯಾರ್ಥವಾಗಿ ಧರ್ಮನ ಮಗನಾಗಿ ಹುಟ್ಟಿದನು (೫೭). ಅವನು ಹಿಮವತ್ಪರ್ವತದಲ್ಲಿ ಶಿವನನ್ನು ಕುರಿತು ಒಂದು ಲಕ್ಷದ ತೊಂಬತ್ತೆಂಟು ಸಾವಿರ ವರ್ಷಗಳಕಾಲ ತಪಸ್ಸುಮಾಡುತ್ತಾನೆ. ಪ್ರತ್ಯಕ್ಷನಾದ ಶಿವನು ನಾರಾಯಣನಿಗೆ ಅಮೋಘವಾದ ವರಗಳನ್ನು ದಯಪಾಲಿಸುತ್ತಾನೆ. ಆ ವರಗಳಲ್ಲಿ ಅಸ್ತ್ರ-ಶಸ್ತ್ರಗಳಿಂದ ಗಾಯಗೊಳ್ಳದ ವರವೂ ಸೇರಿದೆ (೮೩-೮೪). ಇದುವರೆಗೆ ನರನ ಪ್ರಸ್ತಾಪವಿರುವುದಿಲ್ಲ. ೮೬ನೆಯ ಶ್ಲೋಕದಲ್ಲಿ ನಾರಾಯಣನ ತಪಸ್ಸಿನಿಂದಲೇ ನರನೂ ಹುಟ್ಟಿದನೆಂದಿದೆ. ಇದುವರೆಗೆ ಬಂದಿರುವ ಪ್ರಕರಣದಲ್ಲಿ ನರ-ನಾರಾಯಣ ರಾಗಿ ಸನಾತನರಾದ ಋಷಿಗಳು 'ಇಬ್ಬರೂ ಒಟ್ಟಾಗಿ ತಪಸ್ಸುಮಾಡುತ್ತಿದ್ದರು'–ಹೀಗೆ ಬಂದಿರುವುದೇ ಹೊರತು ನಾರಾಯಣನ ತಪಸ್ಸಿನಿಂದ ನರನು ಹುಟ್ಟಿದನು ಎಂಬ ವಿಷಯವು ಬಂದಿರುವುದಿಲ್ಲ.

ಆದರೆ ಮುಂದಿನ ಶ್ಲೋಕದಲ್ಲಿ 'ಈ ಇಬ್ಬರು ನರ-ನಾರಾಯಣ ಋಷಿಗಳು ಲೋಕಯಾತ್ರಾವಿಧಾನಾರ್ಥವಾಗಿ ಪ್ರತಿಯೊಂದು ಯುಗದಲ್ಲಿಯೂ ಅವತರಿಸುತ್ತಾರೆ'–ಎಂದಿದೆ. ಮುಂದಕ್ಕೆ ವ್ಯಾಸರು ಅಶ್ವತ್ಥಾಮನನ್ನು ರುದ್ರಭಕ್ತನೆಂದು ಹೇಳುತ್ತಾ ನೀನು ಹಿಂದಿನ ಜನ್ಮದಲ್ಲಿ 'ಮಹಾಪುರುಷ ವಿಗ್ರಹವನ್ನು ಪೂಜಿಸಿರುವೆ'–ಎಂದು ಹೇಳುತ್ತಾರೆ. ಅರ್ಜುನನು ಲಿಂಗವನ್ನಾಗಲೀ, ಮೂರ್ತಿಯನ್ನಾಗಲೀ ಪೂಜಿಸಿದ ಪ್ರಸಂಗ ಕಥನವಿಲ್ಲದಿದ್ದರೂ 'ನರ-ನಾರಾಯಣರು ಹಿಂದಿನ ಜನ್ಮದಲ್ಲಿ ಈಶ್ವರನನ್ನು ಲಿಂಗರೂಪದಲ್ಲಿ ಅರ್ಚಿಸಿದುದರಿಂದ ಅವರು ನಿನಗಿಂತಲೂ ಅತಿಶಯಿಸಿದ

ರೆಂಬ ಅಭಿಪ್ರಾಯವು ೬೨ನೆಯ ಶ್ಲೋಕದಲ್ಲಿ ಬರುತ್ತದೆ. ಲಿಂಗಾರ್ಚನೆಗೆ ಪ್ರಾಧಾನ್ಯವನ್ನು ಹೇಳಿರುವ ಶ್ಲೋಕಗಳೂ ಇಲ್ಲಿವೆ. ಹಿಂದೆ ವನಪರ್ವದಲ್ಲಿಯೂ ಕೈಲಾಸಪರ್ವತದಲ್ಲಿ ಅರ್ಜುನನು ಈಶ್ವರನನ್ನು ಕುರಿತು ಘೋರ ತಪಸ್ಸನ್ನು ಮಾಡಿದ ವರ್ಣನೆಯು ಇದೆಯೇ ಹೊರತು ಲಿಂಗಾರ್ಚನೆಯನ್ನಾಗಲೀ-ಪ್ರತಿಮಾರ್ಚನೆಯನ್ನಾಗಲೀ ಮಾಡಿದ ಪ್ರಸ್ತಾಪವಿಲ್ಲ. ಈಶ್ವರನ ವಿಷಯದಲ್ಲಿ ಪ್ರತಿಮಾರ್ಚನೆಗಿಂತಲೂ ಲಿಂಗಾರ್ಚನೆಯೇ ವಿಶೇಷವಾಗಿದ್ದರೂ ಮತ್ತು ಅತ್ಯಂತ ಪ್ರಚಲಿತವಿದ್ದರೂ ಮಹಾಭಾರತದಲ್ಲಿ ಅರ್ಚನೆಯ ವಿಷಯವಾಗಿ ನಿರ್ಣಯಿಸಿರುವ ಪ್ರಸಂಗಗಳು ಇದುವರೆಗೂ ಬಂದಿರುವುದಿಲ್ಲ. ಈ ಅಧ್ಯಾಯದಲ್ಲಿಯೂ ನಾರಾಯಣನು ಪಿನಾಕಿಯಾದ, ಜಟಾಜೂಟಧರನಾದ, ವ್ಯಾಘ್ರಾಜಿನನಾದ, ದಂಡಪಾಣಿಯಾದ ಪರಶಿವನನ್ನು ಕುರಿತು ಕಠೋರತಪಸ್ಸನ್ನು ಮಾಡಿದನೆಂಬ ಪ್ರಕರಣವು ಬರುತ್ತದೆ. ಲಿಂಗಾರ್ಚನೆಯನ್ನು ಮಾಡಿದನೆಂಬ ಪ್ರಸ್ತಾಪವು ಬರುವುದಿಲ್ಲ. ೬೨ನೆಯ ಶ್ಲೋಕದಿಂದ ಮುಂದಕ್ಕೆ ಲಿಂಗಾರ್ಚನೆ ಮತ್ತು ಪ್ರತಿಮಾರ್ಚನೆಗಳ ಪ್ರಸ್ತಾಪ ಬರುತ್ತದೆ. ಇಲ್ಲಿರುವ ಶಿವಸ್ತೋತ್ರವೂ ಸಹ ನಿತ್ಯಪಾರಾಯಣಕ್ಕೆ ಯೋಗ್ಯವಾಗಿದೆ. ಈ ಸ್ತೋತ್ರಗಳನ್ನು 'ಶತರುದ್ರೀಯಸ್ತುತಿ' ಎಂದೇ ವ್ಯಾಖ್ಯಾನಕಾರರು ಕರೆದಿರುತ್ತಾರೆ. ಅಧ್ಯಾಯದ ಕಡೆಯಲ್ಲಿ ಅಶ್ವತ್ಥಾಮನು ವ್ಯಾಸರ ಮಾತಿನಿಂದ ಸಂತುಷ್ಟನಾಗುತ್ತಾನೆ. ಮಹಾದೇವನಿಗೆ ನಮಸ್ಕರಿಸುತ್ತಾನೆ. ಶ್ರೀಕೃಷ್ಣನೂ ಮಹಾಪುರುಷನೆಂದು ಒಪ್ಪಿಕೊಳ್ಳುತ್ತಾನೆ. ಕೌರವ-ಪಾಂಡವಸೈನ್ಯಗಳು ಶಿಬಿರಕ್ಕೆ ಹಿಂದಿರುಗುತ್ತವೆ. ಕಡೆಯ ಶ್ಲೋಕದಲ್ಲಿ ದ್ರೋಣರ ವಧೆಯ ಪುನಃ ಪ್ರಸ್ತಾಪವಿದೆ. ಇಲ್ಲಿಗೆ ಈ ಅಧ್ಯಾಯವು ಮುಗಿಯುತ್ತದೆ.

೨೦೨ನೆಯ ಅಧ್ಯಾಯ: ಈ ಅಧ್ಯಾಯವು ನಾಟಕೀಯವಾಗಿ ಪ್ರಾರಂಭವಾಗುತ್ತದೆ. ಇದ್ದಕ್ಕಿದ್ದಂತೆಯೇ ಅರ್ಜುನನು ವ್ಯಾಸರನ್ನು ಸಂಧಿಸುತ್ತಾನೆ.

ಯಾವ ಸಮಯದಲ್ಲಿ? ಎಲ್ಲಿ?–ಎಂಬುದು ನಿರೂಪಿತವಾಗಿಲ್ಲ. ಶ್ರೀಕೃಷ್ಣನು ಜೊತೆಯಲ್ಲಿದ್ದ ಪ್ರಸ್ತಾಪವಿಲ್ಲ. ತನ್ನ ರಥದ ಮುಂದೆ ತ್ರಿಶೂಲವನ್ನು ಹಿಡಿದು ಒಬ್ಬನು ಹೋಗುತ್ತಿರುತ್ತಾನೆಂದೂ, ಅವನೇ ಎಲ್ಲ ಸೈನಿಕರನ್ನು ಸಂಹರಿಸುತ್ತಾನೆಂದೂ, ತಾನು ಅವನ ಹಿಂದೆ ಹೋಗುವುದಾಗಿಯೂ ಹೇಳುತ್ತಾನೆ. ತನ್ನ ಮುಂದೆ ಹೋಗುವ ತ್ರಿಶೂಲಧಾರಿಯೇ ಎಲ್ಲ ಸೈನಿಕರನ್ನೂ ಸಂಹರಿಸುತ್ತಿದ್ದರೂ ಜನರು ತಾನೇ ಸೈನಿಕರನ್ನು ಸಂಹರಿಸುತ್ತಿದ್ದೇನೆಂದು ಭಾವಿಸುವರು–ಎಂದೂ ಅರ್ಜುನನು ಹೇಳುತ್ತಾನೆ. (೬) ಅವನಾರೆಂಬುದು ಅರ್ಜುನನ ಪ್ರಶ್ನೆಯಾಗಿದೆ. ಈ ಪ್ರಸಂಗದಲ್ಲಿ ಅನೇಕ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಈ ಹಿಂದೆ ಶ್ರೀಕೃಷ್ಣನು ಗೀತೆಯನ್ನು ಉಪದೇಶಮಾಡಿದಾಗ ವಿಶ್ವರೂಪಾಧ್ಯಾಯದ (೧೧ನೆಯ ಅಧ್ಯಾಯ) ೩೩ ಮತ್ತು ೩೪ನೆಯ ಶ್ಲೋಕಗಳಲ್ಲಿ ಈ ವಿಷಯವನ್ನು ಸ್ಪಷ್ಟಪಡಿಸಿಹೇಳಿದ್ದಾನೆ.

**ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ**
**ಜಿತ್ವಾ ಶತ್ರೂನ್ಭುಂಕ್ಷ್ವ ರಾಜ್ಯಂ ಸಮೃದ್ಧಮ್ ।**
**ಮಯೈವೈತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥೩೩॥**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ**
**ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥೩೪॥**

ಹೀಗೆ ಶ್ರೀಕೃಷ್ಣನು ಹೇಳಿದ್ದರೂ ತನ್ನ ಪೌರುಷದ ವಿಷಯದಲ್ಲಿ ಅರ್ಜುನನು ಹೆಚ್ಚು ಅಭಿಮಾನದಿಂದಲೇ ಇದ್ದನು. ಭಗದತ್ತನ ವೈಷ್ಣವಾಸ್ತ್ರವನ್ನು ಶ್ರೀಕೃಷ್ಣನು ಧರಿಸಿದುದಕ್ಕೆ ಅರ್ಜುನನು ಬಹಳವಾಗಿ ಆಕ್ಷೇಪಿಸುತ್ತಾನೆ. (ದ್ರೋಣ-ಅಧ್ಯಾಯ ೨೯-ಶ್ಲೋ ೨೧-೨೨-೨೩) ಅರ್ಜುನನು ಅಂತಹ ಮಾನಧನನು. ಇಂತಹವನು ತನ್ನ ಮುಂದೆ ತ್ರಿಶೂಲಿಯೊಬ್ಬನು ಶತ್ರುಸೈನ್ಯವನ್ನು ಸಂಹರಿಸುತ್ತಾ ಹೋಗುತ್ತಿದ್ದರೆ ಅವನ ಹಿಂದೆ ಸುಮ್ಮನೆ ಹೋಗಲು ಸಾಧ್ಯವಿದ್ದಿತೆ? ಶೂಲಪಾಣಿಯು ರಥದ ಮುಂಭಾಗದಲ್ಲಿ ಹೋಗುತ್ತಿದ್ದಾಗ ಅವನು ಶ್ರೀಕೃಷ್ಣನಿಗೂ ಕಾಣಿಸಲಿಲ್ಲವೆ? ಅರ್ಜುನನಿಗೆ ಮಾತ್ರವೇ ಕಾಣಿಸಿದ್ದರೂ ಈ ವಿಷಯವನ್ನು ಅರ್ಜುನನು ಶ್ರೀಕೃಷ್ಣನೊಡನೆ

ಏಕೆ ಪ್ರಸ್ತಾಪಮಾಡಲಿಲ್ಲ? ಶೂಲಪಾಣಿಯೇ ಎಲ್ಲರನ್ನೂ ಸಂಹರಿಸುತ್ತಾ ನೆಂಬುದು ಪ್ರತ್ಯಕ್ಷಸಾಕ್ಷಿಯೇ ಆಗಿದ್ದ ಪಕ್ಷದಲ್ಲಿ ಭೀಷ್ಮ-ದ್ರೋಣರ ವಿಷಯವಾಗಿ ಅವನು ಪರಿತಾಪಪಡುತ್ತಿದ್ದುದೇಕೆ? ದ್ರೋಣರ ಸಾವಿಗೆ ಅಣ್ಣನಾದ ಯುಧಿಷ್ಠಿರನನ್ನು ಹೊಣೆಮಾಡಿ ಏಕೆ ನಿಂದಿಸಬೇಕಾಗಿದ್ದಿತು? ಮಹಾಭಾರತದ ಯುದ್ಧವು ದ್ವಾಪರಯುಗದ ಅಂತ್ಯಭಾಗದಲ್ಲಿ ನಡೆಯಿತು. ಅದೂ ಒಂದು ಪ್ರಳಯಕಾಲ. ಕಾಲಸ್ವರೂಪನಾದ ಪರಮೇಶ್ವರನು ಎಲ್ಲರನ್ನೂ ನಾನಾಬಗೆ ಯಲ್ಲಿ ಸಂಹರಿಸಿದನು–ಎಂಬುದು ಆಧ್ಯಾತ್ಮಿಕವಿಷಯ. ಅವನು ಒಬ್ಬರನ್ನು ಸಂಹರಿಸಿ ಒಬ್ಬರನ್ನು ಬಿಡಲಿಲ್ಲ. ಭಾರತಯುದ್ಧದಲ್ಲಿ ಪಾಲುಗೊಂಡಿದ್ದ ಹದಿನೆಂಟು ಅಕ್ಷೌಹಿಣೀಸೈನ್ಯವನ್ನೂ ವಿನಾಶಗೊಳಿಸಿದನು. ಈ ತತ್ತ್ವದಲ್ಲಿ ಭಿನ್ನಾಭಿಪ್ರಾಯವಿಲ್ಲ.

ವ್ಯಾಸರು ಒಂದು ಕಡೆಯಲ್ಲಿ ಹೇಳುವಾಗ ಮಹಾಧನುಷ್ಮಂತನಾದ ಪರಶಿವನೇ ದ್ರೌಣಿ-ಕರ್ಣ-ಕೃಪರಿಂದ ರಕ್ಷಿತವಾದ ಸೈನ್ಯವನ್ನು ಎದುರಿಸಿ ಯುದ್ಧಮಾಡುತ್ತಿದ್ದನೆಂದೂ ಹೇಳುತ್ತಾರೆ (೨೨-೨೩). ಆದರೆ ತ್ರಿಶೂಲ ಧಾರಿಯು ಶತ್ರುಸೈನ್ಯವನ್ನು ಸಂಹರಿಸುತ್ತಿದ್ದನು ಎಂದು ಅರ್ಜುನನು ಹೇಳುವು ದಾದರೆ, ಅದನ್ನೇ ವ್ಯಾಸರೂ ಪ್ರತಿಪಾದಿಸುವುದಾದರೆ ಪಾಂಡವರ ಕಡೆಯ ಸೈನಿಕರನ್ನು ಸಂಹರಿಸಲು ಯಾರು ಬಂದಿದ್ದರು? ಎಂಬ ಪ್ರಶ್ನೆಯೂ ಉದ್ಭವಿಸುತ್ತದೆ. ಈ ವಿಷಯವೊಂದು ಹೊರತಾಗಿ ಈ ಅಧ್ಯಾಯದಲ್ಲಿ ಮಹೇಶ್ವರನನ್ನು ಮನಮುಟ್ಟುವಂತೆ ವ್ಯಾಸರು ಸ್ತೋತ್ರ ಮಾಡಿದ್ದಾರೆ. ಯಜುರ್ವೇದದ ರುದ್ರಾಧ್ಯಾಯವೇ ಇಲ್ಲಿ ಶ್ಲೋಕರೂಪ ದಲ್ಲಿ ಇದೆ ಎನ್ನಬಹುದು. ಇದನ್ನೂ ಸಹ ವ್ಯಾಖ್ಯಾನಕಾರರು ಶತರುದ್ರೀಯವೆಂದೇ ಕರೆದಿದ್ದಾರೆ. ದಕ್ಷಯಜ್ಞ ವಿನಾಶದ ಕಥನವಿದೆ. ತ್ರಿಪುರಸಂಹಾರದ ವೃತ್ತಾಂತವಿದೆ. ಇದೇ ಸಂದರ್ಭದಲ್ಲಿ ಮಂದರಪರ್ವತ ವನ್ನು ಪರಶಿವನು ಗಾಂಡೀವಧನುಸ್ಸನ್ನಾಗಿ ಮಾಡಿಕೊಂಡನು ಎಂಬ ವಾಕ್ಯವಿದೆ (೭೬). ಪಿನಾಕವೆಂಬುದು ಶಿವನ ಧನುಸ್ಸು. ಇಲ್ಲಿ ಗಾಂಡೀವ ಶಬ್ದವು ನುಸುಳಿಬರಲು ಕಾರಣವು ತಿಳಿಯದು. ರುದ್ರನು ಭೂಮಿಯನ್ನೇ ರಥವನ್ನಾಗಿ ಮಾಡಿಕೊಂಡನೆಂಬ ಈ ಪ್ರಕರಣದಲ್ಲಿರುವ ಹತ್ತು ಶ್ಲೋಕ ಗಳು ಒಂದು ಪುಸ್ತಕದಲ್ಲಿರುವುದಿಲ್ಲ. ತ್ರಿಪುರಾಸುರಸಂಹಾರವಾದ ನಂತರ ಪಾರ್ವತಿಯು ಮಹೇಶ್ವರನನ್ನು ನೋಡಲು ಬಂದು ಅಲ್ಲಿದ್ದ ಪಂಚಶಿಖೆ

ಯುಳ್ಳ ಬಾಲಕನನ್ನು ತೊಡೆಯಮೇಲೆ ಇಟ್ಟುಕೊಳ್ಳುತ್ತಾಳೆ. (೮೩) ಆ ಮಗುವನ್ನು ನೋಡಿ ಅಸೂಯೆಯಿಂದ ಇಂದ್ರನು ಅದರಮೇಲೆ ವಜ್ರಾಯುಧವನ್ನು ಪ್ರಯೋಗಿಸಲು ಇಚ್ಛಿಸುತ್ತಾನೆ. ಕೋಪಗೊಂಡ ಆ ಬಾಲಕನು ವಜ್ರಾಯುಧಸಹಿತವಾಗಿದ್ದ ಇಂದ್ರನ ಕೈಯನ್ನು ಸ್ತಂಭನಗೊಳಿಸುತ್ತಾನೆ. (೮೫) ಮುಂದೆ ಇದೇ ಬಾಲನನ್ನೇ ಈಶ್ವರನೆಂದೂ ಹೇಳಿದ್ದಾರೆ. ಈ ಸಂದರ್ಭದಲ್ಲಿ ಕೆಲವು ಉತ್ತರಿಸಲಾಗದ ಪ್ರಶ್ನೆಗಳು ಹುಟ್ಟುತ್ತವೆ.

ತ್ರಿಪುರಾಸುರಸಂಹಾರವನ್ನು ಮಾಡುತ್ತಿದ್ದ ಪರಮೇಶ್ವರನನ್ನು ನೋಡಬೇಕೆಂದು ಬಂದಿದ್ದ ಪಾರ್ವತಿಯು ಅಲ್ಲಿದ್ದ ಪಂಚಶಿಖನಾದ ಮಗುವನ್ನು ತೊಡೆಯಮೇಲೆ ಇಟ್ಟುಕೊಂಡಳು. ಆ ಮಗುವನ್ನು ನೋಡಿ ಕಾರಣವೇ ಇಲ್ಲದೇ ಇಂದ್ರನೇಕೆ ಅಸೂಯಾಪರನಾದನು? ಅವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಲೇಕೆ ಪ್ರಯತ್ನಿಸಿದನು? ಒಂದು ಪುಸ್ತಕದಲ್ಲಿ **'ಪುರಾಣಿ ದಗ್ಧವನ್ತಂ ತಂ ದೇವೀ ಯಾತಾ ಪ್ರವೀಕ್ಷಿತುಮ್'**– ಎಂಬ ಶ್ಲೋಕಾರ್ಧವಿರುವುದಿಲ್ಲ. ತ್ರಿಪುರಾಸುರಸಂಹಾರದ ವಿಷಯವು ಮುಂದೆ ಕರ್ಣಪರ್ವದಲ್ಲಿ (೩೪-೩೫ನೆಯ ಅಧ್ಯಾಯಗಳು) ಬಂದರೂ ಅಲ್ಲಿ ಈ ಪ್ರಕರಣವಿಲ್ಲ. ಈ ಅಧ್ಯಾಯದಲ್ಲಿಯೂ ಸಹ ಲಿಂಗಾರ್ಚನೆಯ ಪ್ರಾಶಸ್ತ್ಯವನ್ನು ಹೇಳಿದ್ದಾರೆ. (೧೨೫-೧೨೯) ಶಿವನ ಅನೇಕ ನಾಮಗಳಿಗೆ ಇಲ್ಲಿ ನಿರುಕ್ತಿಯಿದೆ. ಕಡೆಯಲ್ಲಿ ಈ ಅಧ್ಯಾಯಪಠನದ ಫಲಶ್ರುತಿಯೂ ಇದೆ. (೧೪೧-೧೫೨) ೧೫೩ನೆಯ ಶ್ಲೋಕದಲ್ಲಿ ವ್ಯಾಸರು 'ಜನಾರ್ದನನು ಮಂತ್ರಿಯೂ, ರಕ್ಷಕನೂ ಮತ್ತು ಪಕ್ಕದಲ್ಲಿಯೇ ಇರುವವನೂ ಆಗಿರುವುದರಿಂದ ನಿನಗೆ ಪರಾಜಯವೆಂಬುದೇ ಇಲ್ಲ' ಎಂದು ಹೇಳಿ ಮಾತನ್ನು ಮುಗಿಸುತ್ತಾರೆ. ಪುನಃ ೨೦೧ನೆಯ ಅಧ್ಯಾಯದ ಕಡೆಯ ೧೦೦ನೆಯ ಶ್ಲೋಕವು ೧೫೫ನೆಯ ಶ್ಲೋಕವಾಗಿ ಪುನರಾವರ್ತಿತವಾಗಿದೆ. **ಯುದ್ಧಂ ಕೃತ್ವಾ ದಿನಾನ್ಪಂಚ** (೨೦೧-೧೦೦, ೨೦೧-೧೫೫) ಅನಂತರ ದ್ರೋಣಪರ್ವದ ಫಲಶ್ರುತಿಯಿದೆ. ನಾವು ಅನುವಾದಿಸುತ್ತಿರುವ ಪುಸ್ತಕದಲ್ಲಿ ೧೫೮ ಶ್ಲೋಕಗಳಿವೆ. ಭಂ.ರಿ. ಇನ್ಸ್‌ಟಿಟ್ಯೂಟ್ ಪುಸ್ತಕದಲ್ಲಿ ೧೦೭ ಶ್ಲೋಕಗಳು ಮಾತ್ರವಿವೆ. ಬಿಟ್ಟಿರುವ ಕಡೆಗಳಲ್ಲಿ ಕೆಲವನ್ನು ಮೇಲೆ ನಿರೂಪಿಸಿದ್ದೇವೆ.

ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವಿದೆ. ದ್ರೋಣರು ಐದು ದಿವಸಗಳು ಪೂರ್ತಿಯಾಗಿ ಯುದ್ಧಮಾಡಿದರೆಂಬ ವಾಕ್ಯಗಳಿದ್ದರೂ ಅವರು ಐದು ದಿವಸಗಳೂ ಪೂರ್ತಿಯಾಗಿ ಯುದ್ಧಮಾಡುವುದಿಲ್ಲ. ನಾಲ್ಕೂವರೆ ದಿವಸಗಳು ಮಾತ್ರ ಯುದ್ಧಮಾಡಿದರೆಂದು ಊಹಿಸಬಹುದಾಗಿದೆ.

**ಯದ್ಯರ್ಧದಿವಸಂ ದ್ರೋಣೋ ಯುಧ್ಯತೇ ಮನ್ಯುಮಾಸ್ಥಿತಃ |**
**ಸತ್ಯಂ ಬ್ರವೀಮಿ ತೇ ಸೇನಾ ವಿನಾಶಂ ಸಮುಪೈಷ್ಯತಿ ||೪೬-೧೯೦||**

ಎಂಬ ಶ್ಲೋಕವೇ ಇದಕ್ಕೆ ಆಧಾರವಾಗಿದೆ. ಉಳಿದ ಅರ್ಧದಿವಸ ಕುಪಿತನಾದ ಅಶ್ವತ್ಥಾಮನೂ ಮತ್ತು ದುರ್ಯೋಧನನೂ ಯುದ್ಧಮಾಡಿದ ರೆಂದು ಭಾವಿಸಬಹುದಾಗಿದೆ. ೨೦೧ನೆಯ ಅಧ್ಯಾಯದಲ್ಲಿ ಅಶ್ವತ್ಥಾಮನು ವ್ಯಾಸರೊಡನೆ ಮಾತನಾಡಿದ ಬಳಿಕ "ತನ್ನ ಸೈನ್ಯವು ಶಿಬಿರಕ್ಕೆ ಹಿಂದಿರುಗು ವಂತೆ ಆಜ್ಞೆಮಾಡಿದನು. ಪಾಂಡವ-ಕೌರವಸೈನಿಕರು ಶಿಬಿರಗಳಿಗೆ ತೆರಳಿದರು"–ಎಂದಿದೆ. (೯೮-೯೯). ಆದರೆ ಕರ್ಣಪರ್ವದ ಮೊದಲನೆಯ ಅಧ್ಯಾಯದಲ್ಲಿಯೂ ಮತ್ತು ೧೦ನೆಯ ಅಧ್ಯಾಯದಲ್ಲಿಯೂ ಪುನಃ ಇದರ ಪ್ರಸ್ತಾಪವಿದೆ. ೧೦ನೆಯ ಅಧ್ಯಾಯದಲ್ಲಿ, ಅಶ್ವತ್ಥಾಮನ ಸಂಕಲ್ಪವು ವ್ಯರ್ಥ ವಾದನಂತರ ದುರ್ಯೋಧನನು ಪಲಾಯನಮಾಡುತ್ತಿದ್ದ ಸೈನಿಕರನ್ನು ಪುನಃ ಒಟ್ಟಾಗಿ ಸೇರಿಸಿಕೊಂಡು ಪಾಂಡವರೊಡನೆ ಬಹಳ ಹೊತ್ತು ಯುದ್ಧಮಾಡಿದ ನೆಂಬ ಅಂಶವಿದೆ. ಆದುದರಿಂದ ಹದಿನೈದನೆಯ ದಿವಸ ದ್ರೋಣರ ವಧೆಯಾದನಂತರ ಅಶ್ವತ್ಥಾಮ-ದುರ್ಯೋಧನರು ಪಾಂಡವರೊಡನೆ ಯುದ್ಧಮಾಡಿದರು. ಅನಂತರ ಸಂಧ್ಯಾಕಾಲವಾಗುತ್ತಲೇ ಎಲ್ಲರೂ ತಮ್ಮ ತಮ್ಮ ಶಿಬಿರಗಳಿಗೆ ತೆರಳಿದರು–ಎಂಬ ಅಂಶವನ್ನು ನಾವಿಲ್ಲಿ ಗಮನಿಸಬೇಕು.

### ದ್ರೋಣಪರ್ವ: ಶ್ಲೋಕರೂಪದಲ್ಲಿ ಕಥಾಸಂಗ್ರಹ

**ದ್ರೋಣಪರ್ವ ತತಶ್ಚಿತ್ರಂ ಬಹುವೃತ್ತಾನ್ತಮುಚ್ಯತೇ |**
**ಸೈನಾಪತ್ಯೇಽಭಿಷಿಕ್ತೋಽಥ ಯತ್ರಾಚಾರ್ಯಃ ಪ್ರತಾಪವಾನ್ ||**

ದುರ್ಯೋಧನಸ್ಯ ಪ್ರೀತ್ಯರ್ಥಂ ಪ್ರತಿಜಜ್ಞೇ ಮಹಾಸ್ತ್ರವಿತ್ ।
ಗ್ರಹಣಂ ಧರ್ಮರಾಜಸ್ಯ ಪಾಣ್ಡುಪುತ್ರಸ್ಯ ಧೀಮತಃ ॥೨೫೫॥

ಯತ್ರ ಸಂಶಪ್ತಕಾಃ ಪಾರ್ಥಮುಪನಿನ್ಯೂ ರಣಾಜಿರಾತ್ ।
ಭಗದತ್ತೋ ಮಹಾರಾಜೋ ಯತ್ರ ಶಕ್ರಸಮೋ ಯುಧಿ ॥೨೫೬॥

ಸುಪ್ರತೀಕೇನ ನಾಗೇನ ಸ ಹಿ ಶಾನ್ತಃ ಕಿರೀಟಿನಾ ।
ಯತ್ರಾಭಿಮನ್ಯುಂ ಬಹವೋ ಜಘ್ನುರೇಕಂ ಮಹಾರಥಾಃ ॥೨೫೭॥

ಜಯದ್ರಥಮುಖಾ ಬಾಲಂ ಶೂರಮಪ್ರಾಪ್ತಯೌವನಮ್ ।
ಹತೇಽಭಿಮನ್ಯೌ ಕ್ರುದ್ಧೇನ ಯತ್ರ ಪಾರ್ಥೇನ ಸಂಯುಗೇ ॥೨೫೮॥

ಅಕ್ಷೌಹಿಣೀಃ ಸಪ್ತ ಹತ್ವಾ ಹತೋ ರಾಜಾ ಜಯದ್ರಥಃ ।
ಯತ್ರ ಭೀಮೋ ಮಹಾಬಾಹುಃ ಸಾತ್ಯಕಿಶ್ಚ ಮಹಾರಥಃ ॥೨೫೯॥

ಅನ್ವೇಷಣಾರ್ಥಂ ಪಾರ್ಥಸ್ಯ ಯುಧಿಷ್ಠಿರನೃಪಾಜ್ಞಯಾ ।
ಪ್ರವಿಷ್ಟೌ ಭಾರತೀಂ ಸೇನಾಮಪ್ರಧೃಷ್ಯಾಂ ಸುರೈರಪಿ ॥೨೬೦॥

ಸಂಶಪ್ತಕಾವಶೇಷಂ ಚ ಕೃತಂ ನಿಃಶೇಷಮಾಹವೇ ।
ಸಂಶಪ್ತಕಾನಾಂ ವೀರಾಣಾಂ ಕೋಟ್ಯೋ ನವ ಮಹಾತ್ಮನಾಮ್ ॥
ಕಿರೀಟಿನಾಭಿನಿಷ್ಕ್ರಮ್ಯ ಪ್ರಾಪಿತಾ ಯಮಸಾದನಮ್ ।
ಧೃತರಾಷ್ಟ್ರಸ್ಯ ಪುತ್ರಾಶ್ಚ ತಥಾ ಪಾಷಾಣಯೋಧಿನಃ ॥೨೬೨॥
ನಾರಾಯಣಾಶ್ಚ ಗೋಪಾಲಾಃ ಸಮರೇ ಚಿತ್ರಯೋಧಿನಃ ।
ಅಲಮ್ಬುಷಃ ಶ್ರುತಾಯುಶ್ಚ ಜಲಸನ್ಧಶ್ಚ ವೀರ್ಯವಾನ್ ॥೨೬೩॥

ಸೌಮದತ್ತಿರ್ವಿರಾಟಶ್ಚ ದ್ರುಪದಶ್ಚ ಮಹಾರಥಃ ।
ಘಟೋತ್ಕಚಾದಯಶ್ಚಾನ್ಯೇ ನಿಹತಾ ದ್ರೋಣಪರ್ವಣಿ ॥೨೬೪॥

ಅಶ್ವತ್ಥಾಮಾಪಿ ಚಾತ್ರೈವ ದ್ರೋಣೇ ಯುಧಿ ನಿಪಾತಿತೇ ।
ಅಸ್ತ್ರಂ ಪ್ರಾದುಶ್ಚಕಾರೋಗ್ರಂ ನಾರಾಯಣಮಮರ್ಷಿತಃ ॥೨೬೫॥

ಆಗ್ನೇಯಂ ಕೀರ್ತ್ಯತೇ ಯತ್ರ ರುದ್ರಮಾಹಾತ್ಮ್ಯಮುತ್ತಮಮ್ ।
ವ್ಯಾಸಸ್ಯಚಾಪ್ಯಾಗಮನಂ ಮಾಹಾತ್ಮ್ಯಂ ಕೃಷ್ಣಪಾರ್ಥಯೋಃ ॥೨೬೬॥

ಸಪ್ತಮಂ ಭಾರತೇ ಪರ್ವ ಮಹದೇತದುದಾಹೃತಮ್ ।
ಯತ್ರ ತೇ ಪೃಥಿವೀಪಾಲಾಃ ಪ್ರಾಯಶೋ ನಿಧನಂ ಗತಾಃ ॥೨೬೭॥

ದ್ರೋಣಪರ್ವಣಿ ಯೇ ಶೂರಾ ನಿರ್ದಿಷ್ಟಾಃ ಪುರುಷರ್ಷಭಾಃ ।
ಅತ್ರಾಧ್ಯಾಯಶತಂ ಪ್ರೋಕ್ತಂ ತಥಾಧ್ಯಾಯಾಶ್ಚ ಸಪ್ತತಿಃ ॥೨೬೮॥

ಅಷ್ಟೌ ಶ್ಲೋಕಸಹಸ್ರಾಣಿ ತಥಾ ನವ ಶತಾನಿ ಚ ।
ಶ್ಲೋಕಾ ನವ ತಥೈವಾತ್ರ ಸಂಖ್ಯಾತಾಸ್ತತ್ತ್ವದರ್ಶಿನಾ ।
ಪಾರಾಶರ್ಯೇಣ ಮುನಿನಾ ಸಂಚಿನ್ತ್ಯ ದ್ರೋಣಪರ್ವಣಿ ॥೨೬೯॥

ಇಲ್ಲಿ ಹೇಳಿರುವಂತೆ ದ್ರೋಣಪರ್ವದಲ್ಲಿ ೧೭೦ ಅಧ್ಯಾಯಗಳೂ ೮೯೦೯ ಶ್ಲೋಕಗಳೂ ಇರಬೇಕು. ಆದರೆ ಪ್ರಚಲಿತಪುಸ್ತಕಗಳಲ್ಲಿ ೨೦೨ ಅಧ್ಯಾಯಗಳೂ ೬೭೮೦ ಶ್ಲೋಕಗಳೂ ಇವೆ.

—೦೦೦—

ಶ್ರೀಗಣೇಶಾಯ ನಮಃ ಶ್ರೀಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ

ಓಂ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ಮಹಾಭಾರತ-ಕರ್ಣಪರ್ವ



## ಕರ್ಣವಧೆಯ ಸಂಕ್ಷಿಪ್ತವೃತ್ತಾಂತವನ್ನು ಕೇಳಿದ ಜನಮೇಜಯನು ವಿಸ್ತಾರಪೂರ್ವಕವಾಗಿ ಹೇಳುವಂತೆ ವೈಶಂಪಾಯನರನ್ನು ಪ್ರಾರ್ಥಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ:

**ತತೋ ದ್ರೋಣೇ ಹತೇ ರಾಜನ್ದುರ್ಯೋಧನಮುಖಾ ನೃಪಾಃ ।**
**ಭೃಶಮುದ್ವಿಗ್ನಮನಸೋ ದ್ರೋಣಪುತ್ರಮುಪಾಗಮನ್ ॥೧॥**

"ಮಹಾರಾಜ! ದ್ರೋಣಾಚಾರ್ಯರು ಹತರಾಗಲಾಗಿ, ದುರ್ಯೋಧನಪ್ರಮುಖರಾದ ರಾಜರು ಅತ್ಯಂತೋದ್ವಿಗ್ನವಾದ ಮನಸ್ಸಿನಿಂದ ಕೂಡಿದವರಾಗಿ ದ್ರೋಣರ ಮಗನಾದ ಅಶ್ವತ್ಥಾಮನ ಬಳಿಗೆ ಬಂದರು. ಅವರೆಲ್ಲರೂ ಮೋಹಪರವಶರಾಗಿ-ಶಕ್ತಿಹೀನರಾಗಿ ಹತೋತ್ಸಾಹರಾಗಿದ್ದರು. ಶೋಕದಿಂದ ಬಹಳ ದೀನರಾಗಿದ್ದರು. ದ್ರೋಣರ ವಿಷಯವಾಗಿಯೇ ಪದೇ ಪದೇ ಶೋಕಿಸುತ್ತಿದ್ದ ದುರ್ಯೋಧನಾದಿಗಳು ಅಶ್ವತ್ಥಾಮನ ಸುತ್ತಲೂ ಕುಳಿತುಕೊಂಡರು. ಸ್ವಲ್ಪ ಹೊತ್ತಿನವರೆಗೆ ಶಾಸ್ತ್ರಸಮ್ಮತವಾದ ಹೇತುವಾದಗಳಿಂದ ಅಶ್ವತ್ಥಾಮನನ್ನು ಸಮಾಧಾನಪಡಿಸುತ್ತಿದ್ದು, ರಾತ್ರಿಯಾಗಲಾಗಿ ದುರ್ಯೋಧನನೇ ಮೊದಲಾದ ರಾಜರೆಲ್ಲರೂ ತಮ್ಮ ತಮ್ಮ ಬಿಡಾರಗಳಿಗೆ ತೆರಳಿದರು. ದುಃಖ-ಶೋಕಸಮನ್ವಿತರಾಗಿದ್ದ ದುರ್ಯೋಧನನ ಕಡೆಯ ರಾಜರು ತಮ್ಮ ಕಡೆಯಲ್ಲಾದ ಅಪಾರನಷ್ಟ

ವನ್ನೇ ಚಿಂತಿಸುತ್ತಾ ಇದ್ದುದರಿಂದ ಬಿಡಾರಗಳಲ್ಲಿಯೂ ಅವರಿಗೆ ಮಾನಸಿಕಸುಖವು ಲಭಿಸಲಿಲ್ಲ.

ಅದರಲ್ಲಿಯೂ ವಿಶೇಷವಾಗಿ ಸೂತಪುತ್ರನಾದ ಕರ್ಣ, ರಾಜ ದುರ್ಯೋಧನ, ದುಃಶಾಸನ, ಸುಬಲನ ಮಗನಾದ ಶಕುನಿ–ಈ ನಾಲ್ವರೂ ದುರ್ಯೋಧನನ ಶಿಬಿರದಲ್ಲಿಯೇ ಆ ರಾತ್ರಿಯಲ್ಲಿ ಉಳಿದುಕೊಂಡು ಮಹಾತ್ಮರಾದ ಪಾಂಡವರು ಅನುಭವಿಸಿದ ಹಲವು ಬಗೆಯ ಕಷ್ಟ-ಕೋಟಲೆಗಳನ್ನೇ ಕುರಿತು ಚಿಂತಿಸುತ್ತಿದ್ದರು. ದ್ಯೂತದ ಸಮಯದಲ್ಲಿ ದ್ರೌಪದಿಯನ್ನು ತುಂಬಿದ ಸಭೆಗೆ ಸೆಳೆದು ತಂದುದು ಮತ್ತು ಅವಳನ್ನು ನಾನಾವಿಧವಾದ ಕಠಿನವಾಕ್ಯಗಳಿಂದ ಕ್ಲೇಶಗೊಳ್ಳುವಂತೆ ಮಾಡಿದುದು– ಇವುಗಳನ್ನೆಲ್ಲಾ ಸ್ಮರಿಸುತ್ತಾ ಅದಕ್ಕಾಗಿ ಶೋಕಿಸಿದರು. ಅದರ ಫಲವಾಗಿಯೇ ಪ್ರಕೃತದಲ್ಲಿ ಸಂಭವಿಸಿರುವ ಆಪತ್ತನ್ನು ನೆನೆದು ಉದ್ವಿಗ್ನರೂ ಆದರು. ಈ ರೀತಿಯಾಗಿ ದ್ಯೂತದ ಮೂಲಕವಾಗಿ ಪಾಂಡವರು ಅನುಭವಿಸಿದ ಕ್ಲೇಶ ಗಳನ್ನೆಲ್ಲಾ ಒಂದಾದ ಮೇಲೊಂದರಂತೆ ಸ್ಮರಿಸಿಕೊಳ್ಳುತ್ತಿದ್ದ ದುರ್ಯೋಧನಾದಿ ಗಳು ನೂರು ವರ್ಷಗಳನ್ನು ಕಳೆದಂತೆ ಆ ರಾತ್ರಿಯನ್ನು ಬಹಳ ದುಃಖದಿಂದ ಕಳೆದರು. ಅನಂತರ ನಿರ್ಮಲವಾದ ಪ್ರಭಾತಕಾಲವು ಪ್ರಾಪ್ತವಾಗಲಾಗಿ, ದೈವಸಂಕಲ್ಪಕ್ಕೆ ಅಧೀನರಾಗಿದ್ದ ಆ ಎಲ್ಲ ಕೌರವರೂ ಅತ್ಯವಶ್ಯವಾಗಿ ಮಾಡಲೇ ಬೇಕಾದ ಶೌಚ-ಸ್ನಾನ-ಸಂಧ್ಯಾವಂದನಾದಿ ಕರ್ಮಗಳನ್ನು ಯಥಾವಿಧಿಯಾಗಿ ಮಾಡಿ ಮುಗಿಸಿದರು. ಈ ರೀತಿ ಅವರು ಅವಶ್ಯಕರ್ಮಗಳನ್ನು ಮುಗಿಸಿ ಸಮಾಧಾನಹೊಂದಿದವರಾಗಿ ಕವಚ-ಶಿರಸ್ತ್ರಾಣಾದಿಗಳನ್ನು ಧಾರಣೆಮಾಡಿ ಕೊಂಡು ಯುದ್ಧಕ್ಕೆ ಸಜ್ಜಾಗುವಂತೆ ಸೈನಿಕರಿಗೆ ಆಜ್ಞಾಪಿಸಿದರು. ಅವರೆಲ್ಲರೂ ಸಜ್ಜಾದನಂತರ ರಥ-ಗಜಾಶ್ವ-ಪದಾತಿಸೈನ್ಯಸಮೇತರಾಗಿ ಯುದ್ಧಕ್ಕೆ ಹೊರಟರು. ಸಾಂಪ್ರದಾಯಿಕವಾದ ಮಂಗಳಕಾರ್ಯಗಳನ್ನು ಮುಗಿಸಿ ಕೊಂಡು ಹದಿನಾರನೆಯ ದಿವಸದ ಯುದ್ಧಕ್ಕೆ ಕರ್ಣನನ್ನೇ ಸೇನಾಪತಿಯನ್ನಾಗಿ ಮಾಡಿ; ಮೊಸರಿನ ಪಾತ್ರೆ, ತುಪ್ಪ, ಅಕ್ಷತೆ, ಗೋವು, ಕುದುರೆ, ಕಂಠಾಭರಣ ಮತ್ತು ಬಹುಮೂಲ್ಯವಾದ ವಸ್ತ್ರ–ಇವೇ ಮುಂತಾದ ಅನರ್ಘವಸ್ತುಗಳ ಮೂಲಕವಾಗಿ ಬ್ರಾಹ್ಮಣಶ್ರೇಷ್ಠರನ್ನು ಸತ್ಕರಿಸಿ ಅವರಿಂದ ಆಶೀರ್ವಾದಗಳನ್ನು ಪಡೆದು ಸೂತ-ಮಾಗಧ-ವಂದಿಗಳಿಂದ ಪ್ರಶಂಸೆಮಾಡಲ್ಪಟ್ಟವರಾಗಿ

ರಣಾಂಗಣವನ್ನು ಸೇರಿದರು. ಅದೇ ರೀತಿಯಲ್ಲಿ ಪಾಂಡವರೂ ಸಹ ಪ್ರಾತಃಕಾಲದಲ್ಲಿ ಮಾಡಬೇಕಾದ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಯುದ್ಧಮಾಡಲು ನಿಶ್ಚಯಿಸಿದವರಾಗಿ ಬಹಳ ಬೇಗ ಶಿಬಿರಗಳಿಂದ ಹೊರಟರು. 'ನಾವಿಂದು ಜಯಗಳಿಸಲೇ ಬೇಕು' 'ನಾವು ಸರ್ವಥಾ ಜಯಶಾಲಿಗಳಾಗಬೇಕು' ಎಂದು ವಿಜಯದ ಆಕಾಂಕ್ಷೆಯನ್ನು ಹೊಂದಿದ್ದ ಕೌರವ-ಪಾಂಡವರ ನಡುವೆ ರೋಮಾಂಚಕಾರಕವೂ-ಭಯಂಕರವೂ ಆದ ಯುದ್ಧವು ಪ್ರಾರಂಭವಾಯಿತು. ಕೌರವರ ಪಕ್ಷದಲ್ಲಿ ಕರ್ಣನು ಸೇನಾಪತಿಯಾಗಿರಲಾಗಿ, ಕೌರವ-ಪಾಂಡವರಿಗೆ ಎರಡು ದಿವಸಗಳ ಪರ್ಯಂತವಾಗಿ ಪರಮಾದ್ಭುತವಾದ ಯುದ್ಧವು ನಡೆಯಿತು. ಎರಡನೆಯ ದಿವಸದ ಯುದ್ಧವು ಮುಗಿಯುವ ವೇಳೆಗೆ ಕರ್ಣನು ಶತ್ರುಸೈನ್ಯವನ್ನು ಅಪಾರ ಸಂಖ್ಯೆಯಲ್ಲಿ ಸಂಹರಿಸಿ ದುರ್ಯೋಧನಾದಿಗಳೆಲ್ಲರೂ ನೋಡುತ್ತಿದ್ದಂತೆಯೇ ಅರ್ಜುನನಿಂದ ಹತನಾಗಿ ಕೆಳಗುರುಳಿದನು. ಕರ್ಣನ ಪತನವಾದನಂತರ ಸಂಜಯನು ಬಹಳಬೇಗ ಹಸ್ತಿನಾಪಟ್ಟಣಕ್ಕೆ ಹೋಗಿ ಧೃತರಾಷ್ಟ್ರನನ್ನು ಕುರಿತು ಕುರುಕ್ಷೇತ್ರದಲ್ಲಿ ನಡೆದುದೆಲ್ಲವನ್ನೂ ವಿವರಿಸಿ ಹೇಳಿದನು."

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ:

"ಬ್ರಾಹ್ಮಣೋತ್ತಮರೇ! ಅಂಬಿಕೆಯ ಮಗನಾದ, ವೃದ್ಧನಾದ ಧೃತರಾಷ್ಟ್ರನು ಭೀಷ್ಮರು ಹತರಾದುದನ್ನೂ-ಮುಂದೆ ಐದು ದಿವಸಗಳಲ್ಲಿಯೇ ಮಹಾರಥರಾದ ದ್ರೋಣರು ಹತರಾದುದನ್ನೂ ಕೇಳಿ ಅತ್ಯಂತದುಃಖಿತ ನಾಗಿದ್ದನು. ಭೀಷ್ಮ-ದ್ರೋಣರ ಅವಸಾನದಿಂದ ದುಃಖಸಾಗರದಲ್ಲಿಯೇ ಮುಳುಗಿಹೋಗಿದ್ದ ಧೃತರಾಷ್ಟ್ರನು ದುರ್ಯೋಧನನ ಅತ್ಯಂತಹಿತೈಷಿಯಾದ ಕರ್ಣನೂ ಹತನಾದನೆಂದು ಸಂಜಯನಿಂದ ಕೇಳಿದನಂತರ ಹೇಗೆ ತಾನೇ ಪ್ರಾಣಗಳನ್ನುಳಿಸಿಕೊಂಡಿದ್ದನು? (ಕರ್ಣನ ಮರಣವಾರ್ತೆಯನ್ನು ಕೇಳಿ ದೊಡನೆಯೇ ವೃದ್ಧರಾಜನ ಪ್ರಾಣಪಕ್ಷಿಯು ಹಾರಿಹೋಗಬೇಕಾಗಿತ್ತೆಂಬುದು ನನ್ನ ಭಾವನೆಯಾಗಿದೆ.)

**ಯಸ್ಮಿಞ್ಜಯಾಶಾಂ ಪುತ್ರಾಣಾಂ ಸಮಮನ್ಯತ ಪಾರ್ಥಿವಃ ।**
**ತಸ್ಮಿನ್ಹತೇ ಸ ಕೌರವ್ಯಃ ಕಥಂ ಪ್ರಾಣಾನಧಾರಯತ್ ॥೨೦॥**

ತನ್ನ ಮಕ್ಕಳಿಗೆ ಕರ್ಣನಿಂದಲೇ ವಿಜಯವು ಲಭಿಸುವುದೆಂಬ ಆಶೆ

ಯನ್ನು ಧೃತರಾಷ್ಟ್ರಮಹಾರಾಜನು ಬಹಳವಾಗಿ ಇಟ್ಟುಕೊಂಡಿದ್ದನು. ರಾಜನ ಆಶಾಕೇಂದ್ರವಾಗಿದ್ದ ಕರ್ಣನೂ ಹತನಾದನೆಂಬ ವಾರ್ತೆಯನ್ನು ಕೇಳಿದನಂತರ ರಾಜನು ಹೇಗೆ ತಾನೇ ತನ್ನ ಪ್ರಾಣಗಳನ್ನು ಧಾರಣೆಮಾಡಿಕೊಂಡಿದ್ದನು?

***ದುರ್ಮರಂ ತದಹಂ ಮನ್ಯೇ ನೃಣಾಂ ಕೃಚ್ಛ್ರೇಽಪಿ ವರ್ತತಾಮ್ ।**
**ಯತ್ರ ಕರ್ಣಂ ಹತಂ ಶ್ರುತ್ವಾ ನಾತ್ಯಜಜ್ಜೀವಿತಂ ನೃಪಃ ॥೨೧॥**

ಅತಿದಾರುಣವಾದ ಕಷ್ಟದಲ್ಲಿ ಸಿಕ್ಕಿ ನರಳುತ್ತಿದ್ದರೂ ಮನುಷ್ಯಮಾತ್ರದವರಿಗೆ ತಮ್ಮ ಪ್ರಾಣಗಳನ್ನು ಪರಿತ್ಯಾಗಮಾಡಲು ಅಶಕ್ಯವೆಂದು ನಾನು ಭಾವಿಸುತ್ತೇನೆ. ಏಕೆಂದರೆ: ಮಕ್ಕಳ ವಿಜಯದ ವಿಷಯದಲ್ಲಿ ಆಶಾಕಿರಣನಾಗಿ ಉಳಿದಿದ್ದ ಕರ್ಣನೂ ಹತನಾದನೆಂಬ ವಾರ್ತೆಯನ್ನು ಕೇಳಿಯೂ ಧೃತರಾಷ್ಟ್ರನು ಪ್ರಾಣಪರಿತ್ಯಾಗಮಾಡಲಿಲ್ಲವಲ್ಲವೇ!

ಕರ್ಣನು ಮರಣಹೊಂದಿದುದು ಮಾತ್ರವಲ್ಲ; ವೃದ್ಧನಾದ ಭೀಷ್ಮ-ಬಾಹ್ಲೀಕ, ದ್ರೋಣರು, ಸೋಮದತ್ತ, ಅವನ ಮಗ ಭೂರಿಶ್ರವಸ, ಇವರಲ್ಲದೇ ಇನ್ನೂ ಅನೇಕ ಸುಹೃದರು, ಪುತ್ರರು, ಪೌತ್ರರು ಅಪಾರ ಸಂಖ್ಯೆಯಲ್ಲಿ ಹತರಾದರೆಂಬ ವಾರ್ತೆಯನ್ನು ಧೃತರಾಷ್ಟ್ರನು ಸಂಜಯನಿಂದ ಕೇಳಿದರೂ ಅವನು ಪ್ರಾಣತ್ಯಾಗಮಾಡಲಿಲ್ಲ. ವೈಶಂಪಾಯನರೇ! ಇದರಿಂದಾಗಿ ಎಂತಹ ದುಃಖದ ಸಮಯದಲ್ಲಿಯೇ ಆಗಲಿ ಮನುಷ್ಯನಾದವನು ಸ್ವೇಚ್ಛೆಯಿಂದ ಪ್ರಾಣತೊರೆಯಲಾರನೆಂದು ನಾನು ಭಾವಿಸುತ್ತೇನೆ.

ಮಹಾಮುನಿಗಳೇ! ನಮ್ಮ ಪೂರ್ವಜರ ಮಹತ್ತರವಾದ ಪುಣ್ಯಕಥೆಗಳನ್ನು ಕೇಳುವುದರಲ್ಲಿ ನನಗೆ ತೃಪ್ತಿಯೆಂಬುದೇ ಉಂಟಾಗಿಲ್ಲ. ಇನ್ನೂ ಕೇಳಬೇಕೆಂದೆನಿಸುತ್ತಿದೆ. ಆದುದರಿಂದ ದಯಮಾಡಿ ಎಲ್ಲ ಕಥೆಗಳನ್ನೂ ಸವಿಸ್ತರವಾಗಿ ನನಗೆ ಹೇಳಿರಿ."

ಗನೆಯ ಅಧ್ಯಾಯವು ಮುಗಿಯಿತು.

---

* ದುರ್ಮರಂ=ಎಷ್ಟೇ ದುಃಖಬಂದರೂ ಪ್ರಾಣಬಿಡಲು ಅಸಾಧ್ಯವಾದುದು ದುಃಖೇನಾಪಿ ಮರ್ತುಂ ಅಶಕ್ಯಂ ಸ್ವೇಚ್ಛಯಾ-ಎಂದು ವ್ಯಾಖ್ಯಾನಕಾರರು ವಿವರಣೆ ನೀಡಿದ್ದಾರೆ.

೨ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರ-ಸಂಜಯರ ಸಂವಾದ

ವೈಶಂಪಾಯನರು ಕಥೆಯನ್ನು ಮುಂದುವರಿಸಿ ಹೇಳುತ್ತಾರೆ:

"ಜನಮೇಜಯಮಹಾರಾಜ! ಕರ್ಣನು ಹತನಾದನಂತರ ಆ ರಾತ್ರಿಯಲ್ಲಿ ಅತ್ಯಂತದುಃಖಿತನಾಗಿದ್ದ ಗವಾಲ್ಗಣಿಯು (ಸಂಜಯನು) ವಾಯುವೇಗಕ್ಕೆ ಸಮಾನವಾದ ವೇಗವುಳ್ಳ ಕುದುರೆಗಳಿಂದ ಕೂಡಿದ್ದ ರಥದಲ್ಲಿ ಕುಳಿತು ಹಸ್ತಿನಾಪಟ್ಟಣಕ್ಕೆ ಹೊರಟನು. ಉದ್ವಿಗ್ನವಾದ ಮನಸ್ಸಿನಿಂದ ಕೂಡಿದ್ದ ಸಂಜಯನು ಹಸ್ತಿನಾಪಟ್ಟಣಕ್ಕೆ ಹೋಗಿ ಬಂಧು-ಬಾಂಧವರಿಂದ ಶೂನ್ಯ ವಾಗಿದ್ದ ಧೃತರಾಷ್ಟ್ರನ ಅರಮನೆಯನ್ನು ಪ್ರವೇಶಿಸಿದನು. ಅತ್ಯಂತ ದುಃಖದಿಂದ ಕಳೆಗುಂದಿದ್ದ ಧೃತರಾಷ್ಟ್ರನನ್ನು ಕ್ಷಣಕಾಲ ದಿಟ್ಟಿಸಿನೋಡಿ ಸೂತಸಂಜಯನು ಬದ್ಧಾಂಜಲಿಯಾಗಿ ತಲೆಯಿಂದ ರಾಜನ ಎರಡು ಪಾದಗಳನ್ನೂ ಮುಟ್ಟಿ ನಮಸ್ಕರಿಸಿದನು. ಮಹೀಪತಿಯಾದ ಧೃತರಾಷ್ಟ್ರನನ್ನು ಯಥಾಯೋಗ್ಯವಾಗಿ ಸತ್ಕರಿಸಿ **"ಕಷ್ಟಂ ಕಷ್ಟಂ ಅಯ್ಯೋ!"**–ಎಂದು ಉದ್ಗರಿಸಿ ಮಾತನ್ನು ಪ್ರಾರಂಭಿಸಿದನು:

"ಭೂಪತಿಯೇ! ನಾನು ಸಂಜಯನು ನಿನ್ನ ಬಳಿಗೆ ಬಂದಿದ್ದೇನೆ. ನೀನು ಸುಖದಿಂದಿರುವೆಯಾ? ಸ್ವಯಂಕೃತಾಪರಾಧದಿಂದಲೇ ಆಪತ್ತನ್ನು ಹೊಂದಿರುವ ನೀನಿಂದು ವಿಮೋಹಿತನಾಗಿಲ್ಲವೇ? (ವ್ಯಥೆಯಿಂದ ತೊಳಲುತ್ತಿಲ್ಲವೇ?) ಹಿಂದೆ ವಿದುರ-ದ್ರೋಣ-ಗಾಂಗೇಯ-ಕೇಶವರು ನಿನಗೆ ಹಿತವಾದ ಹಲವುಮಾತುಗಳನ್ನು ಹೇಳಿದ್ದರು. ಅವರ ಮಾತನ್ನು ಗ್ರಹಿಸದೇ ಇದ್ದುದನ್ನು ನೀನೀಗ ಗ್ರಹಿಸಿ ವ್ಯಥೆಪಡುವುದಿಲ್ಲವೇ? (ಅವ ರಂದು ಹೇಳಿದ್ದ ಮಾತುಗಳನ್ನು ಕೇಳಿ ಅದರಂತೆ ನಡೆಯಬೇಕಾಗಿದ್ದಿತು– ಎಂದು ಈಗಲಾದರೂ ನಿನಗೆ ಅನ್ನಿಸುತ್ತಿಲ್ಲವೇ?) ತುಂಬಿದ ಸಭೆಯಲ್ಲಿ ಪರಶುರಾಮ-ನಾರದ-ಕಣ್ವಾದಿ ಮಹರ್ಷಿಗಳೂ ನಿನಗೆ ಹಿತೋಪದೇಶ ವನ್ನು ಮಾಡಿದರು. ಅವರ ಸದುಪದೇಶವನ್ನೂ ಮಾನ್ಯಮಾಡಲಿಲ್ಲ ವೆಂಬುದನ್ನು ಈಗ ಸ್ಮರಿಸಿಕೊಂಡಾದರೂ ನೀನು ವ್ಯಥೆಪಡುವುದಿಲ್ಲವೇ? ನಿನ್ನ ಹಿತದಲ್ಲಿಯೇ ಆಸಕ್ತರಾಗಿದ್ದ ಭೀಷ್ಮ-ದ್ರೋಣರೇ ಮೊದಲಾದ ಸುಹೃದರು ಶತ್ರುಗಳಿಂದ ಸಂಹತರಾದರೆಂಬುದನ್ನು ಸ್ಮರಿಸಿಯೂ ನೀನು ದುಃಖಪಡು

ವುದಿಲ್ಲವೇ?" ಇದೇ ಮುಂತಾಗಿ ಹೇಳುತ್ತಿದ್ದ ಬದ್ಧಾಂಜಲಿಯಾಗಿದ್ದ ಸೂತಪುತ್ರನನ್ನು ಕುರಿತು ದುಃಖಾರ್ತನಾಗಿದ್ದ ರಾಜನು ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಹೇಳಿದನು:

"ಸಂಜಯ! ದಿವ್ಯಾಸ್ತ್ರಗಳನ್ನು ಹೊಂದಿದ್ದ ಮಹಾಶೂರನಾದ ಭೀಷ್ಮನು ಹತನಾಗಲಾಗಿ, ಮಹಾಧನುಷ್ಮಂತರಾದ ದ್ರೋಣರೂ ಸಹ ಮರಣ ಹೊಂದಲಾಗಿ ನನ್ನ ಮನಸ್ಸು ಬಹಳ ದುಃಖಿತವಾಯಿತು.

ಕವಚಧಾರಿಗಳಾಗಿದ್ದ ಹತ್ತು ಸಾವಿರ ರಥಿಕರನ್ನು ಮಹಾತೇಜಸ್ವಿಯಾದ ವಸುಸಂಭವನಾದ (ವಸುಗಳಲ್ಲೊಬ್ಬನಾದ) ಯಾವ ಭೀಷ್ಮನು ಅನುದಿನವೂ ಸಂಹರಿಸುತ್ತಿದ್ದನೋ–ಅಂತಹ ಮಹಾನುಭಾವನನ್ನು ಅರ್ಜುನನಿಂದ ರಕ್ಷಿತನಾಗಿದ್ದ ದ್ರುಪದನ ಮಗನಾದ ಶಿಖಂಡಿಯು ಸಂಹಾರಮಾಡಿದನೆಂಬ ವಾರ್ತೆಯನ್ನು ಕೇಳಿ ನನ್ನ ಮನಸ್ಸು ಬಹಳವಾಗಿ ವ್ಯಥೆಗೊಂಡಿತು.

ಆಚಾರ್ಯ ದ್ರೋಣರೇನು ಸಾಮಾನ್ಯರೇ? ಸಂಜಯ! ಅವರಿನ್ನೂ ಬಾಲಕರಾಗಿದ್ದಾಗಲೇ ಪರಶುರಾಮನು ಅವರಿಗೆ ಧನುರ್ವೇದವನ್ನು ಉಪದೇಶಿಸಿದನು. ದ್ರೋಣರ ಪರಮಾನುಗ್ರಹದಿಂದಲೇ ಮಹಾರಥರಾದ ದುರ್ಯೋಧನಾದಿಗಳೂ, ಯುಧಿಷ್ಠಿರಾದಿಗಳೂ ಮತ್ತು ಇನ್ನೂ ಅನೇಕ ಭೂಪಾಲರೂ ಮಹಾರಥತ್ವವನ್ನು (ಮಹಾರಥರೆಂಬ ಅಭಿಧಾನವನ್ನು) ಪಡೆದುಕೊಂಡರು. ಸತ್ಯಸಂಧರಾದ ಮಹಾಧನುಷ್ಮಂತರಾದ ಅಂತಹ ದ್ರೋಣರನ್ನು ಯುದ್ಧದಲ್ಲಿ ಧೃಷ್ಟದ್ಯುಮ್ನನು ವಧಿಸಿದನೆಂಬ ವಾರ್ತೆಯನ್ನು ಕೇಳಿ ನನ್ನ ಮನಸ್ಸು ಬಹಳವಾಗಿ ವ್ಯಥಿತವಾಯಿತು. *ಚತುರ್ವಿಧವಾದ ಅಸ್ತ್ರಗಳ ಪ್ರಯೋಗಗಳಲ್ಲಿ ಪ್ರಪಂಚದಲ್ಲಿರುವ ಯಾವ ಮನುಷ್ಯನೂ ಮಹಾತ್ಮರಾದ ಭೀಷ್ಮ-ದ್ರೋಣರಿಗೆ ಸಮನಾಗಲಾರನು. ಅಂತಹ ಭೀಷ್ಮ-ದ್ರೋಣರು ಹತರಾದುದನ್ನು ಕೇಳಿ ನನ್ನ ಮನಸ್ಸು

---

*ಚತುರ್ವಿಧವಾದ ಅಸ್ತ್ರಗಳು: ಮುಕ್ತ, ಅಮುಕ್ತ, ಯಂತ್ರಮುಕ್ತ ಮತ್ತು ಮುಕ್ತಾಮುಕ್ತಗಳು. ಧನುಸ್ಸಿನಿಂದ ಅಥವಾ ಕೈಯಿಂದ ಪ್ರಯೋಗಿಸುವುದಕ್ಕೆ ಮುಕ್ತವೆಂದು ಹೆಸರು. ಬಾಣ-ತೋಮರಾದಿಗಳು. ಕೈಯಲ್ಲೇ ಇಟ್ಟುಕೊಂಡು ಶತ್ರುಗಳೊಡನೆ ಯುದ್ಧಮಾಡಬಹುದಾದ ಆಯುಧಗಳಿಗೆ ಅಮುಕ್ತಗಳೆಂದು ಹೆಸರು. ಕತ್ತಿ, ಭರ್ಜಿ, ಗದೆ ಮುಂತಾದುವು.

ಬಹಳವಾಗಿ ವ್ಯಥೆಗೊಂಡಿತು. ಮುಂದಿನ ಸಮಾಚಾರವನ್ನಾದರೂ ಹೇಳು, ಸಂಜಯ! ಅಸ್ತ್ರವಿದ್ಯೆಯಲ್ಲಿ ಮೂರು ಲೋಕಗಳಲ್ಲಿಯೂ ಯಾರಿಗೆ ಸಮಾನರಾದವರೇ ಇಲ್ಲವೋ ಅಂತಹ ದ್ರೋಣರು ಹತರಾದರೆಂಬುದನ್ನು ಕೇಳಿದನಂತರ ನನ್ನ ಮಕ್ಕಳೇನು ಮಾಡಿದರು? ಮಹಾತ್ಮನಾದ ಅರ್ಜುನನು ಅಸಂಖ್ಯಾತರಾದ ಸಂಶಪ್ತಕಸೈನಿಕರನ್ನು ಸ್ವಭುಜಬಲ-ಪರಾಕ್ರಮಗಳಿಂದ ಯಮಲೋಕಕ್ಕೆ ಕಳುಹಿಸಿರುವನು. ಧೀಮಂತನಾದ ಅಶ್ವತ್ಥಾಮನ ನಾರಾಯಣಾಸ್ತ್ರವೂ ಶ್ರೀಕೃಷ್ಣನ ಸಮಯೋಚಿತವಾದ ಸಲಹೆಯಿಂದಾಗಿ ಶಾಂತವಾಗಿ ಹೋಯಿತು. ಅದನ್ನು ನೋಡಿದ ನನ್ನ ಕಡೆಯ ಸೈನಿಕರೆಲ್ಲರೂ ಪಲಾಯನಮಾಡಿದರು. ಆ ಸಮಯದಲ್ಲಿ ನಮ್ಮವರೇನು ಮಾಡಿದರು? ಸಂಜಯ! ದ್ರೋಣಾಚಾರ್ಯರು ಹತರಾದನಂತರ ನಮ್ಮ ಸೈನಿಕರೆಲ್ಲರೂ ಪಲಾಯನಮಾಡಿರಬಹುದೆಂದು ನಾನು ಭಾವಿಸುತ್ತೇನೆ. ಶೋಕವೆಂಬ ಸಮುದ್ರದಲ್ಲಿ ಮುಳುಗಿಹೋಗಿದ್ದರೆಂದೂ ನಾನು ಭಾವಿಸುತ್ತೇನೆ. ಸಮುದ್ರದಲ್ಲಿ ನೌಕೆಯೊಂದು ಮುಳುಗಿಹೋದನಂತರ ಅದರಲ್ಲಿರುವ ಮನುಷ್ಯರು ಈಜಿಕೊಂಡಾದರೂ ದಡವನ್ನು ಸೇರಲು ಪ್ರಯತ್ನಿಸುವಂತೆ– ಶೋಕಸಾಗರದಿಂದ ಪಾರಾಗಲು ನನ್ನ ಕಡೆಯ ಸೈನಿಕರು ಬಹಳವಾಗಿ ಪ್ರಯತ್ನಿಸುತ್ತಿದ್ದರೆಂದು ಭಾವಿಸುತ್ತೇನೆ. ನನ್ನ ಕಡೆಯ ಸಕಲಸೈನಿಕರೂ ಪಲಾಯನಮಾಡುತ್ತಿರಲಾಗಿ; ದುರ್ಯೋಧನ, ಕರ್ಣ, ಭೋಜವಂಶೀಯ ನಾದ ಕೃತವರ್ಮಾ, ಮದ್ರಾಧಿಪತಿಯಾದ ಶಲ್ಯ, ಅಶ್ವತ್ಥಾಮಾ, ಕೃಪ, ನನ್ನ ಅಳಿದುಳಿದಿದ್ದ ಪುತ್ರರು ಮತ್ತು ಇತರ ರಾಜರ ಮುಖಗಳು ಯಾವ ಬಣ್ಣಕ್ಕೆ ತಿರುಗಿದ್ದುವು? ಸಂಜಯ! ಈ ಎಲ್ಲ ವಿಷಯಗಳನ್ನೂ ಹೇಗೆ ನಡೆಯಿತೋ ಹಾಗೆಯೇ ನನಗೆ ಹೇಳು ಮತ್ತು ನನ್ನ ಕಡೆಯವರ ಮತ್ತು ಪಾಂಡವರ ಪರಾಕ್ರಮಗಳನ್ನು ವರ್ಣಿಸು."

---

ಯಂತ್ರದಮೂಲಕವಾಗಿ ಪ್ರಯೋಗಿಸುವ ಆಯುಧಗಳಿಗೆ ಯಂತ್ರಮುಕ್ತಗಳೆಂದು ಹೆಸರು. ಶತಘ್ನೀ, ಅಯಃಪಿಂಡ, ಪಾಷಾಣ ಮುಂತಾದುವು. ಶತ್ರುಗಳ ಮೇಲೆ ಪ್ರಯೋಗಿಸಿದನಂತರ ಶತ್ರುಗಳನ್ನು ಸಂಹರಿಸಿ ಪುನಃ ಪ್ರಯೋಕ್ತೃವನ್ನೇ ಸೇರುವ ಅಸ್ತ್ರಗಳಿಗೆ ಮುಕ್ತಾಮುಕ್ತಗಳೆಂದು ಹೆಸರು. ಶ್ರೀಕೃಷ್ಣನ ಸುದರ್ಶನಚಕ್ರ, ಇಂದ್ರನ ವಜ್ರಾಯುಧ ಇವೇ ಮುಂತುದುವು.

“ಮಹಾರಾಜ! ನಿನ್ನ ಅಪರಾಧದ ಕಾರಣದಿಂದಲೇ ಕೌರವರ ಪಕ್ಷದಲ್ಲಿ ಯಾವ ಅನಾಹುತವು ನಡೆದುಹೋಯಿತೋ ಅದನ್ನು ನಾನೀಗ ಹೇಳಲಿದ್ದೇನೆ. ಅದನ್ನು ಕೇಳಿದನಂತರ ನೀನು ವ್ಯಥೆಪಡಬೇಡ. ಏಕೆಂದರೆ **ದಿಷ್ಟೇ ನ ವ್ಯಥತೇ ಬುಧಃ**–ದೈವದಿಂದಲೇ ದುಃಖವು ಪ್ರಾಪ್ತವಾದಾಗ ಅದಕ್ಕಾಗಿ ವಿದ್ವಾಂಸನಾದವನು ವ್ಯಥೆಪಡುವುದಿಲ್ಲ.

**ಯಸ್ಮಾದಭಾವೀ ಭಾವೀ ವಾ ಭವೇದರ್ಥೋ ನರಂ ಪ್ರತಿ ।**
**ಅಪ್ರಾಪ್ತೌ ತಸ್ಯ ವಾ ಪ್ರಾಪ್ತೌ ನ ಕಶ್ಚಿದ್ವ್ಯಥತೇ ಬುಧಃ ॥೨೫॥**

ಅದೃಷ್ಟವಶದಿಂದ ಮನುಷ್ಯನಿಗೆ ಇಷ್ಟವಸ್ತುಗಳ ಪ್ರಾಪ್ತಿಯಾಗಲೂ ಬಹುದು. ಆಗದೆಯೂ ಇರಬಹುದು. ಆದುದರಿಂದ ವಿದ್ವಾಂಸನಾದವನು ಇಷ್ಟವಸ್ತುವು ಸಿಗದಿದ್ದರೂ ಅನಿಷ್ಟವು ಒದಗಿದರೂ ವ್ಯಥೆಪಡುವುದಿಲ್ಲ.”

“ಸಂಜಯ! ಅಪ್ರಿಯವಾದ ಯಾವುದೇ ವಾರ್ತೆಯನ್ನು ಕೇಳಿದರೂ ನನಗೆ ಅದರಿಂದ ಹೆಚ್ಚಿನ ದುಃಖವೇನೂ ಆಗುವುದಿಲ್ಲ. ದೈವದ ಇಚ್ಛೆಯಂತೆಯೇ ಎಲ್ಲವೂ ನಡೆಯುತ್ತಿದೆಯೆಂದೂ, ಮನುಷ್ಯನ ಪ್ರಯತ್ನವೇನೂ ದೈವದ ಮುಂದೆ ಸಾಗದೆಂದೂ ನಾನು ಈ ಹಿಂದೆಯೇ ತಿಳಿದುಕೊಂಡುಬಿಟ್ಟಿದ್ದೇನೆ. ಆದುದರಿಂದ ನಿನ್ನ ಇಚ್ಛಾನುಸಾರವಾಗಿ ನಡೆದ ಸಮಾಚಾರವನ್ನು ಯಥಾವತ್ತಾಗಿ ಹೇಳು. ನನಗೆ ದುಃಖವಾಗುವುದೆಂದು ನಿಜಾಂಶವನ್ನು ಹೇಳಲು ಸಂಕೋಚಪಡಬೇಕಾಗಿಲ್ಲ.”

೨ನೆಯ ಅಧ್ಯಾಯವು ಮುಗಿಯಿತು.

೩ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ದುರ್ಯೋಧನನು ಸೈನಿಕರಿಗೆ ಆಶ್ವಾಸನೆಯನ್ನಿತ್ತುದು: ಸೇನಾಪತಿಯಾದ ಕರ್ಣನ ಯುದ್ಧ ಮತ್ತು ಸಂಹಾರದ ಸಂಕ್ಷಿಪ್ತವೃತ್ತಾಂತ

ಸಂಜಯನು ಧೃತರಾಷ್ಟ್ರನ ಆಣತಿಯಂತೆ ದ್ರೋಣರು ಹತರಾದ ನಂತರದ ಸಮಾಚಾರವನ್ನು ಸಂಕ್ಷೇಪವಾಗಿ ಹೇಳಲು ಉಪಕ್ರಮಿಸುತ್ತಾನೆ:

“ಮಹಾರಾಜ! ದ್ರೋಣರು ಹತರಾದನಂತರ ಮಹಾರಥರಾದ ನಿನ್ನ

ಮಕ್ಕಳೆಲ್ಲರೂ ಆಯುಧಪಾಣಿಗಳಾಗಿ ತಲೆತಗ್ಗಿಸಿಕೊಂಡು ಕುಳಿತಿದ್ದರು. ದುಃಖಪರೀತರಾಗಿದ್ದ ಅವರು ಒಬ್ಬರು ಮತ್ತೊಬ್ಬರನ್ನು ನೋಡುತ್ತಲೂ ಇರಲಿಲ್ಲ. ಪರಸ್ಪರವಾಗಿ ಮಾತನಾಡುತ್ತಲೂ ಇರಲಿಲ್ಲ. ವ್ಯಥಿತರಾಗಿ, ನಿಶ್ಚೇಷ್ಟರಾಗಿ ನತಶಿರರಾಗಿದ್ದ ನಿನ್ನ ಮಕ್ಕಳನ್ನು ನೋಡಿದ ನಿನ್ನ ಕಡೆಯ ಸೈನಿಕರೆಲ್ಲರೂ ದುಃಖದಿಂದ ಸಂತಪ್ತರಾದರು. ಹಲವು ಬಾರಿ ಶೂನ್ಯದೃಷ್ಟಿಯಿಂದ ಅಂತರಿಕ್ಷದ ಕಡೆಗೆ ನೋಡುತ್ತಿದ್ದರು. ಯುದ್ಧದಲ್ಲಿ ದ್ರೋಣರು ಹತರಾದುದನ್ನು ನೋಡಿ ಆಮೂಲಾಗ್ರವಾಗಿ ರಕ್ತದಿಂದ ಲೇಪಿತವಾಗಿದ್ದ ಸೈನಿಕರ ಶಸ್ತ್ರಗಳು ಅವರ ಕೈಗಳಿಂದ ಜಾರಿ ಕೆಳಗೆ ಬಿದ್ದುವು. ಸೈನಿಕರ ಸೊಂಟಗಳಿಗೆ ಬಿಗಿಯಲ್ಪಟ್ಟಿದ್ದ (ಕತ್ತಿಯೇ ಮುಂತಾದ) ಆಯುಧಗಳೂ ಅರಿಷ್ಟಸೂಚಕಗಳಾಗಿ ಸಡಿಲಗೊಂಡು ನೇತಾಡುತ್ತಾ ಆಕಾಶದಲ್ಲಿರುವ ನಕ್ಷತ್ರಗಳೋಪಾದಿಯಲ್ಲಿ ಥಳ-ಥಳಿಸುತ್ತಿದ್ದುವು. ಈ ರೀತಿಯಲ್ಲಿ ಚಲನ-ವಲನಗಳಿಲ್ಲದೆ ಸತ್ತ್ವಹೀನವಾಗಿ ಸ್ತಬ್ಧವಾಗಿ ನಿಂತಿದ್ದ ಸೈನ್ಯವನ್ನು ನೋಡಿ ರಾಜಾ ದುರ್ಯೋಧನನು ಹೇಳಿದನು: "ವೀರಶಿರೋಮಣಿಗಳೇ! ನಿಮ್ಮ ಬಾಹುಗಳ ಬಲದ ಅವಲಂಬನೆಯಿಂದಲೇ ನಾನು ಪಾಂಡುಪುತ್ರರನ್ನು ಯುದ್ಧಕ್ಕೆ ಆಹ್ವಾನಿಸಿದೆನು. ಕಳೆದ ಹದಿನೈದು ದಿವಸಗಳಿಂದಲೂ ಯುದ್ಧವೂ ನಡೆಯುತ್ತಿದೆ. ನೀವೂ ಸಹ ಅತುಲವಾದ ಪರಾಕ್ರಮಗಳಿಂದಲೇ ಶತ್ರುಗಳೊಡನೆ ಹೋರಾಡುತ್ತಿರುವಿರಿ. ಆದರೆ ದ್ರೋಣರು ಹತರಾದನಂತರ ನಮ್ಮ ಸೈನ್ಯವು ಬಹಳ ಎದೆಗುಂದಿದಂತೆ ಕಾಣುತ್ತಿದೆ.

**ಯುಧ್ಯಮಾನಾಶ್ಚ ಸಮರೇ ಯೋಧಾ ವಧ್ಯನ್ತಿ ಸರ್ವಶಃ ।**
**ಜಯೋ ವಾಪಿ ವಧೋ ವಾಪಿ ಯುಧ್ಯಮಾನಸ್ಯ ಸಂಯುಗೇ ।**
**ಭವೇತ್ಕಿಮತ್ರ ಚಿತ್ರಂ ವೈ ಯುಧ್ಯಧ್ವಂ ಸರ್ವತೋಮುಖಾಃ ॥೯॥**

ಯುದ್ಧಮಾಡುತ್ತಿರುವ ಯೋಧರು ಸಾಮಾನ್ಯವಾಗಿ ಯುದ್ಧದಲ್ಲಿ ಶತ್ರುಗಳಿಂದ ವಧಿಸಲ್ಪಡುತ್ತಲೇ ಇರುತ್ತಾರೆ. ಯುದ್ಧಮಾಡುತ್ತಿರುವ ವೀರ ಯೋಧನಿಗೆ ಯುದ್ಧದಲ್ಲಿ ಜಯವಾದರೂ ಲಭಿಸುತ್ತದೆ; ವಧೆಯಾದರೂ ಆಗುತ್ತದೆ. ಇದರಲ್ಲಿ ವೈಚಿತ್ರ್ಯವೇನಿದೆ? ಅಥವಾ ಭಯಕ್ಕೆ ಕಾರಣವೇ

ನಿದೆ? ಶತ್ರುಗಳಿರುವ ಎಲ್ಲ ಕಡೆಗಳಿಗೂ ಮುಖವನ್ನು ತಿರುಗಿಸಿಕೊಂಡು (ಶತ್ರುಗಳಿಗೆ ಎದುರಾಗಿ) ಉತ್ಸಾಹಪೂರ್ಣರಾಗಿ ಯುದ್ಧಮಾಡಿರಿ. (ದ್ರೋಣರ ಮರಣದಿಂದಾಗಿ ನೀವು ಅಧೀರರಾಗುವ ಕಾರಣವಿಲ್ಲ.)

ಈಗ ನೀವು–ಮಹಾಧನುಷ್ಮಂತನಾದ, ಮಹಾತ್ಮನಾದ ವೈಕರ್ತನ ಕರ್ಣನು ದಿವ್ಯಾಸ್ತ್ರಗಳಿಂದ ಕೂಡಿದವನಾಗಿ ರಣಾಂಗಣದಲ್ಲಿ ಶತ್ರುಗಳಿಗೆ ಎದುರಾಗಿ ಸಂಚರಿಸುವುದನ್ನು ಗಮನಿಸಿರಿ. (ಅವನನ್ನೇ ಅನುಸರಿಸಿ ನೀವೆಲ್ಲರೂ ಮಹೋತ್ಸಾಹದಿಂದ ಪಾಂಡವಸೈನಿಕರೊಡನೆ ಯುದ್ಧ ಮಾಡಿರಿ.) ಕರ್ಣನ ಭಯದಿಂದಲೇ ಕುಂತಿಯ ಮಗನಾದ, ಮೂಢನಾದ ಅರ್ಜುನನು– ಕ್ಷುದ್ರಮೃಗವು ಸಿಂಹಕ್ಕೆ ಭಯಪಟ್ಟು ಓಡಿಹೋಗುವಂತೆ– ಯುದ್ಧದಿಂದ ಹಿಂದೆ ಸರಿಯುತ್ತಾನೆ. (ಕರ್ಣನಿಗೆದುರಾಗಿ ನಿಂತು ಯುದ್ಧ ಮಾಡಲು ಧೈರ್ಯಮಾಡುವುದಿಲ್ಲ.) ಹತ್ತುಸಾವಿರ ಆನೆಗಳ ಬಲವಿರುವ ಭೀಮಸೇನನನ್ನೂ ಮಹಾವೀರನಾದ ಕರ್ಣನು ಕೇವಲ ಮಾನುಷಯುದ್ಧ ದಿಂದಲೇ (ದಿವ್ಯಾಸ್ತ್ರಗಳನ್ನು ಪ್ರಯೋಗಿಸದೆಯೇ) ದುರವಸ್ಥೆಗೆ ಈಡುಮಾಡಿ ರುವನು. ಇಷ್ಟುಮಾತ್ರವಲ್ಲ; ದಿವ್ಯಾಸ್ತ್ರಗಳನ್ನು ತಿಳಿದಿದ್ದ, ಮಾಯಾವಿಯಾದ, ಮಹಾಶೂರನಾದ, ಭಯಂಕರವಾಗಿ ಗರ್ಜನೆಮಾಡು ತ್ತಿದ್ದ ಘಟೋತ್ಕಚನನ್ನು ಮಹಾಶೂರನಾದ ಕರ್ಣನು ತನ್ನ ಅಮೋಘವಾದ ಶಕ್ತ್ಯಾಯುಧದಿಂದ ಸಂಹರಿಸಿದನು. ತಡೆಯಲು ಅಸಾಧ್ಯವಾದ ವೀರ್ಯ-ಪರಾಕ್ರಮಗಳಿಂದ ಕೂಡಿರುವ, ಧೀಮಂತನಾದ, ಸತ್ಯಸಂಧ ನಾದ ಕರ್ಣನ ಬಾಹುಗಳ ಕುಂಠಿತವಾಗದೇ ಇರತಕ್ಕ ಬಲವನ್ನಿಂದು ಯುದ್ಧದಲ್ಲಿ ನೀವೆಲ್ಲರೂ ನೋಡಿರಿ. ವಿಷ್ಣು-ವಾಸವರ ಪರಾಕ್ರಮಕ್ಕೆ ಸಮಾನವಾದ ಕರ್ಣಾಶ್ವತ್ಥಾಮರ ಪರಾಕ್ರಮವನ್ನಿಂದು ಆ ಪಾಂಡುವಿನ ಮಕ್ಕಳು ನೋಡಲಿ. ನಿಮ್ಮಲ್ಲಿ ಒಬ್ಬೊಬ್ಬರೂ ಅತುಲಪರಾಕ್ರಮಿಗಳಾಗಿರು ವಿರಿ. ಒಬ್ಬೊಬ್ಬರೇ ಸಸೈನ್ಯರಾದ ಪಾಂಡವರನ್ನು ಸಂಹರಿಸುವಷ್ಟು ಸಮರ್ಥ ರಾಗಿರುವಿರಿ. ಹೀಗಿರುವಾಗ ನೀವೆಲ್ಲರೂ ಸೇರಿ ಯುದ್ಧಮಾಡಿದಲ್ಲಿ ಹೇಳುವುದೇನಿದೆ? (ಜಯಗಳಿಸುವುದರಲ್ಲಿ ಸಂಶಯವೇ ಇಲ್ಲ.) ಒಬ್ಬರು ಮತ್ತೊಬ್ಬರನ್ನು ನೋಡದೆಯೇ ಪರಸ್ಪರವಾಗಿ ಮಾತನಾಡದೆಯೇ ಹೀಗೆ ಅಧೀರರಾಗಬೇಡಿರಿ. ಅಸ್ತ್ರವಿದ್ಯಾವಿಶಾರದರಾಗಿರುವ ಮತ್ತು ಮಹಾ

ವೀರ್ಯವಂತರಾಗಿರುವ ನೀವು ಪರಸ್ಪರವಾಗಿ ಮಾತನಾಡಿಕೊಂಡು ಯುದ್ಧದಲ್ಲಿ ತೊಡಗಿರಿ.”

ಮಹಾರಾಜ! ಮಹಾವೀರ್ಯನಾದ ನಿನ್ನ ಮಗನು ಇವೇ ಮುಂತಾದ ಮಾತುಗಳಿಂದ ಸೈನಿಕರನ್ನು ಪ್ರೋತ್ಸಾಹಿಸಿ ತನ್ನ ಅನುಜರೊಡನೆ ಕರ್ಣನನ್ನು ಸೈನ್ಯಕ್ಕೆ ಸೇನಾಪತಿಯನ್ನಾಗಿ ಮಾಡಿದನು. ಮಹಾರಥನಾದ ಕರ್ಣನು ಸೇನಾಪತಿಯಾದನಂತರ ಗಟ್ಟಿಯಾಗಿ ಸಿಂಹನಾದಮಾಡಿ ರಣೋನ್ಮತ್ತನಾಗಿ ಯುದ್ಧಮಾಡಲು ತೊಡಗಿದನು. ಕರ್ಣನು ಯುದ್ಧದಲ್ಲಿ ಸಮಸ್ತಸೃಂಜಯರನ್ನೂ, ಅನೇಕಾನೇಕ ಪಾಂಚಾಲ-ಕೇಕಯ-ವಿದೇಹಸೈನಿಕರನ್ನೂ ಸಂಹರಿಸಿದನು. (ಶತ್ರುಸೈನಿಕರೊಡನೆ ದೊಡ್ಡ ಕಾಳಗವನ್ನು ಮಾಡಿದನು.) ಒಂದು ಬಾಣದ ಅಗ್ರಭಾಗವು ಮತ್ತೊಂದು ಬಾಣದ ಮೂಲಭಾಗದೊಡನೆ ಅಂಟಿಕೊಂಡಂತೆಯೇ ನೂರಾರು ನಿಶಿತವಾದ ಬಾಣಗಳು ಕರ್ಣನ ಧನುಸ್ಸಿನಿಂದ ದುಂಬಿಗಳ ಸಾಲುಗಳಂತೆ ಸತತವಾಗಿ ಹೊರಬರುತ್ತಿದ್ದುವು. ಹೀಗೆ ಕರ್ಣನು ಪಾಂಚಾಲರನ್ನೂ, ವೇಗಶಾಲಿಗಳಾದ ಪಾಂಡವರನ್ನೂ ಬಾಣಗಳಿಂದ ಬಹಳವಾಗಿ ಪೀಡಿಸಿ, ಪಾಂಡವರ ಕಡೆಯ ಸಾವಿರಾರು ಯೋಧರನ್ನು ಸಂಹರಿಸಿ, ಕಟ್ಟಕಡೆಗೆ ಅರ್ಜುನನಿಂದ ಹತನಾದನು.”

ಃನೆಯ ಅಧ್ಯಾಯವು ಮುಗಿಯಿತು.

೪ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನ ಶೋಕ: ಅಂತಃಪುರದ ಸ್ತ್ರೀಯರು ವ್ಯಾಕುಲಗೊಂಡುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ:

“ಮಹಾರಾಜ! ಕರ್ಣನು ಅರ್ಜುನನಿಂದ ಹತನಾದನೆಂಬ ಮಾತನ್ನು ಕೇಳಿ ಅಂಬಿಕೆಯ ಮಗನಾದ ಧೃತರಾಷ್ಟ್ರನು ಶೋಕದ ಅಂತ್ಯವೆಂಬುದನ್ನೇ ಕಾಣದವನಾಗಿ ಕರ್ಣನ ಅವಸಾನಾನಂತರ ದುರ್ಯೋಧನನೂ ಹತನಾದನೆಂದು ಭಾವಿಸಿದನು. ಸ್ಮೃತಿತಪ್ಪಿದ ಆನೆಯೋಪಾದಿಯಲ್ಲಿ ಧೃತರಾಷ್ಟ್ರನು ವ್ಯಾಕುಲನಾಗಿ ಭೂಮಿಯ ಮೇಲೆ ಬಿದ್ದನು.

ರಾಜಶ್ರೇಷ್ಠನಾದ ಧೃತರಾಷ್ಟ್ರನು ವ್ಯಾಕುಲಗೊಂಡು ಭೂಮಿಯ ಮೇಲೆ ಬೀಳಲಾಗಿ, ಅಂತಃಪುರದ ಸ್ತ್ರೀಯರ ದೊಡ್ಡ ಆರ್ತನಾದವುಂಟಾಯಿತು. ಅವರ ಗೋಳಿನ ಶಬ್ದವು ಎಲ್ಲ ಕಡೆಗಳಿಂದಲೂ ಸಂಪೂರ್ಣಭೂಮಂಡಲ ವನ್ನೇ ಆವರಿಸಿಕೊಂಡಿತು. ಮಹಾಘೋರವಾದ ಶೋಕಸಾಗರದಲ್ಲಿ ಮುಳುಗಿದ ಕುರುವಂಶದ ಸ್ತ್ರೀಯರು ಅತ್ಯಂತ ಉದ್ವಿಗ್ನವಾದ ಮನಸ್ಸಿನಿಂದ ಕೂಡಿದವರಾಗಿ ದುಃಖದಿಂದಲೂ, ಶೋಕದಿಂದಲೂ ಪೀಡಿತರಾಗಿ ಗಳ-ಗಳನೆ ಅಳತೊಡಗಿದರು. ಗಾಂಧಾರೀದೇವಿಯು ರಾಜನ ಬಳಿಗೆ ಹೋಗಿ ಅವನ ದುರವಸ್ಥೆಯನ್ನು ತಿಳಿದು ಉದ್ವಿಗ್ನಳಾಗಿ ಸ್ಮೃತಿತಪ್ಪಿ ಭೂಮಿಯ ಮೇಲೆ ತಾನೂ ಬಿದ್ದಳು. ರಾಜನನ್ನು ನೋಡಲು ಬಂದ ಅಂತಃಪುರದ ಸ್ತ್ರೀಯ ರೆಲ್ಲರಿಗೂ ಅದೇಸ್ಥಿತಿಯೇ ಉಂಟಾಯಿತು. ಎಲ್ಲರೂ ಉದ್ವಿಗ್ನರಾಗಿ ಸ್ಮೃತಿತಪ್ಪಿ ಕೆಳಗೆ ಬಿದ್ದರು. ಅತ್ಯಂತದುಃಖಿತೆಯರಾದ ಅವರು ಬಾರಿ-ಬಾರಿಗೂ ಮೂರ್ಛೆಹೋಗುತ್ತಿದ್ದರು. ಧಾರಾಕಾರವಾಗಿ ಕಣ್ಣೀರು ಸುರಿಸುತ್ತಿದ್ದ ಗಾಂಧಾರಿಯೇ ಮೊದಲಾದ ಅಂತಃಪುರದ ಸ್ತ್ರೀಯರನ್ನು ಸಂಜಯನು ಸಮಯೋಚಿತವಾದ ಮತ್ತು ಯುಕ್ತಿಯುಕ್ತವಾದ ಮಾತುಗಳಿಂದ ಸಮಾಧಾನ ಪಡಿಸಿದನು. ಸಂಜಯನು ಸಮಾಧಾನಪಡಿಸಿದರೂ ಸಹ–ನಾಲ್ಕು ದಿಕ್ಕು ಗಳಿಂದಲೂ ಬೀಸುವ ಗಾಳಿಯಿಂದ ಬಾಳೆಯ ಗಿಡಗಳು ಅತ್ತಲಿಂದಿತ್ತ ಇತ್ತಲಿಂದತ್ತ ತೂರಾಡುವಂತೆ–ಅಂತಃಪುರದ ಸ್ತ್ರೀಯರು ದುಃಖದಿಂದ ನಡುಗುತ್ತಿದ್ದರು. ಅನಂತರ ಧೀಮಂತನಾದ ವಿದುರನು ಕೌರವೇಶ್ವರನಾದ, ಪ್ರಜ್ಞಾಚಕ್ಷುವಾದ ಧೃತರಾಷ್ಟ್ರನ ಮೇಲೆ ಶೀತಲವಾದ ನೀರನ್ನು ಚುಮುಕಿಸುತ್ತಾ ಸಮಾಧಾನಪಡಿಸಿದನು.

ಜನಮೇಜಯಮಹಾರಾಜ! ಧೃತರಾಷ್ಟ್ರನು ಸ್ವಲ್ಪ-ಸ್ವಲ್ಪವಾಗಿ ಪ್ರಜ್ಞೆ ಯನ್ನು ಹೊಂದಿ ತನ್ನ ಸುತ್ತಲೂ ಕುಳಿತಿದ್ದ ಅಂತಃಪುರದ ಸ್ತ್ರೀಯರ ಕಡೆಗೆ ಮುಖವನ್ನು ತಿರುಗಿಸಿದನು. ಆ ಸಮಯದಲ್ಲವನು ಉನ್ಮತ್ತನಂತೆ ಶೂನ್ಯದೃಷ್ಟಿ ಯಿಂದ ನೋಡುತ್ತಿದ್ದನೇ ಹೊರತು ಯಾವ ಮಾತನ್ನೂ ಆಡಲಿಲ್ಲ. ಸುಮ್ಮನೇ ಕುಳಿತಿದ್ದನು. ರಾಜನು ಬಹಳ ಹೊತ್ತು ಯೋಚಿಸುತ್ತಲೇ ಕುಳಿತಿದ್ದು ಪುನಃ ಪುನಃ ನಿಟ್ಟುಸಿರುಬಿಡುತ್ತಾ ತನ್ನ ಮಕ್ಕಳನ್ನೇ ನಿಂದಿಸಿದನು. ಪಾಂಡವರನ್ನು ಪ್ರಶಂಸಿಸಿದನು. ಬಹಳಹೊತ್ತು ಚಿಂತಿಸುತ್ತಿದ್ದು ಬಾರಿಬಾರಿಗೂ ಹಿಂದಕ್ಕೂ ಮುಂದಕ್ಕೂ ತೂರಾಡುತ್ತಾ (ನಡುಗುತ್ತಾ), ತನ್ನ ಬುದ್ಧಿಯನ್ನೇ ನಿಂದಿಸಿ ಕೊಳ್ಳುತ್ತಾ ಸುಬಲನ ಮಗನಾದ ಶಕುನಿಯ ಬುದ್ಧಿಯನ್ನೂ ನಿಂದಿ

ಸುತ್ತಿದ್ದನು. ಧೃತರಾಷ್ಟ್ರರಾಜನು ಪುನಃ ಧೈರ್ಯವನ್ನು ತಂದುಕೊಂಡು, ಹಿಂದೆ ನಡೆದುಹೋದ ವಿಷಯಗಳ ಕಡೆಗೆ ಹರಿದುಹೋಗುತ್ತಿದ್ದ ಮನಸ್ಸನ್ನು ಹಿಂದಕ್ಕೆಳೆದುಕೊಂಡು (ಸ್ಥಿರಪಡಿಸಿಕೊಂಡು), ಸಂಜಯನ ಮಾತನ್ನು ಕೇಳುವ ಸಲುವಾಗಿ ಅವನನ್ನು ಪುನಃ ಪ್ರಶ್ನಿಸತೊಡಗಿದನು:

"ಸಂಜಯ! ನೀನು ಹೇಳಿದ ಮಾತುಗಳೆಲ್ಲವನ್ನೂ ನಾನು ಕೇಳಿದೆನು. ವಿಜಯಗಳಿಸಬೇಕೆಂದು ಸತತವಾಗಿ ಅಪೇಕ್ಷಿಸುತ್ತಿದ್ದ ನನ್ನ ಮಗ ದುರ್ಯೋಧನನು ವಿಜಯದಲ್ಲಿ ನಿರಾಶೆಯನ್ನು ಹೊಂದಿದವನಾಗಿ ಯಮನ ಮನೆಗೆ ಹೋಗಿಬಿಡಲಿಲ್ಲವೇನು? ನೀನೀಗ ಹೇಳಿದ ವಿಷಯವನ್ನೇ ಪುನಃ ಯಥಾವತ್ತಾಗಿ ಹೇಳು."

ಜನಮೇಜಯ! ಧೃತರಾಷ್ಟ್ರನು ಹೀಗೆ ಪ್ರಶ್ನಿಸಲಾಗಿ ಸೂತನು ಹೇಳತೊಡಗಿದನು:

**ಹತೋ ವೈಕರ್ತನೋ ರಾಜನ್ಸಹ ಪುತ್ರೈರ್ಮಹಾರಥಃ ।**
**ಭ್ರಾತೃಭಿಶ್ಚ ಮಹೇಷ್ವಾಸೈಃ ಸೂತಪುತ್ರೈಸ್ತನುತ್ಯಜೈಃ ॥೧೫॥**

"ಮಹಾರಾಜ! ಮಹಾರಥನಾದ ವೈಕರ್ತನಕರ್ಣನು ತನ್ನ ಮಕ್ಕಳೊಡನೆಯೂ ಮತ್ತು ಶರೀರದ ಹಂಗನ್ನೇ ತೊರೆದು ಯುದ್ಧಮಾಡುತ್ತಿದ್ದ ಮಹಾಧನುಷ್ಮಂತರಾದ ಸೂತಜಾತೀಯರಾದ ಸಹೋದರರೊಡನೆಯೂ ಹತನಾದನು.

**ದುಃಶಾಸನಶ್ಚ ನಿಹತಃ ಪಾಣ್ಡವೇನ ಯಶಸ್ವಿನಾ ।**
**ಪೀತಂ ಚ ರುಧಿರಂ ಕೋಪಾದ್ಭೀಮಸೇನೇನ ಸಂಯುಗೇ ॥೧೬॥**

ಯಶೋವಂತನಾದ ಭೀಮಸೇನನು ದುಃಶಾಸನನನ್ನೂ ಸಂಹರಿಸಿದನು. ಆ ಭಯಂಕರಯುದ್ಧದಲ್ಲಿ ಮಹಾಕೋಪಿಷ್ಠನಾಗಿದ್ದ ಭೀಮಸೇನನು ದುಃಶಾಸನನ ರಕ್ತವನ್ನೂ ಕುಡಿದನು."

ಳನೆಯ ಅಧ್ಯಾಯವು ಮುಗಿಯಿತು.

## ಸಂಜಯನು ಧೃತರಾಷ್ಟ್ರನ ಅಪೇಕ್ಷೆಯಂತೆ ಕೌರವರ ಪಕ್ಷದಲ್ಲಿ ಹತರಾದ ಪ್ರಮುಖರನ್ನು ವಿವರಿಸಿ ಹೇಳಿದುದು

ವೈಶಂಪಾಯನರು ಕಥೆಯನ್ನು ಮುಂದುವರಿಸಿ ಹೇಳುತ್ತಾರೆ:

"ಜನಮೇಜಯ! ಕರ್ಣನು ಹತನಾದನೆಂಬ ವಾರ್ತೆಯೊಡನೆ ತನ್ನ ಎರಡನೆಯ ಮಗನಾದ ದುಃಶಾಸನನೂ ಹತನಾದನೆಂಬ ಹೃದಯಭೇದಿಯಾದ ವಾರ್ತೆಯನ್ನು ಕೇಳಿ ಶೋಕದಿಂದ ವ್ಯಾಕುಲವಾದ ಮನಸ್ಸಿನಿಂದ ಕೂಡಿದ್ದ, ಅಂಬಿಕೆಯ ಮಗನಾದ ಧೃತರಾಷ್ಟ್ರನು ಸಾರಥಿಯಾದ ಸಂಜಯನನ್ನು ಕುರಿತು ಹೇಳಿದನು:

"ತಾತ! ಅಲ್ಪಾಯುವಾದ ನನ್ನ ಮಗನು ಮಾಡಿದ ಅನ್ಯಾಯದಿಂದಾಗಿ ಕರ್ಣನು ಮೃತನಾದನೆಂಬುದನ್ನು ನಿನ್ನಿಂದ ಕೇಳಿ ಅದರಿಂದ ಉಂಟಾದ ಶೋಕವು ನನ್ನ ಮರ್ಮಸ್ಥಳಗಳನ್ನೇ ಕತ್ತರಿಸುತ್ತಿದೆ. ಸಂಜಯ! ನಾನು ಈ ದುಃಖದ ಎಲ್ಲೆಯನ್ನೂ ದಾಟಬೇಕೆಂದಿರುತ್ತೇನೆ. ನನ್ನ ಮನಸ್ಸಿನಲ್ಲಿರುವ ಸಂಶಯವನ್ನು ಹೋಗಲಾಡಿಸು. ಕುರುಗಳಲ್ಲಿ ಮತ್ತು ಸೃಂಜಯರಲ್ಲಿ ಯಾರು ಬದುಕಿದ್ದಾರೆ ಮತ್ತು ಯಾರು ಸತ್ತಿದ್ದಾರೆ? ಎಂಬುದನ್ನು ನನಗೆ ಹೇಳು."

**ಹತಃ ಶಾನ್ತನವೋ ರಾಜನ್ದುರಾಧರ್ಷಃ ಪ್ರತಾಪವಾನ್ ।**
**ಹತ್ವಾ ಪಾಣ್ಡವಯೋಧಾನಾಮರ್ಬುದಂ ದಶಭಿರ್ದಿನೈಃ ॥೪॥**

"ಮಹಾರಾಜ! ದುರ್ಜಯನಾದ, ಮಹಾಪ್ರತಾಪಶಾಲಿಯಾದ, ಶಾಂತನುವಿನ ಮಗನಾದ ಭೀಷ್ಮನು ಹತ್ತು ದಿವಸಗಳಲ್ಲಿ ಪಾಂಡವರ ಕಡೆಯ ಹತ್ತು ಕೋಟಿ (ಅಸಂಖ್ಯಾತ) ಯೋಧರನ್ನು ಸಂಹರಿಸಿ ಕಡೆಗೆ ತಾನೂ ಹತನಾದನು.

**ತಥಾ ದ್ರೋಣೋ ಮಹೇಷ್ವಾಸಃ ಪಞ್ಚಾಲಾನಾಂ ರಥವ್ರಜಾನ್ ।**
**ನಿಹತ್ಯ ಯುಧಿ ದುರ್ಧರ್ಷಃ ಪಶ್ಚಾದ್ರುಕ್ಮರಥೋ ಹತಃ ॥೫॥**

ಅನಂತರ ಚಿನ್ನದ ರಥವನ್ನು ಹೊಂದಿದ್ದ, ಎದುರಿಸಲು ಅಸಾಧ್ಯ

ರಾದ, ಮಹಾಧನುಷ್ಮಂತರಾದ ದ್ರೋಣರು ಪಾಂಚಾಲರಥಿಗಳ ಸಮೂಹವನ್ನೇ ನಾಮಾವಶೇಷಗೊಳಿಸಿ ಕಡೆಗೆ ಅಸುನೀಗಿದರು.

**ಹತಶೇಷಸ್ಯ ಭೀಷ್ಮೇಣ ದ್ರೋಣೇನ ಚ ಮಹಾತ್ಮನಾ ।**
**ಅರ್ಧಂ ನಿಹತ್ಯ ಸೈನ್ಯಸ್ಯ ಕರ್ಣೋ ವೈಕರ್ತನೋ ಹತಃ ॥೬॥**

ವೈಕರ್ತನಕರ್ಣನು, ಭೀಷ್ಮ ಮತ್ತು ಮಹಾತ್ಮರಾದ ದ್ರೋಣರು ಸಂಹಾರಮಾಡದೇ ಬಿಟ್ಟಿದ್ದ ಪಾಂಡವರ ಸೈನ್ಯದಲ್ಲಿ ಅರ್ಧಭಾಗವನ್ನು ಸಂಹರಿಸಿ ಹತನಾದನು.

ಅದೇ ರೀತಿಯಲ್ಲಿ ಮಹಾಬಲನಾದ ರಾಜಕುಮಾರನಾದ ವಿವಿಂಶತಿಯು ರಣಾಂಗಣದಲ್ಲಿ ನೂರಾರು-ಸಾವಿರಾರು ಆನರ್ತದೇಶೀಯಯೋಧರನ್ನು ಸಂಹರಿಸಿ ಅಸುನೀಗಿದನು. ನಿನ್ನ ಮತ್ತೊಬ್ಬ ಮಗನಾದ ಶೂರನಾದ ವಿಕರ್ಣನು, ಕುದುರೆಗಳಿಂದಲೂ ಮತ್ತು ಆಯುಧಗಳಿಂದಲೂ ವಿಹೀನನಾಗಿದ್ದರೂ ಕ್ಷತ್ರಧರ್ಮವನ್ನೇ ಸ್ಮರಿಸುತ್ತಾ ಶತ್ರುಗಳೆದುರಿನಲ್ಲಿ ಅಚಲನಾಗಿಯೇ ನಿಂತಿದ್ದನು. ದುರ್ಯೋಧನನು ಕೊಟ್ಟ ಘೋರಕ್ಲೇಶಗಳನ್ನೂ ಮತ್ತು ಹಿಂದೆ ತಾನು ಮಾಡಿದ್ದ ಪ್ರತಿಜ್ಞೆಯನ್ನೂ ಸ್ಮರಿಸುತ್ತಲೇ ಇದ್ದ ಭೀಮಸೇನನು ನಿನ್ನ ಮಗನಾದ ವಿಕರ್ಣನನ್ನು ಸಂಹರಿಸಿದನು. ಮಹಾರಥರಾದ ಅವಂತಿಯ ರಾಜಕುಮಾರರಾದ ವಿಂದಾನುವಿಂದರು ಅತ್ಯಂತ ದುಷ್ಕರವಾದ ಸಾಹಸಕರ್ಮವನ್ನು ಮಾಡಿ (ಶತ್ರುಪಕ್ಷದ ಅನೇಕಯೋಧರನ್ನು ಸಂಹರಿಸಿ) ಯಮಾಲಯಕ್ಕೆ ಹೊರಟುಹೋದರು. ಸಿಂಧು- ಸೌವೀರಾದಿ ಹತ್ತು ರಾಷ್ಟ್ರಗಳು ಯಾವನ ಅಧೀನದಲ್ಲಿದ್ದುವೋ ಮತ್ತು ಯಾವನು ನಿನ್ನ ಆಜ್ಞೆಯನ್ನು ಅಕ್ಷರಶಃ ಪರಿಪಾಲಿಸುತ್ತಿದ್ದನೋ–ಅಂತಹ ಮಹಾವೀರನಾದ ಸಿಂಧುರಾಜನಾದ ಜಯದ್ರಥನನ್ನು ಅರ್ಜುನನು–ಆ ಸಮಯದಲ್ಲಿ ತನ್ನೆದುರಾಗಿ ಬಂದು ಹನ್ನೊಂದು ಅಕ್ಷೌಹಿಣೀಸೈನ್ಯವನ್ನೂ ನಿಶಿತವಾದ ಬಾಣಗಳಿಂದ ಪರಾಜಯಗೊಳಿಸಿ ಸಂಹರಿಸಿದನು.

ವೇಗಶಾಲಿಯಾದ, ಯುದ್ಧದುರ್ಮದನಾದ, ತಂದೆಯ ಶಾಸನಾನುಸಾರವಾಗಿಯೇ ನಡೆಯುತ್ತಿದ್ದ ದುರ್ಯೋಧನನ ಮಗನಾದ ಲಕ್ಷ್ಮಣನನ್ನು ಸುಭದ್ರೆಯ ಮಗನಾದ ಅಭಿಮನ್ಯುವು ಸಂಹರಿಸಿದನು. ಅದೇ ರೀತಿಯಲ್ಲಿ ಬಾಹುಬಲದಿಂದ ಸುಶೋಭಿತನಾಗಿದ್ದ, ರಣೋತ್ಕಟನಾದ, ದುಃಶಾಸನನ ಮಗನು ದ್ರೌಪದಿಯ ಮಗನೊಡನೆ ಸೆಣೆಸಿ ಅಸುನೀಗಿದನು. ಸಮುದ್ರ

ತೀರವಾಸಿಗಳಾದ ಕಿರಾತರ ಅಧಿಪತಿಯಾಗಿದ್ದ, ದೇವರಾಜನಾದ ಇಂದ್ರ ನಿಂದಲೂ ಸಮ್ಮಾನ್ಯನಾಗಿ ಅವನಿಗೆ ಅತ್ಯಂತಪ್ರಿಯಸಖನಾಗಿದ್ದ, ಕ್ಷತ್ರಧರ್ಮ ದಲ್ಲಿಯೇ ನಿರತನಾಗಿದ್ದ, ಧರ್ಮಾತ್ಮನಾದ ಮಹೀಪಾಲ ಭಗದತ್ತನು ಅರ್ಜುನನೊಡನೆ ನಡೆದ ಯುದ್ಧದಲ್ಲಿ ಅತುಲಪರಾಕ್ರಮವನ್ನು ತೋರಿಸಿ ಕಟ್ಟಕಡೆಗೆ ಅರ್ಜುನನಿಂದಲೇ ಹತನಾದನು. ಅದೇ ರೀತಿಯಲ್ಲಿ ಕೌರವರ ಜ್ಞಾತಿಯಾದ, ಮಹಾಯಶೋವಂತನಾದ, ಶೂರನಾದ ಭೂರಿಶ್ರವಸನು ಶಸ್ತ್ರ ಪರಿತ್ಯಾಗಮಾಡಿ ಸಾತ್ಯಕಿಯಿಂದ ಕೊಲ್ಲಲ್ಪಟ್ಟನು. ಕ್ಷತ್ರಿಯರ ರಕ್ಷಣಾ ಭಾರವನ್ನು ವಹಿಸಿ ನಿಂತಿದ್ದ, ಅಂಬಷ್ಠದೇಶೀಯನಾದ ಶ್ರುತಾಯುಷನು ಸ್ವಲ್ಪವಾದರೂ ಭಯವೇ ಇಲ್ಲದವನ ರೀತಿಯಲ್ಲಿ ಸಮರಾಂಗಣದ ಸುತ್ತಲೂ ಸಂಚರಿಸುತ್ತಾ ಅನೇಕಶತ್ರುಸೈನಿಕರನ್ನು ಸಂಹರಿಸಿ ಕಡೆಗೆ ಅರ್ಜುನನಿಂದ ಕೊಲ್ಲಲ್ಪಟ್ಟನು. ಸದಾಕಾಲದಲ್ಲಿಯೂ ಕೋಪಿಷ್ಠನಾಗಿಯೇ ಇರುತ್ತಿದ್ದ ಭೀಮಸೇನನು, ಅಸ್ತ್ರವಿದ್ಯಾಪಾರಂಗತನಾದ, ಯುದ್ಧದುರ್ಮದ ನಾದ ನಿನ್ನ ಮಗ ದುಃಶಾಸನನನ್ನು ಸಂಹರಿಸಿದನು. ಅದ್ಭುತಪರಾಕ್ರಮದಿಂದ ಕೂಡಿದ್ದ, ಅನೇಕಸಹಸ್ರ ಗಜಸೇನೆಗೆ ಒಡೆಯನಾಗಿದ್ದ ಸುದಕ್ಷಿಣನನ್ನು ಯುದ್ಧದಲ್ಲಿ ಸವ್ಯಸಾಚಿಯು ಸಂಹರಿಸಿದನು. ಕೋಸಲಾಧಿಪತಿಯು ಶತ್ರು ಪಕ್ಷದಲ್ಲಿದ್ದ ಮಾನ್ಯರಾದ ಅನೇಕಯೋಧರನ್ನು ಸಂಹರಿಸಿ ಅಭಿಮನ್ಯುವಿ ನೊಡನೆ ಪರಾಕ್ರಮದಿಂದ ಕಾದಾಡಿ ಕಡೆಗೆ ಅವನಿಂದಲೇ ಹತನಾದನು. ಮಹಾರಥನಾದ ಭೀಮಸೇನನೊಡನೆ ಹಲವು ಬಾರಿ ಯುದ್ಧದಲ್ಲಿ ತೊಡ ಗಿದ್ದ, ಶೂರನಾದ, ಶತ್ರುಗಳಿಗೆ ಭಯಂಕರನಾಗಿದ್ದ, ಕತ್ತಿ-ಗುರಾಣಿಗಳನ್ನು ಹಿಡಿದು ರಣರಂಗದಲ್ಲಿ ಸಂಚರಿಸುತ್ತಿದ್ದ, ಶ್ರೀಮಂತನಾದ ಶಲ್ಯನ ಮಗನು ಅಭಿಮನ್ಯುವಿನಿಂದ ಕೊಲ್ಲಲ್ಪಟ್ಟನು. ಯುದ್ಧದಲ್ಲಿ ಕರ್ಣನಿಗೆ ಸಮನಾಗಿ ಯುದ್ಧಮಾಡುತ್ತಿದ್ದ, ಮಹಾತೇಜಸ್ವಿಯಾದ, ಶೀಘ್ರಾಸ್ತ್ರನಾದ, ದೃಢಪರಾ ಕ್ರಮನಾದ ವೃಷಸೇನನು-ಅಭಿಮನ್ಯುವಿನ ವಧೆಯನ್ನೂ ಮತ್ತು ತಾನು ಆಗ ಮಾಡಿದ್ದ ಪ್ರತಿಜ್ಞೆಯನ್ನೂ ಸ್ಮರಿಸಿಕೊಂಡ ಅರ್ಜುನನೊಡನೆ ಪರಾಕ್ರಮದಿಂದ ಕಾದಾಡುತ್ತಾ ಕರ್ಣನ ಸಮ್ಮುಖದಲ್ಲಿಯೇ ಅರ್ಜುನನಿಂದ ಸಂಹರಿಸಲ್ಪಟ್ಟನು. ಪಾಂಡವರೊಡನೆ ಯಾವಾಗಲೂ ಶತ್ರುತ್ವದಿಂದಲೇ ಇದ್ದ, ಪೃಥಿವೀಪತಿ ಯಾದ ಶ್ರುತಾಯುಷನು ಅರ್ಜುನನೊಡನೆ ಯುದ್ಧದಲ್ಲಿ ತೊಡಗಿ ತನ್ನ

ವೈರಭಾವವನ್ನು ಬಾಣಗಳ ಪ್ರಯೋಗದ ಮೂಲಕವಾಗಿ ಪ್ರಕಟಪಡಿಸಿ ಕಡೆಗೆ ಅರ್ಜುನನ ಬಾಣಗಳಿಗೆ ಲಕ್ಷ್ಯನಾಗಿ ಕೆಳಗುರುಳಿದನು. ರುಕ್ಮರಥನೆಂಬುವನು ಸಹದೇವನ ಸೋದರಮಾವನಾದ ಶಲ್ಯನ ಪುತ್ರನು. ಸೋದರಮಾವನ ಮಗನಾದ, ಸೋದರಸಮಾನನಾದ, ಪರಾಕ್ರಮಿಯಾದ ಆ ರುಕ್ಮರಥನು ಸಹದೇವನಿಂದಲೇ ಹತನಾದನು.

ವೃದ್ಧನಾಗಿದ್ದ ಭಗೀರಥರಾಜನೂ ಮತ್ತು ಕೇಕಯನರೇಶನಾದ ಬೃಹತ್ಕ್ಷತ್ರನೂ ಮಹಾಪರಾಕ್ರಮಿಗಳಾಗಿದ್ದರು. ಮಹಾವೀರರಾಗಿದ್ದರು. ಅವರಿಬ್ಬರೂ ಯುದ್ಧದಲ್ಲಿ ಕಡೆಯವರೆಗೂ ಪರಾಕ್ರಮದಿಂದ ಕಾದಾಡಿ ಅಸುನೀಗಿದರು. ಮಹಾಬಲಿಷ್ಠನಾಗಿದ್ದ, ಪ್ರಾಜ್ಞನಾಗಿದ್ದ ಭಗದತ್ತನ ಮಗನು-ಗಿಡಗಹಕ್ಕಿಯಂತೆ ರಣಾಂಗಣದಲ್ಲಿ ಸಂಚರಿಸುತ್ತಿದ್ದ ನಕುಲನಿಂದ ಕೊಲ್ಲಲ್ಪಟ್ಟನು. ನಿನ್ನ ಪಿತಾಮಹನಾದ, ಮಹಾಬಲಪರಾಕ್ರಮನಾದ ಬಾಹ್ಲೀಕನು ಬಾಹ್ಲೀಕಸೈನ್ಯಸಮೇತನಾಗಿ ಭೀಮಸೇನನಿಂದ ಹತನಾದನು. ಮಹಾಬಲನಾದ, ಮಗಧರಾಜನಾದ, ಜರಾಸಂಧನ ಮಗನಾದ ಜಯತ್ಸೇನನು ಮಹಾತ್ಮನಾದ ಅಭಿಮನ್ಯುವಿನಿಂದ ಹತನಾದನು. ಮಹಾರಥರಾದ, ತಾವೇ ಮಹಾಶೂರರೆಂಬ ಅಭಿಮಾನವನ್ನು ತಳೆದಿದ್ದ ದುಃಸಹ ಮತ್ತು ದುರ್ಮುಖರು ಭೀಮಸೇನನ ಗದಾಪ್ರಹಾರಕ್ಕೆ ತುತ್ತಾಗಿ ಅಸುನೀಗಿದರು. ಮಹಾರಥರಾದ ದುರ್ವಿಷಹ, ದುರ್ಮರ್ಷಣ ಮತ್ತು ದುರ್ಜಯರು ಅತ್ಯಂತದುಷ್ಕರವಾದ ಸಂಹಾರಕಾರ್ಯವನ್ನು ಮಾಡಿ ವೈವಸ್ವತನ ಮನೆಗೆ ತೆರಳಿದರು. ಅಂತೆಯೇ ಯುದ್ಧದುರ್ಮದರಾದ, ಸಹೋದರರಾದ ಕಲಿಂಗ-ವೃಷಕರು ದುಷ್ಕರವಾದ ಶತ್ರುಸಂಹಾರಕಾರ್ಯವನ್ನು ಮಾಡಿ ಯಮನ ಅರಮನೆಗೆ ತೆರಳಿದರು. ಅತ್ಯಂತವೀರ್ಯಶಾಲಿಯಾದ, ಮಹಾಶೂರನಾದ, ನಿನ್ನ ಮಂತ್ರಿಯಾದ ವೃಷಕರ್ಮನು ಭೀಮಸೇನನೊಡನೆ ಪರಾಕ್ರಮದಿಂದ ಕಾದಾಡುತ್ತಿದ್ದು ಕಡೆಗೆ ಯಮಾಲಯವನ್ನು ಸೇರಿದನು. ಅದೇ ರೀತಿಯಲ್ಲಿ ಹತ್ತುಸಾವಿರ ಆನೆಗಳ ಬಲವನ್ನು ಹೊಂದಿದ್ದ, ಪೌರವಮಹಾರಾಜನು ಪಾಂಡುಪುತ್ರನಾದ ಅರ್ಜುನನಿಂದ ಕೊಲ್ಲಲ್ಪಟ್ಟನು. ಪ್ರಹಾರಕುಶಲರಾದ ಎರಡು ಸಾವಿರ ವಸಾತಿಯೋಧರೂ ಮತ್ತು ಮಹಾಪರಾಕ್ರಮಿಗಳಾದ ಶೂರಸೇನರು ಯುದ್ಧದಲ್ಲಿ ಪ್ರಾಣಗಳನ್ನು ತೊರೆದು ಕೆಳಗುರುಳಿದರು. ರಣೋನ್ಮತ್ತರಾಗಿ ಶತ್ರುಗಳನ್ನು ಸದೆಬಡಿಯು

ತ್ತಿದ್ದ, ಕವಚಧಾರಿಗಳಾದ ಅಭೀಷಾಹರೂ, ಶ್ರೇಷ್ಠರಥಿಗಳಾದ ಶಿಬಿಗಳೂ ಕಲಿಂಗರಾಜನೊಡನೆ ಅಸುನೀಗಿದರು. ಗೋಕುಲದಲ್ಲಿ ಹುಟ್ಟಿ ಬೆಳೆದಿದ್ದ, ಯುದ್ಧಸಮಯದಲ್ಲಿ ಮಹಾಕೋಪಿಷ್ಠರಾಗಿರುತ್ತಿದ್ದ, ಯುದ್ಧದಿಂದ ಹಿಂದಿರುಗುವುದೆಂಬುದನ್ನೇ ಕಾಣದಿದ್ದ ಗೋಪಾಲರೆಂಬ ಸೈನಿಕರು ಅರ್ಜುನನಿಂದ ಹತರಾದರು. ನಿನ್ನ ಕಡೆಯಲ್ಲಿ ಸಂಶಪ್ತಕಗಣಗಳ ಅನೇಕ ಸಾವಿರ ಸಾಲುಗಳೇ ಇದ್ದುವು. ಆ ಗಣಗಳೆಲ್ಲವೂ ಪಾರ್ಥನೊಡನೆ ಯುದ್ಧಕ್ಕೆ ಹೋಗಿ ನಿರ್ನಾಮಹೊಂದಿದುವು. ನಿನ್ನ ಭಾವಮೈದುನರಾದ ವೃಷಕ ಮತ್ತು ಅಚಲರಾಜರು ನಿನ್ನ ಸಲುವಾಗಿ ಅತ್ಯಂತಪರಾಕ್ರಮದಿಂದ ಯುದ್ಧ ಮಾಡುತ್ತಿದ್ದು ಸವ್ಯಸಾಚಿಯಿಂದ ಹತರಾದರು. ಮಹಾಧನುಷ್ಮಂತನಾದ, ಮಹಾಬಾಹುವಾದ, ಹೆಸರಿನಿಂದಲೂ ಮತ್ತು ಕರ್ಮದಿಂದಲೂ ಉಗ್ರಕರ್ಮನಾದ ಶಾಲ್ವರಾಜನು ಭೀಮಸೇನನಿಂದ ಹತನಾದನು. ಓಘವಂತ ಮತ್ತು ಬೃಹಂತರು ಒಟ್ಟಾಗಿ ಸೇರಿಕೊಂಡು ಮಿತ್ರನಾದ ದುರ್ಯೋಧನನ ಸಲುವಾಗಿ ಪರಾಕ್ರಮವನ್ನು ತೋರಿಸುತ್ತಾ ಶತ್ರುಸೈನ್ಯವನ್ನು ಅಪಾರಸಂಖ್ಯೆಯಲ್ಲಿ ಸಂಹರಿಸುತ್ತಿದ್ದು ಕೊನೆಯಲ್ಲಿ ಶತ್ರುಪಕ್ಷದ ವೀರಯೋಧರಿಂದ ಹತರಾದರು.

ಅದೇ ರೀತಿಯಲ್ಲಿ ರಥಿಗಳಲ್ಲಿ ಶ್ರೇಷ್ಠನಾದ ಕ್ಷೇಮಧೂರ್ತಿಯನ್ನು ರಣರಂಗದಲ್ಲಿ ಭೀಮಸೇನನು ಗದೆಯಿಂದ ಸಂಹರಿಸಿದನು. ಮಹಾಧನು ಷ್ಮಂತನಾದ, ಮಹಾಬಲನಾದ ಜಲಸಂಧನು ಶತ್ರುಪಕ್ಷದ ಸೈನಿಕರನ್ನು ಅಪಾರಸಂಖ್ಯೆಯಲ್ಲಿ ಸಂಹರಿಸಿ ಕಟ್ಟಕಡೆಗೆ ಸಾತ್ಯಕಿಯಿಂದ ಹತನಾದನು. ಕತ್ತೆಗಳಿಂದ ಕೂಡಿದ ಸುಂದರವಾದ ರಥವನ್ನು ಹೊಂದಿದ್ದ ರಾಕ್ಷಸೇಂದ್ರ ನಾದ ಅಲಂಬುಷನು ಘಟೋತ್ಕಚನೊಡನೆ ಪರಾಕ್ರಮದಿಂದ ಕಾದಾಡಿ ಮೃತನಾದನು. ಸೂತಪುತ್ರನಾದ ಕರ್ಣ, ಮಹಾರಥರಾದ ಅವನ ಅನು ಜರು ಮತ್ತು ಸಮಸ್ತಕೇಕಯರೂ ಅರ್ಜುನನಿಂದ ಹತರಾದರು. ಮಹಾರಾಜ! ನಿನ್ನ ಮಗನ ಸಹಾಯಕ್ಕಾಗಿ ಬಂದಿದ್ದ ಮಾಲವರು, ಮದ್ರಕರು, ಭಯಂಕರಕರ್ಮರಾದ ದ್ರಾವಿಡರು, ಯೌಧೇಯರು, ಲಲಿತ್ಥರು, ಕ್ಷುದ್ರ ಕರು, ಉಶೀನರರು, ಮಾವೇಲ್ಲಕರು, ತುಂಡಿಕೇರರು, ಸಾವಿತ್ರೀಪುತ್ರಕರು, ಪೂರ್ವದೇಶದವರು, ಪಾಶ್ಚಾತ್ತ್ಯರು, ಔತ್ತರೇಯರು, ದಾಕ್ಷಿಣಾತ್ಯರು–ಇವ ರೆಲ್ಲರೂ ಅರ್ಜುನನಿಂದ ಹತರಾದರು. ಕಾಲಾಳುಗಳ ಸಮೂಹಗಳು,

ಹತ್ತುಲಕ್ಷ ಕುದುರೆಗಳು, ಅನೇಕ ರಥಸಮೂಹಗಳು, ಶ್ರೇಷ್ಠವಾದ ಆನೆಗಳು-ಎಲ್ಲವೂ ಆ ಮಹಾಯುದ್ಧದಲ್ಲಿ ನಾಶಹೊಂದಿದುವು.

ಪಾಲನೆ-ಪೋಷಣೆಮಾಡುವುದರಲ್ಲಿ ನಿಪುಣರಾದವರಿಂದ ಸಾಕಿ-ಸಲಹಲ್ಪಟ್ಟಿದ್ದ, ತರಬೇತಿಹೊಂದಿದ್ದ, ಯುದ್ಧದಲ್ಲಿ ಜಯಗಳಿಸುವ ಸಲುವಾಗಿ ಬಹಳವಾಗಿ ಪ್ರಯತ್ನಿಸುತ್ತಿದ್ದ ಶೂರಯೋಧರು, ಅನಾಯಾಸವಾಗಿ ಮಹಾ ಕಾರ್ಯವನ್ನು ಸಾಧಿಸುವ ಸಾಮರ್ಥ್ಯವಿದ್ದ ಅರ್ಜುನನಿಂದ ಧ್ವಜಾಯುಧ-ಕವಚ-ವಸ್ತ್ರಾಭರಣಗಳೊಡನೆ ಹತರಾದರು. ಇವರಲ್ಲದೇ ಪರಸ್ಪರ ಸಂಹಾರದಲ್ಲಿ ಉತ್ಕಟೇಚ್ಛೆಯನ್ನು ಹೊಂದಿದ್ದ, ಮಹಾಬಲಿಷ್ಠರಾದ ಇನ್ನೂ ಅನೇಕಯೋಧರು ಹತರಾದರು. ಹತರಾದವರ ಸಂಖ್ಯೆಯು ಅಪರಿಮಿತ ಮತ್ತು ಅವರ್ಣನೀಯ. ಮಹಾರಾಜ! ನೀನು ಕೇಳಿದುದಕ್ಕೆ ಇಷ್ಟುಮಾತ್ರ ಹೇಳಿದ್ದೇನೆ. ಹೀಗೆ ಕರ್ಣಾರ್ಜುನರ ಯುದ್ಧಸಮಯದಲ್ಲಿ ಅಪಾರವಾದ ಸಂಖ್ಯೆಯಲ್ಲಿ ಸೈನಿಕರ ಕ್ಷಯವಾಯಿತು.

ಮಹೇನ್ದ್ರೇಣ ಯಥಾ ವೃತ್ರೋ ಯಥಾ ರಾಮೇಣ ರಾವಣಃ ॥<br>
ಯಥಾ ಕೃಷ್ಣೇನ ನರಕೋ ಮುರಶ್ಚ ನರಕಾರಿಣಾ ।<br>
ಕಾರ್ತವೀರ್ಯಶ್ಚ ರಾಮೇಣ ಭಾರ್ಗವೇಣ ಯಥಾ ಹತಃ ॥೫೪॥<br>
ಸಜ್ಞಾತಿಬಾನ್ಧವಃ ಶೂರಃ ಸಮರೇ ಯುದ್ಧದುರ್ಮದಃ ।<br>
ರಣೇ ಕೃತ್ವಾ ಮಹದ್ಯುದ್ಧಂ ಘೋರಂ ತ್ರೈಲೋಕ್ಯಮೋಹನಮ್ ॥<br>
ಯಥಾ ಸ್ಕನ್ದೇನ ಮಹಿಷೋ ಯಥಾ ರುದ್ರೇಣ ಚಾನ್ಧಕಃ ।<br>
ತಥಾರ್ಜುನೇನ ಸ ಹತೋ ದ್ವೈರಥೇ ಯುದ್ಧದುರ್ಮದಃ ।<br>
ಸಾಮಾತ್ಯಬಾನ್ಧವೋ ರಾಜನ್ಕರ್ಣಃ ಪ್ರಹರತಾಂ ವರಃ ॥೫೬॥

ಜ್ಞಾತಿ-ಬಾಂಧವರೊಡಗೂಡಿದ್ದ, ಶೂರನಾದ, ಯುದ್ಧದುರ್ಮದನಾಗಿದ್ದ ಕರ್ಣನು-ಮೂರು ಲೋಕಗಳನ್ನೂ ಭ್ರಾಂತಿಗೊಳಿಸುವಂತಹ ಘೋರವಾದ ಯುದ್ಧವನ್ನು ಮಾಡಿ ಅಮಾತ್ಯ-ಬಂಧುಗಳೊಡನೆ-ವೃತ್ರನು ಇಂದ್ರನಿಂದಲೂ, ರಾವಣನು ರಾಮನಿಂದಲೂ, ನರಕ ಮತ್ತು ಮುರರೆಂಬ ರಾಕ್ಷಸರು ಶ್ರೀಕೃಷ್ಣನಿಂದಲೂ, ಕಾರ್ತವೀರ್ಯನು ಭಾರ್ಗವರಾಮ

ನಿಂದಲೂ ಹತರಾದಂತೆ ಅರ್ಜುನನಿಂದ ದ್ವೈರಥಯುದ್ಧದಲ್ಲಿ ಹತ ನಾದನು.

ಕೌರವೇಶ್ವರ! ಕೌರವರಿಗೆ ಯಾವ ಕರ್ಣನಲ್ಲಿ ಜಯಗಳಿಸುವ ಆಶೆಯಿದ್ದಿತೋ, ಯಾವ ಕರ್ಣನು ಪಾಂಡವ-ಕೌರವರ ವೈರಕ್ಕೆ ಮುಖ್ಯಕಾರಣನಾಗಿದ್ದನೋ–ಆ ಕರ್ಣನು ಅರ್ಜುನನಿಂದ ಹತನಾದನು. ಕೌರವರ ವೈರಕ್ಕೆ ಯುದ್ಧವು ಪ್ರತೀಕರೂಪದಲ್ಲಿದ್ದಿತು. ಅಂತಹ ಯುದ್ಧಸಾಗರ ವನ್ನು ಪಾಂಡವರು ದಾಟಿಬಿಟ್ಟರು. ಉಭಯಪಕ್ಷಗಳ ಹಿತಾಕಾಂಕ್ಷಿಗಳಾದ ಬಂಧುಗಳು ನಿನಗೆ ಈ ವಿಷಯವನ್ನು ಹಿಂದೆ ಹಲವು ಬಾರಿ ಹೇಳಿದ್ದರೂ ನೀನು ಆ ಹಿತೋಕ್ತಿಗಳ ಕಡೆಗೆ ಗಮನಕೊಡಲಿಲ್ಲ. ಅಂದು ನೀನು ಮಹಾಪುರುಷರ ಹಿತೋಕ್ತಿಗಳಿಗೆ ಔದಾಸೀನ್ಯವನ್ನು ತೋರಿದುದರ ಫಲವಾಗಿಯೇ ಇಂದು ಮಹಾವಿನಾಶಕರವಾದ ಈ ವ್ಯಸನವು ಪ್ರಾಪ್ತವಾಗಿದೆ. ರಾಜ್ಯಲೋಭಿಗಳಾದ ನಿನ್ನ ಮಕ್ಕಳ ಹಿತದಲ್ಲಿಯೇ ಅತ್ಯಂತಾಸಕ್ತನಾದ ನೀನು ಪಾಂಡವರ ವಿಷಯದಲ್ಲಿ ಅಹಿತವಾದ ಅನೇಕಕಾರ್ಯಗಳನ್ನೇ ಮಾಡಿರುವೆ. ಅದರ ದುಷ್ಫಲವು ಇದೀಗ ಪ್ರಾಪ್ತವಾಗಿದೆ.”

೫ನೆಯ ಅಧ್ಯಾಯವು ಮುಗಿಯಿತು.

೬ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕೌರವರು ಸಂಹರಿಸಿದ ಪಾಂಡವಯೋಧರ ನಾಮಧೇಯಗಳನ್ನು ಸಂಜಯನು ಧೃತರಾಷ್ಟ್ರನಿಗೆ ವಿವರಿಸಿದುದು.

(ತನ್ನ ಪಕ್ಷದಲ್ಲಿ ಮುಖ್ಯ-ಮುಖ್ಯರಾದ ಯಾವ-ಯಾವ ಯೋಧರು ಹತರಾದರೆಂಬುದನ್ನು ಸಂಜಯನಿಂದ ತಿಳಿದುಕೊಂಡಬಳಿಕ ಧೃತರಾಷ್ಟ್ರನು ಪಾಂಡವರ ಕಡೆಯಲ್ಲಿ ಯಾವ-ಯಾವ ಪ್ರಮುಖಯೋಧರು ಹತರಾದ ರೆಂಬ ಬಗೆಗೆ ವಿವರಣೆಯನ್ನು ಕೇಳುತ್ತಾನೆ.)

“ಮಗು ಸಂಜಯ! ನಮ್ಮ ಕಡೆಯಲ್ಲಿ ಯಾವ-ಯಾವ ಮುಖ್ಯಯೋಧರು ಪಾಂಡವರಿಂದ ಹತರಾದರೆಂಬುದನ್ನು ಹೇಳಿದೆ. ಮುಂದೆ ನಮ್ಮ ಕಡೆಯವರಿಂದ ಪಾಂಡವರ ಕಡೆಯ ಯಾವ-ಯಾವ ಪ್ರಮುಖರು ಹತರಾದರೆಂಬುದನ್ನೂ ಹೇಳು.”

"ಮಹಾರಾಜ! ಗಂಗಾಪುತ್ರನಾದ ಭೀಷ್ಮನು ಮಹಾಪರಾಕ್ರಮಿಗಳಾದ, ಮಹಾಸತ್ತ್ವಶಾಲಿಗಳಾದ, ಮಹಾಬಲರಾದ ಕುಂತೀಯೋಧರನ್ನು (ಕುಂತೀ ಭೋಜನ ದೇಶದ ಯೋಧರನ್ನು) ಅಮಾತ್ಯ-ಬಂಧುಗಳ ಸಮೇತವಾಗಿಯೇ ಸಂಹರಿಸಿದನು. ಭೀಷ್ಮನು ಪಾಂಡವರಲ್ಲಿ ಬಹಳ ಅನುರಕ್ತರಾಗಿದ್ದ, ಮಹಾ ಶೂರರಾಗಿದ್ದ ನಾರಾಯಣರೆಂಬ ಮತ್ತು ಬಲಭದ್ರರೆಂಬ ನೂರಾರು ಯೋಧರನ್ನು ಯುದ್ಧದಲ್ಲಿ ಸಂಹರಿಸಿದನು. ವೀರ್ಯದಲ್ಲಿಯೂ ಮತ್ತು ಬಲದಲ್ಲಿಯೂ ಅರ್ಜುನನಿಗೆ ಸಮಾನನಾಗಿದ್ದ ಸತ್ಯಜಿತನನ್ನು ಸತ್ಯಸಂಧರಾದ ದ್ರೋಣರು ಯುದ್ಧದಲ್ಲಿ ಸಂಹರಿಸಿದರು. ಯುದ್ಧವಿಶಾರದರಾದ, ಮಹಾ ಧನುಷ್ಮಂತರಾದ ಎಲ್ಲ ಪಾಂಚಾಲಯೋಧರೂ ದ್ರೋಣರೊಡನೆ ಯುದ್ಧದಲ್ಲಿ ತೊಡಗಿ ಪ್ರಾಣಗಳನ್ನು ತೊರೆದರು. ಅದೇ ರೀತಿಯಲ್ಲಿ ವೃದ್ಧರಾಗಿದ್ದ, ಮಿತ್ರ-ಬಂಧುಗಳಾದ, ಪಾಂಡವರ ಸಲುವಾಗಿ ಅತ್ಯಂತಪರಾಕ್ರಮದಿಂದ ಯುದ್ಧಮಾಡುತ್ತಿದ್ದ ವಿರಾಟ-ದ್ರುಪದರನ್ನೂ ಅವರ ಮಕ್ಕಳ ಸಹಿತವಾಗಿ ದ್ರೋಣರೇ ಸಂಹರಿಸಿದರು. ಬಾಲನಾಗಿದ್ದರೂ ಅಭಿಮನ್ಯುವು ಯುದ್ಧದಲ್ಲಿ ಅರ್ಜುನ-ಕೃಷ್ಣ-ಬಲಭದ್ರರಿಗೆ ಸಮಾನನೆನಿಸಿದ್ದನು. ದುರ್ಧರ್ಷನಾಗಿದ್ದನು. ಮಹಾರಥನಾದ, ಯುದ್ಧವಿಶಾರದನಾದ ಅಭಿಮನ್ಯುವು ಶತ್ರುಗಳನ್ನು ಅಪಾರಸಂಖ್ಯೆಯಲ್ಲಿ ಸಂಹರಿಸಿ, ಅರ್ಜುನನನ್ನು ಎದುರಿಸಲು ಅಸಮರ್ಥ ರಾದ ಆರು ಮಂದಿ ಮಹಾ-ಮಹಾರಥರಿಂದ ಸುತ್ತುವರಿಯಲ್ಪಟ್ಟು ಆ ಮಹಾರಥರ ಸತತಪ್ರಯತ್ನದಿಂದ ಆಪತ್ತಿನಲ್ಲಿ ದೂಡಲ್ಪಟ್ಟನು. ರಥಹೀನನಾಗಿ ಮಾಡಲ್ಪಟ್ಟಿದ್ದರೂ ಕ್ಷತ್ರಿಯಧರ್ಮಾನುಸಾರವಾಗಿ ಶತ್ರುಗಳನ್ನು ಎದುರಿಸುತ್ತಲೇ ಇದ್ದ ಅಭಿಮನ್ಯುವನ್ನು ದುಃಶಾಸನನ ಮಗನು ಸಂಹರಿಸಿದನು. ಶತ್ರುಸಂಹಾರಕನಾದ ಅಂಬಷ್ಠನ ಶ್ರೀಮಂತಪುತ್ರನು ದೊಡ್ಡದಾದ ಸೈನ್ಯದಿಂದ ಪರಿವೃತನಾಗಿ, ಮಿತ್ರರಾದ ಪಾಂಡವರ ಸಲುವಾಗಿ ರಣರಂಗದಲ್ಲಿ ಪರಾಕ್ರಮವನ್ನು ತೋರಿಸುತ್ತಾ, ಅಪಾರಸಂಖ್ಯೆಯಲ್ಲಿ ಶತ್ರುಪಕ್ಷದ ಸೈನಿಕರನ್ನು ಸಂಹಾರಮಾಡಿ ಕಟ್ಟಕಡೆಗೆ ದುರ್ಯೋಧನನ ಮಗನಾದ, ವೀರನಾದ ಲಕ್ಷ್ಮಣನೊಡನೆ ಯುದ್ಧದಲ್ಲಿ ತೊಡಗಿ ಅವನಿಂದ ಹತನಾದನು.

ಮಹಾಧನುಷ್ಮಂತನಾದ, ಅಸ್ತ್ರವಿದ್ಯಾವಿಶಾರದನಾದ, ಯುದ್ಧ

ದುರ್ಮದನಾದ ಬೃಹಂತನನ್ನು ದುಃಶಾಸನನು ಅತುಲಪರಾಕ್ರಮವನ್ನು ತೋರಿ ಯಮನ ಮನೆಗೆ ಕಳುಹಿಸಿಕೊಟ್ಟನು. ಯುದ್ಧದುರ್ಮದರಾದ, ಮಿತ್ರರ ಸಲುವಾಗಿ ಅತುಲಪರಾಕ್ರಮದಿಂದ ರಣರಂಗದಲ್ಲಿ ಶತ್ರುಗಳೊಡನೆ ಕಾದಾಡುತ್ತಿದ್ದ ಮಣಿಮಂತ ಮತ್ತು ದಂಡಧಾರರಾಜರನ್ನು ದ್ರೋಣರು ಯುದ್ಧದಲ್ಲಿ ಸಂಹರಿಸಿದರು. ಮಹಾಸೈನ್ಯದೊಡನಿದ್ದ, ಮಹಾರಥನಾದ, ಭೋಜರಿಗೆ ರಾಜನಾದ ಅಂಶುಮಂತನನ್ನೂ ದ್ರೋಣರು ತಮ್ಮ ಪರಾಕ್ರಮದಿಂದ ಯಮಾಲಯಕ್ಕೆ ಕಳುಹಿಸಿದರು. ಸಮುದ್ರತೀರಪ್ರದೇಶದಲ್ಲಿರುವ ರಾಜ್ಯಗಳಿಗೆ ಅಧಿಪತಿಯಾದ ಪುತ್ರಸಹಿತನಾದ ಚಿತ್ರಸೇನನನ್ನು ಸಮುದ್ರಸೇನನು ಬಲಪೂರ್ವಕವಾಗಿ ಯುದ್ಧಮಾಡಿ ಯಮಾಲಯಕ್ಕೆ ಕಳುಹಿಸಿದನು. ಅಶ್ವತ್ಥಾಮನು ಸಮುದ್ರತೀರವಾಸಿಯಾದ ನೀಲನನ್ನೂ, ವಿಕರ್ಣನು ಪರಾಕ್ರಮಿಯಾದ ವ್ಯಾಘ್ರದತ್ತನನ್ನೂ ಸಂಹರಿಸಿದರು. ಚಿತ್ರ-ವಿಚಿತ್ರವಾಗಿ ಯುದ್ಧಮಾಡುವುದರಲ್ಲಿ ಪರಿಶ್ರಮವನ್ನು ಹೊಂದಿದ್ದ ಚಿತ್ರಾಯುಧನು ಚಿತ್ರಮಾರ್ಗದಿಂದ ಶತ್ರುಪಕ್ಷದ ಅನೇಕಸೈನಿಕರನ್ನು ಸಂಹರಿಸಿ ಕಟ್ಟಕಡೆಗೆ ವಿಕರ್ಣನಿಂದ ಹತನಾದನು. ಕೇಕಯದೇಶೀಯ ಯೋಧರಿಂದ ಪರಿವೃತನಾಗಿದ್ದ, ಯುದ್ಧದಲ್ಲಿ ವೃಕೋದರನಿಗೆ ಸಮಾನನಾಗಿದ್ದ ಕೇಕಯರಾಜಕುಮಾರನು ನಮ್ಮ ಪಕ್ಷದಲ್ಲಿದ್ದ ಅವನ ಸಹೋದರನಾದ ಕೇಕಯರಾಜಕುಮಾರನಿಂದಲೇ ಹತನಾದನು. ಗದಾಯುದ್ಧದಲ್ಲಿ ಬಹಳ ಕುಶಲನಾಗಿದ್ದ, ಪ್ರತಾಪವಂತನಾದ, ಪರ್ವತಪ್ರದೇಶದ ರಾಜ್ಯಗಳಿಗೆ ರಾಜನಾಗಿದ್ದ ಜನಮೇಜಯನನ್ನು ನಿನ್ನ ಮಗನಾದ ದುರ್ಮುಖನು ಸಂಹರಿಸಿದನು. ದ್ರೋಣರು ಪ್ರಕಾಶಮಾನವಾದ ಎರಡು ಗ್ರಹಗಳಂತಿದ್ದ (ಸೂರ್ಯ-ಚಂದ್ರರಂತಿದ್ದ) ರೋಚಮಾನ ಎಂಬ ಒಂದೇ ಹೆಸರಿನ ನರಶ್ರೇಷ್ಠರಾದ ಇಬ್ಬರು ರಾಜಕುಮಾರರನ್ನು ಏಕಕಾಲದಲ್ಲಿ ಕೆಳಗುರುಳಿಸಿ ಸ್ವರ್ಗಕ್ಕೆ ಕಳುಹಿಸಿಕೊಟ್ಟರು. ಮಹಾಪರಾಕ್ರಮಿಗಳಾದ ಅನೇಕರಾಜರು ನಿನ್ನ ಸೈನ್ಯಕ್ಕೆ ಅಭಿಮುಖವಾಗಿ ನಿಂತು ಯುದ್ಧಮಾಡುತ್ತಾ ಕಷ್ಟಸಾಧ್ಯವಾದ ಸಂಹಾರಕಾರ್ಯವನ್ನು ಮಾಡಿ ಕಡೆಗೆ ಅವರೆಲ್ಲರೂ ಯಮನ ಮನೆಗೆ ತೆರಳಿದರು. ಅರ್ಜುನನ ಸೋದರಮಾವಂದಿರಾದ ಪುರುಜಿತ್ ಮತ್ತು ಕುಂತೀಭೋಜರು, ದ್ರೋಣರ ಬಾಣಗಳಿಂದ, ಯುದ್ಧದಿಂದ ಜಯಿಸಲ್ಪಡುವ ಪುಣ್ಯಲೋಕಗಳಿಗೆ ಕಳುಹಿಸಲ್ಪಟ್ಟರು. ಕಾಶಿರಾಜ

ನಾದ ಅಭಿಭೂ ಎಂಬುವನು ಕಾಶೀವಾಸಿಗಳಾದ ಅನೇಕಯೋಧರಿಂದ ಪರಿವೃತನಾಗಿ ನಿನ್ನ ಸೈನಿಕರೊಡನೆ ಯುದ್ಧಮಾಡುತ್ತಿದ್ದು ಕೊನೆಗೆ ವಸುದಾನನ ಮಗನಿಂದ ದೇಹಾವಸಾನಹೊಂದಿದನು. ಅಮಿತೌಜಸ, ಯುಧಾಮನ್ಯು, ಮತ್ತು ಮಹಾಪರಾಕ್ರಮಿಯಾದ ಉತ್ತಮೌಜಸ–ಈ ಮೂವರೂ ನಮ್ಮ ಪಕ್ಷದಲ್ಲಿದ್ದ ನೂರಾರು ಯೋಧರನ್ನು ಸಂಹರಿಸಿ ಅಂತಿಮವಾಗಿ ನಮ್ಮ ಕಡೆಯ ವೀರಯೋಧರಿಂದ ಹತರಾದರು. ಪಾಂಚಾಲಯೋಧರಾದ, ಮಹಾಧನುಷ್ಮಂತರಾದ ಮಿತ್ರವರ್ಮಾ ಮತ್ತು ಕ್ಷತ್ರಧರ್ಮರನ್ನು ದ್ರೋಣರು ಸಂಹರಿಸಿ ಯಮಾಲಯಕ್ಕೆ ಕಳುಹಿಸಿದರು. ಶಿಖಂಡಿಯ ಮಗನಾದ, ಯೋಧರಿಗೆ ಪತಿಯಾದ ಕ್ಷತ್ರದೇವನನ್ನು ನಿನ್ನ ಮೊಮ್ಮಗನಾದ ಲಕ್ಷ್ಮಣನು ಸಂಹರಿಸಿದನು.

ಮಹಾರಥರಾದ, ಮಹಾವೀರರಾದ, ರಣಾಂಗಣದಲ್ಲಿ ಶತ್ರುಯೋಧರನ್ನು ಸಂಹರಿಸುತ್ತಾ ಸಂಚರಿಸುತ್ತಿದ್ದ ಸುಚಿತ್ರನೆಂಬ ತಂದೆಯನ್ನೂ-ಚಿತ್ರವರ್ಮನೆಂಬ ಅವನ ಮಗನನ್ನೂ ದ್ರೋಣರು ಸಂಹರಿಸಿದರು. ಪರ್ವಸಮಯದಲ್ಲಿ (ಪೂರ್ಣಿಮೆಯ ದಿವಸ) ಸಮುದ್ರವು ಉಕ್ಕಿಬರುವಂತೆ–ಯುದ್ಧದಲ್ಲಿ ದಿನ-ದಿನಕ್ಕೂ ವೃದ್ಧಿಹೊಂದುತ್ತಿದ್ದ ವೃದ್ಧಕ್ಷೇಮನ ಮಗನು ಕಟ್ಟಕಡೆಗೆ ನಿರಾಯುಧನಾಗಿ (ತನ್ನ ಆಯುಧಗಳು ಮುಗಿದುಹೋಗಲು) ನಮ್ಮ ಕಡೆಯವರಿಂದ ಹತನಾಗಿ ಚಿರಶಾಂತಿಯನ್ನು ಹೊಂದಿದನು. ಸೇನಾಬಿಂದುವಿನ ಶ್ರೇಷ್ಠಪುತ್ರನು ಶತ್ರುಸೈನಿಕರನ್ನು ಯುದ್ಧದಲ್ಲಿ ಸದೆಬಡಿಯುತ್ತಿದ್ದು ಕಡೆಗೆ ಕೌರವೇಂದ್ರನಾದ ಬಾಹ್ಲೀಕನಿಂದ ಕೊಲ್ಲಲ್ಪಟ್ಟನು. ಚೇದಿಗಳಲ್ಲಿ ಶ್ರೇಷ್ಠನಾದ, ಮಹಾರಥನಾದ, ಧೃಷ್ಟಕೇತುವು ದುಷ್ಕರವಾದ ಶತ್ರುಸಂಹಾರಕಾರ್ಯವನ್ನು ಮಾಡಿ ಕಡೆಗೆ ನಮ್ಮ ಕಡೆಯ ಯೋಧರಿಂದ ಯಮಾಲಯಕ್ಕೆ ಕಳುಹಿಸಲ್ಪಟ್ಟನು. ವೀರನಾದ ಸತ್ಯಧೃತಿಯು ಪಾಂಡವರ ಸಲುವಾಗಿ ಪರಾಕ್ರಮವನ್ನು ತೋರುತ್ತಾ ಅನೇಕಸೈನಿಕರನ್ನು ಸಂಹರಿಸಿ ಕಡೆಗೆ ನಮ್ಮ ಯೋಧರಿಂದ ಯಮಾಲಯಕ್ಕೆ ಕಳುಹಿಸಲ್ಪಟ್ಟನು. ಸೇನಾಬಿಂದುವೂ ಅನೇಕ ಶತ್ರುಸೈನಿಕರನ್ನು ಸಂಹರಿಸಿ ಕಾಲಪರವಶನಾದನು. ಪೃಥಿವೀಪತಿಯಾದ, ಶಿಶುಪಾಲನ ಮಗನಾದ

ಸುಕೇತುವು ಯುದ್ಧದಲ್ಲಿ ಅನೇಕ ಶತ್ರುಸೈನಿಕರನ್ನು ಸಂಹರಿಸಿ ಕಟ್ಟಕಡೆಗೆ ದ್ರೋಣರಿಂದ ಕೊಲ್ಲಲ್ಪಟ್ಟನು. ಅದೇ ರೀತಿಯಲ್ಲಿ ವೀರನಾದ ಸತ್ಯಧೃತಿ, ಪರಾಕ್ರಮಶಾಲಿಯಾದ ಮದಿರಾಶ್ವ, ವಿಕ್ರಾಂತನಾದ ಸೂರ್ಯದತ್ತ–ಇವರುಗಳು ದ್ರೋಣರ ಬಾಣಗಳಿಂದ ಕೊಲ್ಲಲ್ಪಟ್ಟರು. ಮಹಾಪರಾಕ್ರಮಿಯಾದ ಶ್ರೇಣಿಮಂತನು ಯುದ್ಧಮಾಡುತ್ತಾ ದುಷ್ಕರವಾದ ಶತ್ರುಸಂಹಾರಕಾರ್ಯವನ್ನು ಮಾಡಿ ಕಡೆಗೆ ಶತ್ರುಗಳಿಂದ ವಧಿಸಲ್ಪಟ್ಟು ವೈವಸ್ವತನ ಮನೆಗೆ ಹೊರಟುಹೋದನು. ಅದೇ ರೀತಿಯಲ್ಲಿ ಶತ್ರುವೀರಹಂತಕನಾದ, ಶ್ರೇಷ್ಠವಾದ ಅಸ್ತ್ರಗಳನ್ನು ತಿಳಿದುಕೊಂಡಿದ್ದ, ಮಹಾಪರಾಕ್ರಮಿಯಾದ ಮಾಗಧನು ಭೀಷ್ಮನಿಂದ ಕೊಲ್ಲಲ್ಪಟ್ಟು ರಣಾಂಗಣದಲ್ಲಿ ಶಾಂತನಾಗಿ ಮಲಗಿದ್ದಾನೆ. ವಿರಾಟನ ಮಗನಾದ ಶಂಖನೂ ಮತ್ತು ಮಹಾರಥನಾದ ಉತ್ತರನೂ ದುಷ್ಕರವಾದ ಸಂಹಾರಕಾರ್ಯವನ್ನು ಮಾಡುತ್ತಾ ಕಡೆಗೆ ಶತ್ರುಗಳಿಂದ ವಧಿಸಲ್ಪಟ್ಟವರಾಗಿ ಯಮನ ಅರಮನೆಗೆ ತೆರಳಿದರು. ಅಪರಿಮಿತಸಂಖ್ಯೆಯಲ್ಲಿ ಸೈನಿಕರನ್ನು ಸಂಹರಿಸುತ್ತಿದ್ದ ವಸುದಾನನನ್ನು ದ್ರೋಣರು ಪರಾಕ್ರಮವನ್ನು ತೋರಿಸಿ ಯಮಾಲಯಕ್ಕೆ ಕಳುಹಿಸಿಕೊಟ್ಟರು. ಮಹಾರಾಜ! ಇವರೇ ಅಲ್ಲದೇ ಇನ್ನೂ ಅನೇಕ ಪಾಂಡವಮಹಾರಥರು ದ್ರೋಣರಿಂದ ಬಲಪೂರ್ವಕವಾಗಿ ಕೊಲ್ಲಲ್ಪಟ್ಟರು. ನೀನು ನನ್ನನ್ನು ಪ್ರಶ್ನಿಸಿದುದಕ್ಕೆ ಈ ವಿವರಣೆಯನ್ನು ನಿನಗಿತ್ತಿದ್ದೇನೆ."

೬ನೆಯ ಅಧ್ಯಾಯವು ಮುಗಿಯಿತು.

೭ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕೌರವಪಕ್ಷದಲ್ಲಿ ಅಳಿದು ಉಳಿದಿದ್ದವರ ವರ್ಣನೆ: ಧೃತರಾಷ್ಟ್ರನ ಮೂರ್ಛೆ

ಚಿಂತಾಯುಕ್ತನಾಗಿದ್ದ ಧೃತರಾಷ್ಟ್ರನು ಸಂಜಯನನ್ನು ಕುರಿತು ಹೇಳುತ್ತಾನೆ:

"ಸಂಜಯ! ಪ್ರಧಾನಭೂತರಾದ ಭೀಷ್ಮ-ದ್ರೋಣ-ಕರ್ಣರೇ ಹತ

ರಾದ ನಂತರ ಹತದರ್ಪರಾದ ನನ್ನ ಸೈನಿಕರ ಅವಶೇಷವು ಉಳಿಯುವುದೆಂಬುದನ್ನು ನಾನು ಕಾಣುತ್ತಿಲ್ಲ. ಕುರುಶ್ರೇಷ್ಠರಾದ, ಮಹಾಧನುಷ್ಮಂತರಾದ ಭೀಷ್ಮ-ದ್ರೋಣರು ನನ್ನ ಸಲುವಾಗಿ ಯುದ್ಧಮಾಡುತ್ತಾ ಪ್ರಾಣ ತೊರೆದರೆಂಬ ವಾರ್ತೆಯನ್ನು ಕೇಳಿದನಂತರ ಇಂತಹ ಅಧಮಜೀವನವನ್ನು ಉಳಿಸಿಕೊಂಡಿರುವುದರಿಂದ ಯಾವ ಪ್ರಯೋಜನವೂ ಇಲ್ಲ. ಯಾವನ ಬಾಹುಗಳ ಬಲವು ಹತ್ತು ಸಾವಿರ ಆನೆಗಳ ಬಲಕ್ಕೆ ಸಮಾನವಾಗಿದ್ದಿತೋ ಅಂತಹ ಅಹವಶೋಭಿಯಾದ ಕರ್ಣನು ಹತನಾದ ವಾರ್ತೆಯನ್ನು ಸಹಿಸಿಕೊಳ್ಳಲು ನನ್ನಿಂದ ಸಾಧ್ಯವಾಗುತ್ತಿಲ್ಲ. ಸಂಜಯ! ನೀನು ನನ್ನ ಸೈನ್ಯದಲ್ಲಿ ಹತರಾದ ಯೋಧಶ್ರೇಷ್ಠರುಗಳಾರೆಂಬುದನ್ನು ವಿವರಿಸಿ ಹೇಳಿದೆ. ಈಗ ಮತ್ತಾರಾದರೂ ಶ್ರೇಷ್ಠಯೋಧರು ನನ್ನ ಸೈನ್ಯದಲ್ಲಿ ಜೀವಂತರಾಗಿ ಉಳಿದಿರುವುದಾದರೆ, ಸಾಯದೇ ಬದುಕಿರುವ ಆ ಯೋಧರು ಯಾರೆಂಬುದನ್ನು ನನಗೆ ತಿಳಿಸು.

ಏತೇಷು ಹಿ ಮೃತೇಷ್ವದ್ಯ ಯೇ ತ್ವಯಾ ಪರಿಕೀರ್ತಿತಾಃ ।
ಯೇಽಪಿ ಜೀವನ್ತಿ ತೇ ಸರ್ವೇ ಮೃತಾ ಇತಿ ಮತಿರ್ಮಮ ॥೫॥

ನಿನ್ನಿಂದ ವಿವರಿಸಲ್ಪಟ್ಟ ಆ ಪ್ರಮುಖಯೋಧರೇ ಮೃತರಾದರೆಂದ ಮೇಲೆ ಈಗ ಜೀವಂತರಾಗಿರುವವರೂ ಸತ್ತವರ ಕೂಟಕ್ಕೇ ಸೇರಿದ್ದಾರೆಂಬುದೇ ನನ್ನ ಭಾವನೆಯಾಗಿದೆ."

ಯಸ್ಮಿನ್ಮಹಾಸ್ತ್ರಾಣಿ ಸಮರ್ಪಿತಾನಿ
ಚಿತ್ರಾಣಿ ಶುಭ್ರಾಣಿ ಚತುರ್ವಿಧಾನಿ ।
ದಿವ್ಯಾನಿ ರಾಜನ್ವಿಹಿತಾನಿ ಚೈವ
ದ್ರೋಣೇನ ವೀರೇ ದ್ವಿಜಸತ್ತಮೇನ ॥೬॥

ಮಹಾರಥಃ ಕೃತಿಮಾನ್ ಕ್ಷಿಪ್ರಹಸ್ತೋ
ದೃಢಾಯುಧೋ ದೃಢಮುಷ್ಟಿರ್ದೃಢೇಷುಃ ।
ಸ ವೀರ್ಯವಾನ್ದ್ರೋಣಪುತ್ರಸ್ತರಸ್ವೀ
ವ್ಯವಸ್ಥಿತೋ ಯೋದ್ಧುಕಾಮಸ್ತ್ವದರ್ಥೇ ॥೭॥

"ಮಹಾರಾಜ! ನಿನ್ನ ಆಜ್ಞೆಯಂತೆಯೇ ನಿನ್ನ ಪಕ್ಷದಲ್ಲಿ ಅಳಿದುಳಿದಿರುವ ಮಹಾವೀರರಾರೆಂಬುದನ್ನು ಹೇಳುತ್ತೇನೆ. ದ್ವಿಜಶ್ರೇಷ್ಠರಾದ ದ್ರೋಣರು ಯಾವ ಮಹಾವೀರನಲ್ಲಿ ಚಿತ್ರ-ವಿಚಿತ್ರವಾದ (ಅದ್ಭುತವಾದ), ಶುಭ್ರವಾದ (ಪ್ರಕಾಶಮಾನವಾದ), ದಿವ್ಯವಾದ ನಾಲ್ಕುಬಗೆಯ ಮಹಾಸ್ತ್ರಗಳನ್ನು ನಿಕ್ಷೇಪಿಸಿದ್ದರೋ–ಅಂತಹ ಮಹಾರಥನಾದ, ಪ್ರಯತ್ನಶೀಲನಾದ, ಶೀಘ್ರಹಸ್ತನಾದ, ದೃಢಾಯುಧನಾದ, ದೃಢೇಷುವಾದ, ವೀರ್ಯವಂತನಾದ, ವೇಗವಂತನಾದ, ದ್ರೋಣರ ಸುಪುತ್ರನಾದ ಅಶ್ವತ್ಥಾಮನು ನಿನ್ನ ಸಲುವಾಗಿ ಯುದ್ಧಮಾಡುವ ಇಚ್ಛೆಯಿಂದ ಯುದ್ಧಸನ್ನದ್ಧನಾಗಿ ನಿಂತಿದ್ದಾನೆ.

ಆನರ್ತವಾಸೀ ಹೃದಿಕಾತ್ಮಜೋಽಸೌ
ಮಹಾರಥಃ ಸಾತ್ವತಾನಾಂ ವರಿಷ್ಠಃ ।
ಸ್ವಯಂ ಭೋಜಃ ಕೃತವರ್ಮಾ ಕೃತಾಸ್ತ್ರೋ
ವ್ಯವಸ್ಥಿತೋ ಯೋದ್ಧುಕಾಮಸ್ತ್ವದರ್ಥೇ ॥೮॥

ಸಾತ್ವತಕುಲದಲ್ಲಿಯೇ ಶ್ರೇಷ್ಠಮಹಾರಥನಾದ, ಆನರ್ತನಿವಾಸಿಯಾದ, ಭೋಜವಂಶೀಯನಾದ, ಅಸ್ತ್ರವಿಶಾರದನಾದ, ಹೃದಿಕನ ಮಗನಾದ ಕೃತವರ್ಮನು ನಿನ್ನ ಸಲುವಾಗಿ ಯುದ್ಧಮಾಡುವ ಇಚ್ಛೆಯಿಂದ ಯುದ್ಧಸನ್ನದ್ಧನಾಗಿ ನಿಂತಿದ್ದಾನೆ.

ಆರ್ತಾಯನಿಃ ಸಮರೇ ದುಷ್ಪ್ರಕಮ್ಪ್ಯಃ
ಸೇನಾಗ್ರಣೀಃ ಪ್ರಥಮಸ್ತಾವಕಾನಾಮ್ ।
ಯಃ ಸ್ವಸ್ರೀಯಾನ್ಪಾಣ್ಡವೇಯಾನ್ವಿಸೃಜ್ಯ
ಸತ್ಯಾಂ ವಾಚಂ ಸ್ವಾಂ ಚಿಕೀರ್ಷುಸ್ತರಸ್ವೀ ॥೯॥
ತೇಜೋವಧಂ ಸೂತಪುತ್ರಸ್ಯ ಸಂಖ್ಯೇ
ಪ್ರತಿಶ್ರುತ್ಯಾಜಾತಶತ್ರೋಃ ಪುರಸ್ತಾತ್ ।
ದುರಾಧರ್ಷಃ ಶಕ್ರಸಮಾನವೀರ್ಯಃ
ಶಲ್ಯಃ ಸ್ಥಿತೋ ಯೋದ್ಧುಕಾಮಸ್ತ್ವದರ್ಥೇ ॥೧೦॥

ಯುದ್ಧದಲ್ಲಿ ಅಲುಗಾಡಿಸಲೂ ಅಸಾಧ್ಯನಾದ, ನಿನ್ನ ಸೇನಾಪತಿಗಳಲ್ಲಿಯೇ ಅಗ್ರಗಣ್ಯನಾದ, ವೇಗಶಾಲಿಯಾದ, ತನ್ನ ಮಾತನ್ನು ಸತ್ಯವಾದ ಮಾತನ್ನಾಗಿಸಲು (ತನ್ನ ಮಾತನ್ನು ಉಳಿಸಿಕೊಳ್ಳಲು) ಯುದ್ಧದಲ್ಲಿ ಕರ್ಣನ ತೇಜೋವಧೆಯನ್ನು ಮಾಡುವೆನೆಂದು ಯುಧಿಷ್ಠಿರನ ಮುಂದೆ ಪ್ರತಿಜ್ಞೆಮಾಡಿ, ತಂಗಿಯ ಮಕ್ಕಳಾದ ಪಾಂಡವರನ್ನು ಬಿಟ್ಟು ನಿನ್ನ ಕಡೆಗೆ ಆಗಮಿಸಿರುವ, ದುರಾಧರ್ಷನಾದ, ಇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವನ್ನು ಹೊಂದಿರುವ ಋತಾಯನಪುತ್ರನಾದ ಶಲ್ಯನು ನಿನ್ನ ಸಲುವಾಗಿ ಯುದ್ಧಮಾಡುವ ಇಚ್ಛೆಯಿಂದ ಸನ್ನದ್ಧನಾಗಿ ನಿಂತಿದ್ದಾನೆ.

**ಆಜಾನೇಯೈಃ ಸೈನ್ಧವೈಃ ಪರ್ವತೀಯೈ-**
**ರ್ನದೀಜಕಾಮ್ಬೋಜವನಾಯುಜೈಶ್ಚ।**
**ಗಾನ್ಧಾರರಾಜಃ ಸ್ವಬಲೇನ ಯುಕ್ತೋ**
**ವ್ಯವಸ್ಥಿತೋ ಯೋದ್ಧುಕಾಮಸ್ತ್ವದರ್ಥೇ ॥೧೧॥**

ಒಳ್ಳೆಯ ಜಾತಿಯ ಸಿಂಧೂರದೇಶದ ಮತ್ತು ಪರ್ವತಪ್ರದೇಶದ ಕುದುರೆಗಳಿಂದಲೂ-ನದೀಜ, ಕಾಂಬೋಜ, ವನಾಯುಜ ಮುಂತಾದ ಒಳ್ಳೆಯ ಜಾತಿಯ ಕುದುರೆಗಳಿಂದಲೂ ಮತ್ತು ತನ್ನ ಅನೇಕಸೈನಿಕರಿಂದಲೂ ಕೂಡಿಕೊಂಡಿರುವ ಗಾಂಧಾರರಾಜನಾದ ಶಕುನಿಯು ನಿನ್ನ ಸಲುವಾಗಿ ಯುದ್ಧಮಾಡುವ ಇಚ್ಛೆಯಿಂದ ಸನ್ನದ್ಧನಾಗಿ ನಿಂತಿದ್ದಾನೆ.

**ಶಾರದ್ವತೋ ಗೌತಮಶ್ಚಾಪಿ ರಾಜ-**
**ನ್ಮಹಾಬಾಹುರ್ಬಹುಚಿತ್ರಾಸ್ತ್ರಯೋಧೀ ।**
**ಧನುಶ್ಚಿತ್ರಂ ಸುಮಹದ್ಭಾರಸಾಹಂ**
**ವ್ಯವಸ್ಥಿತೋ ಯೋದ್ಧುಕಾಮಃ ಪ್ರಗೃಹ್ಯ ॥೧೨॥**

ಅನೇಕಪ್ರಕಾರವಾದ ವಿಚಿತ್ರಾಸ್ತ್ರಗಳ ಮೂಲಕವಾಗಿ ಯುದ್ಧಮಾಡುವ, ಗೌತಮವಂಶೀಯರಾದ, ಶರದ್ವಂತನ ಮಕ್ಕಳಾದ ಕೃಪಾಚಾರ್ಯರೂ ಭಾರವನ್ನು ಸಹಿಸುವ ಚಿತ್ರವಾದ ಮಹಾಧನುಸ್ಸನ್ನು ಕೈಯಲ್ಲಿ ಹಿಡಿದು ನಿನ್ನ ಸಲುವಾಗಿ ಯುದ್ಧಮಾಡುವ ಇಚ್ಛೆಯಿಂದ ಸನ್ನದ್ಧರಾಗಿ ನಿಂತಿದ್ದಾರೆ.

**ಮಹಾರಥಃ ಕೇಕಯರಾಜಪುತ್ರಃ**
**ಸದಶ್ವಯುಕ್ತಂ ಚ ಪತಾಕಿನಂ ಚ ।**
**ರಥಂ ಸಮಾರುಹ್ಯ ಕುರುಪ್ರವೀರ**
**ವ್ಯವಸ್ಥಿತೋ ಯೋದ್ಧುಕಾಮಸ್ತ್ವದರ್ಥೇ ॥೧೩॥**

ಮಹಾರಥನಾದ ಕೇಕಯರಾಜಕುಮಾರನು ಒಳ್ಳೆಯ ಕುದುರೆಗಳಿಂದ ಸಜ್ಜಾದ ಪತಾಕಾಯುಕ್ತವಾದ ರಥದಲ್ಲಿ ಕುಳಿತು ನಿನ್ನ ಸಲುವಾಗಿ ಯುದ್ಧ ಮಾಡುವ ಆಶಯದಿಂದ ಸನ್ನದ್ಧನಾಗಿ ನಿಂತಿದ್ದಾನೆ.

**ತಥಾ ಸುತಸ್ತೇ ಜ್ವಲನಾರ್ಕವರ್ಣಂ**
**ರಥಂ ಸಮಾಸ್ಥಾಯ ಕುರುಪ್ರವೀರಃ ।**
**ವ್ಯವಸ್ಥಿತಃ ಪುರುಮಿತ್ರೋ ನರೇನ್ದ್ರ**
**ವ್ಯಭ್ರೇ ಸೂರ್ಯೋ ಭ್ರಾಜಮಾನೋ ಯಥಾ ಖೇ ॥**

ಕುರುಕುಲಪ್ರವೀರನಾದ, ನಿನ್ನ ಮಗ ಪುರುಮಿತ್ರನು, ಅಗ್ನಿ ಮತ್ತು ಸೂರ್ಯರ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿರುವ ರಥದಲ್ಲಿ ಕುಳಿತು-ಮೋಡವಿಲ್ಲದ ಆಕಾಶದಲ್ಲಿ ಸೂರ್ಯನು ಪ್ರಕಾಶಿಸುವಂತೆ-ಪ್ರಕಾಶಿಸುತ್ತಾ ನಿನ್ನ ಸಲುವಾಗಿ ಯುದ್ಧಮಾಡುವ ಇಚ್ಛೆಯಿಂದ ಸನ್ನದ್ಧನಾಗಿ ನಿಂತಿದ್ದಾನೆ.

**ದುರ್ಯೋಧನೋ ನಾಗಕುಲಸ್ಯ ಮಧ್ಯೇ**
**ವ್ಯವಸ್ಥಿತಃ ಸಿಂಹ ಇವಾ ಬಭಾಸೇ ।**
**ರಥೇನ ಜಾಮ್ಬೂನದಭೂಷಣೇನ**
**ವ್ಯವಸ್ಥಿತಃ ಸಮರೇ ಯೋತ್ಸ್ಯಮಾನಃ ॥೧೫॥**

ಆನೆಗಳ ಸೈನ್ಯದ ಮಧ್ಯದಲ್ಲಿ ತನ್ನ ಸುವರ್ಣಭೂಷಿತವಾದ ರಥದಲ್ಲಿ ಕುಳಿತಿರುವ ನಿನ್ನ ಹಿರಿಯ ಮಗ ದುರ್ಯೋಧನನು ಸಿಂಹದಂತೆಯೇ ಪ್ರಕಾಶಮಾನನಾಗಿದ್ದಾನೆ. ಅವನೂ ಸಹ ರಣಾಂಗಣದಲ್ಲಿ ಯುದ್ಧಮಾಡುವ ಇಚ್ಛೆಯಿಂದ ಸನ್ನದ್ಧನಾಗಿ ನಿಂತಿದ್ದಾನೆ.

**ಸ ರಾಜಮಧ್ಯೇ ಪುರುಷಪ್ರವೀರೋ**
**ರರಾಜ ಜಾಮ್ಬೂನದಚಿತ್ರವರ್ಮಾ ।**

ಪದ್ಮಪ್ರಭೋ ವಹ್ನಿರಿವಾಲ್ಪಧೂಮೋ
ಮೇಘಾನ್ತರೇ ಸೂರ್ಯ ಇವ ಪ್ರಕಾಶಃ ॥೧೬॥

ಕಮಲವರ್ಣನಾದ, ಪುರುಷಶ್ರೇಷ್ಠನಾದ ದುರ್ಯೋಧನನು ಸುವರ್ಣ ಮಯವಾದ (ಚಿನ್ನದಿಂದ ಚಿತ್ರಿತವಾದ) ವಿಚಿತ್ರಕವಚವನ್ನು ಧರಿಸಿ, ಸ್ವಲ್ಪವೇ ಹೊಗೆಯಿಂದ ಕೂಡಿರುವ ಯಜ್ಞೇಶ್ವರನಂತೆಯೂ-ಮೋಡಗಳ ಮಧ್ಯ ದಲ್ಲಿರುವ ಸೂರ್ಯನಂತೆಯೂ-ರಾಜರ ಮಧ್ಯದಲ್ಲಿ ಪ್ರಕಾಶಿಸುತ್ತಿದ್ದಾನೆ.

ತಥಾ ಸುಷೇಣೋಽಪ್ಯಸಿಚರ್ಮಪಾಣಿ-
ಸ್ತವಾತ್ಮಜಃ ಸತ್ಯಸೇನಶ್ಚ ವೀರಃ ।
ವ್ಯವಸ್ಥಿತೌ ಚಿತ್ರಸೇನೇನ ಸಾರ್ಧಂ
ಹೃಷ್ಟಾತ್ಮಾನೌ ಸಮರೇ ಯೋದ್ಧುಕಾಮೌ ॥೧೭॥

ಅದೇ ರೀತಿಯಲ್ಲಿ ಕತ್ತಿ-ಗುರಾಣಿಗಳನ್ನು ಕೈಗಳಲ್ಲಿ ಹಿಡಿದಿರುವ ಸುಷೇಣನೂ, ವೀರನಾದ ನಿನ್ನ ಮಗ ಸತ್ಯಸೇನನೂ ಹೃಷ್ಟಾತ್ಮರಾಗಿ ಶತ್ರುಗಳೊಡನೆ ಯುದ್ಧಮಾಡುವ ಇಚ್ಛೆಯಿಂದ ಚಿತ್ರಸೇನನೊಡನೆ ನಿಂತಿದ್ದಾರೆ.

ಹ್ರೀನಿಷೇವೋ ಭಾರತ ರಾಜಪುತ್ರ
ಉಗ್ರಾಯುಧಃ ಕ್ಷಣಭೋಜೀ ಸುದರ್ಶಃ।
ಜಾರಾಸಂಧಿಃ ಪ್ರಥಮಶ್ಚಾದೃಢಶ್ಚ
ಚಿತ್ರಾಯುಧಃ ಶ್ರುತವರ್ಮಾ ಜಯಶ್ಚ।
ಶಲಶ್ಚ ಸತ್ಯವ್ರತದುಃಶಲೌ ಚ
ವ್ಯವಸ್ಥಿತಾಃ ಸಹಸೈನ್ಯಾ ನರಾಗ್ರ್ಯಾಃ ॥೧೮॥

ಲಜ್ಜಾ-ವಿನಯಶೀಲನಾದ, ಭಯಂಕರಾಯುಧನಾದ, ಶೀಘ್ರಭೋಜಿ ಯಾದ, ಕಡುಚೆಲುವನಾದ, ಜರಾಸಂಧನ ಜ್ಯೇಷ್ಠಪುತ್ರನಾದ, ರಾಜಕುಮಾರ ಅದೃಢನೂ, ಚಿತ್ರಾಯುಧನೂ, ಶ್ರುತವರ್ಮನೂ, ಜಯನೂ, ಶಲನೂ, ಸತ್ಯವ್ರತನೂ ಮತ್ತು ದುಃಶಲನೂ ಸಸೈನ್ಯರಾಗಿ ಯುದ್ಧಸನ್ನದ್ಧರಾಗಿ ನಿಂತಿದ್ದಾರೆ.

ಕೈತವ್ಯಾನಾಮಧಿಪಃ ಶೂರಮಾನೀ
ರಣೇ ರಣೇ ಶತ್ರುಹಾ ರಾಜಪುತ್ರಃ ।
ರಥೀ ಹಯೀ ನಾಗಪತ್ತಿಪ್ರಯಾಯೀ
ವ್ಯವಸ್ಥಿತೋ ಯೋದ್ಧುಕಾಮಸ್ತ್ವದರ್ಥೇ ॥೧೯॥

ಜೂಜುಗಾರನಿಗೆ ಅಧಿಪತಿಯಾದ, ತಾನೇ ಮಹಾಶೂರನೆಂಬ ಅಭಿಮಾನವನ್ನು ಹೊಂದಿರುವ, ಪ್ರತಿಯೊಂದು ಯುದ್ಧದಲ್ಲಿಯೂ ಶತ್ರುಗಳನ್ನು ಸಂಹರಿಸುತ್ತಲೇ ಇರುವ, ರಥ-ಗಜಾಶ್ವ-ಪದಾತಿಗಳೆಂಬ ಚತುರಂಗಸೈನ್ಯದೊಡನೆ ಮುನ್ನಡೆಯುವ ರಾಜಪುತ್ರನು (ಶಕುನಿಯ ಮಗನಾದ ಉಲೂಕನು) ನಿನ್ನ ಸಲುವಾಗಿ ಯುದ್ಧಮಾಡುವ ಇಚ್ಛೆಯಿಂದ ಸನ್ನದ್ಧನಾಗಿ ನಿಂತಿದ್ದಾನೆ.

ವೀರಃ ಶ್ರುತಾಯುಶ್ಚ ಧೃತಾಯುಧಶ್ಚ
ಚಿತ್ರಾಙ್ಗದಶ್ಚಿತ್ರಸೇನಶ್ಚ ವೀರಃ ।
ವ್ಯವಸ್ಥಿತಾ ಯೋದ್ಧುಕಾಮಾ ನರಾಗ್ರ್ಯಾಃ
ಪ್ರಹಾರಿಣೋ ಮಾನಿನಃ ಸತ್ಯಸಂಧಾಃ ॥೨೦॥

ಸತ್ಯಸಂಧರಾದ, ಪ್ರಹಾರಕುಶಲರಾದ, ಸ್ವಾಭಿಮಾನಿಗಳಾದ, ನರ ಶ್ರೇಷ್ಠರಾದ, ವೀರರಾದ ಶ್ರುತಾಯುಷ, ಧೃತಾಯುಧ, ಚಿತ್ರಾಂಗದ, ಚಿತ್ರಸೇನ–ಇವರೆಲ್ಲರೂ ನಿನ್ನ ಸಲುವಾಗಿ ಯುದ್ಧಮಾಡುವ ಇಚ್ಛೆಯಿಂದ ಸನ್ನದ್ಧರಾಗಿ ನಿಂತಿದ್ದಾರೆ.

ಕರ್ಣಾತ್ಮಜಃ ಸತ್ಯಸನ್ಧೋ ಮಹಾತ್ಮಾ
ವ್ಯವಸ್ಥಿತಃ ಸಮರೇ ಯೋದ್ಧುಕಾಮಃ ।
ಅಥಾಪರೌ ಕರ್ಣಸುತೌ ವರಾಸ್ತ್ರೌ
ವ್ಯವಸ್ಥಿತೌ ಲಘುಹಸ್ತೌ ನರೇನ್ದ್ರ ॥೨೧॥
ಬಲಂ ಮಹದ್ದುರ್ಭಿದಮಲ್ಪಧೈರ್ಯೈಃ
ಸಮಾಶ್ರಿತೌ ಯೋತ್ಸ್ಯಮಾನೌ ತ್ವದರ್ಥೇ ॥೨೨॥

ಸತ್ಯಸಂಧನಾದ, ಮಹಾತ್ಮನಾದ ಕರ್ಣನ ಮಗನು ನಿನ್ನ ಸಲುವಾಗಿ

ಯುದ್ಧಮಾಡುವ ಇಚ್ಛೆಯಿಂದ ರಣಾಂಗಣದಲ್ಲಿ ವ್ಯವಸ್ಥಿತನಾಗಿದ್ದಾನೆ. ಶ್ರೇಷ್ಠವಾದ ಅಸ್ತ್ರಗಳನ್ನು ಹೊಂದಿರುವ ಲಘುಹಸ್ತರಾದ (ಬಹಳ ಶೀಘ್ರವಾಗಿ ಬಾಣಗಳ ಆದಾನ-ಸಂಧಾನ-ಪ್ರಯೋಗಗಳನ್ನು ಮಾಡುವುದರಲ್ಲಿ ಕುಶಲರಾದ) ಕರ್ಣನ ಇನ್ನೂ ಇಬ್ಬರು ಮಕ್ಕಳು ರಣಾಂಗಣದಲ್ಲಿ ಶತ್ರುಗಳೊಡನೆ ಯುದ್ಧಮಾಡಲು ಸನ್ನದ್ಧರಾಗಿರುತ್ತಾರೆ. ನಿನ್ನ ಸಲುವಾಗಿ ಯುದ್ಧಮಾಡಲಿಚ್ಛಿಸಿರುವ ಅವರೆಲ್ಲರೂ ಅಲ್ಪಧೈರ್ಯದವರಿಂದ ಭೇದಿಸಲು ಅಸಾಧ್ಯವಾದ ಮಹಾಸೈನ್ಯವನ್ನು ಆಶ್ರಯಿಸಿರುತ್ತಾರೆ.

ಮಹಾರಾಜ! ಇವರೇ ಮೊದಲಾದ ಪ್ರಮುಖವೀರರಿಂದಲೂ ಮತ್ತು ಅಮಿತವಾದ ಪ್ರಭಾವದಿಂದ ಕೂಡಿರುವ ಇತರ ಯೋಧಶ್ರೇಷ್ಠರಿಂದಲೂ ಕೂಡಿಕೊಂಡು, ಆನೆಗಳ ಸೈನ್ಯದ ಮಧ್ಯಭಾಗದಲ್ಲಿ ಮಹೇಂದ್ರನೋಪಾದಿಯಲ್ಲಿ ಕುರುರಾಜನಾದ ದುರ್ಯೋಧನನು ಜಯಗಳಿಸುವ ಆಶಯದಿಂದ ಯುದ್ಧಸನ್ನದ್ಧನಾಗಿ ನಿಂತಿದ್ದಾನೆ."

ತನ್ನ ಪಕ್ಷದಲ್ಲಿ ಅಳಿದುಳಿದಿರುವವರ ವಿವರಣೆಯನ್ನು ಕೇಳಿದನಂತರ ಧೃತರಾಷ್ಟ್ರನು ಹೇಳುತ್ತಾನೆ:

"ಸಂಜಯ! ನಮ್ಮ ಸೈನ್ಯದಲ್ಲಿ ಜೀವಂತರಾಗಿ ಉಳಿದಿರುವವರು ಯಾರು-ಯಾರೆಂಬುದನ್ನು ನೀನು ಯಥಾವತ್ತಾಗಿ ವಿವರಿಸಿ ಹೇಳಿದೆ. ಇವರನ್ನು ಬಿಟ್ಟು ಉಳಿದವರೆಲ್ಲರೂ ಅಸುನೀಗಿರುವರೆಂಬುದು ಸ್ಪಷ್ಟವಾಯಿತು. ಇದುವರೆಗಿನ ಆಗು-ಹೋಗುಗಳಿಂದಲೇ ಮುಂದೇನಾಗುವುದೆಂಬುದು ವ್ಯಕ್ತವಾಗಿಯೇ ಇದೆ. ಇದನ್ನು (ನಮ್ಮ ಪಕ್ಷಕ್ಕೆ ಪರಾಜಯವು ಕಟ್ಟಿಟ್ಟಿದ್ದೆಂಬುದನ್ನು) ನಾನೀಗ ಚೆನ್ನಾಗಿ ಮನಗಂಡಿದ್ದೇನೆ."

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ:

"ಜನಮೇಜಯ! ತನ್ನ ಆಗಿನ ಸೈನ್ಯವು ಶ್ರೇಷ್ಠರಾದ ವೀರರಿಂದ ಹೀನವಾಗಿರುವುದೆಂಬುದನ್ನೂ, ಸಂಪೂರ್ಣವಾಗಿ ಧ್ವಸ್ತವಾಗಿದೆಯೆಂಬುದನ್ನೂ ಮತ್ತು ತನ್ನ ಹನ್ನೊಂದು ಅಕ್ಷೌಹಿಣೀಸೈನ್ಯದಲ್ಲಿ ಸ್ವಲ್ಪಭಾಗಮಾತ್ರವೇ ಉಳಿದಿರುವುದೆಂಬುದನ್ನೂ ಸಂಜಯನಿಂದ ಕೇಳಿದ, ಅಂಬಿಕೆಯ ಮಗ ಧೃತರಾಷ್ಟ್ರನು ಶೋಕದಿಂದ ವ್ಯಾಕುಲಗೊಂಡ ಇಂದ್ರಿಯಗಳುಳ್ಳವನಾಗಿ ಮೂರ್ಛೆಹೋದನು.

ಮೂರ್ಛೆಗೊಳ್ಳುತ್ತಿದ್ದಾಗಲೇ ಸಂಜಯನನ್ನು ಕುರಿತು "ಮುಹೂರ್ತ ಕಾಲ ಇಲ್ಲಿಯೇ ಇರು, ಸಂಜಯ! ಅತ್ಯಂತಾಪ್ರಿಯವಾದ ವಾರ್ತೆಯನ್ನು ಕೇಳಿ ನನ್ನ ಮನಸ್ಸು ಬಹಳವಾಗಿ ವ್ಯಾಕುಲಗೊಂಡಿದೆ ಮತ್ತು ಮೋಹಗೊಳ್ಳುತ್ತಿದೆ. ಹಸ್ತ-ಪಾದಾದಿ ಅವಯವಗಳನ್ನು ಧಾರಣೆ ಮಾಡುವುದಕ್ಕೂ (ಅತ್ತಲಿತ್ತ ಚಲಿಸುವುದಕ್ಕೂ) ನಾನು ಅಸಮರ್ಥನಾಗಿದ್ದೇನೆ"–ಎಂದು ಹೇಳುತ್ತಲೇ ಇದ್ದನು.

ಮಹಾರಾಜ! ಜಗತೀಪತಿಯಾದ, ಅಂಬಿಕೆಯ ಮಗನಾದ ಧೃತರಾಷ್ಟ್ರನು ಇವೇ ಮುಂತಾಗಿ ಮಾತನಾಡಿ ಮೂರ್ಛಾಕ್ರಾಂತನಾದನು."

೭ನೆಯ ಅಧ್ಯಾಯವು ಮುಗಿಯಿತು.

೮ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನ ವಿಲಾಪ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ:

"ಬ್ರಾಹ್ಮಣೋತ್ತಮರೇ! ಯುದ್ಧದಲ್ಲಿ ಕರ್ಣನು ಮಡಿದುದನ್ನೂ, ತನ್ನ ಮಕ್ಕಳಲ್ಲಿ ಅನೇಕರು ಅಸುನೀಗಿದುದನ್ನೂ ಕೇಳಿ ಮೂರ್ಛಿತನಾದ ಧೃತರಾಷ್ಟ್ರನರೇಂದ್ರನು ಎಚ್ಚೆತ್ತನಂತರ ಏನು ಹೇಳಿದನು? ವೈಶಂಪಾಯನರೇ! ನಿಶ್ಚಯವಾಗಿಯೂ ರಾಜನು ಮಕ್ಕಳ ಮರಣದಿಂದಾಗಿ ಅತ್ಯಂತದಾರುಣವಾದ ಶೋಕಕ್ಕೊಳಗಾದನು. ಆ ಸಮಯದಲ್ಲಿ ಅವನೇನು ಹೇಳಿದನೆಂಬುದನ್ನು ನನಗೆ ಹೇಳಿರಿ."

"ಮಹಾರಾಜ! ಕರ್ಣನ ವಧೆಯಾಯಿತೆಂಬುದನ್ನು ರಾಜನಿಗೆ ನಂಬಲು ಸಾಧ್ಯವೇ ಆಗಲಿಲ್ಲ. ಕರ್ಣನ ವಧೆಯೆಂಬುದು ಧೃತರಾಷ್ಟ್ರನಿಗೊಂದು ಪರಮಾದ್ಭುತವೋ ಎಂಬಂತೆ ಕಂಡಿತು. ಮೇರುಪರ್ವತವು ತಾನಿರುವ ಸ್ಥಳದಿಂದ ಬೇರೆಯ ಕಡೆಗೆ ಸರಿಯಿತೆಂಬ ವಾರ್ತೆಯಂತೆ ಕರ್ಣನ ವಧೆಯಾಯಿತೆಂಬ ಆ ಭಯಂಕರವಾರ್ತೆಯು ಸಕಲಪ್ರಾಣಿಗಳಿಗೂ ಭ್ರಾಂತಿಯನ್ನುಂಟುಮಾಡುವುದಾಗಿದ್ದಿತು. ಮಹಾಮತಿಯಾದ ಶುಕ್ರನಿಗೆ ಬುದ್ಧಿಭ್ರಮಣೆಯಾಗಿದೆಯೆಂದರೆ ಎಷ್ಟು ಅಸಮಂಜಸವಾಗಿ

ಕಾಣುವುದೋ, ಭೀಮಕರ್ಮನಾದ ಇಂದ್ರನ ಪರಾಜಯವು ಶತ್ರುಗಳಿಂದ ಆಯಿತೆಂದರೆ ಎಷ್ಟು ಅದ್ಭುತವಾಗಿ ಕಾಣುವುದೋ, ಮಹಾದ್ಯುತಿಯಾದ ಸೂರ್ಯನು ತನ್ನ ಮಂಡಲದಿಂದ ಕಳಚಿ ಕೆಳಕ್ಕೆ ಬಿದ್ದನೆಂದರೆ ಎಂತಹ ಅಚ್ಚರಿಯೋ, ಅಕ್ಷಯವಾದ ಜಲರಾಶಿಯುಳ್ಳ ಸಮುದ್ರವು ಶೋಷಿತವಾಯಿತೆಂದರೆ ಎಷ್ಟು ಅಶ್ರದ್ಧೇಯವೋ–ಕರ್ಣನ ವಧೆಯೆಂಬುದೂ ಸಹ ಅಷ್ಟೇ ಅಸಮಂಜಸವೂ, ಅದ್ಭುತವೂ, ಅಚ್ಚರಿಯೂ, ಅಶ್ರದ್ಧೇಯವೂ ಆಗಿದ್ದಿತು. ಮಹಾತ್ಮನಾದ ಕರ್ಣನ ವಧೆಯಾಯಿತೆಂಬ ವಾರ್ತೆಯು ಭೂಮಿ, ಆಕಾಶ, ದಿಕ್ಕು ಮತ್ತು ನೀರು ಇವುಗಳ ಸರ್ವನಾಶದಂತೆ ಅದ್ಭುತವಾಗಿ ಕಂಡಿತು. ಪುಣ್ಯ-ಪಾಪ ಕರ್ಮಗಳೆರಡಕ್ಕೂ ಫಲವೇ ಇಲ್ಲವೆಂದರೆ ಎಷ್ಟು ವಿವೇಕಶೂನ್ಯವಾಗಿ ಕಾಣುವುದೋ ಕರ್ಣನ ನಿಧನವಾರ್ತೆಯೂ ಅಷ್ಟೇ ವಿವೇಕಶೂನ್ಯವಾಗಿ ಕಂಡಿತು. ಅಸಂಭವವೆನಿಸಿದ್ದು ಸಂಭವಿಸಿದುದನ್ನು ಕೇಳಿ ಜನೇಶ್ವರನಾದ ಧೃತರಾಷ್ಟ್ರನು ತನ್ನ ಸೂಕ್ಷ್ಮಬುದ್ಧಿಯಿಂದ ಮುಂದಿನ ಆಗು-ಹೋಗುಗಳನ್ನು ಸಮಾಲೋಚಿಸಿ 'ನೇದಮಸ್ತಿ' 'ನಮ್ಮ ಸೈನ್ಯವು ಇನ್ನು ಉಳಿಯುವುದಿಲ್ಲ' –ಎಂಬ ನಿರ್ಧಾರಕ್ಕೆ ಬಂದನು. ಅಜೇಯನಾದ ಕರ್ಣನ ವಧೆಯ ಪ್ರಕರಣವನ್ನು ಪುನಃ ಪುನಃ ಚಿಂತಿಸುತ್ತಿದ್ದ ರಾಜನು ತನ್ನ ಕಡೆಯಲ್ಲಿ ಉಳಿದಿರುವ ಪ್ರಾಣಿಗಳೂ (ಸೈನಿಕರೂ) ಅದೇ ರೀತಿಯಲ್ಲಿ ವಿನಾಶಹೊಂದುವ ರೆಂದು ಭಾವಿಸಿದನು. ಶೋಕವೆಂಬ ಅಗ್ನಿಯಿಂದ ದಹಿಸಲ್ಪಡುತ್ತಿದ್ದ ಧೃತರಾಷ್ಟ್ರನು ಎದೆಯೊಡೆದವನಂತೆ ನಡುಗುತ್ತಿದ್ದ ಅಂಗಾಂಗಗಳುಳ್ಳವನಾಗಿ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಅತ್ಯಂತದುಃಖಿತನಾಗಿ "ಅಯ್ಯೋ! ಅಯ್ಯೋ! ಈ ಸಂಕಟವನ್ನು ತಾಳಲಾರೆನಲ್ಲಾ! ಸರ್ವನಾಶವಾಯಿತಲ್ಲಾ! ಅಯ್ಯೋ!" –ಎಂದು ಒರಲುತ್ತಾ ಗೋಳಾಡಿದನು.

"ಸಂಜಯ! ಅಧಿರಥನ ವೀರಪುತ್ರನಾದ ಕರ್ಣನು ಸಿಂಹ ಮತ್ತು ಆನೆಗಳ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮದಿಂದ ಕೂಡಿದ್ದನು. ಗೂಳಿಯ ಹೆಗಲಿನಂತಹ ಹೆಗಲನ್ನು ಹೊಂದಿದ್ದನು. ಅವನ ಕಣ್ಣುಗಳೂ ಗೂಳಿಯ ಕಣ್ಣುಗಳಂತಿದ್ದುವು. ನಡಿಗೆಯೂ ಸಹ ಗೂಳಿಯದೇ ಆಗಿದ್ದಿತು.

ಗೂಳಿಯೊಂದು ಮತ್ತೊಂದು ಗೂಳಿಯೊಡನೆ ಸೆಣಸಾಟದಲ್ಲಿ ತೊಡಗಿದಾಗ ಹಿಂದಿರುಗದಿರುವಂತೆ-ಮಹೇಂದ್ರನೇ ಶತ್ರುವಾಗಿ ಯುದ್ಧಕ್ಕೆ ಬಂದರೂ ಕರ್ಣನು ಹಿಂದಿರುಗುತ್ತಿರಲಿಲ್ಲ. ಕರ್ಣನ ಶರೀರವು ವಜ್ರಕ್ಕೆ ಸಮಾನವಾಗಿದ್ದು ಅವನಿನ್ನೂ ಯುವಕನಾಗಿಯೇ ಇದ್ದನು. ಅವನು ಮಾಡುತ್ತಿದ್ದ ಧನುಷ್ಟೇಂಕಾರವನ್ನೂ ಮತ್ತು ಶರವೃಷ್ಟಿಯ ಘೋರಶಬ್ದವನ್ನೂ ಕೇಳಿದನಂತರ ರಣರಂಗದಲ್ಲಿ ಎದುರುಪಕ್ಷದ ರಥಾಶ್ವ- ಗಜ-ಪದಾತಿಗಳು ಎದುರಾಗಿ ನಿಲ್ಲುತ್ತಲೇ ಇರಲಿಲ್ಲ. ಮಹಾಬಾಹುವಾದ ಕರ್ಣನನ್ನೇ ಅವಲಂಬಿಸಿ ಶತ್ರುಗಳನ್ನು ಜಯಿಸುವ ಆಸೆಯನ್ನಿಟ್ಟುಕೊಂಡಿದ್ದ ನನ್ನ ಮಗ ದುರ್ಯೋಧನನು ಮಹಾರಥರಾದ ಪಾಂಡವರೊಡನೆ ವೈರವನ್ನು ಕಟ್ಟಿಕೊಂಡನು. ರಥಿಗಳಲ್ಲಿ ಶ್ರೇಷ್ಠನಾದ, ಶತ್ರುಗಳಿಂದ ಸಹಿಸಲಾಗದಂತಹ ಪರಾಕ್ರಮವನ್ನು ಹೊಂದಿದ್ದ, ಪುರುಷವ್ಯಾಘ್ರನಾದ ಕರ್ಣನು ಪಾರ್ಥನಿಂದ ಯಾವ ರೀತಿಯಲ್ಲಿ ಬಲಪೂರ್ವಕವಾಗಿ ಕೊಲ್ಲಲ್ಪಟ್ಟನು? ಸ್ವಬಾಹುಬಲದರ್ಪಿತನಾದ ಕರ್ಣನು ಅಚ್ಯುತನನ್ನಾಗಲೀ, ಧನಂಜಯನನ್ನಾಗಲೀ, ವೃಷ್ಣಿವೀರರನ್ನಾಗಲೀ, ಅವರೊಡನಿದ್ದ ಯಾವ ವೀರರನ್ನೇ ಆಗಲೀ-ಗಣನೆಗೇ ತೆಗೆದುಕೊಳ್ಳುತ್ತಿರಲಿಲ್ಲ. (ಅವರ ಪರಾಕ್ರಮದ ವಿಷಯದಲ್ಲಿ ಕರ್ಣನಿಗೆ ತಿರಸ್ಕಾರಭಾವನೆಯೇ ಇದ್ದಿತು.)

**ಶಾರ್ಙ್ಗಗಾಣ್ಡೀವಧನ್ವಾನೌ ಸಹಿತಾವಪರಾಜಿತೌ ।**
**ಅಹಂ ದಿವ್ಯಾದ್ರಥಾದೇಕಃ ಪಾತಯಿಷ್ಯಾಮಿ ಸಂಯುಗೇ ॥೧೬॥**

'ಅಪರಾಜಿತರಾದ, ಶಾರ್ಙ್ಗ-ಗಾಂಡೀವಧನ್ವರಾದ, ಸರ್ವಕಾಲದಲ್ಲಿಯೂ ಜೊತೆಯಲ್ಲಿಯೇ ಇರುವ ಕೃಷ್ಣಾರ್ಜುನರನ್ನು ನಾನೊಬ್ಬನೇ ದಿವ್ಯವಾದ ರಥದಿಂದ ಯುದ್ಧದಲ್ಲಿ ನೆಲಕ್ಕೆ ಕೆಡವುತ್ತೇನೆ'–ಎಂಬುದಾಗಿ ಕರ್ಣನು ಮೂರ್ಖನಾದ, ಲೋಭ-ಮೋಹಗಳಿಗೆ ಪರವಶನಾಗಿದ್ದ, ರಾಜ್ಯಕಾಮುಕನಾದ, ಆತುರನಾದ (ಬುದ್ಧಿಗೆಟ್ಟವನಾದ), ದುರಾಲೋಚನೆಯಲ್ಲಿಯೇ ಮಗ್ನನಾಗಿ ಅಧೋಮುಖನಾಗಿ ಕುಳಿತಿದ್ದ ದುರ್ಯೋಧನನೊಡನೆ ಹೇಳುತ್ತಿದ್ದನು. ಆದರೆ ಕರ್ಣನಿಗೆ ಅಂತಹ ಮಹಾಪರಾಕ್ರಮವಿರಲಿಲ್ಲವೆಂದಲ್ಲ. ಕರ್ಣನೇ ಈ ಹಿಂದೆ ಸಮಸ್ತಕಾಂಬೋಜರನ್ನೂ, ಅವಂತ್ಯರನ್ನೂ, ಕೇಕಯ-ಗಾಂಧಾರ-ಮದ್ರರನ್ನೂ, ಮತ್ಸ್ಯ-ತ್ರಿಗರ್ತ-ತಂಗಣರನ್ನೂ, ಶಕ-ಪಾಂಚಾಲ-ವಿದೇಹರನ್ನೂ, ಕುಲಿಂದ-ಕಾಶೀ-ಕೋಸಲ

ರನ್ನೂ, ಸುಹ್ಮ-ಅಂಗ-ವಂಗರನ್ನೂ, ನಿಷಾದ-ಪುಂಡ್ರ-ಚೀರಕರನ್ನೂ, ವತ್ಸ-ಕಲಿಂಗರನ್ನೂ, ಅಶ್ಮಕ-ತರಲ-ಋಷಿಕರನ್ನೂ ಯುದ್ಧದಲ್ಲಿ ಜಯಿಸಿ, ಅವರೆಲ್ಲರೂ ದುರ್ಯೋಧನನಿಗೆ ಕಪ್ಪ-ಕಾಣಿಕೆಗಳನ್ನು ಹೊತ್ತು ತರುವಂತೆ ಮಾಡಿದ್ದನು. ರಥಿಗಳಲ್ಲಿ ಶ್ರೇಷ್ಠನಾದ ರಾಧೇಯನು, ದುರ್ಯೋಧನನ ಬೊಕ್ಕಸವನ್ನು ವೃದ್ಧಿಪಡಿಸುವ ಸಲುವಾಗಿ ಸುನಿಶಿತವಾದ, ತೀಕ್ಷ್ಣವಾದ ಮತ್ತು ಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಬಾಣಗಳ ಸಮೂಹಗಳಿಂದ ಶತ್ರುಗಳನ್ನು ಪರಾಜಯಗೊಳಿಸಿ ಅವರಿಂದ ಕಪ್ಪ-ಕಾಣಿಕೆಗಳನ್ನು ತರುತ್ತಿದ್ದನು. ಇಂತಹ ದಿವ್ಯಾಸ್ತ್ರಗಳನ್ನು ತಿಳಿದಿದ್ದ, ಮಹಾತೇಜಸ್ವಿಯಾದ, ಶ್ರೇಷ್ಠವಾದ ಅಸ್ತ್ರಗಳನ್ನು ಹೊಂದಿದ್ದ, ಸೇನಾನಾಯಕನಾಗಿದ್ದ, ಧರ್ಮಾತ್ಮನಾದ ವೈಕರ್ತನಕರ್ಣನು ವೀರ್ಯಶಾಲಿಗಳಾದ ಪಾಂಡವರಿಂದ ಯುದ್ಧದಲ್ಲಿ ಹೇಗೆ ಕೊಲ್ಲಲ್ಪಟ್ಟನು?

**ವೃಷೋ ಮಹೇನ್ದ್ರೋ ದೇವೇಷು ವೃಷಃ ಕರ್ಣೋ ನರೇಷ್ವಪಿ ।**
**ತೃತೀಯಮನ್ಯಂ ಲೋಕೇಷು ವೃಷಂ ನೈವಾನುಶುಶ್ರುಮ ॥೨೩॥**

ದೇವತೆಗಳಲ್ಲಿ ಮಹೇಂದ್ರನು 'ವೃಷ' ಎಂಬ ಖ್ಯಾತಿಯನ್ನು ಪಡೆದಿರುತ್ತಾನೆ. (ಅವನು ಮಳೆಯನ್ನು ಸುರಿಸಿ ಪ್ರಜೆಗಳಿಗೆ ಸೌಖ್ಯವನ್ನುಂಟುಮಾಡುವುದರಿಂದ ಇಂದ್ರನಿಗೆ ಈ ಖ್ಯಾತಿಯು ಬಂದಿರುತ್ತದೆ.) ಮನುಷ್ಯರಲ್ಲಿ ಕರ್ಣನು ವೃಷನೆಂಬ ಖ್ಯಾತಿಯನ್ನು ಪಡೆದಿರುತ್ತಾನೆ. (ಯಾಚಕರಿಗೆ ಧನವನ್ನು ಮಳೆಯಂತೆಯೇ ಸುರಿಸುವುದರಿಂದ ಕರ್ಣನಿಗೆ ಭೂಲೋಕದಲ್ಲಿ ಈ ಖ್ಯಾತಿಯು ಬಂದಿರುತ್ತದೆ.) ಮೇಲಾಗಿ ಕರ್ಣನು ಧರ್ಮಾತ್ಮನಾದುದರಿಂದಲೂ ವೃಷ ಎಂಬ ಹೆಸರನ್ನು ಗಳಿಸಿದ್ದಾನೆ. ಮೂರು ಲೋಕಗಳಲ್ಲಿಯೂ ಈ ಇಬ್ಬರು ವೃಷರನ್ನು ಬಿಟ್ಟು ಮೂರನೆಯ ವೃಷನಿರುವನೆಂಬುದನ್ನು ನಾವು ಇದುವರೆಗೂ ಕೇಳಿರುವುದಿಲ್ಲ.

**ಉಚ್ಚೈಃಶ್ರವಾ ವರೋಽಶ್ವಾನಾಂ ರಾಜ್ಞಾಂ ವೈಶ್ರವಣೋ ವರಃ ।**
**ವರೋ ಮಹೇನ್ದ್ರೋ ದೇವಾನಾಂ ಕರ್ಣಃ ಪ್ರಹರತಾಂ ವರಃ ॥**

ಕುದುರೆಗಳಲ್ಲಿ ಉಚ್ಚೈಃಶ್ರವಸ್ಸು ಶ್ರೇಷ್ಠವಾದುದು. ರಾಜರಲ್ಲಿ ಕುಬೇರನು ಶ್ರೇಷ್ಠನು. ದೇವತೆಗಳಲ್ಲಿ ಮಹೇಂದ್ರನು ಶ್ರೇಷ್ಠನು. ಪ್ರಹಾರಕುಶಲರಲ್ಲಿ ಕರ್ಣನು ಶ್ರೇಷ್ಠನು.

ವೀರ್ಯವಂತರಾದ, ಸಮರ್ಥರಾದ, ಶೂರರಾದ ರಾಜರಿಂದಲೂ ಕರ್ಣನನ್ನು ಪರಾಜಯಗೊಳಿಸಲು ಸಾಧ್ಯವಾಗಲಿಲ್ಲ. ದುರ್ಯೋಧನನ ರಾಜ್ಯವನ್ನು ವೃದ್ಧಿಗೊಳಿಸುವ ಸಲುವಾಗಿ ಕರ್ಣನು ವಿಶ್ವವನ್ನೇ ಜಯಸಿದನು. ಮಗಧನರೇಶನಾದ ಜರಾಸಂಧನೂ ಕರ್ಣನನ್ನು ತನ್ನ ಸುಹೃದರೊಡನೆ ಯಥೋಚಿತವಾಗಿ ಗೌರವಿಸಿ ಅವನನ್ನು ಸಹಾಯಕನನ್ನಾಗಿ ಪಡೆದುಕೊಂಡು ಯಾದವ-ಕೌರವರನ್ನುಳಿದು ಭೂಮಂಡಲದ ಸಕಲರಾಜರನ್ನೂ ತನ್ನ ಕಾರಾಗೃಹದಲ್ಲಿ ಬಂಧಿಸಿಟ್ಟಿದ್ದನು. ಅಂತಹ ಮಹಾವೀರನು ಅರ್ಜುನನೊಡನೆ ಮಾಡಿದ ದ್ವೈರಥಯುದ್ಧದಲ್ಲಿ ಹತನಾದನೆಂಬುದನ್ನು ಕೇಳಿ–ಸಮುದ್ರದಲ್ಲಿ ಭಿನ್ನವಾದ ನೌಕೆಯೊಂದು ಅಲ್ಲಿಯೇ ಮುಳುಗಿ ಹೋಗುವಂತೆ–ಶೋಕಸಾಗರದಲ್ಲಿ ಮುಳುಗಿಹೋಗಿದ್ದೇನೆ. ರಥಿಗಳಲ್ಲಿ ಶ್ರೇಷ್ಠನಾದ ವೃಷನು ದ್ವೈರಥಯುದ್ಧದಲ್ಲಿ ಹತನಾದನೆಂಬುದನ್ನು ಕೇಳಿ–ನೌಕೆಯಿಂದ ಹೀನನಾದವನು ಸಾಗರದ ಮಧ್ಯದಲ್ಲಿ ಮುಳುಗಿಹೋಗುವಂತೆ–ನಾನೂ ಶೋಕ ಸಾಗರದಲ್ಲಿ ಮುಳುಗಿಹೋಗಿದ್ದೇನೆ.

**ಈದೃಶೈರ್ಯದ್ಯಹಂ ದುಃಖೈರ್ನ ವಿನಶ್ಯಾಮಿ ಸಂಜಯ ।**
**ವಜ್ರಾದ್ದೃಢತರಂ ಮನ್ಯೇ ಹೃದಯಂ ಮಮ ದುರ್ಭಿದಮ್ ॥**

ಸಂಜಯ! ಇಂತಹ ಹೃದಯಭೇದಿಯಾದ ದುಃಖಗಳಿಂದಲೂ ನಾನು ಮರಣಹೊಂದಲಿಲ್ಲವೆಂದರೆ ಇದಕ್ಕೆ ಕಾರಣ ನನ್ನ ಹೃದಯವು ವಜ್ರಕ್ಕಿಂತಲೂ ಹೆಚ್ಚು ದೃಢವಾಗಿದ್ದು ದುರ್ಭೇದ್ಯವಾಗಿರುವುದೇ ಆಗಿದೆಯೆಂದು ನಾನು ಭಾವಿಸುತ್ತೇನೆ.

ಜ್ಞಾತಿ-ಸಂಬಂಧಿಗಳ ಮತ್ತು ಮಿತ್ರರ ಪರಾಭವವನ್ನೂ, ಮರಣ ವಾರ್ತೆಯನ್ನೂ ಕೇಳಿದವರಲ್ಲಿ ನನ್ನೊಬ್ಬನ ಹೊರತಾಗಿ ಮತ್ತಾವ ಮನುಷ್ಯನು ತಾನೇ ಜೀವವನ್ನು ತೊರೆಯದೇ ಇದ್ದಾನು?

**ವಿಷಮಗ್ನಿಂ ಪ್ರಪಾತಂ ಚ ಪರ್ವತಾಗ್ರಾದಹಂ ವೃಣೇ ।**
**ನ ಹಿ ಶಕ್ಷ್ಯಾಮಿ ದುಃಖಾನಿ ಸೋಢುಂ ಕಷ್ಟಾನಿ ಸಂಜಯ ॥೩೧॥**

ನನ್ನ ಹೃದಯವು ವಜ್ರಕ್ಕೆ ಸಮಾನವಾಗಿರುವುದರಿಂದ ದುಃಖವಾರ್ತೆ

ಯನ್ನು ಕೇಳಿದೊಡನೆಯೇ ನನ್ನ ಪ್ರಾಣವಂತೂ ಹೋಗಲಿಲ್ಲ. ಆದರೆ ಈ ದುಃಖಗಳನ್ನೂ ಮತ್ತು ಕಷ್ಟಗಳನ್ನೂ ಸಹಿಸಿಕೊಂಡಿರಲು ನಾನು ಸಮರ್ಥನಾಗಿಲ್ಲ. ಆದುದರಿಂದ ವಿಷಪ್ರಾಶನಮಾಡಿಯೋ, ಬೆಂಕಿಯಲ್ಲಿ ಬೀಳುವುದರಿಂದಲೋ, ಆಳವಾದ ಹಳ್ಳಕ್ಕೆ ಬೀಳುವುದರಿಂದಲೋ ಅಥವಾ ಪರ್ವತಶಿಖರದಿಂದ ಕೆಳಕ್ಕೆ ಬೀಳುವುದರಿಂದಲೋ ನಾನು ಮೃತ್ಯುವನ್ನಪ್ಪುತ್ತೇನೆ. (ಅನ್ಯಮಾರ್ಗವೇ ನನಗೆ ಕಾಣುತ್ತಿಲ್ಲ.)"

ಲನೆಯ ಅಧ್ಯಾಯವು ಮುಗಿಯಿತು.

೯ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣವಧೆಯ ವೃತ್ತಾಂತವನ್ನು ವಿಸ್ತಾರಪೂರ್ವಕವಾಗಿ ಹೇಳುವಂತೆ ಧೃತರಾಷ್ಟ್ರನು ಸಂಜಯನಿಗೆ ಹೇಳಿದುದು

ಸಂಜಯನು ಧೃತರಾಷ್ಟ್ರನನ್ನು ಸಮಾಧಾನಗೊಳಿಸುತ್ತಾ ಹೇಳುತ್ತಾನೆ:

"ಮಹಾರಾಜ! ಸತ್ಪುರುಷರು ನಿನ್ನನ್ನೀಗ ಧನಸಂಪತ್ತು, ಕುಲ, ಯಶಸ್ಸು, ತಪಸ್ಸು, ಮತ್ತು ಶಾಸ್ತ್ರಜ್ಞಾನ-ಇವುಗಳಲ್ಲಿ ನಹುಷನ ಮಗನಾದ ಯಯಾತಿಗೆ ಸಮಾನನೆಂದು ಭಾವಿಸಿದ್ದಾರೆ. ವೇದ-ಶಾಸ್ತ್ರಗಳ ಜ್ಞಾನದಲ್ಲಿ ನೀನು ಮಹರ್ಷಿಗಳಿಗೆ ಸಮಾನನಾಗಿರುವೆ. ನೀನು ನಿನ್ನ ಜೀವನದಲ್ಲಿ ಮಾಡಬೇಕಾದ ಕಾರ್ಯಗಳೆಲ್ಲವನ್ನೂ ಮಾಡಿ ಮುಗಿಸಿರುವೆ. ಆದುದರಿಂದ ಮನಸ್ಸನ್ನು ಸ್ಥಿರಗೊಳಿಸು. ಮನಸ್ಸನ್ನು ವಿಷಾದದಲ್ಲಿ ಮುಳುಗಿಸಬೇಡ. (ಆಗಿಹೋದುದಕ್ಕೆ ವಿಷಾದಿಸಬೇಡ.)"

"ಸಂಜಯ! ಅದೃಷ್ಟವೆಂಬುದೇ ಹೆಚ್ಚಿನದೆಂದು ನಾನು ಭಾವಿಸುತ್ತೇನೆ. ಪೌರುಷವೆಂಬುದು ಅರ್ಥವಿಲ್ಲದ್ದು. (ನಿಷ್ಪ್ರಯೋಜಕವಾದುದು.) ಇಂತಹ ಪೌರುಷಕ್ಕೆ ಧಿಕ್ಕಾರವಿರಲಿ. ಶಾಲವೃಕ್ಷದಂತೆ ದೀರ್ಘಕಾಯನಾಗಿದ್ದ, ಪೌರುಷವನ್ನೇ ಅವಲಂಬಿಸಿದ್ದ ಕರ್ಣನೂ ಯುದ್ಧದಲ್ಲಿ ಹತನಾದನಲ್ಲವೆ? ಯುಧಿಷ್ಠಿರನ ಅಸಂಖ್ಯಾತವಾದ ಸೈನ್ಯವನ್ನು ಸಂಹರಿಸಿ, ಪಾಂಚಾಲರ ರಥಗಳ ಸಮೂಹವನ್ನು ಧ್ವಂಸಮಾಡಿ, ಬಾಣಗಳ ಮಳೆಗರೆಯುವಿಕೆಯಿಂದ ಎಲ್ಲ ದಿಕ್ಕುಗಳನ್ನೂ ಪರಿತಾಪಗೊಳಿಸುತ್ತಾ–ವಜ್ರಹಸ್ತನಾದ ಇಂದ್ರನು ಅಸುರರನ್ನು ಭ್ರಾಂತಿಗೊಳಿಸಿದಂತೆ-ಪಾರ್ಥರನ್ನು ಭ್ರಾಂತರನ್ನಾಗಿ

ಮಾಡಿದ ಮಹಾರಥನಾದ ಕರ್ಣನು ಕೊಲ್ಲಲ್ಪಟ್ಟು–ಬಿರುಗಾಳಿಯಿಂದ ಬುಡಮೇಲಾಗಿ ಬಿದ್ದಿರುವ ವೃಕ್ಷದಂತೆ–ರಣಾಂಗಣದಲ್ಲಿ ಹೇಗೆ ಮಲಗಿದ್ದಾನೆ? ಸೂತ! ಸಮುದ್ರದ ಆಚೆಯ ದಡವನ್ನು ಪ್ರಾಣಿಗಳು ಕಾಣದಿರುವಂತೆ ನಾನು ಈ ಶೋಕದ ಕೊನೆಯನ್ನೇ ಕಾಣದವನಾಗಿದ್ದೇನೆ. ಚಿಂತೆಯು ಕ್ಷಣ-ಕ್ಷಣಕ್ಕೂ ವರ್ಧಿಸುತ್ತಲೇ ಇದೆ. ಇನ್ನು ಬದುಕಿರಕೂಡದೆಂಬ ಭಾವನೆಯು ಅಂಕುರಿಸುತ್ತಿದೆ. ಸಂಜಯ! ಕರ್ಣನ ವಧೆಯನ್ನೂ ಮತ್ತು ಅರ್ಜುನನ ವಿಜಯವನ್ನೂ ನಿನ್ನಿಂದ ಕೇಳಿರುವೆನಾದರೂ ಕರ್ಣನ ವಧೆಯಾಯಿತೆಂಬುದು ನಂಬಲು ಅರ್ಹವಾದುದಲ್ಲವೆಂಬುದೇ ನನ್ನ ಭಾವನೆಯಾಗಿದೆ. ನಿಶ್ಚಯವಾಗಿಯೂ ನನ್ನ ಹೃದಯವು ವಜ್ರದ ಸಾರದಿಂದ ಮಾಡಲ್ಪಟ್ಟಿದೆ. ಆದುದರಿಂದಲೇ ದುರ್ಭೇದ್ಯವಾಗಿದೆ. ಹೇಗೆಂದರೆ: ಪುರುಷವ್ಯಾಘ್ರನಾದ ಕರ್ಣನು ಹತನಾದನೆಂಬ ದಾರುಣವಾರ್ತೆಯನ್ನು ಕೇಳಿಯೂ ನನ್ನ ಹೃದಯವು ಸೀಳಿಹೋಗಲಿಲ್ಲವಲ್ಲವೆ? ದೇವತೆಗಳು ನನಗೆ ಸುದೀರ್ಘವಾದ ಆಯುಷ್ಯವನ್ನು ಕೊಟ್ಟಿರುವುದು ನಿಜ. ಕರ್ಣನು ಹತನಾದನೆಂದು ಕೇಳಿದನಂತರವೂ ಸುದುಃಖಿತನಾದ ನಾನಿನ್ನೂ ಬದುಕಿಯೇ ಇದ್ದೇನೆ.

ಸಂಜಯ! ನನ್ನ ಈ ಜೀವನಕ್ಕೆ ಧಿಕ್ಕಾರವಿರಲಿ. ಸುಹೃದರಿಂದಲೂ ಹೀನನಾದ ನಾನಿಂದು ಅತಿನಿಂದ್ಯವಾದ ಈ ಅವಸ್ಥೆಯಲ್ಲಿದ್ದೇನೆ. ನಾನಿಂದು ಮಂದಬುದ್ಧಿಯವನಾಗಿದ್ದೇನೆ. ಎಲ್ಲರ ದೃಷ್ಟಿಯಿಂದಲೂ ಶೋಚನೀಯನಾಗಿದ್ದೇನೆ. ದೀನರಾದ ಮತ್ತು ದುಃಖಿತರಾದ ಸಾಮಾನ್ಯಮನುಷ್ಯರಂತೆ ಜೀವನ ನಡೆಸುತ್ತಿದ್ದೇನೆ. ಹಿಂದೆ ಎಲ್ಲರ ಸಮ್ಮಾನಕ್ಕೂ ಪಾತ್ರನಾಗಿದ್ದ ನಾನು ಈಗ ಶತ್ರುಗಳಿಂದ ಅವಮಾನಿತನಾಗಿ ಹೇಗೆ ತಾನೇ ಜೀವಿಸಿರಲಿ? ಭೀಷ್ಮ- ದ್ರೋಣ-ಕರ್ಣರ ಸಾವಿನಿಂದ ಒಂದು ದುಃಖದ ಮೇಲೆ ಮತ್ತೊಂದು ದುಃಖದಂತೆ ದುಃಖಗಳ ಪರಂಪರೆಯನ್ನೇ ನಾನು ಹೊಂದಿದ್ದೇನೆ. (ಅನುಭವಿಸುತ್ತಿದ್ದೇನೆ). ಸೂತಪುತ್ರನು ಹತನಾದನಂತರ ನಮ್ಮ ಪಕ್ಷದಲ್ಲಿ ಸೈನಿಕರ ಅಥವಾ ಯೋಧಶ್ರೇಷ್ಠರ ಅವಶೇಷವು ಉಳಿಯುವುದೆಂದು ನಾನು ಭಾವಿಸುವುದಿಲ್ಲ. ನನ್ನ ಮಕ್ಕಳಿಗೆ ಆ ಕರ್ಣನೇ, ಶ್ರಮಪಟ್ಟು ದಾಟಿದನಂತರ ಹೊಂದಬಹುದಾದ ದೊಡ್ಡ ತೀರಪ್ರಾಯನಾಗಿದ್ದನು.

ಕರ್ಣನೇ ಯುದ್ಧಮಹಾಸಾಗರದಿಂದ ದಾಟಿಸಿ ತೀರಕ್ಕೊಯ್ಯುವನೆಂದು ಅಥವಾ ಅವನೇ ತೀರಪ್ರಾಯನಾಗುವನೆಂದು ನನ್ನ ಮಕ್ಕಳು ಭಾವಿಸಿದ್ದರು. ಯುದ್ಧದಲ್ಲವನು ಅನೇಕ ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಾ ಇರುವಾಗಲೇ ಅರ್ಜುನನಿಂದ ಕೊಲ್ಲಲ್ಪಟ್ಟನು. ಅಂತಹ ಮನುಜಶ್ರೇಷ್ಠನು ಇಲ್ಲದಮೇಲೆ ನಾನು ಬದುಕಿರುವುದರಿಂದ ಪ್ರಯೋಜನವೇನಿದೆ? ವಜ್ರಾಯುಧದ ಪ್ರಹಾರದಿಂದ ಪರ್ವತದ ಶಿಖರವು ಭೂಮಿಯಮೇಲೆ ಬಿದ್ದಂತೆ–ಅರ್ಜುನನ ಬಾಣಗಳಿಂದ ಪೀಡಿತನಾದ ಆಧಿರಥಿಯು ನಿಶ್ಚಯವಾಗಿಯೂ ರಥದಿಂದ ಕೆಳಕ್ಕೆ ಬಿದ್ದಿದ್ದಾನೆ. ಮದಿಸಿದ ಗಜರಾಜನಿಂದ ಕೆಳಕ್ಕೆ ಬೀಳಿಸಲ್ಪಟ್ಟ ಮತ್ತೊಂದು ಆನೆಯಂತೆ ರಕ್ತದಿಂದ ತೊಯ್ದ ಶರೀರದಿಂದ ಕೂಡಿದ ಕರ್ಣನು ಭೂಮಿಯನ್ನೇ ತನ್ನ ಕಾಂತಿಯಿಂದ ಶೋಭಾಯಮಾನವನ್ನಾಗಿ ಮಾಡುತ್ತಾ ನೆಲದ ಮೇಲೆ ಮಲಗಿದ್ದಾನೆ. ಯಾವನು ನನ್ನ ಮಕ್ಕಳಿಗೆ ಬಲರೂಪನಾಗಿದ್ದನೋ, ಪಾಂಡವರಿಗೆ ಯಾವನಿಂದ ಹೆಚ್ಚಿನ ಭಯವಿದ್ದಿತೋ, ಧನುಷ್ಮಂತರಾದ ವೀರಯೋಧರಿಗೆ ಯಾವನು ಆದರ್ಶಪ್ರಾಯನಾಗಿದ್ದನೋ–ಅಂತಹ ಕರ್ಣನು ಅರ್ಜುನನಿಂದ ಹತನಾದನು.

ಸಂಜಯ! ಇಂದ್ರನ ವಜ್ರಾಯುಧದಿಂದ ಕತ್ತರಿಸಲ್ಪಟ್ಟ ಪರ್ವತವು ಭೂಮಿಯ ಮೇಲೆ ಬಿದ್ದಂತೆ–ಮಹಾಧನುಷ್ಮಂತನಾದ, ವೀರನಾದ, ಮಿತ್ರರಿಗೆ ಅಭಯಂಕರನಾದ ಕರ್ಣನು ಅರ್ಜುನನಿಂದ ಹತನಾಗಿ ಭೂಮಿಯ ಮೇಲೆ ಮಲಗಿದ್ದಾನೆ.

**ಪಙ್ಗೋರಿವಾಧ್ವಗಮನಂ ದರಿದ್ರಸ್ಯೇವ ಕಾಮಿತಮ್ ।**
**ದುರ್ಯೋಧನಸ್ಯ ಚಾಕೂತಂ ತೃಷಿತಸ್ಯೇವ ವಿಪ್ರುಷಃ ॥೧೯॥**

ಹೆಳವನಿಗೆ ಹಾದಿನಡೆಯುವುದು ಸಾಧ್ಯವಾಗದಂತೆ–ದರಿದ್ರನಾದವನ ಮನೋರಥಗಳು ಫಲಿಸದಂತೆ–ಜಲಬಿಂದುಗಳು ಬಾಯಾರಿದವನ ಬಾಯಾರಿಕೆಯನ್ನು ಹೋಗಲಾಡಿಸದಂತೆ–ದುರ್ಯೋಧನನ ಆಶಯವೂ ಕೈಗೂಡುವುದಿಲ್ಲ.

**ಅನ್ಯಥಾ ಚಿನ್ತಿತಂ ಕಾರ್ಯಮನ್ಯಥಾ ತತ್ತು ಜಾಯತೇ ।**
**ಅಹೋ ನು ಬಲವದ್ದೈವಂ ಕಾಲಶ್ಚ ದುರತಿಕ್ರಮಃ ॥೨೦॥**

ಯಾವುದೋ ನಿಟ್ಟಿನಲ್ಲಿ ಯೋಚಿಸಿ ಕೆಲಸಮಾಡಿದರೆ ಆ ಕೆಲಸವು ಯಾವುದೋ ರೀತಿಯಲ್ಲಿ ನಡೆದುಹೋಗುತ್ತದೆ. ನಮ್ಮ ಯೋಚನೆಗೆ ಅಥವಾ ಯೋಜನೆಗೆ ಅನುಗುಣವಾಗಿ ಆ ಕಾರ್ಯವು ನಡೆಯುವುದೇ ಇಲ್ಲ. ಅದೃಷ್ಟವೆಂಬುದು ಬಲವತ್ತರವಾದುದು. ಕಾಲವು ಅತಿಕ್ರಮಿಸಲು ಕಷ್ಟಸಾಧ್ಯವಾದುದು.

ಸಂಜಯ! ನನ್ನ ಮಗ ದುಃಶಾಸನನು ಉತ್ಸಾಹರಹಿತವಾದ ಮನಸ್ಸನ್ನು ಹೊಂದಿ ಪೌರುಷಹೀನನಾಗಿ ಪ್ರಾಣದ ಮೇಲೆ ಆಸೆಯನ್ನಿಟ್ಟುಕೊಂಡು ಪಲಾಯನಮಾಡುತ್ತಿರುವಾಗ ಭೀಮಸೇನನಿಂದ ಕೊಲ್ಲಲ್ಪಟ್ಟನೇ? ಯುದ್ಧ ದಲ್ಲವನು ದೀನರಾದವರಿಂದ (ಹೇಡಿಗಳಿಂದ) ಆಚರಿಸಲ್ಪಡತಕ್ಕ ಕುತ್ಸಿತ ಕಾರ್ಯವನ್ನೇನೂ ಮಾಡಲಿಲ್ಲವಲ್ಲವೇ? ಇತರ ಕ್ಷತ್ರಿಯವೀರರು ಕೊಲ್ಲಲ್ಪ ಟ್ಟಂತೆಯೇ ಅವನೂ ಸಹ ಶತ್ರುಗಳಿಂದ ಕೊಲ್ಲಲ್ಪಡಲಿಲ್ಲವೇ? ಧರ್ಮಾತ್ಮ ನಾದ ಯುಧಿಷ್ಠಿರನು ಯಾವಾಗಲೂ ನನ್ನ ಮಗನಿಗೆ 'ಯುದ್ಧ ಮಾಡಬೇಡ' 'ಯುದ್ಧವು ನಡೆಯಲು ಅವಕಾಶಕೊಡಬೇಡ' –ಎಂದೇ ಹೇಳುತ್ತಿದ್ದನು. ಆದರೆ ಮೂಢನಾದ ದುರ್ಯೋಧನನು ಹಿತಕರವಾದ, ಔಷಧದ ರೂಪದಲ್ಲಿದ್ದ ಯುಧಿಷ್ಠಿರನ ಆ ಮಾತುಗಳನ್ನು ಗ್ರಹಿಸಲಿಲ್ಲ. ಶರತಲ್ಪದಲ್ಲಿ ಮಲಗಿದ್ದ ಮಹಾತ್ಮನಾದ ಭೀಷ್ಮನು ಅರ್ಜುನನಿಂದ ಜಲವನ್ನು ಅಪೇಕ್ಷಿಸಿದನು. ಮರುಕ್ಷಣದಲ್ಲಿಯೇ ಅರ್ಜುನನು ಬಾಣದಿಂದ ಭೂಮಿ ಯನ್ನೇ ಭೇದಿಸಿ ಪಾತಾಳಗಂಗೆಯು ಮೇಲೆ ಬರುವಂತೆ ಮಾಡಿ ಭೀಷ್ಮನ ಬಾಯಾರಿಕೆಯು ಇಂಗುವಂತೆ ಮಾಡಿದನು. ಅರ್ಜುನನು ತನಗಾಗಿ ಜಲಧಾರೆಯನ್ನೇ ಸೃಷ್ಟಿಸಿದುದನ್ನು ಕಂಡು ಭೀಷ್ಮನು ನನ್ನ ಮಗನೊಡನೆ "ತಾತ ಸಂಶಾಮ್ಯ ಪಾಣ್ಡವೈಃ-ಮಗು! ಪಾಂಡವರೊಡನೆ ಶಾಂತಿಸಂಧಾನವನ್ನು ಏರ್ಪಡಿಸು.

ಪ್ರಶಾಮಾದ್ಧಿ ಭವೇಚ್ಛಾನ್ತಿರ್ಮದನ್ತಂ ಯುದ್ಧಮಸ್ತು ವಃ ।
ಭ್ರಾತೃಭಾವೇನ ಪೃಥಿವೀಂ ಭುಂಕ್ಷ್ವ ಪಾಣ್ಡುಸುತೈಃ ಸಹ ॥೨೬॥

ಸಂಧಿಯಿಂದ ವೈರವು ಉಪಶಮನವಾಗುತ್ತದೆ. ವೈರದ ಉಪಶಮನ

ದಿಂದ ಚಿರಶಾಂತಿಯು ನೆಲೆಸುತ್ತದೆ. ನನ್ನ ಅಂತ್ಯದೊಡನೆ ನಿಮ್ಮ ಯುದ್ಧದ ಅಂತ್ಯವೂ ಆಗಲಿ. ಪಾಂಡುವಿನ ಮಕ್ಕಳೊಡನೆ ಸೋದರಿಕೆಯ ಭಾವವನ್ನಿಟ್ಟುಕೊಂಡು ಈ ಭೂಮಂಡಲವನ್ನು ಉಪಭುಂಜಿಸು"–ಎಂದು ಹೇಳಿದನು.

ಸಂಜಯ! ಭೀಷ್ಮನು ಅಂದು ಹೇಳಿದ ಮಾತಿನಂತೆ ನಡೆಯದೇ ಇದ್ದುದಕ್ಕಾಗಿ ನನ್ನ ಮಗನು ಇಂದು ನಿಶ್ಚಯವಾಗಿಯೂ ದುಃಖಪಡುತ್ತಾನೆ. ಅವನ ಮಾತಿನಂತೆ ನಡೆದುಕೊಳ್ಳದಿದ್ದರೆ ಏನಾಗುವುದೆಂದು ಹೇಳಿದ್ದ ದೀರ್ಘದರ್ಶಿಯಾದ ಭೀಷ್ಮನ ಮಾತು ಇಂದು ಕಾರ್ಯರೂಪದಲ್ಲಿಯೇ ಸಿದ್ಧವಾಗಿದೆ. ನನ್ನ ಮಂತ್ರಿಗಳು, ಮಕ್ಕಳು, ಬಂಧುಗಳು ಎಲ್ಲರೂ ಮರಣಹೊಂದಿದರು. ದ್ಯೂತದ ಕಾರಣದಿಂದಾಗಿ ಅತ್ಯಂತಕಷ್ಟದಲ್ಲಿ ಸಿಲುಕಿದ ನಾನಿಂದು ರೆಕ್ಕೆಗಳನ್ನು ಕತ್ತರಿಸಿದ ಪಕ್ಷಿಯಂತಾಗಿದ್ದೇನೆ.

**ಯಥಾ ಹಿ ಶಕುನಿಂ ಗೃಹ್ಯ ಛಿತ್ವಾ ಪಕ್ಷೌ ಚ ಸಂಜಯ ।**
**ವಿಸರ್ಜಯನ್ತಿ ಸಂಹೃಷ್ಟಾಃ ಕ್ರೀಡಮಾನಾಃ ಕುಮಾರಕಾಃ ॥೨೯॥**

**ಲೂನಪಕ್ಷತಯಾ ತಸ್ಯ ಗಮನಂ ನೋಪಪದ್ಯತೇ ।**
**ತಥಾಹಮಪಿ ಸಮ್ಪ್ರಾಪ್ತೋ ಲೂನಪಕ್ಷ ಇವ ದ್ವಿಜಃ ॥೩೦॥**

ಮಕ್ಕಳು ಆಟವಾಡುತ್ತಿರುವಾಗ ಹತ್ತಿರಕ್ಕೆ ಬಂದ ಪಕ್ಷಿಯೊಂದನ್ನು ಹಿಡಿದು ಆಟಕ್ಕಾಗಿ ಅದರ ರೆಕ್ಕೆಗಳನ್ನು ಕತ್ತರಿಸಿ ಬಿಟ್ಟುಬಿಡುತ್ತಾರೆ. ರೆಕ್ಕೆಯು ಕತ್ತರಿಸಲ್ಪಟ್ಟುದರಿಂದ ಆ ಪಕ್ಷಿಯು ಹಾರಿ ಹೋಗುವ ಸಾಧ್ಯತೆಯೇ ಇರುವುದಿಲ್ಲ. ನಾನೂ ಸಹ ಅದೇ ರೀತಿಯಲ್ಲಿ ಕತ್ತರಿಸಲ್ಪಟ್ಟ ರೆಕ್ಕೆಗಳುಳ್ಳ ಪಕ್ಷಿಯಂತಾಗಿದ್ದೇನೆ. (ನನ್ನ ಮತ್ತು ಪಾಂಡುವಿನ ಮಕ್ಕಳ ಯುದ್ಧವೆಂಬ ಆಟದಲ್ಲಿ ಅಮಾತ್ಯ-ಬಂಧು-ಮಿತ್ರರೂಪರಾದ ನನ್ನ ರೆಕ್ಕೆಗಳನ್ನು ಕಳೆದುಕೊಂಡು ಬಿಟ್ಟಿದ್ದೇನೆ. ಈಗ ನಾನು ಹಾರಲಾರೆ. ಯಾವ ವಿಧವಾದ ಅಧಿಕಾರವನ್ನೂ ನಡೆಸಲಾರೆ–ಎಂಬುದು ಧೃತರಾಷ್ಟ್ರನ ಅಭಿಪ್ರಾಯವಾಗಿದೆ. ಇದನ್ನೇ ಮುಂದಿನ ಶ್ಲೋಕದಲ್ಲಿ ಅವನು ಸ್ಪಷ್ಟಪಡಿಸುತ್ತಾನೆ).

**ಕ್ಷೀಣಃ ಸರ್ವಾರ್ಥಹೀನಶ್ಚ ನಿರ್ಜ್ಞಾತಿರ್ಬನ್ಧುವರ್ಜಿತಃ ।**
**ಕಾಂ ದಿಶಂ ಪ್ರತಿಪತ್ಸ್ಯಾಮಿ ದೀನಃ ಶತ್ರುವಶಂ ಗತಃ ॥೩೧॥**

ನಾನು ಬಹಳ ದುರ್ಬಲನಾಗಿದ್ದೇನೆ. ಸಕಲವಿಧವಾದ ಧನ-ಕನಕ-ವಸ್ತು-ವಾಹನಗಳಿಂದಲೂ ಹೀನನಾಗಿದ್ದೇನೆ. ಕುಟುಂಬವರ್ಗದವರಿಂದಲೂ ನೆಂಟರಿಂದಲೂ ರಹಿತನಾಗಿದ್ದೇನೆ. ಸರ್ವಪ್ರಕಾರದಿಂದಲೂ ದೀನನಾಗಿರುವ, ಶತ್ರುಗಳ ವಶನಾಗುವ ನಾನು ಯಾವ ದಿಕ್ಕಿಗೆ ಓಡಿಹೋಗಲಿ?"

ವೈಶಂಪಾಯನರು ಹೇಳುತ್ತಾರೆ:

"ಜನಮೇಜಯ! ಇವೇ ಮುಂತಾಗಿ ಹೇಳಿಕೊಂಡು ಬಹು ದುಃಖಿತನಾಗಿ ಗೋಳಾಡಿ ಬಳಿಕ ಶೋಕದಿಂದ ವ್ಯಾಕುಲವಾದ ಮನಸ್ಸನ್ನು ಹೊಂದಿದ್ದ ಧೃತರಾಷ್ಟ್ರನು ಸಂಜಯನನ್ನು ಕುರಿತು ಪುನಃ ಹೇಳಿದನು:

"ಸಂಜಯ! ನನ್ನ ಕಾರ್ಯಾರ್ಥವಾಗಿ ಕರ್ಣನು ಸರ್ವ ಕಾಂಬೋಜರನ್ನೂ, ಕೇಕಯರನ್ನೂ, ಗಾಂಧಾರ-ವಿದೇಹರನ್ನೂ ಯುದ್ಧದಲ್ಲಿ ಜಯಿಸಿದನು. ದುರ್ಯೋಧನನ ರಾಜ್ಯವನ್ನು ವೃದ್ಧಿಗೊಳಿಸುವ ಸಲುವಾಗಿ ಪ್ರಭುವಾದ ಕರ್ಣನು ಭೂಮಂಡಲವನ್ನೇ ಜಯಿಸಿದನು. ಅಂತಹ ಮಹಾನುಭಾವನಾದ ಕರ್ಣನನ್ನು ಬಾಹುಬಲದಿಂದ ಸುಶೋಭಿತರಾದ, ಶೂರರಾದ ಪಾಂಡವರು ಜಯಿಸಿದರು. ಮಹಾಧನುಷ್ಮಂತನಾದ ಕರ್ಣನು ಕಿರೀಟಿಯಿಂದ ಹತನಾಗಲಾಗಿ ಆ ಸಮಯದಲ್ಲಿ ಯಾವ ಯಾವ ವೀರರು ವೀರನಾದ ಕರ್ಣನನ್ನು ಸುತ್ತುವರಿದು ನಿಂತಿದ್ದರು? ಈ ವಿಷಯವನ್ನು ನನ್ನೊಡನೆ ಹೇಳು. ಸಂಜಯ! ಕರ್ಣನೊಬ್ಬನನ್ನೇ ಮುಂದೆಬಿಟ್ಟು ಉಳಿದ ವೀರಯೋಧರೆಲ್ಲರೂ ಹಿಂದಕ್ಕೆ ಸರಿದಿದ್ದಾಗ–ಇಂತಹುದೇ ಸಮಯವನ್ನು ನಿರೀಕ್ಷಿಸುತ್ತಿದ್ದ ಪಾಂಡವರೆಲ್ಲರೂ ಸೇರಿ ಕರ್ಣನೊಬ್ಬನನ್ನು ಸಂಹರಿಸಲಿಲ್ಲ ತಾನೇ? ನನಗೆ ಈ ಸಂಶಯವುಂಟಾಗಲು ಕಾರಣವೇನೆಂದರೆ: ಈ ಹಿಂದೆ ನೀನು ಕರ್ಣನ ವಧೆಯ ವಿಷಯವಾಗಿ ಹೇಳುವಾಗ 'ವೀರೋ ನಿಪಾತಿತಃ' 'ವೀರನಾದ ಕರ್ಣನು ಹತನಾದನು'–ಎಂಬುದಾಗಿ ಹೇಳಿದೆ. ಈ ನನ್ನ ಸಂಶಯಕ್ಕೆ ಮತ್ತೊಂದು ಕಾರಣವೆಂದರೆ: ಈ ಹಿಂದೆಯೂ ಭೀಷ್ಮ-ದ್ರೋಣರ ವಧೆಯಾದಾಗ ಕೂಡ ಧರ್ಮಸಮ್ಮತವಲ್ಲದ ರೀತಿಯಲ್ಲಿಯೇ ಅವರ ವಧೆಯಾಯಿತು.

**ಭೀಷ್ಮಮಪ್ರತಿಯುಧ್ಯನ್ತಂ ಶಿಖಣ್ಡೀ ಸಾಯಕೋತ್ತಮೈಃ ।**
**ಪಾತಯಾಮಾಸ ಸಮರೇ ಸರ್ವಶಸ್ತ್ರಭೃತಾಂ ವರಮ್ ॥೩೭॥**

ಸರ್ವಶಸ್ತ್ರಧಾರಿಗಳಲ್ಲಿಯೂ ಶ್ರೇಷ್ಠನಾದ ಭೀಷ್ಮನು ಯುದ್ಧವನ್ನು ನಿಲ್ಲಿಸಿದ್ದಾಗ ಶಿಖಂಡಿಯು ಶ್ರೇಷ್ಠವಾದ ಬಾಣಗಳ ಪ್ರಯೋಗದಿಂದ ಅವನನ್ನು ಕೆಳಕ್ಕೆ ಬೀಳಿಸಿದನು.

**ತಥಾ ದ್ರೌಪದಿನಾ ದ್ರೋಣೋ ನ್ಯಸ್ತಸರ್ವಾಯುಧೋ ಯುಧಿ ।**
**ಯುಕ್ತಯೋಗೋ ಮಹೇಷ್ವಾಸಃ ಶರೈರ್ಬಹುಭಿರಾಚಿತಃ ॥೩೮॥**
**ನಿಹತಃ ಖಡ್ಗಮುದ್ಯಮ್ಯ ಧೃಷ್ಟದ್ಯುಮ್ನೇನ ಸಂಜಯ ।**
**ಅನ್ತರೇಣ ಹತಾವೇತೌ ಛಲೇನ ಚ ವಿಶೇಷತಃ ॥೩೯॥**

ಅದೇ ರೀತಿಯಲ್ಲಿ ಮಹಾಧನುಷ್ಮಂತರಾದ, ಅನೇಕಬಾಣಗಳಿಂದ ಸಂಪೀಡಿತರಾಗಿದ್ದ ದ್ರೋಣರು ತಮ್ಮ ಸಕಲವಿಧವಾದ ಶಸ್ತ್ರಾಸ್ತ್ರಗಳನ್ನೂ ಕೆಳಗಿಟ್ಟಿದ್ದರು. ಯೋಗಯುಕ್ತರಾಗಿದ್ದರು. ಅಂತಹ ಅವಸ್ಥೆಯಲ್ಲಿದ್ದ ಆಚಾರ್ಯರನ್ನು ಧೃಷ್ಟದ್ಯುಮ್ನನು ಕತ್ತಿಯನ್ನೆತ್ತಿ ತುಂಡರಿಸಿದನು. ಈ ಇಬ್ಬರೂ ಛಿದ್ರಾನ್ವೇಷಣದ ಮೂಲಕವಾಗಿಯೇ ಶತ್ರುಗಳಿಂದ ಕೊಲ್ಲಲ್ಪಟ್ಟರು. ಅದರಲ್ಲಿಯೂ ವಿಶೇಷವಾಗಿ ಶತ್ರುಗಳು ನಮ್ಮ ಕಡೆಯ ಈ ಇಬ್ಬರು ಮಹಾರಥರನ್ನೂ ಮೋಸದಿಂದಲೇ ಕೊಂದರು. ಅವರು ಹತರಾದರೆಂಬ ವಾರ್ತೆಯನ್ನೂ ನಾನು ನಿನ್ನಿಂದಲೇ ಕೇಳಿದೆನು. ನಿಜಹೇಳುವುದಾದರೆ, ಸಂಜಯ!

**ಭೀಷ್ಮದ್ರೋಣೌ ಹಿ ಸಮರೇ ನ ಹನ್ಯಾದ್ವಜ್ರಭೃತ್ಸ್ವಯಮ್ ।**
**ನ್ಯಾಯೇನ ಯುಧ್ಯಮಾನೌ ಹಿ ತದ್ವೈ ಸತ್ಯಂ ಬ್ರವೀಮಿ ತೇ ॥೪೦॥**

ಯುದ್ಧಮಾಡುತ್ತಿರುವ ಭೀಷ್ಮ-ದ್ರೋಣರನ್ನು ವಜ್ರಾಯುಧಪಾಣಿಯಾದ ಸಾಕ್ಷಾತ್ ಇಂದ್ರನೇ ಅವರೊಡನೆ ಯುದ್ಧದಲ್ಲಿ ತೊಡಗಿದ್ದರೂ ನ್ಯಾಯರೀತಿಯಿಂದ ಸಂಹರಿಸಲು ಸಮರ್ಥನಾಗುತ್ತಿರಲಿಲ್ಲ. ಅದು ಸತ್ಯ. ಈ ಮಾತನ್ನು ನಿನಗೆ ಹೇಳುತ್ತೇನೆ.

ಕರ್ಣನೂ ಸಹ ಪರಾಕ್ರಮದಲ್ಲಿ ಆ ಇಬ್ಬರು ಮಹಾವೀರರಿಗಿಂತಲೂ ಕಳಪೆಯಾದವನೇನಲ್ಲ. ಹೀಗಿದ್ದರೂ:

**ಕರ್ಣಂ ತ್ವಸ್ಯನ್ತಮಸ್ತ್ರಾಣಿ ದಿವ್ಯಾನಿ ಚ ಬಹೂನಿ ಚ।**
**ಕಥಮಿನ್ದ್ರೋಪಮಂ ವೀರಂ ಮೃತ್ಯುರ್ಯುದ್ಧೇ ಸಮಸ್ಪೃಶತ್ ॥**

ಅನೇಕಾನೇಕ ದಿವ್ಯಾಸ್ತ್ರಗಳನ್ನು ಪುಂಖಾನುಪುಂಖವಾಗಿ ಬಿಡುತ್ತಿದ್ದ ಇಂದ್ರಸದೃಶನಾದ, ವೀರನಾದ ಕರ್ಣನನ್ನು ಮೃತ್ಯುವು ಯುದ್ಧದಲ್ಲಿ ಹೇಗೆ ತಾನೇ ಮುಟ್ಟಿತು?

ಯಾವನಿಗೆ ಪುರಂದರನು ಕುಂಡಲಗಳಿಗೆ ವಿನಿಮಯರೂಪವಾಗಿ ವಿದ್ಯುತ್ತಿನ ಪ್ರಭೆಯಿಂದ ಕೂಡಿದ್ದ, ಸುವರ್ಣಭೂಷಿತವಾಗಿದ್ದ, ದಿವ್ಯವಾದ, ಶತ್ರುನಾಶಕವಾದ ಶಕ್ತ್ಯಾಯುಧವನ್ನು ದಯಪಾಲಿಸಿದ್ದನೋ–ಅಂತಹ ಮಹಾಶೂರನಾದ ಕರ್ಣನು ಯುದ್ಧದಲ್ಲಿ ಅರ್ಜುನನಿಂದ ಹೇಗೆ ಕೊಲ್ಲಲ್ಪಟ್ಟನು?

ಯುದ್ಧಗಳಲ್ಲಿ ಶತ್ರುಗಳನ್ನು ಸಂಹರಿಸುವ ಸಾಮರ್ಥ್ಯವನ್ನು ಹೊಂದಿದ್ದ, ಸರ್ಪದ ಮುಖವನ್ನು ಹೊಂದಿದ್ದ, ಕಾಂಚನಭೂಷಿತವಾದ, ಹದ್ದಿನ ರೆಕ್ಕೆಯನ್ನು ಹೊಂದಿದ್ದ ದಿವ್ಯಾಸ್ತ್ರವು ಕರ್ಣನ ಬತ್ತಳಿಕೆಯಲ್ಲಿ ಬಹಳ ದಿವಸಗಳಿಂದಲೂ ಮಲಗಿಯೇ ಇದ್ದಿತು. ಇಂದ್ರದತ್ತವಾದ ಶಕ್ತ್ಯಾಯುಧ ವನ್ನೂ, ಸರ್ಪಾಸ್ತ್ರವನ್ನೂ ಹೊಂದಿದ್ದ ಕಾರಣದಿಂದಲೇ ಅವನು ಭೀಷ್ಮ-ದ್ರೋಣಪ್ರಮುಖರಾದ ಮಹಾರಥರನ್ನೂ ಅವಹೇಳನ ಮಾಡುತ್ತಿದ್ದನು. ಕರ್ಣನು ಪರಶುರಾಮನಿಂದಲೇ ಮಹಾಘೋರವಾದ ಬ್ರಹ್ಮಾಸ್ತ್ರದ ಆದಾನ- ಅಭಿಮಂತ್ರಣ-ಸಂಧಾನ-ಪ್ರಯೋಗಗಳಲ್ಲಿ ಶಿಕ್ಷೆಯನ್ನು ಪಡೆದುಕೊಂಡಿದ್ದನು. ಅಭಿಮನ್ಯುವಿನ ಬಾಣಗಳಿಂದ ಪೀಡಿತರಾದ ದ್ರೋಣ ಪ್ರಮುಖರಾದ ಕುರುಯೋಧರು ಯುದ್ಧದಿಂದ ಹಿಂದಿರುಗುತ್ತಿರುವುದನ್ನು ಕಂಡು ಮಹಾಬಾಹುವಾದ ಕರ್ಣನು ಅಭಿಮನ್ಯುವಿನ ಧನುಸ್ಸನ್ನು ನಿಶಿತವಾದ ಬಾಣಗಳಿಂದ ಧ್ವಂಸಮಾಡಿದನು. ಹತ್ತು ಸಾವಿರ ಆನೆಗಳ ಬಲವನ್ನು ಹೊಂದಿರುವ, ವಜ್ರಾಯುಧದ ವೇಗಕ್ಕೆ ಸಮಾನವಾದ ವೇಗವನ್ನು ಹೊಂದಿರುವ, ಅಪರಾಜಿತನಾಗಿದ್ದ ಭೀಮಸೇನನನ್ನು ಬಹಳ ಶೀಘ್ರವಾಗಿ ರಥಹೀನನನ್ನಾಗಿ ಮಾಡಿ ಅವನನ್ನು ಹಾಸ್ಯಮಾಡಿದನು. ಸಹದೇವನನ್ನೂ ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಸೋಲಿಸಿ ರಥಹೀನನನ್ನಾಗಿ ಮಾಡಿದನು. ಆದರೆ ಅವನ ಮೇಲಿನ ಕೃಪೆಯಿಂದಲೂ, ಧರ್ಮದ

ದೃಷ್ಟಿಯಿಂದಲೂ ಸಹದೇವನನ್ನು ಸಂಹರಿಸಲಿಲ್ಲ. ಸಾವಿರಾರು ಮಾಯೆಗಳನ್ನು ಸೃಷ್ಟಿಸುತ್ತಿದ್ದ, ಪಾಂಡವರ ಪಕ್ಷಕ್ಕೆ ವಿಜಯವನ್ನಿಚ್ಛಿಸಿ ಯುದ್ಧಮಾಡುತ್ತಿದ್ದ, ರಾಕ್ಷಸೇಂದ್ರನಾದ ಘಟೋತ್ಕಚನನ್ನು ಇಂದ್ರನು ಕೊಟ್ಟಿದ್ದ ಶಕ್ತ್ಯಾಯುಧದಿಂದ ಸಂಹರಿಸಿದನು. ಅರ್ಜುನನು ಕರ್ಣನಿಗೆ ಹೆದರಿಕೊಂಡೇ ಇಷ್ಟು ದಿವಸಗಳವರೆಗೆ ಕರ್ಣನೊಡನೆ ದ್ವೈರಥಯುದ್ಧಕ್ಕೆ ಬಂದಿರಲಿಲ್ಲ. ಇಂತಹ ಮಹಾವೀರನಾದ ಕರ್ಣನು ರಣಾಂಗಣದಲ್ಲಿ ಅರ್ಜುನನಿಂದ ಹೇಗೆ ಕೊಲ್ಲಲ್ಪಟ್ಟನು?

**ಸಂಶಪ್ತಕಾನಾಂ ಯೋಧಾ ಯೇ ಆಹ್ವಯನ್ತ ಸದಾನ್ಯತಃ ।**
**ಏತಾನ್ಹತ್ವಾ ಹನಿಷ್ಯಾಮಿ ಪಶ್ಚಾದ್ವೈಕರ್ತನಂ ರಣೇ ॥೫೦॥**
**ಇತಿ ವ್ಯಪದಿಶನ್ಪಾರ್ಥೋಽವರ್ಜಯತ್ಸೂತಜಂ ರಣೇ ।**
**ಸ ಕಥಂ ನಿಹತೋ ವೀರಃ ಪಾರ್ಥೇನ ಪರವೀರಹಾ ॥೫೧॥**

"ಸಂಶಪ್ತಕಯೋಧರು ಯಾವಾಗಲೂ ನನ್ನನ್ನು ಬೇರೆಯ ಕಡೆ ಯುದ್ಧಮಾಡಲು ಆಹ್ವಾನಿಸುತ್ತಾರೆ. ಅವರೆಲ್ಲರನ್ನೂ ಸಂಹರಿಸಿ ಅನಂತರ ನಾನು ಕರ್ಣನನ್ನು ಯುದ್ಧದಲ್ಲಿ ಸಂಹರಿಸುತ್ತೇನೆ"–ಹೀಗೆ ನೆಪ ಹೇಳಿಕೊಂಡು ಅರ್ಜುನನು ಕರ್ಣನೊಡನೆ ಯುದ್ಧಮಾಡುವುದನ್ನು ತಪ್ಪಿಸಿಕೊಳ್ಳುತ್ತಿದ್ದನು. ಅಂತಹ ಶತ್ರುವೀರಹಂತಕನಾದ ಕರ್ಣನನ್ನು ಪಾರ್ಥನು ಹೇಗೆ ಸಂಹರಿಸಿದನು?

ಕರ್ಣನ ರಥವೇನಾದರೂ ಮುರಿಯದೇ ಹೋಗಿದ್ದರೆ, ಧನುಸ್ಸೇನಾದರೂ ತುಂಡಾಗಿರದಿದ್ದರೆ, ಅಸ್ತ್ರಗಳೇನಾದರೂ ಹಾಳಾಗಿರದಿದ್ದರೆ–ಅವನನ್ನು ಸಂಹರಿಸಲು ಯಾರಿಂದಲೂ ಶಕ್ಯವೇ ಇರಲಿಲ್ಲ. ಹೀಗಿರುವಾಗ ಅವನು ಶತ್ರುಗಳಿಂದ ಹೇಗೆ ಸಂಹರಿಸಲ್ಪಟ್ಟನು? (ಆ ಸಮಯದಲ್ಲಿ ಅವನ ರಥವೇನಾದರೂ ಮುರಿದುಹೋಯಿತೇ? ಧನುಸ್ಸು ತುಂಡಾಯಿತೇ? ಭಾರ್ಗವನಿಂದ ಪಡೆದುಕೊಂಡಿದ್ದ ಅಸ್ತ್ರಗಳು ನಾಶಹೊಂದಿದುವೇ?)

ಯುದ್ಧದ ಸಮಯದಲ್ಲಿ ಮಹಾಧನುಸ್ಸನ್ನು ಹಿಂದಕ್ಕೂ ಮುಂದಕ್ಕೂ ಓಲಾಡಿಸುತ್ತಾ ಘೋರವಾದ ಬಾಣಗಳನ್ನೂ, ದಿವ್ಯಾಸ್ತ್ರಗಳನ್ನೂ ಬಿಡುತ್ತಿದ್ದ, ವ್ಯಾಘ್ರದ ವೇಗಕ್ಕೆ ಸಮಾನವಾದ ವೇಗವನ್ನು

ಹೊಂದಿದ್ದ ಪುರುಷವ್ಯಾಘ್ರನಾದ ಕರ್ಣನನ್ನು ಯುದ್ಧದಲ್ಲಿ ಜಯಿಸಲು ಯಾರಿಗೆ ತಾನೇ ಸಾಮರ್ಥ್ಯವಿದ್ದಿತು? ಅಂತಹ ಮಹಾಶೂರನೂ ಹತನಾದನೆಂದು ನೀನು ಹೇಳುತ್ತಿರುವೆಯಾದ ಕಾರಣ ಅವನ ಧನುಸ್ಸಾದರೂ ನಷ್ಟವಾಗಿರಬೇಕು; ರಥವಾದರೂ ಭೂಮಿಯಲ್ಲಿ ಹೂತುಹೋಗಿರಬೇಕು; ಅಸ್ತ್ರಗಳಾದರೂ ನಾಶಹೊಂದಿರಬೇಕು. ಇದು ನಿಜ. (ಈ ಮೂರರಲ್ಲಿ ಯಾವುದೂ ಸಂಭವಿಸಿರದಿದ್ದರೆ ಅವನನ್ನು ಸಂಹರಿಸಲು ಯಾರಿಂದಲೂ ಸಾಧ್ಯವೇ ಇಲ್ಲ.) ಅವನ ವಿನಾಶಕ್ಕೆ ನಾಲ್ಕನೆಯ ಕಾರಣವೇ ಇಲ್ಲ, ಸಂಜಯ!

"ನ ಹನ್ಮಿ ಫಾಲ್ಗುನಂ ಯಾವತ್ತಾವತ್ಪಾದೌ ನ ಧಾವಯೇ ।"

'ನಾನು ಅರ್ಜುನನನ್ನು ಸಂಹರಿಸುವವರೆಗೆ ಬೇರೆಯವರಿಂದ ಕಾಲುಗಳನ್ನು ತೊಳೆಸಿಕೊಳ್ಳುವುದಿಲ್ಲ'–ಎಂಬುದಾಗಿ ಮಹಾತ್ಮನಾದ ಕರ್ಣನು ಮಹಾಘೋರವಾದ ಪ್ರತಿಜ್ಞೆಯನ್ನೇ ಮಾಡಿದ್ದನು.

ಯುದ್ಧಸಮಯದಲ್ಲಿ ಕರ್ಣನೇನು ಮಾಡಿಬಿಡುವನೋ ಎಂಬ ಭಯದಿಂದ ಧರ್ಮರಾಜನಾದ ಯುಧಿಷ್ಠಿರನು ಹದಿಮೂರು ವರ್ಷಗಳ ಕಾಲ ನಿದ್ರೆಯನ್ನೇ ಮಾಡಿರಲಿಲ್ಲ. ಮಹಾತ್ಮನಾದ, ವೀರ್ಯವಂತನಾದ ಕರ್ಣನ ಪರಾಕ್ರಮವನ್ನೇ ಅವಲಂಬಿಸಿ ನನ್ನ ಮಗನು ಪಾಂಡವರ ಭಾರ್ಯೆಯಾದ ದ್ರೌಪದಿಯನ್ನು ಸಭಾಮಂಟಪಕ್ಕೆ ಬಲಾತ್ಕಾರದಿಂದ ಸೆಳೆದು ತಂದನು. ಕುರುರಾಜರ ಸನ್ನಿಧಿಯಲ್ಲಿ ಆ ಮಹಾಸಭೆಯ ಮಧ್ಯದಲ್ಲಿ ಪಾಂಡವರು ತಮ್ಮೆರಡು ಕಣ್ಣುಗಳನ್ನೂ ಅರಳಿಸಿಕೊಂಡು ನೋಡುತ್ತಿದ್ದಂತೆಯೇ ಕರ್ಣನು 'ದಾಸಭಾರ್ಯೆ' ಎಂದು ದ್ರೌಪದಿಯನ್ನು ಕರೆದನು. ಇಷ್ಟುಮಾತ್ರವಲ್ಲ:

ನ ಸನ್ತಿ ಪತಯಃ ಕೃಷ್ಣೇ ಸರ್ವೇ ಷಣ್ಢತಿಲೈಃ ಸಮಾಃ ।
ಉಪತಿಷ್ಠಸ್ವ ಭರ್ತಾರಮನ್ಯಂ ವಾ ವರವರ್ಣಿನಿ ॥೬೧॥

"ನಿನ್ನ ಪತಿಗಳು ಇನ್ನಿಲ್ಲ. (ಅವರಿದ್ದರೂ ನಿನ್ನ ಭಾಗಕ್ಕೆ ಇಲ್ಲದಂತೆಯೇ ಸರಿ.) ಅವರೆಲ್ಲರೂ ಈಗ ಎಳ್ಳುಹಿಂಡಿಗೆ ಸಮನಾಗಿದ್ದಾರೆ. ವರವರ್ಣಿನಿಯೇ! ಈಗ ನೀನು ಕೌರವರನ್ನಾದರೂ ಪತಿಯನ್ನಾಗಿ ಪರಿಗ್ರಹಿಸು. ಅಥವಾ ಬೇರೆ ಯಾರನ್ನಾದರೂ ಆಶ್ರಯಿಸು"–ಎಂಬುದಾಗಿ ಕುಪಿತನಾಗಿದ್ದ ಕರ್ಣನು ಕರ್ಣಕಠೋರವಾದ ಮಾತುಗಳನ್ನು ದ್ರೌಪದಿ

ಯೊಡನೆ ಅವಳ ಪಂಚಪತಿಗಳ ಸಮಕ್ಷದಲ್ಲಿಯೇ ಹೇಳಿದನು. ಅಂತಹ ಮಹಾವೀರನು ಶತ್ರುಗಳಿಂದ ಹೇಗೆ ಹತನಾದನು?

**ಯದಿ ಭೀಷ್ಮೋ ರಣಶ್ಲಾಘೀ ದ್ರೋಣೋ ವಾ ಯುಧಿ ದುರ್ಮದಃ ।**
**ನ ಹನಿಷ್ಯತಿ ಕೌಂತೇಯಾನ್ಪಕ್ಷಪಾತಾತ್ಸುಯೋಧನ।**
**ಸರ್ವಾನೇವ ಹನಿಷ್ಯಾಮಿ ವ್ಯೇತು ತೇ ಮಾನಸೋ ಜ್ವರಃ ॥೬೩॥**

"ಸುಯೋಧನ! ರಣಶ್ಲಾಘಿಯಾದ ಭೀಷ್ಮನೂ, ಯುದ್ಧದುರ್ಮದರಾದ ದ್ರೋಣರೂ ಒಂದು ವೇಳೆ ಪಕ್ಷಪಾತದಿಂದ ಪಾಂಡವರನ್ನು ಸಂಹರಿಸದಿದ್ದರೆ ನಾನೇ ಎಲ್ಲರನ್ನೂ ಸಂಹರಿಸುತ್ತೇನೆ. ನಿನ್ನ ಮನಸ್ಸಿನ ಆತಂಕವನ್ನು ದೂರಮಾಡು.

**ಕಿಂ ಕರಿಷ್ಯತಿ ಗಾಣ್ಡೀವಮಕ್ಷಯ್ಯೌ ಚ ಮಹೇಷುಧೀ ।**
**ಸ್ನಿಗ್ಧಚನ್ದನದಿಗ್ಧಸ್ಯ ಮಚ್ಛರಸ್ಯಾಭಿಧಾವತಃ ।**
**ಸ ನೂನಮೃಷಭಸ್ಕನ್ಧೋ ಹ್ಯರ್ಜುನೇನ ಕಥಂ ಹತಃ ॥೬೪॥**

ನುಣುಪಾದ ಚಂದನದಿಂದ ಲೇಪಿತವಾದ, ಶತ್ರುಗಳ ಕಡೆಗೆ ವೇಗದಿಂದ ಧಾವಿಸುವ ನನ್ನ ಬಾಣಕ್ಕೆ ಅರ್ಜುನನ ಗಾಂಡೀವವೇನು ಮಾಡೀತು? ಅಥವಾ ಅವನಲ್ಲಿರುವ ಅಕ್ಷಯತೂಣೀರಗಳೇನು ಮಾಡಿಯಾವು? (ನನ್ನ ಬಾಣಗಳ ಮುಂದೆ ಅರ್ಜುನನ ಗಾಂಡೀವ ಧನುಸ್ಸಾಗಲೀ ಅವನಲ್ಲಿರುವ ಬತ್ತಿಹೋಗದ ಬತ್ತಳಿಕೆಗಳಾಗಲೀ ನಿಲ್ಲಲಾರವು.)"–ಹೀಗೆಂಬುದಾಗಿ ಹೇಳಿ ನನ್ನ ಮಗನಿಗೆ ಧೈರ್ಯತುಂಬುತ್ತಿದ್ದ ವೃಷಭಸ್ಕಂಧನಾದ (ಗೂಳಿಯ ಹೆಗಲಿನಂತೆ ಹೆಗಲನ್ನು ಹೊಂದಿರುವ) ವೀರಕರ್ಣನು ಅರ್ಜುನನಿಂದ ಹೇಗೆ ಹತನಾದನು? ಗಾಂಡೀವಧನುಸ್ಸಿನಿಂದ ಮುಕ್ತವಾಗುವ ಬಾಣಗಳ ಕಠಿನಸ್ಪರ್ಶವನ್ನೂ ಗಣನೆಗೆ ತೆಗೆದುಕೊಳ್ಳದೇ 'ಅಪತಿರ್ಹ್ಯಸಿ ಕೃಷ್ಣೇ'–'ಕೃಷ್ಣೇ! ನೀನೀಗ ಪತಿಗಳಿಲ್ಲದವಳಾಗಿರುವೆ'–ಎಂದು ದ್ರೌಪದಿಯನ್ನು ಮೂದಲಿಸುತ್ತಾ ಪಾರ್ಥರನ್ನು ತಿರಸ್ಕಾರದೃಷ್ಟಿಯಿಂದಲೇ ನೋಡುತ್ತಿದ್ದ ಮಹಾವೀರನವನು. ಜನಾರ್ದನನಿಂದಲೂ ಮತ್ತು ಮಕ್ಕಳಿಂದಲೂ ಕೂಡಿದ ಪಾರ್ಥರಿಂದ, ತನ್ನ ಬಾಹುಗಳ ಬಲವನ್ನು ಆಶ್ರಯಿಸಿದ್ದ ಕರ್ಣನಿಗೆ ಮುಹೂರ್ತಕಾಲವಾದರೂ ಭಯವೆಂಬುದೇ ಇರಲಿಲ್ಲ. ಶತ್ರುಪಕ್ಷದ ಕಡೆಯಲ್ಲಿ ಅವನನ್ನೆದುರಿಸಿ ಯುದ್ಧಕ್ಕೆ ಇಂದ್ರಸಹಿತ

ರಾದ ದೇವತೆಗಳೇ ಬಂದಿದ್ದರೂ–ಅವರಿಂದಲೂ ಅವನು ವಧಿಸಲ್ಪಡುತ್ತಿದ್ದ ನೆಂದು ನಾನು ಭಾವಿಸಿರಲಿಲ್ಲ. ಹೀಗಿರುವಾಗ ಕರ್ಣನು ಪಾಂಡವರಿಂದ ವಧಿಸಲ್ಪಡುವುದೆಂದರೇನು? ಕರ್ಣನು ಮೌರ್ವಿಯನ್ನು ಸೆಳೆದು ಕಟ್ಟುತ್ತಿರು ವಾಗ, ಕೈಚೀಲಗಳನ್ನು ತೆಗೆದುಕೊಳ್ಳುತ್ತಿರುವಾಗ ಯಾವ ವೀರಪುರುಷನೂ ಅವನಿಗೆದುರಾಗಿ ನಿಲ್ಲಲು ಧೈರ್ಯಮಾಡುತ್ತಿರಲಿಲ್ಲ. ಸಂಜಯ! ನನ್ನ ಅಭಿಪ್ರಾಯದಲ್ಲಿ ಈ ಭೂಮಂಡಲವು ಚಂದ್ರ-ಸೂರ್ಯರ ಪ್ರಕಾಶ ದಿಂದಾದರೂ ಹೀನವಾಗಬಹುದು. ಆದರೆ ಯುದ್ಧದಲ್ಲಿ ಪಲಾಯನವನ್ನು ಮಾಡದ ಪುರುಷೇಂದ್ರನಾದ ಕರ್ಣನಿಂದ ಹೀನವಾಗಲು ಸಾಧ್ಯವೇ ಇರಲಿಲ್ಲ. ಅರ್ಥಾತ್ ಅವನ ವಧೆಯಾಗುವ ಸಾಧ್ಯತೆಯೇ ಇರಲಿಲ್ಲ. ದುರ್ಬುದ್ಧಿಯವ ನಾದ, ಮೂರ್ಖನಾದ ದುರ್ಯೋಧನನು, ತಮ್ಮನಾದ ದುಃಶಾಸನನ ಮತ್ತು ಕರ್ಣನ ಸಹಾಯವನ್ನೇ ನೆಚ್ಚಿಕೊಂಡು, ಸಂಧಿಗಾಗಿ ಬಂದ ವಾಸುದೇವನ ಮಾತುಗಳನ್ನು ತಿರಸ್ಕಾರಮಾಡುವುದೇ ಉಚಿತವೆಂದು ಭಾವಿಸಿದನು. ವೃಷಭಸ್ಕಂಧನಾದ ಕರ್ಣನೂ ಮತ್ತು ದುಃಶಾಸನನೂ ಹತರಾದುದನ್ನು ಕಂಡು ತಾನೂ ಹಿಂದೆ ಮಾಡಿದುದಕ್ಕೆ ನನ್ನ ಮಗನು ಈಗ ಶೋಕಿಸುತ್ತಾನೆಂದು ಭಾವಿಸುತ್ತೇನೆ.

ದ್ವೈರಥಯುದ್ಧದಲ್ಲಿ ಸವ್ಯಸಾಚಿಯಿಂದ ಕರ್ಣನು ವಧಿಸಲ್ಪಟ್ಟ ನೆಂಬುದನ್ನು ಕೇಳಿ, ವಿಜಯಗಳಿಸುತ್ತಿರುವ ಪಾಂಡವರನ್ನೂ ನೋಡಿ ನನ್ನ ಮಗನು ಏನಾದರೂ ಹೇಳಿದನೇ? ದುರ್ಮರ್ಷಣ-ವೃಷಸೇನರು ಹತ ರಾದುದನ್ನೂ, ಮಹಾರಥರಿಂದ ಸತತವಾಗಿ ಹಿಂಸೆಗೊಳಗಾಗಿದ್ದ ನಮ್ಮ ಸೈನ್ಯವು ಭಗ್ನವಾದುದನ್ನೂ, ನಮ್ಮ ಕಡೆಯ ರಾಜರು ಯುದ್ಧದಿಂದ ಪರಾ ಙ್ಮುಖರಾಗಿ ಪಲಾಯನಪರಾಯಣರಾಗುತ್ತಿರುವುದನ್ನೂ ನೋಡಿ ನನ್ನ ಮಗನು ಶೋಕಿಸುತ್ತಿರಬಹುದೆಂದು ಭಾವಿಸುತ್ತೇನೆ. ಯಾರ ಸದುಪದೇಶ ವನ್ನೂ ಕೇಳದ, ದುರಭಿಮಾನಿಯಾದ, ದುರ್ಬುದ್ಧಿಯವನಾದ, ಜಿತೇಂದ್ರಿ ಯನಲ್ಲದ ದುರ್ಯೋಧನನು ಕರ್ಣನ ವಧೆಯಿಂದಾಗಿ ಉತ್ಸಾಹಗುಂದಿದ್ದ ಸೈನ್ಯವನ್ನು ನೋಡಿ ಏನಾದರೂ ಹೇಳಿದನೇ? ಸುಹೃದರಿಂದ ಹಲವು ಬಾರಿ ತಡೆಯಲ್ಪಟ್ಟರೂ ತಾನಾಗಿಯೇ ಪಾಂಡವರೊಡನೆ ಮಹಾವೈರವನ್ನು ಕಟ್ಟಿಕೊಂಡ ದುರ್ಯೋಧನನು ತನ್ನ ಸೈನ್ಯದಲ್ಲಿ ಬಹುಭಾಗವು ವಿನಾಶ ವಾದುದನ್ನು ಕಂಡು ಏನಾದರೂ ಹೇಳಿದನೇ? ತನ್ನ ತಮ್ಮನಾದ ದುಃಶಾ

ಸನನು ಯುದ್ಧದಲ್ಲಿ ಭೀಮಸೇನನಿಂದ ವಧಿಸಲ್ಪಟ್ಟುದನ್ನೂ ಮತ್ತು ಭೀಮಸೇನನು ಅವನ ರಕ್ತವನ್ನು ಕುಡಿಯುತ್ತಿದ್ದುದನ್ನೂ ಕಂಡು ದುರ್ಯೋಧನನು ಏನಾದರೂ ಹೇಳಿದನೆ? ಸಭಾಮಧ್ಯದಲ್ಲಿ ದುರ್ಯೋಧನನು ಗಾಂಧಾರರಾಜನಾದ ಶಕುನಿಯೊಡನೆ ಸೇರಿಕೊಂಡು **'ಕರ್ಣೋಽರ್ಜುನಂ ರಣೇ ಹನ್ತಾ'** 'ಕರ್ಣನು ಅರ್ಜುನನನ್ನು ಯುದ್ಧದಲ್ಲಿ ಸಂಹಾರಮಾಡುವನು'–ಎಂದು ಹೇಳಿದ್ದನು. ಆದರೆ ಈಗ ಅರ್ಜುನನೇ ಕರ್ಣನನ್ನು ಯುದ್ಧದಲ್ಲಿ ಸಂಹರಿಸಿದನಂತರ ದುರ್ಯೋಧನನೇನು ಹೇಳಿದನು? ಹಿಂದೆ ಸುಬಲನ ಮಗನಾದ ಇದೇ ಶಕುನಿಯು ದ್ಯೂತದ ಮೂಲಕವಾಗಿ ಪಾಂಡವರನ್ನು ವಂಚಿಸಿ ಬಹಳ ಸಂತೋಷಪಟ್ಟಿದ್ದನು. ಕರ್ಣನು ಹತನಾದನಂತರ ಅವನೇನು ಹೇಳಿದನು? ಸಾತ್ವತವಂಶೀಯರಲ್ಲಿ ಮಹಾರಥನೂ ಮಹಾಧನುಷ್ಮಂತನೂ ಆದ, ಹೃದೀಕನ ಮಗನಾದ ಕೃತವರ್ಮನು, ಕರ್ಣನು ಅರ್ಜುನನಿಂದ ವಧಿಸಲ್ಪಟ್ಟುದನ್ನು ಕಂಡು ಏನು ಹೇಳಿದನು? ಧನುರ್ವೇದವನ್ನು ಕಲಿಯುವ ಇಚ್ಛೆಯುಳ್ಳ ಬ್ರಾಹ್ಮಣರು, ಕ್ಷತ್ರಿಯರು ಮತ್ತು ವೈಶ್ಯರು ಯಾವ ಬುದ್ಧಿಶಾಲಿಯಾದ ದ್ರೋಣಪುತ್ರನ ಬಳಿಗೆ ಬಂದು ಧನುರ್ವಿದ್ಯೆಯಲ್ಲಿ ಶಿಕ್ಷಣವನ್ನು ಪಡೆದುಕೊಳ್ಳುತ್ತಾರೆಯೋ ಅಂತಹ ಯುವಕನಾದ, ದರ್ಶನೀಯನಾದ, ಮಹಾಯಶೋವಂತನಾದ ಅಶ್ವತ್ಥಾಮನು ಕರ್ಣನು ಹತನಾದನಂತರ ಏನು ಹೇಳಿದನು? (ಅವನ ಪ್ರತಿಕ್ರಿಯೆಯೇನು?) ಧನುರ್ವೇದಾಚಾರ್ಯರಾದ ರಥಶ್ರೇಷ್ಠರಾದ ಗೌತಮವಂಶೀಯರಾದ, ಶರದ್ವಂತನ ಮಕ್ಕಳಾದ ಕೃಪರೇನು ಹೇಳಿದರು? ಮದ್ರರಾಜನಾದ, ಮಹಾಧನುಷ್ಮಂತನಾದ, ಸಮರಶೋಭಿಯಾದ, ರಥಶ್ರೇಷ್ಠನಾದ, ಮಹಾಬಲಿಷ್ಠನಾದ ಶಲ್ಯನು ತನ್ನ ಸಾರಥ್ಯದಲ್ಲಿಯೇ ಕರ್ಣನು ಹತನಾದುದನ್ನು ಕಂಡು ಏನು ಹೇಳಿದನು?

ರಣದುರ್ಜಯರಾದ ಯೋಧರೇನು ಹೇಳಿದರು? ಪ್ರಪಂಚದ ಎಲ್ಲ ಕಡೆಗಳಿಂದಲೂ ದುರ್ಯೋಧನನ ಕಡೆಗೆ ಯುದ್ಧಮಾಡುವ ಸಲುವಾಗಿ ಆಗಮಿಸಿದ್ದ ರಾಜರು ಕರ್ಣನು ಹತನಾದುದನ್ನು ಕಂಡು ಏನೆಂದರು? ರಥಿಕರಲ್ಲಿ ಸಿಂಹಪ್ರಾಯರಾಗಿದ್ದ, ನರರ್ಷಭರಾಗಿದ್ದ ದ್ರೋಣರು ಹತರಾದನಂತರ ಯಾರು-ಯಾರು ಸೈನ್ಯಗಳ ಅಗ್ರಭಾಗಗಳಲ್ಲಿದ್ದರು? ರಥಿಕರಲ್ಲಿ ಶ್ರೇಷ್ಠನಾದ, ಮದ್ರರಾಜನಾದ ಶಲ್ಯನು ಕರ್ಣನ ಸಾರಥ್ಯಮಾಡಲು

ಯಾರಿಂದ ನಿಯುಕ್ತನಾದನು ಮತ್ತು ಹೇಗೆ ನಿಯುಕ್ತನಾದನು? ಈ ವಿಷಯವನ್ನು ನನಗೆ ವಿಶದವಾಗಿ ಹೇಳು, ಸಂಜಯ! ಯುದ್ಧಮಾಡುತ್ತಿದ್ದಾಗ ಸೂತಪುತ್ರನಾದ ಕರ್ಣನ ರಥದ ಬಲಭಾಗದ ಚಕ್ರವನ್ನು ಯಾರು ರಕ್ಷಿಸುತ್ತಿದ್ದರು? ಎಡಭಾಗದ ಚಕ್ರವನ್ನು ರಕ್ಷಿಸುತ್ತಿದ್ದವರಾರು? ಹಿಂಭಾಗದ ರಕ್ಷಣೆಯನ್ನು ಯಾರಿಗೆ ವಹಿಸಿಕೊಡಲಾಗಿತ್ತು? ಯಾವ ಶೂರರು ಕರ್ಣನನ್ನು ಬಿಡದೇ ಅವನ ಜೊತೆಯಲ್ಲಿಯೇ ನಿಂತು ಯುದ್ಧಮಾಡುತ್ತಿದ್ದರು? ಕ್ಷುದ್ರರಾದ ಯಾವ ಯೋಧರು ಅವನನ್ನು ಏಕಾಕಿಯಾಗಿ ಬಿಟ್ಟು ಪಲಾಯನಮಾಡಿದರು? ನೀವೆಲ್ಲರೂ ಕರ್ಣನ ಜೊತೆಯಲ್ಲಿಯೇ ಇದ್ದು ಯುದ್ಧಮಾಡುತ್ತಿದ್ದರೂ ಮಹಾರಥನಾದ ಕರ್ಣನು ಹತನಾದುದು ಹೇಗೆ? ಸ್ವಯಂಶೂರರಾದ ಮಹಾರಥರಾದ ಪಾಂಡವರು–ಮೋಡಗಳು ಮಳೆಗರೆಯುವಂತೆ–ಬಾಣಗಳ ಮಳೆಯನ್ನು ಸೃಷ್ಟಿಸುತ್ತಾ ಕರ್ಣನನ್ನು ಎದುರಿಸಲು ಮುಂದೆ ಮುಂದೆ ಬರತೊಡಗಿದರಲ್ಲವೇ? (ಆ ಸಮಯದಲ್ಲಿ ಅವರನ್ನು ಮುಂದೆ ಬಾರದಂತೆ ತಡೆಯಲು ಕರ್ಣನಲ್ಲಿ ದಿವ್ಯವಾದ ಸರ್ಪಾಸ್ತ್ರವಿದ್ದಿತು.) ಬಾಣಗಳಿಗೆಲ್ಲಾ ಶ್ರೇಷ್ಠವಾದ ಬಾಣವೆಂದು ಪ್ರಸಿದ್ಧಿಯನ್ನು ಹೊಂದಿದ್ದ, ಸರ್ಪದ ಮುಖವನ್ನು ಹೊಂದಿದ್ದ ಆ ದಿವ್ಯಾಸ್ತ್ರವೂ ಆ ಸಮಯದಲ್ಲಿ ಹೇಗೆ ವ್ಯರ್ಥವಾಗಿ ಹೋಯಿತು? ಆ ವಿಷಯವನ್ನು ನನಗೆ ಹೇಳು, ಸಂಜಯ!

ನಮ್ಮ ಕಡೆಯಲ್ಲಿ ಮುಖ್ಯಯೋಧನಾದ ಕರ್ಣನೇ ಹತನಾದನಂತರ ಉತ್ಸಾಹರಹಿತವಾಗಿರುವ ನನ್ನ ಸೈನ್ಯದ ಶೇಷವೇ ಉಳಿಯಲಾರದೆಂದು ನಾನು ಭಾವಿಸಿದ್ದೇನೆ. ನನ್ನ ಸಲುವಾಗಿಯೇ ಪ್ರಾಣಗಳನ್ನೂ ಒತ್ತೆಯಿಟ್ಟು ಯುದ್ಧಮಾಡುತ್ತಿದ್ದ ಮಹಾಧನುಷ್ಮಂತರಾದ ಭೀಷ್ಮ-ದ್ರೋಣರು ಹತರಾದ ರೆಂದು ಕೇಳಿದನಂತರ ನಾನು ಬದುಕಿರುವುದರಲ್ಲಿ ಪ್ರಯೋಜನವೇನಿದೆ? ಯಾವನ ಬಾಹುಗಳ ಬಲವು ಹತ್ತು ಸಾವಿರ ಆನೆಗಳ ಬಲದಷ್ಟಿದ್ದಿತೋ–ಅಂತಹ ಕರ್ಣನು ಪಾಂಡವರಿಂದ ಹತನಾದನೆಂಬುದನ್ನು ಕೇಳಿ ನನಗೆ ಸೈರಣೆಯೇ ಇಲ್ಲವಾಗಿದೆ. ಸಂಜಯ! ದ್ರೋಣರು ಹತರಾದನಂತರ ಯುದ್ಧದಲ್ಲಿ ಶತ್ರುಗಳೊಡನೆ ಕೌರವರ ವ್ಯವಹಾರವು ಯಾವ ರೀತಿಯಲ್ಲಿದ್ದಿತು? ಈ ವಿಷಯವನ್ನು ನನ್ನೊಡನೆ ಹೇಳು. ಶತ್ರು ಹಂತಕನಾದ ಕರ್ಣನು ಕುಂತಿಯ ಮಕ್ಕಳೊಡನೆ ಯುದ್ಧಮಾಡಲು

ಯಾವ ಕ್ರಮವನ್ನನುಸರಿಸಿದನು? ಮತ್ತು ಅವನು ರಣಾಂಗಣದಲ್ಲಿ ಶಾಂತನಾದುದು ಹೇಗೆ? (ಅವನ ಅವಸಾನವು ಹೇಗಾಯಿತು?) ಈ ವಿಷಯಗಳನ್ನು ಸವಿಸ್ತರವಾಗಿ ನನ್ನೊಡನೆ ಹೇಳು."

೯ನೆಯ ಅಧ್ಯಾಯವು ಮುಗಿಯಿತು.

೧೦ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣನನ್ನು ಸೇನಾಪತಿಯನ್ನಾಗಿ ಮಾಡಲು ದುರ್ಯೋಧನನು ಅಶ್ವತ್ಥಾಮನೊಡನೆ ಪ್ರಸ್ತಾಪಿಸಿದುದು: ಕರ್ಣನಿಗೆ ಸೇನಾಪತಿಯ ಸ್ಥಾನದಲ್ಲಿ ಪಟ್ಟಗಟ್ಟಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಆ ಹದಿನೈದನೆಯ ದಿವಸ ಮಹಾಧನುಷ್ಮಂತರಾದ ದ್ರೋಣರು ಹತರಾಗಲಾಗಿ, ಮಹಾರಥನಾದ ಅಶ್ವತ್ಥಾಮನು ವ್ಯರ್ಥಸಂಕಲ್ಪನಾಗಲಾಗಿ, ಕೌರವರ ಸಮುದ್ರಪ್ರಾಯದ ವಿಶಾಲಸೈನ್ಯವು ಪಲಾಯನ ಮಾಡುತ್ತಿರಲಾಗಿ, ಪಾರ್ಥನು ತನ್ನ ಸೈನ್ಯವನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿ ಸಹೋದರರಿಂದ ಪರಿವೃತನಾಗಿ ರಣಾಂಗಣದಲ್ಲಿ ಯುದ್ಧಸನ್ನದ್ಧನಾಗಿ ನಿಂತಿದ್ದನು. ಅರ್ಜುನನು ವ್ಯೂಹವನ್ನು ಸಂಘಟಿಸಿ ಯುದ್ಧಮಾಡಲು ನಿಂತಿರುವನೆಂಬುದನ್ನು ತಿಳಿದು ಪಲಾಯನಮಾಡುತ್ತಿರುವ ತನ್ನ ಕಡೆಯ ಸೈನ್ಯವನ್ನು ನೋಡಿ ನಿನ್ನ ಮಗನು ಪೌರುಷದ ಮಾತುಗಳಿಂದ ಓಡುತ್ತಿರುವ ಸೈನ್ಯವನ್ನು ತಡೆದು ನಿಲ್ಲಿಸಿದನು. ದುರ್ಯೋಧನನು ತನ್ನ ಸೈನ್ಯವನ್ನೂ ವ್ಯೂಹಕ್ರಮದಲ್ಲಿ ನಿಲ್ಲಿಸಿ, ತಮ್ಮ ಬಾಹುವೀರ್ಯವನ್ನೇ ಆಶ್ರಯಿಸಿಕೊಂಡು ಲಬ್ಧಲಕ್ಷ್ಯರಾದ, ವಿಜಯದಿಂದ ಹೃಷ್ಟರಾಗಿದ್ದ, ಪರಿಶ್ರಮಪೂರ್ವಕವಾಗಿ ಯುದ್ಧಮಾಡುತ್ತಿದ್ದ ಶತ್ರುಗಳಾದ ಪಾಂಡವರೊಡನೆ ಬಹಳಹೊತ್ತು ಯುದ್ಧಮಾಡುತ್ತಿದ್ದು ಸಂಧ್ಯಾಕಾಲವಾಗುತ್ತಲೇ ಶಿಬಿರಗಳಿಗೆ ಹಿಂದಿರುಗುವಂತೆ ಸೈನಿಕರಿಗೆ ಆಜ್ಞೆಮಾಡಿ ತಾನೂ ಶಿಬಿರವನ್ನು ಪ್ರವೇಶಿಸಿದನು. ದುರ್ಯೋಧನನ ಶಿಬಿರದಲ್ಲಿಯೇ ಕುರುಗಳೆಲ್ಲರೂ ರಹಸ್ಯದಲ್ಲಿ ಸೇರಿ ತಮ್ಮ ಹಿತವನ್ನು ಸಾಧಿಸಿಕೊಳ್ಳುವ ಆಶಯದಿಂದ

ಮಂತ್ರಾಲೋಚನೆಯಲ್ಲಿ ತೊಡಗಿದರು. ಆ ಸಮಯದಲ್ಲಿ ಕುರುಗಳೆಲ್ಲರೂ ಬಹುಮೂಲ್ಯವಾದ ರತ್ನಗಂಬಳಿಗಳಿಂದ ಆಚ್ಛಾದಿತವಾಗಿದ್ದ ಪರ್ಯಂಕಗಳಲ್ಲಿಯೂ, ಶ್ರೇಷ್ಠವಾದ ಸಿಂಹಾಸನಗಳಲ್ಲಿಯೂ ಕುಳಿತಿದ್ದು ಸುಖವಾದ ಸುಪ್ಪತ್ತಿಗೆಯ ಮೇಲೆ ಕುಳಿತಿರುವ ದೇವತೆಗಳಂತೆಯೇ ವಿರಾಜಿಸುತ್ತಿದ್ದರು. ಆಗ ದುರ್ಯೋಧನರಾಜನು ಸಾಂತ್ವಪೂರ್ವಕವಾದ ಮತ್ತು ಸುಮಧುರವಾದ ಮಾತುಗಳಿಂದ ಅಲ್ಲಿ ನೆರೆದಿದ್ದ ಮಹಾಧನುಷ್ಮಂತರಾದ ರಾಜರನ್ನು ಸಂಬೋಧಿಸಿ ಸಮಯೋಚಿತವಾದ ಈ ಮಾತುಗಳನ್ನು ಹೇಳಿದನು:

"ಬುದ್ಧಿವಂತರಲ್ಲಿ ಶ್ರೇಷ್ಠರಾದ ನರೋತ್ತಮರೇ! ಪರಿಸ್ಥಿತಿಯು ಹೀಗಿರುವಾಗ ನಾವು ಏನು ಮಾಡಬೇಕು? ಅದರಲ್ಲಿಯೂ ಅತಿಮುಖ್ಯವಾದ ಯಾವ ಕಾರ್ಯವನ್ನು ನಾವೀಗ ಮಾಡಬೇಕಾಗಿದೆ?-ಎಂಬುದನ್ನು ನೀವೆಲ್ಲರೂ ಈಗಲೇ ಸಮಾಲೋಚಿಸಿ ಹೇಳಿರಿ."

ಮಹಾರಾಜ! ನರೇಂದ್ರನಾದ ದುರ್ಯೋಧನನು ಹೀಗೆಂದು ಹೇಳಲಾಗಿ ಸಿಂಹಾಸನಗಳಲ್ಲಿಯೂ ಮತ್ತು ಪರ್ಯಂಕಗಳಲ್ಲಿಯೂ ಕುಳಿತಿದ್ದ, ಯುದ್ಧಮಾಡುವ ಇಚ್ಛೆಯನ್ನು ಹೊಂದಿದ್ದ ನರಶ್ರೇಷ್ಠರಾದ ರಾಜರು ರಾಜನ ಅಭಿಪ್ರಾಯಕ್ಕೆ ತಮ್ಮ ಬೆಂಬಲವನ್ನು ಸೂಚಿಸುವ ನಾನಾವಿಧವಾದ ಅಂಗಚೇಷ್ಟೆಗಳನ್ನು ಮಾಡಿದರು.

ಯುದ್ಧಮಾಡಿಯೇ ಪ್ರಾಣತೊರೆಯಲಿಚ್ಛಿಸಿದ್ದ ಆ ರಾಜರ ಮನೋಗತವಾದ ಅಭಿಪ್ರಾಯವನ್ನು ಅವರ ಅಂಗಚೇಷ್ಟೆಗಳ ಮೂಲಕವಾಗಿಯೇ ಅರಿತುಕೊಂಡು ಬಾಲಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ, ರಾಜನಾದ ದುರ್ಯೋಧನನ ಮುಖವನ್ನು ನೋಡಿ ವಾಕ್ಯಜ್ಞನಾದ, ಮೇಧಾವಿಯಾದ ಆಚಾರ್ಯಪುತ್ರನಾದ ಅಶ್ವತ್ಥಾಮನು ದುರ್ಯೋಧನನು ಹೇಳಿದ ಮಾತನ್ನೆತ್ತಿಕೊಂಡು ಉತ್ತರಿಸಲು ಉಪಕ್ರಮಿಸಿದನು.

**ರಾಗೋ ಯೋಗಸ್ತಥಾ ದಾಕ್ಷ್ಯಂ ನಯಶ್ಚೇತ್ಯರ್ಥಸಾಧಕಾಃ ।**
**ಉಪಾಯಾಃ ಪಣ್ಡಿತೈಃ ಪ್ರೋಕ್ತಾಸ್ತೇತು ದೈವಮುಪಾಶ್ರಿತಾಃ ॥**

"ವಿದ್ವಾಂಸರು ಅಭೀಷ್ಟಸಿದ್ಧಿಗಾಗಿ ನಾಲ್ಕು ಉಪಾಯಗಳನ್ನು ಹೇಳಿ

ರುತ್ತಾರೆ. ರಾಗ (ರಾಜನ ವಿಷಯದಲ್ಲಿ ಸೈನಿಕರಿಗೆ ಅನುರಾಗವಿರುವಿಕೆ); ಯೋಗ (ಸಾಧನ ಸಂಪತ್ತಿ); ದಾಕ್ಷ್ಯ (ದಕ್ಷತೆ-ಸಾಮರ್ಥ್ಯ-ಕುಶಲತೆ); ನಯ (ವಿವೇಕದಿಂದ ಕೂಡಿದ ವ್ಯವಹಾರನೈಪುಣ್ಯ-ರಾಜಕೀಯ ಚತುರತೆ). ಆದರೆ ಇವುಗಳು ದೈವವನ್ನೇ ಆಶ್ರಯಿಸಿವೆ. ದೈವದ ಇಚ್ಛೆಯಿದ್ದರೆ ಮಾತ್ರವೇ ಈ ನಾಲ್ಕು ಉಪಾಯಗಳೂ ಸಿದ್ಧಿಸುತ್ತವೆ.

ನಮ್ಮ ಪಕ್ಷದಲ್ಲಿಯೂ ವಿಶ್ವವಿಖ್ಯಾತಪರಾಕ್ರಮಿಗಳಾದ, ಮಹಾರಥರಾದ, ದೇವಸದೃಶರಾದ, ರಾಜನೀತಿಯನ್ನು ಚೆನ್ನಾಗಿ ತಿಳಿದಿರುವ, ಕಾರ್ಯದಲ್ಲಿ ಬಹಳ ದಕ್ಷರಾದ, ರಾಜನಲ್ಲಿ ವಿಶೇಷವಾದ ಅನುರಕ್ತಿಯನ್ನು ಹೊಂದಿದ್ದ ವೀರರನೇಕರಿದ್ದರು. ಆದರೆ ಅವರೆಲ್ಲರೂ ಈಗ ಕೀರ್ತಿಶೇಷರಾಗಿದ್ದಾರೆ. ಆದರೆ ಅಂತಹ ಮಹಾಧೀರರೆಲ್ಲರೂ ಮರಣ ಹೊಂದಿದರೆಂಬ ಕಾರಣದಿಂದ ನಾವು ನಮ್ಮ ವಿಜಯದಲ್ಲಿ ನಿರಾಶೆಯನ್ನು ಹೊಂದುವ ಕಾರಣವಿಲ್ಲ.

**ಸುನೀತೈರಿಹ ಸರ್ವಾರ್ಥೈರ್ದೈವಮಪ್ಯನುಲೋಮ್ಯತೇ ॥೧೫॥**

ಎಲ್ಲ ಕಾರ್ಯಗಳೂ ಉತ್ತಮನೀತಿಗೆ ಅನುಸಾರವಾಗಿ ನಡೆದುದೇ ಆದರೆ ದೈವವೂ ಸಹ ಅನುಕೂಲವಾಗಿಯೇ ಪರಿಣಮಿಸುತ್ತದೆ.

ಆದುದರಿಂದ ಈ ಸಮಯದಲ್ಲಿ ನಾವು ಸರ್ವಗುಣಗಣಗಳಿಂದಲೂ ಯುಕ್ತನಾಗಿರುವ ನರಶ್ರೇಷ್ಠನಾದ ಕರ್ಣನನ್ನೇ ಸೇನಾಪತಿಯ ಸ್ಥಾನದಲ್ಲಿ ಕುಳ್ಳಿರಿಸಿ ಅಭಿಷೇಕಮಾಡೋಣ. ಕರ್ಣನನ್ನು ಸೇನಾಪತಿಯನ್ನಾಗಿ ಮಾಡಿಕೊಂಡು ನಮ್ಮ ಶತ್ರುಗಳನ್ನು ಅರೆದುಬಿಡೋಣ.

**ಏಷ ಹ್ಯತಿಬಲಃ ಶೂರಃ ಕೃತಾಸ್ತ್ರೋ ಯುದ್ಧದುರ್ಮದಃ ।**
**ವೈವಸ್ವತ ಇವಾಸಹ್ಯಃ ಶಕ್ತೋ ಜೇತುಂ ರಣೇ ರಿಪೂನ್ ॥೧೭॥**

ಕರ್ಣನು ಮಹಾಬಲಿಷ್ಠನು; ಶೂರನು; ಮಹಾಸ್ತ್ರಗಳಲ್ಲಿ ಪಾರಂಗತನಾಗಿರತಕ್ಕವನು; ಯುದ್ಧೋನ್ಮತ್ತನು. ಸೂರ್ಯಪುತ್ರನಾದ ಯಮರಾಜನಂತೆಯೇ ಇವನೂ ಸಹ ಶತ್ರುಗಳಿಂದ ಸಹಿಸಿಕೊಳ್ಳಲು ಅಶಕ್ಯನಾದವನು. ಇಂತಹ ಸಕಲಗುಣಸಂಪನ್ನನಾದ ಕರ್ಣನು ಯುದ್ಧದಲ್ಲಿ ಶತ್ರುಗಳನ್ನು ಜಯಿಸಲು ಖಂಡಿತವಾಗಿಯೂ ಸಮರ್ಥನಾಗಿರುತ್ತಾನೆ."

ಮಹಾರಾಜ! ಆಚಾರ್ಯಪುತ್ರನಿಂದ ಅಮೋಘವಾದ ಈ ಮಾತುಗಳನ್ನು ಕೇಳಿ ಆ ಸಮಯದಲ್ಲಿ ನಿನ್ನ ಮಗನು ಕರ್ಣನ ವಿಷಯದಲ್ಲಿ ಬಹಳವಾದ ಆಶೆಯನ್ನು ಹೊಂದಿದನು. (ಕರ್ಣನೊಬ್ಬನು ಖಂಡಿತ ವಾಗಿಯೂ ತನ್ನ ಶತ್ರುಗಳನ್ನು ಜಯಿಸಿ ತನ್ನ ಆಶೆಯನ್ನು ಪೂರ್ಣಮಾಡಿಕೊಡಬಲ್ಲನೆಂಬ ಭರವಸೆಯನ್ನಿಟ್ಟುಕೊಂಡನು.)

**ಹತೇ ಭೀಷ್ಮೇ ಚ ದ್ರೋಣೇ ಚ ಕರ್ಣೋ ಜೇಷ್ಯತಿ ಪಾಣ್ಡವಾನ್ ।**

"ಭೀಷ್ಮ-ದ್ರೋಣರು ಹತರಾದನಂತರ ಸೇನಾಪತಿಯಾಗಲಿರುವ ಕರ್ಣನು ಪಾಂಡವರನ್ನು ಜಯಿಸುತ್ತಾನೆ"–ಇಂತಹ ಆಶೆಯನ್ನು ಮನಸ್ಸಿನಲ್ಲಿಟ್ಟುಕೊಂಡು, ಅದರಿಂದಲೇ ಮನಸ್ಸಿಗೆ ಸಮಾಧಾನತಂದುಕೊಂಡು, ತನ್ನ ಮನಸ್ಸಿಗೆ ಆಪ್ಯಾಯಮಾನವಾಗುವಂತಹ ಮಾತನಾಡಿದ, ಪ್ರೀತಿ-ಸತ್ಕಾರ ಯುಕ್ತವಾದ, ಆತ್ಮಹಿತಕ್ಕೆ ಸಾಧನವಾದ, ಶುಭಕರವಾದ, ಯಥಾರ್ಥವಾದ ಆಚಾರ್ಯಪುತ್ರನ ಮಾತಿನಿಂದಲೂ ಪರಮಪ್ರೀತನಾಗಿ, ಸ್ವಬಾಹುವೀರ್ಯ ವನ್ನೇ ಅವಲಂಬಿಸಿದ್ದ ದುರ್ಯೋಧನನು ತನ್ನ ಮನಸ್ಸನ್ನು ಸುಸ್ಥಿರಗೊಳಿಸಿ, ರಾಧಾಪುತ್ರನಾದ ಕರ್ಣನೊಡನೆ ಈ ಮಾತುಗಳನ್ನು ಹೇಳಿದನು:

**ಕರ್ಣ ಜಾನಾಮಿ ತೇ ವೀರ್ಯಂ ಸೌಹೃದಂ ಪರಮಂ ಮಯಿ ।**
**ತಥಾಪಿ ತ್ವಾಂ ಮಹಾಬಾಹೋ ಪ್ರವಕ್ಷ್ಯಾಮಿ ಹಿತಂ ವಚಃ ॥೨೨॥**

"ಮಹಾಬಾಹುವೇ! ಕರ್ಣ! ನಿನ್ನ ವೀರ್ಯ-ಪರಾಕ್ರಮ ಗಳೆಷ್ಟೆಂಬುದನ್ನು ನಾನು ಮನಗಂಡಿದ್ದೇನೆ ಮತ್ತು ನೀನು ನನ್ನಲ್ಲಿಟ್ಟಿರುವ ಶ್ರೇಷ್ಠವಾದ ಸ್ನೇಹಭಾವವನ್ನೂ ಅರಿತುಕೊಂಡಿದ್ದೇನೆ. ಹಾಗಿದ್ದರೂ ಈ ಸಮಯದಲ್ಲಿ ಕೆಲವು ಹಿತವಚನಗಳನ್ನು ನಿನ್ನೊಡನೆ ಹೇಳುತ್ತೇನೆ.

ನನ್ನ ಈ ಮಾತುಗಳನ್ನು ಕೇಳಿದನಂತರ ನಿನ್ನ ಇಷ್ಟದಂತೆ ನಿನಗೆ ಸೂಕ್ತವೆನಿಸಿದ ರೀತಿಯಲ್ಲಿ ನೀನು ಕಾರ್ಯಮಾಡಬಹುದಾಗಿದೆ. ನೀನು ಮಹಾಬುದ್ಧಿವಂತನಾಗಿರುವೆ. ಯಾವಾಗಲೂ ನೀನು ನನಗೆ ಉತ್ತಮಾಶ್ರಯನಾಗಿರುವೆ.

ಈ ಹಿಂದೆ ನನ್ನ ಸೇನಾಪತಿಗಳಾಗಿದ್ದ ಅತಿರಥರಾದ ಭೀಷ್ಮ-ದ್ರೋಣರು ಯುದ್ಧದಲ್ಲಿ ಮಡಿದರು. ಅವರಿಗಿಂತಲೂ ಹೆಚ್ಚು ಶಕ್ತಿಮಂತನಾದ ನೀನು ಈಗ ನನ್ನ ಸೈನ್ಯಕ್ಕೆ ದಂಡನಾಯಕನಾಗು.

**ವೃದ್ಧೌ ಚ ತೌ ಮಹೇಷ್ವಾಸೌ ಸಾಪೇಕ್ಷೌ ಚ ಧನಂಜಯೇ ।**
**ಮಾನಿತೌ ಚ ಮಯಾ ವೀರೌ ರಾಧೇಯ ವಚನಾತ್ತವ ॥೨೫॥**

ರಾಧೇಯ! ಯದ್ಯಪಿ ಅವರಿಬ್ಬರೂ ಮಹಾಧನುಷ್ಮಂತರಾಗಿದ್ದರೂ ವೃದ್ಧರಾಗಿದ್ದರು. ಮೇಲಾಗಿ ಅವರಿಬ್ಬರಿಗೂ ಧನಂಜಯನ ವಿಷಯದಲ್ಲಿ ಪಕ್ಷಪಾತವಿದ್ದಿತು. ಈ ವಿಷಯವು ನನಗೆ ತಿಳಿದಿದ್ದರೂ ನಿನ್ನ ಮಾತಿಗೆ ಪುರಸ್ಕಾರವನ್ನಿತ್ತು ಅವರಿಬ್ಬರನ್ನೂ ನನ್ನ ಸೈನ್ಯದ ದಂಡನಾಯಕರನ್ನಾಗಿ ಮಾಡಿ ನಾನವರನ್ನು ಗೌರವಿಸಿದೆನು.

**ಪಿತಾಮಹತ್ವಂ ಸಮ್ಪ್ರೇಕ್ಷ್ಯ ಪಾಣ್ಡುಪುತ್ರಾ ಮಹಾರಣೇ ।**
**ರಕ್ಷಿತಾಸ್ತಾತ ಭೀಷ್ಮೇಣ ದಿವಸಾನಿ ದಶೈವ ತು ॥೨೬॥**

ತಾನು ಪಾಂಡವರಿಗೆ ಪಿತಾಮಹನೆಂಬುದನ್ನು ಅವಗಾಹನೆಗೆ ತಂದುಕೊಂಡು ಭೀಷ್ಮನು ಪಾಂಡವರನ್ನು ಮಹಾಯುದ್ಧದಲ್ಲಿ ಹತ್ತು ದಿವಸಗಳವರೆಗೆ ರಕ್ಷಣೆಮಾಡಿದನು. (ಭೀಷ್ಮನು ಪಾಂಡವರನ್ನು ಕೊಲ್ಲಲಿಲ್ಲ.)

ನೀನು ಶಸ್ತ್ರತ್ಯಾಗಮಾಡಿರಲಾಗಿ ಅರ್ಜುನನು ಶಿಖಂಡಿಯನ್ನು ಮುಂದಿಟ್ಟುಕೊಂಡು ಆ ಮಹಾಯುದ್ಧದಲ್ಲಿ ಪಿತಾಮಹನಾದ ಭೀಷ್ಮನನ್ನು ಸಂಹರಿಸಿದನು. ಭೀಷ್ಮನು ಹತನಾಗಿ ಶರತಲ್ಪದಲ್ಲಿ ಮಲಗಲಾಗಿ ನಿನ್ನ ಮಾತಿನಿಂದಲೇ ಪುರುಷವ್ಯಾಘ್ರರಾದ ದ್ರೋಣರು ನಮ್ಮ ಸೈನ್ಯದ ಪ್ರಮುಖರಾದರು.

**ತೇನಾಪಿ ರಕ್ಷಿತಾಃ ಪಾರ್ಥಾಃ ಶಿಷ್ಯತ್ವಾದಿತಿ ಮೇ ಮತಿಃ ।**
**ಸ ಚಾಪಿ ನಿಹತೋ ವೃದ್ಧೋ ಧೃಷ್ಟದ್ಯುಮ್ನೇನ ಸತ್ವರಮ್ ॥೨೭॥**

ಪಾಂಡವರು (ಅದರಲ್ಲಿಯೂ ಅರ್ಜುನನು) ಅವರ ಅಚ್ಚುಮೆಚ್ಚಿನ ಶಿಷ್ಯರಾಗಿದ್ದುದರಿಂದ ದ್ರೋಣರೂ ಸಹ ಐದು ದಿವಸಗಳವರೆಗೆ ಪಾಂಡವರನ್ನು ರಕ್ಷಿಸಿದರೆಂದೇ (ಕೊಲ್ಲಲಿಲ್ಲವೆಂದೇ) ನನ್ನ ಅಭಿಪ್ರಾಯ ವಾಗಿದೆ. ವೃದ್ಧರಾಗಿದ್ದ ಆ ದ್ರೋಣರೂ ಧೃಷ್ಟದ್ಯುಮ್ನನಿಂದ ಬಹಳ ಬೇಗ ಕೊಲ್ಲಲ್ಪಟ್ಟರು.

ಅಮಿತವಿಕ್ರಮನೇ! ಪ್ರಧಾನಭೂತರಾಗಿದ್ದ ಭೀಷ್ಮ-ದ್ರೋಣರು ಹತ

ರಾದನಂತರ ನಾನು ಎಷ್ಟೇ ಯೋಚಿಸಿದರೂ ಸಮರಾಂಗಣದಲ್ಲಿ ನಿನಗೆ ಸಮಾನವಾಗಿ ಯುದ್ಧಮಾಡುವ ಬೇರೊಬ್ಬರನ್ನು ನಮ್ಮ ಸೈನ್ಯದಲ್ಲಿ ಅರಿಯದವನಾಗಿದ್ದೇನೆ. ನಮಗೆ ವಿಜಯವನ್ನು ಸಾಧಿಸಿಕೊಡಲು ನೀನೊಬ್ಬನು ಮಾತ್ರವೇ ಸಮರ್ಥನಾಗಿರುವೆ. ಈ ವಿಷಯದಲ್ಲಿ ಸಂಶಯವೇ ಇಲ್ಲ. ಹಿಂದೆಯೂ ಸಹ ನೀನೇ ನಮಗೆ ಅಖಂಡಭೂಮಂಡಲವನ್ನೂ ಜಯಿಸಿಕೊಟ್ಟಿರುವೆ. ಮಧ್ಯಕಾಲದಲ್ಲಿಯೂ ನೀನೇ ನಮಗೆ ಅನೇಕ ಯುದ್ಧಗಳಲ್ಲಿ ನೆರವು ನೀಡಿ ವಿಜಯವನ್ನು ಸಾಧಿಸಿಕೊಟ್ಟಿರುವೆ. ಈಗಲೂ ಸಹ ನಮ್ಮ ಹಿತವನ್ನು ನೀನೇ ರಕ್ಷಿಸಬೇಕಾಗಿದೆ. ಅಂತಹ ನೀನೀಗ ಧುರಂಧರನಾದ ಪುರುಷನಂತೆ (ನೊಗವನ್ನು ಹೊತ್ತಿರುವ ಎತ್ತಿನಂತೆ) ಸೇನಾನಾಯಕನಾಗಿ ಹೊಣೆಯನ್ನು ಹೊರಬೇಕಾಗಿದೆ. ಆದುದರಿಂದ ಸೇನಾಪತ್ಯದಲ್ಲಿ ನೀನೇ ಅಭಿಷಿಕ್ತನಾಗು.

**ದೇವತಾನಾಂ ಯಥಾ ಸ್ಕನ್ದಃ ಸೇನಾನೀಃ ಪ್ರಭುರವ್ಯಯಃ ।**
**ತಥಾ ಭವಾನಿಮಾಂ ಸೇನಾಂ ಧಾರ್ತರಾಷ್ಟ್ರೀಂ ಬಿಭರ್ತು ವೈ ॥೩೩॥**

ದೇವತೆಗಳಿಗೆ ಪ್ರಭುವಾದ, ಅವ್ಯಯನಾದ ಸ್ಕಂದನು ಯಾವ ರೀತಿಯಲ್ಲಿ ದೇವತೆಗಳಿಗೆ ಸೇನಾಪತಿಯಾಗಿರುವನೋ–ಅದೇ ರೀತಿಯಲ್ಲಿ ನೀನು ಕುರುಗಳಿಗೆ ಸೇನಾಪತಿಯಾಗಿ ಧೃತರಾಷ್ಟ್ರನ ಈ ಸೈನ್ಯವನ್ನು ಭರಿಸುವವನಾಗು.

ಮಹೇಂದ್ರನು ದಾನವರನ್ನು ಸಂಹರಿಸಿದಂತೆ–ನೀನು ನಮ್ಮ ಶತ್ರುಗಳನ್ನು ಸಂಹರಿಸು. ವಿಷ್ಣುವನ್ನು ನೋಡಿ ದಾನವರು ಪಲಾಯನಮಾಡುತ್ತಿದ್ದಂತೆ ರಣರಂಗದಲ್ಲಿ ಯುದ್ಧಸನ್ನದ್ಧನಾಗಿ ನಿಂತಿರುವ ನಿನ್ನನ್ನು ಕಂಡು ಪಾಂಡವರ ಕಡೆಯ ಮಹಾರಥರೂ ಮತ್ತು ಪಾಂಚಾಲಯೋಧರೂ ಪಲಾಯನ ಮಾಡುತ್ತಾರೆ. ಪುರುಷವ್ಯಾಘ್ರನೇ! ನೀನು ಈ ನಮ್ಮ ಮಹಾಸೈನ್ಯಕ್ಕೆ ಸಂಚಾಲಕ ನಾಗು. ನೀನು ಯುದ್ಧಸನ್ನದ್ಧನಾಗಿ ನಿಂತಿದ್ದೇ ಆದರೆ–ಶತ್ರುಗಳನ್ನು ಜಯಿಸಲು ಪ್ರಯತ್ನಿಸಿದ್ದೇ ಆದರೆ–ಮಂದಬುದ್ಧಿಯ ಪಾಂಡವರು ತಮ್ಮ ಅಮಾತ್ಯ-ಸೇನಾಪತಿಗಳೊಡನೆ ಮತ್ತು ಪಾಂಚಾಲ ಸೃಂಜಯರೊಡನೆ ಪಲಾಯನ ಮಾಡುತ್ತಾರೆ.

**ಯಥಾ ಹ್ಯಭ್ಯುದಿತಃ ಸೂರ್ಯಃ ಪ್ರತಪನ್ಸ್ವೇನ ತೇಜಸಾ ।**
**ವ್ಯಪೋಹತಿ ತಮಸ್ತೀವ್ರಂ ತಥಾ ಶತ್ರೂನ್ಪ್ರತಾಪಯ ॥೩೭॥**

ಸೂರ್ಯನು ಹುಟ್ಟಿದೊಡನೆಯೇ ತನ್ನ ತೇಜಸ್ಸಿನಿಂದ ಭೂಮಂಡಲವನ್ನೇ ತಾಪಗೊಳಿಸುತ್ತಾ ಯಾವ ರೀತಿಯಲ್ಲಿ ತೀವ್ರವಾದ ಕತ್ತಲೆಯನ್ನು ಹೋಗಲಾಡಿಸುತ್ತಾನೆಯೋ ಅದೇ ರೀತಿಯಲ್ಲಿ ನೀನೂ ಸಹ ಶತ್ರುಗಳನ್ನು ತಾಪಗೊಳಿಸು ಮತ್ತು ಅವರನ್ನು ನಾಶಗೊಳಿಸು."

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಕೌರವೇಶ್ವರ! ಭೀಷ್ಮ-ದ್ರೋಣರು ಹತರಾದನಂತರ ಕರ್ಣನು ಪಾಂಡವರನ್ನು ಜಯಿಸುವನೆಂಬ ಯಾವ ಮಹತ್ತಾದ ಆಶೆಯು ನಿನ್ನ ಪುತ್ರನಲ್ಲಿ ತುಂಬಿಕೊಂಡಿದ್ದಿತೋ–ಆ ಆಶೆಯನ್ನೇ ಹೃದಯದಲ್ಲಿಟ್ಟುಕೊಂಡು ದುರ್ಯೋಧನನು ಕರ್ಣನನ್ನು ಕುರಿತು ಪುನಃ ಹೇಳಿದನು:

**ಸೂತಪುತ್ರ ನ ತೇ ಪಾರ್ಥಃ ಸ್ಥಿತ್ವಾಗ್ರೇ ಸಂಯುಯುತ್ಸತಿ ॥೩೯॥**

"ಸೂತಪುತ್ರ! ಪಾರ್ಥನು ನಿನ್ನ ಮುಂದೆ ನಿಂತು ಯುದ್ಧಮಾಡಲು ಯಾವಾಗಲೂ ಇಚ್ಛಿಸುವುದಿಲ್ಲ."

"ಗಾಂಧಾರೀನಂದನ! ನಾನು ಹಿಂದೆಯೇ ನಿನ್ನ ಸನ್ನಿಧಾನದಲ್ಲಿ ಜೇಷ್ಯಾಮಿ ಪಾಣ್ಡವಾನ್ಸರ್ವಾನ್ಸಪುತ್ರಾನ್ಸಜನಾರ್ದನಾನ್-ಪುತ್ರಸಹಿತರಾದ ಮತ್ತು ಜನಾರ್ದನನಿಂದಲೂ ಯುಕ್ತರಾದ ಎಲ್ಲ ಪಾಂಡವರನ್ನೂ ಜಯಿಸುವೆನೆಂದು ಹೇಳಿದ್ದೆನು. ನಿನ್ನ ಆಜ್ಞೆಯಂತೆ ನಾನು ನಿನ್ನ ಸೇನಾಪತಿಯಾಗುತ್ತೇನೆ. ಇದರಲ್ಲಿ ಸಂಶಯವಿಲ್ಲ. ನೀನು ಸ್ಥಿರಮನಸ್ಕನಾಗು. ಧೈರ್ಯವನ್ನು ತಂದುಕೊ. ಪಾಂಡವರು ನಿನ್ನಿಂದ ಜಯಿಸಲ್ಪಟ್ಟರೆಂದೇ ಭಾವಿಸು."

ಮಹಾರಾಜ! ಕರ್ಣನು ಹೀಗೆ ಹೇಳಿದೊಡನೆಯೇ ದೇವತೆಗಳಿಂದ ಕೂಡಿದ ಇಂದ್ರನಂತೆ-ದುರ್ಯೋಧನರಾಜನು ಅಲ್ಲಿ ಉಪಸ್ಥಿತರಾಗಿದ್ದ ಸಕಲ ರಾಜರೊಡನೆ ಎದ್ದುನಿಂತನು. ದೇವತೆಗಳು ಸ್ಕಂದನನ್ನು ತಮ್ಮ ಸೇನಾಪತಿಯನ್ನಾಗಿ ಮಾಡಿಕೊಂಡು ಸತ್ಕರಿಸಿದಂತೆ–ವಿಜಯೈಷಿಗಳಾದ ದುರ್ಯೋಧನಪ್ರಮುಖರಾದ ರಾಜರು ಕರ್ಣನನ್ನು ಸೇನಾಪತಿಯನ್ನಾಗಿ ಮಾಡಿ ಸತ್ಕರಿಸಿದರು. ವಿಧಿವಿಹಿತವಾದ ಕರ್ಮಗಳಿಂದ ಅವನನ್ನು ಸೇನಾಪತಿಯ ಸ್ಥಾನದಲ್ಲಿ ಕುಳ್ಳಿರಿಸಿ ಅಭಿಷೇಚಿಸಿದರು. ಅಭಿಷೇಕಕ್ಕಾಗಿ ಸುವರ್ಣ

ಮಯವಾದ ಮತ್ತು ಮೃಣ್ಮಯವಾದ ಪಾತ್ರೆಗಳಲ್ಲಿ ಮಂತ್ರಪೂತವಾದ ತೀರ್ಥವನ್ನಿಟ್ಟಿದ್ದರು. ಆನೆಯ ದಂತದಿಂದ ಮಾಡಿದ ಪಾತ್ರೆಗಳಲ್ಲಿಯೂ ಅಭಿಷೇಕೋದಕವು ತುಂಬಿದ್ದಿತು. ಘೇಂಡಾಮೃಗದ ಮತ್ತು ಎತ್ತಿನ ಕೊಂಬುಗಳಲ್ಲಿಯೂ ಕರ್ಣನ ಅಭಿಷೇಕಕ್ಕಾಗಿ ನೀರನ್ನು ತುಂಬಿಟ್ಟಿದ್ದರು. ಆ ಪಾತ್ರೆಗಳಲ್ಲಿ ಮಣಿ-ಮುತ್ತುಗಳನ್ನು ಹಾಕಿದ್ದರು. ರೇಷ್ಮೆಯ ವಸ್ತ್ರದಿಂದ ಹೊದ್ದಿಸಲ್ಪಟ್ಟಿದ್ದ ಔದುಂಬರಾಸನದಲ್ಲಿ ಸುಖಾಸೀನನಾಗಿದ್ದ ಕರ್ಣನನ್ನು ಮಂತ್ರಪೂತವಾದ ಆ ತೀರ್ಥಗಳಿಂದ ಅಭಿಷೇಚಿಸಿದುದಲ್ಲದೇ, ಸುಗಂಧ ದ್ರವ್ಯಗಳಿಂದಲೂ ಔಷಧಮೂಲಿಕೆಗಳಿಂದಲೂ ಮತ್ತು ಇನ್ನೂ ವಿಧಿವಿಹಿತ ವಾದ ಅನೇಕ ಸಂಭಾರಗಳಿಂದಲೂ ಅಭಿಷೇಚಿಸಿದರು. ಶ್ರೇಷ್ಠವಾದ ಆಸನದಲ್ಲಿ ಕುಳಿತು ಅಭಿಷಿಕ್ತನಾದ ಕರ್ಣನನ್ನು, ಸಮ್ಮಾನಿತರಾದ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರೆಲ್ಲರೂ ಮುಕ್ತಕಂಠದಿಂದ ಹೊಗಳಿದರು. ಅಭಿಷಿಕ್ತ ನಾದ ಬಳಿಕ ಶತ್ರುವೀರಹಂತಕನಾದ ರಾಧೇಯನು ಸುವರ್ಣನಾಣ್ಯ ಗಳಿಂದಲೂ, ಗೋವುಗಳಿಂದಲೂ ಮತ್ತು ಧನದಿಂದಲೂ ಬ್ರಾಹ್ಮಣರನ್ನು ತೃಪ್ತಿಪಡಿಸಿ ಅವರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಂಡನು.

**ಜಯ ಪಾರ್ಥಾನ್ಸಗೋವಿನ್ದಾನ್ಸಾನುಗಾಂಸ್ತಾನ್ಮಹಾಮೃಧೇ ।**

"ಕರ್ಣ! ಮುಂದಿನ ಮಹಾಯುದ್ಧದಲ್ಲಿ ಕೃಷ್ಣಸಹಿತರಾದ ಪಾಂಡವರನ್ನು ಅವರ ಅನುಯಾಯಿಗಳೊಡನೆ ನೀನು ಜಯಿಸು"– ಎಂಬು ದಾಗಿ ವಂದಿಗಳೂ ಮತ್ತು ವಿಪ್ರರೂ ಕರ್ಣನಿಗೆ ಶುಭಾಶೀರ್ವಾದಗಳನ್ನು ಮಾಡಿದರು.

**ಜಹಿ ಪಾರ್ಥಾನ್ಸಪಾಞ್ಚಾಲಾನ್ರಾಧೇಯ ವಿಜಯಾಯ ನಃ ।**
**ಉದ್ಯನ್ನಿವ ಸದಾ ಭಾನುಸ್ತಮಾಂಸ್ಯುಗ್ರೈರ್ಗಭಸ್ತಿಭಿಃ ॥೫೦॥**

"ಸೂರ್ಯನು ಉದಯಿಸಿದೊಡನೆಯೇ ಯಾವ ರೀತಿಯಲ್ಲಿ ತನ್ನ ಉಗ್ರವಾದ ಕಿರಣಗಳಿಂದ ಕತ್ತಲನ್ನು ನಾಶಪಡಿಸುತ್ತಾನೆಯೋ–ಅದೇ ರೀತಿಯಲ್ಲಿ ನೀನೂ ಸಹ ರಣರಂಗಕ್ಕೆ ಹೋದೊಡನೆಯೇ ಕಿರಣಗಳಿಗೆ ಸದೃಶವಾದ ನಿನ್ನ ತೀಕ್ಷ್ಣವಾದ ಬಾಣಗಳಿಂದ ಅಂಧಕಾರರೂಪರಾದ

ಪಾರ್ಥರಿಂದೊಡಗೂಡಿದ ಪಾಂಚಾಲರನ್ನು ನಮ್ಮ ವಿಜಯದ ಸಲುವಾಗಿ ವಿನಾಶಗೊಳಿಸು.

**ನ ಹ್ಯಲಂ ತ್ವದ್ವಿಸೃಷ್ಟಾನಾಂ ಶರಾಣಾಂ ವೈ ಸಕೇಶವಾಃ ।**
**ಉಲೂಕಾಃ ಸೂರ್ಯರಶ್ಮೀನಾಂ ಜ್ವಲತಾಮಿವ ದರ್ಶನೇ ॥೫೧॥**

ಪ್ರಜ್ವಲಿಸುತ್ತಿರುವ ಸೂರ್ಯನ ಕಿರಣಗಳನ್ನು ನೋಡಲು ಗೂಬೆಗಳಿಗೆ ಸಾಧ್ಯವಾಗದಂತೆ–ನಿನ್ನಿಂದ ವಿಸೃಷ್ಟವಾದ ಬಾಣಗಳನ್ನು ಕೇಶವಸಹಿತರಾದ ಪಾಂಡವರು ಖಂಡಿತವಾಗಿಯೂ ದಿಟ್ಟಿಸಿ ನೋಡಲಾರರು.

**ನ ಹಿ ಪಾರ್ಥಾಃ ಸಪಾಞ್ಚಾಲಾಃ ಸ್ಥಾತುಂ ಶಕ್ತಾಸ್ತವಾಗ್ರತಃ ।**
**ಆತ್ತಶಸ್ತ್ರಸ್ಯ ಸಮರೇ ಮಹೇನ್ದ್ರಸ್ಯೇವ ದಾನವಾಃ ॥೫೨॥**

ಯುದ್ಧದಲ್ಲಿ ವಜ್ರಪಾಣಿಯಾದ ಮಹೇಂದ್ರನ ಮುಂದೆ ದಾನವರು ನಿಲ್ಲಲು ಶಕ್ತರಾಗದಂತೆ–ಪಾಂಚಾಲಸಹಿತರಾದ ಪಾರ್ಥರು ಶಸ್ತ್ರಧಾರಿಯಾದ ನಿನ್ನ ಮುಂದೆ ನಿಂತು ಯುದ್ಧಮಾಡಲು ಶಕ್ತರಲ್ಲ.”



ಮಹಾರಾಜ! ಇವೇ ಮುಂತಾಗಿ ವಂದಿ-ಮಾಗಧರು ಕರ್ಣನನ್ನು ಹಾಡಿ ಹೊಗಳಿದರು. ಸೇನಾಪತಿಯ ಸ್ಥಾನದಲ್ಲಿ ಅಭಿಷಿಕ್ತನಾದ, ಮಹಾತೇಜಸ್ವಿಯಾದ ಕರ್ಣನು ತನ್ನ ಪ್ರಭೆಯಿಂದಲೂ ಮತ್ತು ರೂಪದಿಂದಲೂ ಎರಡನೆಯ ಸೂರ್ಯನಂತೆಯೇ ಪ್ರಕಾಶಿಸಿದನು. ಕಾಲಚೋದಿತನಾದ

ನಿನ್ನ ಮಗನು ಸೂತಪುತ್ರನಿಗೆ ಸೇನಾಪತಿಯ ಪಟ್ಟಗಟ್ಟಿ ತಾನು ಕೃತಕೃತ್ಯ ನಾದೆನೆಂದೇ ಭಾವಿಸಿದನು.

ಅರಿಂದಮನಾದ ಕರ್ಣನೂ ಸಹ ಕೌರವಮಹಾಸೈನ್ಯಕ್ಕೆ ದಂಡ ನಾಯಕನಾದನಂತರ ಸೂರ್ಯೋದಯದ ಸಮಯದಲ್ಲಿ ಯುದ್ಧಸನ್ನದ್ಧ ರಾಗುವಂತೆ ಸೈನಿಕರಿಗೆ ಆಜ್ಞೆಮಾಡಿದನು. ರಣಾಂಗಣದಲ್ಲಿ ನಿನ್ನ ಮಕ್ಕಳಿಂದ ಪರಿವೃತನಾಗಿದ್ದ ಕರ್ಣನು ತಾರಕಾಮಯಯುದ್ಧದಲ್ಲಿ ದೇವತೆಗಳಿಂದ ಪರಿವೃತನಾದ ಸ್ಕಂದನಂತೆಯೇ ಪ್ರಕಾಶಿಸಿದನು."

೧೦ನೆಯ ಅಧ್ಯಾಯವು ಮುಗಿಯಿತು.

೧೧ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣನ ಸೇನಾಪತಿತ್ವದಲ್ಲಿ ಕೌರವರು ಸಮರಾಂಗಣಕ್ಕೆ ತೆರಳಿದುದು: ಮಕರವ್ಯೂಹದ ರಚನೆ: ಇದಕ್ಕೆ ಪ್ರತಿಯಾಗಿ ಪಾಂಡವರು ಅರ್ಧಚಂದ್ರಾಕಾರವ್ಯೂಹವನ್ನು ರಚಿಸಿದುದು: ಯುದ್ಧಾರಂಭ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

"ಸಂಜಯ! ವೈಕರ್ತನಕರ್ಣನು ಸೇನಾಪತಿಯ ಸ್ಥಾನವನ್ನು ಪಡೆದು ಕೊಂಡನು. ದುರ್ಯೋಧನನು ಸೋದರನೊಡನೆ ಮಾತನಾಡುವಂತೆಯೇ ಕರ್ಣನೊಡನೆ ಸ್ನೇಹಪೂರ್ಣವಾದ, ವಾತ್ಸಲ್ಯಪೂರ್ಣವಾದ ಮಾತುಗಳ ನ್ನಾಡಿದನು. ಸೂರ್ಯನುದಯಿಸಲಾಗಿ ಮಹಾಪ್ರಾಜ್ಞನಾದ ಕರ್ಣನು ಸೈನಿಕರಿಗೆ ಯುದ್ಧಕ್ಕೆ ಸಿದ್ಧರಾಗುವಂತೆ ಆಜ್ಞೆಯನ್ನೂ ನೀಡಿದನು. ಇವಿಷ್ಟು ವಿಷಯಗಳನ್ನೂ ನಿನ್ನಿಂದ ಕೇಳಿ ತಿಳಿದುಕೊಂಡೆನು. ಸೇನಾಪತಿಯಾದ ಕರ್ಣನು ಮುಂದೇನು ಮಾಡಿದನೆಂಬುದನ್ನು ಹೇಳು."

"ಮಹಾರಾಜ! ಕರ್ಣನ ಅಭಿಪ್ರಾಯವನ್ನು ತಿಳಿದ ನಿನ್ನ ಮಕ್ಕಳು ಆನಂದದಾಯಕವಾದ ಮಂಗಳವಾದ್ಯಗಳೊಡನೆ ಸೈನಿಕರ ಪ್ರಸ್ಥಾನ ವಾಗಬೇಕೆಂಬ ಆಜ್ಞೆಯನ್ನು ನೀಡಿದರು. ಬೆಳಗಾಗುವುದರಲ್ಲಿಯೇ (ಇನ್ನೂ ಕತ್ತಲಾಗಿದ್ದಾಗಲೇ) ನಿನ್ನ ಸೈನ್ಯದಲ್ಲಿ "ಯುದ್ಧಕ್ಕೆ ಸಿದ್ಧರಾಗಿರಿ! ಮುಂದೆ

ನಡೆಯಿರಿ! ನಿಮ್ಮ ನಿಮ್ಮ ದಳಗಳಲ್ಲಿ ಸೇರಿಕೊಳ್ಳಿರಿ!"–ಎಂಬ ಮಹಾನಿನಾದವು ಸರ್ವತ್ರ ಕೇಳತೊಡಗಿತು. ಯುದ್ಧಕ್ಕೆ ಸಜ್ಜಾಗುತ್ತಿದ್ದ ದೊಡ್ಡ- ದೊಡ್ಡ ಸಲಗಗಳ ಘೀಂಕಾರನಿನಾದವೂ, ಆವರಣಯುಕ್ತವಾದ ರಥಗಳ ಗಡ-ಗಡಾ ಶಬ್ದವೂ, ಕವಚಗಳನ್ನು ಧರಿಸಿಕೊಳ್ಳುತ್ತಿದ್ದ ಪದಾತಿಗಳ ಕಲ-ಕಲಶಬ್ದವೂ, ಕುದುರೆಗಳ ಕೆನೆಯುವ ಶಬ್ದವೂ, ಯುದ್ಧಕ್ಕೆ ಹೋಗಲು ಅವಸರಪಡುತ್ತಾ ಪರಸ್ಪರವಾಗಿ ಕೂಗಿಕೊಳ್ಳುತ್ತಿದ್ದ ಯೋಧರ ಶಬ್ದವೂ ಮಹಾಭಯಂಕರಶಬ್ದವಾಗಿ ಪರಿಣಮಿಸಿ ಆಕಾಶವನ್ನೂ ವ್ಯಾಪಿಸಿತು. ಅನಂತರ ಕರ್ಣನು ವಿಮಲನಾದ ಸೂರ್ಯನ ತೇಜಸ್ಸಿನಿಂದ ಬೆಳಗುತ್ತಿದ್ದ ಪತಾಕಾಯುಕ್ತವಾದ ರಥದಲ್ಲಿ ಕಾಣಿಸಿಕೊಂಡನು. ಅವನ ರಥಕ್ಕೆ ಬಿಳಿಯಬಾವುಟವಿದ್ದಿತು. ಬೆಳ್ಳಕ್ಕಿಯ ಬಣ್ಣದ ಕುದುರೆಗಳನ್ನು ಕರ್ಣನ ರಥಕ್ಕೆ ಕಟ್ಟಿದ್ದರು. ಸುವರ್ಣಮಯವಾದ ಹಿಂಭಾಗವಿದ್ದ ಧನುಸ್ಸಿನಿಂದ ಆ ರಥವು ಯುಕ್ತವಾಗಿದ್ದಿತು. ಆ ರಥದ ಮೇಲ್ಭಾಗದಲ್ಲಿ ಆನೆಯ ಹಗ್ಗದ ಚಿಹ್ನೆಯಿದ್ದ ಬಾವುಟವಿದ್ದಿತು. ಬಾಣಗಳಿಂದ ತುಂಬಿದ್ದ ನೂರಾರು ಬತ್ತಳಿಕೆಗಳು ಆ ರಥದಲ್ಲಿದ್ದುವು. ಈ ಬತ್ತಳಿಕೆಗಳ ಜೊತೆಯಲ್ಲಿಯೇ ಗದೆಯೂ ಇದ್ದಿತು. ರಕ್ಷಣೆಗಾಗಿ ಸುತ್ತಲೂ ಆ ರಥವು ಆವರಣವನ್ನು ಹೊಂದಿದ್ದಿತು. ಶತಘ್ನೀ, ಕಿಂಕಿಣೀ, ಶಕ್ತಿ, ಶೂಲ, ತೋಮರ–ಇವೇ ಮೊದಲಾದ ಆಯುಧಗಳೂ ಆ ರಥದಲ್ಲಿದ್ದುವು. ಅನೇಕ ಧನುಸ್ಸುಗಳಿಂದಲೂ ಆ ರಥವು ಸಂಪನ್ನವಾಗಿದ್ದಿತು. ಇಂತಹ ಎಲ್ಲ ಯುದ್ಧಸಾಮಗ್ರಿಗಳಿಂದಲೂ ಸುಸಜ್ಜಿತವಾಗಿದ್ದ ರಥದಲ್ಲಿ ಕುಳಿತ ಕರ್ಣನು ಸುವರ್ಣಮಯವಾದ ಬಲೆಯಿಂದ ಸುಶೋಭಿತವಾಗಿದ್ದ ಶಂಖವನ್ನು ಗಟ್ಟಿಯಾಗಿ ಊದುತ್ತಾ, ಸುವರ್ಣದಿಂದ ಸಮಲಂಕೃತವಾಗಿದ್ದ ಮಹಾ ಧನುಸ್ಸನ್ನು ಹಿಂದಕ್ಕೂ ಮುಂದಕ್ಕೂ ಸಂಚಾಲಿಸುತ್ತಾ (ಟೇಂಕಾರ ಮಾಡುತ್ತಾ) ಯುದ್ಧಕ್ಕೆ ಹೊರಟನು.

ರಥಿಗಳಲ್ಲಿ ಶ್ರೇಷ್ಠನಾದ, ಮಹಾಧನುಷ್ಮಂತನಾದ, ದುರಾಸದನಾದ, ಉದಯಿಸುತ್ತಿರುವ ಸೂರ್ಯನಂತೆ ತಮ್ಮ ದುಃಖವೆಂಬ ಅಂಧಕಾರವನ್ನು ನಾಶಪಡಿಸುವವನಾಗಿದ್ದ ಕರ್ಣನನ್ನು ನೋಡಿ ಕೌರವರು ಭೀಷ್ಮ- ದ್ರೋಣರೇ ಮೊದಲಾದ ಅನೇಕ ಅತಿರಥ-ಮಹಾರಥರು ಮರಣಹೊಂದಿದುದರಿಂದ

ಉಂಟಾಗಿದ್ದ ದುಃಖವನ್ನು ಸಂಪೂರ್ಣವಾಗಿ ಮರೆತೇಬಿಟ್ಟರು. ಅನಂತರ ಕರ್ಣನು ಶಂಖನಿನಾದದಿಂದ ಯೋಧರನ್ನು ಆತುರಪಡಿಸುತ್ತಾ ಕೌರವರ ಮಹಾಸೈನ್ಯವನ್ನು ಶಿಬಿರಗಳಿಂದ ಹೊರಡಿಸಿದನು. ಶತ್ರುತಾಪನನಾದ, ಮಹಾಧನುಷ್ಮಂತನಾದ ಕರ್ಣನು ಪಾಂಡವರನ್ನು ಜಯಿಸುವ ಇಚ್ಛೆಯಿಂದ ತನ್ನ ಸೈನ್ಯವನ್ನು ಮಕರವ್ಯೂಹಕ್ರಮದಲ್ಲಿ ನಿಲ್ಲಿಸಿ ಮುಂದೆ ನಡೆದನು.

ದ್ರೋಣಪುತ್ರಸ್ತು ಶಿರಸಿ ಗ್ರೀವಾಯಾಂ ಸರ್ವಸೋದರಾಃ।
ಮಧ್ಯೇ ದುರ್ಯೋಧನೋ ರಾಜಾ ಬಲೇನ ಮಹತಾ ವೃತಃ ॥೧೬॥
ವಾಮಪಾದೇ ತು ರಾಜೇನ್ದ್ರ ಕೃತವರ್ಮಾ ವ್ಯವಸ್ಥಿತಃ ।
ನಾರಾಯಣಬಲೈರ್ಯುಕ್ತೋ ಗೋಪಾಲೈರ್ಯುದ್ಧದುರ್ಮದೈಃ ॥೧೭॥
ಪಾದೇ ತು ದಕ್ಷಿಣೇ ರಾಜನ್ಗೌತಮಃ ಸತ್ಯವಿಕ್ರಮಃ ।
ತ್ರಿಗರ್ತೈಃ ಸುಮಹೇಷ್ವಾಸೈರ್ದಾಕ್ಷಿಣಾತ್ಯೈಶ್ಚ ಸಂವೃತಃ ॥೧೮॥
ಅನುಪಾದೇ ತು ಯೋ ವಾಮಸ್ತತ್ರ ಶಲ್ಯೋ ವ್ಯವಸ್ಥಿತಃ।
ಮಹತ್ಯಾ ಸೇನಯಾ ಸಾರ್ಧಂ ಮದ್ರದೇಶಸಮುತ್ಥಯಾ ॥೧೯॥
ದಕ್ಷಿಣೇ ತು ಮಹಾರಾಜ ಸುಷೇಣಃ ಸತ್ಯಸಂಗರಃ ।
ವೃತೋ ರಥಸಹಸ್ರೇಣ ದನ್ತಿನಾಂ ಚ ತ್ರಿಭಿಃ ಶತೈಃ ॥೨೦॥
ಪುಚ್ಛೇ ಹ್ಯಾಸ್ತಾಂ ಮಹಾವೀರ್ಯೌ ಭ್ರಾತರೌ ಪಾರ್ಥಿವೌ ತದಾ ।
ಚಿತ್ರಶ್ಚ ಚಿತ್ರಸೇನಶ್ಚ ಮಹತ್ಯಾ ಸೇನಯಾ ವೃತೌ ॥೨೧॥

ಮಕರವ್ಯೂಹದ ಶಿರಸ್ಸಿನಲ್ಲಿ ದ್ರೋಣರ ಮಗನಾದ ಅಶ್ವತ್ಥಾಮನಿದ್ದನು. ಕುತ್ತಿಗೆಯಲ್ಲಿ ದುರ್ಯೋಧನನ ಎಲ್ಲ ಸೋದರರೂ ಇದ್ದರು. ಮಧ್ಯದಲ್ಲಿ ಮಹಾಸೈನ್ಯದಿಂದ ಸಂವೃತನಾದ ದುರ್ಯೋಧನರಾಜನಿದ್ದನು. ವ್ಯೂಹರೂಪವಾದ ಮಕರದ ಎಡಗಾಲಿನ ಸ್ಥಾನದಲ್ಲಿ ಕೃತವರ್ಮನು ನಾರಾಯಣರೆಂಬ ಸೈನಿಕರಿಂದಲೂ, ಯುದ್ಧದುರ್ಮದರಾದ ಗೋಪಾಲಕರಿಂದಲೂ ಯುಕ್ತನಾಗಿ ನಿಂತಿದ್ದನು. ಬಲಗಾಲಿನ ಸ್ಥಾನದಲ್ಲಿ ಸತ್ಯವಿಕ್ರಮರಾದ ಕೃಪರು, ಮಹಾಧನುಷ್ಮಂತರಾದ ತ್ರಿಗರ್ತರಿಂದಲೂ ದಾಕ್ಷಿಣಾತ್ಯರಿಂದಲೂ ಪರಿವೃತರಾಗಿ ನಿಂತಿದ್ದರು. ಎಡಹಿಮ್ಮಡಿಯ ಭಾಗದಲ್ಲಿ ಶಲ್ಯನು

ಮದ್ರದೇಶದ ವಿಶಾಲಸೈನ್ಯದೊಡನೆ ಉಪಸ್ಥಿತನಾಗಿದ್ದನು. ಬಲಹಿಮ್ಮಡಿಯ ಭಾಗದಲ್ಲಿ ಸತ್ಯಸಂಗರನಾದ ಸುಷೇಣನು ಸಹಸ್ರರಥಸೈನಿಕರಿಂದಲೂ ಮೂರು ನೂರು ಆನೆಗಳಿಂದಲೂ ಪರಿವೃತನಾಗಿ ನಿಂತಿದ್ದನು. ಮಕರದ ಪುಚ್ಛಭಾಗದಲ್ಲಿ ಮಹಾವೀರ್ಯರಾದ, ಸೋದರರಾದ ಚಿತ್ರ ಮತ್ತು ಚಿತ್ರಸೇನರಾಜರು ತಮ್ಮ ವಿಶಾಲವಾದ ಸೈನ್ಯಗಳಿಂದ ಪರಿವೃತರಾಗಿ ನಿಂತಿದ್ದರು. ನರಶ್ರೇಷ್ಠರಲ್ಲಿ ಉತ್ತಮನಾದ ಕರ್ಣನು ಈ ರೀತಿಯಲ್ಲಿ ಸೈನ್ಯವನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿಕೊಂಡು ರಣರಂಗಕ್ಕೆ ಹೋಗಲಾಗಿ, ಧನಂಜಯನನ್ನು ನೋಡಿ ಧರ್ಮರಾಜನು ಅವನೊಡನೆ ಈ ಮಾತುಗಳನ್ನು ಹೇಳಿದನು:

"ಪಾರ್ಥ! ಕರ್ಣನಿಂದ ರಚಿತವಾದ ಮತ್ತು ವೀರರಾದ ಮಹಾರಥರಿಂದ ರಕ್ಷಿಸಲ್ಪಡುತ್ತಿರುವ ಧೃತರಾಷ್ಟ್ರನ ಸೈನ್ಯವು ಹೇಗಿದೆಯೆಂಬುದನ್ನು ನೋಡು. ಮಹಾಬಾಹುವೇ! ಅನೇಕವೀರರು ಹತರಾಗಿ ಶೇಷರೂಪದಲ್ಲಿ ದುರ್ಬಲರಾಗಿ ಉಳಿದಿರುವ ಧೃತರಾಷ್ಟ್ರನ ಈ ಮಹಾಸೇನೆಯು ನಿನಗೆ ತೃಣಸಮಾನವೆಂದೇ ಭಾವಿಸುತ್ತೇನೆ. ಅವರ ಈ ಅಪಾರಸೈನ್ಯದಲ್ಲಿ ಸೂತಪುತ್ರನಾದ ಕರ್ಣನೊಬ್ಬನು ವಿರಾಜಮಾನನಾಗಿ ಕಾಣುತ್ತಿದ್ದಾನೆ. ಇವನಾದರೂ ಸಾಮಾನ್ಯನಲ್ಲ. ರಥಿಗಳಲ್ಲಿ ಶ್ರೇಷ್ಠನಾದ ಕರ್ಣನು ದೇವಾಸುರ-ಗಂಧರ್ವ-ಕಿನ್ನರ-ಮಹೋರಗರಿಂದ ಕೂಡಿದ ಚರಾಚರಸಹಿತವಾದ ಮೂರು ಲೋಕಗಳಿಂದಲೂ ಅಜಯ್ಯನು. ಅವನನ್ನಿಂದು ನೀನು ಸಂಹರಿಸಿದರೆ ನಿನಗೆ ವಿಜಯದ ಸಿದ್ಧಿಯೂ ಆದಂತಾಗುತ್ತದೆ; ಹನ್ನೆರಡು ವರ್ಷಗಳಿಂದಲೂ ನನ್ನ ಹೃದಯದಲ್ಲಿ ನಾಟಿರುವ ಮುಳ್ಳನ್ನೂ ಹೊರ ತೆಗೆದಂತಾಗುತ್ತದೆ. ಈ ವಿಷಯವನ್ನು ನೀನು ಮನಸ್ಸಿಗೆ ತಂದುಕೊಂಡು ನಿನಗೆ ಇಚ್ಛೆತೋರಿದಂತೆ ವ್ಯೂಹವನ್ನು ರಚಿಸು."

ಅಣ್ಣನು ಹೇಳಿದ ಮಾತುಗಳನ್ನು ಕೇಳಿ ಶ್ವೇತವಾಹನನಾದ ಅರ್ಜುನನು ಕರ್ಣನು ರಚಿಸಿದ್ದ ಮಕರವ್ಯೂಹಕ್ಕೆ ಪ್ರತಿಯಾಗಿ ಅರ್ಧಚಂದ್ರವ್ಯೂಹವನ್ನು ರಚಿಸಿದನು.

**ವಾಮಪಾರ್ಶ್ವೇ ತು ತಸ್ಯಾಥ ಭೀಮಸೇನೋ ವ್ಯವಸ್ಥಿತಃ ।**
**ದಕ್ಷಿಣೇ ಚ ಮಹೇಷ್ವಾಸೋ ಧೃಷ್ಟದ್ಯುಮ್ನೋ ವ್ಯವಸ್ಥಿತಃ ॥೨೯॥**
**ಮಧ್ಯೇ ವ್ಯೂಹಸ್ಯ ರಾಜಾ ತು ಪಾಣ್ಡವಶ್ಚ ಧನಂಜಯಃ ।**

**ನಕುಲಃ ಸಹದೇವಶ್ಚ ಧರ್ಮರಾಜಸ್ಯ ಪೃಷ್ಠತಃ ॥೩೦॥**
**ಚಕ್ರರಕ್ಷೌ ತು ಪಾಞ್ಚಾಲ್ಯೌ ಯುಧಾಮನ್ಯೂತ್ತಮೌಜಸೌ ।**
**ನಾರ್ಜುನಂ ಜಹತುರ್ಯುದ್ಧೇ ಪಾಲ್ಯಮಾನೌ ಕಿರೀಟಿನಾ ॥೩೧॥**
**ಶೇಷಾ ನೃಪತಯೋ ವೀರಾಃ ಸ್ಥಿತಾ ವ್ಯೂಹಸ್ಯ ದಂಶಿತಾಃ ।**
**ಯಥಾಭಾಗಂ ಯಥೋತ್ಸಾಹಂ ಯಥಾಯತ್ನಂ ಚ ಭಾರತ ॥೩೨॥**

ಅರ್ಧಚಂದ್ರವ್ಯೂಹದ ಎಡಭಾಗದಲ್ಲಿ ಭೀಮಸೇನನು ಉಪಸ್ಥಿತನಾಗಿದ್ದನು. ಬಲಭಾಗದಲ್ಲಿ ಮಹಾಧನುಷ್ಮಂತನಾದ ಧೃಷ್ಟದ್ಯುಮ್ನನು ನಿಂತಿದ್ದನು. ವ್ಯೂಹದ ಮಧ್ಯಭಾಗದಲ್ಲಿ ಯುಧಿಷ್ಠಿರಾರ್ಜುನರಿಬ್ಬರೂ ನಿಂತಿದ್ದರು. ಧರ್ಮರಾಜನ ಹಿಂಭಾಗದಲ್ಲಿ ನಕುಲ-ಸಹದೇವರು ನಿಂತಿದ್ದರು. ಪಾಂಚಾಲ್ಯರಾದ ಯುಧಾಮನ್ಯು ಮತ್ತು ಉತ್ತಮೌಜಸರು ಅರ್ಜುನನ ಚಕ್ರರಕ್ಷಕರಾಗಿದ್ದರು. ಅರ್ಜುನನಿಂದ ರಕ್ಷಿಸಲ್ಪಡುತ್ತಿದ್ದ ಆ ಇಬ್ಬರೂ ಯುದ್ಧದಲ್ಲಿ ಅರ್ಜುನನನ್ನು ಬಿಟ್ಟುಹೋಗುತ್ತಿರಲಿಲ್ಲ. ಉಳಿದ ವೀರರಾದ ರಾಜರು ವ್ಯೂಹದ ಒಂದೊಂದು ಭಾಗದಲ್ಲಿ ತಮ್ಮ ಉತ್ಸಾಹಕ್ಕೆ ಮತ್ತು ಪ್ರಯತ್ನಕ್ಕೆ ಅನುಸಾರವಾಗಿ ನಿಂತಿದ್ದರು. ಹೀಗೆ ಪಾಂಡವರೂ ಮತ್ತು ನಿನ್ನ ಕಡೆಯ ಮಹಾಧನುಷ್ಮಂತರಾದ ಯೋಧರೂ ಮಹಾವ್ಯೂಹಗಳನ್ನು ರಚಿಸಿಕೊಂಡು ಯುದ್ಧಮಾಡುವುದರಲ್ಲಿಯೇ ಹೆಚ್ಚಿನ ಆಸಕ್ತಿಯನ್ನು ಹೊಂದಿದರು. (ಭೀಷ್ಮ-ದ್ರೋಣರು ಅವಸಾನಹೊಂದಿದರೂ ಯುದ್ಧವನ್ನು ನಿಲ್ಲಿಸಬೇಕೆಂಬ, ಶಾಂತಿಸಂಧಾನವನ್ನು ಮಾಡಿಕೊಳ್ಳಬೇಕೆಂಬ ಇಚ್ಛೆಯು ಉಭಯಪಕ್ಷಗಳಲ್ಲಿ ಯಾರಿಗೂ ಇರಲಿಲ್ಲ.)

ಸೂತಪುತ್ರನಾದ ಕರ್ಣನು ನಿನ್ನ ಸೈನಿಕರನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿದುದನ್ನು ಕಂಡು ಬಂಧುಗಳೊಡನಿದ್ದ ದುರ್ಯೋಧನನು ಪಾಂಡವ ರೆಲ್ಲರೂ ಹತರಾದರೆಂದೇ ಭಾವಿಸಿದನು.

ಅದೇ ರೀತಿಯಲ್ಲಿ ಅರ್ಜುನನಿಂದ ಅರ್ಧಚಂದ್ರವ್ಯೂಹಕ್ರಮದಲ್ಲಿ ನಿಲ್ಲಿಸಲ್ಪಟ್ಟಿದ್ದ ತನ್ನ ಸೈನ್ಯವನ್ನು ಕಂಡು ಜನಾಧಿಪನಾದ ಯುಧಿಷ್ಠಿರನು ಕರ್ಣಸಹಿತರಾದ ಧೃತರಾಷ್ಟ್ರನ ಮಕ್ಕಳು ಹತರಾದರೆಂದೇ ಭಾವಿಸಿದನು.

ಅನಂತರ ಎರಡೂ ಕಡೆಗಳ ಸೈನಿಕರು ಮಹಾಧ್ವನಿಯನ್ನುಂಟು

ಮಾಡುವ ಶಂಖ-ಭೇರಿ-ಪಣವ-ಆನಕ-ದುಂದುಭಿಗಳನ್ನೂ, ಡಿಂಡಿಮ-ಝರ್ಝರಗಳನ್ನೂ ಬಜಾಯಿಸಿದರು. ವಿಜಯೇಚ್ಛುಗಳಾದ ಶೂರರು ಸಿಂಹನಾದಗಳನ್ನೂ ಮಾಡಿದರು. ಅನಂತರ ಕುದುರೆಗಳ ಹೇಷಾರವಗಳೂ, ಆನೆಗಳ ಘೀಂಕಾರಶಬ್ದಗಳೂ, ರಥಚಕ್ರಗಳ ಗಡುಸಾದ ಗಡ-ಗಡಾಶಬ್ದಗಳೂ ಸರ್ವತ್ರ ಏಕಕಾಲದಲ್ಲಿ ಕೇಳಿಬಂದುವು.

ಮಕರವ್ಯೂಹದ ಮುಂಭಾಗದಲ್ಲಿ ಕವಚವನ್ನು ಧರಿಸಿ ಯುದ್ಧಸನ್ನದ್ಧನಾಗಿ ನಿಂತಿದ್ದ ಕರ್ಣನನ್ನು ನೋಡಿ ನಿನ್ನ ಕಡೆಯ ಸೈನಿಕರು ದ್ರೋಣರ ಮರಣದುಃಖವನ್ನು ಸಂಪೂರ್ಣವಾಗಿ ಮರೆತೇಬಿಟ್ಟರು.

ಎರಡೂ ಪಕ್ಷಗಳ ಸೈನ್ಯಗಳೂ ಪ್ರಹೃಷ್ಟರಾದ ನರಪುಂಗವರಿಂದ ಸಮೃದ್ಧವಾಗಿದ್ದುವು. ತಮ್ಮ ಬಾಹುಬಲ-ಪರಾಕ್ರಮಗಳಿಂದ ಒಬ್ಬರು ಮತ್ತೊಬ್ಬರನ್ನು ಸಂಹಾರಮಾಡಲು ಯುದ್ಧಮಾಡುವ ಇಚ್ಛೆಯಿಂದ ನಿಂತಿದ್ದರು. (ಒಂದು ಸೈನ್ಯವು ತನ್ನ ಶಕ್ತಿಯಿಂದ ಮತ್ತೊಂದು ಸೈನ್ಯವನ್ನು ಕೊಲ್ಲಲು ತವಕಿಸುತ್ತಿತ್ತು.) ಎರಡೂ ಸೈನ್ಯಗಳ ಮಧ್ಯದಲ್ಲಿ ಕೋಪಾವಿಷ್ಟರಾಗಿ ನಿಂತಿದ್ದ ಪ್ರಯತ್ನಶೀಲರಾಗಿದ್ದ ಕರ್ಣಾರ್ಜುನರು ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನು ನೋಡಿ ತಮ್ಮ ಸೈನಿಕರ ಮಧ್ಯದಲ್ಲಿ ಚಲಿಸತೊಡಗಿದರು. ನೃತ್ಯಮಾಡುವಂತೆಯೇ ಆ ಉಭಯಸೇನೆಗಳೂ ಢಕ್ಕೆ-ಭೇರೀಶಬ್ದಗಳಿಗೆ ಅನುಸಾರವಾಗಿ ಕಾಲುಗಳನ್ನಿಡುತ್ತಾ ಮುಂದೆ-ಮುಂದೆ ಬಂದು ಮಿಲಿತವಾದುವು. ಯುದ್ಧಮಾಡುವ ಇಚ್ಛೆಯಿಂದ ಕೂಡಿದ್ದ ಪಕ್ಷ-ಪ್ರತಿಪಕ್ಷಗಳ ಯೋಧರೂ ಮಧ್ಯಭಾಗದಿಂದ ಹೊರಬಂದರು. ಅನಂತರ ಪರಸ್ಪರವಾಗಿ ಆಘಾತವನ್ನುಂಟುಮಾಡುವ ರಥ-ಗಜಾಶ್ವ-ಪದಾತಿಸೈನಿಕರ ಮಹಾಯುದ್ಧವು ಪ್ರಾರಂಭವಾಯಿತು."

ಗಗನೆಯ ಅಧ್ಯಾಯವು ಮುಗಿಯಿತು.

೧೨ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಎರಡೂ ಸೈನ್ಯಗಳ ನಡುವೆ ಘೋರಯುದ್ಧ: ಭೀಮಸೇನನು ಕ್ಷೇಮಧೂರ್ತಿಯನ್ನು ಸಂಹರಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಪರಸ್ಪರವಾಗಿ ಸಂಘರ್ಷಿಸಲು ಮುನ್ನುಗ್ಗಿ ಬಂದ ಎರಡೂ ಪಕ್ಷಗಳ ರಥ-ಗಜಾಶ್ವ-ಪದಾತಿಸೈನಿಕರು ಅತ್ಯಂತಸಂತೋಷ ದಿಂದಿದ್ದರು. ದೇವತೆಗಳ ಮತ್ತು ಅಸುರರ ಸೇನೆಗಳ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿ ವಿಶಾಲರೂಪದಲ್ಲಿದ್ದ ಕುರು-ಪಾಂಡವಸೈನಿಕರು ಶಸ್ತ್ರಾಸ್ತ್ರಗಳಿಂದ ಪರಸ್ಪರವಾಗಿ ಪ್ರಹರಿಸಲು ಉಪಕ್ರಮಿಸಿದರು. ಅನಂತರ ಉಗ್ರಪರಾಕ್ರಮರಾದ ಗಜ-ರಥಾಶ್ವ-ಪದಾತಿಸೈನಿಕರು ದೇಹನಾಶಕರವಾದ ಮತ್ತು ಪಾಪ-ಪ್ರಾಣನಾಶಕರವಾದ ಮಹಾಪ್ರಹಾರಗಳನ್ನು ಅತಿವೇಗವಾಗಿ ತಮ್ಮ ಎದುರಾಳಿಗಳಿಗೆ ಕೊಡಲು ಉಪಕ್ರಮಿಸಿದರು. ನರಶ್ರೇಷ್ಠರಾದ ಒಂದು ಪಕ್ಷದ ಯೋಧರು ನರಶ್ರೇಷ್ಠರಾದ ಎದುರುಪಕ್ಷದ ಯೋಧರು, ಪೂರ್ಣಚಂದ್ರನ ಮತ್ತು ಸೂರ್ಯನ ಕಾಂತಿಗೂ ಮತ್ತು ಕಮಲಪುಷ್ಪಗಳ ಸುಗಂಧಕ್ಕೂ ಸಮಾನವಾದ ಕಾಂತಿಯಿಂದಲೂ ಮತ್ತು ಸುಗಂಧದಿಂದಲೂ ಕೂಡಿದ್ದ ಉತ್ತಮಾಂಗಗಳಿಂದ ರಣಭೂಮಿಯನ್ನೇ ಮುಚ್ಚಿಬಿಟ್ಟರು. (ಮತ್ತೊಂದು ಪಕ್ಷದ ಯೋಧರ ತಲೆಗಳನ್ನು ಕಡಿದು ರಣಾಂಗಣದಲ್ಲಿ ಚೆಲ್ಲಾಡಿಬಿಟ್ಟರು.) ಕೌರವ-ಪಾಂಡವಸೈನಿಕರು ತಮ್ಮೆದುರಾಗಿ ಯುದ್ಧ ಮಾಡಲು ಬಂದವರ ಶಿರಸ್ಸುಗಳನ್ನು ಅರ್ಧಚಂದ್ರ, ಭಲ್ಲ, ಕ್ಷುರಪ್ರ, ಖಡ್ಗ, ಪಟ್ಟಿಶ ಮತ್ತು ಗಂಡುಗೊಡಲಿ–ಇವೇ ಮುಂತಾದ ಆಯುಧಗಳಿಂದ ಕತ್ತರಿಸುತ್ತಿದ್ದರು.

ದಪ್ಪವಾಗಿಯೂ ಮತ್ತು ದೀರ್ಘವಾಗಿಯೂ ಇದ್ದ ಮಹಾವೀರರ ಬಾಹುಗಳಿಂದ ಕತ್ತರಿಸಲ್ಪಟ್ಟ, ಪುಷ್ಟವಾಗಿಯೂ, ನೀಳವಾಗಿಯೂ ಇದ್ದ ಯೋಧರ ಬಾಹುಗಳು ಅಂಗದಗಳ ಮತ್ತು ಆಯುಧಗಳ ಸಮೇತವಾಗಿ ರಣಾಂಗಣದ ಸುತ್ತಲೂ ಬಿದ್ದಿದ್ದು ಬಹಳವಾಗಿ ಪ್ರಕಾಶಿಸುತ್ತಿದ್ದುವು. ಮಹಾವೀರರ ತೋಳುಗಳಿಂದಲೂ ಮತ್ತು ಕೆಂಪಾದ ಬೆರಳುಗಳಿಂದಲೂ ಮತ್ತು ಅಂಗೈಗಳಿಂದಲೂ ಪ್ರಕಾಶಿಸುತ್ತಿದ್ದ ಆ ರಣರಂಗವು-ಗರುಡನಿಂದ

ಪ್ರಹರಿಸಲ್ಪಟ್ಟು ಭೂಮಿಯ ಮೇಲೆ ಬಿದ್ದಿರುವ ಐದು ಹೆಡೆಗಳನ್ನು ಹೊಂದಿರುವ ಉಗ್ರವಾದ ಹಾವುಗಳಂತೆಯೇ ಕಾಣುತ್ತಿದ್ದುವು. ಶತ್ರುಪಕ್ಷದವರಿಂದ ವಧಿಸಲ್ಪಡುತ್ತಿದ್ದ ಸೈನಿಕರು-ಸ್ವರ್ಗವಾಸಿಗಳು ಪುಣ್ಯವು ಕ್ಷೀಣಿಸಿ ಹೋದೊಡನೆಯೇ ವಿಮಾನಗಳಿಂದ ಕೆಳಕ್ಕೆ ಬೀಳುವಂತೆ–ಆನೆಗಳಿಂದಲೂ ರಥಗಳಿಂದಲೂ ಮತ್ತು ಕುದುರೆಗಳಿಂದಲೂ ಕೆಳಕ್ಕೆ ಬೀಳುತ್ತಿದ್ದರು. ವೀರರಾದ ಯೋಧರನ್ನು ಅವರಿಗಿಂತಲೂ ಹೆಚ್ಚಿನ ವೀರ್ಯ-ಪರಾಕ್ರಮಗಳಿದ್ದ ಯೋಧರು ಬಹಳ ಭಾರವಾದ ಗದೆಗಳಿಂದಲೂ, ಪರಿಘಾಯುಧಗಳಿಂದಲೂ, ಮುಸಲಗಳಿಂದಲೂ ಅಪ್ಪಳಿಸಿ ನೂರಾರು ಸಂಖ್ಯೆಯಲ್ಲಿ ಕೆಳಕ್ಕೆ ಕೆಡುವುತ್ತಿದ್ದರು. ಮಹಾಭಯಂಕರವಾದ ಆ ಯುದ್ಧದಲ್ಲಿ ರಥಿಕರು ರಥಿಕರಿಂದ ಮಥಿಸಲ್ಪಡುತ್ತಿದ್ದರು.

ಮದಿಸಿದ ಆನೆಗಳು ಮದಿಸಿದ ಆನೆಗಳನ್ನು ಸಂಹರಿಸುತ್ತಿದ್ದುವು. ಅಂತೆಯೇ ಕುದುರೆಸವಾರರು ಕುದುರೇಸವಾರರಿಂದಲೇ ಕೊಲ್ಲಲ್ಪಡುತ್ತಿದ್ದರು. ಅಂತೆಯೇ ಕೆಲವು ಸಮಯಗಳಲ್ಲಿ ರಥಿಗಳು ಕಾಲಾಳುಗಳನ್ನೂ, ಆನೆಗಳು ರಥಿಗಳನ್ನೂ, ಪದಾತಿಗಳು ಅಶ್ವಾರೋಹಿಗಳನ್ನೂ, ಅಶ್ವಾರೋಹಿಗಳು ಪದಾತಿಗಳನ್ನೂ ಎದುರಿಸಿ ಸಂಹರಿಸುತ್ತಿದ್ದರು. ಮತ್ತೆ ಕೆಲವು ಕಡೆಗಳಲ್ಲಿ ಆನೆಗಳು ರಥಾಶ್ವ-ಪದಾತಿಗಳನ್ನು ಸಂಹರಿಸುತ್ತಿದ್ದುವು. ಕಾಲಾಳುಗಳು ರಥ-ಗಜಾಶ್ವಸೈನಿಕರನ್ನು ಸಂಹರಿಸುತ್ತಿದ್ದರು. ರಥಿಕರು ಗಜ-ಪದಾತಿಸೈನಿಕರನ್ನು ಸಂಹರಿಸುತ್ತಿದ್ದರು. ಕಾಲಾಳುಗಳು, ಕುದುರೇ ಸವಾರರು, ಗಜಸೈನಿಕರು ಮತ್ತು ರಥಿಕರು, ರಥ-ಗಜಾಶ್ವ-ಪದಾತಿಗಳೊಡನೆ ಕೈಗಳಿಂದಲೂ ಶಸ್ತ್ರಗಳಿಂದಲೂ, ರಥಗಳಿಂದಲೂ ಯುದ್ಧಮಾಡುತ್ತಾ ಮಹಾಸಂಹಾರಕಾರ್ಯವನ್ನು ಮಾಡಿದರು. ಈ ರೀತಿಯಲ್ಲಿ ಪಾಂಡವರ ಮಹಾಸೈನ್ಯವು ನಮ್ಮ ಕಡೆಯ ಮಹಾಶೂರರಾದ ಯೋಧರಿಂದ ಪ್ರಹರಿಸಲ್ಪಡುತ್ತಿರಲು ಮತ್ತು ವಧಿಸಲ್ಪಡುತ್ತಿರಲು ಭೀಮಸೇನಪುರಃಸರರಾದ ಪಾರ್ಥರು ನಮ್ಮ ಮೇಲೆ ಎರಗಿಬಂದರು. ಧೃಷ್ಟದ್ಯುಮ್ನ, ಶಿಖಂಡೀ, ದ್ರೌಪದಿಯ ಮಕ್ಕಳು, ಪ್ರಭದ್ರಕರು, ಸಾತ್ಯಕಿ, ಚೇಕಿತಾನ, ದ್ರಾವಿಡಸೈನಿಕರಿಂದ ಪರಿವೃತರಾಗಿದ್ದ ಮಹಾವ್ಯೂಹಕ್ರಮದಲ್ಲಿದ್ದ ಪಾಂಡ್ಯರು, ಕೇರಳರೊಡನಿದ್ದ ಚೋಲರು ಇವರೆಲ್ಲರೂ ಭೀಮಸೇನನನ್ನೇ ಅನುಸರಿಸಿಹೊರಟರು. ಎಲ್ಲರೂ ವಿಶಾಲವಾದ ಎದೆಗಳಿಂದ ಕೂಡಿದ್ದರು. ದೀರ್ಘಬಾಹುಗಳಾಗಿ

ದ್ದರು. ಎತ್ತರವಾಗಿದ್ದರು. ವಿಶಾಲವಾದ ಕಣ್ಣುಗಳನ್ನು ಹೊಂದಿದ್ದರು. ವಿಧ-ವಿಧವಾದ ಶಿರೋಭೂಷಣಗಳನ್ನೂ ಆಭರಣಗಳನ್ನೂ ತೊಟ್ಟುಕೊಂಡಿದ್ದರು. ಕೆಂಪಾದ ಹಲ್ಲುಗಳನ್ನು ಹೊಂದಿದ್ದರು. ಮದಿಸಿದ ಆನೆಯ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವುಳ್ಳವರಾಗಿದ್ದರು. ಬಣ್ಣ-ಬಣ್ಣಗಳ ವಸ್ತ್ರಗಳನ್ನುಟ್ಟಿದ್ದರು. ಸುಗಂಧದ್ರವ್ಯಗಳನ್ನು ಶರೀರಕ್ಕೆ ಲೇಪಿಸಿ ಕೊಂಡಿದ್ದರು. ಕತ್ತಿಗಳನ್ನು ಸೊಂಟಕ್ಕೆ ಬಿಗಿದುಕೊಂಡಿದ್ದರು. ಕೈಗಳಲ್ಲಿ ಪಾಶಗಳನ್ನು ಹಿಡಿದಿದ್ದರು ಮತ್ತು ಮಹಾಸಾಹಸಿಗಳಾದ ಆ ಯೋಧರು ಮದಿಸಿದ ಆನೆಗಳನ್ನೂ ತಡೆದು ನಿಲ್ಲಿಸುವ ಶಕ್ತಿಯನ್ನು ಹೊಂದಿದ್ದರು. ಏಕಕಾಲದಲ್ಲಿ ಸಾವನ್ನಪೇಕ್ಷಿಸಿದ್ದ ಅವರು ಒಬ್ಬರನ್ನೊಬ್ಬರು ಬಿಟ್ಟು ಹೋಗುತ್ತಿರಲಿಲ್ಲ. ತಲೆಯನ್ನು ನವಿಲುಗರಿಯಿಂದ ಸಿಂಗರಿಸಿಕೊಂಡಿದ್ದರು. ಧನುಸ್ಸುಗಳನ್ನು ಹಿಡಿದಿದ್ದರು. ಅವರಿಗೆ ನೀಳವಾದ ತಲೆಗೂದಲಿದ್ದಿತು. ಪ್ರಿಯವಾದ ಮಾತುಗಳನ್ನೇ ಆಡುತ್ತಿದ್ದರು. ಕಾಲಾಳುಗಳು, ಕುದುರೇ ಸವಾರರು ಮತ್ತು ಇತರ ಎಲ್ಲ ಸೈನಿಕರೂ ಘೋರರೂಪರಾಗಿಯೂ ಮಹಾ ಪರಾಕ್ರಮಿಗಳಾಗಿಯೂ ಇದ್ದರು. ಅವರೇ ಅಲ್ಲದೇ ಶೂರರಾದ ಚೇದಿ-ಪಾಂಚಾಲ-ಕೇಕಯ-ಕೋಸಲ-ಕಾರೂಷ-ಕಾಂಚೀ-ಮಾಗಧಸೈನಿಕರೂ ನಮ್ಮ ಸೈನ್ಯವನ್ನು ಆಕ್ರಮಿಸಿದರು. ಅವರಲ್ಲಿದ್ದ ರಥ-ಗಜಾಶ್ವಸೈನಿಕರು ಶ್ರೇಷ್ಠರೀತಿಯ ಯೋಧರಾಗಿದ್ದರು.

ಕಾಲಾಳುಗಳೂ ಸಹ ಶತ್ರುಭಯಂಕರರಾಗಿದ್ದರು. ನಾನಾವಿಧವಾದ ವಾದ್ಯಗಾರರೊಡನೆ ಹೋಗುತ್ತಿದ್ದ ಅವರು ನೃತ್ಯಮಾಡುತ್ತಲೂ ಸಂತೋಷದಿಂದ ನಗುತ್ತಲೂ ಇದ್ದರು. ಅಂತಹ ವಿಶಾಲಸೈನ್ಯದ ಮಧ್ಯ ದಲ್ಲಿ ಭೀಮಸೇನನು ಆನೆಯ ಮೇಲೆ ಕುಳಿತು ಅನೇಕ ಮಾವಟಿಗರಿಂದ ಪರಿವೃತನಾಗಿ ನಿನ್ನ ಸೈನ್ಯದ ಕಡೆಗೆ ಧಾವಿಸುತ್ತಿದ್ದನು. ಅತಿಭಯಂಕರವಾಗಿ ಕಾಣುತ್ತಿದ್ದ ಮತ್ತು ವಿಧಿವತ್ತಾಗಿ ಯುದ್ಧಕ್ಕೆ ಸಜ್ಜುಗೊಳಿಸಲ್ಪಟ್ಟಿದ್ದ ಭೀಮನು ಕುಳಿತಿದ್ದ ಆ ಮಹಾಗಜವು–ಸೂರ್ಯನಿಂದ ಕೂಡಿದ ಉದಯಾ ಚಲದ ಉಚ್ಚಶಿಖರದಂತೆಯೇ ಪ್ರಕಾಶಿಸುತ್ತಿದ್ದಿತು. ಲೋಹಮಯ ವಾಗಿದ್ದ ಆ ಮಹಾಗಜದ ಕವಚವು ಶ್ರೇಷ್ಠವಾದ ರತ್ನಗಳಿಂದ ವಿಭೂಷಿತವಾಗಿದ್ದು ಶರತ್ಕಾಲದಲ್ಲಿ ನಕ್ಷತ್ರಗಳಿಂದ ಕೂಡಿದ ಆಕಾಶದ

ಕಾಂತಿಯನ್ನು ಹೊಂದಿದ್ದಿತು. ಆ ಸಮಯದಲ್ಲಿ ಚೆಲುವಾದ ಮುಕುಟ ದಿಂದಲೂ ಆಭರಣಗಳಿಂದಲೂ ಸಮಲಂಕೃತನಾಗಿದ್ದ ಭೀಮಸೇನನು ಕೈಯಲ್ಲಿ ತೋಮರವನ್ನು ಹಿಡಿದು ಶರತ್ಕಾಲದ ಮಧ್ಯಾಹ್ನದ ಸೂರ್ಯನಂತೆಯೇ ಪ್ರಜ್ವಲಿಸುತ್ತಾ ಶತ್ರುಗಳನ್ನು ದಹಿಸತೊಡಗಿದನು.

ಆನೆಯ ಮೇಲೆ ಕುಳಿತಿದ್ದ ಮನಸ್ವಿಯಾದ ಕ್ಷೇಮಧೂರ್ತಿಯು ಭೀಮಸೇನನ ಆನೆಯನ್ನು ಬಹಳ ದೂರದಿಂದಲೇ ನೋಡಿ ಮಹಾಮನಸ್ವಿ ಯಾದ ಭೀಮಸೇನನನ್ನು ಯುದ್ಧಕ್ಕೆ ಆಹ್ವಾನಿಸುತ್ತಾ ಅವನ ಮೇಲೆ ಬಿದ್ದನು. ವೃಕ್ಷಗಳಿಂದ ಕೂಡಿರುವ ಎರಡು ಮಹಾಪರ್ವತಗಳಿಗೆ ದೈವೀಸಂಘಟನೆ ಯಿಂದ ಸಂಘರ್ಷಣೆಯು ನಡೆಯುವ ರೀತಿಯಲ್ಲಿ–ಭಯಂಕರವಾದ ಆಕಾರಗಳನ್ನು ಹೊಂದಿದ್ದ ಕ್ಷೇಮಧೂರ್ತಿ-ಭೀಮಸೇನರ ಎರಡು ಆನೆಗಳಿಗೂ ಮಹಾಯುದ್ಧವು ಪ್ರಾರಂಭವಾಯಿತು.

ತಮ್ಮಿಬ್ಬರ ಆನೆಗಳೂ ಪರಸ್ಪರವಾಗಿ ಸೆಣೆಸಾಟವನ್ನು ಪ್ರಾರಂಭಿಸಿದ ಕೂಡಲೇ ಆ ಇಬ್ಬರು ವೀರರೂ ಸೂರ್ಯರಶ್ಮಿಗೆ ಸಮಾನವಾದ ಕಾಂತಿ ಯನ್ನು ಹೊಂದಿದ್ದ ತೋಮರಗಳಿಂದ ಒಬ್ಬರು ಮತ್ತೊಬ್ಬರನ್ನು ಬಲ ಪೂರ್ವಕವಾಗಿ ಭೇದಿಸಿ ಇಬ್ಬರೂ ಗರ್ಜನೆಗಳನ್ನು ಮಾಡಿದರು. ಕ್ಷೇಮಧೂರ್ತಿ-ಭೀಮಸೇನರು ತಮ್ಮ ಆನೆಗಳನ್ನು ಹಿಂದಕ್ಕೆ ಸರಿಯುವಂತೆ ಮಾಡಿ ಮಂಡಲಾಕಾರವಾಗಿ ತಿರುಗತೊಡಗಿದರು. ಅನಂತರ ಇಬ್ಬರೂ ಧನುರ್ಬಾಣಗಳನ್ನು ಹಿಡಿದು ಪರಸ್ಪರವಾಗಿ ಪ್ರಹರಿಸತೊಡಗಿದರು. ಗರ್ಜನೆಗಳಿಂದಲೂ, ಚಪ್ಪಾಳೆಗಳಿಂದಲೂ, ಟೇಂಕಾರಧ್ವನಿಗಳಿಂದಲೂ, ಬಾಣಗಳ ಧ್ವನಿಗಳಿಂದಲೂ ಸುತ್ತಲೂ ಇದ್ದ ಪ್ರೇಕ್ಷಕಜನರನ್ನು ಸಂತೋಷ ಪಡಿಸುತ್ತಾ ಇಬ್ಬರೂ ಸಿಂಹಾನಾದಗಳನ್ನು ಮಾಡಿದರು. ಗಾಳಿಯಿಂದ ಘರ-ಘರನೆ ಹಾರಾಡುತ್ತಿದ್ದ ಪತಾಕೆಗಳಿಂದ ಕೂಡಿದ್ದ, ಸೊಂಡಿಲುಗಳನ್ನು ಮೇಲಕ್ಕೆತ್ತಿದ್ದ ಮಹಾಗಜಗಳ ಮೂಲಕವಾಗಿ ಮಹಾಬಲರಾದ ಯುದ್ಧ ವಿಶಾರದರಾದ ಕ್ಷೇಮಧೂರ್ತಿ-ಭೀಮಸೇನರು ಯುದ್ಧಮಾಡುತ್ತಿದ್ದರು. ವರ್ಷಾಕಾಲದ ಎರಡು ಮೇಘಗಳು ಮಳೆಗರೆಯುವಂತೆ, ಶಕ್ತಿ-ತೋಮ ರಾದಿ ಆಯುಧಗಳ ವರ್ಷದಿಂದ ಒಬ್ಬರು ಮತ್ತೊಬ್ಬರ ಧನುಸ್ಸನ್ನು ಕತ್ತರಿಸಿ ಪರಸ್ಪರವಾಗಿ ಗರ್ಜನೆಮಾಡಿದರು. ಆ ಸಮಯದಲ್ಲಿ ಕ್ಷೇಮ

ಧೂರ್ತಿಯು ತೋಮರದಿಂದ ಭೀಮಸೇನನ ವಕ್ಷಃಸ್ಥಳದಲ್ಲಿ ಅತಿವೇಗವಾಗಿ ಪ್ರಹರಿಸಿ, ಗರ್ಜನೆಮಾಡುತ್ತಾ ಪುನಃ ಆರು ತೋಮರಗಳಿಂದ ಪ್ರಹರಿಸಿದನು. ಶರೀರದಲ್ಲಿ ಆಶ್ರಯಪಡೆದ ತೋಮರಗಳಿಂದ ಯುಕ್ತನಾಗಿದ್ದ, ಕ್ರೋಧದಿಂದ ಪ್ರಜ್ವಲಿಸುತ್ತಿದ್ದ ಭೀಮಸೇನನು–ಮೇಘಗಳಿಂದ ಆವೃತನಾದ ಸಪ್ತಾಶ್ವಗಳಿಂದ ಯುಕ್ತವಾದ ರಥದಲ್ಲಿರುವ ಸೂರ್ಯನಂತೆಯೇ ಪ್ರಕಾಶಿಸಿದನು. ಅನಂತರ ಭೀಮಸೇನನು ಸೂರ್ಯನ ವರ್ಣದಂತೆ ಪ್ರಕಾಶಮಾನವಾದ, ಶೀಘ್ರಗತಿಯಾದ ಮತ್ತು ಲೋಹಮಯವಾದ ತೋಮರವನ್ನೆತ್ತಿ ಶತ್ರುವಿನ ಮೇಲೆ ಬಲಪೂರ್ವಕವಾಗಿ ಎಸೆದನು. ಬಳಿಕ ಕುಲೂತಾಧಿಪತಿಯಾದ ಕ್ಷೇಮಧೂರ್ತಿಯು ಧನುಸ್ಸನ್ನು ಬಗ್ಗಿಸಿ ಹೆದೆಯೇರಿಸಿ ಹತ್ತು ಬಾಣಗಳಿಂದ ಭೀಮಸೇನನು ಬಲಾತ್ಕಾರವಾಗಿ ಎಸೆದ ತೋಮರವನ್ನು ಕತ್ತರಿಸಿ ಪುನಃ ಅರುವತ್ತು ಬಾಣಗಳಿಂದ ಭೀಮಸೇನನನ್ನೂ ಪ್ರಹರಿಸಿದನು. ಅನಂತರ ಭೀಮಸೇನನು ಗರ್ಜಿಸುತ್ತಾ ಮೇಘದ ಗರ್ಜನೆಯಂತೆ ಟೇಂಕಾರಶಬ್ದವನ್ನು ಮಾಡುವುದಾಗಿದ್ದ ಧನುಸ್ಸನ್ನೆತ್ತಿಕೊಂಡು ಬಾಣಗಳಿಂದ ಶತ್ರುವಿನ ಆನೆಯನ್ನು ಪ್ರಹರಿಸಿದನು. ಭೀಮಸೇನನ ಬಾಣಗಳಿಂದ ಪ್ರಹೃತವಾದ ಕ್ಷೇಮಧೂರ್ತಿಯ ಆನೆಯು– ಬಿರುಗಾಳಿಯಿಂದ ದೂಡಲ್ಪಟ್ಟ ಮೇಘದಂತೆ–ಕ್ಷೇಮಧೂರ್ತಿ ಯಿಂದ ತಡೆಯಲ್ಪಡುತ್ತಿದ್ದರೂ ಅಲ್ಲಿ ನಿಲ್ಲದೇ ಓಡಿಹೋಯಿತು. ಬಿರುಗಾಳಿಯಿಂದ ಒಯ್ಯಲ್ಪಡುತ್ತಿರುವ ಮೇಘವನ್ನು ಬಿರುಗಾಳಿಯಿಂದ ಉಡಾಯಿಸಲ್ಪಟ್ಟ ಮತ್ತೊಂದು ಮೇಘವು ಅನುಸರಿಸಿ ಹೋಗುವಂತೆ– ಓಡಿಹೋಗುತ್ತಿದ್ದ ಕ್ಷೇಮಧೂರ್ತಿಯ ಆನೆಯನ್ನು ಭೀಮನ ಭಯಂಕರವಾದ ಸಲಗವು ಹಿಂಬಾಲಿಸಿತು.

ಪ್ರತಾಪವಂತನಾದ ಕ್ಷೇಮಧೂರ್ತಿಯು ಓಡಿಹೋಗುತ್ತಿದ್ದ ತನ್ನ ಆನೆಯನ್ನು ಬಹಳ ಪ್ರಯತ್ನದಿಂದ ತಡೆದು ನಿಲ್ಲಿಸಿ, ತನ್ನನ್ನು ಬೆನ್ನಟ್ಟಿ ಬರುತ್ತಿದ್ದ ಭೀಮಸೇನನ ಆನೆಯನ್ನು ಬಾಣಗಳಿಂದ ಪ್ರಹರಿಸಿದನು. ಅನಂತರ ಭೀಮಸೇನನು ಬಗ್ಗಿದ ಗಿಣ್ಣಿನಿಂದ ಕೂಡಿದ್ದ, ಸುಪ್ರಮುಕ್ತವಾದ ಕ್ಷುರವೆಂಬ ಬಾಣದಿಂದ ಕ್ಷೇಮಧೂರ್ತಿಯ ಧನುಸ್ಸನ್ನು ಕತ್ತರಿಸಿ ಅವನ ಆನೆಯನ್ನೂ ಬಾಣಗಳಿಂದ ಪೀಡಿಸಿದನು. ಅದರಿಂದ ಕ್ಷೇಮಧೂರ್ತಿಯು ಪರಮಕ್ರುದ್ಧನಾಗಿ ಭೀಮಸೇನನನ್ನು ಬಾಣಗಳಿಂದ ಬಹಳವಾಗಿ ಪೀಡಿಸಿ

ದನು ಮತ್ತು ಅವನ ಆನೆಯ ಎಲ್ಲ ಮರ್ಮಸ್ಥಾನಗಳನ್ನೂ ಪ್ರಹರಿಸಿದನು. ಅದರಿಂದಾಗಿ ಭೀಮಸೇನನ ಆನೆಯು ನೆಲದ ಮೇಲೆ ಬಿದ್ದುಹೋಯಿತು. ಆದರೆ ಆನೆಯು ಕೆಳಕ್ಕೆ ಬೀಳುವುದರೊಳಗಾಗಿಯೇ ಭೀಮಸೇನನು ಕೆಳಕ್ಕೆ ಧುಮುಕಿ ನೆಲದ ಮೇಲೆ ಸ್ಥಿರನಾಗಿ ನಿಂತಿದ್ದನು. ಮರುಕ್ಷಣದಲ್ಲಿಯೇ ಭೀಮಸೇನನೂ ಕೂಡ ಕ್ಷೇಮಧೂರ್ತಿಯ ಆನೆಯನ್ನು ಗದೆಯಿಂದ ಅಪ್ಪಳಿಸಿ ಸಂಹರಿಸಿದನು. ಕೆಳಕ್ಕೆ ಬೀಳುವುದರಲ್ಲಿದ್ದ ಆನೆಯ ಮೇಲಿನಿಂದ ಕೆಳಕ್ಕೆ ಹಾರಿ ಕತ್ತಿಯನ್ನೆತ್ತಿಕೊಂಡು ತನ್ನೆದುರಾಗಿ ಬಂದ ಕ್ಷೇಮಧೂರ್ತಿಯನ್ನು ಅದೇ ಗದೆಯಿಂದಲೇ ಪ್ರಹರಿಸಿ ಸಂಹರಿಸಿದನು.



ಕ್ಷೇಮಧೂರ್ತಿಯು ಕತ್ತಿಯ ಸಮೇತವಾಗಿ ತನ್ನ ಆನೆಯ ಹತ್ತಿರವೇ ನೆಲದ ಮೇಲೆ ಬಿದ್ದು ಪ್ರಾಣಗಳನ್ನು ತೊರೆದನು. ವಜ್ರಾಯುಧದಿಂದ

ಪ್ರಭಗ್ನವಾದ ಪರ್ವತವನ್ನು ಅವಲಂಬಿಸಿ (ಪರ್ವತದ ಸಮೀಪದಲ್ಲಿ) ವಜ್ರಾಯುಧದಿಂದ ಹತವಾದ ಸಿಂಹವು ಬಿದ್ದಿರುವಂತೆ-ಪರ್ವತೋಪಮ ವಾದ ತನ್ನ ಆನೆಯ ಸಮೀಪದಲ್ಲಿಯೇ ಪ್ರಾಣತೊರೆದು ಬಿದ್ದಿದ್ದ ಕುಲೂತವಂಶೀಯರ ಯಶೋವರ್ಧಕನಾದ ಕ್ಷೇಮಧೂರ್ತಿಯನ್ನು ನೋಡಿ ನಿನ್ನ ಸೈನಿಕರು ವ್ಯಥಿತರಾಗಿ ಪಲಾಯನಮಾಡಿದರು.”

೧೨ನೆಯ ಅಧ್ಯಾಯವು ಮುಗಿಯಿತು.



## ಉಭಯಪಕ್ಷಗಳ ಸೇನೆಗಳ ನಡುವೆ ಘೋರಯುದ್ಧ: ಸಾತ್ಯಕಿಯು ವಿಂದಾನುವಿಂದರನ್ನು ಸಂಹರಿಸಿದುದು

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸುತ್ತಾನೆ:

“ಮಹಾರಾಜ! ಅನಂತರ ಮಹಾಧನುಷ್ಮಂತನಾದ ಶೂರನಾದ ಕರ್ಣನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಪಾಂಡವರ ಸೈನ್ಯವನ್ನು ಸದೆಬಡಿದನು. ಅಂತೆಯೇ ಮಹಾರಥರಾದ ಪಾಂಡವರೂ ಪರಮಕ್ರುದ್ಧ ರಾಗಿ ಕರ್ಣನ ಎದುರಿನಲ್ಲಿಯೇ ನಿನ್ನ ಮಗನ ಸೈನ್ಯವನ್ನು ಅಪಾರಸಂಖ್ಯೆ ಯಲ್ಲಿ ಸಂಹರಿಸಿದರು. ಅದಕ್ಕೆ ಪ್ರತಿಯಾಗಿ ಕರ್ಣನೂ ಸೂರ್ಯನ ರಶ್ಮಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ, ಕರ್ಮಾರರಿಂದ ಸಾಣೆಹಿಡಿಯಲ್ಪಟ್ಟಿದ್ದ ನಾರಾಚಗಳಿಂದ ಪಾಂಡವರ ಸೈನ್ಯವನ್ನು ಅಗಣಿತಸಂಖ್ಯೆಯಲ್ಲಿ ಸಂಹರಿಸಿದನು. ಆ ಸಮರಾಂಗಣದಲ್ಲಿ ಕರ್ಣನ ಬಾಣಗಳಿಂದ ಪ್ರಹರಿಸಲ್ಪಟ್ಟ ಆನೆಗಳು ಅರಚುತ್ತಿದ್ದುವು; ನಿಟ್ಟುಸಿರುಬಿಡುತ್ತಿದ್ದುವು; ಕೆಳಕ್ಕೆ ಬಿದ್ದು ಹೊರಳಾಡುತ್ತಿದ್ದುವು; ಮತ್ತೆ ಕೆಲವು ದಿಕ್ಕಾಪಾಲಾಗಿ ಓಡಿಹೋಗುತ್ತಿ ದ್ದುವು. ಈ ರೀತಿಯಲ್ಲಿ ಕರ್ಣನು ಪಾಂಡವಸೇನೆಯನ್ನು ಸಂಹರಿಸುತ್ತಿರ ಲಾಗಿ, ನಕುಲನು ಅವನನ್ನು ಅತಿವೇಗದಿಂದ ಎದುರಿಸಿದನು. ಭೀಮಸೇನನು ದುಷ್ಕರವಾದ ಸಂಹಾರಕ್ರಿಯೆಯಲ್ಲಿ ತೊಡಗಿದ್ದ ಅಶ್ವ ತ್ಥಾಮನನ್ನೂ, ಸಾತ್ಯಕಿಯು ಕೇಕಯರಾಜಕುಮಾರರಾದ ವಿಂದಾನು ವಿಂದರನ್ನೂ ಎದುರಿಸಿ ಯುದ್ಧಮಾಡತೊಡಗಿದರು. ಆಯುಧ ಪಾಣಿಯಾಗಿ

ಬರುತ್ತಿದ್ದ ಶ್ರುತಕರ್ಮನನ್ನು ಮಹೀಪತಿಯಾದ ಚಿತ್ರಸೇನನು ಎದುರಿಸಿದನು. ಪ್ರತಿವಿಂಧ್ಯನು ವಿಚಿತ್ರವಾದ ಧ್ವಜವನ್ನೂ ಮತ್ತು ಧನುಸ್ಸನ್ನೂ ಹೊಂದಿದ್ದ ಚಿತ್ರನನ್ನು ಎದುರಿಸಿದನು. ದುರ್ಯೋಧನನು ಧರ್ಮನ ಪುತ್ರನಾದ ಯುಧಿಷ್ಠಿರರಾಜನನ್ನು ಎದುರಿಸಿದನು. ಕ್ರುದ್ಧನಾದ ಧನಂಜಯನು ಸಂಶಪ್ತಕಗಣಗಳನ್ನು ಆಕ್ರಮಿಸಿದನು. ವೀರಶ್ರೇಷ್ಠರ ಕ್ಷಯಕರವಾದ ಆ ಮಹಾಸಂಗ್ರಾಮದಲ್ಲಿ ಧೃಷ್ಟದ್ಯುಮ್ನನು ಕೃಪರೊಡನೆ ಯುದ್ಧದಲ್ಲಿ ತೊಡಗಿದನು. ಯಾವಾಗಲೂ ಹಿಂದಕ್ಕೆ ಸರಿಯದ ಕೃತವರ್ಮನನ್ನು ಶಿಖಂಡಿಯು ಆಕ್ರಮಿಸಿದನು.

ಶ್ರುತಕೀರ್ತಿಯು ಶಲ್ಯನನ್ನೂ, ಮಾದ್ರಿಯ ಮಗನಾದ ಪ್ರತಾಪವಂತನಾದ ಸಹದೇವನು ನಿನ್ನ ಮಗ ದುಃಶಾಸನನನ್ನೂ ಎದುರಿಸಿದರು. ಕೇಕಯರಾಜಕುಮಾರರಾದ ವಿಂದಾನುವಿಂದರು ಯುದ್ಧದಲ್ಲಿ ತಮ್ಮ ಮೇಲೆರಗಿ ಬಂದ ಸಾತ್ಯಕಿಯನ್ನು ಥಳ-ಥಳಿಸುತ್ತಿದ್ದ ಬಾಣಗಳ ಮಳೆಯಿಂದ ಮುಚ್ಚಿಬಿಟ್ಟರು. ಸಾತ್ಯಕಿಯೂ ಸಹ ಕೇಕಯರಾಜಕುಮಾರರನ್ನು ನಿಶಿತವಾದ ಬಾಣಗಳಿಂದ ಮುಚ್ಚಿದನು. ಮಹಾರಣ್ಯದಲ್ಲಿ ತಮಗೆ ಎದುರಾಗಿ ಬಂದ ಸಲಗವನ್ನು ಎರಡು ಆನೆಗಳು ತಮ್ಮ ದಂತಗಳಿಂದ ಇರಿದುಹಾಕುವಂತೆ–ಸೋದರರಾದ ವಿಂದಾನುವಿಂದರು ಸಾತ್ಯಕಿಯ ವಕ್ಷಃಸ್ಥಳವನ್ನು ಬಹಳ ಆಳದವರೆಗೂ ಬಾಣಗಳಿಂದ ಪ್ರಹರಿಸಿದರು. ಅದಕ್ಕೆ ಪ್ರತಿಯಾಗಿ ಸಾತ್ಯಕಿಯು ಬಿಟ್ಟ ನಿಶಿತವಾದ ಬಾಣಗಳಿಂದ ವಿಂದಾನುವಿಂದರ ಕವಚಗಳು ಚೂರ್ಣೀಕೃತವಾದುವು. ಭಿನ್ನಕವಚರಾದ ಸೋದರರು ಸತ್ಯಕರ್ಮನಾದ ಸಾತ್ಯಕಿಯನ್ನು ಬಾಣಗಳಿಂದ ಬಹಳವಾಗಿ ಗಾಯಗೊಳಿಸಿದರು. ಸಾತ್ಯಕಿಯು ಆ ಶರಪ್ರಹಾರವನ್ನು ಲೆಕ್ಕಿಸದೇ ಗಹ-ಗಹಿಸಿ ನಗುತ್ತಾ ಎಲ್ಲ ಕಡೆಗಳಿಂದಲೂ ವಿಂದಾನುವಿಂದರನ್ನು ಬಾಣಗಳ ವರ್ಷದಿಂದ ಮುಚ್ಚುತ್ತಾ, ಅವರ ಮುನ್ನಡೆಯನ್ನೂ ಸ್ತಬ್ಧಗೊಳಿಸಿದನು. ಸಾತ್ಯಕಿಯ ಬಾಣಗಳ ವೃಷ್ಟಿಯಿಂದ ತಡೆಯಲ್ಪಟ್ಟ ಇಬ್ಬರು ಸಹೋದರರೂ ಶೈನೇಯನ ರಥವನ್ನು ಬಹಳ ಶೀಘ್ರವಾಗಿ ಬಾಣಗಳಿಂದ ಮುಚ್ಚಿದರು. ಅನಂತರ ಮಹಾಯಶೋವಂತನಾದ ಸಾತ್ಯಕಿಯು ಅವರಿಬ್ಬರ ಧನುಸ್ಸುಗಳನ್ನೂ ಕತ್ತರಿಸಿ ತೀಕ್ಷ್ಣವಾದ ಬಾಣ

ಗಳಿಂದ ಅವರನ್ನು ತಡೆದು ನಿಲ್ಲಿಸಿದನು. ಪುನಃ ವಿಂದಾನುವಿಂದರು ಚಿತ್ರಿತವಾದ ಮತ್ತೆರಡು ಧನುಸ್ಸುಗಳನ್ನು ತೆಗೆದುಕೊಂಡು ಅವುಗಳಲ್ಲಿ ದೊಡ್ಡ-ದೊಡ್ಡ ಬಾಣಗಳನ್ನು ಹೂಡಿ ಸಾತ್ಯಕಿಯನ್ನು ಬಾಣಗಳಿಂದ ಆಚ್ಛಾದಿಸುತ್ತಾ ರಣರಂಗದ ಸುತ್ತಲೂ ಶೀಘ್ರವಾಗಿಯೂ ಮತ್ತು ಸುಂದರ ವಾಗಿಯೂ ಸಂಚರಿಸುತ್ತಿದ್ದರು. ಅವರಿಂದ ಸತತವಾಗಿ ಬಿಡಲ್ಪಡುತ್ತಿದ್ದ, ರಣಹದ್ದಿನ ಮತ್ತು ನವಿಲಿನ ರೆಕ್ಕೆಗಳಿಂದ ಸುಶೋಭಿತವಾಗಿದ್ದ, ಸುವರ್ಣದಿಂದ ಭೂಷಿತವಾಗಿದ್ದ ದೊಡ್ಡ-ದೊಡ್ಡ ಬಾಣಗಳು ಎಲ್ಲ ದಿಕ್ಕುಗಳನ್ನೂ ಪ್ರಕಾಶಗೊಳಿಸುತ್ತಾ ಸಾತ್ಯಕಿಯ ಮೇಲೆ ಬೀಳುತ್ತಿದ್ದುವು.



ವಿಂದಾನುವಿಂದರು ಸತತವಾಗಿ ಬಿಡುತ್ತಿದ್ದ ಬಾಣಗಳಿಂದಾಗಿ ರಣಾಂಗ ಣದಲ್ಲಿ ಅಂಧಕಾರವು ಕವಿಯಿತು. ಮಹಾರಥರಾದ ಸಾತ್ಯಕಿ-ವಿಂದಾನು

ವಿಂದರು ಪರಸ್ಪರವಾಗಿ ಒಬ್ಬರು ಮತ್ತೊಬ್ಬರ ಧನುಸ್ಸನ್ನು ಕತ್ತರಿಸಿಹಾಕಿದರು. ಅದರಿಂದ ಬಹಳ ಕ್ರುದ್ಧನಾದ, ಯುದ್ಧದುರ್ಮದನಾದ ಸಾತ್ಯಕಿಯು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಮೌರ್ವಿಯನ್ನು ಬಿಗಿದು ಸಜ್ಜುಗೊಳಿಸಿ ಅತಿತೀಕ್ಷ್ಣವಾದ ಕ್ಷುರಪ್ರದಿಂದ ಅನುವಿಂದನ ಶಿರಸ್ಸನ್ನು ಕತ್ತರಿಸಿಬಿಟ್ಟನು.

ಆ ಮಹಾಸಮರದಲ್ಲಿ ಸಾತ್ಯಕಿಯಿಂದ ಕತ್ತರಿಸಲ್ಪಟ್ಟ ಕುಂಡಲಗಳಿಂದ ಸಮಲಂಕೃತವಾಗಿದ್ದ ಅನುವಿಂದನ ಶಿರಸ್ಸು ಸರ್ವಕೇಕಯರನ್ನೂ ದುಃಖ ದಲ್ಲಿ ಮುಳುಗಿಸುತ್ತಾ–ಪ್ರದ್ಯುಮ್ನನಿಂದ ಕತ್ತರಿಸಲ್ಪಟ್ಟ ಶಂಬರಾಸುರನ ಶಿರಸ್ಸಿನಂತೆ– ಬಹಳ ಬೇಗ ಭೂಮಿಯ ಮೇಲೆ ಬಿದ್ದಿತು. ಶೂರನಾದ ಸಹೋದರನು ಸಾತ್ಯಕಿಯಿಂದ ಹತನಾದುದನ್ನು ಕಂಡು ಮಹಾರಥನಾದ ವಿಂದನು ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡು ಶಿಂಜಿನಿಯನ್ನು ಸೆಳೆದು ಕಟ್ಟಿ ತೀಕ್ಷ್ಣ ವಾದ ಬಾಣಗಳಿಂದ ಶೈನೇಯನನ್ನು ಎಲ್ಲ ಕಡೆಗಳಿಂದಲೂ ಮುಚ್ಚಿದನು. ವಿಂದನು ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ಚಿನ್ನದ ಮೂಲಭಾಗವನ್ನು ಹೊಂದಿದ್ದ ಆರು ಬಾಣಗಳಿಂದ ಸಾತ್ಯಕಿಯನ್ನು ಪ್ರಹರಿಸಿ ಗಟ್ಟಿಯಾಗಿ ಗರ್ಜನೆಮಾಡಿದನು ಮತ್ತು ನಿಲ್ಲುನಿಲ್ಲೆಂದೂ ಕೂಗುತ್ತಿದ್ದನು. ಕೇಕಯರ ಮಹಾರಥನಾದ ವಿಂದನು ಅನೇಕ ಸಹಸ್ರ ಬಾಣಗಳಿಂದ ಸಾತ್ಯಕಿಯ ತೋಳುಗಳನ್ನೂ ಮತ್ತು ವಕ್ಷಃಸ್ಥಳವನ್ನೂ ಪ್ರಹರಿಸಿದನು. ಸತ್ಯವಿಕ್ರಮನಾದ ಸಾತ್ಯಕಿಯು ವಿಂದನು ಬಿಟ್ಟ ಬಾಣ ಗಳಿಂದ ನಖ-ಶಿಖಾಂತವಾಗಿ ಗಾಯಗೊಂಡು ಪುಷ್ಪಿತವಾದ ಮುತ್ತುಗದ ಮರದಂತೆಯೇ ರಣಾಂಗಣದಲ್ಲಿ ಪ್ರಕಾಶಿಸಿದನು. ಮಹಾತ್ಮನಾದ ಕೇಕಯ ರಾಜಕುಮಾರನಿಂದ ಪ್ರಹರಿಸಲ್ಪಟ್ಟ ಸಾತ್ಯಕಿಯು ನಗುತ್ತಿರುವನೋ ಎಂಬಂತೆ ತೋರ್ಪಡಿಸಿಕೊಳ್ಳುತ್ತಾ ವಿಂದನನ್ನು ಇಪ್ಪತ್ತೈದು ಬಾಣ ಗಳಿಂದ ಪ್ರಹರಿಸಿದನು. ಅವರಿಬ್ಬರೂ ಭಯಂಕರವಾದ ರೀತಿಯಲ್ಲಿ ಯುದ್ಧ ಮಾಡುತ್ತಾ ಪರಸ್ಪರವಾಗಿ ಒಬ್ಬರು ಮತ್ತೊಬ್ಬರ ಧನುಸ್ಸನ್ನು ಕತ್ತರಿಸಿದರು. ಒಬ್ಬರು ಮತ್ತೊಬ್ಬರ ಸಾರಥಿಯನ್ನೂ ಮತ್ತು ಕುದುರೆಗಳನ್ನೂ ಸಂಹರಿಸಿ ದರು. ಅದರಿಂದಾಗಿ ರಥಹೀನರಾದ ಸುಭುಜರಾದ ಇಬ್ಬರು ವೀರರೂ ಶತಚಂದ್ರರ ಚಿಹ್ನೆಗಳನ್ನು ಹೊಂದಿದ್ದ ಗುರಾಣಿಗಳನ್ನು ಹಿಡಿದು ಕತ್ತಿಯ ಯುದ್ಧಕ್ಕೆ ಸಜ್ಜಾಗಿ ನಿಂತರು. ದೇವಾಸುರರ ಯುದ್ಧದಲ್ಲಿ ಮಹಾಬಲರಾದ

ಜಂಭಾಸುರ ಮತ್ತು ಇಂದ್ರರು ಕತ್ತಿಗಳನ್ನು ಹಿಡಿದು ಪ್ರಕಾಶಿಸುತ್ತಿದ್ದಂತೆ– ಶ್ರೇಷ್ಠವಾದ ಕತ್ತಿಗಳನ್ನು ಹಿಡಿದಿದ್ದ ಸಾತ್ಯಕಿ ಮತ್ತು ವಿಂದರು ರಣಾಂಗಣದಲ್ಲಿ ಬಹಳವಾಗಿ ಪ್ರಕಾಶಿಸಿದರು. ಮಹಾಯುದ್ಧದಲ್ಲಿ ಅವರಿಬ್ಬರೂ ಮಂಡಲಾಕಾರವಾಗಿ ಸಂಚರಿಸುತ್ತಾ ಪರಸ್ಪರವಾಗಿ ಸಂಘರ್ಷಿಸಲು ಒಟ್ಟಾಗಿ ಸೇರಿದರು. ಒಬ್ಬರು ಮತ್ತೊಬ್ಬರನ್ನು ಸಂಹರಿಸಬೇಕೆಂದು ಬಹಳವಾಗಿ ಪ್ರಯತ್ನಿಸುತ್ತಿದ್ದರು. ಸಾತ್ಯಕಿಯು ವಿಂದನು ಹಿಡಿದಿದ್ದ ಗುರಾಣಿಯನ್ನು ಎರಡಾಗಿ ಕತ್ತರಿಸಿ ಹಾಕಿದನು. ಅದಕ್ಕೆ ಪ್ರತಿಯಾಗಿ ಕೇಕಯರಾಜಕುಮಾರನೂ ಸಾತ್ಯಕಿಯು ಹಿಡಿದಿದ್ದ ಗುರಾಣಿಯನ್ನು ಕತ್ತರಿಸಿದನು. ವಿಂದನು ನೂರು ನಕ್ಷತ್ರಗಳ ಚಿಹ್ನೆಗಳಿಂದ ಕೂಡಿದ್ದ ಸಾತ್ಯಕಿಯ ಗುರಾಣಿಯನ್ನು ಕತ್ತರಿಸಿ, ಗತ-ಪ್ರತ್ಯಾಗತ ಮುಂತಾದ ಮಂಡಲಗಳ ವಿಧಾನವನ್ನು ಅನುಸರಿಸಿ ಸಂಚರಿಸತೊಡಗಿದನು.

ಮಹಾರಣರಂಗದಲ್ಲಿ ಶ್ರೇಷ್ಠವಾದ ಕತ್ತಿಯನ್ನು ಹಿಡಿದು ಮಂಡಲ ಕ್ರಮದಲ್ಲಿ ಸಂಚರಿಸುತ್ತಿದ್ದ ವಿಂದನನ್ನು ಸಾತ್ಯಕಿಯು ಬಹಳ ಬೇಗ ಕತ್ತಿನ ಮೇಲೆ ಇಟ್ಟಿದ್ದ ಖಡ್ಗಯುಕ್ತವಾಗಿದ್ದ ಕೈಯಿಂದ ಕತ್ತರಿಸಿದನು. ಕವಚಯುಕ್ತ ನಾಗಿದ್ದ, ಮಹಾಧನುಷ್ಮಂತನಾದ ವಿಂದನು ಎರಡು ಭಾಗಗಳಾಗಿ ಕತ್ತರಿಸ ಲ್ಪಟ್ಟು–ವಜ್ರಾಯುಧದಿಂದ ಕತ್ತರಿಸಲ್ಪಟ್ಟ ಪರ್ವತದಂತೆ–ಕೆಳಕ್ಕೆ ಬಿದ್ದನು. ಶೂರನಾದ, ರಥಶ್ರೇಷ್ಠನಾದ ಶೈನೇಯನು ಈ ರೀತಿಯಲ್ಲಿ ವಿಂದನನ್ನು ಸಂಹರಿಸಿ ಯುಧಾಮನ್ಯುವಿನ ರಥವನ್ನು ಬಹಳ ಬೇಗ ಹತ್ತಿಕೊಂಡನು. ಅನಂತರ ವಿಧಿವತ್ತಾಗಿ ಸಜ್ಜುಗೊಳಿಸಲ್ಪಟ್ಟಿದ್ದ ಮತ್ತೊಂದು ರಥವನ್ನು ಹತ್ತಿ ನಿಶಿತವಾದ ಬಾಣಗಳಿಂದ ಕೇಕಯರ ಮಹಾಸೈನ್ಯವನ್ನು ವಿನಾಶಗೊಳಿಸಿದನು. ಸಾತ್ಯಕಿಯಿಂದ ಅವ್ಯಾಹತವಾಗಿ ವಧಿಸಲ್ಪಡುತ್ತಿದ್ದ ಕೇಕಯರ ಅಪಾರಸೈನಿಕ ರಲ್ಲಿ ಅಳಿದುಳಿದವರು ಶತ್ರುವಾದ ಸಾತ್ಯಕಿಯನ್ನು ಪರಿತ್ಯಜಿಸಿ ದಿಕ್ಕಾಪಾಲಾಗಿ ಓಡಿಹೋದರು."

೧೩ನೆಯ ಅಧ್ಯಾಯವು ಮುಗಿಯಿತು.

೧೪ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ದ್ರೌಪದಿಯ ಮಕ್ಕಳಾದ ಶ್ರುತಕರ್ಮಾ ಮತ್ತು ಪ್ರತಿವಿಂಧ್ಯರು ಚಿತ್ರಸೇನ–ಚಿತ್ರಕರನ್ನು ಸಂಹರಿಸಿದುದು: ಕೌರವಸೈನ್ಯದ ಪಲಾಯನ: ಅಶ್ವತ್ಥಾಮನು ಭೀಮಸೇನನನ್ನು ಆಕ್ರಮಿಸಿದುದು

ಸಂಜಯನು ಯುದ್ಧದ ವಿವರಣೆಯನ್ನು ಮುಂದುವರಿಸುತ್ತಾನೆ. **(೧೩ನೆಯ ಅಧ್ಯಾಯದ ೭ನೆಯ ಶ್ಲೋಕದಲ್ಲಿ ಹೇಳಿರುವ ಶ್ರುತಕರ್ಮಾಣ ಮಾಯಾಂತಂ ಚಿತ್ರಸೇನೋ ಮಹೀಪತಿಃ-ಎಂಬುದರ ವಿವರಣೆಯನ್ನು ಸಂಜಯನು ಮುಂದುವರಿಸಿ ಹೇಳುತ್ತಾನೆ.)**

“ಮಹಾರಾಜ! ಕ್ರುದ್ಧನಾಗಿದ್ದ ಶ್ರುತಕರ್ಮನು ತನ್ನೊಡನೆ ಯುದ್ಧಮಾಡಲು ಬಂದ ಮಹೀಪತಿಯಾದ ಚಿತ್ರಸೇನನನ್ನು ಐವತ್ತು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಅಭಿಸಾರನು (ಚಿತ್ರಸೇನನು) ಶ್ರುತಕರ್ಮನನ್ನು ಬಗ್ಗಿದ ಗಿಣ್ಣುಗಳಿದ್ದ ಒಂಬತ್ತು ಬಾಣಗಳಿಂದ ಪ್ರಹರಿಸಿ ಅವನ ಸೂತನನ್ನೂ ಐದು ಬಾಣಗಳಿಂದ ಪ್ರಹರಿಸಿದನು. ಅದರಿಂದ ಪರಮಕ್ರುದ್ಧನಾದ ಶ್ರುತಕರ್ಮನು ಚಿತ್ರಸೇನನನ್ನು ಬಹಳತೀಕ್ಷ್ಣವಾದ ನಾರಾಚದಿಂದ ಅವನ ಮರ್ಮಪ್ರದೇಶದಲ್ಲಿ ಪ್ರಹರಿಸಿದನು. ಮಹಾತ್ಮನಾದ ಶ್ರುತಕರ್ಮನು ಪ್ರಯೋಗಿಸಿದ ನಾರಾಚದಿಂದ ಬಹಳವಾಗಿ ಗಾಯಗೊಂಡ ಚಿತ್ರಸೇನನು ಮೂರ್ಛಿತನಾದನು. ಆ ಮಧ್ಯದಲ್ಲಿಯೇ ಮಹಾಯಶೋವಂತ ನಾದ ಶ್ರುತಕೀರ್ತಿಯು ತೊಂಬತ್ತು ಬಾಣಗಳಿಂದ ಮಹೀಪಾಲನಾದ ಚಿತ್ರಸೇನನನ್ನು ಮುಚ್ಚಿಬಿಟ್ಟನು. ಮರುಕ್ಷಣದಲ್ಲಿಯೇ ಮಹಾರಥನಾದ ಚಿತ್ರಸೇನನು ಮೂರ್ಛೆಯಿಂದ ಎಚ್ಚೆತ್ತು ಭಲ್ಲದಿಂದ ಶ್ರುತಕರ್ಮನ ಧನುಸ್ಸನ್ನು ಕತ್ತರಿಸಿ ಏಳು ಬಾಣಗಳಿಂದ ಅವನನ್ನೂ ಪ್ರಹರಿಸಿದನು. ಒಡನೆಯೇ ಶ್ರುತಕರ್ಮನು ಶತ್ರುಗಳ ವೇಗವನ್ನು ನಾಶಮಾಡುವ, ಸುವರ್ಣಭೂಷಿತ ವಾದ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡು ಅಲೆಗಳ ರೂಪದಲ್ಲಿ ಧನುಸ್ಸಿನಿಂದ ಹೊರಬರುತ್ತಿದ್ದ ಬಾಣಗಳಿಂದ ಚಿತ್ರಸೇನನನ್ನು ಚಿತ್ರರೂಪಧರ ನನ್ನಾಗಿ ಮಾಡಿದನು.

ವಿಚಿತ್ರವಾದ ಮಾಲೆಯನ್ನು ಧರಿಸಿದ್ದ ಮತ್ತು ಶ್ರುತಕರ್ಮನು ಬಿಟ್ಟ ಬಾಣಗಳಿಂದ ವಿಚಿತ್ರರೀತಿಯಲ್ಲಿ ಕಾಣುತ್ತಿದ್ದ ಚಿತ್ರಸೇನರಾಜನು

ಸಮರಾಂಗಣದಲ್ಲಿ–ಮುಳ್ಳುಗಳಿಂದ ತುಂಬಿಕೊಂಡಿರುವ ಮುಳ್ಳುಹಂದಿಯೋ ಪಾದಿಯಲ್ಲಿ ಪ್ರಕಾಶಿಸಿದನು. ಮರುಕ್ಷಣದಲ್ಲಿಯೇ ಕ್ರುದ್ಧನಾಗಿದ್ದ ಚಿತ್ರಸೇನನು ಶ್ರುತಕರ್ಮನ ವಕ್ಷಃಸ್ಥಳವನ್ನು ನಾರಾಚದಿಂದ ಭೇದಿಸಿ ನಿಲ್ಲು-ನಿಲ್ಲೆಂದೂ ಕೂಗಿ ಹೇಳಿದನು. ಚಿತ್ರಸೇನನು ಪ್ರಹರಿಸಿದ ನಾರಾಚ ದಿಂದ ಗಾಯಗೊಂಡ ಶ್ರುತಕರ್ಮನು–ಪರ್ವತವು ಗೈರಿಕಾದಿ ಧಾತು ಗಳಿಂದ ಕೂಡಿದ ನೀರನ್ನು ಸುರಿಸುವಂತೆ–ಶರೀರದಿಂದ ರಕ್ತವನ್ನು ಸುರಿಸಿದನು. ರಕ್ತದಿಂದ ತೋಯ್ದು ಹೋದ ಶರೀರದಿಂದ ಕೂಡಿದ್ದ ಶ್ರುತ ಕರ್ಮನು ರಕ್ತಲೇಪನದಿಂದಲೇ ಒಂದು ವಿಧವಾದ ಕಾಂತಿಯನ್ನು ಹೊಂದಿ ಸಮರಾಂಗಣದಲ್ಲಿ ಹೂಗಳಿಂದ ತುಂಬಿರುವ ಮುತ್ತುಗದ ಮರದಂತೆಯೇ ಪ್ರಕಾಶಿಸಿದನು. ಶತ್ರುವಿನಿಂದ ಹೀಗೆ ಗಾಯಗೊಳಿಸಲ್ಪಟ್ಟ ಶ್ರುತಕರ್ಮನು ಪರಮಕ್ರುದ್ಧನಾಗಿ ಶತ್ರುಗಳನ್ನು ತಡೆಯುವ ಸಾಮರ್ಥ್ಯದಿಂದ ಕೂಡಿದ್ದ ಚಿತ್ರಸೇನನ ಧನುಸ್ಸನ್ನು ಎರಡು ಭಾಗಗಳಾಗಿ ಕತ್ತರಿಸಿದನು. ಬಳಿಕ ಶ್ರುತಕರ್ಮನು ಕತ್ತರಿಸಿದ ಧನುಸ್ಸುಳ್ಳವನಾಗಿದ್ದ ಚಿತ್ರಸೇನನನ್ನು ಸುಂದರ ವಾದ ರೆಕ್ಕೆಗಳಿಂದ ಕೂಡಿದ್ದ ಮೂರುನೂರು ನಾರಾಚಗಳಿಂದ ಮುಚ್ಚಿ ಗಾಯಗೊಳಿಸಿದನು. ತೀಕ್ಷ್ಣವಾಗಿಯೂ ನಿಶಿತವಾಗಿಯೂ ಇದ್ದ ಮತ್ತೊಂದು ಭಲ್ಲದಿಂದ ಮಹಾತ್ಮನಾದ ಚಿತ್ರಸೇನನ ಶಿರಸ್ತ್ರಾಣಯುಕ್ತ ವಾಗಿದ್ದ ಶಿರಸ್ಸನ್ನೇ ಕತ್ತರಿಸಿದನು. ದೈವೇಚ್ಛೆಯಿಂದ ಸ್ವರ್ಗದಿಂದ ಜಾರಿ ಚಂದ್ರನು ಭೂಮಿಗೆ ಬಿದ್ದಂತೆ–ಕಾಂತಿಯುಕ್ತವಾಗಿದ್ದ ಚಿತ್ರಸೇನನ ಆ ಶಿರಸ್ಸು ಭೂಮಿಯಮೇಲೆ ಬಿದ್ದಿತು. ಅಭಿಸಾರದೇಶದ ಅಧಿಪತಿಯಾದ ಚಿತ್ರಸೇನನು ಹತನಾಗಿ ಬಿದ್ದುದನ್ನು ಕಂಡು ಚಿತ್ರಸೇನನ ಸೈನಿಕರು ವೇಗದಿಂದ ಶ್ರುತಕರ್ಮನನ್ನು ಆಕ್ರಮಿಸಿದರು. ಮಹಾಧನುಷ್ಮಂತನಾದ ಪರಮಕ್ರುದ್ಧನಾಗಿದ್ದ ಶ್ರುತಕರ್ಮನು– ಕ್ರುದ್ಧನಾದ ಪ್ರೇತರಾಜನು (ಯಮನು) ಪ್ರಳಯಕಾಲದಲ್ಲಿ ಸರ್ವಭೂತಗಳನ್ನೂ ಸಂಹರಿಸುವಂತೆ– ಬಾಣಗಳಿಂದ ಚಿತ್ರಸೇನನ ಸೈನ್ಯವನ್ನು ಪಲಾಯನಪರಾಯಣವನ್ನಾಗಿ ಮಾಡಿದನು. ಮಹಾರಾಜ! ಮಹಾಧನುಷ್ಮಂತನಾದ ನಿನ್ನ ಮೊಮ್ಮಗನಾದ ಶ್ರುತಕರ್ಮನಿಂದ ವಧಿಸಲ್ಪಡುತ್ತಿದ್ದ ಚಿತ್ರಸೇನನ ಸೈನಿಕರಲ್ಲಿ ಅಳಿ ದುಳಿದ ಸೈನಿಕರು–ದಾವಾಗ್ನಿಯಿಂದ ದಗ್ಧವಾದ ಆನೆಗಳಂತೆ ದಿಕ್ಕಾ ಪಾಲಾಗಿ ಓಡಿಹೋದರು. ಶತ್ರುಗಳನ್ನು ಜಯಿಸುವುದರಲ್ಲಿ ನಿರುತ್ಸಾಹಿಗಳಾಗಿ

ಪಲಾಯನಮಾಡುತ್ತಿದ್ದ ಚಿತ್ರಸೇನನ ಸೈನಿಕರನ್ನು ನೋಡಿ ಅವರ ಮೇಲೆ ಪುನಃ ಪುನಃ ತೀಕ್ಷ್ಣವಾದ ಬಾಣಗಳ ಮಳೆಗರೆಯುತ್ತಾ ಅವರು ತಿರುಗಿಯೂ ನೋಡದಂತೆ ಮಾಡಿ ಶತ್ರುಗಳ ನಿರ್ಮೂಲನದಿಂದ ಶ್ರುತಕರ್ಮನು ಬಹಳವಾಗಿ ಪ್ರಕಾಶಿಸಿದನು.

ಮಹಾರಾಜ! ಮತ್ತೊಂದು ಕಡೆಯಲ್ಲಿ ಪ್ರತಿವಿಂಧ್ಯನು ಚಿತ್ರನನ್ನು ಐದು ಬಾಣಗಳಿಂದ ಭೇದಿಸಿ ಅವನ ಸಾರಥಿಯನ್ನು ಮೂರು ಬಾಣಗಳಿಂದ ಗಾಯಗೊಳಿಸಿ ಒಂದು ಬಾಣದಿಂದ ಚಿತ್ರನ ರಥದ ಧ್ವಜವನ್ನೂ ಕತ್ತರಿಸಿದನು. ಅದಕ್ಕೆ ಪ್ರತಿಯಾಗಿ ಚಿತ್ರನು ಚಿನ್ನದ ಮೂಲಭಾಗವನ್ನು ಹೊಂದಿದ್ದ ಬಹಳ ತೀಕ್ಷ್ಣವಾದ ಅಗ್ರಭಾಗಗಳಿಂದ ಕೂಡಿದ್ದ, ಹದ್ದಿನ ಮತ್ತು ನವಿಲಿನ ಗರಿಗಳಿಂದ ಯುಕ್ತವಾದ ಒಂಬತ್ತು ಭಲ್ಲಗಳಿಂದ ಪ್ರತಿವಿಂಧ್ಯನನ್ನು ಅವನ ಬಾಹುಗಳಲ್ಲಿಯೂ ಮತ್ತು ವಕ್ಷಃಸ್ಥಳದಲ್ಲಿಯೂ ಪ್ರಹರಿಸಿದನು. ಅನಂತರ ಪ್ರತಿವಿಂಧ್ಯನು ಚಿತ್ರನ ಧನುಸ್ಸನ್ನು ಬಾಣಗಳಿಂದ ಕತ್ತರಿಸಿ ನಿಶಿತವಾದ ಐದು ಬಾಣಗಳಿಂದ ಚಿತ್ರನನ್ನು ಗಾಯಗೊಳಿಸಿದನು. ಅದರಿಂದ ಕ್ರುದ್ಧನಾದ ಚಿತ್ರನು ಚಿನ್ನದ ಘಂಟೆಗಳಿಂದ ಕೂಡಿದ್ದ, ಎದುರಿಸಲು ಅಸಾಧ್ಯವಾಗಿದ್ದ, ಅಗ್ನಿಯ ಜ್ವಾಲೆಯೋಪಾದಿಯಲ್ಲಿ ಮಹಾಘೋರವಾಗಿ ಕಾಣುತ್ತಿದ್ದ ಶಕ್ತ್ಯಾಯುಧವನ್ನು ನಿನ್ನ ಮೊಮ್ಮಗನ ಮೇಲೆ ಪ್ರಯೋಗಿಸಿದನು. ದೊಡ್ಡದಾದ ಬಾಲಚುಕ್ಕಿಯೋಪಾದಿಯಲ್ಲಿ ತನ್ನ ಬಳಿಗೆ ರಭಸದಿಂದ ಬರುತ್ತಿದ್ದ, ಚಿತ್ರನಿಂದ ಎಸೆಯಲ್ಪಟ್ಟ ಆ ಶಕ್ತ್ಯಾಯುಧವನ್ನು ಪ್ರತಿವಿಂಧ್ಯನು ನಗುತ್ತಲೇ ಎರಡಾಗಿ ಕತ್ತರಿಸಿಬಿಟ್ಟನು. ಪ್ರತಿವಿಂಧ್ಯನ ನಿಶಿತವಾದ ಬಾಣಗಳಿಂದ ಕತ್ತರಿಸಲ್ಪಟ್ಟ ಆ ಶಕ್ತಿಯು– ಪ್ರಳಯಕಾಲದಲ್ಲಿ ಸರ್ವಪ್ರಾಣಿಗಳನ್ನೂ ಭಯಗೊಳಿಸುತ್ತಾ ಭೂಮಿಯ ಮೇಲೆ ಬೀಳುವ ಸಿಡಿಲಿನೋಪಾದಿಯಲ್ಲಿ–ಎರಡು ಭಾಗಗಳಾಗಿ ಭೂಮಿಯ ಮೇಲೆ ಬಿದ್ದಿತು. ಪ್ರತಿವಿಂಧ್ಯನು ಶಕ್ತ್ಯಾಯುಧವನ್ನು ವಿನಾಶಗೊಳಿಸಿದುದನ್ನು ಚಿತ್ರನು ನೋಡಿ ಚಿನ್ನದ ಬಲೆಯಿಂದ ವಿಭೂಷಿತವಾಗಿದ್ದ ಗದೆಯನ್ನು ಕೈಗೆತ್ತಿಕೊಂಡು ದ್ರೌಪದೇಯನ ಮೇಲೆ ರಭಸದಿಂದೆಸೆದನು. ಚಿತ್ರನೆಸೆದ ಗದೆಯು ಪ್ರತಿವಿಂಧ್ಯನ ಕುದುರೆಗಳನ್ನೂ, ಸಾರಥಿಯನ್ನೂ ಸಂಹರಿಸಿ, ರಥವನ್ನೂ ಧ್ವಂಸಮಾಡಿ ವೇಗದಿಂದ ಭೂಮಿಯ ಮೇಲೆ ಬಿದ್ದಿತು. ಈ ಮಧ್ಯದಲ್ಲಿಯೇ ಪ್ರತಿವಿಂಧ್ಯನು ರಥದಿಂದ ಕೆಳಕ್ಕೆ ಧುಮುಕಿ ಚಿನ್ನದ

ದಂಡದಿಂದ ಸಮಲಂಕೃತವಾಗಿದ್ದ ಶಕ್ತ್ಯಾಯುಧವನ್ನು ಚಿತ್ರನ ಮೇಲೆ ರಭಸದಿಂದೆಸೆದನು. ಮಹಾತ್ಮನಾದ ಚಿತ್ರನು ತನ್ನ ಮೇಲೆ ಬೀಳುವುದರಲ್ಲಿದ್ದ ಪ್ರತಿವಿಂಧ್ಯಪ್ರಹಿತವಾದ ಶಕ್ತಿಯನ್ನು ಕೈಯಲ್ಲಿ ಹಿಡಿದು ಪುನಃ ಅದೇ ಶಕ್ತ್ಯಾಯುಧವನ್ನೇ ಪ್ರತಿವಿಂಧ್ಯನ ಮೇಲೆ ಪ್ರಯೋಗಿಸಿದನು. ಮಹಾಪ್ರಭೆಯಿಂದ ಕೂಡಿದ್ದ ಆ ಶಕ್ತ್ಯಾಯುಧವು ರಭಸದಿಂದ ಬಂದು ಪ್ರತಿವಿಂಧ್ಯನ ಬಲತೋಳನ್ನು ಭೇದಿಸಿಕೊಂಡು ನೆಲದ ಮೇಲೆ ಬಿದ್ದಿತು.



ಆ ಶಕ್ತಿಯು ಬಿದ್ದಸ್ಥಳದಲ್ಲಿ ಮಿಂಚಿನೋಪಾದಿಯಲ್ಲಿ ಪ್ರಕಾಶವನ್ನುಂಟುಮಾಡಿತು. ಅನಂತರ ಅತಿಕ್ರುದ್ಧನಾದ ಪ್ರತಿವಿಂಧ್ಯನು ಚಿತ್ರನನ್ನು ವಧಿಸುವ ಇಚ್ಛೆಯಿಂದ ಹೇಮಭೂಷಿತವಾದ ತೋಮರವನ್ನು ಚಿತ್ರನ ಮೇಲೆಸೆದನು. ಆ ತೋಮರವು ಚಿತ್ರನ ಕವಚವನ್ನೂ ಮತ್ತು ವಕ್ಷಃಸ್ಥಳ

ವನ್ನೂ ಭೇದಿಸಿಕೊಂಡು ಹೊರಬಂದು–ಮಹಾಸರ್ಪವು ಬಿಲದೊಳಗೆ ಸೇರಿಕೊಳ್ಳುವಂತೆ–ಭೂಮಿಯನ್ನು ಹೊಕ್ಕಿತು. ತೋಮರದಿಂದ ಪ್ರಹೃತನಾದ ಚಿತ್ರರಾಜನು ಪರಿಘೋಪಮವಾದ ಮತ್ತು ಮಾಂಸಲವಾದ ತನ್ನೆರಡು ತೋಳುಗಳನ್ನೂ ಮಾರಗಲ ಮಾಡಿ ನೆಲದ ಮೇಲೆ ಬಿದ್ದನು. ಚಿತ್ರನು ಹತನಾದುದನ್ನು ಕಂಡು ರಣಶೋಭಿಗಳಾದ ನಿನ್ನ ಕಡೆಯ ಸೈನಿಕರು ವೇಗ ಪೂರ್ವಕವಾಗಿ ಪ್ರತಿವಿಂಧ್ಯನ ಸಮೀಪಕ್ಕೆ ಹೋಗಿ ಅವನನ್ನು ಸುತ್ತುವರಿದು ನಿಂತರು. ವಿಧ-ವಿಧವಾದ ಬಾಣಗಳನ್ನು ಶ್ರೇಷ್ಠವಾದ ಧನುಸ್ಸುಗಳ ಮೂಲಕ ವಾಗಿ ಬಿಡುತ್ತಾ, ಚಿಕ್ಕ-ಚಿಕ್ಕ ಗಂಟೆಗಳಿಂದ ಯುಕ್ತವಾದ ಶತಘ್ನಿಗಳನ್ನು ಪ್ರಯೋಗಿಸುತ್ತಾ–ಮೋಡಗಳ ಸಮೂಹಗಳು ಸೂರ್ಯನನ್ನು ಮುಚ್ಚು ವಂತೆ–ಪ್ರತಿವಿಂಧ್ಯನನ್ನು ಮುಚ್ಚಿಬಿಟ್ಟರು. ಮಹಾಬಾಹುವಾದ ಪ್ರತಿವಿಂಧ್ಯನು ಬಾಣಗಳ ಸಮೂಹಗಳಿಂದ ನಿನ್ನ ಕಡೆಯ ಸೈನಿಕರನ್ನು ಪ್ರಹರಿಸುತ್ತಾ–ವಜ್ರ ಹಸ್ತನಾದ ಇಂದ್ರನು ರಾಕ್ಷಸರ ಸೈನ್ಯವನ್ನು ಓಡಿಸಿದಂತೆ-ನಿನ್ನ ಸೈನ್ಯವನ್ನು ಪಲಾಯನಪರಾಯಣವನ್ನಾಗಿ ಮಾಡಿದನು. ಪಾಂಡವರಿಂದ ವಧಿಸಲ್ಪಡು ತ್ತಿದ್ದ ನಿನ್ನ ಸೈನಿಕರು–ಬಿರುಗಾಳಿಯಿಂದ ಚದುರಿಹೋದ ಮೋಡಗಳಂತೆ– ದಿಕ್ಕಾಪಾಲಾಗಿ ಚದುರಿಹೋದರು. ಸರ್ವತ್ರ ವಧಿಸಲ್ಪಡುತ್ತಿದ್ದ ನಿನ್ನ ಅಳಿದುಳಿದ ಸೈನ್ಯವು ಪಲಾಯನಮಾಡುತ್ತಿರಲಾಗಿ ದ್ರೋಣರ ಮಗನಾದ ಅಶ್ವತ್ಥಾಮನೊಬ್ಬನೇ ಮಹಾಬಲನಾದ ಭೀಮಸೇನನನ್ನು ಬಹಳ ಶೀಘ್ರವಾಗಿ ಆಕ್ರಮಿಸಿದನು. ದೇವಾಸುರರ ಯುದ್ಧದಲ್ಲಿ ವೃತ್ರ-ವಾಸವರಿಗೆ ಆದ ಸಂಘರ್ಷದಂತೆ–ಅಶ್ವತ್ಥಾಮ-ಭೀಮಸೇನರ ನಡುವೆ ಮಹಾಭಯಂಕರವಾದ ಸಂಘರ್ಷವುಂಟಾಯಿತು.

೧೪ನೆಯ ಅಧ್ಯಾಯವು ಮುಗಿಯಿತು.

೧೫ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಭೀಮಾಶ್ವತ್ಥಾಮರ ಭಯಂಕರಯುದ್ಧ: ಇಬ್ಬರೂ ಮೂರ್ಛೆ ಹೋದುದು

(೧೩ನೆಯ ಅಧ್ಯಾಯದ ೬ನೆಯ ಶ್ಲೋಕದಲ್ಲಿ ಸೂಚನಾರೂಪವಾಗಿ ಹೇಳಿದ 'ಭೀಮಸೇನಸ್ತಥಾ ದ್ರೌಣಿಂ ಸಮವಾರಯತ್' 'ಭೀಮಸೇನನು

ಅಶ್ವತ್ಥಾಮನನ್ನು ಎದುರಿಸಿದನು'–ಎಂಬುದನ್ನಿಲ್ಲಿ ವಿಸ್ತಾರವಾಗಿ ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ.)

"ಮಹಾರಾಜ! ಅಶ್ವತ್ಥಾಮನು ಹೆಚ್ಚಿನ ವೇಗದಿಂದ ಬಾಣಗಳ ಪ್ರಯೋಗದಲ್ಲಿ ತನ್ನ ಹಸ್ತಲಾಘವವೆಷ್ಟೆಂಬುದನ್ನು ಪ್ರದರ್ಶಿಸುತ್ತಾ ಒಂದು ಬಾಣದಿಂದ ಭೀಮಸೇನನನ್ನು ಪ್ರಹರಿಸಿದನು. 'ಮರ್ಮಸ್ಥಳಗಳು ಯಾವುವು? ಅವುಗಳನ್ನು ಹೇಗೆ ಪ್ರಹರಿಸಬೇಕು?'-ಎಂಬುದನ್ನು ಚೆನ್ನಾಗಿ ತಿಳಿದಿದ್ದ ಅಶ್ವತ್ಥಾಮನು ಹಸ್ತಲಾಘವದಿಂದ ಕೂಡಿದ ಕುಶಲನಾದ ಯೋಧನಂತೆ ನಿಶಿತವಾದ ತೊಂಬತ್ತು ಬಾಣಗಳಿಂದ ಭೀಮಸೇನನನ್ನು ಎಲ್ಲ ಮರ್ಮ ಸ್ಥಳಗಳಲ್ಲಿಯೂ ಗಾಯಗೊಳಿಸಿದನು. ಅಶ್ವತ್ಥಾಮನು ಪ್ರಹರಿಸಿದ ನಿಶಿತವಾದ ಬಾಣಗಳಿಂದ ಆಚ್ಛಾದಿತನಾದ ಭೀಮಸೇನನು ಕಿರಣಗಳಿಂದ ಕೂಡಿದ ಸೂರ್ಯನಂತೆಯೇ ಪ್ರಕಾಶಿಸಿದನು. ಅನಂತರ ಭೀಮಸೇನನು ಪ್ರಯತ್ನ ಪೂರ್ವಕವಾಗಿ ಮತ್ತು ಕೌಶಲದಿಂದ ಪ್ರಯೋಗಿಸಿದ ಒಂದು ಸಾವಿರ ಬಾಣ ಗಳಿಂದ ಅಶ್ವತ್ಥಾಮನನ್ನು ಮುಚ್ಚಿ ಸಿಂಹನಾದವನ್ನು ಮಾಡಿದನು. ದ್ರೌಣಿಯು ಭೀಮಸೇನನು ಬಿಟ್ಟ ಬಾಣಗಳನ್ನು ಬಾಣಗಳಿಂದಲೇ ವಿನಾಶಗೊಳಿಸಿ ನಸುನಗುತ್ತಾ ಒಂದು ನಾರಾಚವನ್ನು ಭೀಮಸೇನನ ಹಣೆಗೆ ಗುರಿಯಿಟ್ಟು ಪ್ರಹರಿಸಿದನು. ಅರಣ್ಯದಲ್ಲಿ ಮದಿಸಿದ ಖಡ್ಗಮೃಗವು ನೆತ್ತಿಯ ಮೇಲೆ ಕೋಡನ್ನು ಹೊಂದಿರುವಂತೆ-ಭೀಮಸೇನನು ದ್ರೋಣಿಯು ಬಿಟ್ಟ ನಾರಾಚ ವನ್ನು ನೆತ್ತಿಯಲ್ಲಿ ಧರಿಸಿದ್ದನು. (ಭೀಮಸೇನನು ಆ ಸಮಯದಲ್ಲಿ ಅರಣ್ಯ ದಲ್ಲಿರುವ ಖಡ್ಗಮೃಗದಂತೆಯೇ ಕಾಣುತ್ತಿದ್ದನು.) ಅನಂತರ ಪರಾಕ್ರಮಿಯಾದ ಭೀಮಸೇನನು ನಸುನಗುತ್ತಾ ದುರ್ಯೋಧನನ ವಿಜಯಕ್ಕಾಗಿ ಪ್ರಯತ್ನಿಸುತ್ತಿದ್ದ ಅಶ್ವತ್ಥಾಮನನ್ನು ಮೂರು ನಾರಾಚಗಳಿಂದ ಅವನ ನೆತ್ತಿಯಲ್ಲಿ ಪ್ರಹರಿಸಿದನು. ಹಣೆಗೆ ಚುಚ್ಚಿಕೊಂಡಿದ್ದ ಬಾಣಗಳಿಂದ ಆ ಬ್ರಾಹ್ಮಣನು–ವರ್ಷಾಕಾಲದಲ್ಲಿ ಮಳೆಯಿಂದ ತೋಯ್ದು ಮೂರು ಶಿಖರಗಳುಳ್ಳ ಪರ್ವತದಂತೆಯೇ ಪ್ರಕಾಶಿಸಿದನು. ಅನಂತರ ಅಶ್ವತ್ಥಾಮನು ನೂರು ಬಾಣಗಳಿಂದ ಭೀಮ ಸೇನನನ್ನು ಪೀಡಿಸಿದನು. ಆದರೆ ಬಿರುಗಾಳಿಯು ಪರ್ವತವನ್ನು ಅಳ್ಳಾಡಿಸಲು ಶಕ್ತವಾಗದಿರುವಂತೆ–ಅಶ್ವತ್ಥಾಮನು ಭೀಮಸೇನನನ್ನು ಅಳ್ಳಾಡಿಸಲು ಸಮರ್ಥನಾಗಲಿಲ್ಲ. ಅದೇ ರೀತಿಯಲ್ಲಿ ಸಂಹೃಷ್ಟನಾದ ಭೀಮಸೇನನೂ

ಅಶ್ವತ್ಥಾಮನನ್ನು ನಿಶಿತವಾದ ನೂರಾರು ಬಾಣಗಳಿಂದ ಪೀಡಿಸಿದನು. ಮಹಾಜಲಪ್ರವಾಹವು ಪರ್ವತವನ್ನು ಕರಗಿಸಲು ಅಥವಾ ಕದಲಿಸಲು ಅಶಕ್ತವಾಗುವಂತೆ–ಅಶ್ವತ್ಥಾಮನನ್ನು ಅಳ್ಳಾಡಿಸಲು ಭೀಮಸೇನನೂ ಸಮರ್ಥನಾಗಲಿಲ್ಲ.

ಬಲೋನ್ಮತ್ತರಾದ, ಮಹಾರಥರಾದ, ವೀರಶ್ರೇಷ್ಠರಾದ ಭೀಮಾಶ್ವತ್ಥಾಮರು ಶ್ರೇಷ್ಠವಾದ ರಥಗಳಲ್ಲಿ ಕುಳಿತು ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನು ಘೋರವಾದ ಬಾಣಗಳಿಂದ ಮುಚ್ಚುತ್ತಾ ರಣಾಂಗಣದಲ್ಲಿ ಬಹಳವಾಗಿ ಪ್ರಕಾಶಿಸಿದರು. ಎಲ್ಲ ಲೋಕಗಳನ್ನೂ ವಿನಾಶಮಾಡುವ ಸಲುವಾಗಿ ಉದಯಿಸಿರುವ ದೀಪ್ತಿಮಂತರಾದ ಇಬ್ಬರು ಸೂರ್ಯರು ತಮ್ಮ ಪ್ರಖರವಾದ ಕಿರಣಗಳಿಂದ ಪರಸ್ಪರವಾಗಿ ತಾಪಗೊಳಿಸುವಂತೆ-ದ್ರೌಣಿ-ಭೀಮರು ಶ್ರೇಷ್ಠವಾದ ಬಾಣಗಳಿಂದ ಒಬ್ಬರನ್ನೊಬ್ಬರು ತಾಪಗೊಳಿಸುತ್ತಿದ್ದರು. ಆ ಮಹಾಯುದ್ಧದಲ್ಲಿ ಒಬ್ಬರು ಪ್ರಹರಿಸಿದುದಕ್ಕೆ ಪ್ರತಿಯಾಗಿ ಪ್ರಹರಿಸುವ ಪ್ರಯತ್ನದಲ್ಲಿದ್ದ ದ್ರೌಣಿ- ಭೀಮರು ಶ್ರೇಷ್ಠವಾದ ಬಾಣಗಳಿಂದ ಒಬ್ಬರನ್ನೊಬ್ಬರು ತಾಪಗೊಳಿಸುತ್ತಿದ್ದರು. ಆ ಮಹಾಯುದ್ಧದಲ್ಲಿ ಒಬ್ಬರು ಪ್ರಹರಿಸಿದುದಕ್ಕೆ ಪ್ರತಿಯಾಗಿ ಪ್ರಹರಿಸುವ ಪ್ರಯತ್ನದಲ್ಲಿದ್ದ ದ್ರೌಣಿ-ಭೀಮರು ನಿರ್ಭಯವಾಗಿ (ಒಬ್ಬರಿಗೆ ಮತ್ತೊಬ್ಬರು ಹೆದರದೆ) ಬಾಣಗಳ ಸಮೂಹಗಳಿಂದ ಪೆಟ್ಟಿಗೆ ಪೆಟ್ಟು ಕೊಡುವುದರಲ್ಲಿಯೇ ನಿರತರಾಗಿದ್ದರು. ಆ ನರಶ್ರೇಷ್ಠರು ವ್ಯಾಘ್ರಗಳೋಪಾದಿಯಲ್ಲಿ ರಣಾಂಗಣದಲ್ಲಿ ಸಂಚರಿಸುತ್ತಿದ್ದರು. ದುರಾಧರ್ಷರಾದ, ಭಯಂಕರರಾದ ಅವರಿಗೆ ಬಾಣಗಳೇ ಕೋರೆದಾಡೆಗಳಾಗಿದ್ದುವು. ಧನುಸ್ಸುಗಳೇ ಮುಖಗಳಾಗಿದ್ದುವು. ಮೇಘಗಳ ಸಮೂಹದಿಂದ ಮುಚ್ಚಿಹೋಗಿ ಆಕಾಶದಲ್ಲಿರುವ ಸೂರ್ಯ ಚಂದ್ರರು ಕಾಣದಿರುವಂತೆ–ಬಾಣಗಳ ಸಮೂಹಗಳಿಂದ ಸರ್ವತ್ರ ಆಚ್ಛಾದಿತರಾಗಿದ್ದ ಭೀಮಾಶ್ವತ್ಥಾಮರು ಹೊರಗಿನವರಿಗೆ ಅದೃಶ್ಯರಾಗಿದ್ದರು. (ಸೈನಿಕರಿಗೆ ಅವರು ಕಾಣುತ್ತಲೇ ಇರಲಿಲ್ಲ.) ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಅರಿಂದಮರಾದ ಭೀಮಾಶ್ವತ್ಥಾಮರು ಒಬ್ಬರು ಮತ್ತೊಬ್ಬರು ಬಿಟ್ಟ ಬಾಣಗಳ ಸಮೂಹವನ್ನು ವಿನಾಶಗೊಳಿಸಿ–ಮೋಡಗಳ ಸಮೂಹಗಳಿಂದ ವಿಮುಕ್ತರಾದ ಅಂಗಾರಕ-ಬುಧರಂತೆಯೇ ಪ್ರಕಾಶಿಸಿದರು. ಸುದಾರುಣವಾದ ಆ ಮಹಾಯುದ್ಧವು ನಡೆಯುತ್ತಿರಲಾಗಿ, ಅಶ್ವತ್ಥಾಮನು ಭೀಮ

ಸೇನನೊಡನೆ ಅಪಸವ್ಯಕ್ರಮವನ್ನನುಸರಿಸಿ ಯುದ್ಧಮಾಡತೊಡಗಿದನು. ಮೇಘವು ಜಲಧಾರೆಗಳಿಂದ ಪರ್ವತವನ್ನು ಮುಚ್ಚಿಬಿಡುವಂತೆ–ಅಶ್ವತ್ಥಾಮನು ಭೀಮಸೇನನ ಮೇಲೆ ಉಗ್ರವಾದ ನೂರಾರು ಬಾಣಗಳನ್ನು ಸುರಿಸಿದನು. ಶತ್ರುವಿನ (ಅಶ್ವತ್ಥಾಮನ) ವಿಜಯಸೂಚಕವಾದ ಆ ಘಟನೆಯನ್ನು ಭೀಮಸೇನನು ಹೆಚ್ಚು ಹೊತ್ತು ಸಹಿಸಿಕೊಂಡಿರಲಿಲ್ಲ. ಪಾಂಡುವಿನ ಮಗನಾದ ಭೀಮಸೇನನೂ ಗತ-ಪ್ರತ್ಯಾಗತ ಇವೇ ಮೊದಲಾದ ಮಂಡಲಗತಿಯ ವಿಭಿನ್ನಕ್ರಮದಲ್ಲಿ ರಥವನ್ನು ನಡೆಸುತ್ತಾ ಸ್ವಲ್ಪಹೊತ್ತಿನಲ್ಲಿಯೇ ಅಶ್ವತ್ಥಾಮನೊಡನೆ ಅಪಸವ್ಯಕ್ರಮದಿಂದಲೇ ತಾನೂ ಯುದ್ಧಮಾಡ ತೊಡಗಿದನು. ಪುರುಷಶ್ರೇಷ್ಠರಾದ ಭೀಮಾಶ್ವತ್ಥಾಮರಿಬ್ಬರಿಗೂ ಭಯಂಕರ ವಾದ ಯುದ್ಧವು ನಡೆಯಿತು. ಮಂಡಲಾಕಾರವಾಗಿ ಸುತ್ತುತ್ತಾ ಭೀಮಾಶ್ವ ತ್ಥಾಮರು ಆಕರ್ಣವಾಗಿ ಸೆಳೆದು ಬಿಟ್ಟ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಸಂಹರಿಸಬೇಕೆಂದೂ ಬಹಳವಾಗಿ ಪ್ರಯತ್ನಮಾಡುತ್ತಿದ್ದರು. ಅದಕ್ಕೆ ಪೂರ್ವ ಭಾವಿಯಾಗಿ ಒಬ್ಬರು ಮತ್ತೊಬ್ಬರನ್ನು ರಥಹೀನರನ್ನಾಗಿ ಮಾಡಬೇಕೆಂದು ಇಚ್ಛಿಸಿ ಪ್ರಯತ್ನಿಸುತ್ತಿದ್ದರು.

ಅನಂತರ ಮಹಾರಥನಾದ ದ್ರೌಣಿಯು ಅನೇಕಮಹಾಸ್ತ್ರಗಳನ್ನು ಪ್ರಕಟಿಸಿದನು. ಅವುಗಳಿಗೆ ಪ್ರತಿಯಾದ ಮಹಾಸ್ತ್ರಗಳಿಂದಲೇ ಭೀಮ ಸೇನನು ಅಶ್ವತ್ಥಾಮನು ಪ್ರಕಟಿಸಿದ ಮಹಾಸ್ತ್ರಗಳನ್ನು ನಿರಸನಗೊಳಿಸಿ ದನು. ಪ್ರಜೆಗಳ (ಸಕಲಪ್ರಾಣಿಗಳ) ಸಂಹಾರಕಾಲದಲ್ಲಿ (ಪ್ರಳಯ ಕಾಲದಲ್ಲಿ) ಗ್ರಹಗಳ ನಡುವೆ ಭೀಕರಯುದ್ಧವು ನಡೆದಂತೆ–ಭೀಮಾಶ್ವತ್ಥಾ ಮರ ನಡುವೆ ಮಹಾಘೋರವಾದ ಅಸ್ತ್ರಯುದ್ಧವು ಪ್ರಾರಂಭವಾಯಿತು. ಆ ಇಬ್ಬರು ಮಹಾವೀರರಿಂದಲೂ ಬಿಡಲ್ಪಡುತ್ತಿದ್ದ ಬಾಣಗಳು ಎಲ್ಲ ದಿಕ್ಕುಗಳನ್ನೂ ಪ್ರಕಾಶಗೊಳಿಸುತ್ತಾ ನಿನ್ನ ಸೈನ್ಯವನ್ನು ಸುತ್ತುವರಿದು ಬೀಳು ತ್ತಿದ್ದುವು. ಪ್ರಜೆಗಳ ವಿನಾಶಕಾಲದಲ್ಲಿ ಉಲ್ಕಾಪಾತಗಳಿಂದ ಆವೃತವಾದ ಆಕಾಶವು ಘೋರವಾಗಿ ಕಾಣುವಂತೆ–ಬಾಣಗಳ ಸಮೂಹಗಳಿಂದ ಆವೃತ ವಾಗಿದ್ದ ಆಕಾಶವು ಬಹಳ ಘೋರವಾಗಿ ಕಾಣುತ್ತಿದ್ದಿತು. ಭೀಮಾಶ್ವತ್ಥಾ ಮರು ಪರಸ್ಪರವಾಗಿ ಬಿಡುತ್ತಿದ್ದ ಬಾಣಗಳ ಸಂಘರ್ಷದಿಂದಾಗಿ ಅಗ್ನಿಯು ಹುಟ್ಟಿಕೊಂಡಿತು. ಕಿಡಿಗಳಿಂದಲೂ ಜ್ವಾಲೆಗಳಿಂದಲೂ ಕೂಡಿದ್ದ ಆ ಬೆಂಕಿಯು ಎರಡು ಪಕ್ಷಗಳ ಸೈನಿಕರನ್ನೂ ದಹಿಸತೊಡಗಿತು.

ಮಹಾರಾಜ! ಆ ಸಮಯದಲ್ಲಿ ಆಕಾಶದಲ್ಲಿ ಹಾರಿಕೊಂಡು ಬರುತ್ತಿದ್ದ ಸಿದ್ಧರು ಈ ಮಾತನ್ನು ಹೇಳುತ್ತಿದ್ದರು:

**ಯುದ್ಧಾನಾಮತಿ ಸರ್ವೇಷಾಂ ಯುದ್ಧಮೇತದಿತಿ ಪ್ರಭೋ ।**
**ಸರ್ವಯುದ್ಧಾನಿ ಚೈತಸ್ಯ ಕಲಾಂ ನಾರ್ಹನ್ತಿ ಷೋಡಶೀಮ್ ॥೨೮॥**

"ಭೀಮಾಶ್ವತ್ಥಾಮರು ಮಾಡುತ್ತಿರುವ ಈ ಯುದ್ಧವು ಎಲ್ಲ ಯುದ್ಧಗಳನ್ನೂ ಅತಿಶಯಿಸಿದೆ. ಇದುವರೆಗೆ ನಡೆದ ಎಲ್ಲ ಯುದ್ಧಗಳೂ ಇವರೀಗ ಮಾಡುತ್ತಿರುವ ಯುದ್ಧದ ಹದಿನಾರನೆಯ ಒಂದು ಭಾಗಕ್ಕೂ ಸಾಟಿಯಾಗಲಾರವು.

**ನೇದೃಶಂ ಚ ಪುನರ್ಯುದ್ಧಂ ಭವಿಷ್ಯತಿ ಕದಾಚನ।**
**ಅಹೋ ಜ್ಞಾನೇನ ಸಮ್ಪನ್ನಾವುಭೌ ಬ್ರಾಹ್ಮಣಕ್ಷತ್ರಿಯೌ ॥೨೯॥**

ಇಂತಹ ಘೋರಯುದ್ಧವು ಮುಂದೆಂದೂ ನಡೆಯಲಾರದು. ಬ್ರಾಹ್ಮಣ-ಕ್ಷತ್ರಿಯರಿಬ್ಬರೂ ಧನುರ್ವಿದ್ಯೆಯಲ್ಲಿ ಸಂಪೂರ್ಣವಾದ ಜ್ಞಾನವನ್ನು ಪಡೆದವರಾಗಿದ್ದಾರೆ.

**ಅಹೋ ಶೌರ್ಯೇಣ ಸಮ್ಪನ್ನಾವುಭೌ ಚೋಗ್ರಪರಾಕ್ರಮೌ ।**
**ಅಹೋ ಭೀಮಬಲೋ ಭೀಮ ಏತಸ್ಯ ಚ ಕೃತಾಸ್ತ್ರತಾ ॥೩೦॥**

ಇಬ್ಬರೂ ಶೌರ್ಯಸಂಪನ್ನರಾಗಿದ್ದಾರೆ. ಉಗ್ರಪರಾಕ್ರಮಿಗಳಾಗಿದ್ದಾರೆ. ಭೀಮಸೇನನು ಭಯಂಕರವಾದ ಬಲವುಳ್ಳವನು. ಅಶ್ವತ್ಥಾಮನು ಮಹಾಸ್ತ್ರಗಳಲ್ಲಿ ವಿಶೇಷವಾದ ಪರಿಶ್ರಮವುಳ್ಳವನು.

**ಅಹೋ ವೀರ್ಯಸ್ಯ ಸಾರತ್ವಮಹೋ ಸೌಷ್ಠವಮೇತಯೋಃ ।**
**ಸ್ಥಿತಾವೇತೌ ಹಿ ಸಮರೇ ಕಾಲಾನ್ತಕಯಮೋಪಮೌ ॥೩೧॥**

ಭೀಮಸೇನಾಶ್ವತ್ಥಾಮರು ವೀರ್ಯದ ಸಾರಸ್ವರೂಪರೇ ಆಗಿದ್ದಾರೆ. ಇಬ್ಬರಿಗೂ ಶರೀರಸೌಷ್ಠವವಿದೆ. ಸಮರಾಂಗಣದಲ್ಲಿ ಯುದ್ಧದಲ್ಲಿ ತೊಡಗಿರುವ ಇವರಿಬ್ಬರೂ ಕಾಲಾಂತಕ ಮತ್ತು ಯಮರಿಗೆ ಸದೃಶರಾಗಿದ್ದಾರೆ.

**ರುದ್ರೌ ದ್ವಾವಿವ ಸಮ್ಭೂತೌ ಯಥಾ ದ್ವಾವಿವ ಭಾಸ್ಕರೌ ।**
**ಯಮೌ ವಾ ಪುರುಷವ್ಯಾಘ್ರೌ ಘೋರರೂಪಾವುಭೌ ರಣೇ ॥೩೨॥**

ಭಯಂಕರರೂಪಿಗಳಾದ ಈ ಪುರುಷಶ್ರೇಷ್ಠರು ರಣಾಂಗಣದಲ್ಲಿ ಇಬ್ಬರು ರುದ್ರರಂತೆಯೂ, ಇಬ್ಬರು ಸೂರ್ಯರಂತೆಯೂ ಮತ್ತು ಇಬ್ಬರು ಯಮರಂತೆಯೂ ಕಾಣುತ್ತಿದ್ದಾರೆ."

ಮಹಾರಾಜ! ಈ ರೀತಿಯಲ್ಲಿ ಸಿದ್ಧರಾಡುತ್ತಿದ್ದ ಮಾತುಗಳು ಪದೇ-ಪದೇ ಕೇಳಿಬರುತ್ತಿದ್ದುವು. ಅದರ ಜೊತೆಗೆ ಯುದ್ಧಪ್ರೇಕ್ಷಕರಾಗಿದ್ದ ದೇವತೆಗಳೂ ಒಟ್ಟಾಗಿ ಸೇರಿ ಭೀಮಾಶ್ವತ್ಥಾಮರ ಯುದ್ಧಚಮತ್ಕಾರಗಳನ್ನು ನೋಡಿ ಆನಂದದಿಂದ ಸಿಂಹನಾದಗಳನ್ನು ಮಾಡುತ್ತಿದ್ದರು. ಅದ್ಭುತವೂ ಮತ್ತು ಅಚಿಂತ್ಯವೂ ಆದ ಅವರಿಬ್ಬರ ಅದ್ಭುತಕರ್ಮಗಳನ್ನು ರಣರಂಗದಲ್ಲಿ ನೋಡಿ ಸಿದ್ಧ-ಚಾರಣರಿಗೆ ಬಹಳ ವಿಸ್ಮಯವುಂಟಾಯಿತು. ಆ ಸಮಯದಲ್ಲಿ ದೇವತೆಗಳೂ, ಸಿದ್ಧರೂ, ಮಹರ್ಷಿಗಳೂ ಭೀಮಾಶ್ವತ್ಥಾಮರನ್ನು ಬಹಳವಾಗಿ ಪ್ರಶಂಸಿಸುತ್ತಿದ್ದರು. 'ಸಾಧು ದ್ರೌಣೇ! ಸಾಧು ಮಹಾಬಾಹೋ! ಭೀಮಸೇನ ಸಾಧು!' ಎಂಬುದಾಗಿ ಬಾರಿ-ಬಾರಿಗೂ ಹೇಳುತ್ತಿದ್ದರು. ಪರಸ್ಪರಾಪರಾಧಿಗಳಾಗಿದ್ದ, ಶೂರರಾದ ದ್ರೌಣಿ-ಭೀಮರು ಸಮರಾಂಗಣ ದಲ್ಲಿ ಕೋಪದಿಂದ ಕಣ್ಣುಗಳೆರಡನ್ನೂ ಮೇಲೆತ್ತಿ ಪರಸ್ಪರವಾಗಿ ದುರುಗುಟ್ಟಿಕೊಂಡು ನೋಡುತ್ತಿದ್ದರು. ಕೋಪದಿಂದ ಅವರ ಕಣ್ಣುಗಳು ಕೆಂಪಾಗಿದ್ದುವು. ತುಟಿಗಳು ಅದುರುತ್ತಿದ್ದುವು. ಕಟ-ಕಟನೆ ಹಲ್ಲುಗಳನ್ನು ಕಡಿಯುತ್ತಿದ್ದರು. ಕೋಪದಿಂದ ಅವುಡುಗಳನ್ನು ಕಚ್ಚುತ್ತಿದ್ದರು.

ಮಹಾರಥರಾದ ಅವರಿಬ್ಬರೂ ಬಾಣಗಳ ವೃಷ್ಟಿಯಿಂದ ಒಬ್ಬರು ಮತ್ತೊಬ್ಬರನ್ನೂ ಮುಚ್ಚಿಬಿಡುತ್ತಿದ್ದರು. ಮೇಘರೂಪರಾಗಿದ್ದ ಅವರು ಧಾರಾಕಾರವಾಗಿ ಬಾಣಗಳ ಮಳೆಗರೆಯುತ್ತಿದ್ದರು. ಶಸ್ತ್ರಗಳ ಸಂಘರ್ಷಣೆ ಯಿಂದ ಮಿಂಚನ್ನು ಪ್ರಕಟಿಸುತ್ತಿದ್ದರು. ಪರಸ್ಪರವಾಗಿ ಒಬ್ಬರು ಮತ್ತೊಬ್ಬರ ಧ್ವಜವನ್ನು ಕತ್ತರಿಸಿದರು. ಒಬ್ಬರು ಮತ್ತೊಬ್ಬರ ಸಾರಥಿಗಳನ್ನೂ ಮತ್ತು ಕುದುರೆಗಳನ್ನೂ ಬಾಣಗಳಿಂದ ಕ್ಷತ-ವಿಕ್ಷತಗೊಳಿಸಿದರು. ಬಳಿಕ ಒಬ್ಬರು ಮತ್ತೊಬ್ಬರನ್ನು ಬಾಣಗಳಿಂದ ಭೇದಿಸಿದರು. ಕ್ರುದ್ಧರಾಗಿದ್ದ, ಅನ್ಯೋನ್ಯ ವಧೈಷಿಗಳಾಗಿದ್ದ ಭೀಮಾಶ್ವತ್ಥಾಮರು ಎರಡು ಬಾಣಗಳನ್ನು ಧನುಸ್ಸು ಗಳಲ್ಲಿ ಅನುಸಂಧಾನಮಾಡಿ ಬಹಳ ಬೇಗ ಒಬ್ಬರು ಮತ್ತೊಬ್ಬರ ಮೇಲೆ

ಪ್ರಹರಿಸಿದರು. ವಜ್ರಾಯುಧಕ್ಕೆ ಸಮಾನವಾದ ವೇಗದಿಂದ ಕೂಡಿದ್ದ, ಎದುರಿಸಲು ಅಸಾಧ್ಯವಾಗಿದ್ದ ಆ ಎರಡು ಬಾಣಗಳೂ ಸೇನೆಗಳ ಸಮ್ಮುಖದಲ್ಲಿ ಪ್ರಕಾಶವನ್ನು ಹೊರಚೆಲ್ಲಿಕೊಂಡು ರಭಸದಿಂದ ಬಂದು ಭೀಮಾಶ್ವತ್ಥಾಮರನ್ನು ಪ್ರಹರಿಸಿದುವು. ಪರಸ್ಪರವಾಗಿ ಪ್ರಹರಿಸಿದ ಆ ಬಾಣಗಳು ವೇಗದಿಂದ ಬಂದು ಇಬ್ಬರನ್ನೂ ಗಾಢವಾಗಿ ಗಾಯ ಗೊಳಿಸಿದುವು. ಅದರಿಂದಾಗಿ ಮಹಾವೀರ್ಯರಾದ ಆ ಇಬ್ಬರೂ ತಮ್ಮ-ತಮ್ಮ ರಥದ ಆಸನಗಳ ಪಕ್ಕದಲ್ಲಿ ಬಿದ್ದರು. ಅಶ್ವತ್ಥಾಮನು ಪ್ರಜ್ಞಾಶೂನ್ಯನಾಗಿ ಬಿದ್ದುದನ್ನು ಗಮನಿಸಿದ ಸಾರಥಿಯು ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ರಥವನ್ನು ರಣರಂಗದಿಂದ ಹೊರಕ್ಕೊಯ್ದನು. ಅದೇ ರೀತಿಯಲ್ಲಿ ಪಾಂಡವನ ಸಾರಥಿಯೂ ಬಾರಿ-ಬಾರಿಗೂ ವಿಹ್ವಲನಾಗಿ ಶ್ರಮಪಡುತ್ತಿದ್ದ ಶತ್ರುತಾಪನ ನಾದ ಭೀಮಸೇನನ ರಥವನ್ನು ಬಹಳ ದೂರಕ್ಕೆ ಒಯ್ದುಬಿಟ್ಟನು."

೧೫ನೆಯ ಅಧ್ಯಾಯವು ಮುಗಿಯಿತು.

೧೬ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಸಂಶಪ್ತಕರೊಡನೆಯೂ-ಅಶ್ವತ್ಥಾಮನೊಡನೆಯೂ ಅರ್ಜುನನ ಭಯಂಕರವಾದ ಯುದ್ಧ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

"ಸಂಜಯ! ಅರ್ಜುನನೊಡನೆ ಸಂಶಪ್ತಕರ ಯುದ್ಧವು ಹೇಗೆ ನಡೆಯಿತು? ಪಾಂಡವರೊಡನೆ ನಮ್ಮ ಕಡೆಯ ಇತರ ರಾಜರು ಹೇಗೆ ಯುದ್ಧಮಾಡಿದರು? ಈ ವಿಷಯವನ್ನು ವಿಸ್ತಾರವಾಗಿ ಹೇಳು. ಅಶ್ವತ್ಥಾಮ ನಿಗೂ ಮತ್ತು ಅರ್ಜುನನಿಗೂ ಯಾವ ರೀತಿಯಲ್ಲಿ ಯುದ್ಧವು ನಡೆಯಿತು? ನಮ್ಮ ಕಡೆಯ ಇತರ ಮಹೀಪಾಲರಿಗೂ ಮತ್ತು ಪಾಂಡವರಿಗೂ ಯುದ್ಧವು ಹೇಗೆ ನಡೆಯಿತು?–ಈ ವಿಷಯವನ್ನೂ ಹೇಳು."

"ಮಹಾರಾಜ! ವೀರರ ದೇಹ, ಪಾಪ ಮತ್ತು ಪ್ರಾಣಗಳ ವಿನಾಶಕವಾದ ಯುದ್ಧವು ಶತ್ರುಗಳೊಡನೆ ಹೇಗೆ ನಡೆಯಿತೆಂಬುದನ್ನು ಹೇಳಲಿರುವ ನನ್ನ ಮಾತುಗಳನ್ನು ಲಾಲಿಸು.

ಶತ್ರುಹಂತಕನಾದ ಅರ್ಜುನನು ಸಾಗರಸದೃಶ್ಯವಾಗಿದ್ದ ಸಂಶಪ್ತಕ

ಸೇನಾಸಮೂಹವನ್ನು ಪ್ರವೇಶಿಸಿ–ಬಿರುಗಾಳಿಯು ಸಮುದ್ರವನ್ನು ಅಲ್ಲೋಲ-ಕಲ್ಲೋಲಗೊಳಿಸುವಂತೆ ಸಂಶಪ್ತಕಸೇನಾಸಮುದ್ರವನ್ನು ಕ್ಷೋಭೆಗೊಳಿಸಿದನು. ಕಣ್ಣುಗಳನ್ನೂ, ಹುಬ್ಬುಗಳನ್ನೂ ಮತ್ತು ದಂತಪಙ್ಕ್ತಿಗಳನ್ನೂ ಹೊಂದಿದ್ದ ವೀರರ ಶಿರಸ್ಸುಗಳನ್ನು ಧನಂಜಯನು ನಿಶಿತವಾದ ಭಲ್ಲಗಳಿಂದ ಕತ್ತರಿಸಿ ಭೂಮಿಯ ಮೇಲೆ ಹರಡಿದನು. ರಾಜರ ಆ ಶಿರಸ್ಸುಗಳು ರಣಾಂಗಣ ದಲ್ಲಿ–ನಾಳದಿಂದ ವಿಹೀನವಾದ ಕಮಲಗಳಂತೆಯೇ ಪ್ರಕಾಶಿಸುತ್ತಿದ್ದುವು. ದುಂಡು-ದುಂಡಾಗಿಯೂ ನೀಳವಾಗಿಯೂ, ಪುಷ್ಟವಾಗಿಯೂ, ಚಂದನಾ ಗುರುಗಳಿಂದ ಲೇಪಿತವಾಗಿಯೂ, ಕೈಚೀಲಗಳಿಂದಲೂ ಮತ್ತು ಆಯುಧ ಗಳಿಂದಲೂ ಕೂಡಿದುವು ಗಳಾಗಿಯೂ, ಐದು ಹೆಡೆಗಳುಳ್ಳ ಸರ್ಪ ಗಳಂತೆಯೂ ಇದ್ದ ಸಂಶಪ್ತಕರ ತೋಳುಗಳನ್ನು ಅರ್ಜುನನು ಆ ಮಹಾ ಯುದ್ಧದಲ್ಲಿ ನಿಶಿತವಾಗಿದ್ದ ಕ್ಷುರಗಳೆಂಬ ಬಾಣಗಳಿಂದ ಕತ್ತರಿಸಿದನು. ಪಾಂಡುಪುತ್ರನಾದ ಧನಂಜಯನು ಶತ್ರುಪಕ್ಷದ ರಥಗಳನ್ನೆಳೆಯುತ್ತಿದ್ದ ಕುದುರೆಗಳನ್ನೂ, ರಥಗಳ ಮೇಲೆ ಕುಳಿತಿದ್ದ ಸಾರಥಿಗಳನ್ನೂ, ಧ್ವಜಗಳನ್ನೂ, ಶತ್ರುಗಳು ಬಿಡುತ್ತಿದ್ದ ನೂರಾರು ಬಾಣಗಳನ್ನೂ, ರತ್ನದುಂಗುರಗಳಿಂದ ಸಮಲಂಕೃತವಾಗಿದ್ದ ಶತ್ರುಯೋಧರ ಕೈಗಳನ್ನೂ, ಆನೆಗಳನ್ನೂ, ಸವಾರರಿಂದ ಕೂಡಿದ ಕುದುರೆ ಗಳನ್ನೂ ಅನೇಕ ಸಹಸ್ರ ಬಾಣಗಳ ಪ್ರಯೋಗದಿಂದ ಯಮಾಲಯಕ್ಕೆ ಕಳುಹಿಸಿದನು. ಆ ಸಮಯದಲ್ಲಿ ಪರಮಕ್ರುದ್ಧರಾಗಿ ಸಂಶಪ್ತಕರು–ಅಲೆ ಬಂದ ಹಸುಗಳೊಡನೆ ಸಂಗಮಾಡುವ ಇಚ್ಛೆಯಿಂದ ಗುರುಗುಟ್ಟುವ ಮದಿಸಿದ ಹೋರಿಗಳೋಪಾದಿಯಲ್ಲಿ–ಗರ್ಜನೆ ಮಾಡುತ್ತಾ ಕ್ರುದ್ಧನಾಗಿದ್ದ, ತಮ್ಮನ್ನು ಸದೆಬಡಿಯುತ್ತಿದ್ದ ಅರ್ಜುನನನ್ನು–ಮದಿಸಿದ ಹೋರಿಗಳು ಕೊಂಬುಗಳಿಂದ ತಿವಿಯುವಂತೆ– ಬಾಣಗಳಿಂದ ಪ್ರಹರಿಸಿ ದರು. ತ್ರೈಲೋಕ್ಯವಿಜಯಕ್ಕಾಗಿ ಇಂದ್ರನಿಗೂ ಮತ್ತು ದೈತ್ಯರಿಗೂ ನಡೆದ ಯುದ್ಧದಂತೆ–ಅರ್ಜುನನಿಗೂ ಮತ್ತು ಸಂಶಪ್ತಕರಿಗೂ ರೋಮಾಂಚಕರವಾದ

ಯುದ್ಧವು ನಡೆಯಿತು. ಅರ್ಜುನನು, ಶತ್ರುಗಳು ಸತತವಾಗಿ ಬಿಡುತ್ತಿದ್ದ ಅಸ್ತ್ರಗಳನ್ನು ಅಸ್ತ್ರಪ್ರಯೋಗದಿಂದಲೇ ನಿವಾರಣೆಮಾಡಿಕೊಂಡು ಅತಿಶೀಘ್ರವಾಗಿ ಶತ್ರುಗಳ ಮೇಲೆ ಅಪಾರವಾದ ಬಾಣಗಳ ಮಳೆಗರೆದು ಅವರ ಪ್ರಾಣಗಳನ್ನು ಅಪಹರಿಸಿದನು.

ದೊಡ್ಡ-ದೊಡ್ಡ ಮೇಘಗಳನ್ನು ಸುಂಟರಗಾಳಿಯು ಛಿದ್ರಗೊಳಿಸಿಬಿಡುವಂತೆ–ಅರ್ಜುನನು ಸಂಶಪ್ತಕರ ರಥಗಳ ಸಮೂಹಗಳನ್ನು ಚೂರು-ಚೂರುಗಳನ್ನಾಗಿ ಮಾಡಿದನು. ರಥಗಳ ತ್ರಿವೇಣು, ಚಕ್ರ ಮತ್ತು ಅಚ್ಚುಮರಗಳು ಭಿನ್ನ-ಭಿನ್ನವಾಗಿದ್ದುವು. ರಥಗಳಲ್ಲಿದ್ದ ಯೋಧಾಶ್ವ-ಸಾರಥಿಗಳೆಲ್ಲರೂ ಹತರಾಗಿದ್ದರು. ರಥಗಳಲ್ಲಿದ್ದ ಆಯುಧಗಳೂ, ಬತ್ತಳಿಕೆಗಳೂ ಧ್ವಂಸವಾಗಿ ಹೋಗಿದ್ದುವು. ಧ್ವಜದಂಡಗಳು ಕೆಳಕ್ಕೆ ಬಿದ್ದಿದ್ದುವು. ನೊಗದ ಹಗ್ಗಗಳೂ ಮತ್ತು ಕಡಿವಾಣಗಳೂ ಕತ್ತರಿಸಿ ಹೋಗಿದ್ದುವು. ರಥಕ್ಕೆ ಹೊದ್ದಿಸಿದ್ದ ಚರ್ಮದ ಆವರಣಗಳು ಚೂರು-ಚೂರಾಗಿ ಕೆಳಕ್ಕೆ ಬಿದ್ದಿದ್ದುವು. ಅರ್ಜುನನಿಂದ ವಿಧ್ವಂಸ ಮಾಡಲ್ಪಟ್ಟಿದ್ದ ಆ ರಥಗಳಲ್ಲಿ ಮೂಕಿಯ ಮರಗಳೇ ಇರಲಿಲ್ಲ. ನೊಗದ ಕೆಳಭಾಗದ ಮೂಕೀಕಂಬಗಳೂ ಮತ್ತು ರಥಚಕ್ರಗಳೂ ಕಳಚಿ ಕೆಳಗೆ ಬಿದ್ದಿದ್ದುವು. ಇಂತಹ ಪ್ರೇಕ್ಷಣೀಯವಾದ ಸಾಹಸಕಾರ್ಯವನ್ನು ಅರ್ಜುನನು ಮಾಡಿದನು. ವಿಧ್ವಸ್ತವಾದ ರಥಗಳ ಆ ದೃಶ್ಯವು ಶತ್ರುಗಳಿಗೆ ಭಯವನ್ನುಂಟು ಮಾಡುವುದಾಗಿದ್ದಿತು. ಸಾವಿರ ಮಹಾರಥರು ಮಾಡುವ ಸಾಹಸಕಾರ್ಯಕ್ಕೆ ಸಮಾನವಾದ ಸಾಹಸಕಾರ್ಯವನ್ನು ವಿಜಯಶಾಲಿಯಾದ ಅರ್ಜುನನೊಬ್ಬನೇ ಮಾಡಿದನು. ಸಿದ್ಧರೂ, ದೇವತೆಗಳೂ, ಋಷಿಗಳೂ, ಚಾರಣರೂ ಗುಂಪು-ಗುಂಪಾಗಿ ಅರ್ಜುನನ ಮಹಾಪರಾಕ್ರಮವನ್ನು ಕೊಂಡಾಡಿದರು. ದೇವದುಂದುಭಿಗಳು ಮೊಳಗಿದುವು. ಕೃಷ್ಣಾರ್ಜುನರ ಮೇಲೆ ಪುಷ್ಪವೃಷ್ಟಿಯಾಯಿತು. ಅನಂತರ ಅಶರೀರವಾಣಿಯು ಹೀಗೆ ಹೇಳಿತು:

ಚನ್ದ್ರಾಗ್ನ್ಯನಿಲಸೂರ್ಯಾಣಾಂ ಕಾನ್ತಿದೀಪ್ತಿಬಲದ್ಯುತೀಃ ।<br>
ಯೌ ಸದಾ ಬಿಭ್ರತುರ್ವೀರಾವಿಮೌ ತೌ ಕೇಶವಾರ್ಜುನೌ ॥೧೮॥

ಬ್ರಹ್ಮೇಶಾನಾವಿವಾಜಯ್ಯೌ ವೀರಾವೇಕರಥೇ ಸ್ಥಿತೌ ।<br>
ಸರ್ವಭೂತವರೌ ವೀರೌ ನರನಾರಾಯಣಾವಿಮೌ ॥೧೯॥

"ಚಂದ್ರನ ಕಾಂತಿಯನ್ನೂ, ಅಗ್ನಿಯ ದೀಪ್ತಿಯನ್ನೂ, ವಾಯುವಿನ ಬಲವನ್ನೂ, ಸೂರ್ಯನ ತೇಜಸ್ಸನ್ನೂ ಹೊಂದಿರುವ-ವೀರರಾದ, ಒಂದೇ ರಥದಲ್ಲಿ ಕುಳಿತಿರುವ ಕೇಶವಾರ್ಜುನರು ಬ್ರಹ್ಮ-ರುದ್ರರಂತೆ ಎಲ್ಲರಿಂದಲೂ ಅಜಯ್ಯರಾಗಿದ್ದಾರೆ. ಸರ್ವಪ್ರಾಣಿಗಳಿಗೂ ಶ್ರೇಷ್ಠರಾದ ಮಹಾವೀರರಾದ ನರ-ನಾರಾಯಣರೇ ಆಗಿದ್ದಾರೆ."

ಮಹಾರಾಜ! ಮಹಾಶ್ಚರ್ಯಕರವಾದ ವಿಧ್ವಂಸನದ ಆ ದೃಶ್ಯವನ್ನು ನೋಡಿ ಮತ್ತು ಅಶರೀರವಾಣಿಯನ್ನೂ ಕೇಳಿ ಅಶ್ವತ್ಥಾಮನು ಸರ್ವಸಿದ್ಧತೆಯನ್ನೂ ಮಾಡಿಕೊಂಡು ಕೃಷ್ಣಾರ್ಜುನರ ಬಳಿಗೆ ಹೋದನು. ಅಶ್ವತ್ಥಾಮನು ಶತ್ರುಗಳನ್ನು ಸಂಹರಿಸುವ ಬಾಣಗಳನ್ನು ಪುಂಖಾನುಪುಂಖ ವಾಗಿ ಬಿಡುತ್ತಿದ್ದ ಅರ್ಜುನನನ್ನು ಬಾಣಸಹಿತವಾದ ಕೈಯಿಂದಲೇ ಯುದ್ಧಕ್ಕೆ ಆಹ್ವಾನಿಸಿ, ಗಹ-ಗಹಿಸಿ ನಗುತ್ತಾ ಹೇಳಿದನು:

"ವೀರನೇ! ಯೋಗ್ಯನಾದ ಅತಿಥಿಯು ಬಂದಿರುವನೆಂದು ನನ್ನನ್ನು ಭಾವಿಸುವೆಯಾದರೆ ಎಲ್ಲ ಪ್ರಕಾರಗಳಿಂದಲೂ ಯುದ್ಧಾತಿಥ್ಯವನ್ನೇ ನನಗೆ ನೀನು ಕೊಡಬಹುದಾಗಿದೆ."

ಮಹಾರಾಜ! ಆಚಾರ್ಯಪುತ್ರನು ಅರ್ಜುನನೊಡನೆ ಯುದ್ಧಮಾಡುವ ಇಚ್ಛೆಯಿಂದ ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸಲಾಗಿ ಅರ್ಜುನನು, ಆಚಾರ್ಯಪುತ್ರನು ತನ್ನನ್ನು ಬಹಳವಾಗಿ ಗೌರವಿಸಿದನೆಂದೇ ಭಾವಿಸಿ ಶ್ರೀಕೃಷ್ಣನೊಡನೆ ಹೇಳಿದನು:

"ಕೃಷ್ಣ! ಸಂಶಪ್ತಕರನ್ನು ವಧಿಸಲೇಬೇಕಾಗಿದೆ. ಆದರೆ ಈ ಮಧ್ಯದಲ್ಲಿ ಅಶ್ವತ್ಥಾಮನು ನನ್ನನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದಾನೆ. ಈ ಸಮಯದಲ್ಲಿ ಯಾವುದನ್ನು ಮೊದಲು ಮಾಡಬೇಕೆಂಬುದನ್ನು ನೀನೇ ಹೇಳು. ತಾನಾಗಿ ಮುಂದೆ ಬಂದಿರುವ ಅತಿಥಿಗೆ ಆತಿಥ್ಯವನ್ನು ಕೊಡುವ ಕಾರ್ಯವೇ ಮೊದಲಾಗಬೇಕೆಂದು ನೀನು ಭಾವಿಸುವೆಯಾದರೆ ಆತಿಥ್ಯವು ಕೊಡಲ್ಪಡಲಿ."

ಮಹಾರಾಜ! ಶ್ರೀಕೃಷ್ಣನು ಹೀಗೆ ಹೇಳಿದ ಪಾರ್ಥನನ್ನು–ಯಾಗ ಮಾಡುವವನು ವೈದಿಕಕರ್ಮವಿಧಿಗೆ ಅನುಸಾರವಾಗಿ ಆಹ್ವಾನಿಸಿದ ಇಂದ್ರ ನನ್ನು ವಾಯುವು ಯಜ್ಞಕ್ಕೆ ಒಯ್ಯುವಂತೆ–ವಿಜಯಶೀಲವಾದ ರಥದ

ಮೂಲಕ ಅಶ್ವತ್ಥಾಮನ ಬಳಿಗೊಯ್ದನು. ಯುದ್ಧದಲ್ಲಿಯೇ ನೆಟ್ಟಮನಸ್ಸುಳ್ಳವನಾಗಿದ್ದ ಅಶ್ವತ್ಥಾಮನನ್ನು ಸಂಬೋಧಿಸಿ ಶ್ರೀಕೃಷ್ಣನು ಹೇಳಿದನು: "ಅಶ್ವತ್ಥಾಮನ್! ಸ್ಥಿರವಾಗಿ ನಿಲ್ಲು. ಶತ್ರುವನ್ನು ಬೇಗ ಪ್ರಹರಿಸು. ಅಂತೆಯೇ ಅವನ ಪ್ರಹಾರವನ್ನು ಸಹಿಸಿಕೊಳ್ಳಲೂ ಸಿದ್ಧನಾಗು.

**ನಿರ್ವೇಷ್ಟುಂ ಭರ್ತೃಪಿಣ್ಡಂ ಹಿ ಕಾಲೋಽಯಮುಪಜೀವಿನಾಮ್ ।**
**ಸೂಕ್ಷ್ಮೋ ವಿವಾದೋ ವಿಪ್ರಾಣಾಂ ಸ್ಥೂಲೌ ಕ್ಷಾತ್ರೌ ಜಯಾಜಯೌ ॥**

ಯಜಮಾನನನ್ನು ಆಶ್ರಯಿಸಿ ಜೀವಿಸುವವರಿಗೆ ಸ್ವಾಮಿಯ ಅನ್ನದ ಋಣವನ್ನು ತೀರಿಸುವ ಕಾಲವೀಗ ಸನ್ನಿಹಿತವಾಗಿದೆ. ಬ್ರಾಹ್ಮಣರ ಜಯಾಪಜಯಗಳು ಬಹಳ ಸೂಕ್ಷ್ಮಸ್ವರೂಪದಲ್ಲಿರುತ್ತವೆ. ಕೇವಲ ಬುದ್ಧಿಮೂಲವಾಗಿರುತ್ತವೆ. ಆದರೆ ಕ್ಷತ್ರಿಯರದು ಹಾಗಲ್ಲ. ಅವರ ಜಯಾಪಜಯಗಳು ಸ್ಥೂಲರೂಪದಲ್ಲಿರುತ್ತವೆ. ಸ್ಥೂಲರೂಪವಾದ ಅಸ್ತ್ರಗಳನ್ನು ಅವಲಂಬಿಸಿರುತ್ತವೆ.

**ಯಾಮಭ್ಯರ್ಥಯಸೇ ಮೋಹಾ-**
**ದ್ದಿವ್ಯಾಂ ಪಾರ್ಥಸ್ಯ ಸತ್ಕ್ರಿಯಾಮ್ ।**
**ತಾಮಾಪ್ತುಮಿಚ್ಛನ್ಯುಧ್ಯಸ್ವ**
**ಸ್ಥಿರೋ ಭೂತ್ವಾದ್ಯ ಪಾಣ್ಡವಮ್ ॥೨೯॥**

ನೀನು ಕೇವಲ ಮೋಹಪರವಶನಾಗಿ ಪಾರ್ಥನ ಯಾವ ದಿವ್ಯವಾದ ಸತ್ಕಾರವನ್ನು ಪಡೆಯಲು ಇಚ್ಛಿಸಿರುವೆಯೋ-ಆ ಮಹಾತಿಥ್ಯವನ್ನು ಪಡೆದುಕೊಳ್ಳುವ ಸಲುವಾಗಿ ಸುಸ್ಥಿರನಾಗಿ ನಿಲ್ಲು. ಪಾಂಡವನೊಡನೆ ಯುದ್ಧ ಮಾಡು."

ಮಹಾರಾಜ! ವಾಸುದೇವನ ಮಾತುಗಳನ್ನು ಕೇಳಿ ಅಶ್ವತ್ಥಾಮನು 'ತಥಾಸ್ತು' ಎಂಬ ಪ್ರತ್ಯುತ್ತರದೊಡನೆಯೇ ಶ್ರೀಕೇಶವನನ್ನು ಅರುವತ್ತು ಬಾಣಗಳಿಂದಲೂ, ಅರ್ಜುನನನ್ನು ಮೂರು ಬಾಣಗಳಿಂದಲೂ ಪ್ರಹರಿಸಿದನು. ಅದರಿಂದ ಪರಮಕ್ರುದ್ಧನಾದ ಅರ್ಜುನನು ಮೂರು ಬಾಣಗಳಿಂದ

ದ್ರೌಣಿಯ ಧನುಸ್ಸನ್ನು ಕತ್ತರಿಸಿದನು. ಒಡನೆಯೇ ಅಶ್ವತ್ಥಾಮನು ಹಿಂದಿನದಕ್ಕಿಂತಲೂ ಘೋರತರವಾದ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡನು. ರೆಪ್ಪೆಹೊಡೆಯುವುದರೊಳಗಾಗಿ ಧನುಸ್ಸಿಗೆ ಶಿಂಜಿನಿಯನ್ನು ಬಿಗಿದು ಮೂರು ನೂರು ಬಾಣಗಳಿಂದ ಕೇಶವನನ್ನೂ, ಸಾವಿರಬಾಣಗಳಿಂದ ಅರ್ಜುನನನ್ನೂ ಪ್ರಹರಿಸಿದನು. ಬಳಿಕ ಅಶ್ವತ್ಥಾಮನು ತನ್ನ ಬಾಣಗಳ ಪ್ರಹಾರದಿಂದ ಅರ್ಜುನನನ್ನು ಹಿಂದೆ-ಮುಂದೆ ಅಳ್ಳಾಡದಂತೆ ಮಾಡಿ ಸಾವಿರಾರು-ಲಕ್ಷೋಪಲಕ್ಷ ಬಾಣಗಳನ್ನು ಸತತವಾಗಿ ಅರ್ಜುನನ ಮೇಲೆ ಸುರಿಸಿದನು.

**ಇಷುಧೇರ್ಧನುಷಶ್ಚೈವ ಜ್ಯಾಯಾಶ್ಚೈವಾಥ ಮಾರಿಷ ।**
**ಬಾಹ್ವೋಃ ಕರಾಭ್ಯಾಮುರಸೋ ವದನಘ್ರಾಣನೇತ್ರತಃ ॥೩೪॥**

**ಕರ್ಣಾಭ್ಯಾಂ ಶಿರಸೋಽಙ್ಗೇಭ್ಯೋ ಲೋಮವರ್ಮಭ್ಯ ಏವ ಚ ।**
**ರಥಧ್ವಜೇಭ್ಯಶ್ಚ ಶರಾ ನಿಷ್ಪೇತುರ್ಬ್ರಹ್ಮವಾದಿನಃ ॥೩೫॥**

ಮಹಾರಾಜ! ಆ ಸಮಯದಲ್ಲಿ ಅಶ್ವತ್ಥಾಮನ ಧನುಸ್ಸಿನಿಂದ ಮಾತ್ರವೇ ಬಾಣಗಳು ಹೊರಬರುತ್ತಿರಲಿಲ್ಲ. ಅವನ ಅಂಗಾಂಗಗಳಿಂದಲೂ ಸತತವಾಗಿ ಬಾಣಗಳು ಹೊರಬರುತ್ತಿದ್ದುವು. ಬ್ರಹ್ಮವಾದಿಯಾದ ಅಶ್ವತ್ಥಾಮನ ಬತ್ತಳಿಕೆಯಿಂದ, ಧನುಸ್ಸಿನಿಂದ, ಶಿಂಜಿನಿಯಿಂದ, ತೋಳುಗಳಿಂದ, ಕೈಗಳಿಂದ, ಎದೆಯಿಂದ, ಮುಖದಿಂದ, ಮೂಗಿನಿಂದ, ಕಣ್ಣುಗಳಿಂದ, ಕಿವಿಗಳಿಂದ, ತಲೆಯಿಂದ, ಇತರಾಂಗಗಳಿಂದ, ಕೂದಲುಗಳಿಂದ, ಕವಚದಿಂದ, ರಥ-ಧ್ವಜಗಳಿಂದ ಹೊರಹೊರಟ ಬಾಣಗಳು ಸತತವಾಗಿ ಅರ್ಜುನನ ಮೇಲೆ ಬೀಳುತ್ತಿದ್ದುವು.

ಅಶ್ವತ್ಥಾಮನು ಅಪಾರವಾದ ಬಾಣಗಳ ಸಮೂಹದಿಂದ ಮಾಧವ-ಪಾಂಡವರನ್ನು ಗಾಯಗೊಳಿಸಿ ಸಂತುಷ್ಟನಾಗಿ ಮಹಾಮೇಘಗಳ ಸಮೂಹದಿಂದ ಹೊರಬರುವ ಗುಡುಗಿನ ಧ್ವನಿಯಂತೆ-ಗರ್ಜನೆಮಾಡಿದನು.

ಅಶ್ವತ್ಥಾಮನು ಮಾಡಿದ ಗರ್ಜನೆಯನ್ನು ಕೇಳಿ ಅರ್ಜುನನು ಶ್ರೀಕೃಷ್ಣನೊಡನೆ ಹೇಳಿದನು:

"ಮಾಧವ! ನನ್ನ ವಿಷಯದಲ್ಲಿ ಗುರುಪುತ್ರನ ದುಷ್ಟಭಾವವನ್ನಾದರೂ ನೋಡು. ನಮ್ಮಿಬ್ಬರನ್ನೂ ಶರಗೃಹದಲ್ಲಿರಿಸಿರುವ ಇವನು ನಾವು ಸತ್ತುಹೋದೆವೆಂದೇ ಭಾವಿಸಿಬಿಟ್ಟಿದ್ದಾನೆ. ನನಗಾಗಿರುವ ಅಸ್ತ್ರಶಿಕ್ಷಣದ ಪ್ರಭಾವದಿಂದಲೂ ಮತ್ತು ನನ್ನ ಬಾಹುಬಲದಿಂದಲೂ ಇವನ ಸಂಕಲ್ಪವನ್ನು ನಾನು ಹಾಳುಮಾಡುತ್ತೇನೆ."

ಹೀಗೆ ಹೇಳಿದ ಅರ್ಜುನನು ಅಶ್ವತ್ಥಾಮನ ಧನುಸ್ಸಿನಿಂದ ಹೊರ ಬರುತ್ತಿದ್ದ ಎಲ್ಲ ಬಾಣಗಳನ್ನೂ ಮೂರು-ಮೂರು ತುಂಡುಗಳನ್ನಾಗಿ ಕತ್ತರಿಸಿ– ಗಾಳಿಯು ಮಂಜನ್ನು ಕರಗಿಸುವಂತೆ–ದ್ರೌಣಿಯು ಬಿಟ್ಟಿದ್ದ ಬಾಣ ಗಳೆಲ್ಲವನ್ನೂ ಕ್ಷಣಮಾತ್ರದಲ್ಲಿ ನಿರಸನಗೊಳಿಸಿದನು. ಅನಂತರ ಅರ್ಜು ನನು ಅಶ್ವ-ಸೂತ-ರಥ-ಗಜಸಹಿತರಾಗಿದ್ದ, ಧ್ವಜ-ಪದಾತಿಗಳಿಂದ ಯುಕ್ತರಾಗಿದ್ದ ಸಂಶಪ್ತಕರನ್ನು ಉಗ್ರವಾದ ಬಾಣಗಳಿಂದ ಪುನಃ ಗಾಯಗೊಳಿಸಿದನು. ಮನುಷ್ಯರೆಲ್ಲರೂ ಏಕರೂಪವಾಗಿರದೇ ಪ್ರತ್ಯೇಕ-ಪ್ರತ್ಯೇಕ ವಾದ ರೂಪಗಳಲ್ಲಿದ್ದುದನ್ನು ಜನರು ಕಂಡಿದ್ದರು. ಅರ್ಜುನನ ಬಾಣಗಳ ಪತನದಿಂದಾಗಿ ಬೇರೆ-ಬೇರೆ ರೂಪಗಳಲ್ಲಿದ್ದ ಜನರು (ಏಕ) ಬಾಣರೂಪ ರಾಗಿರುವುದನ್ನು ನೋಡಿದರಲ್ಲದೇ ತಾವೂ ಸಹ ಬಾಣರೂಪರಾಗಿಯೇ ಇರುವುದನ್ನು ಅವರು ಕಂಡುಕೊಂಡರು. (ರಣಾಂಗಣವೇ ಬಾಣಗಳಿಂದ ವ್ಯಾಪ್ತವಾಗಿಬಿಟ್ಟಿದ್ದಿತು. ಅರ್ಜುನನ ಬಾಣಗಳ ಹೊರತಾಗಿ ಬೇರಾವುದೂ ಅಲ್ಲಿ ಕಾಣುತ್ತಲೇ ಇರಲಿಲ್ಲ.) ಗಾಂಡೀವ ಧನುಸ್ಸಿನಿಂದ ಪ್ರಮುಕ್ತವಾದ ನಾನಾರೂಪಗಳಲ್ಲಿದ್ದ ಬಾಣಗಳು ಕ್ರೋಶ (ಮೂರು ಮೈಲಿಗಳ) ದೂರ ದಲ್ಲಿದ್ದ ಮತ್ತು ಅತಿಸಮೀಪದಲ್ಲಿದ್ದ ಆನೆಗಳನ್ನೂ- ಮನುಷ್ಯರನ್ನೂ ಸಂಹ ರಿಸುತ್ತಿದ್ದುವು. ಅರ್ಜುನನು ಪ್ರಯೋಗಿಸಿದ ಭಲ್ಲಗಳಿಂದ ಕತ್ತರಿಸಲ್ಪಟ್ಟ, ಮದೋದಕವನ್ನು ಸುರಿಸುತ್ತಿದ್ದ ಆನೆಗಳ ಸೊಂಡಿಲುಗಳು-ಅರಣ್ಯದಲ್ಲಿ ಗಂಡುಗೊಡಲಿಯಿಂದ ಕತ್ತರಿಸಲ್ಪಟ್ಟ ಮಹಾವೃಕ್ಷಗಳು ಕೆಳಗೆ ಬೀಳು ವಂತೆ-ಕೆಳಗೆ ಬೀಳುತ್ತಿದ್ದುವು. ಬಳಿಕ ಇಂದ್ರನ ವಜ್ರಾಯುಧದಿಂದ ಪ್ರಹೃತ ವಾದ ಪರ್ವತಗಳು ಕೆಳಗೆ ಬೀಳುತ್ತಿದ್ದಂತೆ–ಸೊಂಡಿಲುಗಳನ್ನು ಕಳೆದುಕೊಂಡ ಆನೆಗಳು ಸವಾರರೊಡನೆ ಪರ್ವತೋಪಮವಾಗಿ ಕೆಳಗೆ ಬೀಳುತ್ತಿದ್ದುವು. ಸುಶಿಕ್ಷಿತವಾದ ಮತ್ತು ವೇಗಯುಕ್ತವಾದ ಕುದುರೆಗಳಿಂದ ಕೂಡಿದ, ಯುದ್ಧದುರ್ಮದರಾದ ಯೋಧರಿಂದ ಸುಶೋಭಿತವಾಗಿದ್ದ,

ಗಂಧರ್ವನಗರಿಯಂತೆ ವಿಶಾಲವಾಗಿದ್ದ, ಸಕಲವಿಧವಾದ ಯುದ್ಧಸಾಮಗ್ರಿ ಗಳಿಂದಲೂ ಸಜ್ಜಾಗಿದ್ದ ರಥಗಳನ್ನು ಅರ್ಜುನನು ತನ್ನ ಬಾಣಗಳಿಂದ ಚೂರು-ಚೂರುಗಳನ್ನಾಗಿ ಮಾಡುತ್ತಾ ಶತ್ರುಗಳ ಮೇಲೆ ಬಾಣಗಳ ಮಳೆಗರೆ ಯುತ್ತಿದ್ದನು. ಸುವರ್ಣಾಭರಣಗಳಿಂದ ಸಮಲಂಕೃತರಾಗಿದ್ದ ಕುದುರೆಸವಾರ ರನ್ನೂ ಮತ್ತು ಕಾಲಾಳುಗಳನ್ನೂ ಬಾಣಗಳಿಂದ ಅಪಾರಸಂಖ್ಯೆಯಲ್ಲಿ ಸಂಹರಿಸಿದನು.

**ಧನಂಜಯಯುಗಾನ್ತರ್ಕಃ ಸಂಶಪ್ತಕಮಹಾರ್ಣವಮ್ ।**
**ವ್ಯಶೋಷಯತ ದುಃಶೋಷಂ ತೀಕ್ಷ್ಣೈಃ ಶರಗಭಸ್ತಿಭಿಃ ॥೪೭॥**

ಧನಂಜಯನೆಂಬ ಪ್ರಳಯಕಾಲದ ಸೂರ್ಯನು, ಬತ್ತಿಸಲು ಅಸಾಧ್ಯ ವಾದ ಸಂಶಪ್ತಕಮಹಾಸಮುದ್ರವನ್ನು ಬಾಣರೂಪವಾದ ಪ್ರಖರಕಿರಣ ಗಳಿಂದ ಬತ್ತಿಸಿಬಿಟ್ಟನು.

ಬಳಿಕ ಅರ್ಜುನನು ಮಹಾಪರ್ವತಸದೃಶನಾದ ಅಶ್ವತ್ಥಾಮನನ್ನು ಇಂದ್ರನು ಪರ್ವತಗಳನ್ನು ಭೇದಿಸಿದಂತೆ–ವಜ್ರಾಯುಧಸದೃಶವಾದ ಮಹಾ ವೇಗಯುಕ್ತವಾದ ನಾರಾಚಗಳಿಂದ ಭೇದಿಸಿದನು. ಅದರಿಂದ ಪರಮಕ್ರುದ್ಧ ನಾದ ಆಚಾರ್ಯಪುತ್ರನು ಅರ್ಜುನನೊಡನೆ ಯುದ್ಧಮಾಡಲಿಚ್ಛಿಸಿ ಸಾರಥಿ ಯಾದ ಶ್ರೀಕೃಷ್ಣನನ್ನೂ ಮತ್ತು ಅರ್ಜುನನನ್ನೂ ಬಾಣಗಳಿಂದ ಪ್ರಹರಿಸಿದನು. ಆದರೆ ಪಾರ್ಥನು ಆ ಬಾಣಗಳನ್ನು ತನ್ನ ಸಮೀಪಕ್ಕೆ ಬರುವುದರೊಳ ಗಾಗಿಯೇ ಕತ್ತರಿಸಿಹಾಕಿದನು. ಗೃಹಸ್ಥನಾದವನು ಯೋಗ್ಯನಾದ ಅತಿಥಿಯು ಮನೆಗೆ ಬಂದಾಗ ತನ್ನ ಸರ್ವಸ್ವವನ್ನೂ ಅವನ ಮುಂದೆ ಸುರಿಯುವಂತೆ– ಪರಮಕ್ರುದ್ಧನಾದ ಅಶ್ವತ್ಥಾಮನು ಸಕಲಮಹಾಸ್ತ್ರಗಳನ್ನೂ ಅರ್ಜುನನ ಮೇಲೆ ಸುರಿಸಿದನು. ದಾನಿಯೊಬ್ಬನು ಅಪಾಂಕ್ತೇಯರನ್ನು ಬಿಟ್ಟು ಪಙ್ಕ್ತಿಪಾವನ ನಾದ ಅತಿಥಿಯನ್ನು ಸ್ವಾಗತಿಸುವಂತೆ–ಅರ್ಜುನನು ಸಂಶಪ್ತಕರನ್ನು ಪರಿತ್ಯಜಿಸಿ ದ್ರೌಣಿಯೊಡನೆ ಯುದ್ಧಮಾಡಲು ಹೋದನು."

೧೬ನೆಯ ಅಧ್ಯಾಯವು ಮುಗಿಯಿತು.

೧೭ನೆಯ ಅಧ್ಯಾಯ                                                    ಕರ್ಣಪರ್ವ (ಮುಂದುವರಿದಿದೆ.)

## ಅರ್ಜುನನು ಅಶ್ವತ್ಥಾಮನನ್ನು ಪರಾಜಯಗೊಳಿಸಿದುದು

ಸಂಜಯನು ಅರ್ಜುನಾಶ್ವತ್ಥಾಮರ ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ಶುಕ್ರ ಮತ್ತು ಬೃಹಸ್ಪತಿಗಳಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಅರ್ಜುನಾಶ್ವತ್ಥಾಮರ ನಡುವೆ-ಆಕಾಶದಲ್ಲಿ ನಕ್ಷತ್ರ ಮಂಡಲದಲ್ಲಿ ಶುಕ್ರ-ಬೃಹಸ್ಪತಿಗಳ ನಡುವೆ ಯುದ್ಧವು ನಡೆಯುವಂತೆ–ಯುದ್ಧವು ನಡೆಯಿತು.

ವಕ್ರಗತಿಯಿಂದ ಅಥವಾ ಅತಿಚಾರಗತಿಯಿಂದ ಸಂಚರಿಸುವ ಎರಡು ಗ್ರಹಗಳಂತೆ ಅರ್ಜುನಾಶ್ವತ್ಥಾಮರು ಪ್ರದೀಪ್ತವಾದ ಬಾಣಗಳೆಂಬ ಕಿರಣಗಳಿಂದ ಪರಸ್ಪರವಾಗಿ ಒಬ್ಬರನ್ನೊಬ್ಬರು ಸಂತಾಪಗೊಳಿಸುತ್ತಾ ಲೋಕಕ್ಕೆ ಭಯವನ್ನುಂಟುಮಾಡುತ್ತಿದ್ದರು. ಬಳಿಕ ಅರ್ಜುನನು ಅಶ್ವತ್ಥಾಮನ ಹುಬ್ಬುಗಳ ಮಧ್ಯಭಾಗವನ್ನು ನಾರಾಚದಿಂದ ಬಹಳ ಬೇಗ ಪ್ರಹರಿಸಿದನು. ನಾರಾಚವನ್ನು ಹಣೆಯಲ್ಲಿ ಹೊಂದಿದ್ದ ಅಶ್ವತ್ಥಾಮನು–ಊರ್ಧ್ವರಶ್ಮಿಯಾದ ಸೂರ್ಯನಂತೆಯೇ ಪ್ರಕಾಶಿಸುತ್ತಿದ್ದನು. ಅದಕ್ಕೆ ಪ್ರತಿಯಾಗಿ ಅಶ್ವತ್ಥಾಮನು ಕೃಷ್ಣಾರ್ಜುನರಿಬ್ಬರನ್ನೂ ನೂರು ಬಾಣಗಳಿಂದ ಪ್ರಹರಿಸಿದನು. ಆ ಸಮಯದಲ್ಲವರು–ಪ್ರಖರವಾದ ಕಿರಣಗಳಿಂದ ಕೂಡಿದ ಪ್ರಳಯಕಾಲದ ಸೂರ್ಯರಂತೆಯೇ ಪ್ರಕಾಶಿಸುತ್ತಿದ್ದರು. ಈ ರೀತಿಯಾಗಿ ಅಶ್ವತ್ಥಾಮನು ಸಾರಥಿಯ ಸ್ಥಾನದಲ್ಲಿ ಕುಳಿತಿದ್ದ ಶ್ರೀಕೃಷ್ಣನನ್ನೂ ಬಾಣಗಳ ಪ್ರಹಾರದಿಂದ ಗಾಯಗೊಳಿಸಲಾಗಿ, ಕುಪಿತನಾದ ಅರ್ಜುನನು ಸರ್ವತೋಧಾರವೆಂಬ ಅಸ್ತ್ರವನ್ನು (ಎಲ್ಲ ಕಡೆಗಳಲ್ಲಿಯೂ ಅಲುಗುಗಳುಳ್ಳ ಅಸ್ತ್ರವನ್ನು) ದ್ರೌಣಿಯ ಮೇಲೆ ಪ್ರಯೋಗಿಸಿದನು. ಪುನಃ ಅರ್ಜುನನು ವಜ್ರಾಯುಧ, ಅಗ್ನಿ ಮತ್ತು ಯಮದಂಡಗಳಿಗೆ ಸಮಾನವಾದ ಬಾಣಗಳಿಂದ ದ್ರೌಣಿಯನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಮಹಾತೇಜಸ್ವಿಯಾದ, ಭಯಂಕರಕರ್ಮನಾದ ಅಶ್ವತ್ಥಾಮನು ಸುಪ್ರಮುಕ್ತವಾದ, ಅತಿತೀವ್ರಗತಿಯುಳ್ಳ, ಮೃತ್ಯುವನ್ನೂ ವ್ಯಥೆಗೊಳಿಸುವಷ್ಟು ತೀಕ್ಷ್ಣವಾಗಿದ್ದ ಬಾಣಗಳಿಂದ ಅರ್ಜುನನನ್ನೂ ಮತ್ತು

ಶ್ರೀಕೃಷ್ಣನನ್ನೂ ಅವರ ಮರ್ಮಸ್ಥಳಗಳಲ್ಲಿ ಪ್ರಹರಿಸಿದನು. ಅರ್ಜುನನು ಪ್ರಯತ್ನಪೂರ್ವಕ ವಾಗಿ ತಮ್ಮ ಮೇಲೆ ಪ್ರಯೋಗಿಸುತ್ತಿದ್ದ ಅಶ್ವತ್ಥಾಮನ ಬಾಣಗಳೆಲ್ಲವನ್ನೂ ಸುಂದರವಾದ ರೆಕ್ಕೆಗಳನ್ನು ಹೊಂದಿದ್ದ, ಎರಡು ಪಟ್ಟು ಹೆಚ್ಚಾದ ಬಾಣಗಳಿಂದ ನಿವಾರಣೆಮಾಡಿ, ದುರ್ಯೋಧನನ ಪಕ್ಷದ ಒಬ್ಬನೇ ಒಬ್ಬ ಮುಖ್ಯಮಹಾವೀರನಾದ, ಅಶ್ವಸೂತ-ಧ್ವಜಸಹಿತನಾದ ಅಶ್ವತ್ಥಾಮ ನನ್ನು ಬಾಣಗಳಿಂದ ಮುಚ್ಚಿ, ಸಂಶಪ್ತಕಸೈನಿಕರನ್ನು ಪುನಃ ಆಕ್ರಮಿಸಿದನು.

ಕುಂತೀತನಯನಾದ ಅರ್ಜುನನು ಸುಪ್ರಮುಕ್ತವಾದ ಬಾಣಗಳಿಂದ ಯುದ್ಧದಿಂದ ಪರಾಙ್ಮುಖರಾಗದೇ ಇದ್ದ ಸಂಶಪ್ತಕರ ಧನುಸ್ಸುಗಳನ್ನೂ, ಬಾಣಗಳನ್ನೂ, ಬತ್ತಳಿಕೆಗಳನ್ನೂ, ಶಿಂಜಿನಿಗಳನ್ನೂ, ಕೈಗಳನ್ನೂ, ಭುಜ ಗಳನ್ನೂ, ಕೈಗಳಲ್ಲಿದ್ದ ಶಸ್ತ್ರಗಳನ್ನೂ, ಛತ್ರಗಳನ್ನೂ, ಧ್ವಜಗಳನ್ನೂ, ಕುದುರೆ ಗಳನ್ನೂ, ರಥಗಳನ್ನೂ, ಈಷಾದಂಡಗಳನ್ನೂ, ವಸ್ತ್ರಗಳನ್ನೂ, ಮಾಲೆಗಳನ್ನೂ, ಆಭರಣಗಳನ್ನೂ, ಗುರಾಣಿಗಳನ್ನೂ, ಸುಂದರವಾದ ಕವಚಗಳನ್ನೂ, ಸಮಸ್ತ ಪ್ರಿಯವಸ್ತುಗಳನ್ನೂ ಮತ್ತು ತಲೆಗಳನ್ನೂ ಕತ್ತರಿಸಿ ಹಾಕಿದನು. ಆ ರಥಾಶ್ವ-ಗಜಗಳು ಸಕಲವಿಧವಾದ ಯುದ್ಧಸಾಮಗ್ರಿ ಗಳಿಂದಲೂ ಸಂಪನ್ನವಾಗಿದ್ದುವು. ಅವುಗಳ ಮೇಲೆ ಪ್ರಯತ್ನಪೂರ್ವಕವಾಗಿ ಯುದ್ಧಮಾಡುವ ನರಶ್ರೇಷ್ಠರಾದ ಯೋಧರೂ ಉಪಸ್ಥಿತರಾಗಿದ್ದರು. ಆದರೆ ಅರ್ಜುನನಿಂದ ಬಿಡಲ್ಪಡುತ್ತಿದ್ದ ಸಾವಿರಾರು ಬಾಣಗಳಿಂದ ಪ್ರಹೃತ ವಾದ ರಥಾಶ್ವ-ಗಜಗಳು ನರಶ್ರೇಷ್ಠರಾದ ಯೋಧರೊಡನೆಯೇ ಪ್ರಾಣ ತೊರೆದು ಭೂಮಿಯ ಮೇಲೆ ಬಿದ್ದುವು. ಕಮಲ, ಸೂರ್ಯ ಮತ್ತು ಪೂರ್ಣಚಂದ್ರರಿಗೆ ಸಮಾನವಾದ ಮುಖಕಾಂತಿಯನ್ನು ಹೊಂದಿದ್ದ, ಕಿರೀಟಗಳಿಂದಲೂ ಮಾಲೆಗಳಿಂದಲೂ ಮತ್ತು ಆಭರಣಗಳಿಂದಲೂ ಪ್ರಕಾಶ ಮಾನವಾಗಿ ಕಾಣುತ್ತಿದ್ದ ರಾಜರ ಶಿರಸ್ಸುಗಳು ಭಲ್ಲ, ಅರ್ಧಚಂದ್ರ, ಕ್ಷುರಗಳಿಂದ ಕತ್ತರಿಸಲ್ಪಟ್ಟುವುಗಳಾಗಿ ಭೂಮಿಯ ಮೇಲೆ ಸತತವಾಗಿ ಬೀಳುತ್ತಲೇ ಇದ್ದುವು. ಸಂಶಪ್ತಕರ ವಧೆಯಾದನಂತರ ಕಲಿಂಗ, ಅಂಗ, ವಂಗ ಮತ್ತು ನಿಷಾದದೇಶಗಳ ವೀರಯೋಧರು ದೇವಪತಿಯಾದ ಇಂದ್ರನ ಐರಾವತಸದೃಶವಾಗಿದ್ದ ಆನೆಗಳಿಂದ ಕೂಡಿದವರಾಗಿ, ದೇವ ದ್ರೋಹಿಗಳ ದರ್ಪವನ್ನು ಅಡಗಿಸಿದ ಶ್ರೇಷ್ಠವೀರನಾದ ಅರ್ಜುನನನ್ನು ಕೊಲ್ಲುವ ಇಚ್ಛೆಯಿಂದ ಅವನಿಗೆ ಎದುರಾಗಿ ಬಂದರು. ಒಡನೆಯೇ

ಪಾರ್ಥನು ಅಂಗ-ವಂಗ-ಕಳಿಂಗರೊಡನೆ ಬಂದಿದ್ದ ಆನೆಗಳ ಕವಚಗಳನ್ನೂ, ಚರ್ಮಗಳನ್ನೂ, ಸೊಂಡಿಲುಗಳನ್ನೂ, ಮಾವಟಿಗರನ್ನೂ, ಧ್ವಜ-ಪತಾಕೆ ಗಳನ್ನೂ ನಿಶಿತವಾದ ಬಾಣಗಳಿಂದ ಕತ್ತರಿಸಿದನು. ವಜ್ರಾಯುಧದಿಂದ ಪ್ರಹೃತವಾಗಿ ಪರ್ವತಶಿಖರಗಳು ಕೆಳಗೆ ಬೀಳುವಂತೆ–ಅರ್ಜುನನಿಂದ ಕತ್ತರಿಸಲ್ಪಟ್ಟ ಆನೆಗಳೆಲ್ಲವೂ ತೊಪ-ತೊಪನೆ ಕೆಳಕ್ಕೆ ಬಿದ್ದುವು. ಸಂಶಪ್ತಕ ಸೈನಿಕರೂ ಮತ್ತು ಅಂಗ-ವಂಗ-ಕಳಿಂಗರ ಗಜಸೈನಿಕರೂ ವಿಧ್ವಸ್ತರಾಗಲಾಗಿ, ಅರ್ಜುನನು ಬಾಲಸೂರ್ಯನ ಬಣ್ಣದಿಂದ ಕೂಡಿದ್ದ ಬಾಣ ಗಳಿಂದ–ಉದಯಿಸುತ್ತಿರುವ ಸೂರ್ಯನನ್ನು ವಾಯುದೇವನು ದೊಡ್ಡ-ದೊಡ್ಡ ಮೇಘಗಳ ಸಮೂಹದಿಂದ ಮುಚ್ಚಿಬಿಡುವಂತೆ–ಗುರುಪುತ್ರನಾದ ಅಶ್ವತ್ಥಾಮನನ್ನು ಮುಚ್ಚಿಬಿಟ್ಟನು. ಬಳಿಕ ದ್ರೌಣಿಯು ಅರ್ಜುನನು ಬಿಟ್ಟ ಬಾಣಗಳನ್ನು ಬಾಣಗಳಿಂದಲೇ ನಿರಸನಮಾಡಿ, ಪುನಃ ಅರ್ಜುನ-ವಾಸುದೇವರನ್ನು ನಿಶಿತವಾದ ಬಾಣಗಳಿಂದ ಮುಚ್ಚಿ–ವರ್ಷಾಕಾಲದ ಕಾರ್ಮುಗಿಲು ಚಂದ್ರ-ಸೂರ್ಯರನ್ನು ಮುಚ್ಚಿ ಗರ್ಜನೆಮಾಡುವಂತೆ–ಗರ್ಜನೆಯನ್ನು ಮಾಡಿದನು. ಅಶ್ವತ್ಥಾಮನು ಬಿಟ್ಟ ಆ ಶಸ್ತ್ರಗಳಿಂದ ಬಹಳವಾಗಿ ಪೀಡಿತನಾದ ಅರ್ಜುನನು ಸ್ವಲ್ಪ ಮುಂದೆಹೋಗಿ ದ್ರೌಣಿಯು ಕಲ್ಪಿಸಿದ್ದ ಬಾಣಾಂಧಕಾರವನ್ನು ಹೋಗಲಾಡಿಸಿ, ಅಶ್ವತ್ಥಾಮನನ್ನೂ ಮತ್ತು ನಿನ್ನ ಕಡೆಯ ಇತರ ಸೈನಿಕರನ್ನೂ ಸುಂದರವಾದ ರೆಕ್ಕೆಗಳಿಂದ ಕೂಡಿದ್ದ ಬಾಣಗಳಿಂದ ಪ್ರಹರಿಸಿದನು.

ರಥದಲ್ಲಿ ಕುಳಿತಿದ್ದ ಅರ್ಜುನನು ಬತ್ತಳಿಕೆಯಿಂದ ಬಾಣಗಳನ್ನು ತೆಗೆದುಕೊಳ್ಳುವುದಾಗಲೀ ಧನುಸ್ಸಿನಲ್ಲಿ ಅನುಸಂಧಾನಮಾಡುವುದಾಗಲೀ ಶತ್ರುಗಳ ಮೇಲೆ ಬಿಡುವುದಾಗಲೀ ಕಾಣುತ್ತಲೇ ಇರಲಿಲ್ಲ. ರಥಿಗಳು, ಆನೆಗಳು, ಕುದುರೆಗಳು ಮತ್ತು ಕಾಲಾಳುಗಳು ಅರ್ಜುನನ ಬಾಣಗಳಿಂದ ನೇಯಲ್ಪಟ್ಟಿರುವುದನ್ನು (ಪ್ರಹೃತರಾಗಿರುವುದನ್ನು) ಮಾತ್ರವೇ ಎಲ್ಲರೂ ಕಾಣುತ್ತಿದ್ದರು. ತತ್ಫಲವಾಗಿ ಸೈನಿಕರು ಅಸುನೀಗುವುದನ್ನೂ ಎಲ್ಲರೂ ನೋಡುತ್ತಿದ್ದರು. ಅರ್ಜುನನ ಆ ಅದ್ಭುತಕ್ರಿಯೆಯನ್ನು ನೋಡಿ ಖತಿ ಗೊಂಡ ಅಶ್ವತ್ಥಾಮನು ಬಹಳ ಬೇಗ ಹತ್ತು ಬಾಣಗಳನ್ನು ಒಂದೇ ಬಾಣ ದಂತೆ ಧನುಸ್ಸಿನಲ್ಲಿ ಯೋಜಿಸಿ ಒಂದೇ ಬಾರಿಗೆ ಪ್ರಹರಿಸಿದನು. ಹಾಗೆ

ಪ್ರಹರಿಸಿದ ಹತ್ತು ಬಾಣಗಳಲ್ಲಿ ಸುಂದರವಾದ ರೆಕ್ಕೆಗಳಿಂದ ಕೂಡಿದ ಐದು ಬಾಣಗಳು ಅರ್ಜುನನನ್ನೂ ಮತ್ತೈದು ಬಾಣಗಳು ಶ್ರೀಕೃಷ್ಣನನ್ನೂ ಗಾಯಗೊಳಿಸಿದುವು.

ಸರ್ವಮನುಷ್ಯರಲ್ಲಿಯೂ ಶ್ರೇಷ್ಠರಾದ, ಕುಬೇರ ಮತ್ತು ಇಂದ್ರರಿಗೆ ಸಮಾನರಾದ ಕೃಷ್ಣಾರ್ಜುನರು ಅಶ್ವತ್ಥಾಮನು ಬಿಟ್ಟ ಬಾಣಗಳಿಂದ ಬಹಳವಾಗಿ ಗಾಯಗೊಂಡರು. ಅವರ ಅಂಗಾಂಗಗಳಿಂದಲೂ ರಕ್ತವು ಸ್ರವಿಸುತ್ತಿದ್ದಿತು. ಅವರ ದುಃಸ್ಥಿತಿಯನ್ನು ನೋಡಿದ ಇತರ ಪ್ರೇಕ್ಷಕರು ಧನುರ್ವಿದ್ಯೆಯ ಪಾರವನ್ನು ಕಂಡಿರುವ ದ್ರೌಣಿಯಿಂದ ಕೃಷ್ಣಾರ್ಜುನರು ಪರಾಜಿತರಾಗಿ ರಣಾಂಗಣದಲ್ಲಿ ಹತರಾಗಿ ಹೋದರೆಂದೇ ಭಾವಿಸಿದರು.

ಆ ಸಮಯದಲ್ಲಿ ದಶಾರ್ಹನಾಥನಾದ ಶ್ರೀಕೃಷ್ಣನು ಅರ್ಜುನನೊಡನೆ ಹೇಳಿದನು:

"ಅರ್ಜುನ! ನೀನು ಪ್ರಮಾದವನ್ನೇಕೆ ಮಾಡುತ್ತಿರುವೆ? ಈ ಯೋಧನನ್ನು ಈಗಲೇ ಸಂಹರಿಸು. ಇವನನ್ನು ನೀನು ಉಪೇಕ್ಷಿಸಿದ್ದೇ ಆದರೆ ಇನ್ನೂ ಅನೇಕಾಪರಾಧಗಳನ್ನೂ ಇವನು ಮಾಡಿಬಿಡುವನು. ವ್ಯಾಧಿಗೆ ಸರಿಯಾದ ಕಾಲದಲ್ಲಿ ಚಿಕಿತ್ಸೆಮಾಡದಿದ್ದರೆ ರೋಗವು ಉಲ್ಬಣವಾಗುವಂತೆ– ನೀನಿವನನ್ನು ಉಪೇಕ್ಷೆಮಾಡಿದ್ದೇ ಆದರೆ ಮುಂದೆ ಇವನಿಂದ ನಮಗೆ ಅನೇಕ ಕಷ್ಟಗಳೇ ಪ್ರಾಪ್ತವಾಗುತ್ತವೆ."

ಮಹಾರಾಜ! ಶ್ರೀಕೃಷ್ಣನಿತ್ತ ಸಲಹೆಯನ್ನು 'ತಥಾಸ್ತು' ಎಂಬ ಪ್ರತಿವಚನದೊಡನೆ ಅಂಗೀಕರಿಸಿ ಪ್ರಮಾದರಹಿತನಾದ ಅರ್ಜುನನು ಅಶ್ವತ್ಥಾಮನನ್ನು ಪ್ರಯತ್ನಪೂರ್ವಕವಾಗಿ ಬಾಣಗಳಿಂದ ಗಾಯಗೊಳಿಸಿದನು. ಶ್ರೇಷ್ಠವಾದ ಚಂದನಸಾರದಿಂದ ಸುಲೇಪಿತವಾದ ಭುಜಗಳನ್ನೂ, ವಕ್ಷಃಸ್ಥಳವನ್ನೂ, ಶಿರಸ್ಸನ್ನೂ, ಅಪ್ರತಿಮವಾದ ಅವನ ತೊಡೆಗಳನ್ನೂ ಬಾಣ ಗಳಿಂದ ಗಾಯಗೊಳಿಸಿದನು. ಕುಪಿತನಾದ ಅರ್ಜುನನು ಗಾಂಡೀವ ಧನುಸ್ಸಿನಿಂದ ಪ್ರಮುಕ್ತವಾದ, ಕುರಿಯ ಕಿವಿಯಂತಹ ಅಗ್ರಭಾಗಗಳನ್ನು ಹೊಂದಿದ್ದ ಬಾಣಗಳಿಂದ ಅಶ್ವತ್ಥಾಮನ ಎಲ್ಲ ಅಂಗಗಳನ್ನೂ ಭೇದಿಸಿದನು. ಸಾರಥಿಯು ಹಿಡಿದಿದ್ದ ಕಡಿವಾಣದ ಹಗ್ಗವನ್ನು ಕತ್ತರಿಸಿ ಅರ್ಜುನನು ಕುದುರೆಗಳನ್ನೂ ಗಾಯಗೊಳಿಸಿದನು. ಅದರಿಂದಾಗಿ ಅನಿಯಂತ್ರಿತವಾದ ಕುದುರೆಗಳು ಅಶ್ವತ್ಥಾಮನು ಕುಳಿತಿದ್ದ ರಥವನ್ನೆಳೆದುಕೊಂಡು ಬಹಳ

ದೂರಕ್ಕೆ ಹೊರಟುಹೋದುವು. ವಾಯುವೇಗಸಮಾನಗತಿಯಿಂದ ಕೂಡಿದ್ದ ಆ ಕುದುರೆಗಳಿಂದ ಬಹಳ ದೂರಕ್ಕೆ ಒಯ್ಯಲ್ಪಟ್ಟ ಮತ್ತು ಅರ್ಜುನನ ಬಾಣಗಳಿಂದ ಗಾಢವಾಗಿ ಗಾಯಗೊಂಡಿದ್ದ, ವಿಚಾರವಂತನಾದ ಅಶ್ವತ್ಥಾಮನು ಬಹಳ ಹೊತ್ತು ಯೋಚಿಸಿದನು. ವೃಷ್ಣಿವೀರನಾದ ಶ್ರೀಕೃಷ್ಣನಲ್ಲಿ ಮತ್ತು ಧನಂಜಯನಲ್ಲಿ ಜಯವು ನಿಯತವಾಗಿದೆಯೆಂಬುದನ್ನು ವಿಮರ್ಶೆಯಿಂದ ತಿಳಿದುಕೊಂಡು ಅಂಗಿರಸಗೋತ್ರೋದ್ಭವರಲ್ಲಿ ಶ್ರೇಷ್ಠನಾದ ಅಶ್ವತ್ಥಾಮನು ಪುನಃ ರಣಾಂಗಣಕ್ಕೆ ಹಿಂದಿರುಗಿ ಅರ್ಜುನನೊಡನೆ ಯುದ್ಧಮಾಡುವುದನ್ನು ಇಚ್ಛಿಸಲಿಲ್ಲ. ಬಳಿಕ ಅಶ್ವತ್ಥಾಮನು ರಥದ ಕುದುರೆಗಳನ್ನು ತಡೆಹಿಡಿದು ಅವುಗಳನ್ನು ಸಮಾಧಾನಗೊಳಿಸಿ, ಅನಂತರ ರಥಾಶ್ವ-ಪದಾತಿಗಳಿಂದ ಕೂಡಿದ್ದ ಕರ್ಣನ ಸೈನ್ಯವನ್ನು ಪ್ರವೇಶಿಸಿದನು.

ಮಂತ್ರೌಷಧಚಿಕಿತ್ಸೆಗಳಿಂದಲೂ ಮತ್ತು ದೈವಯೋಗದಿಂದಲೂ ಶರೀರದಲ್ಲಿರುವ ರೋಗವು ಪರಿಹಾರವಾಗುವಂತೆ–ಪ್ರತಿಕೂಲಕಾರ್ಯಕಾರಿಯಾದ ಅಶ್ವತ್ಥಾಮನು ತನ್ನ ಕುದುರೆಗಳಿಂದಲೇ ರಣಾಂಗಣದಿಂದ ಬಹಳದೂರಕ್ಕೆ ಒಯ್ಯಲ್ಪಟ್ಟನಂತರ–ಕೇಶವಾರ್ಜುನರು ಗಾಳಿಯಿಂದ ಫರ-ಫರನೆ ಹಾರಾಡುತ್ತಿದ್ದ ಪತಾಕೆಯಿಂದಲೂ, ಜಲಪ್ರವಾಹದ ಶಬ್ದದಂತೆ ಗಂಭೀರವಾದ ಶಬ್ದದಿಂದಲೂ ಕೂಡಿದ್ದ ರಥದ ಮೂಲಕವಾಗಿ ಸಂಶಪ್ತಕರಿಗೆ ಅಭಿಮುಖವಾಗಿ ತೆರಳಿದರು.”

೧೭ನೆಯ ಅಧ್ಯಾಯವು ಮುಗಿಯಿತು.

೧೮ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಅರ್ಜುನನು ದಂಡಧಾರನನ್ನೂ ಮತ್ತು ದಂಡನನ್ನೂ ಸಂಹರಿಸಿದುದು

ಸಂಜಯನು ಮುಂದಿನ ಯುದ್ಧವಾರ್ತೆಯನ್ನು ಹೇಳಲು ಉಪಕ್ರಮಿಸುತ್ತಾನೆ:

“ಮಹಾರಾಜ! ಅನಂತರ ಪಾಂಡವರ ಸೈನ್ಯದ ಉತ್ತರಭಾಗದಲ್ಲಿ *ದಂಡಧಾರನಿಂದ ವಧಿಸಲ್ಪಡುತ್ತಿದ್ದ ರಥ-ಗಜಾಶ್ವ-ಪದಾತಿಸೈನಿಕರ ಆರ್ತನಾದವು ಕೇಳಿಬಂದಿತು. ರಥವನ್ನು ಸಂಶಪ್ತಕರ ಕಡೆಯಿಂದ ಹಿಂದಿ

* ದಂಡಧಾರನೆಂಬುವವನು ಮಗಧದೇಶದ ಒಬ್ಬ ಕ್ಷತ್ರಿಯರಾಜನು. ಇವನು ಕ್ರೋಧವರ್ಧನ ಎಂಬ ಹೆಸರಿನ ರಾಕ್ಷಸನ ಅಂಶದಿಂದ ಹುಟ್ಟಿದವನು.

ರುಗಿಸಿದನಂತರ ಕೇಶವನು ಗರುಡ ಮತ್ತು ವಾಯುಗಳ ವೇಗದಿಂದ ಕೂಡಿದ್ದ ಕುದುರೆಗಳನ್ನು ಚಪ್ಪರಿಸುತ್ತಾ (ಮುಂದೆ ನಡೆಸುತ್ತಾ) ಅರ್ಜುನನೊಡನೆ ಹೇಳಿದನು:

"ಅರ್ಜುನ! ಮಗಧದೇಶದ ಈ ದಂಡಧಾರನು ಮಹಾಪರಾಕ್ರಮೀ. ಇವನ ಬಳಿಯಲ್ಲಿ ಶತ್ರುಗಳನ್ನು ಮಥಿಸುವ ಆನೆಯೂ ಇದೆ. ಯುದ್ಧ ಶಿಕ್ಷಣದಲ್ಲಿಯೂ ಮತ್ತು ಬಲದಲ್ಲಿಯೂ ಇವನು ಭಗದತ್ತನಿಗೇನೂ ಕಡಿಮೆಯವನಲ್ಲ. ಇವನನ್ನು ಸಂಹರಿಸಿದನಂತರವೇ ನೀನು ಸಂಶಪ್ತಕರನ್ನು ಸಂಹರಿಸುವೆಯಂತೆ"–ಎಂದು ಹೇಳಿ ಮಾತನ್ನು ಮುಗಿಸುವ ಸಮಯಕ್ಕೆ ಸರಿಯಾಗಿ ಶ್ರೀಕೃಷ್ಣನು ಅರ್ಜುನನನ್ನು ದಂಡಧಾರನ ಸಮೀಪಕ್ಕೊಯ್ದನು.

**ಸ ಮಾಗಧಾನಾಂ ಪ್ರವರೋಽಙ್ಕುಶಗ್ರಹೇ**
**ಗ್ರಹೇಽಪ್ರಸಹ್ಯೋ ವಿಕಚೋ ಯಥಾ ಗ್ರಹಃ ।**
**ಸಪತ್ನಸೇನಾಂ ಪ್ರಮಮಾಥ ದಾರುಣೋ**
**ಮಹೀಂ ಸಮಗ್ರಾಂ ವಿಕಚೋ ಯಥಾ ಗ್ರಹಃ ॥೫॥**

ಮಗಧರಲ್ಲಿ ಶ್ರೇಷ್ಠನಾದ ದಂಡಧಾರನು ಅಂಕುಶಗ್ರಹಣದಲ್ಲಿ ಮತ್ತು ತನ್ಮೂಲಕವಾಗಿ ಆನೆಯನ್ನು ನಿಯಂತ್ರಿಸುವುದರಲ್ಲಿ ಅದ್ವಿತೀಯನು. ಮೇಘ ದಿಂದ ಆವೃತನಾಗದೇ ಇರುವ ಸೂರ್ಯನು ತನ್ನ ಪ್ರಖರವಾದ ಕಿರಣಗಳಿಂದ ಸಹಿಸಲು ಅಸಾಧ್ಯನಾಗುವಂತೆ-ದಂಡಧಾರನೂ ಸಹ ತನ್ನ ಪರಾಕ್ರಮದಿಂದ ಶತ್ರುಗಳಿಗೆ ಸಹಿಸಲು ಅಸಾಧ್ಯನಾಗಿದ್ದನು. ಮೋಡಗಳಿಂದ ವಿಹೀನನಾದ, ದಾರುಣವಾದ ಕಿರಣಗಳನ್ನೂ ಹೊಂದಿರುವ ಪ್ರಳಯಕಾಲದ ಸೂರ್ಯನು ಸಮಗ್ರಭೂಮಂಡಲವನ್ನೂ ಧ್ವಂಸಮಾಡಿಬಿಡುವಂತೆ–ದಂಡಧಾರನು ಶತ್ರುಗಳ ಸೈನ್ಯವನ್ನು ಮಥಿಸಿಬಿಟ್ಟನು.*

ಅವನು ಕುಳಿತಿದ್ದ ಸಲಗವು ಸಕಲವಿಧವಾದ ಯುದ್ಧಸಾಮಗ್ರಿ

---

ವ್ಯಾಖ್ಯಾನಕಾರರು: **ಗ್ರಹೇ= ಆದಿತ್ಯಾದಿಗ್ರಹಸಮೂಹೇ ವಿಕಚಃ ಕಚೋಪಲಕ್ಷಿತ ಶಿರೋರಹಿತಃ ಕೇತುರೂಪೀ ಗ್ರಹ ಇವ ಅಪ್ರಸಹ್ಯಃ।** ಆದಿತ್ಯಾದಿ ಗ್ರಹಗಳ ಸಮೂಹದಲ್ಲಿ ಕಚೋಪಲಕ್ಷಿತವಾದ ಶಿರಸ್ಸಿನಿಂದ ವಿಹೀನನಾದ ಕೇತುಗ್ರಹವು (ಗ್ರಹದ ಪ್ರಭಾವವು) ಸಹಿಸಿಕೊಳ್ಳಲು ಅಸಾಧ್ಯವಾಗಿರುವಂತೆ ದಂಡಧಾರನು ಸಹಿಸಲು ಅಸಾಧ್ಯನಾಗಿದ್ದನು.

ಗಳಿಂದಲೂ ಸಜ್ಜಾಗಿದ್ದಿತು; ಗಜಾಸುರನಿಗೆ ಸಮಾನವಾದ ಬಲವನ್ನು ಹೊಂದಿದ್ದಿತು; ಮಹಾಮೇಘದ ಗರ್ಜನೆಗೆ ಅನುರೂಪವಾಗಿ ಗರ್ಜಿಸುತ್ತಿದ್ದಿತು ಮತ್ತು ಶತ್ರುಗಳನ್ನು ಧ್ವಂಸಮಾಡುತ್ತಿದ್ದಿತು. ಅಂತಹ ಮಹಾಗಜದ ಮೇಲೆ ಕುಳಿತಿದ್ದ ದಂಡಧಾರನು ಬಾಣಗಳಿಂದ ರಥಾಶ್ವ-ಗಜಗಳ ಸಮೂಹಗಳನ್ನೂ, ಪದಾತಿಗಳನ್ನೂ ಸಾವಿರಾರು ಸಂಖ್ಯೆಯಲ್ಲಿ ಸಂಹರಿಸುತ್ತಿದ್ದನು. ಕಾಲಚಕ್ರದೋಪಾದಿಯಲ್ಲಿ ದಂಡಧಾರನ ಆ ಮದ್ದಾನೆಯು ಶತ್ರುರಥಗಳ ಮೇಲೆ ತನ್ನೆರಡು ಕಾಲುಗಳನ್ನೂ ಇಟ್ಟುಕೊಂಡು ರಥದಲ್ಲಿರುತ್ತಿದ್ದ ಯೋಧರನ್ನೂ, ಸಾರಥಿಗಳನ್ನೂ, ಅಶ್ವಗಳನ್ನೂ ಕಾಲಿನಿಂದ ತುಳಿದು ಸೊಂಡಿಲಿನಿಂದಲೂ ಎತ್ತಿ ಕೆಳಕ್ಕೆ ಕುಕ್ಕಿ ಸಂಹರಿಸುತ್ತಿದ್ದಿತು. ಪದಾತಿಸೈನಿಕರನ್ನು ಕಾಲುಗಳಿಂದಲೇ ತುಳಿದು ಧ್ವಂಸಮಾಡುತ್ತಿದ್ದಿತು. ತನ್ನ ಎದುರಾಗಿ ಬಂದ ಶತ್ರುಪಕ್ಷದ ಆನೆಗಳನ್ನೂ ಸಹ ಕಾಲುಗಳಿಂದಲೂ ಸೊಂಡಿಲಿನಿಂದಲೂ ಧ್ವಂಸಮಾಡುತ್ತಿದ್ದಿತು. ದಂಡಧಾರನು ತನ್ನ ಶ್ರೇಷ್ಠವಾದ ಮತ್ತು ಬಲಿಷ್ಠವಾದ ಆನೆಯ ಮೂಲಕವಾಗಿ ಲೋಹದ ಕವಚಗಳಿಂದ ಭೂಷಿತರಾಗಿದ್ದ ಕುದುರೆಗಳಿಂದ ಕೂಡಿದ್ದ ಸವಾರರನ್ನೂ ಮತ್ತು ಪದಾತಿಗಳನ್ನೂ ಕೆಳಕ್ಕೆ ಬೀಳಿಸಿ ತುಳಿಸುತ್ತಿದ್ದನು. ಆ ಆನೆಯು ಲೋಹದ ಕವಚಗಳನ್ನು ಧರಿಸಿದ್ದ ಅಶ್ವಾರೋಹಿಗಳನ್ನೂ, ಪದಾತಿಗಳನ್ನೂ ತುಳಿಯುತ್ತಿದ್ದಾಗ ಉಂಟಾಗುತ್ತಿದ್ದ ಶಬ್ದವು–ಆನೆಗಳು ದೊಡ್ಡದಾದ ಲಾಳದ ಕಾಡನ್ನು ತುಳಿದುಕೊಂಡು ಹೋಗುವಾಗ ಉಂಟಾಗುವ ಶಬ್ದದಂತೆಯೇ ಇದ್ದಿತು.

ಧನುಷ್ಟೇಂಕಾರಗಳಿಂದಲೂ, ರಥಚಕ್ರಗಳ ಗಡ-ಗಡಾಶಬ್ದಗಳಿಂದಲೂ ನಿನಾದಿತವಾಗಿದ್ದ, ಅನೇಕ ಭೇರಿ-ಮೃದಂಗ-ಶಂಖಧ್ವನಿಗಳಿಂದ ನಿನಾದಿತವಾಗಿದ್ದ, ಸಾವಿರಾರು ರಥಾಶ್ವ-ಗಜಸೈನಿಕರಿಂದ ಸಮಾಕುಲವಾಗಿದ್ದ ಸಮರಾಂಗಣದಲ್ಲಿ, ಅರ್ಜುನನು ಉತ್ತಮವಾದ ರಥದಲ್ಲಿ ಕುಳಿತು

---

ವಿಕಚಃ=ವಿಸ್ತೀರ್ಣೋ ಗ್ರಹಃ, ಧೂಮಕೇತುರೂಪೀ ಉತ್ಪಾತ ಗ್ರಹ ಇವ. ವಿಸ್ತೀರ್ಣವಾದ ಧೂಮಕೇತುರೂಪವಾದ ಉತ್ಪಾತಗ್ರಹದಂತೆ (ಉತ್ಪಾತಗ್ರಹವು ಸರ್ವನಾಶಕವಾಗುವಂತೆ) ದಂಡಧಾರನು ಶತ್ರುಗಳ ಕಡೆಯ ಎಲ್ಲ ಸೈನಿಕರನ್ನೂ ಧ್ವಂಸಮಾಡುತ್ತಿದ್ದನು.

.ಕಚ ಎಂದರ ಮೇಘ. ವಿಕಚಃ ಎಂದರೆ ಮೇಘದಿಂದ ರಹಿತನಾದ, ಗ್ರಹಃ ಎಂದರೆ ಸೂರ್ಯ. ಈ ಅರ್ಥವನ್ನು ಇಟ್ಟುಕೊಂಡು ನಾವು ಅನುವಾದಮಾಡಿರುತ್ತೇವೆ. ಎರಡು ಪರ್ಯಾಯಗಳಲ್ಲಿಯೂ ಇದೇ ಅರ್ಥವೇ ಸಮಂಜಸವಾಗಿಯೇ ಕಾಣುತ್ತದೆ.

ದಂಡಧಾರನ ಆನೆಯನ್ನು ಆಕ್ರಮಿಸಿದನು. ಅರ್ಜುನನು ತನ್ನೆದುರಾಗಿ ಬಂದೊಡನೆಯೇ ದಂಡಧಾರನು ಶ್ರೇಷ್ಠವಾದ ಹನ್ನೆರಡು ಬಾಣಗಳಿಂದ ಅವನನ್ನು ಪ್ರಹರಿಸಿ ಜನಾರ್ದನನನ್ನು ಹದಿನಾರು ಬಾಣಗಳಿಂದಲೂ, ಅವನು ನಿಯಂತ್ರಿಸುತ್ತಿದ್ದ ಕುದುರೆಗಳನ್ನು ಮೂರು-ಮೂರು ಬಾಣಗಳಿಂದಲೂ ಪ್ರಹರಿಸಿ, ಹಲವು ಬಾರಿ ಗರ್ಜಿಸುತ್ತಾ ಅಟ್ಟಹಾಸದಿಂದ ಗಹ-ಗಹಿಸಿ ನಗುತ್ತಿದ್ದನು.



ಅದರಿಂದ ಕುಪಿತನಾದ ಅರ್ಜುನನು ತನ್ನ ಭಲ್ಲಗಳಿಂದ ಮೌರ್ವೀ ಮತ್ತು ಬಾಣಗಳಿಂದ ಯುಕ್ತವಾಗಿದ್ದ ದಂಡಧಾರನ ಧನುಸ್ಸನ್ನೂ, ಸಮಲಂಕೃತವಾಗಿದ್ದ ಅವನ ಧ್ವಜವನ್ನೂ ಕತ್ತರಿಸಿದನು. ಅನಂತರ ಆನೆಯ ಮೇಲೆ ಕುಳಿತಿದ್ದ ಮಾವಟಿಗರನ್ನೂ ಮತ್ತು ಪಾದರಕ್ಷಕರನ್ನೂ ಸಂಹರಿಸಿ

ದನು. ಅದರಿಂದ ಗಿರಿವ್ರಜೇಶ್ವರನಾದ ದಂಡಧಾರನು ಅತ್ಯಂತಕುಪಿತ ನಾದನು. ಕುಂಭಸ್ಥಳದಿಂದ ಮದೋದಕವನ್ನು ಸುರಿಸುತ್ತಿದ್ದ, ವಾಯುವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ, ಸುತೀಕ್ಷ್ಣವಾದ ದಂತಗಳನ್ನು ಹೊಂದಿದ್ದ ಮದಿಸಿದ ಆನೆಯಿಂದ (ಆನೆಯ ಮೂಲಕವಾಗಿ) ಕೃಷ್ಣಾರ್ಜುನ ರನ್ನು ಕ್ಷೋಭೆಗೊಳಿಸುವ ಇಚ್ಛೆಯಿಂದ ಕೂಡಿದ್ದ ದಂಡಧಾರನು ಜನಾರ್ದನ ನನ್ನೂ ಮತ್ತು ಅರ್ಜುನನನ್ನೂ ತೋಮರಗಳಿಂದ ಪ್ರಹರಿಸಿದನು. ಮರುಕ್ಷಣದಲ್ಲಿಯೇ ಅರ್ಜುನನು ಆನೆಯ ಸೊಂಡಿಲಿಗೆ ಸಮಾನವಾಗಿದ್ದ ದಂಡಧಾರನ ಎರಡು ತೋಳುಗಳನ್ನೂ, ಪೂರ್ಣಚಂದ್ರಸದೃಶವಾಗಿದ್ದ ಅವನ ಶಿರಸ್ಸನ್ನೂ ಕ್ಷುರಗಳೆಂಬ ಮೂರು ಬಾಣಗಳಿಂದ ಒಂದೇ ಬಾರಿಗೆ ಕತ್ತರಿಸಿದನು. ಅನಂತರ ದಂಡಧಾರನ ಆನೆಯನ್ನೂ ನೂರಾರು ಬಾಣಗಳಿಂದ ಪ್ರಹರಿಸಿದನು. ಚಿನ್ನದ ಮೂಲಭಾಗಗಳಿಂದ ಸಮಲಂಕೃತವಾಗಿದ್ದ, ಅರ್ಜುನನ ಬಾಣಗಳಿಂದ ಚುಚ್ಚಲ್ಪಟ್ಟ, ಸುವರ್ಣಮಯವಾದ ಕವಚವನ್ನು ಹೊಂದಿದ್ದ ದಂಡಧಾರನ ಆನೆಯು–ರಾತ್ರಿಯ ವೇಳೆಯಲ್ಲಿ ದಾವಾಗ್ನಿ ಯಿಂದ ಹೊತ್ತಿಕೊಂಡು ಉರಿಯುತ್ತಿರುವ ಓಷಧಿಲತೆಗಳಿಂದಲೂ ಮತ್ತು ವೃಕ್ಷಗಳಿಂದಲೂ ಯುಕ್ತವಾದ ಪರ್ವತದಂತೆಯೇ ಪ್ರಕಾಶಿಸುತ್ತಿದ್ದಿತು. ಅರ್ಜುನನ ಬಾಣಗಳ ಪ್ರಹಾರದಿಂದುಂಟಾದ ಗಾಯಗಳ ನೋವಿನಿಂದ ಸಂಕಟಪಡುತ್ತಿದ್ದ ಆನೆಯು ಮೇಘದ ಗರ್ಜನೆಗೆ ಸಮಾನವಾಗಿ ಚೀತ್ಕಾರ ಮಾಡುತ್ತಾ ಎಲ್ಲ ಕಡೆಗಳಲ್ಲಿಯೂ ತಿರುಗುತ್ತಾ ನಡು-ನಡುವೆ ತತ್ತರಿಸಿ ಬೀಳುತ್ತಾ ಓಡಿಹೋಗುತ್ತಿದ್ದಿತು. ಆದರೆ ಬಾಣಗಳು ಶರೀರದಲ್ಲಿ ಬಹಳ ಆಳವಾಗಿ ನೆಟ್ಟಿದ್ದುದರಿಂದ ಮುಂದೆ ಓಡಿಹೋಗಲಾರದೇ–ವಜ್ರಾಯುಧ ದಿಂದ ಸೀಳಲ್ಪಟ್ಟ ಪರ್ವತದಂತೆ–ಮಾವಟಿಗನ ಸಮೇತವಾಗಿ ನೆಲದ ಮೇಲೆ ಬಿದ್ದಿತು. ಅಣ್ಣನಾದ ದಂಡಧಾರನು ಹತನಾಗಲಾಗಿ, ಅವನ ತಮ್ಮನಾದ ದಂಡನು ಇಂದ್ರನ ತಮ್ಮನಾದ ಶ್ರೀಕೃಷ್ಣನನ್ನೂ ಮತ್ತು ಅರ್ಜುನನನ್ನೂ ಸಂಹರಿಸುವ ಇಚ್ಛೆಯಿಂದ ಹಿಮದಂತೆ ಶುಭ್ರವಾಗಿದ್ದ ಸುವರ್ಣಮಾಲೆಯನ್ನು ಹೊಂದಿದ್ದ, ಹಿಮವತ್ಪರ್ವತದ ಶಿಖರದೋಪಾದಿ ಯಲ್ಲಿದ್ದ ಆನೆಯನ್ನೇರಿ ಅರ್ಜುನನ ಬಳಿಗೆ ಬಂದನು. ಅಣ್ಣನ ವಧೆ ಯಿಂದ ಅತ್ಯಂತಕುಪಿತನಾಗಿದ್ದ ದಂಡನು ಸೂರ್ಯಕಿರಣಗಳಂತೆ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿದ್ದ ಮೂರು ತೋಮರಗಳಿಂದ

ಜನಾರ್ದನನನ್ನೂ-ನಿಶಿತವಾದ ಐದು ತೋಮರಗಳಿಂದ ಅರ್ಜುನನನ್ನೂ ಪ್ರಹರಿಸಿ ಗಟ್ಟಿಯಾಗಿ ಗರ್ಜಿಸಿದನು. ದಂಡನು ಹೆಚ್ಚು ಗರ್ಜಿಸಲು ಅವಕಾಶವಾಗದಂತೆ ಅರ್ಜುನನು ಅವನ ಎರಡು ತೋಳುಗಳನ್ನೂ ಮರುಕ್ಷಣದಲ್ಲಿಯೇ ಕತ್ತರಿಸಿಬಿಟ್ಟನು. ಅರ್ಜುನನ ಕ್ಷುರವೆಂಬ ಬಾಣಗಳಿಂದ ಕತ್ತರಿಸಲ್ಪಟ್ಟ, ಅಂಗದಗಳಿಂದ ಸಮಲಂಕೃತವಾಗಿದ್ದ, ಚಂದನದಿಂದ ಲೇಪಿತವಾಗಿದ್ದ, ತೋಮರಸಹಿತವಾಗಿದ್ದ, ವಿಶಾಲವಾದ ಆ ಭುಜಗಳು ಆನೆಯ ಮೇಲಿಂದ ಬೀಳುತ್ತಿದ್ದಾಗ–ಪರ್ವತದ ಮೇಲಿಂದ ಬೀಳುತ್ತಿರುವ ಸುಂದರವಾದ ಎರಡು ಸರ್ಪಗಳಂತೆಯೇ ಪ್ರಕಾಶಿಸಿದುವು. ಅದೇ ರೀತಿಯಲ್ಲಿ ಅರ್ಜುನನ ಅರ್ಧಚಂದ್ರವೆಂಬ ಬಾಣದಿಂದ ಕತ್ತರಿಸಲ್ಪಟ್ಟ ದಂಡನ ಶಿರಸ್ಸೂ ಆನೆಯ ಮೇಲಿಂದ ನೆಲಕ್ಕೆ ಬಿದ್ದಿತು. ಬೀಳುತ್ತಿದ್ದ ರಕ್ತಸಿಕ್ತವಾಗಿದ್ದ ಆ ಶಿರಸ್ಸು-ಸೂರ್ಯನು ಅಸ್ತಾಚಲದಿಂದ ಪಶ್ಚಿಮದಿಕ್ಕಿಗೆ ಬೀಳುತ್ತಿರುವಂತೆಯೇ ಪ್ರಕಾಶಿಸಿತು. ದಂಡನನ್ನು ಸಂಹರಿಸಿದನಂತರ ಅರ್ಜುನನು ಬಿಳಿಯದಾದ, ಮಹಾಮೇಘಸಮಾನವಾಗಿದ್ದ ದಂಡನ ಆನೆಯನ್ನು ಸೂರ್ಯನ ಕಿರಣಗಳಿಗೆ ಸಮಾನವಾಗಿದ್ದ ಶ್ರೇಷ್ಠವಾದ ಬಾಣಗಳಿಂದ ಭೇದಿಸಿದನು. ಆ ಮಹಾಶ್ವೇತಗಜವು ಚೀತ್ಕಾರಮಾಡುತ್ತಾ ವಜ್ರಾಯುಧದಿಂದ ಪ್ರಹೃತವಾದ ಹಿಮವತ್ಪರ್ವತದ ಶಿಖರದಂತೆ ನೆಲದ ಮೇಲೆ ಬಿದ್ದಿತು.

ಅನಂತರ ದಂಡನ ಶ್ವೇತಗಜಸದೃಶವಾಗಿದ್ದ ಇತರ ಮಹಾಗಜಗಳೂ ದುರ್ಯೋಧನನಿಗೆ ವಿಜಯವನ್ನು ಗಳಿಸಿಕೊಡುವ ಇಚ್ಛೆಯಿಂದ ಅರ್ಜುನನ ಮೇಲೆ ಎರಗಿಬಂದುವು. ಅರ್ಜುನನು ಅವುಗಳಿಗೂ ಸಹ ದಂಡ-ದಂಡಧಾರರ ಆನೆಗಳ ಗತಿಯನ್ನೇ ಕಾಣಿಸಿದನು. ಅದರಿಂದಾಗಿ ದೊಡ್ಡದಾಗಿದ್ದ ಶತ್ರುಗಳ ಸೈನ್ಯವು ಭಗ್ನವಾಗಿಹೋಯಿತು. ಆನೆಗಳೂ, ರಥಗಳೂ, ಕುದುರೆಗಳೂ, ಪದಾತಿಗಳೂ ಗುಂಪು-ಗುಂಪುಗಳಾಗಿ ಸೇರಿಕೊಂಡು ಪರಸ್ಪರವಾಗಿ ಕಾದಾಡುತ್ತಾ ಒಬ್ಬರು ಮತ್ತೊಬ್ಬರ ಮೇಲೆ ಬೀಳುತ್ತಿದ್ದರು. ಪರಸ್ಪರವಾಗಿ ಯುದ್ಧಮಾಡುತ್ತಿದ್ದ ಸೈನಿಕರು ಗಾಯಗೊಂಡು ತತ್ತರಿಸುತ್ತಾ ಮನಸ್ಸಿಗೆ ಬಂದಂತೆ ಕೂಗಿಕೊಳ್ಳುತ್ತಾ ಕೆಳಕ್ಕೆಬಿದ್ದು ಅಸುನೀಗಿದರು. ದೇವತೆಗಳು ಇಂದ್ರನನ್ನು ಸುತ್ತುವರಿದು ನಿಲ್ಲುವಂತೆ–

ಪಾಂಡವರ ಕಡೆಯ ಸೈನಿಕರು ಅರ್ಜುನನನ್ನು ಸುತ್ತುವರಿದು ನಿಂತು ಹೀಗೆ ಹೇಳಿದರು:

**ಅಭೈಷ್ಮ ಯಸ್ಮಾನ್ಮರಣಾದಿವ ಪ್ರಜಾಃ।**
**ಸ ವೀರ ದಿಷ್ಟ್ಯಾ ನಿಹತಸ್ತ್ವಯಾ ರಿಪುಃ ॥೨೩॥**

"ಪ್ರಜೆಗಳು ಮರಣಕ್ಕೆ ಹೆದರುವಂತೆ–ನಾವು ದಂಡಧಾರನಿಗೆ ಹೆದರಿದ್ದೆವು. ಅಂತಹ ಶತ್ರುವನ್ನೂ ನೀನು ಅದೃಷ್ಟದ ಕಾರಣದಿಂದಲೇ ಸಂಹಾರಮಾಡಿರುವೆ.

**ನ ಚೇದರಕ್ಷಿಷ್ಯ ಇಮಂ ಜನಂ ಭಯಾ-**
**ದ್ವಿಷದ್ಭಿರೇವಂ ಬಲಿಭಿಃ ಪ್ರಪೀಡಿತಮ್।**
**ತಥಾಭವಿಷ್ಯದ್ದ್ವಿಷತಾಂ ಪ್ರಮೋದನಂ**
**ಯಥಾ ಹತೇಷ್ವೇಷ್ವಿಹ ನೋಽರಿಸೂದನ ॥೨೪॥**

ಶತ್ರುಸೂದನನೇ! ಬಲಿಷ್ಠರಾದ ಶತ್ರುಗಳಿಂದ ಪೀಡಿಸಲ್ಪಡುತ್ತಿದ್ದ ಈ ನಮ್ಮ ಜನರನ್ನು (ನಮ್ಮ ಸೈನಿಕರನ್ನು) ಭಯದಿಂದ ನೀನು ರಕ್ಷಿಸದೆಯೇ ಇದ್ದಿದ್ದರೆ ಅವರ ಸಂಹಾರದಿಂದಾಗಿ ಈಗ ನಮಗೆ ಉಂಟಾಗಿರುವ ಸಂತೋಷಕ್ಕೆ ಶತ್ರುಗಳೇ ಭಾಗಿಗಳಾಗುತ್ತಿದ್ದರು. (ನಾವು ದುಃಖದಲ್ಲಿಯೇ ಮುಳುಗಿಹೋಗುತ್ತಿದ್ದೆವು.)"

ಇವೇ ಮುಂತಾಗಿ ಸುಹೃದರಿಂದ ಹಲವು ಬಾರಿ ಹೇಳಲ್ಪಟ್ಟ ಮಾತುಗಳನ್ನು ಕೇಳಿ ಪ್ರಸನ್ನಮನಸ್ಕನಾದ, ಸಂಶಪ್ತಕರ ಹಂತಕನಾದ ಅರ್ಜುನನು ಯಥಾನುರೂಪವಾಗಿ ಆ ಜನರನ್ನು ಪುರಸ್ಕರಿಸಿ, ಪುನಃ ಸಂಶಪ್ತಕರೊಡನೆ ಯುದ್ಧಮಾಡಲು ಹೊರಟುಹೋದನು."

ಗಲನೆಯ ಅಧ್ಯಾಯವು ಮುಗಿಯಿತು.

## ಅರ್ಜುನನು ಸಂಶಪ್ತಕರನ್ನು ಸಂಹರಿಸಿದುದು: ಶ್ರೀಕೃಷ್ಣನು ಅರ್ಜುನನಿಗೆ ಯುದ್ಧಸ್ಥಳವನ್ನು ತೋರಿಸುತ್ತಾ ಅವನನ್ನು ಪ್ರಶಂಸಿಸಿದುದು: ಪಾಂಡ್ಯರಾಜನು ಕೌರವಸೇನೆಯೊಡನೆ ಯುದ್ಧಮಾಡಿದುದು

ಅರ್ಜುನನು ಸಂಶಪ್ತಕರೊಡನೆ ಮಾಡಿದ ಯುದ್ಧವನ್ನು ಸಂಜಯನು ವರ್ಣಿಸುತ್ತಾನೆ:

"ಮಹಾರಾಜ! ಯಾವ ರೀತಿಯಲ್ಲಿ ಮಂಗಳಗ್ರಹವು ವಕ್ರ ಮತ್ತು ಅತಿಚಾರಗತಿಗಳಿಂದ ಲೋಕಕ್ಕೆ ಅನಿಷ್ಟದಾಯಕವಾಗುತ್ತದೆಯೋ–ಅದೇ ರೀತಿಯಲ್ಲಿ ಅರ್ಜುನನು ಹಿಂದಿರುಗಿಬಂದು ವಕ್ರಾತಿವಕ್ರಗತಿಯಿಂದ ಅನೇಕ ಸಂಶಪ್ತಕರನ್ನು ಸಂಹರಿಸಿದನು. ಅರ್ಜುನನ ಬಾಣಗಳಿಂದ ಹತರಾದ ನರಾಶ್ವ-ರಥ-ಗಜಸೈನಿಕರು ವಿಚಲಿತರಾದರು; ಭ್ರಾಂತರಾದರು; ಕೆಳಕ್ಕೆ ಬಿದ್ದು ಧೂಳಿನಿಂದ ಧೂಸರಿತರಾದರು; ಕಟ್ಟಕಡೆಗೆ ಪ್ರಾಣಗಳನ್ನೂ ತೊರೆದರು. ಪಾಂಡುನಂದನನಾದ ಅರ್ಜುನನು ಭಲ್ಲ, ಕ್ಷುರ, ಅರ್ಧಚಂದ್ರ, ವತ್ಸದಂತ-ಇವೇ ಮುಂತಾದ ಅಸ್ತ್ರಗಳಿಂದ ಸಮರಾಂಗಣದಲ್ಲಿ ಎದುರಾಗಿ ಯುದ್ಧಕ್ಕೆ ಬಂದ ಶತ್ರುಪಕ್ಷದ ರಥಗಳಲ್ಲಿದ್ದ ಕುದುರೆಗಳನ್ನೂ, ಅವುಗಳ ಕಡಿವಾಣಗಳನ್ನು ಹಿಡಿದಿದ್ದ ಸಾರಥಿಗಳನ್ನೂ, ರಥದ ಧ್ವಜಗಳನ್ನೂ, ಯೋಧರು ಹಿಡಿದಿದ್ದ ಧನುಸ್ಸು, ಕತ್ತಿ ಮತ್ತು ಬಾಣಗಳನ್ನೂ, ಅವರ ಕೈಗಳನ್ನೂ, ಶಸ್ತ್ರಗಳನ್ನೂ, ಶತ್ರುಗಳ ಅನೇಕಾನೇಕ ಶಿರಸ್ಸುಗಳನ್ನೂ ಕತ್ತರಿಸಿ ಹಾಕಿದನು. ಅಲೆಬಂದ ಹಸುವಿನೊಡನೆ ಸಂಗಮಾಡಲು ಕಾತರಗೊಂಡ ಹೋರಿಗಳು ಹಸುವನ್ನು ಸಮೀಪಿಸಿದ ಹೋರಿಯೊಡನೆ ಕಾಳಗವಾಡು ವಂತೆ–ನೂರಾರು ಸಾವಿರಾರು ಸಂಖ್ಯೆಯಲ್ಲಿ ಶತ್ರುಪಕ್ಷದ ಶೂರರು ಅರ್ಜುನನ ಮೇಲೆ ಬಿದ್ದರು. ಮೂರು ಲೋಕಗಳನ್ನೂ ಜಯಿಸುವ ಕಾಲದಲ್ಲಿ ಇಂದ್ರನಿಗೂ ಮತ್ತು ದೈತ್ಯರಿಗೂ ಯುದ್ಧವು ನಡೆದ ರೀತಿಯಲ್ಲಿ-ಅರ್ಜುನನಿಗೂ ಮತ್ತು ಕುರುಯೋಧರಿಗೂ (ಸಂಶಪ್ತಕರಿಗೂ) ರೋಮಾಂಚಕರವಾದ ಯುದ್ಧವು ಪ್ರಾರಂಭವಾಯಿತು. ಆ ಸಮಯದಲ್ಲಿ ಉಗ್ರಾಯುಧನ ಮಗನು ಭಯಂಕರವಾದ ಸರ್ಪಗಳಂತಿದ್ದ ಮೂರು ಬಾಣಗಳಿಂದ ಅರ್ಜುನನನ್ನು ಪ್ರಹರಿಸಿದನು. ಮರುಕ್ಷಣದಲ್ಲಿಯೇ

ಅರ್ಜುನನು ಒಂದೇ ಒಂದು ಬಾಣದಿಂದ ಉಗ್ರಾಯುಧನ ಮಗನ ತಲೆಯನ್ನು ದೇಹದಿಂದ ಪ್ರತ್ಯೇಕಿಸಿದನು. ಅದರಿಂದ ಕ್ರುದ್ಧರಾದ ಅವನ ಸೈನಿಕರು-ವರ್ಷಾಕಾಲದಲ್ಲಿ ಗಾಳಿಯಿಂದ ಪ್ರೇರಿತವಾದ ಮೇಘಗಳು ಹಿಮವತ್ಪರ್ವತದ ಮೇಲೆ ಸತತವಾಗಿ ಮಳೆಗರೆಯುವಂತೆ–ನಾನಾವಿಧವಾದ ಶಸ್ತ್ರಾಸ್ತ್ರಗಳ ಸುರಿಸುವಿಕೆಯಿಂದ ಅರ್ಜುನನನ್ನು ಎಲ್ಲ ಕಡೆಗಳಿಂದಲೂ ಮುಚ್ಚಿದರು.

ಎಲ್ಲ ಕಡೆಗಳಿಂದಲೂ ತನ್ನ ಮೇಲೆ ವೃಷ್ಟಿರೂಪದಲ್ಲಿ ಬೀಳುತ್ತಿದ್ದ ಅಸ್ತ್ರಗಳನ್ನು ಅಸ್ತ್ರಪ್ರಯೋಗದಿಂದಲೇ ನಿವಾರಣೆಮಾಡಿಕೊಂಡ ಅರ್ಜುನನು ಸುಪ್ರಮುಕ್ತವಾದ ಅನೇಕಬಾಣಗಳಿಂದ ತನ್ನ ಎದುರಾಗಿ ನಿಂತು ಯುದ್ಧ ಮಾಡುತ್ತಿದ್ದ ಶತ್ರುಸೈನಿಕರನ್ನು ಕೊಂದನು. ಅರ್ಜುನನು ತನ್ನ ಬಾಣಗಳಿಂದ ಸಂಶಪ್ತಕರ ರಥಗಳನ್ನು ಛಿನ್ನ-ಭಿನ್ನಮಾಡಿದನು. ರಥಗಳ ತ್ರಿವೇಣು ಸಮೂಹಗಳನ್ನು ಕತ್ತರಿಸಿದನು. ಯೋಧರ ಕೈಚೀಲಗಳು ಮತ್ತು ತೂಣೀರಗಳು ಜಾರಿ ಕೆಳಗೆ ಬೀಳುವಂತೆ ಮಾಡಿದನು. ರಥಗಳನ್ನು ಚಕ್ರ-ಧ್ವಜ ರಹಿತವನ್ನಾಗಿ ಮಾಡಿದನು. ಕುದುರೆಗಳ ಕಡಿವಾಣಗಳನ್ನೂ, ನೊಗಕ್ಕೆ ಕಟ್ಟಿದ್ದ ಹಗ್ಗಗಳನ್ನೂ ಮತ್ತು ರಥಗಳ ಅಚ್ಚುಮರಗಳನ್ನೂ ಕತ್ತರಿಸಿದನು. ತೋಳುಮರಗಳನ್ನೂ ಮೂಕಿಗಳನ್ನೂ ಕತ್ತರಿಸಿದನು. ಈ ರೀತಿಯಲ್ಲಿ ಸಂಶಪ್ತಕರ ರಥಗಳೆಲ್ಲವನ್ನೂ ಅರ್ಜುನನು ಇಡಿ-ಪುಡಿ ಮಾಡಿದನು. ಬಹುಸಂಖ್ಯಾತವಾಗಿದ್ದ ಮತ್ತು ಬಹುಮೂಲ್ಯವಾಗಿದ್ದ ಆ ರಥಗಳು ಅರ್ಜುನನಿಂದ ವಿಧ್ವಸ್ತವಾದುವುಗಳಾಗಿ ಅಗ್ನಿಯಿಂದಲೂ, ವಾಯುವಿನಿಂದಲೂ ಮತ್ತು ನೀರಿನಿಂದಲೂ ನಾಶಮಾಡಲ್ಪಟ್ಟ ಐಶ್ವರ್ಯವಂತರ ಸೌಧಗಳಂತೆಯೇ ಕಾಣುತ್ತಿದ್ದುವು. ವಜ್ರಾಯುಧಕ್ಕೂ ಮತ್ತು ಸಿಡಿಲಿಗೂ ಸಮಾನವಾಗಿದ್ದ ಬಾಣಗಳಿಂದ ಭಿನ್ನವಾದ ಕವಚವುಳ್ಳ ಆನೆಗಳು–ಸಿಡಿಲು, ಗಾಳಿ ಅಥವಾ ಬೆಂಕಿಯ ಅನಾಹುತಕ್ಕೆ ಸಿಕ್ಕಿದ ಪರ್ವತದ ಮೇಲಿರುವ ಮನೆಗಳು ಕುಸಿದು ಬೀಳುವಂತೆ–ಕುಸಿದು ಬಿದ್ದುವು. ಅರ್ಜುನನ ಬಾಣಗಳಿಂದ ಪ್ರಹೃತವಾದ ಸವಾರರಿಂದೊಡಗೂಡಿದ ಅನೇಕ ಕುದುರೆಗಳು ಬಲಗುಂದಿ ನೆಲದ ಮೇಲೆ ಬಿದ್ದಿದ್ದುವು. ಅವುಗಳ ನಾಲಿಗೆ ಮತ್ತು ಕರುಳುಗಳು ಹೊರಬಂದಿದ್ದುವು. ಅವು ರಕ್ತದಿಂದ ತೋಯ್ದುಹೋಗಿದ್ದುವು. ಆ ಸಮಯದಲ್ಲಿ ಅವುಗಳನ್ನು ನೋಡಲು

ಕೂಡ ಸಾಧ್ಯವಾಗುತ್ತಿರಲಿಲ್ಲ. ನರಾಶ್ವ-ಗಜಗಳು ಅರ್ಜುನನ ನಾರಾಚಗಳಿಂದ ಚುಚ್ಚಲ್ಪಟ್ಟುವುಗಳಾಗಿ ರಣಾಂಗಣದ ಸುತ್ತಲೂ ತಿರುಗುತ್ತಿದ್ದುವು; ತತ್ತರಿಸುತ್ತಿದ್ದುವು; ನೋವಿನಿಂದ ಕಿರುಚಿಕೊಳ್ಳುತ್ತಿದ್ದುವು; ಕೆಳಕ್ಕೆಬಿದ್ದು ಹೊರಳಾಡುತ್ತಿದ್ದುವು. ಬಾಡಿಹೋಗುತ್ತಿದ್ದುವು (ಸಾಯುತ್ತಿದ್ದುವು).



ಮಹೇಂದ್ರನು ದಾನವರನ್ನು ಪ್ರಹರಿಸುತ್ತಿದ್ದಂತೆ–ಪಾರ್ಥನು ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ವಜ್ರಾಯುಧ, ಸಿಡಿಲು ಮತ್ತು ವಿಷಗಳಿಗೆ ಸಮಾನವಾಗಿದ್ದ ಅನೇಕ ಬಾಣಗಳಿಂದ ಶತ್ರುಸೈನಿಕರನ್ನು ಧ್ವಂಸಮಾಡುತ್ತಿದ್ದನು. ಬಹುಮೂಲ್ಯವಾದ ಕವಚಗಳನ್ನೂ-ಆಭರಣಗಳನ್ನೂ ಧರಿಸಿದ್ದ, ನಾನಾರೂಪವಾದ ವಸ್ತ್ರಗಳನ್ನೂ ಆಯುಧಗಳನ್ನೂ

ಹೊಂದಿದ್ದ, ರಥ-ಧ್ವಜಸಹಿತರಾದ ವೀರರು ಪಾರ್ಥನಿಂದ ಹತರಾಗಿ ಭೂಮಿಯ ಮೇಲೆ ಮಲಗಿದ್ದರು. ಪುಣ್ಯಾತ್ಮರಾದ, ಸತ್ಕುಲಪ್ರಸೂತರಾದ, ಶಾಸ್ತ್ರಜ್ಞಾನಸಂಪನ್ನರಾದ, ಪರಾಜಿತರಾಗಿ ಪ್ರಾಣಗಳನ್ನು ತೊರೆದ ಸಂಶಪ್ತಕವೀರರು ಶರೀರಗಳಿಂದ ಭೂಗತರಾಗಿದ್ದರೂ, ಅವರು ಮಾಡಿದ ಸತ್ಕರ್ಮಫಲದಿಂದಾಗಿ (ಯುದ್ಧದಲ್ಲಿ ಶತ್ರುವಿಗೆ ಬೆನ್ನು ತೋರಿಸದೇ ಕಡೆಯವರೆಗೂ ಯುದ್ಧಮಾಡಿ ಆಯುಧಗಳಿಂದ ಪ್ರಾಣತೊರೆದುದಕ್ಕಾಗಿ) ಸ್ವರ್ಗವನ್ನೇ ಸೇರಿದರು. (ಶರೀರವು ಮಾತ್ರ ಭೂಮಿಯ ಮೇಲೆ ಬಿದ್ದಿದ್ದಿತೇ ಹೊರತು ಅವರ ಆತ್ಮಗಳು ಪುಣ್ಯಲೋಕಗಳಿಗೆ ಹೋಗಿದ್ದುವು.) ಮನ್ಯುವಶರಾದ ನಿನ್ನ ಕಡೆಯ ನಾನಾದೇಶಗಳ ಅಧಿಪತಿಗಳು ತಮ್ಮ-ತಮ್ಮ ಸೈನ್ಯಗಳೊಡನೆ ರಥಶ್ರೇಷ್ಠನಾದ ಅರ್ಜುನನನ್ನು ಆಕ್ರಮಿಸಿದರು. ರಥಾಶ್ವ-ಗಜಗಳನ್ನು ಹತ್ತಿಕೊಂಡು ರಥ-ಗಜಾಶ್ವ-ಸೈನಿಕರೂ ಮತ್ತು ಪದಾತಿಗಳೂ ಅರ್ಜುನನನ್ನು ಸಂಹರಿಸುವ ಇಚ್ಛೆಯಿಂದ ವಿವಿಧವಾದ ಆಯುಧಗಳನ್ನು ಪ್ರಯೋಗಿಸುತ್ತಾ ಅತಿಶೀಘ್ರವಾಗಿ ಅರ್ಜುನನ ಮೇಲೆ ಎರಗಿಬಿದ್ದರು.

ಅರ್ಜುನನೆಂಬ ಗಾಳಿಯು ಶತ್ರುಯೋಧರೆಂಬ ಮಹಾಮೇಘಗಳಿಂದ ಸುರಿಸಲ್ಪಡುತ್ತಿದ್ದ-ಆಯುಧಸಮೂಹವೆಂಬ ಮಹಾವೃಷ್ಟಿಯನ್ನು-ನಿಶಿತವಾದ ಬಾಣಗಳಿಂದ ಧ್ವಂಸಮಾಡಿತು. ಗಜಾಶ್ವ-ರಥ-ಪತ್ತಿಗಳಿಂದ ಸಂಪನ್ನವಾಗಿದ್ದ ಮತ್ತು ಅಸ್ತ್ರ-ಶಸ್ತ್ರಗಳ ಪ್ರವಾಹದಿಂದ ಪರಿಪೂರ್ಣವಾಗಿದ್ದ ಆ ಸೈನ್ಯ ಸಮುದ್ರವನ್ನು ಶಸ್ತ್ರಾಸ್ತ್ರಗಳೆಂಬ ಸೇತುವಿನಮೂಲಕವಾಗಿ ದಾಟಲು ಇಚ್ಛಿಸಿದ್ದ ಪಾರ್ಥನನ್ನು ಕುರಿತು ವಾಸುದೇವನು ಹೇಳಿದನು:

"ಪಾರ್ಥ! ಇದೇನು? ಕ್ರೀಡಿಸುತ್ತಿರುವೆಯಾ? ಅನಘನೇ! ಸಾಧ್ಯವಾದಷ್ಟು ಬೇಗ ಈ ಸಂಶಪ್ತಕರನ್ನು ಸಂಹರಿಸು. ಅನಂತರ ಕರ್ಣನ ವಧೆಗೆ ತ್ವರೆಮಾಡು."

ಶ್ರೀಕೃಷ್ಣನ ಮಾತನ್ನು ಕೇಳಿ ಅರ್ಜುನನು ಹಾಗೆಯೇ ಆಗಲೆಂದು ಉತ್ತರಿಸಿ ಅಳಿದುಳಿದಿದ್ದ ಸಂಶಪ್ತಕರನ್ನು ಬಲಪೂರ್ವಕವಾಗಿ ಶಸ್ತ್ರದಿಂದ ಛಿನ್ನ-ಭಿನ್ನಮಾಡಿ ಇಂದ್ರನು ದೈತ್ಯರನ್ನು ಸಂಹರಿಸಿದಂತೆ–ಸಂಹರಿಸಿದನು. ಆ ಸಮಯದಲ್ಲಿ ಅರ್ಜುನನ ಬತ್ತಳಿಕೆಗಳಿಂದ ಬಾಣಗಳನ್ನು ತೆಗೆಯುವು

ದನ್ನಾಗಲೀ, ತೆಗೆದ ಬಾಣಗಳನ್ನು ಧನುಸ್ಸಿನಲ್ಲಿ ಅನುಸಂಧಾನ ಮಾಡುವುದನ್ನಾಗಲೀ ಮತ್ತು ಬಿಡುವುದನ್ನಾಗಲೀ ಯಾರೂ ಕಾಣುತ್ತಿರಲಿಲ್ಲ. ಅವನ ಬಾಣಗಳಿಂದ ಪ್ರಹೃತರಾದ ಸೈನಿಕರು ಅಸುನೀಗುವುದನ್ನು ಮಾತ್ರವೇ ಜನರು ಕಾಣುತ್ತಿದ್ದರು. ಅದ್ಭುತವಾದ ಅರ್ಜುನನ ಆ ಹಸ್ತಲಾಘವವನ್ನು ಕಂಡ ಶ್ರೀಕೃಷ್ಣನೂ ಸಹ 'ಆಶ್ಚರ್ಯಮಾಶ್ಚರ್ಯಂ'–ಎಂದು ಉದ್ಗರಿಸುತ್ತಾ ಕುದುರೆಗಳನ್ನು ಮುಂದೆಹೋಗುವಂತೆ ಚಪ್ಪರಿಸಿದನು. ಹಂಸ ಮತ್ತು ಚಂದ್ರರಂತೆ (ಹಂಸ-ಚಂದ್ರರ ಕಿರಣಗಳಂತೆ) ಬಿಳಿಯಬಣ್ಣದ ಆ ಕುದುರೆ ಗಳು–ರಾಜಹಂಸಗಳು ಸರೋವರವನ್ನು ಪ್ರವೇಶಿಸುವಂತೆ–ಶತ್ರುಸೇನೆ ಯೊಳಗೆ ಪ್ರವೇಶಿಸಿದುವು. ಈ ಪ್ರಕಾರವಾಗಿ ಜನಕ್ಷಯವಾಗುತ್ತಿರಲಾಗಿ ಸಂಗ್ರಾಮಭೂಮಿಯನ್ನು ನೋಡುತ್ತಾ ಗೋವಿಂದನು ಸವ್ಯಸಾಚಿಯನ್ನು ಕುರಿತು ಹೇಳಿದನು:

"ಪಾರ್ಥ! ದುರ್ಯೋಧನನ ಕಾರಣದಿಂದಾಗಿ ಈ ಭೂಮಂಡಲ ದಲ್ಲಿ ಸಕಲರಾಜರ ಮತ್ತು ಭರತವಂಶೀಯರ ಮಹಾಭಯಂಕರವಾದ ವಿನಾಶವು ಆಗುತ್ತಲಿದೆ. ಭಾರತ! ಸುವರ್ಣಮಯವಾದ ಪೃಷ್ಠಭಾಗದಿಂದ ಕೂಡಿರುವ ಮಹಾಧನುಷ್ಮಂತರ ಧನುಸ್ಸುಗಳೂ, ಆಭರಣಗಳೂ ಮತ್ತು ಬತ್ತಳಿಕೆಗಳೂ ಚಲ್ಲಾಪಿಲ್ಲಿಯಾಗಿ ಅಲ್ಲಿ ಬಿದ್ದಿರುವುದನ್ನು ನೋಡು! ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿರುವ, ಬಗ್ಗಿದ ಗಿಣ್ಣು ಗಳುಳ್ಳ ಬಾಣಗಳನ್ನೂ-ಎಣ್ಣೆಯಿಂದ ಹದಮಾಡಲ್ಪಟ್ಟು ಪೊರೆಯನ್ನು ಬಿಟ್ಟ ಹಾವುಗಳಂತೆಯೇ ಕಾಣುತ್ತಿರುವ ನಾರಾಚಗಳನ್ನೂ ಅಲ್ಲಿ ನೋಡು, ಅರ್ಜುನ! ಅತ್ತ ಕಡೆ ಸುವರ್ಣಭೂಷಿತವಾದ ವಿಚಿತ್ರವಾದ ತೋಮರ ಗಳು ಮತ್ತು ಸುವರ್ಣಮಯವಾದ ಪೃಷ್ಠಭಾಗಗಳಿಂದ ಕೂಡಿರುವ ಗುರಾಣಿಗಳೂ ಚಲ್ಲಾಪಿಲ್ಲಿಯಾಗಿ ಬಿದ್ದಿವೆ. ಚಿನ್ನದಿಂದ ಚಿತ್ರಿತವಾದ ಪ್ರಾಸಗಳು, ಸುವರ್ಣದಿಂದ ಸಮಲಂಕೃತವಾದ ಶಕ್ತ್ಯಾಯುಧಗಳು, ಸುವರ್ಣಮಯವಾದ ಪಟ್ಟಿಗಳಿಂದ ನಿಬದ್ಧವಾದ ದೊಡ್ಡ ಗದೆಗಳು, ಸುವರ್ಣಮಯವಾದ ಋಷ್ಟಿಗಳು, ಸುವರ್ಣದಿಂದ ಸಮಲಂಕೃತವಾದ ಪಟ್ಟಿಶಗಳು, ಸುವರ್ಣದಿಂದ ಚಿತ್ರಿತವಾದ ದಂಡಗಳನ್ನೊಳಗೊಂಡ ಗಂಡು ಗೊಡಲಿಗಳು–ಇವುಗಳೆಲ್ಲವೂ ರಣರಂಗದ ಸುತ್ತಲೂ ಬಿದ್ದಿರುವುದನ್ನು ನೋಡು. ಅರ್ಜುನ! ಪರಿಘಗಳು, ಭಿಂದಿಪಾಲಗಳು, ಭುಶುಂಡಿಗಳು,

ಕುಣಪಗಳು, ಅಯಸ್ಕಾಂತಗಳು, ಭಾರವಾದ ಮುಸಲಗಳು ರಾಶಿ-ರಾಶಿಯಾಗಿ ಬಿದ್ದಿವೆ. ಅಲ್ಲಿ ನೋಡು ಅರ್ಜುನ! ವಿಜಯೇಚ್ಛುಗಳಾದ ಸೈನಿಕರು ಶಸ್ತ್ರಗಳನ್ನು ಹಿಡಿದಂತೆಯೇ ಅಸುನೀಗಿದ್ದಾರೆ. ಆದರೆ ಅವರೀಗ ಜೀವಂತರಾಗಿರುವಂತೆಯೇ ಕಾಣುತ್ತಿದ್ದಾರೆ. ಇತ್ತ ನೋಡು ಪಾರ್ಥ! ಗದಾಘಾತಗಳಿಂದ ಅವರ ಅಂಗಾಂಗಗಳೆಲ್ಲವೂ ಚೂರ್ಣೀಕೃತವಾಗಿವೆ. ಮುಸಲಾಯುಧಗಳಿಂದ ಎಲ್ಲರ ತಲೆಗಳೂ ಒಡೆದುಹೋಗಿವೆ. ಹೀಗೆ ಬಿದ್ದ ಸಾವಿರಾರು ಯೋಧರು ರಥ-ಗಜಾಶ್ವಗಳ ತುಳಿತದಿಂದಾಗಿ ಚೂರ್ಣವಾಗಿ ಮಾಡಲ್ಪಟ್ಟಿದ್ದಾರೆ.

ಶತ್ರುಸೂದನನೇ! ಬಾಣ, ಶಕ್ತಿ, ಋಷ್ಟಿ, ತೋಮರ, ಖಡ್ಗ, ಪಟ್ಟಿಶ, ಪ್ರಾಸ, ನಖರ, ಲಗುಡ–ಇವೇ ಮುಂತಾದ ಆಯುಧಗಳಿಂದ ಛಿನ್ನವಾಗಿ ಪ್ರಾಣಗಳನ್ನು ತೊರೆದು ರಕ್ತದಿಂದ ತೋಯ್ದುಹೋದ ಗಜಾಶ್ವ-ಪದಾತಿಗಳ ಶರೀರಗಳಿಂದ ರಣಭೂಮಿಗಳು ತುಂಬಿಹೋಗಿವೆ. ಚಂದನಚರ್ಚಿತವಾದ, ಅಂಗದಾಭರಣಯುಕ್ತವಾದ, ಸುಂದರವಾದ ಆಭರಣಗಳಿಂದ ಕೂಡಿದ ಕೈಚೀಲಗಳಿಂದಲೂ ಮತ್ತು ಕೇಯೂರಗಳಿಂದಲೂ, ಸಮಲಂಕೃತವಾದ ವೀರಯೋಧರ ಬಾಹುಗಳಿಂದ ಈ ರಣರಂಗವು ಬಹಳವಾಗಿ ಶೋಭಿಸುತ್ತಿದೆ. ಅಂಗುಲಿತ್ರಗಳಿಂದಲೂ (ಬೆರಳಿಗೆ ಹಾಕಿಕೊಳ್ಳುವ ಚರ್ಮದ ಚೀಲಗಳು) ಮತ್ತು ನಾನಾವಿಧವಾದ ಅಲಂಕಾರಗಳಿಂದಲೂ ಸಮಲಂಕೃತವಾದ ಭುಜಾಗ್ರಗಳಿಂದ ಈ ರಣಾಂಗಣವು ಸಂಪನ್ನವಾಗಿದೆ. ವೇಗವಂತರಾದ ಯೋಧರ ಆನೆಯ ಸೊಂಡಿಲುಗಳೋಪಾದಿಯಲ್ಲಿರುವ ತೊಡೆಗಳಿಂದಲೂ-ಶ್ರೇಷ್ಠವಾದ ಚೂಡಾಮಣಿಗಳನ್ನು ಧರಿಸಿರುವ ಕುಂಡಲಯುಕ್ತವಾದ ಯೋಧರ ಶಿರಸ್ಸುಗಳಿಂದಲೂ ಈ ರಣಾಂಗಣವು ಶೋಭಾಯಮಾನವಾಗಿ ಕಾಣುತ್ತಿದೆ. ವಯಸ್ಯ! ಚಿನ್ನದ ಗಂಟೆಗಳಿಂದ ಸಮಲಂಕೃತವಾದ ಶುಭಕರವಾದ ರಥಗಳು ಸಾವಿರಾರು ಚೂರುಗಳಾಗಿ ಬಿದ್ದಿರುವುದನ್ನು ನೋಡಿದೆಯಾ? ಅಸಂಖ್ಯಾತವಾದ ಕುದುರೆಗಳು ರಕ್ತದಿಂದ ತೋಯ್ದು ನೆಲದ ಮೇಲೆ ಉರುಳಾಡುತ್ತಿವೆ. ತೋಳುಮರಗಳು, ಬತ್ತಳಿಕೆಗಳು, ಪತಾಕೆಗಳು, ವಿಧ-ವಿಧವಾದ ಧ್ವಜಗಳು, ಯೋಧರ

ಬಿಳುಪಾದ ಮಹಾಶಂಖಗಳು ಇವುಗಳೆಲ್ಲವೂ ರಣಾಂಗಣದ ಸುತ್ತಲೂ ಹರಡಿಕೊಂಡಿರುವುದನ್ನು ನೋಡಿದೆಯಾ? ಇತ್ತಕಡೆಯಲ್ಲಿ ನಾಲಿಗೆಗಳನ್ನು ಹೊರಚಾಚಿಕೊಂಡು ಪರ್ವತೋಪಮವಾದ ಆನೆಗಳು ತಂಡ-ತಂಡವಾಗಿ ಮಲಗಿವೆ.

ವಿಚಿತ್ರವಾದ ವೈಜಯಂತೀಪತಾಕೆಗಳು ಅಲ್ಲಲ್ಲಿ ಬಿದ್ದಿವೆ. ಹತರಾಗಿ ಬಿದ್ದಿರುವ ಈ ಗಜಯೋಧರನ್ನು ನೋಡು, ಪಾರ್ಥ! ಆನೆಗಳ ಮೇಲೆ ಹೊದ್ದಿಸುವ ರತ್ನಗಂಬಳಿಗಳು ರಾಶಿ-ರಾಶಿಯಾಗಿ ಬಿದ್ದಿರುವುದನ್ನೂ ನೋಡು. ಆನೆಗಳ ಮೇಲೆ ಹೊದ್ದಿಸುವ ಅನೇಕ ಚಿತ್ರ-ವಿಚಿತ್ರವಾದ ರತ್ನಗಂಬಳಿಗಳು ಹರಿದು ಹೋಗಿರುವ ಕಾರಣದಿಂದ ಮತ್ತೂ ವಿಚಿತ್ರವಾಗಿ ಕಾಣುತ್ತಿವೆ. ಅನೇಕಪ್ರಕಾರವಾಗಿ ಭಿನ್ನವಾಗಿ ಹೋಗಿರುವ ಗಂಟೆಗಳು ಕೆಳಕ್ಕೆ ಬಿದ್ದು, ಬೀಳುತ್ತಿರುವ ಆನೆಗಳ ಕೆಳಗೆ ಸಿಕ್ಕಿ ಚೂರ್ಣೀಕೃತವಾಗಿವೆ. ವೈಡೂರ್ಯದಿಂದ ಕೂಡಿದ ದಂಡಗಳಿಂದ ಯುಕ್ತವಾದ ಅಂಕುಶಗಳು ಭೂಮಿಯ ಮೇಲೆ ಬಿದ್ದಿರುವುದನ್ನು ನೋಡು, ಅರ್ಜುನ! ಕುದುರೆಗಳ ಅಂಗಾಭರಣಗಳಿಂದಲೂ ಮತ್ತು ರತ್ನಗಳಿಂದ ಚಿತ್ರಿತವಾದ ಕುದುರೆಗಳ ಕವಚಗಳಿಂದಲೂ ರಣಾಂಗಣವು ಶೋಭಾಯಮಾನವಾಗಿ ಕಾಣುತ್ತಿದೆಯಲ್ಲವೇ! ಆನೆಗಳಿಗೆ ಹೊದ್ದಿಸಿದ್ದ ಸುವರ್ಣಮಯವಾದ ರತ್ನಗಂಬಳಿಗಳು ಕುದುರೇಸವಾರರ ಧ್ವಜಾಗ್ರಗಳಲ್ಲಿ ಸಿಕ್ಕಿಕೊಂಡಿವೆ. ಕುದುರೆಗಳ ಮೇಲೆ ಹೊದ್ದಿಸಿದ್ದ ವಿಚಿತ್ರವಾದ, ಮಣಿಮಯವಾದ, ಸುವರ್ಣಪರಿಷ್ಕೃತವಾದ, ರಂಕುಮೃಗದ ಚರ್ಮದಿಂದ ಮಾಡಲ್ಪಟ್ಟಿದ್ದ ಜೀನುಗಳು ರಾಶಿ-ರಾಶಿಯಾಗಿ ಭೂಮಿಯ ಮೇಲೆ ಬಿದ್ದಿವೆ. ನರೇಂದ್ರರ ಶಿರೋಭೂಷಣವಾದ ಚೂಡಾಮಣಿಗಳೂ, ವಿಚಿತ್ರವಾದ ಸುವರ್ಣಮಯಮಾಲೆಗಳೂ, ಛತ್ರಗಳೂ, ಚಾಮರ-ವ್ಯಜನಗಳೂ ಪರಿತ್ಯಕ್ತ ವಾಗಿ ರಣಾಂಗಣದಲ್ಲಿ ಹರಡಿಕೊಂಡು ಬಿದ್ದಿವೆ. ಚಂದ್ರನ ಮತ್ತು ನಕ್ಷತ್ರಗಳ ಕಾಂತಿಯಿಂದ ಕೂಡಿರುವ, ಸುಮನೋಹರವಾದ ಕುಂಡಲಗಳಿಂದಲೂ ಮತ್ತು ಸುವಿಹಿತವಾದ ಗಡ್ಡ-ಮೀಸೆಗಳಿಂದಲೂ ಕೂಡಿರುವ, ಪೂರ್ಣಚಂದ್ರ ಸದೃಶವಾದ ಮುಖಗಳಿಂದ ಸಮಾಕೀರ್ಣವಾಗಿರುವ ಈ ರಣಾಂಗಣವನ್ನು ನೋಡು, ಅರ್ಜುನ! ಯಾವ ರೀತಿಯಲ್ಲಿ ತಟಾಕವು ಕುಮುದ, ಕನ್ನೈದಿಲೆ ಮತ್ತು ಕಮಲಪುಷ್ಪಗಳಿಂದ ವಿಕಸಿತವಾಗಿ ಕಾಣುತ್ತದೆಯೋ–ಅದೇ

ರೀತಿಯಲ್ಲಿ ಈ ಮಹೀಪಾಲರ ಕುಮುದೋತ್ಪಲಸದೃಶವಾದ ಮುಖಗಳಿಂದ ಈ ರಣಾಂಗಣವು ವಿಕಸಿತವಾಗಿ ಕಾಣುತ್ತಿದೆ. ನಕ್ಷತ್ರಗಳ ಸಮೂಹಗಳಿಂದ ಚಿತ್ರಿತವಾಗಿ ಕಾಣುವ, ನಿರ್ಮಲಚಂದ್ರನ ಕಾಂತಿಯಿಂದ ಬೆಳಗುತ್ತಿರುವ, ಆಕಾಶಕ್ಕೆ ಸದೃಶವಾಗಿರುವ ಶರತ್ಕಾಲದ ನಕ್ಷತ್ರಗಳ ಸಾಲಿನಂತೆಯೇ–ರಾಜರ ಮುಖನಕ್ಷತ್ರಗಳನ್ನು ಹೊಂದಿರುವ, ಈ ರಣಾಂಗಣದ ಸೌಂದರ್ಯ ವನ್ನಾದರೂ ಅವಲೋಕಿಸು ಅರ್ಜುನ! ನಡೆದ ಈ ಮಹಾ ಸಮರದಲ್ಲಿ ನೀನು ತೋರಿಸಿದ ಪರಾಕ್ರಮವು ನಿನಗೆ ಅನುರೂಪವಾಗಿಯೇ ಇದೆ. ಸ್ವರ್ಗದಲ್ಲಿರುವ ದೇವರಾಜನು ಮಾತ್ರವೇ ಇಂತಹುದೇ ಪರಾಕ್ರಮವನ್ನು ತೋರಬಲ್ಲನು. (ಮತ್ತಾರಿಂದಲೂ ಇಂತಹ ಪರಾಕ್ರಮವನ್ನು ತೋರುವ ಸಾಧ್ಯತೆಯೇ ಇಲ್ಲ.)"

ಮಹಾರಾಜ! ಶ್ರೀಕೃಷ್ಣನು ಈ ರೀತಿ ವರ್ಣನೆಮಾಡಿಕೊಂಡು ಅರ್ಜುನನಿಗೆ ಯುದ್ಧಭೂಮಿಯನ್ನು ತೋರಿಸಿಕೊಂಡು ಹೋಗುತ್ತಿರ ಲಾಗಿ, ದುರ್ಯೋಧನನ ಸೈನಿಕರ ಕಡೆಯಿಂದ ಬಂದ ಮಹಾಶಬ್ದವನ್ನು ಆಲಿಸಿದನು. ಶಂಖ-ದುಂದುಭಿಗಳ ಘೋಷವನ್ನೂ, ಭೇರೀ-ಪಣವಗಳ ನಿನಾದವನ್ನೂ, ರಥಾಶ್ವ-ಗಜಸೈನಿಕರ ಸಿಂಹನಾದಗಳನ್ನೂ, ದಾರುಣವಾದ ಶಸ್ತ್ರಾಸ್ತ್ರಗಳ ಛಟ-ಪಟಾ ಶಬ್ದವನ್ನೂ ಶ್ರೀಕೃಷ್ಣನು ಕೇಳಿದನು. ಒಡನೆಯೇ ಶ್ರೀಕೃಷ್ಣನು ವಾಯುವೇಗದಂತೆ ವೇಗವುಳ್ಳ ಕುದುರೆಗಳ ಮೂಲಕವಾಗಿ ಶತ್ರುಸೇನೆಯನ್ನು ಪ್ರವೇಶಿಸಿದನು. ಅಲ್ಲಿ ಪಾಂಡ್ಯರಾಜನು ನಿನ್ನ ಸೈನ್ಯವನ್ನು ಮರ್ದನಮಾಡುತ್ತಿರು ವುದನ್ನು ಕಂಡು ಶ್ರೀಕೃಷ್ಣನು ಅಚ್ಚರಿಗೊಂಡನು. ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಪಾಂಡ್ಯರಾಜನು ಆಯುಷ್ಯವು ಮುಗಿದ ವರನ್ನು ಯಮರಾಜನು ಹರಣಮಾಡುವಂತೆ–ನಾನಾವಿಧವಾದ ಬಾಣ ಗಳ ಮೂಲಕವಾಗಿ ಶತ್ರುಪಕ್ಷದ ಸೈನಿಕರ ಸಮೂಹಗಳನ್ನು ಸತತವಾಗಿ ನಾಶಗೊಳಿಸುತ್ತಿದ್ದನು. ಪ್ರಹರಿಸುವವರಲ್ಲಿ ಶ್ರೇಷ್ಠನಾದ ಪಾಂಡ್ಯನು, ಗಜಾಶ್ವ-ಪದಾತಿಗಳ ಶರೀರಗಳನ್ನು ನಿಶಿತವಾದ ಬಾಣಗಳಿಂದ ಭೇದಿ ಸುತ್ತಾ, ಎಲ್ಲರ ಪ್ರಾಣಗಳೂ ದೇಹಗಳನ್ನು ತೊರೆಯುವಂತೆ ಮಾಡಿ ನೆಲದಮೇಲೆ ಬೀಳಿಸುತ್ತಿದ್ದನು. ಪಾಂಡ್ಯರಾಜನು ಶತ್ರುಪಕ್ಷದ ವೀರರಿಂದ ಬಿಡಲ್ಪಡುತ್ತಿದ್ದ ನಾನಾವಿಧವಾದ ಶಸ್ತ್ರಾಸ್ತ್ರಗಳನ್ನು ತನ್ನ ಬಾಣಗಳಿಂದ



ನಾಶಗೊಳಿಸುತ್ತಾ ಪುನಃ ಪುನಃ ಅವರ ಮೇಲೆ ಬಾಣಗಳನ್ನು ಪ್ರಯೋಗಿಸಿ ಇಂದ್ರನು ಅಸುರರನ್ನು ಸಂಹರಿಸಿದಂತೆ-ಶತ್ರುಸೈನಿಕರನ್ನು ಸಂಹರಿಸುತ್ತಿದ್ದನು."

೧೯ನೆಯ ಅಧ್ಯಾಯವು ಮುಗಿಯಿತು.

೨೦ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಅಶ್ವತ್ಥಾಮನು ಪಾಂಡ್ಯನನ್ನು ಸಂಹರಿಸಿದುದು

ಪಾಂಡ್ಯನ ಹೆಸರನ್ನು ಕೇಳಿದೊಡನೆಯೇ ಧೃತರಾಷ್ಟ್ರನು ಕುತೂಹಲಾವಿಷ್ಟನಾಗಿ ಸಂಜಯನನ್ನು ಕೇಳುತ್ತಾನೆ:

"ಸಂಜಯ! ಹಿಂದೆಯೇ ನೀನು ಲೋಕವಿಖ್ಯಾತನಾದ,

ವೀರಶ್ರೇಷ್ಠನಾದ ಪಾಂಡ್ಯರಾಜನ ಪರಿಚಯವನ್ನು ಮಾಡಿಕೊಟ್ಟಿರುವೆ. ಆದರೆ ಯುದ್ಧದಲ್ಲಿ ಅವನ ವೀರೋಚಿತವಾದ ಕರ್ಮಗಳ ವಿಷಯವಾಗಿ ನೀನು ನನ್ನೊಡನೆ ಹೇಳಿಲ್ಲ. ಈಗ ನೀನು ವೀರಶ್ರೇಷ್ಠನಾದ ಪಾಂಡ್ಯರಾಜನ ಪರಾಕ್ರಮವನ್ನೂ, ಶಿಕ್ಷಣವನ್ನೂ, ಪ್ರಭಾವವನ್ನೂ, ಬಲವನ್ನೂ, ಸ್ವರೂಪವನ್ನೂ ಮತ್ತು ದರ್ಪವನ್ನೂ ಹೇಳು.”

“ಮಹಾರಾಜ! ನೀನು ಭೀಷ್ಮ-ದ್ರೋಣ-ಕೃಪಾಶ್ವತ್ಥಾಮ-ಕರ್ಣಾರ್ಜುನ-ಕೃಷ್ಣರನ್ನು ಧನುರ್ವಿದ್ಯೆಯಲ್ಲಿ ಪೂರ್ಣರಾಗಿರತಕ್ಕವರೆಂದೂ, ಧನುರ್ಧಾರಿಗಳಲ್ಲಿ ಶ್ರೇಷ್ಠರೆಂದೂ ಮತ್ತು ಮಹಾರಥರೆಂದೂ ಭಾವಿಸಿರುವೆಯಲ್ಲವೇ? ಆ ಮಹಾರಥರಲ್ಲಿ ಯಾರೂ ಪರಾಕ್ರಮದಲ್ಲಿ ತನಗೆ ಸಮಾನರಲ್ಲವಂದೇ ಭಾವಿಸಿದ ಪಾಂಡ್ಯನು ಆ ಎಲ್ಲರನ್ನೂ ತಿರಸ್ಕಾರ ಪೂರ್ವಕವಾಗಿಯೇ ಕಾಣುತ್ತಾನೆ. ಯಾವ ರಾಜನನ್ನೂ ಅವನು ತನಗೆ ಸಮಾನನಾದವನೆಂದು ಭಾವಿಸುವುದಿಲ್ಲ. ಭೀಷ್ಮ-ದ್ರೋಣರಾದರೂ ತನಗೆ ಸಮಾನರೆಂಬುದನ್ನೂ ಅವನು ಸಹಿಸಿಕೊಳ್ಳುವುದಿಲ್ಲ. ವಾಸುದೇವಾರ್ಜುನರಿಗಿಂತಲೂ ತನ್ನ ಪರಾಕ್ರಮವು ಕಿಂಚಿತ್ತಾದರೂ ಕಡಿಮೆ–ಎಂಬ ಅಭಿಪ್ರಾಯವನ್ನೂ ಅವನು ಸಹಿಸಿಕೊಳ್ಳುವುದಿಲ್ಲ. ಸರ್ವಶಸ್ತ್ರಧಾರಿಗಳಲ್ಲಿಯೂ ಶ್ರೇಷ್ಠನಾದ, ನೃಪತಿಶ್ರೇಷ್ಠನಾದ ಪಾಂಡ್ಯರಾಜನು ಪರಾಭವಹೊಂದದ ಅಂತಕನೋಪಾದಿಯಲ್ಲಿ ಕರ್ಣನ ಸೇನೆಯನ್ನು ಧ್ವಂಸಮಾಡಲು ಉಪಕ್ರಮಿಸಿದನು. ಶ್ರೇಷ್ಠರಾದ ರಥಾಶ್ವ-ಗಜಸೈನಿಕರಿಂದಲೂ, ಪದಾತಿಶ್ರೇಷ್ಠರಿಂದಲೂ ಸಂಪನ್ನವಾಗಿದ್ದ ಕರ್ಣನ ಸೈನ್ಯವು ಪಾಂಡ್ಯನಿಂದ ಧ್ವಂಸಮಾಡಲ್ಪಡುತ್ತಿದ್ದು ಅವನ ಎದುರಿನಲ್ಲಿ ನಿಲ್ಲಲಾರದೆ ಕುಂಬಾರನ ಚಕ್ರದೋಪಾದಿಯಲ್ಲಿ ರಣಾಂಗಣದ ಸುತ್ತಲೂ ಸುತ್ತತೊಡಗಿತು. ಬಿರು ಗಾಳಿಯು ಮೇಘಗಳನ್ನು ಚದುರಿಸುವಂತೆ–ಪಾಂಡ್ಯರಾಜನು ಸುಪ್ರಮುಕ್ತ ವಾದ ಬಾಣಗಳಿಂದ ಸಮಸ್ತರಥಸೈನಿಕರನ್ನೂ ಸಾರಥ್ಯಶ್ವ-ಧ್ವಜ-ರಥಗಳಿಂದ ವಿಹೀನರನ್ನಾಗಿ ಮಾಡಿದನು. ಅನೇಕ ಸೈನಿಕರು ಪಾಂಡ್ಯನ ಬಾಣಗಳ ಪ್ರಹಾರವನ್ನು ತಾಳಲಾರದೇ ಆಯುಧಗಳನ್ನೂ ಎಸೆದು ತಾವು ಕುಳಿತಿದ್ದ ಆನೆಗಳಿಂದಲೂ ಇಳಿದು ಓಡಿಹೋಗುತ್ತಿದ್ದರು. ಪಾಂಡ್ಯರಾಜನು ಗಜ ಸೈನಿಕರನ್ನು ಪತಾಕೆಗಳಿಂದಲೂ, ಆಯುಧಗಳಿಂದಲೂ ಮತ್ತು ಧ್ವಜಗಳಿಂದಲೂ ವಿಹೀನರನ್ನಾಗಿಮಾಡಿ, ಆನೆಗಳನ್ನೂ ಮತ್ತು ಮಾವುತರನ್ನೂ

ಪಾದರಕ್ಷಕರ ಸಹಿತವಾಗಿ–ಪರ್ವತಹಂತಕನಾದ ಇಂದ್ರನು ವಜ್ರಾಯುಧ ಗಳಿಂದ ಪರ್ವತಗಳನ್ನು ಧ್ವಂಸಮಾಡಿದಂತೆ–ಧ್ವಂಸಮಾಡಿದನು. ಶಕ್ತ್ಯಾಯುಧ-ಪ್ರಾಸ-ಬತ್ತಳಿಕೆಗಳನ್ನೂ ಹೊಂದಿದ್ದ ಅಶ್ವಸೈನಿಕರನ್ನೂ ಮತ್ತು ಕುದುರೆಗಳನ್ನೂ ಅಪಾರಸಂಖ್ಯೆಯಲ್ಲಿ ಸಂಹರಿಸಿದನು. ಪುಲಿಂದ-ಖಸ-ಬಾಹ್ಲೀಕ-ನಿಷಾದ-ಆಂಧ್ರ-ಕುಂತಲ-ದಾಕ್ಷಿಣಾತ್ಯ-ಭೋಜ ಇವೇ ಮುಂತಾದ ದೇಶಗಳ ರಣಕರ್ಕಶರಾದ ಶೂರವೀರರನ್ನೂ ತನ್ನ ಬಾಣಗಳ ಮೂಲಕವಾಗಿ ಶಸ್ತ್ರಾಸ್ತ್ರಗಳಿಂದಲೂ ಮತ್ತು ಕವಚಗಳಿಂದಲೂ ವಿಹೀನರನ್ನಾಗಿಮಾಡಿ ಪ್ರಾಣರಹಿತರನ್ನಾಗಿಯೂ ಮಾಡಿದನು. ಸ್ವಲ್ಪವಾದರೂ ಭ್ರಾಂತನಾಗದೆ ಕುರುರಾಜನ ಚತುರಂಗಬಲವನ್ನೂ ಬಾಣಗಳಿಂದ ಧ್ವಂಸಮಾಡುತ್ತಿದ್ದ, ಪಾಂಡ್ಯನನ್ನು ನೋಡಿ ಅಶ್ವತ್ಥಾಮನು ಸ್ವಲ್ಪವಾದರೂ ಗಾಬರಿಗೊಳ್ಳದೇ ಅವನನ್ನು ಎದುರಿಸಿದನು. ಪ್ರಹಾರಿಗಳಲ್ಲಿ ಶ್ರೇಷ್ಠನಾದ ಅಶ್ವತ್ಥಾಮನು, ಭಯವೆಂಬುದನ್ನೇ ಕಾಣದಿದ್ದ ಪಾಂಡ್ಯನನ್ನು ಸಂಬೋಧಿಸುತ್ತಾ, ತಾನೂ ಸಹ ಅವನ ಪರಾಕ್ರಮವನ್ನು ನೋಡಿ ಭಯಗೊಳ್ಳದೇ ಇರುವುದನ್ನು ವ್ಯಕ್ತಪಡಿಸುತ್ತಾ, ಸುಮಧುರವಾದ ಮಾತಿನಿಂದ ಮಂದಹಾಸಪೂರ್ವಕವಾಗಿ ಪಾಂಡ್ಯರಾಜನನ್ನು ಯುದ್ಧಕ್ಕೆ ಆಹ್ವಾನಿಸುತ್ತಾ ಹೇಳಿದನು:

**ರಾಜನ್ಕಮಲಪತ್ರಾಕ್ಷ ವಿಶಿಷ್ಟಾಭಿಜನಶ್ರುತ ।**
**ವಜ್ರಸಂಹನನಪ್ರಖ್ಯ ಪ್ರಖ್ಯಾತಬಲಪೌರುಷ ॥೧೪॥**

**ಮುಷ್ಟಿಶ್ಲಿಷ್ಟಾಯತಜ್ಯಂ ಚ ವ್ಯಾಯತಾಭ್ಯಾಂ ಮಹದ್ಧನುಃ ।**
**ದೋರ್ಭ್ಯಾಂ ವಿಸ್ಫಾರಯನ್ಭಾಸಿ ಮಹಾಜಲದವದ್ಭೃಶಮ್ ॥೧೫॥**

"ಮಹಾರಾಜ! ಕಮಲದಲನಯನ! ಸತ್ಕುಲಪ್ರಸೂತನೇ! ಬಹುಶ್ರುತನೇ! ವಜ್ರಕ್ಕೆ ಸಮಾನವಾದ ಶರೀರಸೌಷ್ಠವವುಳ್ಳವನೇ! ಸುವಿಖ್ಯಾತ ಬಲ-ಪೌರುಷಗಳುಳ್ಳವನೇ! ಸುದೀರ್ಘವಾಗಿ ಸೆಳೆಯಲ್ಪಟ್ಟ ಮೌರ್ವಿಯುಳ್ಳ ಮಹಾಧನುಸ್ಸನ್ನು ಮುಷ್ಟಿಯಿಂದ ಹಿಡಿದು ಅಗಲವಾಗಿ ಮಾಡಲ್ಪಟ್ಟ ಎರಡು ತೋಳುಗಳಿಂದಲೂ ಟೇಂಕರಿಸುತ್ತಿರುವಾಗ ನೀನು ಗರ್ಜಿಸುತ್ತಿರುವ ಮಹಾಮೇಘದಂತೆಯೇ ಪ್ರಕಾಶಿಸುವೆ.

ಮಹಾವೇಗಯುಕ್ತನಾದ ಬಾಣಗಳ ಸುರಿಸುವಿಕೆಯಿಂದ ಶತ್ರುಗಳ

ಸೈನ್ಯವನ್ನು ಮುಚ್ಚುತ್ತಿರುವ ನಿನ್ನನ್ನು ಎದುರಿಸುವ ವೀರನನ್ನು-ನಮ್ಮ ಪಕ್ಷದಲ್ಲಿ ನನ್ನೊಬ್ಬನ ಹೊರತಾಗಿ ಬೇರಾರನ್ನೂ ಕಾಣುತ್ತಿಲ್ಲ. ಭಯಂಕರವಾದ ಬಲವನ್ನು ಹೊಂದಿರುವ ಸಿಂಹವು ಅರಣ್ಯದಲ್ಲಿ ಯಾವ ವಿಧವಾದ ಭಯವೂ ಇಲ್ಲದೇ ಮೃಗಗಳ ಸಮೂಹಗಳನ್ನು ಸಂಹಾರಮಾಡುವಂತೆ–ನೀನೊಬ್ಬನೇ ಈಗ ಬಹುಸಂಖ್ಯಾತವಾದ ರಥ-ಗಜಾಶ್ವ-ಪದಾತಿಗಳನ್ನು ಸಂಹರಿಸುತ್ತಿರುವೆ. ರಥದ ಮಹಾಘೋಷದಿಂದ ಭೂಮಿಯಲ್ಲಿಯೂ ಮತ್ತು ಆಕಾಶದಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಾ; ಶರತ್ಕಾಲದಲ್ಲಿ ಗರ್ಜನೆ ಮಾಡುವ ಸಸ್ಯನಾಶಕವಾದ ಮೇಘದಂತೆಯೇ ನೀನು ಪ್ರಕಾಶಿಸುತ್ತಿರುವೆ. ಮಹಾಶೂರನಾದ ನೀನೀಗ ಸೈನಿಕರೊಡನೆ ಯುದ್ಧಮಾಡುವುದನ್ನು ನಿಲ್ಲಿಸು. ವಿಷಸರ್ಪಸದೃಶವಾದ, ತೀಕ್ಷ್ಣವಾದ ಬಾಣಗಳನ್ನು ಬತ್ತಳಿಕೆಯಿಂದ ಹೊರತೆಗೆಯುತ್ತಾ–ಹಿಂದೆ ತ್ರ್ಯಂಬಕನೊಡನೆ ಅಂಧಕಾಸುರನು ಯುದ್ಧ ಮಾಡಿದಂತೆ–ನನ್ನೊಬ್ಬನೊಡನೆ ಯುದ್ಧಮಾಡು."

ಮಹಾರಾಜ! ಅಶ್ವತ್ಥಾಮನ ಮಾತಿಗೆ ಪಾಂಡ್ಯರಾಜನು ಹಾಗೆಯೇ ಆಗಲೆಂದು ಒಪ್ಪಿಗೆಯನ್ನಿತ್ತು "ನೀನೇ ಮೊದಲು ನನ್ನನ್ನು ಬಾಣಗಳಿಂದ ಪ್ರಹರಿಸು"–ಎಂದೂ ಹೇಳಿದನು. ಅಶ್ವತ್ಥಾಮನು ಬಾಣಗಳಿಂದ ಪ್ರಹರಿಸಿದೊಡನೆಯೇ ಮಲಯಧ್ವಜನಾದ ಪಾಂಡ್ಯರಾಜನು ದ್ರೋಣಪುತ್ರನನ್ನು ಕರ್ಣೀ ಎಂಬ ಬಾಣದಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಆಚಾರ್ಯಶ್ರೇಷ್ಠನಾದ ಅಶ್ವತ್ಥಾಮನು ನಸುನಗುತ್ತಾ ಅಗ್ನಿಯ ಜ್ವಾಲೆಗೆ ಸಮಾನವಾಗಿದ್ದ, ಮರ್ಮಭೇದಿಗಳಾಗಿದ್ದ, ಅತ್ಯುಗ್ರವಾಗಿದ್ದ, ಬಾಣಗಳಿಂದ ಪಾಂಡ್ಯರಾಜನನ್ನು ಗಾಯಗೊಳಿಸಿದನು. ಬಳಿಕ ಅಶ್ವತ್ಥಾಮನು ಮರ್ಮಭೇದಿಗಳಾದ ಸುತೀಕ್ಷ್ಣವಾದ ಅಗ್ರಭಾಗಗಳಿಂದ ಕೂಡಿದ್ದ *ಹತ್ತನೆಯ

---

*ಇಲ್ಲಿ ಬರುವ 'ಗತ್ಯಾ ದಶಮ್ಯಾ ಸಂಯುಕ್ತಾನ್' ಎಂಬುದಕ್ಕೆ ವ್ಯಾಖ್ಯಾನಕಾರರು ಬಾಣದ ಗತಿಗಳಾವುವೆಂಬುದನ್ನು ವಿವರಿಸಿದ್ದಾರೆ:

ಉನ್ಮುಖ್ಯಭಿಮುಖೀ ತಿರ್ಯಙ್ಮನ್ದಾ ಗೋಮೂತ್ರಿಕಾ ಧ್ರುವಾ ।

ಸ್ಖಲಿತಾ ಯಮಕಾಕ್ರಾನ್ತಾ ಕ್ರುಷ್ಟೇತೀಷುಗತೀರ್ವಿದುಃ ॥

ಗತಿಯಿಂದ ಯುಕ್ತವಾಗಿದ್ದ ನಾರಾಚಗಳನ್ನು ಪಾಂಡ್ಯನ ಮೇಲೆ ಪ್ರಯೋಗಿಸಿದನು.

ಪಾಂಡ್ಯರಾಜನು ಹತ್ತನೆಯ ಕೃಷ್ಟಾಗತಿಯಿಂದ ಬಿಟ್ಟ ಬಾಣಗಳನ್ನೂ ಒಂಬತ್ತು ನಿಶಿತವಾದ ಬಾಣಗಳಿಂದ ಕತ್ತರಿಸಿದನು. ಪುನಃ ನಾಲ್ಕು ಬಾಣಗಳಿಂದ ಅಶ್ವತ್ಥಾಮನ ರಥದ ಕುದುರೆಗಳನ್ನೂ ಪ್ರಹರಿಸಿದನು. ಮರುಕ್ಷಣದಲ್ಲಿಯೇ ಕುದುರೆಗಳು ಪ್ರಾಣಗಳನ್ನು ತೊರೆದುವು. ಆದಿತ್ಯ ಸಮತೇಜಸ್ಕನಾದ ಅಶ್ವತ್ಥಾಮನ ಬಾಣಗಳೆಲ್ಲವನ್ನೂ ನಿಶಿತವಾದ ಬಾಣಗಳಿಂದ ಕತ್ತರಿಸಿದನಂತರ ಪಾಂಡ್ಯರಾಜನು ಅಶ್ವತ್ಥಾಮನ ಧನುಸ್ಸಿನ ಮೌರ್ವಿಯನ್ನೂ ಕತ್ತರಿಸಿದನು. ಒಡನೆಯೇ ದ್ವಿಜಶ್ರೇಷ್ಠನಾದ ದ್ರೌಣಿಯು ದಿವ್ಯಧನುಸ್ಸಿಗೆ ನೂತನವಾದ ಮೌರ್ವಿಯನ್ನು ಬಿಗಿದು ಸೇವಕರ ಮೂಲಕವಾಗಿ ಬೇರೆಯ ಶ್ರೇಷ್ಠವಾದ ಕುದುರೆಗಳನ್ನು ರಥಕ್ಕೆ ಕಟ್ಟಿಸಿ ಪಾಂಡ್ಯನ ಮೇಲೆ ಸಾವಿರಾರು ಬಾಣಗಳನ್ನು ಸುರಿಸಿದನು. ಆಕಾಶವನ್ನೂ ಮತ್ತು ದಿಕ್ಕುಗಳನ್ನೂ ಬಾಣಗಳಿಂದ ದಟ್ಟವಾಗಿ ತುಂಬಿಬಿಟ್ಟನು.

ಅನಂತರ ಪುರುಷಶ್ರೇಷ್ಠನಾದ ಪಾಂಡ್ಯನು-ಮಹಾತ್ಮನಾದ ಅಶ್ವತ್ಥಾಮನು ಬಿಡುತ್ತಿದ್ದ ಬಾಣಗಳು ಅಕ್ಷಯವಾದುವುಗಳೆಂದು ತಿಳಿದಿದ್ದರೂ ಧೃತಿಗೆಡದೇ ಅವುಗಳೆಲ್ಲವನ್ನೂ ತನ್ನ ಬಾಣಗಳಿಂದ ನಿರಸನಗೊಳಿಸಿದನು. ಶತ್ರುವಾದ ಪಾಂಡ್ಯನು ಈ ರೀತಿಯಾಗಿ ಅಶ್ವತ್ಥಾಮನು ಬಿಡುತ್ತಿದ್ದ ಅಸಂಖ್ಯಾತಬಾಣಗಳೆಲ್ಲವನ್ನೂ ಪ್ರಯತ್ನಪೂರ್ವಕವಾಗಿ ಕತ್ತರಿಸಿ ನಿಶಿತ

---

ಉನ್ಮುಖೀ, ಅಭಿಮುಖೀ, ತಿರ್ಯಕ್, ಮಂದಾ, ಗೋಮೂತ್ರಿಕಾ, ಧ್ರುವಾ, ಸ್ಖಲಿತಾ, ಯಮಕಾಕ್ರಾಂತಾ, ಕೃಷ್ಟಾ-ಎಂಬುದಾಗಿ ಒಂಬತ್ತು ವಿಧವಾದ ಬಾಣಗಳ ಗತಿಯನ್ನು ಹೇಳುತ್ತಾರೆ. ಇವುಗಳಲ್ಲಿ ಉನ್ಮುಖೀ, ಅಭಿಮುಖೀ ಮತ್ತು ತಿರ್ಯಕ್-ಈ ಮೂರು ಗತಿಗಳು ಅನುಕ್ರಮವಾಗಿ ಶಿರಸ್ಸು, ಹೃದಯ ಮತ್ತು ಪಾರ್ಶ್ವಗಳನ್ನು ಸ್ಪರ್ಶಿಸುತ್ತವೆ. ಅರ್ಥಾತ್ ಉನ್ಮುಖೀಗತಿಯಿಂದ ಬಿಟ್ಟ ಬಾಣವು ತಲೆಯನ್ನು ಗಾಯಗೊಳಿಸುತ್ತದೆ. ಅಭಿಮುಖೀಗತಿಯಿಂದ ಬಿಟ್ಟ ಬಾಣವು ವಕ್ಷಃಸ್ಥಳವನ್ನೂ ತಿರ್ಯಗ್ಗತಿಯಿಂದ ಬಿಟ್ಟ ಬಾಣವು ಪಾರ್ಶ್ವಗಳನ್ನೂ ಗಾಯಗೊಳಿಸುತ್ತವೆ.

ಮಂದಾಗತಿಯಿಂದ ಬಿಟ್ಟ ಬಾಣವು ಚರ್ಮದ ಮೇಲೆ ಅಲ್ಪ-ಸ್ವಲ್ಪ ಗಾಯಮಾಡುತ್ತದೆ. ಗೋಮೂತ್ರಿಕಾಗತಿಯಿಂದ ಬಿಟ್ಟ ಬಾಣವು ಎಡಕ್ಕೂ ಹೋಗುತ್ತದೆ; ಬಲಕ್ಕೂ ಹೋಗುತ್ತದೆ. ಕವಚವನ್ನೂ ಕತ್ತರಿಸುತ್ತದೆ. ಧ್ರುವಾಗತಿಯಿಂದ ಬಿಟ್ಟ ಬಾಣವು ಲಕ್ಷ್ಯವನ್ನು ತಪ್ಪದೇ ಭೇದಿಸುತ್ತದೆ. ಸ್ಖಲಿತಾ ಎಂಬ ಗತಿಯಿಂದ ಬಾಣಬಿಟ್ಟರೆ ಲಕ್ಷ್ಯದ ಕಡೆಗೆ ಬೀಳದೇ

ವಾದ ಬಾಣಗಳಿಂದ ಅಶ್ವತ್ಥಾಮನ ಚಕ್ರರಕ್ಷಕರನ್ನೂ ಸಂಹರಿಸಿದನು. ದ್ರೋಣರ ಮಗನಾದ ಅಶ್ವತ್ಥಾಮನು ಶತ್ರುವಿನ ಹಸ್ತಲಾಘವವನ್ನು ನೋಡಿ ತನ್ನ ಧನುಸ್ಸನ್ನು ಮಂಡಲಾಕಾರವನ್ನಾಗಿಸಿ–ಪೂಷನ ತಮ್ಮನಾದ ಪರ್ಜನ್ಯನು ಮಳೆಗರೆಯುವಂತೆ–ಪಾಂಡ್ಯನ ಮೇಲೆ ಮಳೆಗರೆದನು.

**ಅಷ್ಟಾವಷ್ಟಗವಾನ್ಯೂಹುಃ ಶಕಟಾನಿ ಯದಾಯುಧಮ್ ।**
**ಅಹ್ನಸ್ತದಷ್ಟಭಾಗೇನ ದ್ರೌಣಿಶ್ಚಿಕ್ಷೇಪ ಮಾರಿಷ ॥೩೦॥**

ಮಹಾರಾಜ! ಅಶ್ವತ್ಥಾಮನು ಎಷ್ಟು ಬೇಗ ಬಾಣಗಳನ್ನು ಬಿಡುತ್ತಿದ್ದನೆಂಬುದನ್ನು ಮತ್ತೊಂದು ರೀತಿಯಲ್ಲಿ ಹೇಳುತ್ತೇನೆ. ಆ ಸಮಯದಲ್ಲಿ ಅವನ ಬಾಣಪ್ರಯೋಗದ ವೇಗವು ಎಷ್ಟಿತ್ತೆಂಬುದನ್ನು ನೀನೇ ಊಹಿಸಬಹುದಾಗಿದೆ. ಎಂಟು ಎತ್ತುಗಳಿಂದ ಎಳೆಯಲ್ಪಡುವ ಎಂಟುಗಾಡಿ ಗಳಲ್ಲಿ ತುಂಬಿ ತರಬಹುದಾದಷ್ಟು ಆಯುಧಗಳನ್ನು ಅಶ್ವತ್ಥಾಮನು ದಿನದ ಎಂಟನೆಯ ಒಂದು ಭಾಗದಷ್ಟು ಕಾಲದಲ್ಲಿ (ಅರ್ಧಯಾಮದಲ್ಲಿ ಅಥವಾ ಒಂದು ಘಂಟೆಯಲ್ಲಿ ) ಪಾಂಡ್ಯನಮೇಲೆ ಸುರಿಸಿದನು.

ಯಮರಾಜನಂತೆಯೇ ಪರಮಕ್ರುದ್ಧನಾಗಿದ್ದ ಅಶ್ವತ್ಥಾಮನು ಆ ಸಮಯದಲ್ಲಿ ಅಂತಕನಿಗೂ ಅಂತಕನೋ ಎಂಬಂತೆ ಕಾಣುತ್ತಿದ್ದನು. ಅವನನ್ನು ನೋಡಿದವರೆಲ್ಲರೂ ಪ್ರಾಯಶಃ ಮೂರ್ಛೆಹೊಂದಿದರು.

ವರ್ಷಾಕಾಲದಲ್ಲಿ ಪರ್ಜನ್ಯನು ಪರ್ವತ-ವೃಕ್ಷಗಳಿಂದ ಸಹಿತವಾದ

---

ಬೇರೊಂದು ಕಡೆಗೆ ಬೀಳುತ್ತದೆ. (ಈ ಗತಿಯಿಂದ ಯಾರನ್ನೋ ಲಕ್ಷಿಸಿ ಯಾರನ್ನೋ ಪ್ರಹರಿಸಬಹುದಾಗಿದೆ. ಇದರಿಂದ ಶತ್ರುಗಳನ್ನು ವಂಚಿಸಬಹುದು.) ಯಮಕಾಕ್ರಾಂತಾ ಗತಿಯಿಂದ ಬಿಟ್ಟ ಬಾಣವು ಲಕ್ಷ್ಯವನ್ನು ಹಲವು ಬಾರಿ ಭೇದಿಸಿಕೊಂಡು ಹೊರಬರುತ್ತದೆ. ಕ್ರುಷ್ಟಾ ಗತಿಯು ಲಕ್ಷ್ಯದ ಒಂದು ಭಾಗವನ್ನು ಕತ್ತರಿಸುತ್ತದೆ. ಹತ್ತನೆಯ ಗತಿಯೆಂದರೆ ಇದೇ ಕ್ರುಷ್ಟಾಗತಿಯಿಂದ ಶತ್ರುವಿನ ಒಂದು ಅವಯವವಾದ ಶಿರಸ್ಸನ್ನೇ ಭೇದಿಸಿ ದೂರಕ್ಕೆ ಬೀಳಿಸುವುದು. ಕ್ರುಷ್ಟಾಗತಿಯಿಂದ ಭುಜವೇ ಮೊದಲಾದ ಅವಯವಗಳನ್ನು ಕತ್ತರಿಸಬಹುದು. ಕ್ರುಷ್ಟಾಗತಿಯಿಂದ ಶಿರಸ್ಸನ್ನು ಕತ್ತರಿಸಿದರೆ ಅದು ಹತ್ತನೆಯ ಗತಿ ಎನಿಸಿಕೊಳ್ಳುತ್ತದೆ. ವ್ಯಾಖ್ಯಾನಕಾರರ ಅಭಿಪ್ರಾಯವು ಹೀಗಿರುತ್ತದೆ. **ದಶಮೀ ಗತಿಸ್ತು ಶಿರಸಾ ಸಹ ದೂರಪಾತಿನೀ ಕ್ರುಷ್ಟಾನಾಮ ತಯಾ ಗತ್ಯಾ ಪ್ರಕ್ಷಿಪ್ತಾನಪಿ ಶರಾನ್ ನವಸಂಖ್ಯಾಕಾನ್ ನವಭಿಃ ಶರೈಃ ಪಾಣ್ಡ್ಯರಾಜಃ ಅಚ್ಛಿನತ್ ಇತಿ ಸಂಬಂಧಃ**

ಭೂಮಿಯನ್ನು ಮಳೆಯಿಂದ ಮುಚ್ಚಿಬಿಡುವಂತೆ-ಅಶ್ವತ್ಥಾಮನು ಪಾಂಡ್ಯರಾಜನ ಸೈನ್ಯವನ್ನು ಬಾಣಗಳ ವೃಷ್ಟಿಯಿಂದ ಅಭಿಷೇಚಿಸಿದನು. ಅಶ್ವತ್ಥಾಮನೆಂಬ ಪರ್ಜನ್ಯನು ಸುರಿಸುತ್ತಿದ್ದ, ಸಹಿಸಿಕೊಳ್ಳಲು ಅಸಾಧ್ಯವಾಗಿದ್ದ ಬಾಣವೃಷ್ಟಿ ಎಂಬ ವೃಷ್ಟಿಯನ್ನು ಪಾಂಡ್ಯರಾಜನೆಂಬ ವಾಯುವು ವಾಯವ್ಯಾಸ್ತ್ರದಿಂದ ನಿರಸನಗೊಳಿಸಿ ಆನಂದದಿಂದ ಸಿಂಹನಾದವನ್ನು ಮಾಡಿದನು. ಪದೇ-ಪದೇ ಸಿಂಹನಾದಮಾಡುತ್ತಿದ್ದ ಪಾಂಡ್ಯರಾಜನ ಅಗುರು-ಚಂದನಗಳಿಂದ ಲೇಪಿತವಾದ ಮತ್ತು ಮಲಯಾಚಲದಂತೆ ಎತ್ತರವಾಗಿದ್ದ ಧ್ವಜವನ್ನು ಅಶ್ವತ್ಥಾಮನು ಕತ್ತರಿಸಿ, ಅವನ ರಥದ ನಾಲ್ಕು ಕುದುರೆಗಳನ್ನೂ ಸಂಹರಿಸಿದನು. ಅನಂತರ ಮಹಾಮೇಘದ ಗರ್ಜನೆಯಂತೆ ಟೇಂಕರಿಸುತ್ತಿದ್ದ ಧನುಸ್ಸನ್ನು ಅರ್ಧಚಂದ್ರವೆಂಬ ಬಾಣದಿಂದ ಕತ್ತರಿಸಿದನು. ಬಳಿಕ ಅವನ ರಥವನ್ನೂ ಎಳ್ಳುಕಾಳಿನಷ್ಟು ನುಚ್ಚುನೂರಾಗಿ ಮಾಡಿಬಿಟ್ಟನು. ಈ ರೀತಿ ದ್ರೌಣಿಯು ಪಾಂಡ್ಯನು ಬಿಡುತ್ತಿದ್ದ ಅಸ್ತ್ರಗಳನ್ನು ಅಸ್ತ್ರಗಳಿಂದಲೇ ನಿರಸನಗೊಳಿಸುತ್ತಾ ಅವನ ಸರ್ವಾಯುಧಗಳನ್ನೂ ಭಗ್ನಗೊಳಿಸಿದನು. ಆ ಸಮಯದಲ್ಲಿ ಅಶ್ವತ್ಥಾಮನು ಪಾಂಡ್ಯನನ್ನು ಸಂಹರಿಸುವ ಸಾಧ್ಯತೆಯಿದ್ದರೂ, ನಿರಾಯುಧನಾದ ಪಾಂಡ್ಯನು ಅವನ (ಅಶ್ವತ್ಥಾಮನ) ವಶನಾಗಿದ್ದರೂ, ಪಾಂಡ್ಯರಾಜನೊಡನೆ ಯುದ್ಧವನ್ನೇ ಮುಂದುವರಿಸಬೇಕೆಂಬ ಆಶಯದಿಂದ ಅಶ್ವತ್ಥಾಮನು ಪಾಂಡ್ಯನನ್ನು ಸಂಹರಿಸಲಿಲ್ಲ.

ಈ ಮಧ್ಯದಲ್ಲಿ ಕರ್ಣನು ಪಾಂಡವರ ಗಜಸೈನ್ಯದ ಮೇಲೆ ದಾಳಿನಡೆಸಿದನು. ಸ್ವಲ್ಪಹೊತ್ತಿನಲ್ಲಿಯೇ ಕರ್ಣನು ಪಾಂಡವರ ಮಹಾಸೈನ್ಯವನ್ನು ಪಲಾಯನಪರಾಯಣವನ್ನಾಗಿ ಮಾಡಿದನು. ರಥಿಗಳನ್ನು ರಥಗಳಿಂದ ವಿಹೀನರನ್ನಾಗಿ ಮಾಡಿದನು. ಅನೇಕ ಮಾವುತರನ್ನು ಆನೆಗಳಿಂದ ವಿಹೀನರನ್ನಾಗಿಯೂ ಕುದುರೆಸವಾರರನ್ನು ಕುದುರೆಗಳಿಂದ ವಿಹೀನರನ್ನಾಗಿಯೂ ಮಾಡಿದನು. ಮತ್ತೆ ಕೆಲವು ಮದಗಜಗಳನ್ನು ಬಗ್ಗಿದ ಗಿಣ್ಣುಗಳಿದ್ದ ಅನೇಕ ಬಾಣಗಳಿಂದ ಗಾಯಗೊಳಿಸಿದನು.

ಇತ್ತಲಾಗಿ ಮಹಾಧನುಷ್ಮಂತನಾದ ಅಶ್ವತ್ಥಾಮನು ಪಾಂಡ್ಯನೊಡನೆ

ಯುದ್ಧವನ್ನು ಮುಂದುವರಿಸಿದನು. ಶತ್ರುನಿಬರ್ಹಣನಾದ, ರಥಿಗಳಲ್ಲಿ ಶ್ರೇಷ್ಠನಾದ ಪಾಂಡ್ಯನು ರಥಹೀನನಾದರೂ ಅವನೊಡನೆ ಯುದ್ಧವನ್ನು ಮುಂದುವರಿಸುತ್ತಲೇ ಇರಬೇಕೆಂಬ ಅಭಿಲಾಷೆಯಿಂದ ದ್ರೌಣಿಯು ಅವನನ್ನು ಸಂಹಾರಮಾಡಲಿಲ್ಲ. ಆ ಸಮಯದಲ್ಲಿ ಯುದ್ಧಸಾಮಗ್ರಿಗಳಿಂದ ಸಂಪನ್ನವಾಗಿದ್ದ, ಮಾವುತನನ್ನು ಕಳೆದುಕೊಂಡಿದ್ದ, ಶ್ರೇಷ್ಠವಾದ ಮತ್ತು ಬಲಿಷ್ಠವಾದ ಆನೆಯೊಂದು ಪ್ರತಿಧ್ವನಿಯನ್ನೇ ಅನುಸರಿಸಿ, ಅಶ್ವತ್ಥಾಮ-ಪಾಂಡ್ಯರು ಯುದ್ಧಮಾಡುತ್ತಿದ್ದ ಸ್ಥಳಕ್ಕೆ ಅತ್ಯಂತಾವಸರದಿಂದ ಬಂದಿತು. ಅಶ್ವತ್ಥಾಮನ ಬಾಣಗಳಿಂದ ಗಾಯಗೊಳಿಸಲ್ಪಟ್ಟ ಪಾಂಡ್ಯನು ಪ್ರತಿಗಜದಂತೆ ಗರ್ಜಿಸಿ ಬೇಗನೆ ಆ ಆನೆಯ ಬಳಿಗೆ ಧಾವಿಸಿದನು. ಆನೆಗಳನ್ನೇರಿ ಯುದ್ಧಮಾಡುವುದರಲ್ಲಿ ನಿಪುಣನಾದ, ಮಲಯಧ್ವಜನಾದ ಪಾಂಡ್ಯರಾಜನು-ಪರ್ವತಶಿಖರ ಸದೃಶವಾದ, ಆನೆಗಳಲ್ಲಿಯೇ ಶ್ರೇಷ್ಠವಾದ, ತನ್ನೆದುರಾಗಿ ಬಂದ ಆ ಆನೆಯ ಮೇಲೆ-ಸಿಂಹವು ಪರ್ವತಶಿಖರವನ್ನು ಬಹಳ ಬೇಗ ಹತ್ತಿ ಕುಳಿತುಕೊಳ್ಳುವಂತೆ-ಹತ್ತಿಕುಳಿತನು. ಮಲಯದೇಶಕ್ಕೆ ರಾಜನಾದ ಪಾಂಡ್ಯರಾಜನು ಆನೆಯ ಮೇಲೆ ಕುಳಿತು ಅದನ್ನು ಅಂಕುಶದಿಂದ ನಿಯಂತ್ರಿಸುತ್ತಾ ಬಲ, ಅಸ್ತ್ರಪ್ರಹರಣ, ಉತ್ತಮಪ್ರಯತ್ನ ಮತ್ತು ಕೋಪ-ಇವುಗಳಿಂದ ಪ್ರೇರಿತನಾಗಿ, ಸೂರ್ಯನ ರಶ್ಮಿಗೆ ಸಮಾನವಾದ ವರ್ಚಸ್ಸಿನಿಂದ ಕೂಡಿದ್ದ ತೋಮರವನ್ನು ಗುರುವಿನ ಮಗನಾದ ಅಶ್ವತ್ಥಾಮನ ಮೇಲೆ ಶೀಘ್ರವಾಗಿ ಪ್ರಯೋಗಿಸಿದನು. ಶ್ರೇಷ್ಠವಾದ ಮಣಿಗಳಿಂದಲೂ, ಉತ್ತಮವಾದ ವಜ್ರಗಳಿಂದಲೂ, ಸುವರ್ಣದಿಂದಲೂ, ವಸ್ತ್ರ, ಮಾಲೆ ಮತ್ತು ಮುತ್ತುಗಳಿಂದಲೂ ಸಮಲಂಕೃತವಾಗಿದ್ದ ಅಶ್ವತ್ಥಾಮನ ಶಿರೋಭೂಷಣವಾಗಿದ್ದ ಕಿರೀಟವನ್ನು "ನೀನು ಹತನಾದೆ-ನಿನ್ನ ಪ್ರಾಣಪಕ್ಷಿಯು ಹಾರಿಹೋಯಿತೆಂದೇ ಭಾವಿಸು" "ಹತೋ ಹತೋಽಸಿ" ಎಂಬುದಾಗಿ ಕೂಗುತ್ತಾ ಗಹಗಹಿಸಿ ನಗುತ್ತಾ ತೋಮರದಿಂದ ಪ್ರಹರಿಸಿದನು. ಸೂರ್ಯ, ಚಂದ್ರ ಮತ್ತು ಅಗ್ನಿಗಳ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಅಶ್ವತ್ಥಾಮನ ಆ ಕಿರೀಟವು ತೋಮರದ ಪ್ರಹಾರದಿಂದ ಚೂರು-ಚೂರುಗಳಾಗಿ ಒಡೆದು ಘೋರವಾದ ಶಬ್ದದೊಡನೆ–ಮಹೇಂದ್ರನ ವಜ್ರಾಯುಧದಿಂದ ಪ್ರಹೃತವಾದ ಪರ್ವತದ ಶಿಖರವು ಭೂಮಿಯ ಮೇಲೆ ಬೀಳುವಂತೆ–ನೆಲದ ಮೇಲೆ ಬಿದ್ದಿತು.

ಅಶ್ವತ್ಥಾಮನು ಕಾಲಿನಿಂದ ತುಳಿಯಲ್ಪಟ್ಟ ಸರ್ಪದಂತೆ ಮಹಾಕೋಪದಿಂದ ಉರಿದುಹೋದನು. ಒಡನೆಯೇ ಅವನು ಶತ್ರುಗಳಿಗೆ ಬಾಧೆಯನ್ನುಂಟು ಮಾಡುವ, ಯಮದಂಡಸದೃಶವಾದ ಹದಿನಾಲ್ಕು ಬಾಣಗಳನ್ನು ಬತ್ತಳಿಕೆ ಯಿಂದ ಕೈಗೆತ್ತಿಕೊಂಡನು. ಐದು ಬಾಣಗಳಿಂದ ಪಾಂಡ್ಯರಾಜನು ಕುಳಿತಿದ್ದ ಆನೆಯ ನಾಲ್ಕು ಕಾಲುಗಳನ್ನೂ ಮತ್ತು ಸೊಂಡಿಲನ್ನೂ ಕತ್ತರಿಸಿದನು. ಮೂರು ಬಾಣಗಳಿಂದ ಪಾಂಡ್ಯರಾಜನ ಎರಡು ತೋಳುಗಳನ್ನೂ ಮತ್ತು ತಲೆಯನ್ನೂ ಕತ್ತರಿಸಿದನು. ಉಳಿದ ಆರು ಬಾಣಗಳಿಂದ ಪಾಂಡ್ಯರಾಜನ ಹಿಂಬಾಲಕರಾದ, ಉತ್ತಮವಾದ ಕಾಂತಿಯಿಂದ ಶೋಭಿಸುತ್ತಿದ್ದ ಆರು ಮಹಾರಥರನ್ನೂ ಸಂಹರಿಸಿದನು. ನೀಳವಾಗಿಯೂ ಮತ್ತು ದುಂಡಾ ಗಿಯೂ ಇದ್ದ, ಶ್ರೇಷ್ಠವಾದ ಚಂದನದಿಂದ ಲೇಪನಮಾಡಲ್ಪಟ್ಟಿದ್ದ, ಸುವರ್ಣದಿಂದಲೂ-ಮುತ್ತಿನ ಮಣಿಗಳಿಂದಲೂ-ವಜ್ರದ ಹರಳು ಗಳಿಂದಲೂ ಸಮಲಂಕೃತವಾಗಿದ್ದ, ಅಶ್ವತ್ಥಾಮನಿಂದ ಕತ್ತರಿಸಲ್ಪಟ್ಟ ಪಾಂಡ್ಯ ರಾಜನ ಎರಡು ಭುಜಗಳೂ ನೆಲದ ಮೇಲೆ ಬಿದ್ದು-ಗರುಡನಿಂದ ಹತವಾಗಿ ನೆಲದ ಮೇಲೆ ಬಿದ್ದು ವಿಲಿ-ವಿಲಿಗುಟ್ಟುತ್ತಿರುವ ಎರಡು ಸರ್ಪಗಳಂತೆಯೇ ಕಾಣುತ್ತಿದ್ದುವು. ಪೂರ್ಣಚಂದ್ರನ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಪಾಂಡ್ಯ ರಾಜನ ಶಿರಸ್ಸು–ರೋಷದಿಂದ ಕೆಂಪಾದ ಮತ್ತು ವಿಶಾಲ ವಾದ ಕಣ್ಣುಗಳನ್ನೂ, ಎತ್ತರವಾದ ಮೂಗನ್ನೂ ಹೊಂದಿದ್ದು ನೆಲಕ್ಕೆ ಬಿದ್ದ ಮೇಲೂ ಕಂಗೊಳಿಸುತ್ತಿದ್ದಿತು. ಕರ್ಣಕುಂಡಲಗಳಿಂದ ಯುಕ್ತವಾಗಿದ್ದ ಆ ಮುಖವು ವಿಶಾಖಾನಕ್ಷತ್ರಗಳ ಮಧ್ಯಭಾಗದಲ್ಲಿರುವ ಪೂರ್ಣಚಂದ್ರ ನಂತೆಯೇ ಪ್ರಕಾಶಿಸುತ್ತಿದ್ದಿತು. ಕರ್ಮಕುಶಲನಾದ ಯಾಜ್ಞಿಕನು *ಇಂದ್ರಾದಿ ಹತ್ತು ದೇವತೆಗಳಿಗೆ ಹಂಚಲು ಹವಿಸ್ಸನ್ನು ಹತ್ತು ಭಾಗಗಳಾಗಿ ವಿಂಗಡಿಸುವಂತೆ–ಅಸ್ತ್ರಕುಶಲನಾದ ಅಶ್ವತ್ಥಾಮನು ಐದು ಬಾಣಗಳ ಪ್ರಯೋಗದಿಂದ ಆನೆಯನ್ನು ಆರುಭಾಗಗಳನ್ನಾಗಿಯೂ ಮೂರು ಬಾಣಗಳ ಪ್ರಯೋಗದಿಂದ ಪಾಂಡ್ಯನನ್ನು ನಾಲ್ಕು ಭಾಗಗಳನ್ನಾಗಿಯೂ ಒಟ್ಟು ಹತ್ತು ಭಾಗಗಳಾಗಿ ವಿಂಗಡಿಸಿದನು. ಮೃತರಾದ ಪಿತೃಗಳ ಪ್ರಿಯ

---

*ಯಥಾ ಹವಿಃ ತದ್ದಶದೈವತಂ ತಥಾ॥ ಎಂಬುದಕ್ಕೆ ವ್ಯಾಖ್ಯಾನಕಾರರು ದಶಹವಿಷ್ಯಾಯಾಂ ಇಷ್ಟೌ ಪಿಷ್ಟಪಿಣ್ಡೋ ದಶಧಾ ಕ್ರಿಯತೇ ತಥಾ। ದಶಹವಿಷ್ಯಾ ಎಂಬ ಯಜ್ಞದಲ್ಲಿ ಪಿಷ್ಟಪಿಂಡವು ಹತ್ತು ಭಾಗಗಳಾಗಿ ವಿಂಗಡಿಸಲ್ಪಡುವ ರೀತಿಯಲ್ಲಿ-ಎಂದು ವಿವರಿಸಿದ್ದಾರೆ.

ನಾದ ಚಿತಾಗ್ನಿಯು ಯಾವ ರೀತಿಯಲ್ಲಿ ತನ್ನ ಮೇಲಿರುವ ಶರೀರಗಳನ್ನು ಸ್ವಧಾರೂಪವಾಗಿ ಪಡೆದು ಧಗ-ಧಗಿಸುತ್ತಾ ಕಬಳಿಸಿದನಂತರ ಅಸ್ಥಿಸಂಚಯನದ ದಿವಸ ಜಲಪ್ರವಾಹದಿಂದ ಶಾಂತನಾಗುವನೋ–ಅದೇ ರೀತಿಯಲ್ಲಿ ಪಾಂಡ್ಯರಾಜನು ಶತ್ರುಪಕ್ಷದ ಕುದುರೆಗಳನ್ನೂ, ಆನೆಗಳನ್ನೂ ಮತ್ತು ಮನುಷ್ಯರನ್ನೂ ಖಂಡಶಃ ಕತ್ತರಿಸಿ ರಣಾಂಗಣದಲ್ಲಿ ಹರಡಿ, ತನ್ಮೂಲಕವಾಗಿ ರಾಕ್ಷಸರಿಗೆ ಅಪಾರವಾದ ಭೋಜನವನ್ನಿತ್ತು, ಕಡೆಯಲ್ಲಿ ಅಶ್ವತ್ಥಾಮನ ಬಾಣಗಳಿಂದ ಚಿರಶಾಂತಿಯನ್ನು ಪಡೆದುಕೊಂಡನು. ವಿದ್ಯೆಯಿಂದ ಪರಿಪೂರ್ಣನಾಗಿದ್ದ, ಮಾಡಬೇಕಾದ ಕರ್ಮವನ್ನು ಮಾಡಿ ಮುಗಿಸಿದ್ದ, ಗುರುಪುತ್ರನಾದ ಅಶ್ವತ್ಥಾಮನನ್ನು ಸುಹೃದರಿಂದ ಆವೃತನಾದ ನಿನ್ನ ಮಗ ದುರ್ಯೋಧನನು ಸಂತೋಷಭರಿತನಾಗಿ-ಬಲಿಚಕ್ರವರ್ತಿಯನ್ನು ಜಯಿಸಿದ ಮಹಾವಿಷ್ಣುವನ್ನು ಇಂದ್ರನು ಪೂಜಿಸಿದಂತೆ–ಸಂಪೂಜಿಸಿದನು.”

೨೦ನೆಯ ಅಧ್ಯಾಯವು ಮುಗಿಯಿತು.

೨೧ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕೌರವ–ಪಾಂಡವಸೈನಿಕರ ನಡುವೆ ಭಯಂಕರ ಯುದ್ಧ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

“ಸಂಜಯ! ಪಾಂಡ್ಯರಾಜನು ಅಶ್ವತ್ಥಾಮನಿಂದ ಹತನಾದನಂತರ ಏಕೈಕವೀರನಾದ ಕರ್ಣನಿಂದ ಪಾಂಡವರ ಸೈನ್ಯವು ಪಲಾಯನ ಮಾಡುತ್ತಿರಲಾಗಿ ಅರ್ಜುನನೇನು ಮಾಡಿದನು? ಪಾಂಡುವಿನ ಮಗನಾದ ಅರ್ಜುನನು ಯುದ್ಧವಿದ್ಯೆಯಲ್ಲಿ ಸಂಪೂರ್ಣವಾಗಿ ಪರಿಶ್ರಮಪಡೆದಿರ ತಕ್ಕವನು; ಯುದ್ಧದ ಸಂಬಂಧವಾಗಿರುವ ವಿದ್ಯೆಯನ್ನು ಸಂಪೂರ್ಣವಾಗಿ ಅಧ್ಯಯನಮಾಡಿರತಕ್ಕವನು; ಮಹಾಬಲಿಷ್ಠನು; ವೀರನು; ಧರ್ಮಯುಕ್ತ ನಾದವನು; ಮಹಾತ್ಮನಾದ ಶಂಕರನಿಂದಲೇ ಸರ್ವಪ್ರಾಣಿಗಳಲ್ಲಿಯೂ ಪ್ರಧಾನನೆಂದೂ ಸಕಲಪ್ರಾಣಿಗಳಿಂದಲೂ ಅಜೇಯನೆಂದೂ ಅನುಗ್ರಹವನ್ನು ಪಡೆದಿರುವನು. ಈ ಕಾರಣದಿಂದಲೇ ಶತ್ರುಹಂತಕನಾದ ಧನಂಜಯ ನಿಂದಲೇ ನನಗೆ ಅತಿಯಾದ ಭಯವುಂಟಾಗಿದೆ. ಪಾರ್ಥನು ಆ ಸಮಯದಲ್ಲಿ ಏನು ಮಾಡಿದನೆಂಬುದನ್ನು ನನಗೆ ಹೇಳು.”

"ಮಹಾರಾಜ! ಪಾಂಡ್ಯರಾಜನು ಅಶ್ವತ್ಥಾಮನಿಂದ ಹತನಾದ ನಂತರ ಶ್ರೀಕೃಷ್ಣನು ಬಹಳ ಅವಸರದಿಂದ ಅರ್ಜುನನಿಗೆ ಹಿತಕರವಾದ ಈ ಮಾತುಗಳನ್ನು ಹೇಳಿದನು:

"ಅರ್ಜುನ! ಯುಧಿಷ್ಠಿರರಾಜನನ್ನೂ ನಾನು ಕಾಣುತ್ತಿಲ್ಲ. ಯುದ್ಧಮಾಡಲು ಹೋದ ಇತರ ಪಾಂಡವರನ್ನೂ ಕಾಣುತ್ತಿಲ್ಲ. ಯುದ್ಧಕ್ಕೆ ಹಿಂದಿರುಗಿದ ಪಾರ್ಥರು ಶತ್ರುಗಳ ಮಹಾಸೈನ್ಯವನ್ನು ಭಗ್ನಗೊಳಿಸಿದರು. ಆದರೆ ಅಶ್ವತ್ಥಾಮನ ಸಂಕಲ್ಪಾನುಸಾರವಾಗಿ (ಯೋಜನೆಗೆ ಅನುಗುಣವಾಗಿ) ಕರ್ಣನು ಸೃಂಜಯರನ್ನು ಸಂಹಾರಮಾಡಿದ್ದಾನೆ. ನಮ್ಮ ಪಕ್ಷದಲ್ಲಿ ಅಶ್ವ-ರಥಗಳ ಮಹಾಸಂಹಾರವೇ ನಡೆದಿದೆ."

ಇದೇ ಮುಂತಾಗಿ ರಣಾಂಗಣದ ಎಲ್ಲ ವಿಭಾಗಗಳಲ್ಲಿಯೂ ನಡೆದ ಯುದ್ಧದ ಸಂಬಂಧವಾಗಿ ಎಲ್ಲ ವಿಷಯಗಳನ್ನೂ ವೀರನಾದ ವಾಸುದೇವನು ಅರ್ಜುನನಿಗೆ ಹೇಳಿದನು. ಶ್ರೀಕೃಷ್ಣನ ಮಾತುಗಳನ್ನು ಕೇಳಿ ತನ್ನ ಅಣ್ಣನಾದ ಯುಧಿಷ್ಠಿರನ ಅತಿಘೋರವಾದ ಮಹಾಭಯವನ್ನು ಕಂಡು ಅರ್ಜುನನು ಶ್ರೀಕೃಷ್ಣನಿಗೆ ಹೇಳಿದನು: "ವಾಹಯಾಶ್ವಾನ್ಹೃಷೀಕೇಶ ಕ್ಷಿಪ್ರಂ–ಹೃಷೀಕೇಶ! ಬಹಳ ಬೇಗ ಕುದುರೆಗಳನ್ನು ಮುಂದೆ ನಡೆಸು."

ಅರ್ಜುನನ ಮಾತನ್ನು ಕೇಳಿ ಶ್ರೀಕೃಷ್ಣನು ಪ್ರತಿಯೋಧನೇ ಇಲ್ಲದ ಮಹಾರಥದ ಮೂಲಕವಾಗಿ ಮುಂದೆ ನಡೆದನು. (ರಥವನ್ನು ಮುಂದಕ್ಕೆ ನಡೆಸಿದನು.) ಪುನಃ ಅಲ್ಲಿ ಸುದಾರುಣವಾದ ಸಂಗ್ರಾಮವು ಪ್ರಾರಂಭ ವಾಯಿತು. ಭಯರಹಿತರಾದ ಕುರು-ಪಾಂಡವಸೈನಿಕರು ಪುನಃ ಅಲ್ಲಿ ಸೇರಿ ದರು. ಪಾಂಡವರೆಲ್ಲರೂ ಭೀಮಸೇನನನ್ನು ಮುಂದುಮಾಡಿಕೊಂಡು ಯುದ್ಧದಲ್ಲಿ ತೊಡಗಿದ್ದರು. ನಾವೆಲ್ಲರೂ ಕರ್ಣಪ್ರಮುಖರಾಗಿದ್ದೆವು. ರಾಜಶ್ರೇಷ್ಠನೇ! ಅನಂತರ ಕರ್ಣನಿಗೂ ಮತ್ತು ಪಾಂಡವರಿಗೂ ಯಮ ರಾಷ್ಟ್ರವರ್ಧಕವಾದ ಘೋರಯುದ್ಧವು ಪ್ರಾರಂಭವಾಯಿತು. ಉಭಯಪಕ್ಷ ಗಳ ಸೈನಿಕರೂ ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನು ಸಂಹರಿಸಬೇಕೆಂಬ ಇಚ್ಛೆಯಿಂದ ಧನುಸ್ಸುಗಳನ್ನೂ, ಬಾಣಗಳನ್ನೂ, ಪರಿಘಗಳನ್ನೂ, ಕತ್ತಿ ಗಳನ್ನೂ, ಪಟ್ಟಿಶಗಳನ್ನೂ, ತೋಮರಗಳನ್ನೂ, ಮುಸಲಗಳನ್ನೂ,

ಭುಶುಂಡಿಗಳನ್ನೂ, ಶಕ್ತಿಗಳನ್ನೂ, ಋಷ್ಟಿಗಳನ್ನೂ, ಗಂಡುಗೊಡಲಿಗಳನ್ನೂ, ಗದೆಗಳನ್ನೂ, ಪ್ರಾಸಗಳನ್ನೂ, ನಿಶಿತವಾದ ಕುಂತಗಳನ್ನೂ, ಭಿಂದಿಪಾಲ ಗಳನ್ನೂ ಮತ್ತು ದೊಡ್ಡ-ದೊಡ್ಡ ಅಂಕುಶಗಳನ್ನೂ ತೆಗೆದುಕೊಂಡು ಅನ್ಯೋನ್ಯ ವಾಗಿ ಕೊಲ್ಲುವ ಇಚ್ಛೆಯಿಂದ ಬಹಳ ಬೇಗ ರಣಾಂಗಣಕ್ಕೆ ಬಂದರು.

ರಥಿಕರು ಬಾಣಸಹಿತವಾದ ಧನುಸ್ಸುಗಳ ಟೇಂಕಾರಶಬ್ದದಿಂದ ಸ್ವರ್ಗಾಂತರಿಕ್ಷಗಳಲ್ಲಿಯೂ, ದಿಕ್ಕು ಮತ್ತು ಉಪದಿಕ್ಕುಗಳಲ್ಲಿಯೂ ರಥಚಕ್ರಗಳ ಗಡ-ಗಡಾಶಬ್ದದಿಂದ ಭೂಮಿಯಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಾ ಶತ್ರುಗಳನ್ನು ಆಕ್ರಮಿಸಿದರು. ಕಲಹದ ಅಂತವನ್ನು ಕಾಣಬೇಕೆಂಬ ಇಚ್ಛೆ ಯಿಂದ ಆ ಎಲ್ಲ ವೀರರೂ ಆ ಮಹಾಶಬ್ದದಿಂದ ಸಂಹೃಷ್ಟರಾಗಿ ಶತ್ರುಪಕ್ಷದ ವೀರರೊಡನೆ ಮಹಾಘೋರವಾದ ಯುದ್ಧದಲ್ಲಿ ತೊಡಗಿದರು. ಮೌರ್ವೀ, ಕೈಚೀಲ ಮತ್ತು ಧನುಸ್ಸುಗಳ ಶಬ್ದಗಳೂ, ಆನೆಗಳ ಘೀಂಕಾರಗಳೂ, ಪದಾತಿ ಗಳ ಗರ್ಜನೆಗಳೂ, ಅಸುನೀಗಿ ಕೆಳಕ್ಕೆ ಬೀಳುತ್ತಿರುವ ಜನರ ಆರ್ತನಾದಗಳೂ ಸರ್ವತ್ರ ಕೇಳಿಬರುತ್ತಿದ್ದುವು. ಗಟ್ಟಿಯಾಗಿ ಗರ್ಜನೆಮಾಡುತ್ತಿದ್ದ ಶೂರರ ವಿಧ-ವಿಧವಾದ ಚಪ್ಪಾಳೆಯ ಶಬ್ದಗಳನ್ನು ಕೇಳಿದೊಡನೆಯೇ ಅನೇಕಸೈನಿಕರು ಭಯಗೊಂಡರು. ಕೆಲವರು ಕೆಳಕ್ಕೇ ಬಿದ್ದುಬಿಟ್ಟರು; ಮತ್ತೆ ಕೆಲವರು ಮ್ಲಾನಿಹೊಂದಿದರು (ಕಳೆಗುಂದಿದರು). ಗಟ್ಟಿಯಾಗಿ ಗರ್ಜನೆಮಾಡುತ್ತಿದ್ದ, ಶಸ್ತ್ರಾಸ್ತ್ರಗಳ ಮಳೆಯನ್ನು ಸುರಿಸುತ್ತಿದ್ದ, ಅನೇಕಶತ್ರುಸೈನಿಕರನ್ನು ಕರ್ಣನು ನಿಶಿತವಾದ ಬಾಣಗಳಿಂದ ಸಂಹರಿಸಿದನು. ಕರ್ಣನು ತನ್ನ ನಿಶಿತವಾದ ಬಾಣಗಳಿಂದ ಅಶ್ವ-ಸೂತ-ಧ್ವಜಗಳಿಂದ ಕೂಡಿದ ಪಾಂಚಾಲವೀರಯೋಧರ ಐದು ರಥಗಳನ್ನು ಧ್ವಂಸಮಾಡಿ ಅವರೆಲ್ಲರನ್ನೂ ಯಮಾಲಯಕ್ಕೆ ಕಳುಹಿಸಿ ದನು. ಪುನಃ ಪಾಂಚಾಲವೀರರ ಹತ್ತು ರಥಗಳನ್ನು ಧ್ವಂಸಮಾಡಿದನು. ರೋಷಾವೇಶದಿಂದ ಮುನ್ನುಗ್ಗಿ ತನ್ನ ಮೇಲೆ ಬೀಳಲು ಬಂದ ಐವರು ರಥಿಗಳನ್ನೂ ಸೂತಾಶ್ವ-ಧ್ವಜಗಳ ಸಹಿತವಾಗಿ ಧ್ವಂಸ ಮಾಡಿದನು. ಅದರಿಂದ ಕುಪಿತರಾದ, ಮಹಾವೀರ್ಯರಾದ, ಶೀಘ್ರಾಸ್ತ್ರ ರಾದ ಪಾಂಡವರಕಡೆಯ ಮುಖ್ಯ-ಮುಖ್ಯಯೋಧರು ಕರ್ಣನನ್ನು ನಾಲ್ಕು ಕಡೆಗಳಿಂದಲೂ ಆಕ್ರಮಿಸಿದರು. ಆಗ ಕರ್ಣನು ಶತ್ರುಸೈನಿಕರನ್ನು ಬಾಣಗಳ ಸುರಿಸುವಿಕೆಯಿಂದ ಮಥಿಸುತ್ತಾ—ಪಕ್ಷಿಗಳಿಂದ ಸಮಾವೃತವಾದ ಸರೋವರವನ್ನು ಸಲಗವು

ಪ್ರವೇಶಿಸುವಂತೆ–ಪಾಂಡವರ ಸೈನ್ಯದೊಳಗೆ ಪ್ರವೇಶಿಸಿದನು. ರಾಧಾಪುತ್ರ ನಾದ ಕರ್ಣನು ಪಾಂಡವರ ಸೈನ್ಯದ ಮಧ್ಯಭಾಗಕ್ಕೆ ಹೋಗಿ, ಶ್ರೇಷ್ಠವಾದ ಧನುಸ್ಸನ್ನು ಹಿಂದಕ್ಕೂ ಮುಂದಕ್ಕೂ ಓಲಾಡಿಸುತ್ತಾ, ನಿಶಿತವಾದ ಬಾಣ ಗಳಿಂದ ಶತ್ರುಸೈನಿಕರ ಶಿರಸ್ಸುಗಳನ್ನು ಕತ್ತರಿಸುತ್ತಾ ಕೆಳಕ್ಕೆ ಬೀಳಿಸುತ್ತಿದ್ದನು. ಕರ್ಣನ ಸತತವಾದ ಬಾಣಪ್ರಯೋಗದಿಂದಾಗಿ ಸೈನಿಕರು ತೊಟ್ಟಿದ್ದ ಮತ್ತು ಹಿಡಿದಿದ್ದ ಕವಚಗಳೂ ಮತ್ತು ಗುರಾಣಿಗಳೂ ಭಿನ್ನವಾಗಿ ಕೆಳಕ್ಕೆ ಬೀಳುತ್ತಿ ದ್ದುವು. ಶತ್ರುಸೈನಿಕರು ಕರ್ಣನ ಎರಡನೆಯ ಬಾಣದ ಪ್ರಹಾರವನ್ನು ಸಹಿಸಿಕೊಳ್ಳಲು ಸಮರ್ಥರಾಗಿರಲಿಲ್ಲ. (ಕರ್ಣನ ಒಂದು ಬಾಣದ ಪ್ರಹಾ ರವೇ ಶತ್ರುಸೈನಿಕರನ್ನು ಚಡ-ಪಡಿಸುವಂತೆ ಮಾಡುತ್ತಿದ್ದಿತು.) ಕುದುರೇ ಸವಾರರು ಚಾವಟಿಗಳಿಂದ ಕುದುರೆಗಳನ್ನು ಪ್ರಹರಿಸುವಂತೆ– ಕರ್ಣನು ತನ್ನ ಧನುಸ್ಸಿನ ಮೌರ್ವಿಯಿಂದ ಚ್ಯುತವಾದ, ಶತ್ರುಗಳ ಕವಚ- ದೇಹ ಮತ್ತು ಪ್ರಾಣಗಳನ್ನು ಮಥಿಸುವ ಬಾಣಗಳಿಂದ ಶತ್ರುಗಳ ಕೈಚೀಲಗಳನ್ನು, ಅವರು ಪುನಃ ಶರಸಂಧಾನಮಾಡಲು ಸಾಧ್ಯವಾಗದಂತೆ ಕತ್ತರಿಸುತ್ತಿದ್ದನು. ಸಿಂಹವು ಮೃಗಗಳ ಸಮೂಹಗಳನ್ನು ಕಂಡೊಡನೆಯೇ ಅವುಗಳ ಮೇಲೆಬಿದ್ದು ಕೊಲ್ಲುವಂತೆ–ಕರ್ಣನು ತನ್ನ ಬಾಣಗಳು ಹೋಗುವ ಅಂತರದಲ್ಲಿ ಸಿಕ್ಕಿದ ಪಾಂಡು-ಸೃಂಜಯ-ಪಾಂಚಾಲಸೈನಿಕರನ್ನು ಬಹಳ ಬೇಗ ಸಂಹರಿಸುತ್ತಿದ್ದನು. ಅನಂತರ ಅವನ ಉಪಟಳದಿಂದ ಕೋಪಗೊಂಡ ಪಾಂಚಾಲ ರಾಜನಾದ ಧೃಷ್ಟದ್ಯುಮ್ನ, ದ್ರೌಪದಿಯ ಐವರು ಮಕ್ಕಳು, ನಕುಲ-ಸಹದೇವರು, ಯುಯುಧಾನ–ಇವರೆಲ್ಲರೂ ಒಟ್ಟಾಗಿ ಸೇರಿ ಕರ್ಣನನ್ನು ಆಕ್ರಮಿಸಿದರು. ಆ ಸಮಯದಲ್ಲಿ ಕುರು-ಪಾಂಚಾಲ-ಪಾಂಡವಯೋಧರು ಪರಿಶ್ರಮಪೂರ್ವಕವಾಗಿ ಯುದ್ಧಮಾಡುತ್ತಿರಲಾಗಿ ಎರಡೂ ಪಕ್ಷಗಳ ಸೈನಿಕರೂ ಪ್ರಿಯವಾದ ತಮ್ಮ ಪ್ರಾಣಗಳ ಮೇಲಿನ ಆಸೆಯನ್ನೂ ತೊರೆದು ಒಬ್ಬರು ಮತ್ತೊಬ್ಬರನ್ನು ಸಂಹರಿಸುತ್ತಿದ್ದರು. ಯುದ್ಧಸನ್ನದ್ಧರಾಗಿದ್ದ, ಕವಚಗಳನ್ನು ಧರಿಸಿದ್ದ, ಶಿರಸ್ತ್ರಾಣಗಳನ್ನು ತೊಟ್ಟಿದ್ದ, ಆಭರಣಗಳನ್ನು ಧರಿಸಿದ್ದ, ಮಹಾಬಲಿಷ್ಠರಾದ ಯೋಧರು ಗರ್ಜನೆಮಾಡುತ್ತಾ, ಯುದ್ಧಕ್ಕಾಗಿ ಎದುರಾಳಿಗಳನ್ನು ಆಹ್ವಾನಿಸುತ್ತಾ, ಕುಣಿದಾಡುತ್ತಾ, ಮೇಲಕ್ಕೆತ್ತಿದ್ದ ಕಾಲದಂಡಕ್ಕೆ ಸಮಾನವಾಗಿದ್ದ ಗದೆಗಳಿಂದಲೂ, ಮುಸಲಗಳಿಂದಲೂ, ಪರಿಘಗಳಿಂದಲೂ ಕೂಡಿದವರಾಗಿ ಒಬ್ಬರನ್ನೊಬ್ಬರು ಆಕ್ರಮಿಸಿದರು. ಒಬ್ಬರು ಮತ್ತೊಬ್ಬರನ್ನು ಆಯುಧಗಳಿಂದ ಪ್ರಹರಿಸುತ್ತಿದ್ದರು. ಪರಸ್ಪರವಾಗಿ

ಪೆಟ್ಟುತಿಂದು ಭೂಮಿಯ ಮೇಲೆ ಬೀಳುತ್ತಿದ್ದರು. ಅನೇಕರು ಶರೀರಗಳಿಂದ ರಕ್ತವನ್ನು ಸುರಿಸುತ್ತಿದ್ದರು. ಆ ಯುದ್ಧದಲ್ಲಿ ಅನೇಕರು ಮೆದುಳುಗಳನ್ನೇ ಕಳೆದುಕೊಂಡಿದ್ದರು. ಹಲವರ ಕಣ್ಣುಗಳೇ ಹೋಗಿದ್ದುವು. ಹಲವಾರು ಸೈನಿಕರು ಆಯುಧಗಳಿಂದ ವಿಹೀನರಾಗಿದ್ದರು.

ಕೆಲವು ವೀರರ ಶರೀರಗಳು ಅಸ್ತ್ರ-ಶಸ್ತ್ರಗಳಿಂದ ವ್ಯಾಪ್ತವಾಗಿ ಪ್ರಾಣ ಶೂನ್ಯವಾಗಿ ನಿಂತಿದ್ದುವು. ಆದರೆ ಅವರ ದಾಳಿಂಬೇಹಣ್ಣಿನಂತಹ ಮುಖ ಗಳು ದಾಳಿಂಬೇಬೀಜಗಳಂತಿರುವ ರಕ್ತಸಿಕ್ತವಾಗಿದ್ದ ದಂತಪಙ್ತೆಗಳಿಂದ ಪರಿಶೋಭಿಸುತ್ತಿದ್ದುದರಿಂದ ಅವರೆಲ್ಲರೂ ಜೀವಂತರಾಗಿರುವಂತೆಯೇ ಕಾಣುತ್ತಿದ್ದರು. ಮಹಾಸಾಗರಸದೃಶವಾಗಿದ್ದ ಆ ರಣಾಂಗಣದಲ್ಲಿ ಕ್ರುದ್ಧ ರಾಗಿದ್ದ ಯೋಧರು ಪರಶು, ಪಟ್ಟಿಶ, ಖಡ್ಗ, ಶಕ್ತಿ, ಭಿಂದಿಪಾಲ, ನಖರ, ಪ್ರಾಸ, ತೋಮರ-ಇವೇ ಮುಂತಾದ ಆಯುಧಗಳಿಂದ ಎದುರಾಳಿಗಳನ್ನು ಕತ್ತರಿಸುತ್ತಿದ್ದರು; ದೂರಕ್ಕೆಸೆಯುತ್ತಿದ್ದರು; ತುಂಡು-ತುಂಡು ಮಾಡು ತ್ತಿದ್ದರು; ಹಾಗೂ ಸಂಹರಿಸುತ್ತಿದ್ದರು. ಕತ್ತರಿಸಿದನಂತರ ರಕ್ತಚಂದನವೃಕ್ಷವು ಕೆಂಪುಬಣ್ಣದ ರಸವನ್ನು ಸುರಿಸುವಂತೆ–ಅನ್ಯೋನ್ಯಪ್ರಹಾರಗಳಿಂದ ರಕ್ತ ದಿಂದ ತೋಯ್ದುಹೋಗಿದ್ದ ಯೋಧರು ಪ್ರಾಣಗಳನ್ನು ತೊರೆದು ಯುದ್ಧ ಭೂಮಿಯಲ್ಲಿ ಬಿದ್ದಿರುತ್ತಿದ್ದರು. ರಥಿಗಳಿಂದ ರಥಿಗಳು ಧ್ವಂಸಮಾಡಲ್ಪಡುತ್ತಿದ್ದರು. ಆನೆಗಳು ಆನೆಗಳನ್ನು ಸಂಹರಿಸುತ್ತಿದ್ದುವು. ಪದಾತಿಗಳು ಪದಾತಿಗಳನ್ನೇ ಕೊಲ್ಲುತ್ತಿದ್ದರು. ಕುದುರೆಗಳು ಕುದುರೆ ಗಳನ್ನೇ ಸಂಹಾರಮಾಡುತ್ತಿದ್ದುವು. ಧ್ವಜಗಳೂ, ಶಿರಸ್ಸುಗಳೂ, ಛತ್ರಗಳೂ, ಆನೆಗಳ ಸೊಂಡಿಲುಗಳೂ, ಯೋಧರ ಭುಜಗಳೂ ಕ್ಷುರ-ಭಲ್ಲ-ಅರ್ಧಚಂದ್ರ ಗಳಿಂದ ಕತ್ತರಿಸಲ್ಪಟ್ಟು ಭೂತಲದಲ್ಲಿ ರಾಶಿ-ರಾಶಿಯಾಗಿ ಬಿದ್ದಿದ್ದುವು. ಹೀಗೆ ಹತರಾದ ಸಾವಿರಾರು ಸೈನಿಕರು ರಣಾಂಗಣದಲ್ಲಿ ಬಿದ್ದಿದ್ದರು. ಅಶ್ವಾರೋಹಿಗಳು ಅನೇಕ ಶೂರ-ವೀರರನ್ನು ಸಂಹರಿಸಿದರು. ನೂರಾರು ಆನೆಗಳ ಸೊಂಡಿಲುಗಳನ್ನೂ ಕತ್ತರಿಸಿದರು. ಸೊಂಡಿಲುಗಳನ್ನು ಕಳೆದು ಕೊಂಡ ಆನೆಗಳು ರೋಷಾವೇಶದಿಂದ ತಮ್ಮ ಎದುರಿಗೆ ಸಿಕ್ಕಿದ ಪದಾತಿ ಗಳನ್ನೂ, ಆನೆಗಳನ್ನೂ, ರಥಗಳನ್ನೂ ಮತ್ತು ಕುದುರೆಗಳನ್ನೂ ತುಳಿದು ಭಗ್ನಗೊಳಿಸುತ್ತಿದ್ದುವು. ಅನಂತರ ಸೀಳಿಹೊದ ಪರ್ವತಗಳಂತೆ ಪತಾಕಾ-ಧ್ವಜಗಳ ಸಹಿತವಾಗಿ ಭೂಮಿಯ ಮೇಲೆ ಬಿದ್ದು ಪ್ರಾಣಗಳನ್ನು ತೊರೆಯುತ್ತಿದ್ದುವು. ಪದಾತಿಗಳು ತಮ್ಮ ಎದುರಾಗಿ ಬಂದ ಆನೆಗಳ

ಮತ್ತು ರಥಗಳ ಮೇಲೆ ಹಾರಿ ಆನೆಯನ್ನೂ, ರಥದಲ್ಲಿದ್ದ ಸಾರಥಿಯನ್ನೂ, ಯೋಧನನ್ನೂ ಮತ್ತು ಕುದುರೆಗಳನ್ನೂ ಸಂಹರಿಸುತ್ತಿದ್ದರು. ಈ ರೀತಿಯಲ್ಲಿ ಅನೇಕ ರಥ-ಗಜಯೋಧರು ಹತರಾದರು; ಹತರಾಗುತ್ತಿದ್ದರು ಮತ್ತು ಆನೆಗಳ ಮತ್ತು ರಥಗಳ ಮೇಲಿಂದ ಕೆಳಕ್ಕೆ ಬೀಳುತ್ತಿದ್ದರು. ಅಶ್ವಾರೋಹಿಗಳು ಪದಾತಿಗಳೊಡನೆ ಯುದ್ಧಮಾಡಲು ಹೋಗಿ ಅವರಿಂದಲೇ ಹತರಾಗುತ್ತಿದ್ದರು. ಪದಾತಿಸಮೂಹಗಳು ಅಶ್ವಾರೋಹಿಗಳಿಂದ ಅಪಾರಸಂಖ್ಯೆಯಲ್ಲಿ ಕೊಲ್ಲಲ್ಪಟ್ಟು ಯುದ್ಧಭೂಮಿಯಲ್ಲಿ ಮಲಗಿದ್ದುವು. ಮಹಾಯುದ್ಧದಲ್ಲಿ ಹತರಾಗಿ ಕೆಳಗೆ ಬಿದ್ದಿರುವ ಯೋಧರ ಮುಖಗಳೂ ಮತ್ತು ದೇಹಗಳೂ ಹೊಸಕಿದ ಕಮಲಗಳಂತೆಯೂ, ಬಾಡಿಹೋದ ಹಾರಗಳಂತೆಯೂ ಕಾಣುತ್ತಿದ್ದುವು. ಆನೆ, ಕುದುರೆ ಮತ್ತು ಮನುಷ್ಯರ ಅತ್ಯಂತಸುಂದರವಾದ ರೂಪಗಳು ಆ ಸಮಯದಲ್ಲಿ–ಕೆಸರಿನಲ್ಲಿ ಬಿದ್ದ ವಸ್ತ್ರದೋಪಾದಿಯಲ್ಲಿ ಕಣ್ಣಿಂದ ನೋಡಲಾಗದಷ್ಟು ವಿಕಾರವಾಗಿದ್ದುವು."

೨೧ನೆಯ ಅಧ್ಯಾಯವು ಮುಗಿಯಿತು.

## ಪಾಂಡವಸೈನ್ಯದ ಮೇಲೆ ಕೌರವರ ಗಜಸೈನ್ಯದ ಆಕ್ರಮಣ: ಪಾಂಡವರು ಪುಂಡ್ರಕನನ್ನು ಪರಾಜಯಗೊಳಿಸಿದುದು: ವಂಗರಾಜ ಮತ್ತು ಅಂಗರಾಜರ ವಧೆ: ಗಜಸೇನೆಯ ವಿನಾಶ: ಅಳಿದುಳಿದವರ ಪಲಾಯನ

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ನಿನ್ನ ಮಗನಿಂದ ಚೋದಿತರಾದ ಮಾವುತರು ತಮ್ಮ ಆನೆಗಳೊಡನೆ ಧೃಷ್ಟದ್ಯುಮ್ನನನ್ನು ಸಂಹರಿಸುವ ಇಚ್ಛೆಯಿಂದ ಪರಮಕ್ರುದ್ಧರಾಗಿ ಪಾರ್ಷತನನ್ನು ಆಕ್ರಮಿಸಿದರು. ಪೂರ್ವ ಮತ್ತು ದಕ್ಷಿಣ ದೇಶಗಳ ಶ್ರೇಷ್ಠಗಜಯೋಧರೂ, ಅಂಗ, ವಂಗ, ಪುಂಡ್ರ, ಮಗಧ, ತಾಮ್ರಲಿಪ್ತ, ಮೇಕಲ, ಕೋಸಲ, ಮದ್ರ, ದಶಾರ್ಣ-ಈ ದೇಶಗಳ ಗಜಯೋಧರೂ ಮತ್ತು ಗಜಯುದ್ಧದಲ್ಲಿ ಮಹಾಕುಶಲರಾದ ನಿಷಧರೂ ಕಲಿಂಗರೊಡನೆ ಸೇರಿಕೊಂಡು—ವೃಷ್ಟಿಯನ್ನು ಸುರಿಸುವ ಮೇಘಗಳೋಪಾದಿಯಲ್ಲಿ—ಪಾಂಚಾಲಸೇನೆಯನ್ನು ಶರ-ತೋಮರ-ನಾರಾಚಗಳಿಂದ ಅಭಿವರ್ಷಿಸಿದರು. ಆ ಆನೆಗಳು ಶತ್ರುಪಕ್ಷದಲ್ಲಿರುವ ಎಲ್ಲರನ್ನೂ ತುಳಿದು ಅಪ್ಪಳಿಸಬೇಕೆಂಬ ಆಕಾಂಕ್ಷೆಯನ್ನು ಹೊಂದಿದ್ದುವು. ಮಾವುತರು ಹಿಮ್ಮಡಿಗಳಿಂದಲೂ, ಹೆಬ್ಬೆರಳುಗಳ ತಿವಿತಗಳಿಂದಲೂ, ಅಂಕುಶಗಳಿಂದಲೂ ಆ ಆನೆಗಳನ್ನು ಮುನ್ನುಗ್ಗಲು ಪ್ರಚೋದಿಸುತ್ತಿದ್ದರು. ಅದನ್ನು ನೋಡಿ ಪಾರ್ಷತನು ನಾರಾಚಗಳೆಂಬ ಬಾಣಗಳಿಂದ ಗಜಸೈನ್ಯವನ್ನೂ ಮುಚ್ಚಿಬಿಟ್ಟನು. ಧೃಷ್ಟದ್ಯುಮ್ನನು ಪರ್ವತಾಕಾರವಾಗಿದ್ದ ಆನೆಗಳಲ್ಲಿ ಪ್ರತಿಯೊಂದನ್ನೂ ಹತ್ತು-ಆರು ಮತ್ತು ಎಂಟು ಬಾಣಗಳಿಂದ ಗಾಯಗೊಳಿಸಿದನು. ಮೇಘಗಳು ಸೂರ್ಯನನ್ನು ಮುಚ್ಚುವಂತೆ—ಶತ್ರುಪಕ್ಷದ ಆನೆಗಳು ಧೃಷ್ಟದ್ಯುಮ್ನನನ್ನು ಮುಚ್ಚಿರುವುದನ್ನು ಕಂಡು ಪಾಂಡು-ಪಾಂಚಾಲಯೋಧರು ನಿಶಿತವಾದ ಆಯುಧಗಳನ್ನು ಹಿಡಿದು ಗರ್ಜಿಸುತ್ತಾ ಮುನ್ನುಗ್ಗಿ ಹೋದರು. ಮೌರ್ವಿಯ ರೂಪವಾದ ವೀಣೆಯ ತಂತಿಯ ತಾರಧ್ವನಿಯಿಂದಲೂ, ಶೂರರು ತಟ್ಟುತ್ತಿದ್ದ ಚಪ್ಪಾಳೆಗಳಿಂದಲೂ ಪ್ರೇರಿತರಾದ ಪಾಂಡು-ಪಾಂಚಾಲಯೋಧರು ರಣಾಂಗಣದಲ್ಲಿ ವೀರೋಚಿತವಾಗಿ ನೃತ್ಯಮಾಡುತ್ತಾ ಶತ್ರುಪಕ್ಷದ ಆನೆಗಳ ಮೇಲೆ ಬಾಣಗಳನ್ನು ಸುರಿಸುತ್ತಿ

ದ್ದರು. ನಕುಲ, ಸಹದೇವ, ದ್ರೌಪದಿಯ ಐವರು ಮಕ್ಕಳು, ಪ್ರಭದ್ರಕರು, ಸಾತ್ಯಕಿ, ಶಿಖಂಡೀ, ವೀರ್ಯವಂತನಾದ ಚೇಕಿತಾನ–ಇವರೆಲ್ಲರೂ ಮೇಘಗಳು ಜಲಧಾರೆಗಳಿಂದ ಪರ್ವತವನ್ನು ಸುತ್ತಲೂ ತೋಯಿಸುವಂತೆ-ಶತ್ರುಪಕ್ಷದ ಗಜಸೈನ್ಯದ ಸುತ್ತಲೂ ಬಾಣಗಳ ಮಳೆಗರೆದರು.

ಮ್ಲೇಚ್ಛರಿಂದ ಕಳುಹಿಸಲ್ಪಟ್ಟಿದ್ದ ಮಹಾಕೋಪಯುಕ್ತವಾಗಿದ್ದ ಆನೆಗಳು ಪದಾತಿಗಳನ್ನೂ, ಅಶ್ವಸೈನಿಕರನ್ನೂ ಮತ್ತು ರಥಗಳನ್ನೂ ಸೊಂಡಿಲುಗಳಿಂದ ಮೇಲೆತ್ತಿ ನೆಲಕ್ಕೆ ಅಪ್ಪಳಿಸುತ್ತಿದ್ದುವು. ಕಾಲುಗಳಿಂದಲೂ ತುಳಿದು ಧ್ವಂಸ ಮಾಡುತ್ತಿದ್ದುವು. ಮತ್ತೆ ಕೆಲವು ಆನೆಗಳು ಕೊಂಬುಗಳ ಅಗ್ರಭಾಗಗಳಿಂದ ಎದುರಾಗಿ ಬಂದ ಸೈನಿಕರನ್ನು ಸೀಳಿಹಾಕುತ್ತಿದ್ದುವು. ಕೆಲವು ಆನೆಗಳು ಸೊಂಡಿಲಿನಿಂದ ಸುತ್ತಿಕೊಂಡು ದೂರಕ್ಕೆ ಬಿಸುಡುತ್ತಿದ್ದುವು. ಕೆಲವು ಯೋಧರು ಆನೆಗಳ ಕೊಂಬುಗಳಲ್ಲಿ ಸಿಕ್ಕಿಹಾಕಿಕೊಂಡು ಭಯಂಕರವಾದ ಅವಸ್ಥೆಯಲ್ಲಿ ಕೆಳಕ್ಕೆ ಬೀಳುತ್ತಿದ್ದರು. ಆ ಸಮಯದಲ್ಲಿ ಸಾತ್ಯಕಿಯು ತನ್ನ ಎದುರಿನಲ್ಲಿದ್ದ ವಂಗರಾಜನ ಆನೆಯ ಮರ್ಮಸ್ಥಾನಗಳನ್ನು ಅತಿವೇಗ ಯುಕ್ತವಾದ ನಾರಾಚದಿಂದ ಪ್ರಹರಿಸಿ ಅದನ್ನು ನೆಲಕ್ಕೆ ಕೆಡವಿದನು. ಮರುಕ್ಷಣದಲ್ಲಿಯೇ ಆನೆಯ ಮೇಲೆ ಕುಳಿತಿದ್ದ ವಂಗರಾಜನು ತನ್ನ ಶರೀರವನ್ನು ಬಾಗಿಸಿಕೊಂಡು ಆನೆಯಿಂದ ಹಾರುವುದರಲ್ಲಿದ್ದನು. ಸಾತ್ಯಕಿಯು ಹಾಗೆ ಹಾರಲು ಯತ್ನಿಸುತ್ತಿದ್ದ ವಂಗರಾಜನ ವಕ್ಷಃಸ್ಥಳಕ್ಕೆ ಗುರಿಯಿಟ್ಟು ನಾರಾಚದಿಂದ ಪ್ರಹರಿಸಿದನು. ಒಡನೆಯೇ ವಂಗರಾಜನು ಪ್ರಾಣಗಳನ್ನು ತೊರೆದು ನೆಲದ ಮೇಲೆ ಬಿದ್ದನು. ಮತ್ತೊಂದು ಕಡೆಯಲ್ಲಿ ಸಹದೇವನು–ಸಂಚರಿಸುತ್ತಿರುವ ಪರ್ವತದೋಪಾದಿಯಲ್ಲಿ ತನ್ನ ಮೇಲೆ ಬೀಳಲು ಬರುತ್ತಿದ್ದ ಪುಂಡ್ರರಾಜನ ಆನೆಯನ್ನು ಪ್ರಯತ್ನಪೂರ್ವಕವಾಗಿ ಬಿಟ್ಟ ಮೂರು ನಾರಾಚಗಳಿಂದ ಗಾಯಗೊಳಿಸಿದನು. ಪುನಃ ಸಹದೇವನು ನಾರಾಚಗಳನ್ನು ಪ್ರಯೋಗಿಸುತ್ತಾ ಬಹಳವಾಗಿ ಕೊಬ್ಬಿಹೋಗಿದ್ದ ಆ ಆನೆಯನ್ನು ಪತಾಕೆ, ಮಾವುತ, ಕವಚ, ಧ್ವಜ ಮತ್ತು ಪ್ರಾಣಗಳಿಂದ ವಿಹೀನವನ್ನಾಗಿ ಮಾಡಿ ಅಂಗರಾಜನ ಕಡೆಗೆ ಧಾವಿಸಿದನು. ಆದರೆ ನಕುಲನು ಸಹದೇವನನ್ನು ತಡೆದು

ಅಂಗರಾಜನನ್ನು ತಾನೇ ಬಾಣಗಳಿಂದ ಬಹಳವಾಗಿ ಪೀಡಿಸಿದನು. ಬಳಿಕ ಯಮದಂಡಸದೃಶವಾದ ಮೂರು ನಾರಾಚಗಳಿಂದ ಅಂಗರಾಜನ ಆನೆಯನ್ನೂ ನೂರು ನಾರಾಚಗಳಿಂದ ಅಂಗರಾಜನನ್ನೂ ಪ್ರಹರಿಸಿದನು.



ಇದಕ್ಕೆ ಪ್ರತಿಯಾಗಿ ಅಂಗರಾಜನು ಸೂರ್ಯನ ಕಿರಣಗಳಿಗೆ ಸಮಾನವಾದ ತೇಜಸ್ಸನ್ನು ಹೊಂದಿದ್ದ ಎಂಟು ನೂರು ತೋಮರಗಳನ್ನು ನಕುಲನ ಮೇಲೆ ರಭಸದಿಂದ ಎಸೆದನು. ಮರುಕ್ಷಣದಲ್ಲಿಯೇ ನಕುಲನು ಆ ತೋಮರಗಳಲ್ಲಿ ಒಂದೊಂದನ್ನೂ ಮೂರು-ಮೂರು ತುಂಡುಗಳನ್ನಾಗಿ ಕತ್ತರಿಸಿಬಿಟ್ಟನು. ಅನಂತರ ನಕುಲನು ಅರ್ಧಚಂದ್ರವೆಂಬ ಬಾಣದಿಂದ ಅಂಗರಾಜನ ಶಿರಸ್ಸನ್ನು ಕತ್ತರಿಸಿದನು. ಹೀಗೆ ಹತನಾದ

ಮ್ಲೇಚ್ಛರಾಜನಾದ ಅಂಗನು ತನ್ನ ಆನೆಯೊಡನೆಯೇ ನೆಲದ ಮೇಲೆ ಬಿದ್ದನು. ಹಸ್ತಿಶಿಕ್ಷಾವಿಶಾರದನಾದ ಅಂಗ(ರಾಜ) ಪುತ್ರನು ಹತನಾಗಲಾಗಿ, ಪರಮ ಕ್ರುದ್ಧರಾದ ಅಂಗದೇಶದ ಮಾವುತರು ತಮ್ಮ ಆನೆಗಳೊಡನೆ ನಕುಲನನ್ನು ಆಕ್ರಮಿಸಿದರು. ಆ ಆನೆಗಳ ಮೇಲೆ ಧ್ವಜಗಳು ಪರ-ಪರನೆ ಹಾರಾಡು ತ್ತಿದ್ದುವು. ಅವುಗಳ ಮುಖಗಳು ಬಹಳ ಸುಂದರವಾಗಿದ್ದುವು. ಅವುಗಳಿಗೆ ಬಿಗಿದಿದ್ದ ಹಗ್ಗಗಳೂ ಮತ್ತು ಹೊದಿಸಿದ್ದ ಕವಚಗಳೂ ಸುವರ್ಣಮಯ ವಾಗಿದ್ದುವು. ಅದರಿಂದಾಗಿ ಆ ಆನೆಗಳು ಪ್ರಜ್ವಲಿಸುವ ಪರ್ವತಗಳೋಪಾದಿ ಯಲ್ಲಿ ಕಾಣುತ್ತಿದ್ದುವು. ಆ ಆನೆಗಳ ಮೂಲಕವಾಗಿ ಶತ್ರುಗಳನ್ನು ಧ್ವಂಸಮಾಡಬೇಕೆಂಬ ಇಚ್ಛೆಯಿಂದ ಮೇಕಲೋತ್ಕಲ-ಕಲಿಂಗ-ನಿಷಧ-ತಾಮ್ರಲಿಪ್ತಯೋಧರು ಬಹಳ ವೇಗವಾಗಿ ಶರ-ತೋಮರಗಳ ಮಳೆಯನ್ನೇ ನಕುಲನ ಮೇಲೆ ಸುರಿಸಿದರು. ಅವರೆಲ್ಲರೂ ನಕುಲನನ್ನು ಸಂಹರಿಸುವ ಆಶಯದಿಂದ ಕೂಡಿದ್ದರು. ಮಹಾಮೇಘಗಳಿಂದ ಸೂರ್ಯನು ಮುಚ್ಚಲ್ಪಡು ವಂತೆ–ಗಜಯೋಧರ ಆಯುಧಗಳಿಂದ ಆಚ್ಛಾದಿತನಾದ ನಕುಲನನ್ನು ನೋಡಿ ಅತಿಕುಪಿತರಾದ ಪಾಂಡು-ಪಾಂಚಾಲ- ಸೋಮಕರು ಮ್ಲೇಚ್ಛಸೈನ್ಯದ ಮೇಲೆ ಎರಗಿಬಿದ್ದರು. ಬಾಣಗಳ ಮಳೆಗರೆಯುತ್ತಿದ್ದ ಪಾಂಡವರ ಕಡೆಯ ರಥಿಗಳೊಡನೆ ಸಾವಿರಾರು ತೋಮರಗಳನ್ನು ಸುರಿಸುತ್ತಿದ್ದ ಮ್ಲೇಚ್ಛಗಜ ಯೋಧರ ಮಹಾಸಮರವು ಪ್ರಾರಂಭವಾಯಿತು. ಪಾಂಡು-ಪಾಂಚಾಲ-ಸೋಮಕ ಯೋಧರು ಸತತವಾಗಿ ಬಿಡುತ್ತಿದ್ದ ನಾರಾಚಗಳ ಪ್ರಹಾರಗಳಿಂದ ಆನೆಗಳ ಕುಂಭಸ್ಥಳಗಳು ಒಡೆದುಹೋದುವು. ವಿವಿಧವಾದ ಮರ್ಮಸ್ಥಳಗಳು ಸೀಳಿಹೋದುವು. ದಂತಗಳೂ ಮತ್ತು ಆಭರಣಗಳೂ ಕತ್ತರಿಸಿಹೋಗಿ ಕೆಳಕ್ಕೆಬಿದ್ದುವು. ಅವುಗಳಲ್ಲಿ ಎಂಟು ಮಹಾಗಜಗಳನ್ನು ಸಹದೇವನು ಬಹಳ ಚೂಪಾಗಿ ಮಾಡಲ್ಪಟ್ಟಿದ್ದ ಅರುವತ್ತುನಾಲ್ಕು ಬಾಣಗಳಿಂದ ಬಹಳ ಶೀಘ್ರಗತಿಯಲ್ಲಿ ಪ್ರಹರಿಸಿದನು. ಒಡನೆಯೇ ಆ ಎಂಟು ಆನೆಗಳೂ ಮಾವುತರೊಡನೆ ಕೆಳಕ್ಕೆ ಬಿದ್ದುವು. ಕುರುಕುಲನಂದನನಾದ ನಕುಲನೂ ಸಹ ಪ್ರಯತ್ನಪೂರ್ವಕವಾಗಿ ತನ್ನ ಉತ್ತಮಧನುಸ್ಸನ್ನು ಬಗ್ಗಿಸಿ ಬಹಳ ವೇಗವಾಗಿ ಹೋಗುವ ಬಾಣಗಳಿಂದ ಹಲವು ಆನೆಗಳನ್ನು ಸಂಹರಿಸಿದನು. ಅನಂತರ ಧೃಷ್ಟದ್ಯುಮ್ನ-ಸಾತ್ಯಕಿಯರು, ದ್ರೌಪದಿಯ ಮಕ್ಕಳು, ಪ್ರಭದ್ರ

ಕರು, ಶಿಖಂಡೀ–ಇವರೆಲ್ಲರೂ ಸೇರಿ ಮಹಾಗಜಗಳನ್ನು ಬಾಣಗಳ ವೃಷ್ಟಿಯಿಂದ ಅಭಿಷೇಚಿಸಿದರು. ವಜ್ರಾಯುಧಪಾತದಿಂದ ಪರ್ವತಗಳು ಧ್ವಂಸವಾಗುವಂತೆ– ಮೇಘರೂಪರಾದ ಪಾಂಡವರಿಂದ ಸುರಿಸಲ್ಪಡುತ್ತಿದ್ದ ವೃಷ್ಟಿರೂಪವಾದ ಬಾಣಗಳಿಂದ ಪರ್ವತರೂಪವಾದ ಶತ್ರುಪಕ್ಷದ ಗಜ ಸಮೂಹಗಳೂ ವಿನಾಶಹೊಂದಿದುವು. ಈ ರೀತಿಯಲ್ಲಿ ಪಾಂಡವರಥ ಶ್ರೇಷ್ಠರು ನಿನ್ನ ಕಡೆಯ ಮಹಾಗಜಗಳನ್ನು ಸಂಹರಿಸಿ–ದಡವನ್ನೊಡೆದು ಕೊಂಡು ದಿಕ್ಕು-ದಿಕ್ಕಿಗೂ ಹರಿದುಹೋಗುತ್ತಿರುವ ನದಿಯೋಪಾದಿಯಲ್ಲಿ– ದಿಕ್ಕುಗಾಣದೇ ಓಡಿಹೋಗುತ್ತಿದ್ದ ನಿನ್ನ ಸೈನಿಕರನ್ನು ನೋಡಿದರು. ಪಾಂಡುಪುತ್ರನಾದ ಯುಧಿಷ್ಠಿರನ ಸೈನಿಕರು ನಿನ್ನ ಸೈನ್ಯವನ್ನು ಸಂಪೂರ್ಣವಾಗಿ ಮಥಿಸಿ ಅಲ್ಲೋಲ-ಕಲ್ಲೋಲಮಾಡಿ ಅನಂತರ ಕರ್ಣನನ್ನು ಆಕ್ರಮಿಸಿದರು.”

೨೨ನೆಯ ಅಧ್ಯಾಯವು ಮುಗಿಯಿತು.

೨೩ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಸಹದೇವನು ದುಃಶಾಸನನನ್ನು ಪರಾಜಯಗೊಳಿಸಿದುದು

ಸಂಜಯನು ರಾಜನನ್ನು ಕುರಿತು ಹೇಳುತ್ತಾನೆ:

“ಮಹಾರಾಜ! ಬಹಳವಾಗಿ ಕ್ರುದ್ಧನಾಗಿದ್ದ ಮತ್ತು ನಿನ್ನ ಸೈನ್ಯವನ್ನು ಬಾಣಗಳಿಂದ ದಹಿಸುತ್ತಿದ್ದ ಸಹದೇವನನ್ನು ಅವನ ಅಣ್ಣನಾದ ದುಃಶಾಸನನು ಆಕ್ರಮಿಸಿದನು.

ಸಹದೇವ-ದುಃಶಾಸನರು ಯುದ್ಧದಲ್ಲಿ ತೊಡಗಿರುವುದನ್ನು ನೋಡಿ ಅಲ್ಲಿದ್ದ ಮಹಾರಥರು ಸಿಂಹನಾದಗಳನ್ನು ಮಾಡುತ್ತಾ ತಮ್ಮ ಅಂಗವಸ್ತ್ರ ಗಳನ್ನು ಮೇಲಕ್ಕೆ ಹಾರಿಸಿದರು. ಆ ಸಮಯದಲ್ಲಿ ಬಹಳ ಕುಪಿತನಾಗಿದ್ದ ನಿನ್ನ ಮಗ ದುಃಶಾಸನನು ಬಲಿಷ್ಠನಾದ ಪಾಂಡುಪುತ್ರನನ್ನು ಮೂರು ಬಾಣಗಳಿಂದ ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಸಹದೇವನು ನಿನ್ನ ಮಗನನ್ನು ನಾರಾಚದಿಂದ ಪ್ರಹರಿಸಿ ಪುನಃ ಎಪ್ಪತ್ತು ಬಾಣಗಳಿಂದ ನಿನ್ನ ಮಗನನ್ನೂ, ಮೂರು ಬಾಣಗಳಿಂದ ಅವನ ಸಾರಥಿ ಯನ್ನೂ ಪ್ರಹರಿಸಿದನು. ಅನಂತರ ದುಃಶಾಸನನು ಸಹದೇವನ ಧನುಸ್ಸನ್ನು

ಕತ್ತರಿಸಿ ಬಳಿಕ ಎಪ್ಪತ್ತುಮೂರು ಬಾಣಗಳಿಂದ ಅವನ ಬಾಹುಗಳಲ್ಲಿಯೂ ಮತ್ತು ವಕ್ಷಃಸ್ಥಳದಲ್ಲಿಯೂ ಪ್ರಹರಿಸಿದನು. ಅದರಿಂದ ಬಹಳ ಕ್ರುದ್ಧನಾದ ಸಹದೇವನು ಖಡ್ಗವನ್ನೆತ್ತಿ ರಭಸದಿಂದ ಗರ-ಗರನೆ ತಿರುಗಿಸಿ ಬಹಳ ಬೇಗ ನಿನ್ನ ಮಗನ ರಥದ ಕಡೆಗೆ ಎಸೆದನು. ಸಹದೇವನು ಎಸೆದ ಉದ್ದವಾಗಿದ್ದ ಆ ಕತ್ತಿಯು ದುಃಶಾಸನನ ಧನುರ್ಬಾಣ-ಶಿಂಜಿನಿಗಳನ್ನು ಕತ್ತರಿಸಿ–ಆಕಾಶದಿಂದ ಚ್ಯುತವಾದ ಸರ್ಪವು ಭೂಮಿಯಲ್ಲಿ ಬೀಳುವಂತೆ– ನೆಲದ ಮೇಲೆ ಬಿದ್ದಿತು. ಅನಂತರ ಪ್ರತಾಪವಂತನಾದ ಸಹದೇವನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಪ್ರಾಣಾಂತಕರವಾದ ಬಾಣವೊಂದನ್ನು ದುಃಶಾಸನನ ಮೇಲೆ ಪ್ರಯೋಗಿಸಿದನು. ದುಃಶಾಸನನು ತನ್ನ ಮೇಲೆ ಬೀಳುವುದರಲ್ಲಿದ್ದ ಯಮದಂಡದ ಕಾಂತಿಗೆ ಸದೃಶವಾದ ಕಾಂತಿಯಿಂದ ಕೂಡಿದ್ದ ಬಾಣವನ್ನು ನಿಶಿತವಾದ ಅಲುಗಿನಿಂದ ಕೂಡಿದ್ದ ಖಡ್ಗದಿಂದ ಎರಡು ಭಾಗಗಳಾಗಿ ಕತ್ತರಿಸಿದನು. ಬಳಿಕ ದುಃಶಾಸನನು ನಿಶಿತವಾಗಿದ್ದ ಕತ್ತಿಯನ್ನು ಗರ-ಗರನೆ ತಿರುಗಿಸಿ ವೇಗವಾಗಿ ಸಹದೇವನ ಮೇಲೆ ಎಸೆದನು. ಮರುಕ್ಷಣದಲ್ಲಿಯೇ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಶರಸಂಧಾನಮಾಡಿದನು. ಸಹದೇವನು ತನ್ನ ಮೇಲೆ ಬೀಳುವುದರಲ್ಲಿದ್ದ ದುಃಶಾಸನಪ್ರಮುಕ್ತವಾದ ಕತ್ತಿಯನ್ನು ನಿಶಿತವಾದ ಬಾಣಗಳಿಂದ ನಸುನಗುತ್ತಾ ಪ್ರಹರಿಸಿ ಕೆಳಕ್ಕೆ ಬೀಳಿಸಿದನು. ಬಳಿಕ ಬಾಣಾನುಸಂಧಾನಮಾಡಿದ್ದ ನಿನ್ನ ಮಗನು ಅರುವತ್ತುನಾಲ್ಕು ಬಾಣಗಳನ್ನು ಸಹದೇವನ ರಥವನ್ನು ಅನುಲಕ್ಷಿಸಿ ಬಹಳಬೇಗ ಪ್ರಯೋಗಮಾಡಿದನು. ಸಹದೇವನು ವೇಗವಾಗಿ ತನ್ನ ಮೇಲೆ ಬೀಳಲು ಬರುತ್ತಿದ್ದ ದುಃಶಾಸನ ಪ್ರಮುಕ್ತವಾದ ಬಾಣಗಳಲ್ಲಿ ಒಂದೊಂದು ಬಾಣವನ್ನೂ ಐದೈದು ಬಾಣಗಳಿಂದ ಕತ್ತರಿಸಿದನು. ಈ ರೀತಿಯಲ್ಲಿ ನಿನ್ನ ಮಗನು ಪ್ರಯೋಗಿಸಿದ ಎಲ್ಲ ಮಹಾಬಾಣಗಳನ್ನೂ ಸಹದೇವನು ನಿರಸನಗೊಳಿಸಿ ಪುನಃ ನಿನ್ನ ಮಗನ ಮೇಲೆ ಅನೇಕ ಬಾಣಗಳನ್ನು ಸುರಿಸಿದನು.

ದುಃಶಾಸನನೂ ಸಹದೇವಪ್ರಮುಕ್ತವಾದ ಆ ಬಾಣಗಳಲ್ಲಿ ಒಂದೊಂದು ಬಾಣವನ್ನೂ ಮೂರು-ಮೂರು ಬಾಣಗಳಿಂದ ಕತ್ತರಿಸಿ ಭೂಮಿಯನ್ನೇ ಸೀಳಿಬಿಡುವನೋ ಎಂಬ ರೀತಿಯಲ್ಲಿ ಗಟ್ಟಿಯಾಗಿ ಗರ್ಜನೆ

ಮಾಡಿದನು. ಅನಂತರ ದುಃಶಾಸನನು ಬಾಣಗಳಿಂದ ಮಾದ್ರೀಪುತ್ರನನ್ನು ಬಹಳವಾಗಿ ಗಾಯಗೊಳಿಸಿ ಒಂಬತ್ತು ಬಾಣಗಳಿಂದ ಸಹದೇವನ ಸಾರಥಿಯನ್ನು ಪ್ರಹರಿಸಿದನು. ಅದರಿಂದ ಕ್ರುದ್ಧನಾದ, ಪ್ರತಾಪವಂತನಾದ ಸಹದೇವನು ಮೃತ್ಯು, ಕಾಲ ಮತ್ತು ಅಂತಕರಿಗೆ ಸಮಾನವಾಗಿದ್ದ ಬಾಣ ವೊಂದನ್ನು ಬತ್ತಳಿಕೆಯಿಂದ ಹೊರತೆಗೆದನು. ಆ ಬಾಣವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಬಲಪೂರ್ವಕವಾಗಿ ಸೆಳೆದು ನಿನ್ನ ಮಗನ ಮೇಲೆ ಪ್ರಯೋಗಿಸಿದನು. ಆ ಬಾಣವು ರಭಸದಿಂದ ಹೋಗಿ ದುಃಶಾಸನನ ಕವಚವನ್ನು ಭೇದಿಸಿಕೊಂಡು ಹೊರಬಂದು–ಸರ್ಪವು ಬಿಲದೊಳಗೆ ಸೇರಿ ಕೊಳ್ಳುವಂತೆ-ಭೂಮಿಯನ್ನು ಹೊಕ್ಕಿತು. ಆ ಪ್ರಹಾರದಿಂದಾಗಿ ಮಹಾರಥ ನಾದ ದುಃಶಾಸನನು ಮೂರ್ಛಿತನಾದನು. ದುಃಶಾಸನನು ಪ್ರಜ್ಞಾಹೀನ ನಾದುದನ್ನು ಅವನ ಸಾರಥಿಯು ಗಮನಿಸಿದನು. ಸಹದೇವನು ಸಾರಥಿಯ ಮೇಲೂ ಬಾಣಗಳನ್ನು ಸುರಿಸುತ್ತಲೇ ಇದ್ದನು. ನಿಶಿತವಾದ ಬಾಣಗಳಿಂದ ಗಾಯಗೊಂಡ ಸಾರಥಿಯು ಭಯಗೊಂಡವನಾಗಿ ರಥವನ್ನು ರಣಾಂಗಣ ದಿಂದ ಬಹಳ ದೂರಕ್ಕೆ ಒಯ್ದುಬಿಟ್ಟನು. ಪಾಂಡುವಿನ ಮಗನಾದ ಸಹ ದೇವನು ಈ ರೀತಿಯಲ್ಲಿ ದುಃಶಾಸನನನ್ನು ಪರಾಜಯಗೊಳಿಸಿ, ದುಃಶಾಸನನ ರಥವು ಹೊರಟುಹೋದನಂತರವೂ ದುರ್ಯೋಧನನ ಸೈನ್ಯವು ಅಲ್ಲಿಯೇ ಇದ್ದು ಯುದ್ಧವನ್ನು ಮುಂದುವರಿಸು ತ್ತಿದ್ದುದನ್ನು ಕಂಡು ಎಲ್ಲ ಕಡೆಗಳಿಂದಲೂ ಆ ಸೈನಿಕರನ್ನು ಸದೆಬಡಿದನು. ಕೋಪಗೊಂಡ ಮನುಷ್ಯನು ಇರುವೆಗಳಿರುವ ಎಲೆಗಳ ದೊನ್ನೆಯನ್ನು (ತೋಟದಲ್ಲಿ ಕೆಂಜಿಗಗಳಿರುವ ಎಲೆಗಳ ಗೂಡನ್ನು) ಯಾವ ರೀತಿಯಲ್ಲಿ ನೆಲಕ್ಕೆ ಹಾಕಿ ತೀಡುತ್ತಾನೆಯೋ–ಅದೇ ರೀತಿಯಲ್ಲಿ ಕೌರವರ ಸೈನ್ಯವನ್ನು ಸಹದೇವನು ಧ್ವಂಸಮಾಡಿಬಿಟ್ಟನು."

೨೩ನೆಯ ಅಧ್ಯಾಯವು ಮುಗಿಯಿತು.

೨೪ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣ–ನಕುಲರ ಘೋರಯುದ್ಧ: ನಕುಲನ ಪರಾಜಯ: ಪಾಂಚಾಲಸೈನ್ಯದ ಸಂಹಾರ

ಸಂಜಯನು ಕರ್ಣ-ನಕುಲರ ಯುದ್ಧವನ್ನು ವರ್ಣಿಸುತ್ತಾನೆ:

"ಮಹಾರಾಜ! ತೀಕ್ಷ್ಣವಾದ ಬಾಣಗಳ ಪ್ರಹಾರದಿಂದ ಕೌರವರ

ಸೈನ್ಯವನ್ನು ಪಲಾಯನಪರಾಯಣವನ್ನಾಗಿ ಮಾಡುತ್ತಿದ್ದ ವೇಗಶಾಲಿಯಾದ ನಕುಲನನ್ನು ನೋಡಿ ಕೋಪಗೊಂಡ ವೈಕರ್ತನಕರ್ಣನು ಅವನು ಮುಂದೆಹೋಗದಂತೆ ತಡೆದನು. ತನ್ನೆದುರಾಗಿ ನಿಂತ ಕರ್ಣನನ್ನು ನೋಡಿ ನಕುಲನು ನಗುತ್ತಾ ಅವನೊಡನೆ ಹೇಳಿದನು:

**ಚಿರಸ್ಯ ಬತ ದೃಷ್ಟೋಽಹಂ ದೈವತೈಃ ಸೌಮ್ಯಚಕ್ಷುಷಾ।**
**ಪಶ್ಯ ಮಾಂ ತ್ವಂ ರಣೇ ಪಾಪ ಚಕ್ಷುರ್ವಿಷಯಮಾಗತಮ್।**
**ತ್ವಂ ಹಿ ಮೂಲಮನರ್ಥಾನಾಂ ವೈರಸ್ಯ ಕಲಹಸ್ಯ ಚ ॥೩॥**
**ತ್ವದ್ದೋಷಾತ್ಕುರವಃ ಕ್ಷೀಣಾಃ ಸಮಾಸಾದ್ಯ ಪರಸ್ಪರಮ್।**
**ತ್ವಾಮದ್ಯ ಸಮರೇ ಹತ್ವಾ ಕೃತಕೃತ್ಯೋಽಸ್ಮಿ ವಿಜ್ವರಃ ॥೪॥**

"ಬಹಳ ಕಾಲದ ಮೇಲೆ ನಾನು ದೇವತೆಗಳ ಅನುಗ್ರಹದೃಷ್ಟಿಗೆ ಪಾತ್ರನಾಗಿದ್ದೇನೆ. (ನೀನು ನನ್ನ ಎದುರಾಗಿ ಬರಲು ದೇವತೆಗಳ ಕೃಪಾದೃಷ್ಟಿಯೇ ಕಾರಣ.) ಇದು ಬಹಳ ಸಂತೋಷದ ವಿಷಯವಾಗಿದೆ. ಪಾಪಿಯೇ! ನಾನಿಂದು ನಿನ್ನ ಕಣ್ಣುಗಳಿಗೆ ವಿಷಯನಾಗಿದ್ದೇನೆ. ನನ್ನನ್ನು ನೀನಿಂದು ಚೆನ್ನಾಗಿ ನೋಡು. ಈ ಅನರ್ಥಗಳೆಲ್ಲಕ್ಕೂ, ಕೌರವ-ಪಾಂಡವರ ವೈರಕ್ಕೂ ಮತ್ತು ಈ ಕಲಹಕ್ಕೂ ನೀನೇ ಮೂಲಕಾರಣನು. ನಿನ್ನ ಅಪರಾಧದ ಕಾರಣದಿಂದಲೇ ಕುರುವಂಶೀಯರು ಪರಸ್ಪರವಾಗಿ ಯುದ್ಧಮಾಡಿ ಕ್ಷೀಣಿಸಿಹೋದರು. ಈಗ ನಿನ್ನನ್ನು ಈ ಯುದ್ಧದಲ್ಲಿ ಸಂಹರಿಸಿ ಕೃತಕೃತ್ಯನೂ, ನಿಶ್ಚಿಂತನೂ ಆಗುತ್ತೇನೆ."

ನಕುಲನಿಂದ ಹೀಗೆ ಹೇಳಿ ನಿಂದಿಸಲ್ಪಟ್ಟ ಸೂತಪುತ್ರನು ಪ್ರತ್ಯುತ್ತರಿಸಿದನು:

**ಸದೃಶಂ ರಾಜಪುತ್ರಸ್ಯ ಧನ್ವಿನಶ್ಚ ವಿಶೇಷತಃ।**
**ಪ್ರಹರಸ್ವ ಚ ಮೇ ವೀರ ಪಶ್ಯಾಮಸ್ತವ ಪೌರುಷಮ್।**
**ಕರ್ಮ ಕೃತ್ವಾ ರಣೇ ಶೂರ ತತಃ ಕತ್ಥಿತುಮರ್ಹಸಿ ॥೬॥**

"ಶೂರನೇ! ನಿನ್ನ ಈ ವೀರೋಚಿತವಾದ ಮಾತುಗಳು ರಾಜಪುತ್ರನಾದ ಅದರಲ್ಲಿಯೂ ವಿಶೇಷವಾಗಿ ಧನುಷ್ಮಂತನಾದ ನಿನಗೆ ಉಚಿತವೇ

ಆಗಿವೆ. ವೀರನೇ! ನೀನೇ ನನ್ನನ್ನು ಮೊದಲು ಪ್ರಹರಿಸು. ನಿನ್ನ ಪರಾಕ್ರಮವು ಎಷ್ಟಿದೆಯೆಂಬುದನ್ನಾದರೂ ಮೊದಲು ತಿಳಿದುಕೊಳ್ಳೋಣ. ಮೊದಲು ನಿನ್ನ ಪರಾಕ್ರಮವನ್ನು ತೋರಿ ಬಳಿಕ ಆ ಬಗೆಗೆ ಕೊಚ್ಚಿಕೊಳ್ಳುವುದು ಸಮುಚಿತವಾಗಿ ಕಾಣುತ್ತದೆ.

**ಅನುಕ್ತ್ವಾ ಸಮರೇ ತಾತ ಶೂರಾ ಯುಧ್ಯನ್ತಿ ಶಕ್ತಿತಃ।**
**ಪ್ರಯುಧ್ಯಸ್ವ ಮಯಾ ಶಕ್ತ್ಯಾ ಹನಿಷ್ಯೇ ದರ್ಪಮೇವ ತೇ ॥೭॥**

ಮಗು! ಶೂರರಾದವರು ಯಾವಾಗಲೂ ಯಾವ ಮಾತನ್ನೂ ಆಡದೆ ಶಕ್ತಿಯಿಂದ ಯುದ್ಧಮಾಡುತ್ತಾರೆ. ಆದುದರಿಂದ ನೀನೂ ಸಹ ನನ್ನೊಡನೆ ನಿನ್ನ ಶಕ್ತಿಯೆಲ್ಲವನ್ನೂ ಕೇಂದ್ರೀಕರಿಸಿ ಯುದ್ಧಮಾಡು. ನಿನ್ನ ದರ್ಪವನ್ನು ಈಗಲೇ ಮುರಿದುಹಾಕುತ್ತೇನೆ."

ಮಹಾರಾಜ! ಹೀಗೆ ಹೇಳಿದ ಕರ್ಣನು ಒಡನೆಯೇ ನಕುಲನ ಮೇಲೆ ಬಾಣಗಳನ್ನು ಪ್ರಯೋಗಿಸಿದನು. ಕರ್ಣನು ಎಪ್ಪತ್ತು ಮೂರು ಬಾಣ ಗಳಿಂದ ನಕುಲನನ್ನು ಗಾಯಗೊಳಿಸಿದನು. ಸೂತಪುತ್ರನಿಂದ ಪ್ರಹೃತನಾದ ನಕುಲನು ಸರ್ಪೋಪಮವಾಗಿದ್ದ ಎಂಬತ್ತು ಬಾಣಗಳಿಂದ ಕರ್ಣನನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಮಹಾಧನುಷ್ಮಂತನಾದ ಕರ್ಣನೂ ಸುವರ್ಣದ ಮೂಲಭಾಗವನ್ನು ಹೊಂದಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಬಾಣಗಳಿಂದ ನಕುಲನ ಧನುಸ್ಸನ್ನು ಕತ್ತರಿಸಿ ಪುನಃ ಮೂವತ್ತು ಬಾಣಗಳಿಂದ ನಕುಲನನ್ನೂ ಪ್ರಹರಿಸಿದನು. ವಿಷದ ಹಲ್ಲು ಗಳನ್ನು ಹೊಂದಿರುವ ಸರ್ಪಗಳು ಭೂಮಿಯನ್ನು ಕೊರೆದುಕೊಂಡುಹೋಗಿ ನೀರನ್ನು ಕುಡಿಯುವಂತೆ–ಕರ್ಣಪ್ರಮುಕ್ತವಾದ ಆ ಬಾಣಗಳು ನಕುಲನ ಕವಚವನ್ನು ಭೇದಿಸಿಕೊಂಡು ಶರೀರವನ್ನು ಹೊಕ್ಕು ರಕ್ತವನ್ನು ಕುಡಿದುವು. ಅನಂತರ ನಕುಲನು ಸುವರ್ಣಮಯವಾದ ಹಿಂಭಾಗದಿಂದ ಕೂಡಿದ್ದ, ಎದುರಿಸಲು ಅಸಾಧ್ಯವಾದ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಎಪ್ಪತ್ತು ಬಾಣಗಳಿಂದ ಕರ್ಣನನ್ನೂ- ಮೂರು ಬಾಣಗಳಿಂದ ಅವನ ಸಾರಥಿ ಯನ್ನೂ ಪ್ರಹರಿಸಿದನು. ಪರಮಕ್ರುದ್ಧನಾಗಿದ್ದ ಶತ್ರುವೀರಹಂತಕ ನಾದ ನಕುಲನು ಸುತೀಕ್ಷ್ಣವಾದ ಕ್ಷುರಪ್ರವೆಂಬ ಬಾಣದಿಂದ ಕರ್ಣನ ಧನುಸ್ಸನ್ನು ಕತ್ತರಿಸಿದನು. ವೀರನಾದ ನಕುಲನು ಗಹ-ಗಹಿಸಿ ನಗುತ್ತಾ

ಧನುಸ್ಸನ್ನು ಕಳೆದುಕೊಂಡಿದ್ದ ಸರ್ವಲೋಕಮಹಾರಥನಾದ ಕರ್ಣನನ್ನು ಮೂರು ನೂರು ಬಾಣಗಳಿಂದ ಪ್ರಹರಿಸಿದನು. ಪಾಂಡುಪುತ್ರನಾದ ನಕುಲನು ಮಹಾರಥನಾದ ಕರ್ಣನನ್ನು ಹೀಗೆ ಗಾಯಗೊಳಿಸಿದುದನ್ನು ಕಂಡು ಉಭಯಪಕ್ಷಗಳ ರಥಿಕರೂ, ಯುದ್ಧಪ್ರೇಕ್ಷಕರಾಗಿದ್ದ ದೇವತೆಗಳೂ ಅತ್ಯಂತವಿಸ್ಮಿತರಾದರು. ಅನಂತರ ವೈಕರ್ತನಕರ್ಣನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ನಕುಲನನ್ನು ಐದು ಬಾಣಗಳಿಂದ ಅವನ ಜತ್ರು (ಕೊರಳಿನ ಎಲುಬು) ಪ್ರದೇಶದಲ್ಲಿ ಪ್ರಹರಿಸಿದನು. ಪ್ರಪಂಚದಲ್ಲಿ ಪ್ರಭೆಯನ್ನು ವಿಸರ್ಜಿಸುತ್ತಾ ರಶ್ಮಿಗಳಿಂದ ಪ್ರಕಾಶಿಸುವ ಸೂರ್ಯನೋಪಾದಿಯಲ್ಲಿ–ನಕುಲನು ಜತ್ರುಪ್ರದೇಶದಲ್ಲಿ ಐದು ಬಾಣಗಳನ್ನು ಹೊಂದಿ ಪ್ರಕಾಶಿಸಿದನು. ಅನಂತರ ನಕುಲನು ಏಳು ಬಾಣಗಳಿಂದ ಕರ್ಣನನ್ನು ಪ್ರಹರಿಸಿ ಅವನ ಧನುಸ್ಸಿನ ಅಗ್ರಭಾಗವನ್ನು ಪುನಃ ಕತ್ತರಿಸಿದನು. ಒಡನೆಯೇ ಕರ್ಣನು ವೇಗವತ್ತರವಾದ ಮತ್ತೊಂದು ಧನುಸ್ಸನ್ನೆತ್ತಿಕೊಂಡು ನಕುಲನ ಸುತ್ತಲೂ ಬಾಣಗಳನ್ನು ಸುರಿಸಿ ಎಲ್ಲ ದಿಕ್ಕುಗಳನ್ನೂ ಮುಚ್ಚಿದನು. ಕರ್ಣನ ಧನುಸ್ಸಿನಿಂದ ಚ್ಯುತವಾದ ಬಾಣಗಳಿಂದ ಆಚ್ಛಾದಿತನಾದ ಮಹಾರಥನಾದ ನಕುಲನು ಕರ್ಣನು ಬಿಟ್ಟ ಬಾಣಗಳನ್ನು ತನ್ನ ಬಾಣಗಳಿಂದಲೇ ಬಹಳ ಬೇಗ ಕತ್ತರಿಸಿದನು. ಆಕಾಶದಲ್ಲಿ ಹಾರಾಡುತ್ತಿರುವ ಮಿಣುಕುಹುಳುಗಳ ಸಮೂಹಗಳು ಹರಡಿಕೊಳ್ಳುವಂತೆ–ಬಾಣಮಯವಾದ ಬಲೆಯು ಆಕಾಶದಲ್ಲಿ ಹರಡಿಕೊಂಡಿರುವುದು ಕಾಣುತ್ತಿದ್ದಿತು. ಆ ಇಬ್ಬರು ವೀರಯೋಧರ ಧನುಸ್ಸುಗಳಿಂದ ಪ್ರಮುಕ್ತವಾದ ನೂರಾರು ಬಾಣಗಳಿಂದ ಆಚ್ಛಾದಿತವಾದ ಆಕಾಶವು ಮಿಡತೆಹುಳುಗಳ ಸಮೂಹಗಳಿಂದ ಆವೃತವಾದ ಆಕಾಶದಂತೆಯೇ ಕಾಣಿಸುತ್ತಿದ್ದಿತು. ಬಾರಿ-ಬಾರಿಗೂ ಧನುಸ್ಸುಗಳಿಂದ ಚ್ಯುತವಾಗಿ ಸಾಲುಸಾಲುಗಳಾಗಿ ಬರುತ್ತಿದ್ದ ಸುವರ್ಣಮಯವಾದ ಬಾಣಗಳ ಸಾಲುಗಳು–ಸಾಲುಸಾಲಾಗಿ ಬರುತ್ತಿರುವ ಕ್ರೌಂಚಪಕ್ಷಿಗಳಂತೆಯೇ ಕಾಣುತ್ತಿದ್ದುವು. ಆಕಾಶವು ಶರಸಮೂಹಗಳಿಂದ ಆವೃತವಾಗಲಾಗಿ, ಆ ಬಾಣಗಳಿಂದ ಸೂರ್ಯನೂ ಆಚ್ಛಾದಿತನಾಗಲಾಗಿ, ಆಕಾಶದಿಂದ ಭೂಮಿಯ ಮೇಲೆ ಯಾವ ಪದಾರ್ಥವೂ ಬೀಳುತ್ತಿರಲಿಲ್ಲ.

ಬಾಣಗಳ ಸಮೂಹಗಳಿಂದ ಸುತ್ತಲೂ ಇದ್ದ ಮಾರ್ಗವು ಬಂಧಿಸಲ್ಪಡಲಾಗಿ ಮಹಾತ್ಮರಾದ ಕರ್ಣ-ನಕುಲರು ಪ್ರಳಯಕಾಲದಲ್ಲಿ ಉದಯಿಸಿದ

ಇಬ್ಬರು ಸೂರ್ಯರಂತೆಯೇ ಪ್ರಕಾಶಿಸುತ್ತಿದ್ದರು. ಕರ್ಣನ ಧನುಸ್ಸಿನಿಂದ ವಿಮುಕ್ತವಾದ ಬಾಣಗಳಿಂದ ಪ್ರಹೃತರಾದ ಸೋಮಕರು ಬಹಳವಾಗಿ ಗಾಯಗೊಂಡು ವೇದನೆಯಿಂದ ಸಂಕಟಪಡುತ್ತಾ ಅಲ್ಲಲ್ಲಿ ಅಡಗಿಕೊಳ್ಳು ತ್ತಿದ್ದರು. ಅದೇ ರೀತಿಯಲ್ಲಿ ನಕುಲನ ಬಾಣಗಳಿಂದ ವಧಿಸಲ್ಪಡುತ್ತಿದ್ದ ನಿನ್ನ ಸೈನಿಕರಲ್ಲಿ ಅಳಿದುಳಿದವರು–ಬಿರುಗಾಳಿಯಿಂದ ಚದುರಿಸಲ್ಪಟ್ಟ ಮೋಡ ಗಳಂತೆ–ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದರು. ಕರ್ಣ- ನಕುಲರ ದಿವ್ಯವಾದ ಮಹಾಶರಗಳಿಂದ ಎರಡೂ ಪಕ್ಷಗಳ ಸೈನಿಕರೂ ಪೀಡಿತರಾಗುತ್ತಿರಲಾಗಿ ಭೀತರಾದ ಸೈನಿಕರು ಬಾಣಗಳು ಬೀಳುವ ಸ್ಥಳಗಳಿಂದಲೂ ಮುಂದೆಹೋಗಿ ಕರ್ಣ-ನಕುಲರ ಯುದ್ಧವನ್ನು ನೋಡುತ್ತಾ ನಿಂತರು. ಕರ್ಣ-ನಕುಲರ ಬಾಣಗಳಿಂದ ಸೈನಿಕರೆಲ್ಲರೂ ಬಹಳ ದೂರಕ್ಕೆ ಅಟ್ಟಲ್ಪಡಲಾಗಿ ಮಹಾತ್ಮರಾದ ಆ ಇಬ್ಬರು ವೀರರೂ ಪರಸ್ಪರವಾಗಿ ಶರವೃಷ್ಟಿಗಳಿಂದ ಒಬ್ಬರು ಮತ್ತೊಬ್ಬ ರನ್ನು ಪ್ರಹರಿಸಲು ಉಪಕ್ರಮಿಸಿದರು. ರಣಾಂಗಣದಲ್ಲಿ ತಮ್ಮಲ್ಲಿದ್ದ ದಿವ್ಯಾಸ್ತ್ರ ಗಳನ್ನು ಪ್ರದರ್ಶಿಸುತ್ತಾ ಒಬ್ಬರು ಮತ್ತೊಬ್ಬರನ್ನು ಸಂಹರಿಸಬೇಕೆಂಬ ಇಚ್ಛೆ ಯಿಂದ ಕೂಡಿದ್ದ ಕರ್ಣ-ನಕುಲರು ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನು ಬಾಣಗಳಿಂದ ಆಚ್ಛಾದಿಸಿದರು. ರಣಹದ್ದಿನ ಮತ್ತು ನವಿಲಿನ ರೆಕ್ಕೆಗಳನ್ನು ಹೊಂದಿದ್ದ, ನಕುಲನಿಂದ ಬಿಡಲ್ಪಡುತ್ತಿದ್ದ ಬಾಣಗಳು ಸೂತಪುತ್ರನನ್ನು ಆಚ್ಛಾದಿಸುತ್ತಾ ಆಕಾಶದಲ್ಲಿಯೇ ನಿಲ್ಲುತ್ತಿದ್ದುವು. ಅದೇರೀತಿಯಲ್ಲಿ ಸೂತಪುತ್ರನಾದ ಕರ್ಣನಿಂದ ಬಿಡಲ್ಪಡುತ್ತಿದ್ದ ಬಾಣಗಳೂ ನಕುಲನನ್ನು ಆಚ್ಛಾದಿಸುತ್ತಾ ಆಕಾಶದಲ್ಲಿಯೇ ನಿಲ್ಲುತ್ತಿದ್ದುವು. ಪರಸ್ಪರವಾಗಿ ಬಿಟ್ಟ ಬಾಣ ಗಳಿಂದಲೇ ರಚಿತವಾಗಿದ್ದ ಶರಗೃಹವನ್ನು ಪ್ರವೇಶಿಸಿದ್ದ ಕರ್ಣ-ನಕುಲರು, ದಟ್ಟವಾದ ಮೇಘಗಳಿಂದ ಆಚ್ಛಾದಿತರಾದ ಸೂರ್ಯ-ಚಂದ್ರರು ಯಾರೊಬ್ಬ ರಿಗೂ ಕಾಣಿಸದಿರುವಂತೆ–ಯಾರಿಗೂ ಕಾಣಿಸುತ್ತಿರಲಿಲ್ಲ. ಅನಂತರ ಕ್ರುದ್ಧ ನಾದ ಕರ್ಣನು ಭಯಂಕರವಾದ ಸ್ವರೂಪವನ್ನು ತಾಳಿ ಬಾಣಗಳ ವೃಷ್ಟಿ ಯಿಂದ ನಕುಲನನ್ನು ಎಲ್ಲ ಕಡೆಗಳಿಂದಲೂ ಮುಚ್ಚಿದನು. ಮೋಡಗಳು

ತನ್ನನ್ನು ಮುಚ್ಚಿಬಿಟ್ಟವೆಂಬ ಕಾರಣದಿಂದ ಸೂರ್ಯನು ವ್ಯಥಿತನಾಗದಂತೆ-ಸೂತಪುತ್ರನ ಬಾಣಗಳಿಂದ ಆಚ್ಛಾದಿತನಾಗಿದ್ದರೂ ನಕುಲನು ವ್ಯಥೆಪಡಲಿಲ್ಲ. ಆಧಿರಥಿಯು ಗಹ-ಗಹಿಸಿ ನಗುತ್ತಾ ನೂರಾರು ಸಾವಿರಾರು ಬಾಣಗಳ ಸಮೂಹಗಳನ್ನು ನಕುಲನ ರಥದ ಕಡೆಗೆ ಪ್ರಯೋಗಿಸಿದನು. ಮಹಾತ್ಮನಾದ ಕರ್ಣನ ಬಾಣಗಳಿಂದಾಗಿ ಎಲ್ಲವೂ ಅಂಧಕಾರಮಯವಾಯಿತು. ಸತತವಾಗಿ ಬೀಳುತ್ತಿದ್ದ ಬಾಣಗಳಿಂದ ಉದ್ಭವಿಸಿದ ಕತ್ತಲು ಮೇಘಗಳ ನೆಳಲಿನಂತೆಯೇ ಕಾಣುತ್ತಿದ್ದಿತು.

ಅನಂತರ ಕರ್ಣನು ನಗುತ್ತಿರುವನೋ ಎಂಬಂತೆ ಕಾಣಿಸಿಕೊಳ್ಳುತ್ತಾ ಮಹಾತ್ಮನಾದ ನಕುಲನ ಧನುಸ್ಸನ್ನು ಕತ್ತರಿಸಿ ರಥದ ಪೀಠದಿಂದ ಅವನ ಸಾರಥಿಯನ್ನೂ ಕೆಳಕ್ಕೆ ಬೀಳಿಸಿದನು. ಬಳಿಕ ನಾಲ್ಕು ನಿಶಿತವಾದ ಬಾಣಗಳಿಂದ ನಕುಲನ ರಥದ ನಾಲ್ಕು ಕುದುರೆಗಳನ್ನೂ ಬಹಳ ಬೇಗ ಯಮಾಲಯಕ್ಕೆ ಕಳುಹಿಸಿಕೊಟ್ಟನು. ಕೊನೆಗೆ ತನ್ನ ಬಾಣಗಳಿಂದ ನಕುಲನ ದಿವ್ಯರಥವನ್ನೂ ಎಳ್ಳಿನ ಕಾಳಿನಷ್ಟು ನುಚ್ಚುನೂರು ಮಾಡಿಬಿಟ್ಟನು.

ಕರ್ಣನು ನಕುಲನ ಪತಾಕೆಯನ್ನೂ, ಚಕ್ರರಕ್ಷಕರನ್ನೂ, ಗದೆಯನ್ನೂ, ಖಡ್ಗವನ್ನೂ, ಶತಚಂದ್ರರ ಚಿಹ್ನೆಗಳಿಂದ ಕೂಡಿದ್ದ ಗುರಾಣಿಯನ್ನೂ ಮತ್ತು ಎಲ್ಲ ಉಪಕರಣಗಳನ್ನೂ ಧ್ವಂಸಮಾಡಿದನು. ಹತಾಶ್ವನಾದ, ರಥಹೀನನಾದ, ಕವಚದಿಂದಲೂ ರಹಿತನಾದ ನಕುಲನು ಬಹಳ ಬೇಗ ರಥದಿಂದಿಳಿದು ಪರಿಘವನ್ನು ಹಿಡಿದು ನಿಂತನು. ನಕುಲನು ಕರ್ಣನನ್ನು ಪ್ರಹರಿಸುವ ಸಲುವಾಗಿ ಮೇಲೆತ್ತಿದ್ದ, ಮಹಾಘೋರವಾದ ಪರಿಘಾಯುಧವನ್ನೂ ಕರ್ಣನು ಸುತೀಕ್ಷ್ಣವಾದ, ದುಷ್ಕರವಾದ ಕಾರ್ಯವನ್ನೂ ಸಾಧಿಸಿಕೊಡಲು ಸಮರ್ಥವಾದ ಬಾಣಗಳಿಂದ ಧ್ವಂಸಮಾಡಿದನು. ಕರ್ಣನು ನಿರಾಯುಧನಾದ ನಕುಲನನ್ನು ನೋಡಿ ಬಗ್ಗಿದ ಗಿಣ್ಣುಗಳಿದ್ದ ಅನೇಕಬಾಣಗಳಿಂದ ಅವನನ್ನು ಪುನಃ ಪ್ರಹರಿಸಿದನು. ಆದರೆ ಪ್ರಾಣವೇ ಹೋಗುವ ರೀತಿಯಲ್ಲಿ ಅವನ ಮೇಲೆ ಬಾಣಪ್ರಯೋಗ ಮಾಡಲಿಲ್ಲ. ಬಲಿಷ್ಠನಾದ ಮತ್ತು ಅಸ್ತ್ರವಿದ್ಯಾವಿಶಾರದನಾದ ಕರ್ಣನಿಂದ ಬಹುವಾಗಿ ಪೀಡಿತನಾದ ವ್ಯಾಕುಲೇಂದ್ರಿಯನಾದ ನಕುಲನು ಕರ್ಣನ ಪ್ರಹಾರವನ್ನು ತಪ್ಪಿಸಿಕೊಳ್ಳುವ

ಸಲುವಾಗಿ ಬಹಳ ಬೇಗ ಓಡಿಹೋದನು. ರಾಧೇಯನು ನಗುತ್ತಾ ಅವನ ಹಿಂದೆಯೇ ಹೋಗಿ ಮೌರ್ವಿಯಿಂದ ಕೂಡಿದ್ದ ಧನುಸ್ಸನ್ನೇ ನಕುಲನ ಕುತ್ತಿಗೆಗೆ ಹಾಕಿದನು. ಆ ಸಮಯದಲ್ಲಿ ಕುತ್ತಿಗೆಯಲ್ಲಿ ಕರ್ಣನ ಧನುಸ್ಸನ್ನು ಧರಿಸಿದ್ದ ನಕುಲನು–ಆಕಾಶದಲ್ಲಿ ಪರಿಧಿಯ ಪ್ರಭೆಯಿಂದ ಕೂಡಿದ ಚಂದ್ರನಂತೆಯೂ, ಕಾಮನಬಿಲ್ಲಿನಿಂದ ಯುಕ್ತವಾದ ಕಪ್ಪಾದ ಮೇಘದಂತೆಯೂ ಪ್ರಕಾಶಿಸಿದನು.

ನಕುಲನು ಅಂತಹ ದುಃಸ್ಥಿತಿಯಲ್ಲಿದ್ದಾಗ ಕರ್ಣನು ಅವನನ್ನು ಕುರಿತು ಹೇಳಿದನು: “ಪಾಂಡುಕುಮಾರ! ನೀನು ವ್ಯರ್ಥಾಲಾಪಮಾಡಿದೆಯಲ್ಲವೇ? ಈಗ ಹೇಳು. ನನ್ನಿಂದ ಪದೇ-ಪದೇ ಪ್ರಹೃತನಾಗುತ್ತಿರುವ ನೀನು ಈಗಲೂ ಹೃಷ್ಟನಾಗಿಯೇ ಇರುವೆಯಾ? ಅಂತಹ ಮಾತುಗಳನ್ನೇ ಹೇಳುವೆಯಾ? ಮಹಾಬಲಿಷ್ಠರೊಡನೆ ಮಾತ್ರವೇ ಯುದ್ಧಮಾಡು. ನಿನಗಿಂತಲೂ ಬಲಿಷ್ಠ ರೊಡನೆ ಯುದ್ಧಮಾಡಲು ಸಾಧ್ಯವಾಗದೇ ಇರುವುದಕ್ಕೆ ನಾಚಿಕೆಪಟ್ಟು ಕೊಳ್ಳಬೇಡ. ಈಗ ನೀನು ಮನೆಗಾದರೂ ಹೋಗು ಅಥವಾ ಕೃಷ್ಣಾರ್ಜುನರಿರುವ ಸ್ಥಳಕ್ಕಾದರೂ ಹೋಗು.”

ಮಹಾರಾಜ! ಹೀಗೆಂಬುದಾಗಿ ಕರ್ಣನು ನಕುಲನಿಗೆ ಹೇಳಿ ಅವನನ್ನು ಬಿಟ್ಟುಬಿಟ್ಟನು. ಧರ್ಮವಿದನಾದ, ಶೂರನಾದ ಕರ್ಣನು ಸಂಹಾರಮಾಡಲು ಅವಕಾಶವು ಸಿಕ್ಕಿದರೂ ಕುಂತಿಯ ಮಾತನ್ನು ಸ್ಮರಿಸಿ ನಕುಲನನ್ನು ಸಂಹಾರಮಾಡಲಿಲ್ಲ. ಆ ಕಾರಣದಿಂದಲೇ ಕರ್ಣನು ನಕುಲನನ್ನು ವಧೆ ಮಾಡದೇ ಬಿಟ್ಟುಬಿಟ್ಟನು. ಧನುಷ್ಮಂತನಾದ ಸೂತಪುತ್ರನಿಂದ ಬಿಡಲ್ಪಟ್ಟ ನಕುಲನು ನಾಚಿಕೆಗೊಂಡವನೋ ಎಂಬಂತೆ ಯುಧಿಷ್ಠಿರನ ರಥದ ಸಮೀಪಕ್ಕೆ ಹೋದನು. ಸೂತಪುತ್ರನಾದ ಕರ್ಣನ ಚುಚ್ಚುಮಾತುಗಳಿಂದ ಬಹಳವಾಗಿ ಸಂತಾಪಗೊಂಡ ನಕುಲನು ದುಃಖತಪ್ತನಾಗಿ–ಮಡಕೆಯಲ್ಲಿರುವ ಸರ್ಪದಂತೆ ನಿಟ್ಟುಸಿರುಬಿಡುತ್ತಾ ಯುಧಿಷ್ಠಿರನ ರಥವನ್ನು ಹತ್ತಿದನು.

ಕರ್ಣನು ನಕುಲನನ್ನು ಜಯಿಸಿದನಂತರ ಚಂದ್ರನಂತೆ ಬಿಳಿಯ ದಾಗಿದ್ದ ಕುದುರೆಗಳಿಂದಲೂ-ಎತ್ತರವಾದ ಧ್ವಜದಿಂದಲೂ ಯುಕ್ತವಾಗಿದ್ದ ರಥದ ಮೂಲಕ ಅತಿತ್ವರೆಯಿಂದ ಪಾಂಚಾಲಯೋಧರ ಕಡೆಗೆ ತೆರಳಿದನು.

ಕೌರವರ ಸೇನಾಪತಿಯಾಗಿದ್ದ ಕರ್ಣನು ಪಾಂಚಾಲರ ರಥಸಮೂಹದ ಬಳಿಗೆ ಹೋದುದನ್ನು ನೋಡಿ ಪಾಂಡವರ ಸೈನ್ಯದಲ್ಲಿ ದೊಡ್ಡ ಕೋಲಾಹಲ ವುಂಟಾಯಿತು. ಸೂರ್ಯನು ನಡುನೆತ್ತಿಗೆ ಬರಲಾಗಿ ಸೂತಪುತ್ರನು ಚಕ್ರದಂತೆಯೇ ರಣಾಂಗಣದಲ್ಲಿ ಸಂಚರಿಸುತ್ತಾ ಅಪಾರಸಂಖ್ಯೆಯಲ್ಲಿ ಪಾಂಡವರ ಸೈನ್ಯವನ್ನು ಸಂಹರಿಸಿದನು. ಪಾಂಚಾಲರ ರಥಸಮೂಹದಲ್ಲಿ ಅನೇಕ ರಥಗಳ ಚಕ್ರಗಳು ಭಗ್ನವಾಗಿದ್ದುವು. ಧ್ವಜ-ಪತಾಕೆಗಳು ಛಿನ್ನವಾಗಿದ್ದುವು. ಕುದುರೆಗಳೂ ಮತ್ತು ಸೂತರೂ ಅಸುನೀಗಿದ್ದರು. ಅನೇಕರಥಗಳ ಅಚ್ಚುಮರಗಳು ಮುರಿದುಬಿದ್ದಿದ್ದುವು. ಪಾಂಚಾಲರ ಇಂತಹ ಅಸಂಖ್ಯಾತ ರಥಗಳನ್ನು ನಾವು ನೋಡಿದೆವು. ಗಾಯಗೊಂಡ ಕುದುರೆಗಳು ಮುರಿದುಹೋದ ರಥಗಳನ್ನು ಎಳೆಯುತ್ತಿದ್ದುದನ್ನೂ ನೋಡಿದೆವು. ಮಹಾರಣ್ಯದಲ್ಲಿ ದಾವಾಗ್ನಿಯಿಂದ ದಗ್ಧವಾದ ಅವಯವಗಳಿಂದ ಕೂಡಿದ ಆನೆಗಳು ಪರಿಭ್ರಮಿಸುವಂತೆ–ಮದಿಸಿದ ಆನೆಗಳು ಕರ್ಣನ ಬಾಣಗಳ ಪ್ರಹಾರದಿಂದ ಸಂಭ್ರಾಂತವಾಗಿ ರಣಾಂಗಣದ ಸುತ್ತಲೂ ತಿರುಗುತ್ತಿದ್ದುವು. ಹಲವು ಆನೆಗಳ ಕುಂಭಸ್ಥಳಗಳು ಒಡೆದುಹೋಗಿದ್ದುವು. ಅಲ್ಲಿಂದ ರಕ್ತವು ಸ್ರವಿಸುತ್ತಿದ್ದು ಆನೆಗಳ ಅಂಗಾಂಗಗಳೆಲ್ಲವೂ ನೆನೆದುಹೋಗಿದ್ದುವು. ಮತ್ತೆ ಕೆಲವು ಆನೆಗಳು ಕರ್ಣನ ಬಾಣಗಳ ಪ್ರಹಾರದಿಂದ ಸೊಂಡಿಲುಗಳನ್ನು ಕಳೆದುಕೊಂಡಿದ್ದುವು. ಕೆಲವು ಆನೆಗಳ ಕವಚಗಳೂ ಛಿನ್ನ-ಭಿನ್ನವಾಗಿದ್ದುವು. ಕೆಲವು ಆನೆಗಳ ಬಾಲಗಳು ಕತ್ತರಿಸಿಹೋಗಿದ್ದುವು. ಮಹಾತ್ಮನಾದ ಕರ್ಣನಿಂದ ವಧಿಸಲ್ಪಡುತ್ತಿದ್ದ ಆ ಆನೆಗಳು ಛಿದ್ರ-ವಿಚ್ಛಿದ್ರವಾದ ಮೋಡಗಳಂತೆ ರಣಾಂಗಣದ ಸುತ್ತಲೂ ಬೀಳುತ್ತಿದ್ದುವು. ಇತರ ಕೆಲವು ಆನೆಗಳು ಕರ್ಣನು ಪ್ರಯೋಗಿಸಿದ ನಾರಾಚ-ಶರ-ತೋಮರಗಳಿಂದ ತ್ರಾಸಗೊಂಡು–ದೀಪದ ಹುಳುಗಳು ಬೆಂಕಿಯಲ್ಲಿ ಬೀಳುವಂತೆ–ಕರ್ಣನಿಗೆ ಅಭಿಮುಖವಾಗಿಯೇ ಧಾವಿಸುತ್ತಿದ್ದುವು. ಮತ್ತೆ ಕೆಲವು ಮಹಾಗಜಗಳು ಗಟ್ಟಿಯಾಗಿ ಕೂಗಿಕೊಳ್ಳುತ್ತಾ ಪರ್ವತಗಳು ನೀರನ್ನು ಸ್ರವಿಸುವಂತೆ ತಮ್ಮ ಶರೀರದಿಂದ ರಕ್ತವನ್ನು ಸುರಿಸುತ್ತಾ ಓಡಿಹೋಗುತ್ತಿದ್ದುದು ಕಂಡುಬಂದಿತು. ಹಲವು ಕುದುರೆಗಳ ಎದೆಮುಚ್ಚುವ ಕವಚಗಳು ಕತ್ತರಿಸಿಬಿದ್ದಿದ್ದುವು. ಕೆಲವು ಕುದುರೆಗಳ ಬಾಲಬಂಧಗಳು ಕತ್ತರಿಸಿಹೋಗಿದ್ದುವು. ಬೆಳ್ಳಿ, ಕಂಚು ಮತ್ತು ಚಿನ್ನದಿಂದ ಮಾಡಿದ ಆಭರಣಗಳಿಂದಲೂ ಕುದುರೆಗಳು

ಹೀನವಾಗಿದ್ದುವು. ಕೆಲವು ಕುದುರೆಗಳಿಗೆ ಕಡಿವಾಣಗಳೇ ಇರಲಿಲ್ಲ. ಕುದುರೆಗಳ ಮೇಲಿದ್ದ ಚಾಮರಗಳೂ, ರತ್ನಗಂಬಳಿಗಳೂ, ಬತ್ತಳಿಕೆಗಳೂ ಕೆಳಗೆ ಬಿದ್ದುಹೋಗಿದ್ದುವು. ಆಹವಶೋಭಿಗಳಾದ, ಶೂರರಾದ ಹಲವು ಸವಾರರು ಸತ್ತುಹೋಗಿದ್ದರು. ಇಂತಹ ನೂರಾರು ಕುದುರೆಗಳು ರಣಾಂಗಣದ ಸುತ್ತಲೂ ತಿರುಗಾಡುತ್ತಿದ್ದುದನ್ನು ನಾವು ನೋಡಿದೆವು. ಕವಚ ಮತ್ತು ಉಷ್ಣೀಷಗಳನ್ನು ಧರಿಸಿದ್ದ ಹಲವು ಕುದುರೇಸವಾರರು ಪ್ರಾಸ, ಖಡ್ಗ, ಋಷ್ಟಿ–ಇವೇ ಮೊದಲಾದ ಆಯುಧಗಳಿಂದ ವಿಹೀನರಾಗಿ ಕರ್ಣನ ಬಾಣಗಳಿಂದ ಹತರಾಗುತ್ತಿದ್ದುದನ್ನು ನಾವು ನೋಡಿದೆವು.

ಹತರಾಗುತ್ತಿದ್ದವರನ್ನೂ ಮತ್ತು ಕರ್ಣನ ಬಾಣಗಳಿಗೆ ಭಯಪಟ್ಟು ನಡುಗುತ್ತಿದ್ದವರನ್ನೂ ನೋಡಿದೆವು. ಕೆಲವು ಕುದುರೇಸವಾರರು ಕರ್ಣನ ಬಾಣಪ್ರಹಾರದಿಂದ ಕೈ-ಕಾಲುಗಳನ್ನೂ, ಕಣ್ಣು-ಮೂಗುಗಳನ್ನೂ ಕಳೆದು ಕೊಂಡಿದ್ದರು. ನಾನಾವಿಧವಾದ ಅಂಗಗಳಿಂದಲೂ ಅವಯವಗಳಿಂದಲೂ ಹೀನರಾಗಿ ನರಳುತ್ತಿದ್ದ ಅನೇಕ ಸವಾರರನ್ನೂ ನಾವು ನೋಡಿದೆವು. ರಥಿಗಳು ಹತರಾಗಲಾಗಿ ಶೀಘ್ರವಾಗಿ ಹೋಗುವ ಕುದುರೆಗಳಿಂದ ಯುಕ್ತವಾಗಿದ್ದ, ಸುವರ್ಣಭೂಷಿತವಾದ ರಥಗಳು ರಣಾಂಗಣದ ಸುತ್ತಲೂ ತಿರುಗುತ್ತಿದ್ದು ದನ್ನು ನೋಡಿದೆವು. ಅನೇಕರಥಗಳ ಅಚ್ಚುಮರಗಳೂ ಮತ್ತು ಮೂಕಿಗಳೂ ಮುರಿದುಹೋಗಿದ್ದುವು. ಕೆಲವು ರಥಗಳ ಚಕ್ರಗಳೂ ಮುರಿದುಬಿದ್ದಿದ್ದುವು. ಪತಾಕಾ-ಧ್ವಜಗಳೇ ಇಲ್ಲದ ರಥಗಳನ್ನು ನಾವು ನೋಡಿದೆವು. ಸುಂದರವಾದ ಈಷಾದಂಡಗಳು ಮುರಿದುಹೋಗಿದ್ದ ಹಲವಾರು ರಥಗಳನ್ನೂ ನಾವು ನೋಡಿದೆವು. ಕರ್ಣನ ತೀಕ್ಷ್ಣವಾದ ಹಲವಾರು ಬಾಣಗಳಿಂದ ಪ್ರಹೃತರಾದ ಅನೇಕರಥಿಗಳು ಇಲ್ಲಿಂದಲ್ಲಿಗೂ ಅಲ್ಲಿಂದಿಲ್ಲಿಗೂ ಓಡಾಡುತ್ತಿದ್ದುದನ್ನು ನಾವು ನೋಡಿದೆವು. ರಥಿಗಳಲ್ಲಿ ಕೆಲವರು ಶಸ್ತ್ರವಿಹೀನರಾಗಿ ಪ್ರಾಣತೊರೆದಿದ್ದರು. ಮತ್ತೆ ಕೆಲವರು ಕೈಗಳಲ್ಲಿ ಶಸ್ತ್ರಗಳನ್ನಿಟ್ಟುಕೊಂಡೇ ಅಸುನೀಗಿದ್ದರು. ನಕ್ಷತ್ರ ಸಮೂಹದ ಚಿಹ್ನೆಗಳಿಂದ ಕೂಡಿದ್ದ ಕವಚಗಳಿಂದ ಆಚ್ಛಾದಿತವಾಗಿದ್ದ, ಉತ್ತಮವಾದ ಘಂಟೆಗಳಿಂದ ಸುಶೋಭಿತವಾಗಿದ್ದ, ನಾನಾವಿಧವಾದ ಬಣ್ಣಗಳಿಂದ ಚಿತ್ರಿತವಾಗಿ ಮಾಡಲ್ಪಟ್ಟಿದ್ದ ಪತಾಕೆಗಳಿಂದ ಸಮಲಂಕೃತ ವಾಗಿದ್ದ, ರಣಾಂಗಣದ ಸುತ್ತಲೂ ಓಡಾಡುತ್ತಿದ್ದ ನೂರಾರು ಆನೆಗಳನ್ನು

ನಾವು ನೋಡಿದೆವು. ಕರ್ಣನ ಧನುಸ್ಸಿನಿಂದ ಚ್ಯುತವಾದ ಬಾಣಗಳಿಂದ ಯೋಧರ ಶಿರಸ್ಸುಗಳೂ, ತೋಳುಗಳೂ, ತೊಡೆಗಳೂ ಮತ್ತು ಉಳಿದ ಅವಯವಗಳೂ ಕತ್ತರಿಸಲ್ಪಟ್ಟು ರಣರಂಗದ ಸುತ್ತಲೂ ಬಿದ್ದಿದ್ದುದನ್ನು ನೋಡಿದೆವು. ಕರ್ಣನ ಬಾಣಗಳಿಂದ ಪ್ರಹೃತರಾಗಿ ನಿಶಿತವಾದ ಬಾಣಗಳಿಂದ ಯುದ್ಧಮಾಡುತ್ತಿದ್ದ ಯೋಧರಲ್ಲಿ ಭಯಂಕರವಾದ ಸಂಘರ್ಷವುಂಟಾಯಿತು. ಕರ್ಣನಿಂದ ಪ್ರಹೃತರಾಗುತ್ತಿದ್ದ ಸೃಂಜಯರು–ಪತಂಗದ ಹುಳುಗಳು ಬೆಂಕಿಯ ಬಳಿಗೆ ಹೋಗುವಂತೆ–ಕರ್ಣನಿಗೆ ಅಭಿಮುಖವಾಗಿಯೇ ಹೋಗುತ್ತಿದ್ದರು. ಪಾಂಡವರ ಸೈನ್ಯವನ್ನು ಅಲ್ಲಲ್ಲಿ ಬಾಣಾಗ್ನಿಯಿಂದ ದಹಿಸುತ್ತಿದ್ದ ಮಹಾರಥನಾದ ಕರ್ಣನನ್ನು–ಪ್ರಳಯಕಾಲದ ಪ್ರಚಂಡವಾದ ಅಗ್ನಿಯಿಂದ ಪ್ರಾಣಿಗಳು ದೂರವಿರುವಂತೆ–ಕ್ಷತ್ರಿಯರು ಪರಿತ್ಯಜಿಸಿ ಹೊರಟುಹೋದರು. ಹತಶೇಷರಾಗಿ ಉಳಿದಿದ್ದ ಪಾಂಚಾಲರ ವೀರಮಹಾರಥರು ಪಲಾಯನ ಮಾಡುತ್ತಿದ್ದರು. ಕರ್ಣನು ಭಗ್ನರಾಗಿ ಓಡಿಹೋಗುತ್ತಿದ್ದ ಅವರನ್ನು ಬಿಡದೇ ಹಿಂದಿನಿಂದಲೇ ಅವರ ಮೇಲೆ ಬಾಣಗಳನ್ನು ಸುರಿಸುತ್ತಾ ಅವರನ್ನು ಅಟ್ಟಿಸಿಕೊಂಡೇ ಹೋಗುತ್ತಿದ್ದನು. ತೇಜಸ್ವಿಯಾದ, ಮಹಾಬಲನಾದ ಸೂತಪುತ್ರನು ಭಿನ್ನವಾಗಿದ್ದ ಕವಚಗಳಿಂದಲೂ-ಧ್ವಜಗಳಿಂದಲೂ ಕೂಡಿದ್ದ ಪಾಂಚಾಲಮಹಾರಥರನ್ನು–ಕತ್ತಲನ್ನು ಹೋಗಲಾಡಿಸುವ ಸೂರ್ಯನು ನಡುಹಗಲಿನಲ್ಲಿ ಪ್ರಾಣಿಗಳನ್ನು ಪರಿತಾಪಗೊಳಿಸುವಂತೆ–ಬಾಣಗಳಿಂದ ಪರಿತಾಪಗೊಳಿಸಿದನು.”

೨೪ನೆಯ ಅಧ್ಯಾಯವು ಮುಗಿಯಿತು.

೨೫ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಯುಯುತ್ಸು ಮತ್ತು ಉಲೂಕರ ಯುದ್ಧ: ಯುಯುತ್ಸುವಿನ ಪಲಾಯನ: ಶತಾನೀಕನಿಗೂ–ಧೃತರಾಷ್ಟ್ರನ ಮಗನಾದ ಶ್ರುತಕರ್ಮನಿಗೂ ಮತ್ತು ಸುತಸೋಮ–ಶಕುನಿಯರಿಗೂ ಘೋರಯುದ್ಧ: ಶಕುನಿಯು ಪಾಂಡವಸೈನ್ಯವನ್ನು ವಿನಾಶಗೊಳಿಸಿದುದು

ಸಂಜಯನು ಯುಯುತ್ಸು ಮತ್ತು ಉಲೂಕರ ಯುದ್ಧವನ್ನು ವರ್ಣಿಸುತ್ತಾ ಹೇಳುತ್ತಾನೆ:

"ಮಹಾರಾಜ! ಉಲೂಕನು ನಿನ್ನ ಮಗನ ಮಹಾಸೈನ್ಯವನ್ನು ಓಡಿಹೋಗುವಂತೆ ಮಾಡುತ್ತಿದ್ದ ಯುಯುತ್ಸುವನ್ನು ನಿಲ್ಲುನಿಲ್ಲೆಂದು ಹೇಳುತ್ತಾ ಆಕ್ರಮಿಸಿದನು. ಅನಂತರ ಯುಯುತ್ಸುವು ನಿಶಿತವಾದ ಅಲುಗಿನಿಂದ ಕೂಡಿದ್ದ ಬಾಣದಿಂದ–ವಜ್ರಾಯುಧದಿಂದ ಇಂದ್ರನು ಪರ್ವತವನ್ನು ಪ್ರಹರಿಸುತ್ತಿದ್ದಂತೆ-ಉಲೂಕನನ್ನು ಪ್ರಹರಿಸಿದನು. ಅದರಿಂದ ಕ್ರುದ್ಧನಾದ ಉಲೂಕನು ಯುಯುತ್ಸುವಿನ ಧನುಸ್ಸನ್ನು ಕ್ಷುರಪ್ರದಿಂದ ಕತ್ತರಿಸಿ ಪುನಃ ಅವನನ್ನು ಕರ್ಣೀ ಎಂಬ ಬಾಣದಿಂದ ಪ್ರಹರಿಸಿದನು. ಕೋಪದಿಂದ ರಕ್ತಾಕ್ಷನಾಗಿದ್ದ ಯುಯುತ್ಸುವು ಛಿನ್ನವಾದ ಧನುಸ್ಸನ್ನು ವಿಸರ್ಜಿಸಿ ವೇಗವತ್ತರವಾದ ಮತ್ತೊಂದು ಮಹಾಧನುಸ್ಸನ್ನೆತ್ತಿಕೊಂಡು ಶಕುನಿಯ ಮಗನಾದ ಉಲೂಕನನ್ನು ಅರುವತ್ತು ಬಾಣಗಳಿಂದ ಪ್ರಹರಿಸಿ ಮೂರು ಬಾಣಗಳಿಂದ ಅವನ ಸಾರಥಿಯನ್ನೂ ಪ್ರಹರಿಸಿದನು. ಪುನಃ ಉಲೂಕನನ್ನು ಅನೇಕಬಾಣಗಳಿಂದ ಗಾಯಗೊಳಿಸಿದನು. ಅದಕ್ಕೆ ಪ್ರತಿಯಾಗಿ ಕ್ರುದ್ಧನಾಗಿದ್ದ ಉಲೂಕನು ಸ್ವರ್ಣಭೂಷಿತವಾದ ಇಪ್ಪತ್ತು ಬಾಣಗಳಿಂದ ಯುಯುತ್ಸುವನ್ನು ಪ್ರಹರಿಸಿ, ಸುವರ್ಣಮಯವಾಗಿದ್ದ ಅವನ ಧ್ವಜವನ್ನೂ ಕತ್ತರಿಸಿದನು. ಕತ್ತರಿಸಲ್ಪಟ್ಟ ದಂಡವುಳ್ಳ ವಿಶಾಲವಾದ ಆ ಸುವರ್ಣಧ್ವಜವು ಛಿನ್ನ-ಭಿನ್ನವಾಗಿ ಯುಯುತ್ಸುವಿನ ಮುಂಭಾಗದಲ್ಲಿ ಬಿದ್ದಿತು. ಧ್ವಜವನ್ನು ಧ್ವಂಸಮಾಡಿದುದನ್ನು ಕಂಡು ಕ್ರೋಧಮೂರ್ಛಿತನಾದ ಯುಯುತ್ಸುವು ಉಲೂಕನ ವಕ್ಷಃಸ್ಥಳವನ್ನು ಐದು ಬಾಣಗಳಿಂದ

ಪ್ರಹರಿಸಿದನು. ಅನಂತರ ಉಲೂಕನು ಎಣ್ಣೆಯಿಂದ ಹದಮಾಡಲ್ಪಟ್ಟಿದ್ದ ಭಲ್ಲದಿಂದ ಯುಯುತ್ಸುವಿನ ಸಾರಥಿಯ ಕತ್ತನ್ನು ಕತ್ತರಿಸಿದನು. ಉಲೂಕನ ಬಾಣದಿಂದ ಕತ್ತರಿಸಲ್ಪಟ್ಟ ಸಾರಥಿಯ ಶಿರಸ್ಸು–ಆಕಾಶದಿಂದ ವಿಚಿತ್ರವಾದ ನಕ್ಷತ್ರವು ಕೆಳಗೆ ಬೀಳುವಂತೆ–ಭೂಮಿಯ ಮೇಲೆ ಬಿದ್ದಿತು. ಪುನಃ ಉಲೂಕನು ಯುಯುತ್ಸುವಿನ ರಥದಲ್ಲಿದ್ದ ನಾಲ್ಕು ಕುದುರೆಗಳನ್ನು ಸಂಹರಿಸಿ, ಐದು ಬಾಣಗಳಿಂದ ಯುಯುತ್ಸುವನ್ನೂ ಗಾಯಗೊಳಿಸಿದನು. ಬಲಿಷ್ಠನಾದ ಉಲೂಕನ ಬಾಣಗಳಿಂದ ಬಹಳವಾಗಿ ಗಾಯಗೊಂಡ ಯುಯುತ್ಸುವು ಬೇರೊಬ್ಬ ಯೋಧನ ರಥದಲ್ಲಿ ಕುಳಿತು ಪಲಾಯನಮಾಡಿದನು.

ಯುಯುತ್ಸುವನ್ನು ಜಯಿಸಿದನಂತರ ಉಲೂಕನು ಅವಸರದಿಂದ ಪಾಂಚಾಲ-ಸೃಂಜಯರ ಸೈನ್ಯದ ಬಳಿಗೆ ಹೋಗಿ ಅವರನ್ನು ನಿಶಿತವಾದ ಬಾಣಗಳಿಂದ ಸಂಹರಿಸಲು ಉಪಕ್ರಮಿಸಿದನು.

ಮತ್ತೊಂದು ವಿಭಾಗದಲ್ಲಿ ನಿನ್ನ ಮಗನಾದ ಶ್ರುತಕರ್ಮನು ಸ್ವಲ್ಪವಾದರೂ ಸಂಭ್ರಮಗೊಳ್ಳದೇ ನಿಮೇಷಾರ್ಧಮಾತ್ರದ ಸಮಯದಲ್ಲಿ ಶತಾನೀಕನನ್ನು ಅಶ್ವ-ಸೂತ-ರಥಗಳಿಂದ ವಿಹೀನನನ್ನಾಗಿ ಮಾಡಿದನು. ಮಹಾರಥನಾದ ಶತಾನೀಕನು ಕುದುರೆಗಳಿಂದ ವಿಹೀನವಾಗಿದ್ದ ರಥದ ಮೇಲೆಯೇ ನಿಂತು ಪರಮಕ್ರುದ್ಧನಾಗಿ ನಿನ್ನ ಮಗನ ಮೇಲೆ ಗದೆಯನ್ನು ರಭಸದಿಂದ ಎಸೆದನು.

ಆ ಮಹಾಗದೆಯು ಶ್ರುತಕರ್ಮನ ರಥಾಶ್ವ-ಸಾರಥಿಗಳನ್ನು ಭಸ್ಮೀಭೂತವನ್ನಾಗಿ ಮಾಡಿ–ಭೂಮಿಯನ್ನೇ ಸೀಳಲು ಹೊರಟಿರುವುದೋ ಎಂಬಂತೆ–ರಭಸದಿಂದ ಕೆಳಕ್ಕೆ ಬಿದ್ದಿತು. ಕುರುಗಳ ಕೀರ್ತಿವರ್ಧಕರಾದ, ರಥಹೀನರಾಗಿದ್ದ ಇಬ್ಬರು ಮಹಾವೀರರೂ ಒಬ್ಬರು ಮತ್ತೊಬ್ಬರನ್ನು ದುರುಗುಟ್ಟಿಕೊಂಡು ನೋಡುತ್ತಾ ಯುದ್ಧಸ್ಥಳದಿಂದ ಹಿಂದಕ್ಕೆ ಸರಿದರು. ಸಂಭ್ರಾಂತನಾದ ನಿನ್ನ ಮಗ ಶ್ರುತಕರ್ಮನು ವಿವಿತ್ಸುವಿನ ರಥವನ್ನು

ಹತ್ತಿದನು. ಶತಾನೀಕನೂ ಸಹ ತ್ವರೆಯಿಂದ ಪ್ರತಿವಿಂಧ್ಯನ ರಥವನ್ನು ಹತ್ತಿಕೊಂಡನು.

ಮತ್ತೊಂದು ವಿಭಾಗದಲ್ಲಿ ಅತ್ಯಂತಕ್ರುದ್ಧನಾದ ಶಕುನಿಯು ಸುತಸೋಮನನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಅಗಾಧವಾದ ನೀರಿನ ಪ್ರವಾಹಕ್ಕೂ ಪರ್ವತವನ್ನು ಚಲಿಸುವಂತೆ ಮಾಡಲು ಸಾಧ್ಯವಾಗದಂತೆ–ಸುತಸೋಮನನ್ನು ವಿಚಲಿತನನ್ನಾಗಿ ಮಾಡಲು ಶಕುನಿಗೆ ಸಾಧ್ಯವಾಗಲಿಲ್ಲ. ಸುತಸೋಮನು ತನ್ನ ತಂದೆಯಾದ ಭೀಮನಿಗೆ ಅತ್ಯಂತ ವೈರಿಯಾದ ಶಕುನಿಯನ್ನು ನೋಡಿ ಅನೇಕಸಹಸ್ರಬಾಣಗಳಿಂದ ಅವನನ್ನು ಮುಚ್ಚಿಬಿಟ್ಟನು. ಶಕುನಿಯು ಸುತಸೋಮನು ಬಿಟ್ಟ ಸಾವಿರಾರು ಬಾಣಗಳನ್ನೂ ಪ್ರತಿಬಾಣಗಳಿಂದ ಬಹಳ ಬೇಗ ಕತ್ತರಿಸಿದನು. ಅಸ್ತ್ರಗಳನ್ನು ಬಹಳ ಬೇಗ ಬಿಡುವ ಹಸ್ತಲಾಘವವನ್ನು ಶಕುನಿಯು ಹೊಂದಿದ್ದನು; ಚಿತ್ರಯೋಧಿಯಾಗಿದ್ದನು; ಯುದ್ಧದಲ್ಲಿ ವಿಜಯಶ್ರೀಯಿಂದ ಸುಶೋಭಿತನಾಗಿ ಕಾಣುತ್ತಿದ್ದನು. ಮಹಾಕೋಪಿಷ್ಠನಾದ ಶಕುನಿಯು ಸುತಸೋಮನು ಬಿಟ್ಟ ಬಾಣಗಳೆಲ್ಲವನ್ನೂ ನಿಶಿತವಾದ ಬಾಣಗಳಿಂದ ನಿವಾರಣೆಮಾಡಿಕೊಂಡು ಸುತಸೋಮನನ್ನು ಮೂರು ಬಾಣಗಳಿಂದ ಪ್ರಹರಿಸಿದನು. ಇಷ್ಟುಮಾತ್ರವಲ್ಲ; ನಿನ್ನ ಭಾವಮೈದುನನು ಸುತಸೋಮನ ರಥದ ಕುದುರೆಗಳನ್ನೂ, ಧ್ವಜವನ್ನೂ ಮತ್ತು ಸೂತನನ್ನೂ ನಿಶಿತವಾದ ಬಾಣಗಳಿಂದ ಎಳ್ಳಿನಂತೆ ನುಚ್ಚುನೂರು ಮಾಡಿಬಿಟ್ಟನು. ಅದನ್ನು ನೋಡಿ ಸುತ್ತಲೂ ಇದ್ದ ಪ್ರೇಕ್ಷಕರು ಹರ್ಷಸೂಚಕವಾಗಿ ಕೋಲಾಹಲಧ್ವನಿಗಳನ್ನು ಮಾಡಿದರು. ಹತಾಶ್ವನಾದ, ರಥ-ಧ್ವಜಹೀನನಾದ, ಮಹಾಧನುಷ್ಮಂತನಾದ ಸುತಸೋಮನು ಮತ್ತೊಂದು ಶ್ರೇಷ್ಠವಾದ ಧನುಸ್ಸನ್ನು ಕೈಯಲ್ಲಿ ಹಿಡಿದು ನೆಲದ ಮೇಲೆಯೇ ನಿಂತುಕೊಂಡನು. ಚಿನ್ನದ ಮೂಲಭಾಗಗಳನ್ನು ಹೊಂದಿದ್ದ, ಮಸೆಗಲ್ಲಿನಿಂದ ನಿಶಿತನಾಗಿ ಮಾಡಲ್ಪಟ್ಟಿದ್ದ ಅನೇಕ ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಾ ನಿನ್ನ ಭಾವಮೈದುನನ ಆ ರಥವನ್ನು ಬಾಣಗಳಿಂದಲೇ ಮುಚ್ಚಿದನು. ಮಿಡತೆಗಳೋಪಾದಿಯಲ್ಲಿ ರಥದ ಸಮೀಪಕ್ಕೆ ಬರುತ್ತಿದ್ದ ಬಾಣಗಳ ಸಮೂಹಗಳನ್ನು ನೋಡಿಯೂ ಸಹ ಶಕುನಿಯು ಸ್ವಲ್ಪವಾದರೂ ವ್ಯಥೆ ಪಡಲಿಲ್ಲ. ಮಹಾಯಶೋವಂತನಾದ ಶಕುನಿಯು ಬಾಣಗಳ ಸಮೂಹಗಳಿಂದ ಸುತಸೋಮನು ಬಿಟ್ಟ

ಬಾಣಗಳನ್ನು ಧ್ವಂಸಮಾಡಿದನು. ಪದಾತಿಯಾಗಿದ್ದ ಸುತಸೋಮನು ರಥದಲ್ಲಿ ಕುಳಿತಿದ್ದ ಶಕುನಿಯೊಡನೆ ಅಭೀತನಾಗಿಯೇ ಯುದ್ಧಮಾಡುತ್ತಿದ್ದನು. ನಂಬಲು ಅಸಾಧ್ಯವಾದ ಮತ್ತು ಅದ್ಭುತವಾದ ಸುತಸೋಮನ ಆ ಸಾಹಸಕರ್ಮವನ್ನು ನೋಡಿ ರಣಾಂಗಣದಲ್ಲಿದ್ದ ಯೋಧರೂ-ಅಂತರಿಕ್ಷದಲ್ಲಿದ್ದ ಸಿದ್ಧರೂ ಬಹಳ ಸಂತುಷ್ಟರಾದರು.

ಆ ಸಮಯದಲ್ಲಿ ಶಕುನಿಯು ತೀಕ್ಷ್ಣವಾಗಿದ್ದ, ಮಹಾವೇಗ ಯುಕ್ತವಾಗಿದ್ದ ಮತ್ತು ಬಗ್ಗಿದ ಗಿಣ್ಣುಗಳಿದ್ದ ಭಲ್ಲಗಳಿಂದ ಸುತಸೋಮನ ಧನುಸ್ಸನ್ನೂ, ಬತ್ತಳಿಕೆಯನ್ನೂ ಸಂಪೂರ್ಣವಾಗಿ ಧ್ವಂಸಮಾಡಿದನು. ರಥಹೀನನಾಗಿದ್ದ, ಕತ್ತರಿಸಿದ ಧನುಸ್ಸಿನಿಂದ ಕೂಡಿದ್ದ ಸುತಸೋಮನು ಆ ಧನುಸ್ಸನ್ನು ಎಸೆದು ವೈಡೂರ್ಯಮಣಿ ಮತ್ತು ನೀಲಕಮಲಗಳಿಗೆ ಸಮಾನವಾದ, ಶ್ಯಾಮಲವರ್ಣದಿಂದ ಕೂಡಿದ್ದ, ಆನೆಯ ದಂತದ ಹಿಡಿಯಿದ್ದ ಕತ್ತಿಯನ್ನು ಹೊರತೆಗೆದು ಮೇಲೆತ್ತಿ ಸಿಂಹನಾದಮಾಡಿದನು. ಧೀಮಂತನಾದ ಸುತಸೋಮನು ನಿರ್ಮಲವಾದ ಆಕಾಶಕ್ಕೆ ಸಮಾನವಾದ ಕಾಂತಿಯಿಂದ ಕೂಡಿದ್ದ ಕತ್ತಿಯನ್ನು ತಿರುಗಿಸುತ್ತಿರಲು ಶಕುನಿಯು ಆ ಕತ್ತಿಯನ್ನು ಕಾಲದಂಡಸದೃಶವೆಂದೇ ಭಾವಿಸಿದನು. ಖಡ್ಗಶಿಕ್ಷಣದಿಂದಲೂ-ಬಾಹುಬಲದಿಂದಲೂ ಸಂಪನ್ನನಾಗಿದ್ದ, ಖಡ್ಗಪಾಣಿಯಾಗಿದ್ದ ಸುತಸೋಮನು ಹದಿನಾಲ್ಕು ವಿಧವಾದ ಮಂಡಲಕ್ರಮದಲ್ಲಿ ಸಂಚರಿಸುತ್ತಿದ್ದನು.

**ಭ್ರಾನ್ತಮುದ್ಭ್ರಾನ್ತಮಾವಿದ್ಧಮಾಪ್ಲುತಂ ವಿಪ್ಲುತಂ ಸೃತಮ್ ।**
**ಸಂಪಾತಸಮುದೀರ್ಣೇ ಚ ದರ್ಶಯಾಮಾಸ ಸಂಯುಗೇ ॥೩೨॥**

ಸುತಸೋಮನು ಆ ರಣರಂಗದಲ್ಲಿ ಭ್ರಾಂತ, ಉದ್ಭ್ರಾಂತ, ಅವಿದ್ಧ, ಅಪ್ಲುತ, ವಿಪ್ಲುತ, ಸೃತ, ಸಂಪಾತ, ಸಮುದೀರ್ಣ–ಇವೇ ಮೊದಲಾದ ಹದಿನಾಲ್ಕು ಗತಿಗಳಿಂದ ಕತ್ತಿಯನ್ನು ತಿರುಗಿಸುತ್ತಾ ಸಂಚರಿಸುತ್ತಿದ್ದನು.

ಹೀಗೆ ಕತ್ತಿಯನ್ನು ವರಸೆ-ವರಸೆಯಾಗಿ ತಿರುಗಿಸುತ್ತಿದ್ದ ಸುತ ಸೋಮನ ಮೇಲೆ ವೀರ್ಯವಂತನಾದ ಶಕುನಿಯು ಬಾಣಪ್ರಯೋಗಮಾಡಿ ದನು. ಆ ಬಾಣಗಳು ತನ್ನ ಮೇಲೆ ಬೀಳುವುದರೊಳಗಾಗಿಯೇ ಸುತ ಸೋಮನು ಶ್ರೇಷ್ಠವಾದ ಕತ್ತಿಯಿಂದ ಅವೆಲ್ಲವನ್ನೂ ಕತ್ತರಿಸಿ ಹಾಕಿ ದನು. ಅದರಿಂದ ಪರಮಕ್ರುದ್ಧನಾದ ಪರವೀರಹಂತಕನಾದ ಶಕುನಿಯು

ಸರ್ಪೋಪಮವಾದ ಬಾಣಗಳನ್ನು ಸುತಸೋಮನ ಮೇಲೆ ಪ್ರಯೋಗಿಸಿದನು. ಖಡ್ಗಶಿಕ್ಷಣಪರಿಶ್ರಮದಿಂದಲೂ-ಬಲದಿಂದಲೂ ಸಂಪನ್ನನಾದ, ಗರುಡಸದೃಶಪರಾಕ್ರಮನಾದ ಸುತಸೋಮನು ಖಡ್ಗಯುದ್ಧದಲ್ಲಿ ತನ್ನ ಕೈಚಳಕವೆಷ್ಟೆಂಬುದನ್ನು ತೋರಿಸುತ್ತಾ, ಶಕುನಿಯು ಬಿಟ್ಟ ಬಾಣಗಳೆಲ್ಲವನ್ನೂ ಕತ್ತಿಯಿಂದಲೇ ಕತ್ತರಿಸಿಹಾಕಿದನು. ಅನಂತರ ಶಕುನಿಯು, ಭ್ರಾಂತೋದ್ಭ್ರಾಂತ ಮಂಡಲಾವರ್ತನದಲ್ಲಿ ಸಂಚರಿಸುತ್ತಿದ್ದ ಸುತಸೋಮನ ಪ್ರಭೆಯಿಂದ ಕೂಡಿದ್ದ ಕತ್ತಿಯನ್ನು ಸುತೀಕ್ಷ್ಣವಾದ ಕ್ಷುರಪ್ರವೆಂಬ ಬಾಣದಿಂದ ಕತ್ತರಿಸಿದನು. ಕತ್ತರಿಸಲ್ಪಟ್ಟ ಆ ಮಹಾಖಡ್ಗವು (ಖಡ್ಗದ ಒಂದು ಭಾಗವು) ಭೂಮಿಯಮೇಲೆ ಬಿದ್ದಿತು. ಸುಂದರವಾದ ಹಿಡಿಯಿದ್ದ ಕತ್ತಿಯ ಅರ್ಧಭಾಗವು ಸುತಸೋಮನ ಹಸ್ತದಲ್ಲಿಯೇ ಉಳಿಯಿತು. ಮಹಾರಥನಾದ ಸುತಸೋಮನು ತನ್ನ ಕತ್ತಿಯು ಕತ್ತರಿಸಲ್ಪಟ್ಟಿತೆಂದು ತಿಳಿದವನಾಗಿ ಒಡನೆಯೇ ಆರು ಹೆಜ್ಜೆಗಳನ್ನು ಮುಂದಿಟ್ಟು ತನ್ನ ಕೈಯಲ್ಲಿ ಉಳಿದಿದ್ದ ಕತ್ತಿಯ ಅರ್ಧಭಾಗದಿಂದಲೇ ಶಕುನಿಯನ್ನು ಪ್ರಹರಿಸಿದನು. ಸ್ವರ್ಣವಜ್ರವಿಭೂಷಿತ ನಾದ ಹಿಡಿಯಿಂದ ಕೂಡಿದ್ದ ಸುತಸೋಮನ ಖಡ್ಗಾರ್ಧವು ಮಹಾತ್ಮನಾದ ಶಕುನಿಯ ಮೌರ್ವೀಸಹಿತವಾದ ಧನುಸ್ಸನ್ನು ಕತ್ತರಿಸಿ ಬಹಳ ಬೇಗ ಭೂಮಿಯ ಮೇಲೆ ಬಿದ್ದಿತು. ಒಡನೆಯೇ ಸುತಸೋಮನು ಶ್ರುತಕೀರ್ತಿಯ ಮಹಾರಥವನ್ನು ಹತ್ತಿದನು. ಶಕುನಿಯೂ ಸಹ ಸುದುರ್ಜಯವಾದ ಮತ್ತು ಘೋರವಾದ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಅನೇಕಶತ್ರುಗಳ ಸಮೂಹಗಳನ್ನು ಸಂಹರಿಸುತ್ತಾ ಪಾಂಡವರ ಸೇನೆಯ ಕಡೆಗೆ ನುಗ್ಗಿ ಹೋದನು. ನಿರ್ಭಯನಾಗಿ ರಣಾಂಗಣದಲ್ಲಿ ಸಂಚರಿಸುತ್ತಿದ್ದ ಶಕುನಿಯನ್ನು ಕಂಡು ಪಾಂಡವರ ಸೈನ್ಯದಲ್ಲಿ ದೊಡ್ಡ ಕೋಲಾಹಲವೆದ್ದಿತು. ಅನೇಕವಿಧವಾದ ಶಸ್ತ್ರಾಸ್ತ್ರಗಳನ್ನು ಹೊಂದಿದ್ದ, ದರ್ಪಿಷ್ಠವಾಗಿದ್ದ ಪಾಂಡವರ ದೊಡ್ಡ ಸೈನ್ಯದ ಆ ತುಕ್ಕಡಿಗಳು ಮಹಾತ್ಮನಾದ ಸೌಬಲನಿಂದ ಓಡಿಸಲ್ಪಡುತ್ತಿದ್ದುದನ್ನು ನಾವೇ ಪ್ರತ್ಯಕ್ಷವಾಗಿ ಕಂಡೆವು. ಯಾವ ರೀತಿಯಲ್ಲಿ ದೇವರಾಜನು ದೈತ್ಯಸೇನೆಯನ್ನು ವಿನಾಶಗೊಳಿಸಿದನೋ–ಅದೇ ರೀತಿಯಲ್ಲಿ ಸುಬಲನ ಮಗನಾದ ಶಕುನಿಯು ಪಾಂಡವರ ಸೈನ್ಯವನ್ನು ವಿನಾಶಗೊಳಿಸಿದನು."

೨೫ನೆಯ ಅಧ್ಯಾಯವು ಮುಗಿಯಿತು.

## ಕೃಪಾಚಾರ್ಯರಿಂದ ಧೃಷ್ಟದ್ಯುಮ್ನನ ಭಯ: ಕೃತವರ್ಮನು ಶಿಖಂಡಿಯನ್ನು ಪರಾಜಯಗೊಳಿಸಿದುದು

ಸಂಜಯನು ಕೃಪ-ಧೃಷ್ಟದ್ಯುಮ್ನರ ಯುದ್ಧವನ್ನು ವರ್ಣಿಸುತ್ತಾನೆ:

"ಮಹಾರಾಜ! ಶರಭಮೃಗವು–ಅರಣ್ಯದಲ್ಲಿರುವ ಸಿಂಹವನ್ನು ನೋಡಿ ತಡೆಯಲು ಹೋಗುವಂತೆ–ರಣಾಂಗಣದಲ್ಲಿದ್ದ ಧೃಷ್ಟದ್ಯುಮ್ನನನ್ನು ಕೃಪರು ತಡೆದರು. ಬಲಿಷ್ಠರಾದ ಗೌತಮರಿಂದ ತಡೆಯಲ್ಪಟ್ಟ ಪಾರ್ಷತನಿಗೆ ಮುಂದಕ್ಕೆ ಒಂದು ಹೆಜ್ಜೆಯನ್ನಿಡಲೂ ಸಾಮರ್ಥ್ಯವಿಲ್ಲದಾಯಿತು. ಧೃಷ್ಟದ್ಯುಮ್ನನ ರಥದ ಬಳಿಗೆ ಗೌತಮರ ರಥವು ಹೋದುದನ್ನು ಕಂಡು ಎಲ್ಲ ಪ್ರಾಣಿಗಳೂ ಭಯಗೊಂಡುವು ಮತ್ತು ಧೃಷ್ಟದ್ಯುಮ್ನನು ವಿನಾಶಹೊಂದಿದನೆಂದೇ ಭಾವಿಸಿದುವು. ಕುಗ್ಗಿಹೋದ ಮನಸ್ಸಿನಿಂದ ಕೂಡಿದ್ದ ರಥಿಗಳೂ ಮತ್ತು ಕುದುರೇಸವಾರರೂ ಪರಸ್ಪರವಾಗಿ ಹೀಗೆ ಮಾತನಾಡಿಕೊಳ್ಳುತ್ತಿದ್ದರು:

**ದ್ರೋಣಸ್ಯ ನಿಧನಾನ್ನೂನಂ ಸಂಕ್ರುದ್ಧೋ ದ್ವಿಪದಾಂ ವರಃ।**
**ಶಾರದ್ವತೋ ಮಹಾತೇಜಾ ದಿವ್ಯಾಸ್ತ್ರವಿದುದಾರಧೀಃ॥**
**ಅಪಿ ಸ್ವಸ್ತಿ ಭವೇದದ್ಯ ಧೃಷ್ಟದ್ಯುಮ್ನಸ್ಯ ಗೌತಮಾತ್ ॥೫॥**

"ಬ್ರಾಹ್ಮಣಶ್ರೇಷ್ಠರಾದ ಕೃಪರು ದ್ರೋಣರ ವಧೆಯಿಂದಾಗಿ ಬಹಳ ಕ್ರುದ್ಧರಾಗಿದ್ದಾರೆ. ಶರದ್ವಂತರ ಮಕ್ಕಳಾದ, ಉದಾರಬುದ್ಧಿಯವರಾದ, ಮಹಾತೇಜಸ್ವಿಗಳಾದ ಕೃಪರು ಎಲ್ಲ ದಿವ್ಯಾಸ್ತ್ರಗಳನ್ನೂ ತಿಳಿದವರಾಗಿದ್ದಾರೆ. ನಿಶ್ಚಯವಾಗಿಯೂ ಈ ಸಮಯದಲ್ಲಿ ಗೌತಮರ ದೆಸೆಯಿಂದ ಧೃಷ್ಟ ದ್ಯುಮ್ನನು ತಪ್ಪಿಸಿಕೊಂಡು ಹೋಗಬಲ್ಲನೇ? ಧೃಷ್ಟದ್ಯುಮ್ನನಿಗೆ ಮಂಗಳ ವುಂಟಾದೀತೇ? ಈ ನಮ್ಮ ಮಹಾಸೇನೆಯು ಕೃಪರ ಭಯದಿಂದ ಮುಕ್ತವಾದೀತೇ? ಶತ್ರುಗಳೊಡನೆ ಯುದ್ಧಮಾಡಲು ಬಂದಿರುವ ನಮ್ಮೆಲ್ಲ ರನ್ನೂ ಕೃಪರು ಸಂಹರಿಸದೇ ಇರುವರೇ? ಯಮರಾಜನಿಗೆ ಸಮಾನವಾದ ರೂಪವನ್ನೇ ಈ ಕೃಪರಲ್ಲಿ ನಾವೀಗ ನೋಡುತ್ತಿದ್ದೇವೆ. ಗೌತಮರೂ ದ್ರೋಣರ ಹಾದಿಯನ್ನೇ ಹಿಡಿದಿರುತ್ತಾರೆ. (ದ್ರೋಣರಂತೆಯೇ ನಮ್ಮನ್ನು ಕೊಲ್ಲುತ್ತಾರೆ.)

ಕೃಪಾಚಾರ್ಯರು ಕ್ಷಿಪ್ರಹಸ್ತರು; ಯುದ್ಧದಲ್ಲಿ ಯಾವಾಗಲೂ ವಿಜಯವನ್ನೇ ಗಳಿಸತಕ್ಕವರು; ಮಹಾಸ್ತ್ರವಿದರು; ವೀರ್ಯಸಂಪನ್ನರು. ಎಲ್ಲಕ್ಕಿಂತಲೂ ಮಿಗಿಲಾಗಿ ಈ ಸಮಯದಲ್ಲಿ ಇವರು ಕ್ರೋಧಯುಕ್ತರೂ ಆಗಿದ್ದಾರೆ. ನಡೆಯ ಲಿರುವ ಕೃಪ-ಧೃಷ್ಟದ್ಯುಮ್ನರ ಮಹಾಯುದ್ಧದಲ್ಲಿ ಪಾರ್ಷತನು ಪರಾಙ್ಮುಖ ನಾಗುವನೆಂದೇ ಕಂಡುಬರುತ್ತಿದೆ."

ಮಹಾರಾಜ! ಆ ಇಬ್ಬರ ಸಮಾಗಮದ ಸಮಯದಲ್ಲಿ ಇವೇ ಮುಂತಾದ ಹಲವು ಮಾತುಗಳನ್ನು ಶತ್ರುಪಕ್ಷದ ಸೈನಿಕರು ನಮ್ಮ ಸೈನಿಕರೊಡನೆ ಆಡಿಕೊಳ್ಳುತ್ತಿದ್ದುದು ಕೇಳಿಬರುತ್ತಿದ್ದಿತು.

ಅನಂತರ ಶರದ್ವಂತರ ಮಕ್ಕಳಾದ ಕೃಪರು ಕೋಪದಿಂದ ನಿಟ್ಟುಸಿರು ಬಿಡುತ್ತಾ ಧೃಷ್ಟದ್ಯುಮ್ನನನ್ನು ನಿಶ್ಚೇಷ್ಟನನ್ನಾಗಿ ಮಾಡಿ ಅವನ ಎಲ್ಲ ಮರ್ಮಸ್ಥಳಗಳನ್ನೂ ಬಾಣಗಳಿಂದ ಪ್ರಹರಿಸಿದರು. ಮಹಾತ್ಮರಾದ ಕೃಪರಿಂದ ಬಹಳವಾಗಿ ಗಾಯಗೊಂಡ ಧೃಷ್ಟದ್ಯುಮ್ನನು ಆಗಿನ ಸಮಯದಲ್ಲಿ ತನ್ನ ಕರ್ತವ್ಯವೇನೆಂಬುದನ್ನೇ ಅರಿಯದವನಾದನು. ಮಹಾಮೋಹದಿಂದ ಸಂವೃತನಾದನು. (ಬುದ್ಧಿಶೂನ್ಯನಾದನು.) ಆ ಸಮಯದಲ್ಲಿ ಅವನ ಸಾರಥಿಯು ಪ್ರಶ್ನಿಸಿದನು: "**ಕಚ್ಚಿತ್ಕ್ಷೇಮಂ ತು ಪಾರ್ಷತ**–ಪಾರ್ಷತನೇ! ಕ್ಷೇಮದಿಂದಿರುವೆಯಾ? ಯುದ್ಧದಲ್ಲಿ ಹೀಗೆ ನೀನು ವ್ಯಸನಪಟ್ಟುದನ್ನು ನಾನೆಂದೂ ನೋಡಿಯೇ ಇರಲಿಲ್ಲ. ದ್ವಿಜಶ್ರೇಷ್ಠರಾದ ಕೃಪರು ಪ್ರಯೋಗಿಸಿದ, ಮರ್ಮಭೇದಿಗಳಾದ, ನಿನ್ನ ಮರ್ಮಸ್ಥಳಗಳನ್ನೇ ಅನುಲಕ್ಷಿಸಿ ಪ್ರಯೋಗಿಸಿದ ಬಾಣಗಳು ದೈವಯೋಗದಿಂದ ಮರ್ಮಸ್ಥಳಗಳ ಮೇಲೆ ಬೀಳಲಿಲ್ಲ. ಶಕ್ತಿಶಾಲಿಯಾದ ಪುರುಷನು ವೇಗಯುಕ್ತವಾದ ನದಿಯನ್ನು ಸಮುದ್ರದಿಂದ ಹಿಂದಿರುಗಿಸುವಂತೆ–ನಾನೂ ಸಹ ಈ ರಥವನ್ನು ಬೇಗ ಹಿಂದಿರುಗಿಸುತ್ತೇನೆ.

**ಅವಧ್ಯಂ ಬ್ರಾಹ್ಮಣಂ ಮನ್ಯೇ ಯೇನ ತೇ ವಿಕ್ರಮೋ ಹತಃ॥**

ಬ್ರಾಹ್ಮಣನು ಅವಧ್ಯನೆಂದು ಭಾವಿಸುತ್ತೇನೆ. ಈ ಕಾರಣದಿಂದಲೇ ನಿನ್ನ ಪರಾಕ್ರಮವೂ ಲುಪ್ತವಾಗಿದೆ."

ಮಹಾರಾಜ! ಸೂತನ ಮಾತನ್ನು ಕೇಳಿ ಧೃಷ್ಟದ್ಯುಮ್ನನು ನಿಧಾನವಾಗಿ ಈ ಮಾತುಗಳನ್ನು ಹೇಳಿದನು:

"ಸೂತ! ನನ್ನ ಮನಸ್ಸು ಮೋಹಗೊಳ್ಳುತ್ತಿದೆ. (ಭ್ರಮಿಸುತ್ತಿದೆ.) ಶರೀರಾದ್ಯಂತವಾಗಿ ಬೆವರು ಸುರಿಯಲು ಪ್ರಾರಂಭವಾಗಿದೆ. ನನ್ನ ಶರೀರದಲ್ಲಿ ನಡುಕವು ಹುಟ್ಟಿದೆ. ಭಯದಿಂದಾಗಿ ರೋಮಕೋಟಿಗಳು ನಿಮಿರಿನಿಂತಿವೆ. ರಣಾಂಗಣದಲ್ಲಿ ಕೃಪರನ್ನು ಪರಿತ್ಯಜಿಸಿ ಅರ್ಜುನನಿರುವಲ್ಲಿಗೆ ನಿಧಾನವಾಗಿ ರಥವನ್ನು ನಡೆಸಿಕೊಂಡು ಹೋಗು. ಸಮರಭೂಮಿಯಲ್ಲಿ ಅರ್ಜುನನನ್ನಾಗಲೀ, ಭೀಮಸೇನನನ್ನಾಗಲೀ ರಕ್ಷಕರನ್ನಾಗಿ ಪಡೆಯುವುದರಿಂದ ಮಾತ್ರವೇ ನನ್ನ ಕ್ಷೇಮವು ಸಾಧ್ಯವೆಂಬುದು ನನ್ನ ದೃಢವಾದ ಅಭಿಪ್ರಾಯವಾಗಿದೆ."

ಧೃಷ್ಟದ್ಯುಮ್ನನ ಮಾತುಗಳನ್ನು ಕೇಳಿ ಅವನ ಸಾರಥಿಯು, ಮಹಾಧನುಷ್ಮಂತನಾದ ಭೀಮಸೇನನು ನಿನ್ನ ಸೈನಿಕರೊಡನೆ ಯುದ್ಧಮಾಡುತ್ತಿದ್ದ ಸ್ಥಳಕ್ಕೆ ಕುದುರೆಗಳನ್ನು ತ್ವರೆಯಿಂದ ಓಡಿಸಿದನು.

ಧೃಷ್ಟದ್ಯುಮ್ನನ ರಥವು ಓಡಿಹೋಗುತ್ತಿರುವುದನ್ನು ನೋಡಿ ಕೃಪರು ಓಡಿಹೋಗುತ್ತಿರುವ ಧೃಷ್ಟದ್ಯುಮ್ನನ ರಥದ ಮೇಲೆ ನೂರಾರು ಬಾಣಗಳನ್ನು ಸುರಿಸುತ್ತಾ ಅವನನ್ನು ಬೆನ್ನಟ್ಟಿಹೋದರು. ಅರಿಂದಮರಾದ ಕೃಪರು ಪದೇ-ಪದೇ ಶಂಖವನ್ನೂ ಊದುತ್ತಲಿದ್ದರು. ಮಹೇಂದ್ರನು ನಮುಚಿಯನ್ನು ತ್ರಾಸಗೊಳಿಸುತ್ತಿದ್ದಂತೆ–ಕೃಪರು ಧೃಷ್ಟದ್ಯುಮ್ನನನ್ನು ತ್ರಾಸಗೊಳಿಸುತ್ತಿದ್ದರು.

ರಣಾಂಗಣದ ಮತ್ತೊಂದು ವಿಭಾಗದಲ್ಲಿ ಹಾರ್ದಿಕ್ಯನು ಭೀಷ್ಮನಿಗೆ ಮೃತ್ಯುಸ್ವರೂಪನಾದ, ದುರಾಸದನಾದ ಶಿಖಂಡಿಯನ್ನು ಬಾರಿ-ಬಾರಿಗೂ ನಗುತ್ತಿರುವನೋ ಎಂಬಂತೆ ತೋರ್ಪಡಿಸಿಕೊಳ್ಳುತ್ತಾ ತಡೆದು ನಿಲ್ಲಿಸಿದನು. ಹೃದಿಕವಂಶೀಯರಾದ ಯಾದವರಲ್ಲಿ ಮಹಾರಥನಾದ ಕೃತವರ್ಮನನ್ನು ಸಂಧಿಸಿದ ಶಿಖಂಡಿಯು ಮರುಕ್ಷಣದಲ್ಲಿಯೇ ನಿಶಿತವಾದ ಐದು ಭಲ್ಲಗಳಿಂದ ಕೃತವರ್ಮನ ಜತ್ರುಪ್ರದೇಶದಲ್ಲಿ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಸಂಕ್ರುದ್ಧನಾದ, ಮಹಾರಥನಾದ ಕೃತವರ್ಮನು ಅರುವತ್ತು ಬಾಣಗಳಿಂದ ಶಿಖಂಡಿಯನ್ನು ಗಾಯಗೊಳಿಸಿ ನಸುನಗುತ್ತಾ ಮತ್ತೊಂದು

ಬಾಣದಿಂದ ಅವನ ಧನುಸ್ಸನ್ನೂ ಕತ್ತರಿಸಿದನು. ದ್ರುಪದನ ಮಗನಾದ, ಬಲಿಷ್ಠನಾದ ಶಿಖಂಡಿಯು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಹಾರ್ದಿಕ್ಯನನ್ನು ಕುರಿತು ನಿಲ್ಲುನಿಲ್ಲೆಂದು ಕೂಗಿದನು. ಶಿಖಂಡಿಯು ಚಿನ್ನದ ಮೂಲಭಾಗವಿದ್ದ, ನಿಶಿತವಾಗಿ ಮಾಡಲ್ಪಟ್ಟಿದ್ದ ತೊಂಬತ್ತು ಬಾಣಗಳನ್ನು ಹಾರ್ದಿಕ್ಯನ ಮೇಲೆ ಪ್ರಯೋಗಿಸಿದನು. ಆದರೆ ಅವೆಲ್ಲವೂ ಹಾರ್ದಿಕ್ಯನ ಕವಚಕ್ಕೆ ತಗುಲಿ ಕೆಳಗೆ ಬಿದ್ದುವು. ಬಾಣಗಳು ವ್ಯರ್ಥವಾಗಿ ಕೆಳಕ್ಕೆ ಬಿದ್ದುದನ್ನು ಕಂಡು ಶಿಖಂಡಿಯು ಅತಿತೀಕ್ಷ್ಣವಾದ ಕ್ಷುರಪ್ರವೆಂಬ ಬಾಣದಿಂದ ಬಹಳ ಬೇಗ ಕೃತವರ್ಮನ ಧನುಸ್ಸನ್ನು ಕತ್ತರಿಸಿದನು. ಕೊಂಬುಗಳಿಂದ ವಿಹೀನವಾದ ಎತ್ತಿನಂತೆ- ಧನುಸ್ಸಿನಿಂದ ವಿಹೀನನಾಗಿದ್ದ ಕೃತವರ್ಮನನ್ನು ಕ್ರುದ್ಧನಾಗಿದ್ದ ಶಿಖಂಡಿಯು ಎಂಬತ್ತು ಬಾಣಗಳಿಂದ ತೋಳುಗಳಲ್ಲಿಯೂ ಮತ್ತು ವಕ್ಷಃಸ್ಥಳದಲ್ಲಿಯೂ ಪ್ರಹರಿಸಿದನು. ಶಿಖಂಡಿಯು ಬಿಟ್ಟ ಬಾಣಗಳಿಂದ ಕ್ಷತ-ವಿಕ್ಷತನಾಗಿದ್ದ, ಕ್ರುದ್ಧನಾಗಿದ್ದ ಕೃತವರ್ಮನು-ಬಿಂದಿಗೆಯ ಬಾಯಿಂದ ನೀರು ಸುರಿಯುವಂತೆ ತನ್ನ ಅಂಗಾಂಗಗಳಿಂದಲೂ ರಕ್ತವನ್ನು ಸುರಿಸಿದನು. (ಗಾಯಗೊಂಡ ಕೃತವರ್ಮನ ಶರೀರದಿಂದ ಬಿಂದಿಗೆಯ ಬಾಯಿಂದ ನೀರು ಸುರಿಯುವಂತೆ ಧಾರಾಕಾರವಾಗಿ ರಕ್ತವು ಪ್ರವಹಿಸುತ್ತಿದ್ದಿತು ) ರಕ್ತದಿಂದ ಸಂಪೂರ್ಣವಾಗಿ ತೋಯ್ದುಹೋಗಿದ್ದ ಕೃತವರ್ಮನು–ಮಳೆಯಿಂದ ತೋಯ್ದುಹೋಗಿರುವ ಗೈರಿಕಾದಿ ಧಾತುಗಳಿಂದ ಕೂಡಿರುವ ಪರ್ವತದಂತೆಯೇ–ಪ್ರಕಾಶಿಸುತ್ತಿದ್ದನು. ಮರುಕ್ಷಣದಲ್ಲಿಯೇ ಕೃತವರ್ಮನು ಬಾಣದಿಂದಲೂ ಶಿಂಜಿನಿಯಿಂದಲೂ ಯುಕ್ತವಾದ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಶಿಖಂಡಿಯನ್ನು ಬಾಣಗಳ ಸಮೂಹದಿಂದ ಅವನ ಹೆಗಲಿನ ಪ್ರದೇಶದಲ್ಲಿ ಪ್ರಹರಿಸಿದನು. ಹೆಗಲಿನ ಪ್ರದೇಶದಲ್ಲಿ ನಾಟಿಕೊಂಡಿದ್ದ ಬಾಣಗಳಿಂದ ಶಿಖಂಡಿಯು ರೆಂಬೆ ಮತ್ತು ಕವಲೊಡೆದ ರೆಂಬೆಗಳಿಂದ ಕೂಡಿರುವ ವಿಶಾಲವಾದ ಮತ್ತು ದೊಡ್ಡದಾದ ವೃಕ್ಷದಂತೆಯೇ ಪ್ರಕಾಶಿಸಿದನು. ಈ ರೀತಿಯಾಗಿ ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನು ಬಾಣಗಳಿಂದ ಪ್ರಹರಿಸುತ್ತಾ ರಕ್ತದಲ್ಲಿ ಸಂಪೂರ್ಣವಾಗಿ ನೆನೆದು ಹೋಗಿದ್ದ ಶಿಖಂಡೀ-ಕೃತವರ್ಮರು–ಕೋಡುಗಳಿಂದಲೇ ಕಾಳಗ ವಾಡುತ್ತಾ ಗಾಯಗೊಂಡು ರಕ್ತಸಿಕ್ತವಾಗಿರುವ ಎರಡು ಹೋರಿಗಳಂತೆಯೇ–ಕಾಣುತ್ತಿದ್ದರು. ಮಹಾ

ರಥಿಕರಿಬ್ಬರೂ ಒಬ್ಬರು ಮತ್ತೊಬ್ಬರನ್ನು ಸಂಹರಿಸಬೇಕೆಂದು ಬಹಳವಾಗಿ ಪ್ರಯತ್ನಿಸುತ್ತಾ ರಥಗಳ ಮೂಲಕವಾಗಿ ಸಾವಿರಾರು ಬಾರಿ ಮಂಡಲಾಕಾರಗತಿಯಲ್ಲಿ ಸಂಚರಿಸುತ್ತಿದ್ದರು. ಅನಂತರ ಕೃತವರ್ಮನು ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಎಪ್ಪತ್ತು ಬಾಣಗಳಿಂದ ಶಿಖಂಡಿಯನ್ನು ಪ್ರಹರಿಸಿದನು. ಪ್ರಹರಿಸುವವರಲ್ಲಿ ಶ್ರೇಷ್ಠನಾದ ಭೋಜವಂಶೀಯನಾದ ಕೃತವರ್ಮನು ಅತ್ಯಂತತ್ವರೆಯಿಂದ ಜೀವಾಂತಕರವಾದ, ಸುಘೋರವಾದ ಬಾಣವೊಂದನ್ನು ಶಿಖಂಡಿಯ ಮೇಲೆ ಪುನಃ ಪ್ರಯೋಗಿಸಿದನು. ಆ ಘೋರ ಬಾಣದಿಂದ ಬಹಳವಾಗಿ ಗಾಯಗೊಂಡ ಶಿಖಂಡಿಯು ಒಡನೆಯೇ ಮೂರ್ಛೆಹೋದನು. ಬುದ್ಧಿಭ್ರಮಣೆಯನ್ನು ಹೊಂದಿದ್ದ ಅವನು ಬಿದ್ದು ಹೋಗುವುದರಲ್ಲಿದ್ದಾಗ ಧ್ವಜದಂಡದ ಆಶ್ರಯವನ್ನು ಪಡೆದು ಹಾಗೆಯೇ ಅದನ್ನು ಒರಗಿಕೊಂಡು ಕುಳಿತನು. ಹಾರ್ದಿಕ್ಯನು ಬಿಟ್ಟ ಘೋರವಾದ ಬಾಣದಿಂದ ಗಾಯಗೊಂಡು ಬಹಳವಾಗಿ ಸಂಕಟಪಡುತ್ತಾ ನಿಟ್ಟುಸಿರು ಬಿಡುತ್ತಿದ್ದ, ರಥಿಗಳಲ್ಲಿ ಶ್ರೇಷ್ಠನಾದ ಶಿಖಂಡಿಯನ್ನು ಅವನ ಸಾರಥಿಯು ಬಹಳ ಬೇಗ ರಣರಂಗದಿಂದ ಹೊರಕ್ಕೊಯ್ದನು. ಮಹಾರಾಜ! ದ್ರುಪದನ ಮಗನಾದ, ಶೂರನಾದ ಶಿಖಂಡಿಯು ಪರಾಜಿತನಾಗಲಾಗಿ, ಎಲ್ಲ ಕಡೆಗಳಿಂದಲೂ ಮರ್ದಿಸಲ್ಪಡುತ್ತಿದ್ದ ಪಾಂಡವಸೇನೆಯು ದಿಕ್ಕಾಪಾಲಾಗಿ ಓಡಿಹೋಯಿತು."

೨೮ನೆಯ ಅಧ್ಯಾಯವು ಮುಗಿಯಿತು.

೨೭ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಅರ್ಜುನನು ಶ್ರುತಂಜಯ, ಸೌಶ್ರುತಿ, ಚಂದ್ರದೇವ, ಸತ್ಯಸೇನರೇ ಮೊದಲಾದ ಮಹಾರಥರನ್ನು ಸಂಹರಿಸಿದುದು: ಸಂಶಪ್ತಕಸೇನೆಯ ಸಂಹಾರ

ಸಂಜಯನು ಅರ್ಜುನನ ಯುದ್ಧವನ್ನು ವರ್ಣಿಸಲು ಉಪಕ್ರಮಿಸುತ್ತಾನೆ:

"ಮಹಾರಾಜ! ಬಿರುಗಾಳಿಯು ಹತ್ತಿಯ ರಾಶಿಯನ್ನು ಸುತ್ತಲೂ ಚದುರಿಸಿ ಹಾಳುಮಾಡುವಂತೆ–ಶ್ವೇತಾಶ್ವನಾದ ಅರ್ಜುನನು ನಿನ್ನ ಸೈನ್ಯ

ವನ್ನು ಧ್ವಂಸಮಾಡುತ್ತಿದ್ದನು. ಆ ಸಮಯದಲ್ಲಿ ತ್ರಿಗರ್ತರೂ, ಶಿಬಿಗಳೂ, ಶಾಲ್ವರೂ, ಸಂಶಪ್ತಕರೂ, ನಾರಾಯಣಸೈನಿಕರೂ ಕೌರವರೊಡನೆ ಅರ್ಜುನನನ್ನು ಎದುರಿಸಿದರು. ತ್ರಿಗರ್ತರಾಜನು ಸತ್ಯಸೇನ, ಚಂದ್ರದೇವ, ಮಿತ್ರದೇವ, ಶ್ರುತಂಜಯ, ಸೌಶ್ರುತಿ, ಚಿತ್ರಸೇನ ಮತ್ತು ಮಿತ್ರವರ್ಮಾ–ಈ ಏಳು ಮಂದಿ ಸಹೋದರರಿಂದಲೂ ಮತ್ತು ಶಸ್ತ್ರವಿಶಾರದರಾದ, ಧನುರ್ಧಾರಿಗಳಾದ ಮಕ್ಕಳಿಂದಲೂ ಪರಿವೃತನಾಗಿ ಅರ್ಜುನನನ್ನು ಎದುರಿಸಿದನು. ಜಲಪ್ರವಾಹಗಳು ವೇಗವಾಗಿ ಹೋಗಿ ಸಮುದ್ರವನ್ನು ಸೇರುವಂತೆ-ಇವರೆಲ್ಲರೂ ಬಾಣಗಳ ಸಮೂಹಗಳನ್ನೇ ಸೃಷ್ಟಿಸುತ್ತಾ ಅರ್ಜುನನ ಮೇಲೆ ಸುರಿಸುತ್ತಾ ಬಹಳ ಬೇಗ ಅರ್ಜುನನೊಡನೆ ಯುದ್ಧದಲ್ಲಿ ತೊಡಗಿದರು. ಆ ಯೋಧರು ನೂರಾರು ಸಾವಿರಾರು ಸಂಖ್ಯೆಯಲ್ಲಿ ಅರ್ಜುನನೊಡನೆ ಯುದ್ಧದಲ್ಲಿ ತೊಡಗಿ–ಗರುಡನನ್ನು ನೋಡಿದೊಡನೆಯೇ ಹಾವುಗಳು ಬಿಲದಲ್ಲಿ ಅಡಗುವಂತೆ–ಮಹಾಕಾಲನಲ್ಲಿ ಅಡಗಿಹೋದರು. ಅಗ್ನಿಯಿಂದ ದಹಿಸಲ್ಪಡುತ್ತಿದ್ದರೂ ಪತಂಗದ ಹುಳುಗಳು ಅಗ್ನಿಯನ್ನೇ ಹೊಗುವಂತೆ–ಅವರಾರೂ ಅರ್ಜುನನನ್ನು ಬಿಟ್ಟು ಓಡಿಹೋಗಲಿಲ್ಲ.

ಸತ್ಯಸೇನನು ಮೂರು ಬಾಣಗಳಿಂದ ಅರ್ಜುನನನ್ನು ಪ್ರಹರಿಸಿದನು. ಮಿತ್ರದೇವನು ಅರುವತ್ತುಮೂರು ಬಾಣಗಳಿಂದಲೂ, ಚಂದ್ರದೇವನು ಏಳುಬಾಣಗಳಿಂದಲೂ, ಮಿತ್ರದೇವನು ಎಪ್ಪತ್ತು ಮೂರು ಬಾಣಗಳಿಂದಲೂ, ಸೌಶ್ರುತಿಯು ಏಳು ಬಾಣಗಳಿಂದಲೂ, ಶ್ರುತಂಜಯನು ಇಪ್ಪತ್ತು ಬಾಣಗಳಿಂದಲೂ, ಸುಶರ್ಮನು ಒಂಬತ್ತು ಬಾಣಗಳಿಂದಲೂ ಅರ್ಜುನನನ್ನು ಪ್ರಹರಿಸಿದರು. ಬಹುಸಂಖ್ಯಾತಯೋಧರಿಂದ ಪ್ರಹೃತನಾದ ಅರ್ಜುನನು ಅವರೆಲ್ಲರನ್ನೂ ಪ್ರತಿಯಾಗಿ ಪ್ರಹರಿಸಿದನು. ಸೌಶ್ರುತಿಯನ್ನು ಏಳುಬಾಣಗಳಿಂದ ಪ್ರಹರಿಸಿ, ಸತ್ಯಸೇನನನ್ನು ಮೂರು ಬಾಣಗಳಿಂದ ಪ್ರಹರಿಸಿದನು. ಶ್ರುತಂಜಯನನ್ನು ಇಪ್ಪತ್ತು ಬಾಣಗಳಿಂದಲೂ, ಚಂದ್ರದೇವನನ್ನು ಎಂಟು ಬಾಣಗಳಿಂದಲೂ, ಮಿತ್ರದೇವನನ್ನು ನೂರು ಬಾಣಗಳಿಂದಲೂ, ಶ್ರುತಸೇನನನ್ನು ಮೂರು ಬಾಣಗಳಿಂದಲೂ, ಮಿತ್ರವರ್ಮನನ್ನು ಒಂಬತ್ತು ಬಾಣಗಳಿಂದಲೂ, ಸುಶರ್ಮನನ್ನು ಎಂಟು

ಬಾಣಗಳಿಂದಲೂ ಪ್ರಹರಿಸಿದನು. ಪುನಃ ಅರ್ಜುನನು ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಬಾಣಗಳಿಂದ ಶ್ರುತಂಜಯರಾಜನನ್ನು ಸಂಹರಿಸಿ, ಸೌಶ್ರುತಿಯ ಶಿರಸ್ತ್ರಾಣಯುಕ್ತವಾಗಿದ್ದ ಶಿರಸ್ಸನ್ನು ಶರೀರದಿಂದ ಕೆಳಗುರುಳಿಸಿದನು.



ಅರ್ಜುನನು ತ್ವರಿತವಾಗಿ ಚಂದ್ರದೇವರಾಜನನ್ನೂ ಬಾಣಗಳಿಂದ ಯಮಾಲಯಕ್ಕೆ ಕಳುಹಿಸಿಕೊಟ್ಟನು. ಅರ್ಜುನನು ತನ್ನನ್ನು ಸಂಹರಿಸುವ ಸಲುವಾಗಿ ಬಹಳವಾಗಿ ಪ್ರಯತ್ನಿಸುತ್ತಿದ್ದ ಇತರ ಮಹಾರಥರಲ್ಲಿ ಒಬ್ಬೊಬ್ಬನನ್ನೂ ಐದೈದು ಬಾಣಗಳಿಂದ ಪ್ರಹರಿಸಿ ಮುಂದೆಬಾರದಂತೆ

ತಡೆದು ನಿಲ್ಲಿಸಿದನು. ಸಂಕ್ರುದ್ಧನಾದ ಸತ್ಯಸೇನನು ದೊಡ್ಡದಾದೊಂದು ತೋಮರವನ್ನು ಶ್ರೀಕೃಷ್ಣನನ್ನು ಅನುಲಕ್ಷಿಸಿ ರಭಸದಿಂದ ಎಸೆದು ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು. ಲೋಹಮಯವಾಗಿದ್ದ ಮತ್ತು ಸುವರ್ಣ ಮಯವಾದ ದಂಡದಿಂದ ಕೂಡಿದ್ದ ಆ ತೋಮರವು ಮಹಾತ್ಮನಾದ ಶ್ರೀಕೃಷ್ಣನ ಎಡಭುಜವನ್ನು ಗಾಯಗೊಳಿಸಿ ಭೂಮಿಯ ಮೇಲೆ ಬಿದ್ದಿತು. ಚಾವಟಿ ಮತ್ತು ಕಡಿವಾಣಗಳು ಗಾಯಗೊಂಡ ಶ್ರೀಕೃಷ್ಣನ ಕೈಯಿಂದ ಜಾರಿ ಕೆಳಕ್ಕೆ ಬಿದ್ದುವು. ತೋಮರಪ್ರಹಾರದಿಂದ ಭಿನ್ನಾಂಗನಾಗಿದ್ದ ಶ್ರೀಕೃಷ್ಣನನ್ನು ನೋಡಿ ಕುಂತಿಯ ಮಗನಾದ ಧನಂಜಯನು ಅತ್ಯಂತಕೋಪಾವಿಷ್ಟನಾಗಿ ಶ್ರೀಕೃಷ್ಣನೊಡನೆ ಹೇಳಿದನು:

"ಮಹಾಬಾಹೋ! ಕೃಷ್ಣ! ನಿನ್ನನ್ನು ತೋಮರದಿಂದ ಪ್ರಹರಿಸಿದ ಸತ್ಯಸೇನನ ಸಮೀಪಕ್ಕೆ ಕುದುರೆಗಳನ್ನು ನಡೆಯಿಸು. ಮೊದಲು ಅವನನ್ನು ತೀಕ್ಷ್ಣವಾದ ಬಾಣಗಳಿಂದ ಯಮನ ಮನೆಗೆ ಕಳುಹಿಸಿಕೊಡುತ್ತೇನೆ."

ಮಹಾರಾಜ! ಅರ್ಜುನನು ಹೇಳಿದ ಮಾತುಗಳನ್ನು ಕೇಳಿ ಶ್ರೀಕೃಷ್ಣನು ಬೇರೊಂದು ಚಾವಟಿಯನ್ನು ತೆಗೆದುಕೊಂಡು ಕುದುರೆಗಳ ಕಡಿವಾಣಗಳನ್ನು ಹಿಂದಿನಂತೆಯೇ ಹಿಡಿದುಕೊಂಡು ಸತ್ಯಸೇನನ ರಥದ ಕಡೆಗೆ ಕುದುರೆಗಳನ್ನು ನಡೆಸಿದನು. ಕುಂತಿಯ ಮಗನಾದ ಮಹಾರಥನಾದ ಧನಂಜಯನು ತೋಮರದಿಂದ ಗಾಯಗೊಂಡಿದ್ದ ವಿಷ್ವಕ್ಸೇನನನ್ನು ಪುನಃ ಪುನಃ ನೋಡುತ್ತಾ, ತೀಕ್ಷ್ಣವಾದ ಬಾಣಗಳಿಂದ ಸತ್ಯಸೇನನನ್ನು ಮುಂದಕ್ಕೆ ಬರದಂತೆ ತಡೆಯುತ್ತಾ, ಆ ಸೈನ್ಯದ ಮಧ್ಯಭಾಗದಲ್ಲಿ ಸುನಿಶಿತವಾದ ಭಲ್ಲಗಳಿಂದ, ಕುಂಡಲಗಳಿಂದ ಸಮಲಂಕೃತವಾಗಿದ್ದ ಸತ್ಯಸೇನರಾಜನ ಮಹಾಶಿರಸ್ಸನ್ನು ಶರೀರದಿಂದ ಕತ್ತರಿಸಿದನು. ಈ ರೀತಿ ಸತ್ಯಸೇನನನ್ನು ಸಂಹರಿಸಿ ನಿಶಿತವಾದ ಬಾಣಗಳಿಂದ ಮಿತ್ರವರ್ಮನನ್ನೂ, ತೀಕ್ಷ್ಣವಾದ ವತ್ಸದಂತವೆಂಬ ಬಾಣದಿಂದ ಅವನ ಸಾರಥಿಯನ್ನೂ ಸಂಹರಿಸಿದನು. ಬಲಿಷ್ಠನಾದ ಅರ್ಜುನನು ಕ್ರುದ್ಧನಾಗಿ ನೂರಾರು ಬಾಣಗಳಿಂದ ಸಂಶಪ್ತಕ ಗಣಗಳನ್ನು ನೂರಾರು ಸಾವಿರಾರು ಸಂಖ್ಯೆಯಲ್ಲಿ ಸಂಹರಿಸಿದನು. ಬಳಿಕ ಮಹಾರಥನಾದ ಅರ್ಜುನನು ಬೆಳ್ಳಿಯ ಮೂಲಭಾಗವಿದ್ದ ಕ್ಷುರಪ್ರದಿಂದ ಮಹಾತ್ಮನಾದ ಮಿತ್ರದೇವನ ಶಿರಸ್ಸನ್ನು ಕತ್ತರಿಸಿದನು. ಅತ್ಯಂತಕ್ರುದ್ಧ ನಾಗಿದ್ದ ಅರ್ಜುನನು ಸುಶರ್ಮನ ಜತ್ರುಪ್ರದೇಶದಲ್ಲಿ ಪ್ರಹರಿಸಿದನು. ಅದರಿಂದ ಖತಿಗೊಂಡ, ಎಲ್ಲ ಸಂಶಪ್ತಕರೂ ಅರ್ಜುನನನ್ನು ಸುತ್ತುವರಿದು

ನಿಂತು, ಹತ್ತು ದಿಕ್ಕುಗಳಲ್ಲಿಯೂ ಪ್ರತಿಧ್ವನಿಯಾಗುವಂತೆ ಗಟ್ಟಿಯಾಗಿ ಸಿಂಹನಾದಗಳನ್ನು ಮಾಡುತ್ತಾ ಶಸ್ತ್ರಗಳ ಸಮೂಹಗಳಿಂದ ಅರ್ಜುನನನ್ನು ಬಹಳವಾಗಿ ಪೀಡಿಸಿದರು. ಸಂಶಪ್ತಕರ ಬಾಣಗಳ ಪ್ರಹಾರದಿಂದ ಬಹಳವಾಗಿ ಗಾಯಗೊಂಡ ಇಂದ್ರಸದೃಶಪರಾ ಕ್ರಮನಾದ, ಮಹಾರಥನಾದ, ಅಮೇಯಾತ್ಮನಾದ ಅರ್ಜುನನು ಐಂದ್ರಾಸ್ತ್ರವನ್ನು ಪ್ರಕಟಿಸಿದನು. ಆ ಮಹಾಸ್ತ್ರದಿಂದ ಒಡನೆಯೇ ಸಾವಿರಾರು ಬಾಣಗಳು ಪ್ರಾದುರ್ಭವಿಸಿದುವು. ಆ ಬಾಣಗಳಿಂದ ಕತ್ತರಿಸಲ್ಪಡುತ್ತಿದ್ದ ಧ್ವಜ-ಧನುಸ್ಸು-ಪತಾಕೆಗಳಿಂದ ಯುಕ್ತವಾದ ರಥಗಳ, ಬತ್ತಳಿಕೆಗಳ, ರಥದ ನೊಗಗಳ, ತೋಳುಮರಗಳ, ರಥದ ಚರ್ಮಮಯವಾದ ಆವರಣಗಳ ಶಬ್ದವು ಸರ್ವತ್ರಕೇಳಿಸುತ್ತಿದ್ದಿತು. ಬೀಳುತ್ತಿದ್ದ ಕಲ್ಲುಗಳ, ಪ್ರಾಸ-ಋಷ್ಟಿಗಳ, ಗದಾ ಪರಿಘಗಳ, ಶಕ್ತಿ-ತೋಮರ-ಪಟ್ಟಿಶಗಳ, ಚಕ್ರಸಹಿತವಾದ ಶತಘ್ನಿಗಳ ಶಬ್ದವೂ ಕೇಳಿಸುತ್ತಿದ್ದಿತು. ಮಹಾಸ್ತ್ರದಿಂದ ಸಂಭೂತವಾದ ಬಾಣಗಳಿಂದ ಕತ್ತರಿಸಲ್ಪಟ್ಟು ಕೆಳಗೆ ಬೀಳುತ್ತಿದ್ದ ಯೋಧರ ತೋಳುಗಳ, ತೊಡೆಗಳ, ಕಂಠಸೂತ್ರಾಂಗದಗಳ, ಕೇಯೂರ-ಹಾರಗಳ, ನಿಷ್ಕಗಳ, ಕವಚಗಳ, ಛತ್ರ-ವ್ಯಜನಗಳ, ಕಿರೀಟಗಳಿಂದ ಕೂಡಿದ ಶಿರಸ್ಸುಗಳ ಮಹಾಶಬ್ದಗಳೂ ಸರ್ವತ್ರ ಕೇಳಿಬರುತ್ತಿದ್ದುವು.

ಕುಂಡಲಗಳಿಂದಲೂ ಸುಂದರವಾದ ಕಣ್ಣುಗಳಿಂದಲೂ ಕೂಡಿದ್ದ ಪೂರ್ಣಚಂದ್ರಸದೃಶವಾಗಿದ್ದ ಶಿರಸ್ಸುಗಳು ಆ ರಣರಂಗದಲ್ಲಿ–ನಭೋ ಮಂಡಲದಲ್ಲಿರುವ ನಕ್ಷತ್ರಗಳ ಸಮೂಹಗಳಂತೆಯೇ ಕಾಣುತ್ತಿದ್ದುವು. ಅರ್ಜುನನ ಮಹಾಸ್ತ್ರದಿಂದ ಹತರಾಗಿದ್ದ, ಸುಂದರವಾದ ಹಾರಗಳಿಂದಲೂ, ಉತ್ತಮವಾದ ವಸ್ತ್ರಗಳಿಂದಲೂ, ಚಂದನದಿಂದಲೂ ಕೂಡಿದ್ದ ಯೋಧರ ಶರೀರಗಳು ರಣಾಂಗಣದ ಸುತ್ತಲೂ ಕಾಣುತ್ತಿದ್ದುವು. ಅರ್ಜುನನ ಬಾಣ ಗಳಿಂದ ಹತರಾಗಿದ್ದ ರಾಜಪುತ್ರರಿಂದಲೂ ಮತ್ತು ಮಹಾಬಲರಾದ ಕ್ಷತ್ರಿಯ ಯೋಧರಿಂದಲೂ ವ್ಯಾಪ್ತವಾಗಿದ್ದ ಆ ರಣಾಂಗಣವು (ಅಶುಭಸೂಚಕವಾದ) ಗಂಧರ್ವನಗರಕ್ಕೆ ಸಮಾನವಾಗಿ ಬಹಳ ಭಯಂಕರವಾಗಿ ಕಾಣುತ್ತಿದ್ದಿತು. ವಿಶೀರ್ಣವಾದ ಪರ್ವತಗಳಂತೆ–ವಿಧ್ವಸ್ತವಾಗಿ ಸತ್ತುಬಿದ್ದಿದ್ದ ಆನೆಗಳಿಂದಲೂ, ಕುದುರೆಗಳಿಂದಲೂ ವ್ಯಾಪ್ತವಾಗಿದ್ದ ಆ ರಣಾಂಗಣವು ಚಲನ-ವಲನಗಳಿಗೆ

ಅಸಾಧ್ಯವಾಗಿ ಕಾಣುತ್ತಿದ್ದಿತು. ಭಲ್ಲಗಳಿಂದ ಶತ್ರುಗಳನ್ನೂ ಮತ್ತು ಶತ್ರುಪಕ್ಷದ ಆನೆ-ಕುದುರೆಗಳನ್ನೂ ಸಂಹಾರಮಾಡುತ್ತಿದ್ದ ಮಹಾತ್ಮನಾದ ಅರ್ಜುನನ ರಥಚಕ್ರಗಳು ಮುಂದೆ ಉರುಳಲೂ ಅಲ್ಲಿ ಹಾದಿಯಿರಲಿಲ್ಲ. ರಕ್ತದ ಕೆಸರಿನಿಂದ ಕೂಡಿದ್ದ ಆ ರಣಭೂಮಿಯಲ್ಲಿ ಸಂಚರಿಸುತ್ತಿದ್ದ ಅರ್ಜುನನ ರಥದ ಚಕ್ರಗಳು ಕೆಸರಿನಲ್ಲಿ ಹೂತುಕೊಂಡು ಬಹಳ ಆತಂಕಗೊಂಡುವುಗಳಂತೆ ನಿಧಾನವಾಗಿ ಮುಂದೆ ಹೋಗುತ್ತಿದ್ದುವು. ಮನೋವೇಗ-ವಾಯುವೇಗ ಯಕ್ತವಾಗಿದ್ದ ಕುದುರೆಗಳೂ ಕೆಸರಿನಲ್ಲಿ ಹೂತುಹೋಗಿದ್ದ ಚಕ್ರಗಳನ್ನು ಅತ್ಯಂತಶ್ರಮದಿಂದ ಮುಕ್ಕರಿದು ಎಳೆಯುತ್ತಿದ್ದುವು. ಧನುಷ್ಮಂತನಾದ ಪಾಂಡುಪುತ್ರನಿಂದ ವಧಿಸಲ್ಪಡುತ್ತಿದ್ದ ಆ ಸೈನ್ಯಸಮೂಹದಲ್ಲಿ ಹತರಾಗದೇ ಉಳಿದಿದ್ದವರಲ್ಲಿ ಪ್ರಾಯಶಃ ಎಲ್ಲರೂ ಯುದ್ಧದಿಂದ ವಿಮುಖರಾಗಿ ಪಲಾಯನಮಾಡಿದರು. ಯಾವನೊಬ್ಬನೂ ಅರ್ಜುನನಿಗೆ ಎದುರಾಗಿ ನಿಲ್ಲಲಿಲ್ಲ. ಅಸಂಖ್ಯಾತರಾದ ಸಂಶಪ್ತಕರೆಲ್ಲರನ್ನೂ ಜಯಿಸಿದ ಅರ್ಜುನನು ಧೂಮರಹಿತನಾಗಿ ಪ್ರಜ್ವಲಿಸುವ ಯಜ್ಞೇಶ್ವರನಂತೆಯೇ ಪ್ರಕಾಶಿಸಿದನು."

೨೭ನೆಯ ಅಧ್ಯಾಯವು ಮುಗಿಯಿತು.

೨೮ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಯುಧಿಷ್ಠಿರ-ದುರ್ಯೋಧನರ ಯುದ್ಧ: ದುರ್ಯೋಧನನ ಪರಾಜಯ: ಎರಡೂ ಪಕ್ಷಗಳ ಸೈನಿಕರ ನಡುವೆ ಯುದ್ಧ ಮರ್ಯಾದೆಯನ್ನೂ ಮೀರಿದ ಭಯಂಕರಸಂಗ್ರಾಮ

ಸಂಜಯನು ಯುಧಿಷ್ಠಿರ-ದುರ್ಯೋಧನರ ಯುದ್ಧದ ವರ್ಣನೆಯನ್ನು ಮಾಡುತ್ತಾನೆ:

"ಮಹಾರಾಜ! ಅನೇಕ ಬಾಣಗಳನ್ನು ಪುಂಖಾನುಪುಂಖವಾಗಿ ಶತ್ರುಸೈನಿಕರ ಮೇಲೆ ಬಿಡುತ್ತಿದ್ದ ಯುಧಿಷ್ಠಿರನನ್ನು ನಿರ್ಭಯನಾದ ವೀರನಂತೆ ಸ್ವಯಂ ದುರ್ಯೋಧನನೇ ಎದುರಿಸಿದನು. ಧರ್ಮರಾಜನು–ತನ್ನನ್ನು ಆಕ್ರಮಿಸಲು ಬರುತ್ತಿದ್ದ, ಮಹಾರಥನಾದ ನಿನ್ನ ಮಗ ದುರ್ಯೋಧನ ನನ್ನು ಬಹಳ ಬೇಗ ಬಾಣಗಳಿಂದ ಪ್ರಹರಿಸಿ ನಿಲ್ಲು-ನಿಲ್ಲೆಂದು ಕೂಗಿದನು. ಅದರಿಂದ ಬಹಳಕ್ರುದ್ಧನಾದ ದುರ್ಯೋಧನನು ನಿಶಿತವಾದ ಒಂಬತ್ತು

ಬಾಣಗಳಿಂದ ಧರ್ಮಜನನ್ನು ಪ್ರಹರಿಸಿ ಅವನ ಸಾರಥಿಯನ್ನೂ ಭಲ್ಲದಿಂದ ಬಹಳ ಬೇಗ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಯುಧಿಷ್ಠಿರನು ಚಿನ್ನದ ಮೂಲಭಾಗಗಳನ್ನು ಹೊಂದಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಹದಿಮೂರು ಬಾಣಗಳನ್ನು ದುರ್ಯೋಧನನ ಮೇಲೆ ಪ್ರಯೋಗಿಸಿದನು. ಮಹಾರಥನಾದ ಧರ್ಮರಾಜನು ನಾಲ್ಕುಬಾಣಗಳಿಂದ ದುರ್ಯೋಧನನ ರಥದ ನಾಲ್ಕು ಕುದುರೆಗಳನ್ನೂ ಸಂಹರಿಸಿ, ಐದನೆಯ ಬಾಣದಿಂದ ಅವನ ಸಾರಥಿಯ ಶಿರಸ್ಸನ್ನೂ ಶರೀರದಿಂದ ಪ್ರತ್ಯೇಕಿಸಿದನು. ಆರನೆಯ ಬಾಣದಿಂದ ದುರ್ಯೋಧನರಾಜನ ಧ್ವಜವನ್ನೂ, ಏಳನೆಯ ಬಾಣದಿಂದ ರಾಜನ ಧನುಸ್ಸನ್ನೂ, ಎಂಟನೆಯ ಬಾಣದಿಂದ ಖಡ್ಗವನ್ನೂ ಕತ್ತರಿಸಿ ನೆಲದ ಮೇಲೆ ಬೀಳಿಸಿ, ಉಳಿದೈದು ಬಾಣಗಳಿಂದ ದುರ್ಯೋಧನನನ್ನೂ ಬಹಳವಾಗಿ ಪೀಡಿಸಿದನು. ದುರ್ಯೋಧನನು ಕುದುರೆಗಳಿಂದ ವಿಹೀನವಾಗಿದ್ದ ಆ ರಥದಿಂದ ಒಡನೆಯೇ ಕೆಳಕ್ಕೆ ಧುಮುಕಿ ಅತ್ಯಂತವ್ಯಸನಾವಿಷ್ಟನಾಗಿ ಅಲ್ಲಿಯೇ ನಿಂತುಕೊಂಡನು.

ದುರ್ಯೋಧನನು ಕಷ್ಟದಲ್ಲಿ ಸಿಕ್ಕಿರುವುದನ್ನು ನೋಡಿ ರಾಜನನ್ನು ರಕ್ಷಿಸುವ ಆಶಯದಿಂದ ಕರ್ಣಾಶ್ವತ್ಥಾಮ-ಕೃಪಾದಿಗಳು ತ್ವರಿತವಾಗಿ ಅಲ್ಲಿಗೆ ಬಂದರು. ಇತ್ತ ಕಡೆಯಲ್ಲಿ ಪಾಂಡುವಿನ ಮಕ್ಕಳಾದ ಭೀಮಾರ್ಜುನ-ನಕುಲ-ಸಹದೇವರೂ ಯುಧಿಷ್ಠಿರನನ್ನು ಸುತ್ತುವರಿದು ಅವನನ್ನೇ ಅನುಸರಿಸಿ ಯುದ್ಧದಲ್ಲಿ ತೊಡಗಿದರು. ಅನಂತರ ಕೌರವ-ಪಾಂಡವರಿಗೆ ಘೋರವಾದ ಯುದ್ಧವು ಪ್ರಾರಂಭವಾಯಿತು. ಆ ಸಮಯದಲ್ಲಿ ಸಾವಿರಾರು ರಣವಾದ್ಯ ಗಳು ಮೊಳಗಿದುವು. ರಣಾಂಗಣದ ಸುತ್ತಲೂ ಕಿಲ-ಕಿಲಾ ಶಬ್ದಗಳಾಗು ತ್ತಿದ್ದುವು. ಆಗಿನ ಮಹಾಯುದ್ಧದಲ್ಲಿ ಸಮಸ್ತಪಾಂಚಾಲ ಸೈನಿಕರೂ ಕೌರವ ಸೈನಿಕರೊಡನೆ ಯುದ್ಧದಲ್ಲಿ ತೊಡಗಿದರು. ಪದಾತಿಗಳೂ ಪದಾತಿ ಗಳೊಡನೆಯೂ, ಗಜಸೈನಿಕರು ಗಜಸೈನಿಕರೊಡನೆಯೂ, ರಥಿಗಳು ರಥಿಗಳೊಡನೆಯೂ, ಅಶ್ವಸೈನಿಕರು ಅಶ್ವಸೈನಿಕರೊಡನೆಯೂ ಯುದ್ಧದಲ್ಲಿ ತೊಡಗಿದರು. ಆ ಸಮರಾಂಗಣದಲ್ಲಿ ವಿಧ-ವಿಧವಾದ, ಅಚಿಂತ್ಯವಾದ, ಶಸ್ತ್ರಸಹಿತವಾಗಿದ್ದ, ಉತ್ತಮರೀತಿಯ ದ್ವಂದ್ವಯುದ್ಧಗಳು ನೋಡಲು ಅತ್ಯಂತಯೋಗ್ಯವಾಗಿದ್ದುವು. ಮಹಾವೇಗ ಶಾಲಿಗಳಾದ ಶೂರರಾದ ಎಲ್ಲ

ಯೋಧರೂ ಒಬ್ಬರು ಮತ್ತೊಬ್ಬರನ್ನು ಸಂಹರಿಸುವ ಇಚ್ಛೆಯನ್ನು ಹೊಂದಿದವರಾಗಿ ವಿಚಿತ್ರರೀತಿಯಲ್ಲಿ, ಶೀಘ್ರತಾಪೂರ್ವಕವಾಗಿ, ಸ್ವಚ್ಛವಾದ ರೀತಿಯಲ್ಲಿ ಯುದ್ಧಮಾಡುತ್ತಿದ್ದರು. ಯೋಧವ್ರತವನ್ನು ಅನುಷ್ಠಾನ ಮಾಡುತ್ತಿದ್ದ ಅವರು ಎದುರು-ಬದುರಾಗಿ ನಿಂತು ಯುದ್ಧಮಾಡುತ್ತಾ ಒಬ್ಬರು ಮತ್ತೊಬ್ಬರನ್ನು ಸಂಹರಿಸುತ್ತಿದ್ದರು. ಯಾವುದೇ ಕಾರಣದಿಂದಲೂ ಅವರು ಯುದ್ಧದಲ್ಲಿ ಶತ್ರುಗಳಿಗೆ ಬೆನ್ನುತೋರಿಸುತ್ತಿರಲಿಲ್ಲ. ಮೂಹೂರ್ತಕಾಲ ಆ ಯುದ್ಧವು ನೋಡಲು ಬಹಳ ಚೆನ್ನಾಗಿಯೇ ಕಾಣುತ್ತಿದ್ದಿತು. ಅನಂತರ ಕೇವಲ ಉನ್ಮತ್ತರೇ ಯುದ್ಧಮಾಡುತ್ತಿರುವವರೋ ಎಂಬಂತೆ ಆ ಯುದ್ಧವು ಮರ್ಯಾದಾಶೂನ್ಯವಾಗಿ ಪರಿಣಮಿಸಿತು. ರಥಿಯು ಆನೆಯನ್ನು ಆಕ್ರಮಿಸಿ, ನಿಶಿತವಾದ ಮತ್ತು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಆನೆಯನ್ನೂ ಮತ್ತು ಮಾವುತನನ್ನೂ ಸಂಹರಿಸಿ ಯಮರಾಜನ ಬಳಿಗೆ ಕಳುಹಿಸುತ್ತಿದ್ದನು. ಹಲವಾರು ಆನೆಗಳು ಕುದುರೆಗಳ ಮೇಲೆ ದಾಳಿಮಾಡುತ್ತಾ ಅವುಗಳನ್ನು ಸೊಂಡಿಲಿನಿಂದೆಸೆದು ಕಾಲಿನಿಂದ ತುಳಿದು ಸೀಳಿಹಾಕುತ್ತಿದ್ದುವು. ಅದರಿಂದಾಗಿ ಅಲ್ಲಿನ ದೃಶ್ಯವು ಬಹಳ ಭಯಂಕರವಾಗಿ ಕಾಣುತ್ತಿದ್ದಿತು. ಹಲವಾರು ಅಶ್ವಾರೋಹಿಗಳು ಶ್ರೇಷ್ಠಗಜಗಳನ್ನು ಸುತ್ತುವರಿದು ಚಪ್ಪಾಳೆಗಳನ್ನು ತಟ್ಟುತ್ತಿದ್ದರು. ಅದರಿಂದ ಭಯಗೊಂಡು ತತ್ತರಿಸಿಬೀಳುತ್ತಾ-ಓಡುತ್ತಾ ಇದ್ದ ಮಹಾಗಜಗಳನ್ನು ಅಶ್ವಾರೋಹಿಗಳು ಪಕ್ಕದಲ್ಲಿಯೂ ಹಿಂದೆಯೂ ನಿಂತು ಪ್ರಹರಿಸಿ ಸಂಹರಿಸುತ್ತಿದ್ದರು. ಮದೋದಕದಿಂದ ಉನ್ಮತ್ತವಾಗಿದ್ದ ಕೆಲವು ಆನೆಗಳು ಕುದುರೆಗಳನ್ನು ಇಲ್ಲಿಂದಲ್ಲಿಗೂ ಅಲ್ಲಿಂದಿಲ್ಲಿಗೂ ಓಡಿಯಾಡಿ ಸುತ್ತಿದ್ದುವು. ಮತ್ತೆ ಕೆಲವು ಆನೆಗಳು ತಮ್ಮ ದಂತಗಳಿಂದ ಕುದುರೆಗಳನ್ನು ತಿವಿದು ಸಾಯಿಸುತ್ತಿದ್ದುವು. ಮತ್ತೆ ಕೆಲವು ಸೊಂಡಲಿನಿಂದೆತ್ತಿ ನೆಲಕ್ಕೆ ಅಪ್ಪಳಿಸಿ ಅನಂತರ ತುಳಿದು ಸಂಹರಿಸುತ್ತಿದ್ದುವು. ಹಲವು ಆನೆಗಳು ಕೋಪಗೊಂಡು ಸವಾರರಿದ್ದ ಕುದುರೆಗಳನ್ನೂ ವಿಷಾಣಗಳಿಂದ ಇರಿದು ಸಾಯಿಸುತ್ತಿದ್ದುವು. ಮಹಾಬಲಿಷ್ಠವಾದ ಕೆಲವು ಆನೆಗಳು ಸವಾರರಿಂದ ಕೂಡಿದ ಕುದುರೆಗಳನ್ನೇ ಸೊಂಡಿಲುಗಳಿಂದ ಮೇಲೆತ್ತಿ ಅತ್ಯಂತರಭಸದಿಂದ ಬಹಳ ದೂರಕ್ಕೆ ಬಿಸುಡುತ್ತಿದ್ದುವು. ಸಮಯವನ್ನು ನೋಡಿ ಪದಾತಿಗಳಿಂದ ಮರ್ಮಸ್ಥಳ ಗಳಲ್ಲಿ ಪ್ರಹರಿಸಲ್ಪಡುತ್ತಿದ್ದ ಆನೆಗಳು ಘೋರವಾದ ಆರ್ತಧ್ವನಿ ಮಾಡುತ್ತಾ

ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದುವು. ಆನೆಗಳು ಓಡಿಸಿಕೊಂಡು ಬರಲು, ಪದಾತಿಸೈನಿಕರು ಪ್ರಾಣವುಳಿಸಿಕೊಳ್ಳುವ ಸಲುವಾಗಿ ಆ ಸಮಯದಲ್ಲಿ ತಮ್ಮ ಮೇಲಿರುವ ಆಭರಣಗಳೂ ಭಾರವೆಂದು ಭಾವಿಸಿ ಅವುಗಳನ್ನೂ ಕಳಚಿ ಕೆಳಕ್ಕೆಹಾಕಿ ತಡವರಿಸುತ್ತಾ-ಮುಗ್ಗರಿಸುತ್ತಾ ಓಡಿಹೋಗುತ್ತಿದ್ದರು. ಅದನ್ನು ನೋಡಿದ ಆನೆಗಳು ತಮ್ಮನ್ನು ಪ್ರಹರಿಸುವ ಸಲುವಾಗಿ ಆಭರಣಗಳನ್ನು ತೆಗೆಯುತ್ತಿರುವರೆಂದು ಭಾವಿಸಿ ಆ ವಿಚಿತ್ರಾಭರಣಗಳನ್ನು ಸೊಂಡಿಲಿನಿಂದೆತ್ತಿ ಕೊಂಡು ಕಾಲಿನಿಂದ ಜಜ್ಜಿ ಪುಡಿ-ಪುಡಿಮಾಡುತ್ತಿದ್ದುವು. ಹಾಗೆ ಆಭರಣಗಳ ನಾಶದಲ್ಲಿ ತೊಡಗಿರುತ್ತಿದ್ದ ಆನೆಗಳನ್ನು ಬಲೋತ್ಕಟರಾದ ಮತ್ತು ಮಹಾವೇಗರಾದ ಪದಾತಿಗಳು ಸುತ್ತುವರಿದು ಆನೆಗಳನ್ನೂ ಮತ್ತು ಮಾವುತರನ್ನೂ ಸಂಹರಿಸುತ್ತಿದ್ದರು. ಮತ್ತೆ ಕೆಲವು ಸುಶಿಕ್ಷಿತವಾದ ಆನೆಗಳು ಪದಾತಿಗಳನ್ನು ತಮ್ಮ ಸೊಂಡಿಲಿನಿಂದ ಮೇಲೆಸೆಯುತ್ತಿದ್ದುವು. ಪದಾತಿಗಳು ಕೆಳಕ್ಕೆ ಬೀಳುವ ವೇಳೆಗೆ ಸರಿಯಾಗಿ ವಿಷಾಣಗಳನ್ನು ಮುಂದೊಡ್ಡುತ್ತಿದ್ದುವು. ಪದಾತಿಗಳು ಕೊಂಬುಗಳ ತುದಿಗೆ ಚುಚ್ಚಿಕೊಂಡು ಸೀಳಿಹೋಗಿ ಪ್ರಾಣಬಿಡುತ್ತಿದ್ದರು. ಮತ್ತೆ ಕೆಲವು ಆನೆಗಳು ಪದಾತಿಗಳನ್ನು ವಿಷಾಣ ಗಳಿಂದಲೇ ತಿವಿದು ಸಂಹರಿಸುತ್ತಿದ್ದುವು. ಮತ್ತೆ ಕೆಲವು ಮಹಾಗಜಗಳು ಸೈನ್ಯದ ಮಧ್ಯಭಾಗವನ್ನು ಪ್ರವೇಶಿಸಿ ಪದಾತಿಗಳನ್ನು ಸೊಂಡಿಲಿನಿಂದ ಹಿಡಿದು ಮೇಲೆತ್ತಿ ಪದಾತಿಗಳ ಶರೀರಗಳು ಸಂಪೂರ್ಣವಾಗಿ ವಿನಾಶವಾಗುವವರೆಗೂ ನೆಲದ ಮೇಲೆ ಹಲವಾರು ಬಾರಿ ಅಪ್ಪಳಿಸುತ್ತಲೇ ಇರುತ್ತಿದ್ದುವು. ಮತ್ತೆ ಕೆಲವು ಆನೆಗಳು ಪದಾತಿಗಳನ್ನು ವ್ಯಜನಗಳಂತೆ ಸುತ್ತಲೂ ತಿರುಗಿಸುತ್ತಾ ಸಂಹರಿಸುತ್ತಿದ್ದುವು.

ಆನೆಗಳ ಮುಂದೆ ಹೋಗುತ್ತಿದ್ದ ಪದಾತಿಗಳು ಎದುರುಪಕ್ಷದ ಆನೆಗಳ ಶರೀರಗಳನ್ನು ಅಲ್ಲಲ್ಲಿ ಭರ್ಜಿಗಳಿಂದ ತಿವಿದು ಗಾಯಗೊಳಿಸು ತ್ತಿದ್ದರು. ಪದಾತಿಸೈನಿಕರು ಪ್ರಾಸ-ತೋಮರ-ಶಕ್ತ್ಯಾಯುಧಗಳಿಂದ ಆನೆಗಳ ಕುಂಭ ಸ್ಥಳಗಳ ಕೆಳಭಾಗದಲ್ಲಿಯೂ, ಕುಂಭಸ್ಥಳಗಳಲ್ಲಿಯೂ, ದಂತಗಳ ಮಧ್ಯಭಾಗಗಳಲ್ಲಿಯೂ ಪ್ರಹರಿಸಿ ಅವುಗಳನ್ನು ದಂಡಿಸುತ್ತಿ ದ್ದರು. ಮತ್ತೆ ಕೆಲವು ಆನೆ ಗಳನ್ನು ಪಾರ್ಶ್ವದಲ್ಲಿರುತ್ತಿದ್ದ ದಾರುಣರಾದ ರಥಿಗಳೂ ಮತ್ತು ಕುದುರೇ ಸವಾರರೂ ತಡೆದು ನಿಲ್ಲಿಸಿ ಬಾಣಗಳಿಂದ ಪ್ರಹರಿಸುತ್ತಿದ್ದರು. ಅವುಗಳು ಪ್ರಾಣತೊರೆದು ನೆಲದ ಮೇಲೆ ಬೀಳುತ್ತಿ

ದ್ದುವು. ಕೆಲವು ಕುದುರೇಸವಾರರು ಗುರಾಣಿಗಳನ್ನು ಹಿಡಿದಿರುತ್ತಿದ್ದ ಪದಾತಿಗಳನ್ನು ಬಹಳ ವೇಗವಾಗಿ ತೋಮರಗಳಿಂದ ಪ್ರಹರಿಸಿ ಭೂಮಿಯ ಮೇಲೆ ಕೆಡುವುತ್ತಿದ್ದರು. ಘೋರರೂಪವಾಗಿದ್ದ ಮತ್ತು ಮಹಾಭಯಂಕರ ವಾಗಿದ್ದ ಆ ಯುದ್ಧದಲ್ಲಿ ಕೆಲವು ಆನೆಗಳು ಚರ್ಮದ ಆವರಣಯುಕ್ತವಾದ ರಥಗಳನ್ನು ಸಮೀಪಿಸಿ ಅವುಗಳನ್ನು ಸೊಂಡಿಲಿನಿಂದ ಮೇಲೆತ್ತಿ ಬಹಳ ದೂರಕ್ಕೆ ಬಿಸುಡುತ್ತಿದ್ದುವು. ಆನೆಗಳು ಮಹಾಬಲಿಷ್ಠವಾಗಿದ್ದರೂ ಯೋಧರ ನಾರಾಚಗಳಿಂದ ಅಸುತೊರೆದು–ವಜ್ರಾಯುಧದಿಂದ ಭೇದಿಸಲ್ಪಟ್ಟ ಪರ್ವತದ ಶಿಖರದಂತೆ ಭೂಮಿಯ ಮೇಲೆ ಬಿದ್ದಿರುತ್ತಿದ್ದುವು.

ಆ ಮಹಾಯುದ್ಧದಲ್ಲಿ ಒಂದು ಪಕ್ಷದ ಯೋಧರು ಎದುರುಪಕ್ಷದ ಯೋಧರೊಡನೆ ಮಿಲಿತರಾಗಿ ಮುಷ್ಟಿಗಳಿಂದಲೇ ಪ್ರಹರಿಸುತ್ತಿದ್ದರು. ಪರಸ್ಪರವಾಗಿ ಒಬ್ಬರು ಮತ್ತೊಬ್ಬರ ಜುಟ್ಟುಗಳನ್ನು ಹಿಡಿದುಕೊಂಡು ಜುಂಗಾಡಿ ಕೆಳಕ್ಕೆ ಬೀಳಿಸುತ್ತಿದ್ದರು ಮತ್ತು ಬಿದ್ದವರನ್ನು ಮುಷ್ಟಿಗಳಿಂದ ಗುದ್ದುತ್ತಿದ್ದರು. ಮತ್ತೆ ಕೆಲವು ಯೋಧರು ತಮ್ಮೆರಡು ಭುಜಗಳನ್ನೂ ಮೇಲೆತ್ತಿ ಎದುರಾಳಿಗಳನ್ನು ರಭಸದಿಂದ ಬಡಿದು ಕೆಳಕ್ಕೆ ಬೀಳಿಸುತ್ತಿದ್ದರು. ಅನಂತರ ಅವರ ಎದೆಯಮೇಲೆ ಕಾಲಿಟ್ಟುಕೊಂಡು ಕೆಳಕ್ಕೆಬಿದ್ದ ಯೋಧನು ಚಡಪಡಿಸುತ್ತಿದ್ದರೂ ಅವನ ತಲೆಯನ್ನು ಕತ್ತರಿಸುತ್ತಿದ್ದರು. ಮತ್ತೆ ಕೆಲವು ಯೋಧರು ಕುದುರೆಯ ಮೇಲಿಂದಾಗಲೀ, ರಥದಿಂದಾಗಲೀ, ಆನೆಯ ಮೇಲಿಂದಾಗಲೀ ಕೆಳಕ್ಕೆ ಬೀಳುತ್ತಿದ್ದ ಯೋಧನ ತಲೆಯನ್ನು ಕತ್ತರಿಸುತ್ತಿದ್ದರು. ಮತ್ತೆ ಕೆಲವು ಯೋಧರು ಕೆಳಕ್ಕೆ ಬಿದ್ದಿದ್ದರೂ ಜೀವಸಹಿತರಾಗಿದ್ದರೆ ಅಂತಹವರ ಶರೀರದೊಳಗೆ ಆಯುಧಗಳನ್ನು ನಾಟಿಸುತ್ತಿದ್ದರು.

ಆ ಸಮಯದಲ್ಲಿ ಎರಡೂಪಕ್ಷಗಳ ಯೋಧರಲ್ಲಿ ಭಯಂಕರವಾದ ಮುಷ್ಟಿಯುದ್ಧವು ನಡೆಯಿತು. ಭಯಂಕರವಾದ ಕೇಶಗ್ರಹಣಯುದ್ಧವೂ ಮತ್ತು ಉಗ್ರವಾದ ಬಾಹುಯುದ್ಧವೂ ಅಲ್ಲಲ್ಲಿ ನಡೆಯುತ್ತಿದ್ದಿತು. ಒಬ್ಬ ಯೋಧನು ಮತ್ತೊಬ್ಬ ಯೋಧನೊಡನೆ ಯುದ್ಧದಲ್ಲಿ ತೊಡಗಿದ್ದ ವೇಳೆಯಲ್ಲಿ ಅವಿಜ್ಞಾತನಾದ (ಅಪರಿಚಿತನಾದ) ಮತ್ತೊಬ್ಬ ಯೋಧನು ಮಧ್ಯದಲ್ಲಿ ಪ್ರವೇಶಿಸಿ ಅವನಿಗೆ ತಿಳಿಯದಂತೆಯೇ ನಾನಾವಿಧವಾದ ಶಸ್ತ್ರಗಳಿಂದ ಅವನ ಪ್ರಾಣಗಳನ್ನು ಅಪಹರಿಸುತ್ತಿದ್ದನು. ಈ ರೀತಿಯಲ್ಲಿ

ಭಯಂಕರವಾದ ಯುದ್ಧವು ನಡೆಯುತ್ತಿರಲಾಗಿ, ಯೋಧರು ಪರಸ್ಪರವಾಗಿ ಸೇರಿಯುದ್ಧಮಾಡುತ್ತಿರಲಾಗಿ, ನೂರಾರು-ಸಾವಿರಾರು ಮುಂಡಗಳು ಆ ರಣರಂಗದಲ್ಲಿ ಎದ್ದುನಿಂತುವು. ರಕ್ತದಿಂದ ನೆನೆದಿದ್ದ ಆಯುಧಗಳೂ ಮತ್ತು ಕವಚಗಳೂ ಗಾಢವಾದ ಕೆಂಪುಬಣ್ಣದ ವಸ್ತ್ರಗಳಂತೆಯೇ ಪ್ರಕಾಶಿಸುತ್ತಿದ್ದುವು. ಈ ರೀತಿಯಲ್ಲಿ ಶಸ್ತ್ರಾಸ್ತ್ರಗಳಿಂದ ಪರಿಪೂರ್ಣವಾಗಿದ್ದ ಆ ಭಯಾನಕಯುದ್ಧವು ಹುಚ್ಚುನೆರೆಯಿಂದ ಕೂಡಿರುವ ಗಂಗಾನದಿಯ ಭೋರ್ಗರೆಯುವ ಶಬ್ದಕ್ಕೆ ಅನುರೂಪವಾದ ಶಬ್ದದಿಂದ ಜಗತ್ತನ್ನೇ ತುಂಬಿಬಿಟ್ಟಿತು. ಬಾಣಗಳನ್ನು ಬಿಡಬೇಕೆಂಬ ಒಂದು ಕಾರ್ಯದಲ್ಲಿಯೇ ಆತುರರಾಗಿದ್ದ ವಿಜಯೇಚ್ಛು ಗಳಾಗಿದ್ದ ರಾಜರು 'ಶತ್ರುಗಳಾರು? ಮಿತ್ರರಾರು?'– ಎಂಬುದನ್ನು ತಿಳಿದು ಕೊಂಡು ಯುದ್ಧಮಾಡಲು ಪ್ರಯತ್ನಿಸುತ್ತಲೇ ಇರಲಿಲ್ಲ. **'ಯೋದ್ಧವ್ಯಮಿತಿ ಯುಧ್ಯನ್ತೇ'** ಯುದ್ಧಮಾಡಬೇಕು-ಅದರಿಂದ ಯುದ್ಧಮಾಡುತ್ತಿದ್ದರು. ಹಲವಾರು ಪ್ರಸಂಗಗಳಲ್ಲಿ ತಮ್ಮ ಕಡೆಯ ಸೈನಿಕರನ್ನೇ ಕೊಂದುಬಿಡುತ್ತಿದ್ದರು. ಎದುರಾಗಿ ಬರುವ ಶತ್ರುಸೈನಿಕರನ್ನೂ ಸಂಹರಿಸುತ್ತಿದ್ದರು. ಈ ರೀತಿಯಲ್ಲಿ ಎರಡೂ ಪಕ್ಷಗಳ ಸೇನೆಯಲ್ಲಿಯೂ ವೀರರು ಯುದ್ಧಮರ್ಯಾದೆಯನ್ನೇ ಅತಿಕ್ರಮಿಸಿದ ಯುದ್ಧದಲ್ಲಿ ತೊಡಗಿದ್ದರು. ಭಗ್ನವಾಗಿ ಹೋದ ರಥಗಳಿಂದಲೂ, ಕೆಳಕ್ಕೆ ಬೀಳಿಸಲ್ಪಟ್ಟ ಆನೆಗಳಿಂದಲೂ, ಪ್ರಾಣಗಳನ್ನು ತೊರೆದು ಬಿದ್ದಿದ್ದ ಕುದುರೆಗಳಿಂದಲೂ, ಹತರಾಗಿ ಬಿದ್ದಿದ್ದ ಸಾವಿರಾರು ಪದಾತಿಗಳಿಂದಲೂ ವ್ಯಾಪ್ತವಾಗಿದ್ದ ರಣಭೂಮಿಯು ಸಂಚರಿಸಲು ಅಸಾಧ್ಯವಾಗಿ ಪರಿಣಮಿಸಿತು. ಸ್ವಲ್ಪಹೊತ್ತಿನಲ್ಲಿಯೇ ಆ ರಣಭೂಮಿಯಲ್ಲಿ ರಕ್ತನದಿಯೇ ಪ್ರವಹಿಸತೊಡಗಿತು. ಪಾಂಚಾಲರನ್ನು ಕರ್ಣನೂ, ತ್ರಿಗರ್ತರನ್ನು ಅರ್ಜುನನೂ ಅಪಾರಸಂಖ್ಯೆಯಲ್ಲಿ ಸಂಹರಿಸಿದರು. ಭೀಮಸೇನನು ಕುರುಗಳನ್ನೂ ಮತ್ತು ಅವರ ಗಜಸೈನ್ಯವನ್ನೂ ಸಂಪೂರ್ಣವಾಗಿ ಧ್ವಂಸಮಾಡಿದನು. ಈ ರೀತಿಯಲ್ಲಿ ಸೂರ್ಯನು ಅಪರಾಹ್ಣಕ್ಕೆ ಹೋಗುವ ವೇಳೆಗೆ ಅಮೋಘವಾದ ಯಶಸ್ಸನ್ನು ಪಡೆಯಲು ಆಶಿಸಿದ್ದ ಕುರು-ಪಾಂಡವರ ಸೈನಿಕರಲ್ಲಿ ಈ ವಿಧವಾದ ವಿನಾಶಕಾರ್ಯವು ನಡೆಯಿತು."

೨೮ನೆಯ ಅಧ್ಯಾಯವು ಮುಗಿಯಿತು.

## ಯುಧಿಷ್ಠಿರನು ದುರ್ಯೋಧನನನ್ನು ಪರಾಜಯಗೊಳಿಸಿದುದು

ಯುದ್ಧದ ವರ್ಣನೆಯನ್ನು ಕೇಳಿದ ಧೃತರಾಷ್ಟ್ರನು ಸಂಜಯನಿಗೆ ಹೇಳುತ್ತಾನೆ:

**ಅತಿತೀವ್ರಾಣಿ ದುಃಖಾನಿ ದುಃಸಹಾನಿ ಬಹೂನಿ ಚ।**
**ತ್ವತ್ತೋಽಹಂ ಸಂಜಯ ಶ್ರೌಷಂ ಪುತ್ರಾಣಾಂ ಚೈವ ಸಂಕ್ಷಯಮ್॥**
**ಯಥಾ ತ್ವಂ ಮೇ ಕಥಯಸೇ ತಥಾ ಯುದ್ಧಮವರ್ತತ।**
**ನ ಸನ್ತಿ ಸೂತ ಕೌರವ್ಯಾ ಇತಿ ಮೇ ನಿಶ್ಚಿತಾ ಮತಿಃ ॥೨॥**

"ಸಂಜಯ! ನನಗೆ ಪ್ರಾಪ್ತವಾಗುತ್ತಿರುವ ದುಃಖಗಳು ತೀವ್ರತರವೂ, ಸಹಿಸಲು ಅಸಾಧ್ಯವೂ ಮತ್ತು ಹಲವು ಬಗೆಯವೂ ಆಗಿವೆ. ನನ್ನ ಮಕ್ಕಳು ಹೊತ್ತು-ಹೊತ್ತಿಗೂ ಕ್ಷಯಿಸಿಹೋಗುತ್ತಿರುವುದನ್ನು ನಿನ್ನಿಂದ ಕೇಳುತ್ತಲೇ ಇದ್ದೇನೆ. ನೀನು ವಿವರಿಸಿದಂತೆಯೇ ಯುದ್ಧವು ನಡೆದಿದೆ. ಇದರಿಂದ ನಾನು ಕೌರವರು ಉಳಿಯಲಾರರೆಂಬ ದೃಢನಿಶ್ಚಯಕ್ಕೆ ಬಂದಿರುತ್ತೇನೆ. ನನ್ನ ಮನಸ್ಸಿಗೆ ಈ ವಿಷಯವು ದೃಢವಾಗಿಬಿಟ್ಟಿದೆ.

ಮಹಾರಥನಾದ ದುರ್ಯೋಧನನೂ ರಥಹೀನನಾಗಿ ಮಾಡಲ್ಪಟ್ಟನು. ಧರ್ಮಪುತ್ರನು ದುರ್ಯೋಧನನೊಡನೆ ಹೇಗೆ ಯುದ್ಧಮಾಡಿದನು? ಅವನ ವಿಷಯದಲ್ಲಿ ನನ್ನ ಮಗನು ಹೇಗೆ ನಡೆದುಕೊಂಡನು? ಅಪರಾಹ್ಣ ಸಮಯದಲ್ಲಿ ರೋಮಾಂಚಕರವಾದ ಆ ಯುದ್ಧವು ಹೇಗೆ ಮುಂದುವರಿಯಿತು? ನೀನು ವಿಷಯನಿರೂಪಣೆಯಲ್ಲಿ ಮಹಾಕುಶಲನಾಗಿರುವೆ. ಆದುದರಿಂದ ಎಲ್ಲ ವಿಷಯಗಳನ್ನೂ ಯಥಾವತ್ತಾಗಿ ನನ್ನೊಡನೆ ಹೇಳು."

"ಮಹಾರಾಜ! ಉಭಯಪಕ್ಷಗಳ ಸೈನಿಕರೂ ಯುದ್ಧದಲ್ಲಿ ತೊಡಗಿರಲಾಗಿ, ಎರಡೂ ಕಡೆಗಳ ಸೈನಿಕರೂ ಭಾಗಶಃ ವಿನಾಶಹೊಂದಿದರು. ಆ ಸಮಯದಲ್ಲಿ ನಿನ್ನ ಮಗನು ವಿಷಯುಕ್ತವಾದ ಸರ್ಪದಂತೆ ಮಹಾಕೋಪಯುಕ್ತನಾಗಿ ಮತ್ತೊಂದು ರಥದಲ್ಲಿ ಕುಳಿತು ಯುದ್ಧಸನ್ನದ್ಧನಾದನು.

ಯುಧಿಷ್ಠಿರನು ರಣರಂಗದಲ್ಲಿದ್ದುದನ್ನು ನೋಡಿ ದುರ್ಯೋಧನನು ಸೂತನನ್ನು 'ಬೇಗನಡೆ-ಬೇಗನಡೆ' ಎಂದು ಅವಸರಪಡಿಸಿದನು.

**ತತ್ರ ಮಾಂ ಪ್ರಾಪಯ ಕ್ಷಿಪ್ರಂ ಸಾರಥೇ ಯತ್ರ ಪಾಣ್ಡವಃ।**
**ಧ್ರಿಯಮಾಣಾತಪತ್ರೇಣ ರಾಜಾ ರಾಜತಿ ದಂಶಿತಃ ॥೭॥**

"ಸೂತ! ಯುಧಿಷ್ಠಿರರಾಜನು ಕವಚವನ್ನು ಧರಿಸಿಕೊಂಡು ಶ್ವೇತಚ್ಛತ್ರವನ್ನು ತಲೆಯ ಮೇಲೆ ಧರಿಸಿ ಯಾವ ಸ್ಥಳದಲ್ಲಿ ವಿರಾಜಮಾನನಾಗಿದ್ದಾನೆಯೋ ಅಲ್ಲಿಗೆ ನನ್ನನ್ನು ಕರೆದುಕೊಂಡುಹೋಗು."

ಮಹಾರಾಜ! ರಾಜನಿಂದ ಹೀಗೆ ಪ್ರೇರಿತನಾದ ಸೂತನು ಶ್ರೇಷ್ಠವಾದ ದುರ್ಯೋಧನನ ರಥವನ್ನು ಯುಧಿಷ್ಠಿರನಿಗೆ ಅಭಿಮುಖವಾಗಿ ನಡೆಸಿದನು. ಮದೋದಕವನ್ನು ಸುರಿಸುತ್ತಿರುವ ಆನೆಯೋಪಾದಿಯಲ್ಲಿ ಕ್ರುದ್ಧನಾದ ಯುಧಿಷ್ಠಿರನೂ ದುರ್ಯೋಧನನ ರಥದ ಕಡೆಗೇ ತನ್ನ ರಥವನ್ನೂ ನಡೆಸುವಂತೆ ಸಾರಥಿಯನ್ನು ಪ್ರಚೋದಿಸಿದನು. ಹೀಗೆ ಪರಸ್ಪರ ಪ್ರಚೋದನೆಯಿಂದಾಗಿ ಮಹಾಧನುಷ್ಮಂತರಾದ, ಮಹಾವೀರರಾದ, ಮಹಾರಥಿಗಳಾದ, ಯುದ್ಧದುರ್ಮದರಾದ, ಕುಪಿತರಾದ, ಅಣ್ಣ-ತಮ್ಮಂದಿರಾದ ಯುಧಿಷ್ಠಿರ-ದುರ್ಯೋಧನರು ಸಂಘರ್ಷಿಸಿ, ಪರಸ್ಪರವಾಗಿ ಒಬ್ಬರು ಮತ್ತೊಬ್ಬರ ಮೇಲೆ ಬಾಣಗಳ ವೃಷ್ಟಿಯನ್ನೇ ಸುರಿಸಿದರು. ಅನಂತರ ದುರ್ಯೋಧನನು ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಭಲ್ಲದಿಂದ ಧರ್ಮಶೀಲನಾದ ಯುಧಿಷ್ಠಿರನ ಧನುಸ್ಸನ್ನು ಕತ್ತರಿಸಿದನು. ಯುಧಿಷ್ಠಿರರಾಜನಿಗೆ ಆ ಅಪಮಾನವನ್ನು ಸಹಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಕೋಪದಿಂದ ಕಡುಗೆಂಪಾದ ಕಣ್ಣುಳ್ಳವನಾಗಿ ಕತ್ತರಿಸಿಹೋದ ಧನುಸ್ಸನ್ನು ಬಿಸುಟು, ಮತ್ತೊಂದು ಧನುಸ್ಸನ್ನೆತ್ತಿಕೊಂಡು, ನಿಶಿತವಾದ ಬಾಣವನ್ನು ಅನುಸಂಧಾನಮಾಡಿ ದುರ್ಯೋಧನನ ಧ್ವಜವನ್ನೂ ಮತ್ತು ಧನುಸ್ಸನ್ನೂ ಕತ್ತರಿಸಿದನು. ಅದಕ್ಕೆ ಪ್ರತಿಯಾಗಿ ದುರ್ಯೋಧನನೂ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಯುಧಿಷ್ಠಿರನನ್ನು ಬಾಣಗಳಿಂದ ಪ್ರಹರಿಸಿದನು. ಈ ರೀತಿಯಲ್ಲಿ ಬಹಳ ಕ್ರುದ್ಧರಾಗಿದ್ದ ಅವರಿಬ್ಬರೂ ಪರಸ್ಪರವಾಗಿ ಒಬ್ಬರು ಮತ್ತೊಬ್ಬರ ಮೇಲೆ ಬಾಣಗಳನ್ನು ಅವ್ಯಾಹತವಾಗಿ ಸುರಿಸುತ್ತಿದ್ದರು.

ವಿಜಯವನ್ನು ಗಳಿಸಬೇಕೆಂಬ ಆಸಕ್ತಿಯಿಂದ ಸಿಂಹಗಳಂತೆ ಕುಪಿತ

ರಾಗಿದ್ದ, ವೀರರಾದ ಯುಧಿಷ್ಠಿರ-ದುರ್ಯೋಧನರಿಬ್ಬರೂ ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಾ–ಕಾಳಗಕ್ಕಿಳಿದಿರುವ ಎರಡು ಗೂಳಿ ಗಳೋಪಾದಿಯಲ್ಲಿ–ಗರ್ಜನೆಮಾಡುತ್ತಿದ್ದರು. ಒಬ್ಬರು ಮತ್ತೊಬ್ಬರಲ್ಲಿ ಛಿದ್ರವನ್ನು ಹುಡುಕುತ್ತಾ ಮಹಾರಥಿಕರಿಬ್ಬರೂ ಮಂಡಲಕ್ರಮದಲ್ಲಿ ಸಂಚ ರಿಸುತ್ತಿದ್ದರು. ಕಿವಿಯ ತುದಿಯವರೆಗೂ ಸೆಳೆದು ಬಿಡುತ್ತಿದ್ದ ಬಾಣಗಳಿಂದ ಇಬ್ಬರೂ ಬಹಳವಾಗಿ ಗಾಯಗೊಂಡಿದ್ದರು. ಆ ಸಮಯದಲ್ಲಿ ಅವರಿ ಬ್ಬರೂ–ಪುಷ್ಪಭರಿತವಾದ ಎರಡು ಮುತ್ತುಗದ ಮರಗಳಂತೆಯೇ ಕಾಣು ತ್ತಿದ್ದರು. ರಣಾಂಗಣದಲ್ಲಿ ನರೇಶ್ವರರಾದ ಯುಧಿಷ್ಠಿರ-ದುರ್ಯೋಧ ನರು ಬಾರಿ-ಬಾರಿಗೂ ಸಿಂಹನಾದಗಳನ್ನು ಮಾಡುತ್ತಿದ್ದರು. ಚಪ್ಪಾಳೆಗಳನ್ನು ತಟ್ಟುತ್ತಿದ್ದರು. ಧನುಸ್ಸುಗಳನ್ನು ಟೇಂಕರಿಸುತ್ತಿದ್ದರು. ಶಂಖಗಳನ್ನೂ ಗಟ್ಟಿ ಯಾಗಿ ಊದುತ್ತಿದ್ದರು. ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನು ಬಾಣ ಗಳಿಂದ ಬಹಳವಾಗಿ ಪೀಡಿಸುತ್ತಿದ್ದರು. ಅವರೀರ್ವರ ಯುದ್ಧವು ಹೀಗೆಯೇ ಮುಂದುವರಿಯುತ್ತಿರಲಾಗಿ, ಯುಧಿಷ್ಠಿರರಾಜನು ಕ್ರುದ್ಧನಾಗಿ ವಜ್ರಾಯುಧದ ವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ, ದುರಾಸದ ವಾಗಿದ್ದ ಮೂರು ಬಾಣಗಳಿಂದ ನಿನ್ನ ಮಗನ ವಕ್ಷಃಸ್ಥಳದಲ್ಲಿ ಪ್ರಹರಿಸಿ ದನು. ಅದಕ್ಕೆ ಪ್ರತಿಯಾಗಿ ಮಹೀಪತಿಯಾದ ನಿನ್ನ ಮಗನೂ ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ ಸಂಪೂರ್ಣವಾಗಿ ಲೋಹದಿಂದ ಮಾಡಲ್ಪಟ್ಟಿದ್ದ, ಐದು ಬಾಣಗಳಿಂದ ಯುಧಿಷ್ಠಿರನನ್ನು ಪ್ರಹರಿಸಿದನು. ಬಳಿಕ ದುರ್ಯೋಧನನು ತೀಕ್ಷ್ಣವಾಗಿದ್ದ, ದೊಡ್ಡ ಬಾಲಚುಕ್ಕಿಯಂತಿದ್ದ ಶಕ್ತ್ಯಾಯುಧವನ್ನು ಯುಧಿಷ್ಠಿರನ ಮೇಲೆ ಪ್ರಯೋಗಿಸಿದನು. ಧರ್ಮರಾಜನು ತನ್ನ ಮೇಲೆ ಬೀಳಲಿದ್ದ ಆ ಶಕ್ತ್ಯಾಯುಧವನ್ನು ನಿಶಿತವಾದ ಮೂರು ಬಾಣ ಗಳಿಂದ ಕತ್ತರಿಸಿ ಮರುಕ್ಷಣದಲ್ಲಿಯೇ ದುರ್ಯೋಧನನನ್ನೂ ಐದು ಬಾಣಗಳಿಂದ ಪ್ರಹರಿಸಿದನು. ಯುಧಿಷ್ಠಿರನಿಂದ ಕತ್ತರಿಸಲ್ಪಟ್ಟ, ಸುವರ್ಣ ಮಯವಾದ ದಂಡದಿಂದ ಕೂಡಿದ್ದ ಆ ಶಕ್ತ್ಯಾಯುಧವು ದೊಡ್ಡ ಬಾಲ

ಚುಕ್ಕಿಯಂತೆ ಶಬ್ದಮಾಡುತ್ತಾ ಕೆಳಕ್ಕೆ ಬಿದ್ದಿತು. ಹಾಗೆ ಬೀಳುತ್ತಿರುವಾಗ ಆ ಶಕ್ತಿಯು ಜ್ವಾಲೆಯಿಂದ ಕೂಡಿದ ಅಗ್ನಿಯಂತೆಯೇ ಕಾಣಿಸುತ್ತಿದ್ದಿತು. ತಾನು ಬಿಟ್ಟ ಶಕ್ತ್ಯಾಯುಧವು ಯುಧಿಷ್ಠಿರನಿಂದ ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದುದನ್ನು ನೋಡಿ ದುರ್ಯೋಧನನು ನಿಶಿತವಾದ ಒಂಬತ್ತು ಭಲ್ಲಗಳಿಂದ ಯುಧಿಷ್ಠಿರನನ್ನು ಪ್ರಹರಿಸಿದನು. ಶತ್ರುತಾಪನನಾದ ಯುಧಿಷ್ಠಿರನು ಬಲಿಷ್ಠನಾದ ಶತ್ರುವು ಬಿಟ್ಟ ಭಲ್ಲಗಳಿಂದ ಬಹಳವಾಗಿ ಗಾಯಗೊಂಡನು. ದುರ್ಯೋಧನನಿಗೆ ಪ್ರತೀಕಾರಮಾಡುವ ಸಲುವಾಗಿ ಬಾಣವೊಂದನ್ನು ಬತ್ತಳಿಕೆಯಿಂದ ತೆಗೆದನು. ಮಹಾಬಲನಾದ ಯುಧಿಷ್ಠಿರನು ಆ ಮಹಾಬಾಣವನ್ನು ಧನುಸ್ಸಿನ ಮಧ್ಯದಲ್ಲಿ ಅನುಸಂಧಾನಮಾಡಿದನು. ಪರಾಕ್ರಮಿಯಾದ ಯುಧಿಷ್ಠಿರನು ಕೋಪಾವಿಷ್ಟನಾಗಿ ಆ ಮಹಾಬಾಣವನ್ನು ಕರ್ಣಪರ್ಯಂತವಾಗಿ ಸೆಳೆದು ದುರ್ಯೋಧನನ ಮೇಲೆ ಪ್ರಯೋಗಿಸಿದನು. ಆ ಮಹಾಬಾಣವು ಮಹಾರಥನಾದ ನಿನ್ನ ಮಗನನ್ನು ಪ್ರಹರಿಸಿ ಮೂರ್ಛಿತನನ್ನಾಗಿ ಮಾಡಿ (ಅವನನ್ನು ವಿಮೋಹಗೊಳಿಸಿ) ಅನಂತರ ಭೂಮಿಯನ್ನು ಸೀಳಿಕೊಂಡುಹೋಯಿತು. ಅದರಿಂದ ಪರಮಕ್ರುದ್ಧನಾದ ದುರ್ಯೋಧನನು ಬಹಳ ಬೇಗ ಗದೆಯನ್ನೆತ್ತಿಕೊಂಡು ಕಲಹವನ್ನು ಕೊನೆಗಾಣಿಸಬೇಕೆಂಬ ಆಶಯದಿಂದ ಧರ್ಮರಾಜನ ಕಡೆಗೆ ನುಗ್ಗಿದನು. ದಂಡಪಾಣಿಯಾದ ಯಮರಾಜನಂತೆ ಗದೆಯನ್ನೆತ್ತಿಕೊಂಡು ಬರುತ್ತಿದ್ದ ದುರ್ಯೋಧನನನ್ನು ಕಂಡು ಧರ್ಮರಾಜನು ದೇದೀಪ್ಯಮಾನವಾಗಿದ್ದ, ಮಹಾವೇಗ ಯುಕ್ತವಾಗಿದ್ದ, ಪ್ರಜ್ವಲಿಸುತ್ತಿರುವ ದೊಡ್ಡದಾದ ಉಲ್ಕೆಯಂತೆಯೇ ಕಾಣುತ್ತಿದ್ದ ಮಹಾಶಕ್ತಿಯನ್ನು ನಿನ್ನ ಮಗನ ಮೇಲೆ ರಭಸದಿಂದ ಪ್ರಯೋಗಿಸಿದನು. ಆ ಸಮಯದಲ್ಲಿ ದುರ್ಯೋಧನನು ರಥಸ್ಥನಾಗಿಯೇ ಇದ್ದನು. ಧರ್ಮರಾಜನು ಬಿಟ್ಟ ಶಕ್ತ್ಯಾಯುಧವು ದುರ್ಯೋಧನನ ಕವಚವನ್ನೂ ಭೇದಿಸಿ ಹೃದಯವನ್ನೂ ಭೇದಿಸಿತು. ಅದರಿಂದ ದುರ್ಯೋಧನನು ಉದ್ವಿಗ್ನಚಿತ್ತನಾಗಿ ಕೆಳಕ್ಕೆ ಬಿದ್ದು ಮೂರ್ಛೆಹೋದನು. ಆ ಸಮಯದಲ್ಲಿ ಭೀಮಸೇನನು ತಾನು ಮಾಡಿದ್ದ ಪ್ರತಿಜ್ಞೆಯನ್ನು ಸ್ಮರಿಸಿಕೊಂಡವನಾಗಿ

ಧರ್ಮರಾಜನನ್ನು ಕುರಿತು "ಮಹಾರಾಜ! ನೀನು ಇವನನ್ನು ವಧಿಸಬಾರದು"–ಎಂದು ಹೇಳಿದನು. ಯುಧಿಷ್ಠಿರನು ದುರ್ಯೋಧನ ನೊಡನೆ ಮಾಡುತ್ತಿದ್ದ ಯುದ್ಧವನ್ನು ನಿಲ್ಲಿಸಿ ಹಿಂದಿರುಗಿದನು.

ಆ ಸಮಯದಲ್ಲಿ ಕೃತವರ್ಮನು ಬಹಳ ಶೀಘ್ರವಾಗಿ, ದುಃಖಸಮುದ್ರದಲ್ಲಿ ಮುಳುಗಿಹೋಗಿದ್ದ ನಿನ್ನ ಮಗನ ರಥದ ಸಮೀಪಕ್ಕೆ ಬಂದನು. ಸುವರ್ಣದ ಪಟ್ಟಿಯಿಂದ ಸಮಲಂಕೃತವಾಗಿದ್ದ ಗದೆಯನ್ನು ಹಿಡಿದುಕೊಂಡು ಭೀಮನೂ ವೇಗವಾಗಿ ಕೃತವರ್ಮನನ್ನು ಆಕ್ರಮಿಸಿದನು. ಮಹಾರಾಜ! ಹೀಗೆ ಆ ದಿನ ಅಪರಾಹ್ಣದಲ್ಲಿ ವಿಜಯಾಕಾಂಕ್ಷಿಗಳಾಗಿದ್ದ ನಿನ್ನ ಕಡೆಯವರಿಗೂ-ಪಾಂಡವರ ಕಡೆಯವರಿಗೂ ಯುದ್ಧವು ನಡೆಯಿತು."

೨೯ನೆಯ ಅಧ್ಯಾಯವು ಮುಗಿಯಿತು.

೩೦ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಸಾತ್ಯಕಿ–ಕರ್ಣರ ಯುದ್ಧ: ಅರ್ಜುನನು ಕೌರವರ ಸೈನ್ಯವನ್ನು ಸಂಹರಿಸಿದುದು: ಪಾಂಡವರ ವಿಜಯ

ಸಂಜಯನು ಅಪರಾಹ್ಣದಲ್ಲಿ ನಡೆದ ಯುದ್ಧವನ್ನು ವರ್ಣಿಸುತ್ತಾನೆ:

"ಮಹಾರಾಜ! ಯುದ್ಧದುರ್ಮದರಾದ ನಿನ್ನ ಮಕ್ಕಳೆಲ್ಲರೂ ಕರ್ಣನನ್ನು ಮುಂದೆ ಮಾಡಿಕೊಂಡು ಪುನಃ ರಣಭೂಮಿಗೆ ಹಿಂದಿರುಗಿಬಂದು ದೇವಾಸುರರ ಸಮರಕ್ಕೆ ಸಮಾನವಾದ ಯುದ್ಧವನ್ನು ಮಾಡಿದರು.

ರಥ-ಗಜಾಶ್ವ-ಪದಾತಿಸೈನಿಕರ ವಿಜಯಘೋಷಣೆಗಳಿಂದಲೂ, ಶಂಖ ಧ್ವನಿಗಳಿಂದಲೂ ಪುಲಕಿತರಾದ ಮತ್ತು ಹೃಷ್ಟರಾದ ರಥ-ಗಜಾಶ್ವ-ಪದಾತಿ ಸೈನಿಕರು ಶತ್ರುಗಳಿಗೆ ಅಭಿಮುಖವಾಗಿ ನಿಂತೊಡನೆಯೇ ಕೊಪಾವಿಷ್ಟರಾಗಿ ವಿಧ-ವಿಧವಾದ ಶಸ್ತ್ರಗಳಿಂದ ಶತ್ರುಗಳನ್ನು ಪ್ರಹರಿಸಿದರು. ಶ್ರೇಷ್ಠರಾದ ಪುರುಷರೂ, ಯೋಧರೂ ರಥ-ಗಜಾಶ್ವಾದಿ ವಾಹನಗಳಿಂದಲೂ, ಪಟ್ಟಿಶ ಗಳಿಂದಲೂ, ಅನೇಕವಿಧವಾದ ಬಾಣಗಳಿಂದಲೂ ಶತ್ರುಪಕ್ಷದ ರಥಿಕರನ್ನೂ, ಗಜಾಶ್ವಯೋಧರನ್ನೂ, ಪದಾತಿಗಳನ್ನೂ ಸಂಹರಿಸುತ್ತಿದ್ದರು.

ಆ ಸಮಯದಲ್ಲಿ ಕಮಲ, ಸೂರ್ಯ ಮತ್ತು ಚಂದ್ರರ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ, ಬಿಳಿಯ ಹಲ್ಲುಗಳ ಸಾಲುಗಳಿಂದ ಪರಿಶೋಭಿಸುತ್ತಿದ್ದ ಸುಂದರವಾದ ಮುಖಗಳಿಂದಲೂ, ಕಣ್ಣುಗಳಿಂದಲೂ ಶೋಭಾಯಮಾನವಾಗಿ ಕಾಣುತ್ತಿದ್ದ, ಸುಂದರವಾದ ಕಿರೀಟಗಳಿಂದಲೂ ಕುಂಡಲಗಳಿಂದಲೂ ಸಮಲಂಕೃತವಾಗಿದ್ದ ಪುರುಷರ ಶಿರಸ್ಸುಗಳಿಂದ ವ್ಯಾಪ್ತವಾಗಿದ್ದ ರಣಭೂಮಿಯು ಬಹುವಾಗಿ ಪ್ರಕಾಶಿಸುತ್ತಿದ್ದಿತು. ಪರಿಘ, ಮುಸಲ, ಶಕ್ತಿ, ತೋಮರ, ನಖರ, ಭುಶುಂಡೀ, ಗದೆ–ಇವೇ ಮೊದಲಾದ ನೂರಾರು ಆಯುಧಗಳಿಂದ ಹತರಾದ ಸಾವಿರಾರು ಗಜಾಶ್ವ-ಪದಾತಿಸೈನಿಕರು ರಣಾಂಗಣದಲ್ಲಿ ರಕ್ತದ ನದಿಯು ಪ್ರವಹಿಸಲು ಕಾರಣರಾದರು. ನಾನಾವಿಧವಾದ ಆಯುಧಗಳ ಪ್ರಹಾರಗಳಿಂದ ಶರೀರದಲ್ಲಿ ದೊಡ್ಡ-ದೊಡ್ಡ ಗಾಯಗಳನ್ನೂ ಹೊಂದಿದ್ದ ವಿಧ್ವಸ್ತವಾದ ನರಾಶ್ವ-ಗಜಗಳು ಭಯಂಕರವಾಗಿ ಕಾಣುತ್ತಿದ್ದುವು. ಶತ್ರುಗಳಿಂದ ಹತವಾಗಿದ್ದ ಚತುರಂಗಬಲವಿದ್ದ ಆ ರಣ ಭೂಮಿಯು ಪ್ರಳಯಕಾಲದಲ್ಲಿನ ಯಮನ ರಾಜ್ಯದಂತೆಯೇ ಪ್ರಕಾಶಿಸುತ್ತಿದ್ದಿತು.

ನರೇಶ್ವರ! ಅನಂತರ ನಿನ್ನ ಸೈನಿಕರೂ ಮತ್ತು ಸುರಸುತೋಪಮರಾದ, ಕುರುಶ್ರೇಷ್ಠರಾದ ನಿನ್ನ ಮಕ್ಕಳೂ ಅಸಂಖ್ಯಾತವಾದ ಚತುರಂಗಬಲವನ್ನು ಮುಂದೆ ಮಾಡಿಕೊಂಡು ಶಿನಿಯ ಮೊಮ್ಮಗನಾದ ಸಾತ್ಯಕಿಯನ್ನು ಆಕ್ರಮಿಸಿದರು. ಶ್ರೇಷ್ಠವಾದ ಪದಾತಿಸೈನಿಕರಿಂದಲೂ, ಅಶ್ವ-ರಥ-ಗಜಸೈನಿಕರಿಂದಲೂ ಸಂಪನ್ನವಾಗಿದ್ದ, ಸಮುದ್ರವು ಭೋರ್ಗರೆಯುವಂತೆ ಗರ್ಜನೆಮಾಡುತ್ತಿದ್ದ, ದೇವಾಸುರರ ಸೈನ್ಯಕ್ಕೆ ಸಮಾನವಾಗಿದ್ದ ನಿನ್ನ ಚತುರಂಗಬಲವು ರಕ್ತರಂಜಿತವಾಗಿಯೂ ಮತ್ತು ಭಯಂಕರವಾಗಿಯೂ ಪ್ರಕಾಶಿಸುತ್ತಿದ್ದಿತು. ದೇವರಾಜನಾದ ಇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮದಿಂದ ಕೂಡಿದ್ದ ಸೂರ್ಯನ ಮಗನಾದ ಕರ್ಣನು–ದೇವೇಂದ್ರನ ಅನುಜನಾದ ವಿಷ್ಣುವಿಗೆ ಸಮಾನ ವಿಕ್ರಮನಾದ ಶಿನಿಪ್ರವೀರನಾದ ಸಾತ್ಯಕಿಯನ್ನು ಸೂರ್ಯಕಿರಣಗಳ

ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ಬಾಣಗಳಿಂದ ಪ್ರಹರಿಸಿದನು. ಶಿನಿವಂಶಶಿರೋಮಣಿಯಾದ ಸಾತ್ಯಕಿಯು ಸರ್ಪದ ವಿಷಕ್ಕೆ ಸಮಾನವಾದ ನಂಜಿನಿಂದ ಯುಕ್ತವಾಗಿದ್ದ, ವಿಧ-ವಿಧವಾದ ಬಾಣಗಳಿಂದ ರಥಾಶ್ವ-ಸಾರಥಿಸಹಿತನಾದ ಕರ್ಣನನ್ನೂ ಬಹಳ ಶೀಘ್ರವಾಗಿ ಪ್ರಹರಿಸಿದನು. ಶಿನಿಶ್ರೇಷ್ಠನಾದ ಸಾತ್ಯಕಿಯ ಬಾಣಗಳಿಂದ ಪೀಡಿತನಾದ ನರರ್ಷಭನಾದ ಕರ್ಣನ ಬಳಿಗೆ ನಿನ್ನ ಸುಹೃದರಾದ ಅನೇಕ ಅತಿರಥ-ಮಹಾರಥರು ರಥ-ಗಜಾಶ್ವ-ಪದಾತಿಗಳೊಡನೆ ತ್ವರೆಯಿಂದ ಧಾವಿಸಿದರು. ಅನಂತರ ಅತಿತ್ವರಾಯುಕ್ತರಾದ ಧೃಷ್ಟದ್ಯುಮ್ನಪ್ರಮುಖರಾದ ಶತ್ರುಗಳು ಸಮುದ್ರ ಸದೃಶವಾದ ನಿನ್ನ ಸೈನ್ಯದ ಮೇಲೆ ದಾಳಿಮಾಡಿದರು. ಎರಡು ಪಕ್ಷಗಳ ಸೈನಿಕರಿಗೂ ದೊಡ್ಡ ಸಂಘರ್ಷವು ಪ್ರಾರಂಭವಾಯಿತು. ಫಲಿತಾಂಶವಾಗಿ ಅನೇಕ ರಥ-ಗಜಾಶ್ವ-ಪದಾತಿ ಸೈನಿಕರು ವಿನಾಶಹೊಂದಿದರು.

ಅನಂತರ ಪುರುಷಶ್ರೇಷ್ಠರಾದ ಅರ್ಜುನ-ಕೇಶವರು ಅಪರಾಹ್ಣಕಾಲದ ಸಂಧ್ಯಾಕಾರ್ಯಗಳನ್ನು ಮುಗಿಸಿ, ಪ್ರಭುವಾದ ಶಂಕರನನ್ನು ಯಥಾವಿಧಿ ಯಾಗಿ ಸಂಪೂಜಿಸಿ, ಶತ್ರುಗಳನ್ನು ವಧಿಸಬೇಕೆಂಬ ದೃಢನಿಶ್ಚಯದಿಂದ ಬಹಳಬೇಗ ನಿನ್ನ ಸೈನ್ಯದ ಕಡೆಗೆ ಧಾವಿಸಿದರು. ಮೇಘದ ಗರ್ಜನೆಗೆ ಸಮಾನವಾದ ಘೋಷದಿಂದ ಯುಕ್ತವಾಗಿದ್ದ, ಬಿಳಿಯ ಕುದುರೆಗಳಿಂದ ಸಜ್ಜಾಗಿದ್ದ ಅರ್ಜುನನ ರಥವು ತಮ್ಮ ಸಮೀಪಕ್ಕೆ ಬರುತ್ತಿರುವುದನ್ನು ಅವನ ಶತ್ರುಗಳು ಉತ್ಸಾಹಶೂನ್ಯರಾಗಿ ನೋಡಿದರು.

ಅನಂತರ ಅರ್ಜುನನು ರಥದಲ್ಲಿ ನರ್ತಿಸುತ್ತಿರುವನೋ ಎಂಬಂತೆ ಗಾಂಡೀವಧನುಸ್ಸನ್ನು ಟೇಂಕರಿಸಿ ಕ್ಷಣಮಾತ್ರದಲ್ಲಿ ಆಕಾಶವನ್ನೂ ದಿಕ್ಕು ಗಳನ್ನೂ ಉಪದಿಕ್ಕುಗಳನ್ನೂ ಬಾಣಗಳಿಂದ ತುಂಬಿಸಿದನು. ಬಿರುಗಾಳಿಯು ಮೇಘ ಮಂಡಲವನ್ನು ಚದುರಿಸಿಬಿಡುವಂತೆ–ಅರ್ಜುನನ ಬಾಣಗಳಿಂದ ಸಾರಥಿ ಸಹಿತವಾದ ಆಯುಧ-ಧ್ವಜಗಳಿಂದ ಕೂಡಿದ್ದ ವಿಮಾನಸದೃಶವಾದ ರಥ ಗಳನ್ನು ಮುಳುಗಿಸುತ್ತಾ ಯೋಧರನ್ನು ಸಂಹರಿಸಿದನು. ಅರ್ಜುನನು ಬಾಣ ಗಳಿಂದ ಪತಾಕಾ-ಧ್ವಜಾಯುಧಸಹಿತವಾದ ಆನೆಗಳನ್ನೂ, ಮಾವುತ ರನ್ನೂ, ಕುದುರೆಗಳನ್ನೂ, ಕುದುರೇಸವಾರರನ್ನೂ ಮತ್ತು ಕಾಲಾಳು

ಗಳನ್ನೂ ಯಮಾಲಯಕ್ಕೆ ಕಳುಹಿಸಿದನು. ಏಕೈಕವೀರನಾದ ದುರ್ಯೋಧನನು ಯಮ ರಾಜನಂತೆಯೇ ಬಹಳ ಕ್ರುದ್ಧನಾಗಿದ್ದ, ನಿವಾರಿಸಲು ಅಸಾಧ್ಯನಾಗಿದ್ದ, ಮಹಾರಥನಾದ ಅರ್ಜುನನನ್ನು ನೇರವಾಗಿ ಹೋಗುವ ಬಾಣಗಳಿಂದ ಪ್ರಹರಿಸುತ್ತಾ ಆಕ್ರಮಿಸಿದನು. ಅರ್ಜುನನು ಏಳು ಬಾಣಗಳಿಂದ ದುರ್ಯೋಧನನ ಸೂತನನ್ನೂ ಕುದುರೆಗಳನ್ನೂ ಸಂಹರಿಸಿ, ಧನುಸ್ಸನ್ನೂ-ಧ್ವಜವನ್ನೂ ಕತ್ತರಿಸಿ, ಎಂಟನೆಯ ಬಾಣದಿಂದ ಅವನ ತಲೆಯ ಮೇಲಿದ್ದ ಛತ್ರವನ್ನೂ ಕತ್ತರಿಸಿದನು. ಬಳಿಕ ಶ್ರೇಷ್ಠವಾದ ಮತ್ತು ಪ್ರಾಣಘಾತಿಯಾದ ಒಂಬತ್ತನೆಯ ಬಾಣವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ದುರ್ಯೋಧನನ ಮೇಲೆ ಪ್ರಯೋಗಿಸಿದನು. ಅಶ್ವತ್ಥಾಮನು ಆ ಬಾಣವನ್ನು ಮಧ್ಯದಲ್ಲಿಯೇ ಏಳು ತುಂಡುಗಳನ್ನಾಗಿ ಕತ್ತರಿಸಿದನು. ಅದನ್ನು ಕಂಡು ಕ್ರುದ್ಧನಾದ ಅರ್ಜುನನು ಬಾಣಗಳಿಂದ ಅಶ್ವತ್ಥಾಮನ ಧನುಸ್ಸನ್ನು ಕತ್ತರಿಸಿ ಕುದುರೆಗಳನ್ನೂ ಸಂಹರಿಸಿ ರಥವನ್ನೂ ಧ್ವಂಸಮಾಡಿದನು. ಅನಂತರ ಯುದ್ಧಕ್ಕೆ ಬಂದ ಕೃಪರ ಉಗ್ರವಾದ ಧನುಸ್ಸನ್ನೂ ಕತ್ತರಿಸಿದನು. ಬಳಿಕ ಅರ್ಜುನನು ಕೃತವರ್ಮನ ಧನುಸ್ಸನ್ನೂ ಮತ್ತು ಧ್ವಜವನ್ನೂ ಕತ್ತರಿಸಿ ಅವನ ರಥದ ಕುದುರೆಗಳನ್ನೂ ಸಂಹರಿಸಿದನಲ್ಲದೇ ದುಃಶಾಸನನ ಧನುಸ್ಸನ್ನೂ ಕತ್ತರಿಸಿ ಕರ್ಣನ ಸಮೀಪಕ್ಕೆ ಧಾವಿಸಿದನು. ಅರ್ಜುನನು ತನ್ನ ಮೇಲೆ ಆಕ್ರಮಣ ನಡೆಸಲು ಬರುತ್ತಿರುವುದನ್ನು ಗಮನಿಸಿದ ಕರ್ಣನು ಸಾತ್ಯಕಿಯನ್ನು ಬಿಟ್ಟು ಬಹಳ ಬೇಗ ಅರ್ಜುನನನ್ನು ಎದುರಿಸಿ ಮೂರು ಬಾಣಗಳಿಂದ ಅವನನ್ನು ಪ್ರಹರಿಸಿ ಇಪ್ಪತ್ತು ಬಾಣಗಳಿಂದ ಶ್ರೀಕೃಷ್ಣನನ್ನೂ ಪ್ರಹರಿಸಿದನು. ಕರ್ಣನು ಹೀಗೆ ಕೃಷ್ಣಾರ್ಜುನರಿಬ್ಬರನ್ನೂ ಬಾಣಗಳಿಂದ ಪುನಃ ಪುನಃ ಪ್ರಹರಿಸುತ್ತಲೇ ಇದ್ದನು. ಯುದ್ಧದಲ್ಲಿ ಶತ್ರುಗಳನ್ನು ಧ್ವಂಸಮಾಡುವ, ಕ್ರುದ್ಧನಾದ ಇಂದ್ರನಿಗೆ ದಣಿವೇ ಆಗದಿದ್ದಂತೆ–ನೂರಾರು ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಿದ್ದರೂ ಕರ್ಣನಿಗೆ ಕ್ಲೇಶವಾಗಲೀ, ಆಯಾಸವಾಗಲೀ ಉಂಟಾಗಲೇ ಇಲ್ಲ. ಆ ವೇಳೆಗೆ ಸಾತ್ಯಕಿಯು ಪುನಃ ಕರ್ಣನನ್ನು ಎದುರಿಸಿ ನಿಶಿತವಾದ ಬಾಣ

ಗಳಿಂದ ಪ್ರಹರಿಸಿ ಪುನಃ ಅವನನ್ನು ಉಗ್ರವಾದ ನೂರುತೊಂಬತ್ತೊಂಬತ್ತು ಬಾಣಗಳಿಂದ ಪ್ರಹರಿಸಿದನು. ಅನಂತರ ಪಾಂಡವರ ಕಡೆಯ ಶ್ರೇಷ್ಠರಾದ ವೀರರೆಲ್ಲರೂ ಕರ್ಣನನ್ನು ಬಾಣಗಳಿಂದ ಪೀಡಿಸಲು ಉಪಕ್ರಮಿಸಿದರು. ಯುಧಾಮನ್ಯು, ಶಿಖಂಡೀ, ದ್ರೌಪದಿಯ ಐವರು ಮಕ್ಕಳು, ಪ್ರಭದ್ರಕರು, ಉತ್ತಮೌಜಸ, ಯುಯುತ್ಸು, ನಕುಲ-ಸಹದೇವರು, ಧೃಷ್ಟದ್ಯುಮ್ನ, ಚೇದಿ-ಕಾರೂಷ-ಮತ್ಸ್ಯ-ಕೇಕಯಸೈನಿಕರು, ಬಲಿಷ್ಠನಾದ ಚೇಕಿತಾನ, ಸುವ್ರತನಾದ ಧರ್ಮರಾಜ–ಇವರೆಲ್ಲರೂ ಉಗ್ರವಿಕ್ರಮರಾದ ರಥ-ಗಜಾಶ್ವ- ಪದಾತಿಸೈನಿಕರಿಂದ ಕೂಡಿದವರಾಗಿ ಕರ್ಣನನ್ನು ನಾಲ್ಕು ದಿಕ್ಕುಗಳಿಂದಲೂ ಸುತ್ತುವರಿದರು. ಕರ್ಣನ ವಧೆಯಲ್ಲಿಯೇ ದೃಢನಿಶ್ಚಯರಾದ ಆ ಎಲ್ಲಯೋಧರೂ ಕರ್ಣನನ್ನು ಬಹಳ ಕಠಿನವಾದ ಮಾತುಗಳಿಂದ ದಂಡಿಸುತ್ತಾ ನಾನಾವಿಧವಾದ ಶಸ್ತ್ರಾಸ್ತ್ರಗಳಿಂದ ಮುಚ್ಚಿಬಿಟ್ಟರು. ಕರ್ಣನು ಶತ್ರುಪಕ್ಷದವರು ಅವ್ಯಾಹತವಾಗಿ ಬಿಡುತ್ತಿದ್ದ ಶರವೃಷ್ಟಿಯನ್ನು ನಿಶಿತವಾದ ಬಾಣಗಳಿಂದ ಕತ್ತರಿಸಿ–ಬಿರುಗಾಳಿಯು ವೃಕ್ಷಗಳನ್ನು ಬುಡಮೇಲುಮಾಡಿ ದೂರಕ್ಕೆಸೆಯುವಂತೆ– ಎಲ್ಲವನ್ನೂ ದೂರೀಕರಿಸಿದನು. ಸಂಕ್ರುದ್ಧನಾದ ಕರ್ಣನು ರಥಿಕರನ್ನೂ, ಮಾವಟಿಗರಿಂದ ಕೂಡಿದ ಆನೆಗಳನ್ನೂ, ಸವಾರರಿಂದ ಕೂಡಿದ ಕುದುರೆ ಗಳನ್ನೂ, ಪದಾತಿ ಸಮೂಹಗಳನ್ನೂ ಅಪಾರಸಂಖ್ಯೆಯಲ್ಲಿ ಸಂಹರಿಸುತ್ತಿದ್ದನು. ಕರ್ಣನ ಮಹಾಸ್ತ್ರಗಳ ತೇಜಸ್ಸಿನಿಂದ ವಧಿಸಲ್ಪಡುತ್ತಿದ್ದ ಪಾಂಡವರ ಸೈನ್ಯದ ಬಹುಭಾಗವು ಶಸ್ತ್ರ, ವಾಹನ, ಶರೀರ ಮತ್ತು ಪ್ರಾಣಗಳಿಂದ ವಿಹೀನವಾಯಿತು. ಉಳಿದ ಸೈನಿಕರು ಪ್ರಾಯಶಃ ಯುದ್ಧದಿಂದ ವಿಮುಖರಾಗಿ ಓಡಿಹೋದರು.

ಅರ್ಜುನನಾದರೋ ಹೀಗೆ ಕರ್ಣನು ಬಿಡುತ್ತಿದ್ದ ಅಸ್ತ್ರಗಳನ್ನು ಪ್ರತ್ಯಸ್ತ್ರಗಳಿಂದಲೇ ವಿನಾಶಗೊಳಿಸಿ ನಸುನಗುತ್ತಾ ಭೂಮ್ಯಂತರಿಕ್ಷ-ದಿಕ್ಕುಗಳನ್ನೂ ಬಾಣಗಳ ಮಳೆಯಿಂದ ಆಚ್ಛಾದಿಸಿದನು. ಅರ್ಜುನನು ಬಿಡುತ್ತಿದ್ದ ಬಾಣಗಳಲ್ಲಿ ಕೆಲವು ಬಾಣಗಳು ಶತಘ್ನಿಗಳ ರೂಪದಲ್ಲಿಯೂ, ಉಗ್ರವಾದ ವಜ್ರಾಯುಧಗಳ ರೂಪದಲ್ಲಿಯೂ ಶತ್ರುಗಳ ಮೇಲೆ ಬೀಳುತ್ತಿದ್ದುವು.

ಅಂತಹ ಬಾಣಗಳಿಂದ ಸತತವಾಗಿ ವಧಿಸಲ್ಪಡುತ್ತಿದ್ದ ರಥ-ಗಜಾಶ್ವ-ಪದಾತಿ ಸೈನಿಕರು ಕಣ್ಣುಗಳನ್ನು ಮುಚ್ಚಿಕೊಂಡು ಗಟ್ಟಿಯಾಗಿ ಕೂಗತೊಡಗಿದರು ಮತ್ತು ಚಡಪಡಿಸತೊಡಗಿದರು. ಆ ಸಮಯದಲ್ಲಿ ಗಜಾಶ್ವ-ಪದಾತಿಸೈನಿಕರು *ನಿಶ್ಚಿತವಾದ ಮರಣವೇ ಲಭಿಸುವ ಯುದ್ಧವನ್ನು ಪಡೆದುಕೊಂಡರು. (ಯುದ್ಧದಲ್ಲಿ ಕೌರವಸೈನಿಕರಿಗೆ ಮರಣವೇ ನಿಶ್ಚಯವಾಗಿ ಬಿಟ್ಟಿದ್ದಿತು.) ಅರ್ಜುನನ ಬಾಣಗಳಿಂದ ಸತತವಾಗಿ ಪೀಡಿಸಲ್ಪಡುತ್ತಿದ್ದ ಅವರೆಲ್ಲರೂ ಆರ್ತರಾಗಿ ಭಯಗೊಂಡು ಪಲಾಯನಮಾಡಿದರು.

ಈ ರೀತಿಯಲ್ಲಿ  ವಿಜಯೈಷಿಗಳಾಗಿದ್ದ ನಿನ್ನ ಕಡೆಯ ಸೈನಿಕರು ಯುದ್ಧದಲ್ಲಿ ತೊಡಗಿರಲಾಗಿ ಸೂರ್ಯನು ಅಸ್ತಾಚಲವನ್ನು ಸೇರಿ ಪಶ್ಚಿ ಮಾಂಬುಧಿಯಲ್ಲಿ ಮುಳುಗಿದನು. ಕತ್ತಲಿನಿಂದಲೂ ಮತ್ತು ಧೂಳಿನಿಂದಲೂ ವ್ಯಾಪ್ತವಾಗಿದ್ದ ಆ ರಣಾಂಗಣದಲ್ಲಿ ನಾವು ಶುಭವನ್ನಾಗಲೀ-ಅಶುಭವನ್ನಾಗಲೀ (ವಿಜಯವನ್ನಾಗಲೀ-ಪರಾಜಯವನ್ನಾಗಲೀ) ಕಾಣುತ್ತಿ ರಲಿಲ್ಲ. (ನಮಗೆ ಆ ಸಮಯದಲ್ಲಿ ಜಯವಾಗುತ್ತಿದೆಯೇ? ಪರಾಜಯ ವಾಗುತ್ತಿದೆಯೇ? ಎಂಬುದೂ ತಿಳಿಯುತ್ತಿರಲಿಲ್ಲ. ಯಾರು ಮಡಿದರು? ಯಾರು ಉಳಿದಿದ್ದಾರೆ? ಯಾರು ಪಲಾಯನಮಾಡುತ್ತಿದ್ದಾರೆ?–ಎಂಬು ದೊಂದೂ ನಮಗೆ ತಿಳಿಯುತ್ತಲೇ ಇರಲಿಲ್ಲ.) ಮಹಾಧನುಷ್ಮಂತರಾದ ಯೋಧರು ರಾತ್ರಿಯ ಯುದ್ಧದ ವಿಷಯ ದಲ್ಲಿ ಬಹಳವಾಗಿ ಭಯ ಗೊಂಡಿದ್ದರು. ಆದುದರಿಂದಲೇ ಅವರೆಲ್ಲರೂ ತಮ್ಮ ತಮ್ಮ ಯೋಧರೊಡನೆ ರಣಾಂಗಣದಿಂದ ಶಿಬಿರಗಳಿಗೆ ತೆರಳಿದರು. ಯುದ್ಧದ ಹದಿನಾರನೆಯ ದಿವಸದ ಕೊನೆಯಲ್ಲಿ ಕೌರವರೆಲ್ಲರೂ ಯೋಧರೊಡನೆ ತಮ್ಮ ತಮ್ಮ ಶಿಬಿರಗಳಿಗೆ ಹೊರಟುಹೋಗಲಾಗಿ, ಅಂದಿನ ಯುದ್ಧದಲ್ಲಿ ವಿಜಯವನ್ನು ಪಡೆದ ಪಾರ್ಥರು ಪ್ರಸನ್ನಚಿತ್ತರಾಗಿ ವಿಧವಿಧವಾದ ಮಂಗಳವಾದ್ಯ

---

* ಈ ಶ್ಲೋಕದಲ್ಲಿ ನಿಷ್ಕೈವಲ್ಯಂ ಎಂಬ ಪದವಿದೆ ಇದಕ್ಕೆ ವ್ಯಾಖ್ಯಾನಕಾರರು ನಿಶ್ಚಿತಂ ಕೈವಲ್ಯಂ ಮರಣಂ ಯಸ್ಮಿನ್ ತತ್=ನಿಷ್ಕೈವಲ್ಯಂ-ನಿಶ್ಚಿತವಾದ ಮರಣವು ಎಲ್ಲಿ ಲಭಿಸುವುದೋ ಅದು ಅರ್ಥಾತ್ ಯುದ್ಧ ಎಂದು ವ್ಯಾಖ್ಯಾನಿಸಿದ್ದಾರೆ. ಕೈವಲ್ಯ ಎಂದರೆ ಮೋಕ್ಷವೆಂದೂ ಅರ್ಥವಾಗುತ್ತದೆ.

ಗಳಿಂದಲೂ ಗರ್ಜನಾಪೂರ್ವಕವಾದ ಸಿಂಹನಾದಗಳಿಂದಲೂ ಶತ್ರುಗಳನ್ನು ಹಾಸ್ಯಮಾಡುತ್ತಾ, ಕೃಷ್ಣಾರ್ಜುನರನ್ನು ಸ್ತುತಿಸುತ್ತಾ, ಶಿಬಿರಗಳಿಗೆ ತೆರಳಿದರು.

ಪಾಂಡವವೀರರಿಂದ ಸೈನಿಕರು ಹಿಂದಕ್ಕೆ ಕರೆಸಲ್ಪಡಲಾಗಿ ಎಲ್ಲ ಸೈನಿಕರೂ ಮತ್ತು ರಾಜರೂ ಪಾಂಡವರನ್ನು ಆಶೀರ್ವದಿಸಿದರು. ಸೈನಿಕರನ್ನು ರಣಾಂಗಣದಿಂದ ಹಿಂದಕ್ಕೆ ಕರೆಸಿಕೊಂಡನಂತರ ಪ್ರಹೃಷ್ಟರಾದ ಪಾಂಡವರೂ ಮತ್ತು ರಾಜರೂ ಆ ರಾತ್ರಿಯಲ್ಲಿ ತಮ್ಮ ತಮ್ಮ ಶಿಬಿರಗಳಿಗೆ ಹೋಗಿ ವಿಶ್ರಾಂತಿಯನ್ನು ಪಡೆದರು.

ಅನಂತರ ರುದ್ರನ ಕ್ರೀಡಾಸ್ಥಳದಂತಿದ್ದ (ಶ್ಮಶಾನಪ್ರಾಯವಾಗಿದ್ದ) ಬಹುಘೋರವಾಗಿದ್ದ ಆ ರಣಭೂಮಿಗೆ ರಾಕ್ಷಸರೂ, ಪಿಶಾಚರೂ, ಮಾಂಸಾಶಿಗಳಾದ ಪ್ರಾಣಿಗಳೂ ಗುಂಪು-ಗುಂಪಾಗಿ ಹೋದುವು."

೩೦ನೆಯ ಅಧ್ಯಾಯವು ಮುಗಿಯಿತು.

## ೧೬ನೆಯ ದಿವಸದ ಯುದ್ಧವಿಶ್ಲೇಷಣೆ

೧ನೆಯ ಅಧ್ಯಾಯ: ವೈಶಂಪಾಯನರು ಜನಮೇಜಯನಿಗೆ ಕರ್ಣನ ವಧೆಯನ್ನು ಸಂಕ್ಷೇಪವಾಗಿ ಹೇಳುತ್ತಾರೆ. ಅಷ್ಟರಿಂದಲೇ ತೃಪ್ತನಾಗದ ಜನಮೇಜಯನು ಕಥೆಯನ್ನು ವಿಸ್ತರಿಸಿ ಹೇಳುವಂತೆ ಕೇಳಿಕೊಳ್ಳುತ್ತಾನೆ.

೨ನೆಯ ಅಧ್ಯಾಯ: ಸಂಜಯನು ಕರ್ಣನು ಹತನಾದನಂತರ ಧೃತರಾಷ್ಟ್ರನ ಸಮೀಪಕ್ಕೆ ಓಡಿಬರುತ್ತಾನೆ. (ಯುದ್ಧದ ವಾರ್ತೆಯನ್ನು ತಿಳಿಸಲು ಸಂಜಯನು ಬಂದಿರುವನೆಂದು ಧೃತರಾಷ್ಟ್ರನು ಭಾವಿಸಿರುತ್ತಾನೆ. ಕರ್ಣನು ಹತನಾದನೆಂಬ ವಿಷಯವು ಧೃತರಾಷ್ಟ್ರನಿಗಿನ್ನೂ ತಿಳಿದಿರುವುದಿಲ್ಲ.) 'ನಿನ್ನ ಹಿತದಲ್ಲಿಯೇ ಆಸಕ್ತರಾಗಿದ್ದ ಭೀಷ್ಮ-ದ್ರೋಣರ ವಧೆಯಾಯಿತೆಂಬುದನ್ನು ಕೇಳಿ ನಿನಗೆ ವ್ಯಥೆಯಾಗಲಿಲ್ಲವೇ?' ಎಂದು ಸಂಜಯನು ಪ್ರಶ್ನಿಸುತ್ತಾನೆ. ಅದಕ್ಕುತ್ತರವಾಗಿ ಧೃತರಾಷ್ಟ್ರನು ಭೀಷ್ಮ-ದ್ರೋಣರನ್ನು ಬಹಳವಾಗಿ ಪ್ರಶಂಸಿಸಿ 'ಅವರು ಹತರಾದುದರಿಂದ ನನ್ನ ಮನಸ್ಸಿಗೆ ವ್ಯಥೆಯಾಗಿದೆ. ಅವರು ಗತಿಸಿದನಂತರ ನನ್ನ ಮಕ್ಕಳೇನು ಮಾಡಿದರು?'–ಎಂದು ಪ್ರಶ್ನಿಸುತ್ತಾನೆ. ಈ ಪ್ರಕರಣದಲ್ಲಿ **ನಾರಾಯಣಾಸ್ತ್ರೇ ಚ ಹತೇ ದ್ರೋಣ ಪುತ್ರಸ್ಯ ಧೀಮತಃ। ಕಿಮಕುರ್ವತ ಮಾಮಕಾಃ..** ಎಂದು ನಾರಾಯಣಾಸ್ತ್ರದ ಪ್ರಸ್ತಾಪವನ್ನು

ಮಾಡುತ್ತಾನೆಯೇ ಹೊರತು ನಾರಾಯಣಾಸ್ತ್ರಕ್ಕಿಂತಲೂ ಮಿಗಿಲಾಗಿ ಒಂದು ಅಕ್ಷೌಹಿಣೀಸೈನಿಕರನ್ನು ಸಂಹರಿಸಿದ ಅಗ್ನೇಯಾಸ್ತ್ರದ ಪ್ರಸ್ತಾಪವನ್ನೇ ಮಾಡುವುದಿಲ್ಲ. ಕರ್ಣನ ಮರಣವಾರ್ತೆಯನ್ನು ಹೇಳುವ ಮೊದಲು ಸಂಜಯನು 'ನಿನ್ನ ಅಪರಾಧದಿಂದಲೇ ಈ ಅನರ್ಥಗಳೆಲ್ಲವೂ ನಡೆಯುತ್ತಿದೆ. ಆದುದರಿಂದ ನೀನು ದುಃಖಿಸಬೇಡ. **ದಿಷ್ಟೇ ನ ವ್ಯಥತೇ ಬುಧಃ**- ದೈವವಶಾತ್ ಪ್ರಾಪ್ತವಾಗುವ ಕಷ್ಟಗಳಿಗಾಗಿ ವಿದ್ವಾಂಸನು ದುಃಖಪಡುವುದಿಲ್ಲ' ಎಂದು ಸಮಾಧಾನರೂಪವಾದ ಪೀಠಿಕೆಯನ್ನು ಹೇಳುತ್ತಾನೆ.

೩ನೆಯ ಅಧ್ಯಾಯ: ದ್ರೋಣರ ವಧೆಯ ಅನಂತರದ ವೃತ್ತಾಂತವನ್ನು ಸಂಜಯನು ಇಲ್ಲಿಂದ ಪ್ರಾರಂಭಿಸಿ ಹೇಳುತ್ತಾನೆ. ಕರ್ಣನಿಗೆ ಸೇನಾಪತ್ಯವನ್ನು ವಹಿಸಿದುದು, ಅವನು ಸಾಧಿಸಿದ ಕಾರ್ಯ ಮತ್ತು ಅವಸಾನ–ಎಲ್ಲವನ್ನೂ ಸಂಕ್ಷೇಪವಾಗಿ ಈ ಅಧ್ಯಾಯದಲ್ಲಿ ಹೇಳುತ್ತಾನೆ. **ಹತ್ವಾ ಸಹಸ್ರಶೋ ಯೋಧಾನರ್ಜುನೇನ ನಿಪಾತಿತಃ**ಎಂಬಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೪ನೆಯ ಅಧ್ಯಾಯ: ಕರ್ಣನು ಹತನಾದನೆಂಬುದನ್ನು ಕೇಳಿ ದೊಡನೆಯೇ ಧೃತರಾಷ್ಟ್ರನು ಮೂರ್ಛಿತನಾಗುತ್ತಾನೆ. ಅಂತಃಪುರದ ಸ್ತ್ರೀಯ ರೆಲ್ಲರೂ ರೋದನಮಾಡುತ್ತಾರೆ. ಸಂಜಯನು ಎಲ್ಲರನ್ನೂ ಸಮಾಧಾನ ಗೊಳಿಸುತ್ತಾನೆ. ವಿದುರನು ಬಂದು ರಾಜನಿಗೆ ಶೈತ್ಯೋಪಚಾರಮಾಡುತ್ತಾನೆ. ಅಷ್ಟು ಹೊರತಾಗಿ ಈ ಸಂದರ್ಭದಲ್ಲಿ ಧೃತರಾಷ್ಟ್ರನೊಡನೆ ಅವನು ಯಾವ ಮಾತನ್ನೂ ಆಡುವುದಿಲ್ಲ. ರಾಜನು ಮೂರ್ಛೆಯಿಂದ ಎಚ್ಚರಗೊಳ್ಳುತ್ತಾನೆ. ಒಡನೆಯೇ ಸಂಜಯನನ್ನು ಕುರಿತು ರಾಜನು "ನನ್ನ ಮಗ ದುರ್ಯೋಧನ ನಿನ್ನೂ ಅವಸಾನಹೊಂದಲಿಲ್ಲವೇ?" ಎಂದು ಪ್ರಶ್ನಿಸುತ್ತಾನೆ. ಕರ್ಣನು ಹೋದಮೇಲೆ ದುರ್ಯೋಧನನು ಉಳಿದಿರಲಾರನೆಂಬುದೇ ಅವನ ನಿಶ್ಚಯವಾಗಿರುತ್ತದೆ. ಪದೇ-ಪದೇ ಈ ಮಾತನ್ನು ರಾಜನು ಹೇಳುತ್ತಲೇ ಇರುತ್ತಾನೆ. ಅಧ್ಯಾಯದ ಕಡೆಯಲ್ಲಿ ಸಂಜಯನು ದುಃಶಾಸನನು ಭೀಮನಿಂದ ಹತನಾದುದನ್ನೂ ಹೇಳಿಬಿಡುತ್ತಾನೆ.

೫ನೆಯ ಅಧ್ಯಾಯ: ಆದರೆ ದುಃಶಾಸನನ ಮರಣವಾರ್ತೆಯನ್ನು ಕೇಳಿದರೂ ರಾಜನು ಅವನಿಗಾಗಿ ಅಷ್ಟು ದುಃಖಪಡುವುದಿಲ್ಲ. ಕರ್ಣನು

ಸತ್ತುದಕ್ಕಾಗಿ ಹಲುಬುತ್ತಾನೆ. 'ಹತಂ ವೈಕರ್ತನಂ ಶ್ರುತ್ವಾ ಶೋಕೋ ಮರ್ಮಾಣಿ ಕೃನ್ತತಿ-ಕರ್ಣನು ಹತನಾದನೆಂಬುದನ್ನು ಕೇಳಿ ಅದರಿಂದ ಉಂಟಾದ ಶೋಕವು ನನ್ನ ಮರ್ಮಸ್ಥಳಗಳನ್ನು ಕತ್ತರಿಸುತ್ತಿದೆ'-ಎನ್ನುತ್ತಾನೆ ಧೃತರಾಷ್ಟ್ರ. ಮುಂದೆ ರಾಜನು 'ಕುರು-ಸೃಂಜಯರಲ್ಲಿ ಯಾರು ಬದುಕಿದ್ದಾರೆ?'–ಎಂದು ಪ್ರಶ್ನಿಸುತ್ತಾನೆ. ದ್ರೋಣರ ಅವಸಾನಪರ್ಯಂತವಾಗಿ ಹತರಾದವರೆಲ್ಲರನ್ನೂ ಸಂಜಯನು ಈ ಹಿಂದೆಯೇ ಧೃತರಾಷ್ಟ್ರನಿಗೆ ಹೇಳಿರುತ್ತಾನೆ. ಆದರೂ ಮನಸ್ಸಿನ ನೆಮ್ಮದಿಗಾಗಿ ಮತ್ತೊಮ್ಮೆ ಧೃತರಾಷ್ಟ್ರನು ಪ್ರಶ್ನಿಸುತ್ತಾನೆ. ಸಂಜಯನಿಲ್ಲಿ ಎಲ್ಲ ಯೋಧರ ಹೆಸರುಗಳನ್ನೂ ಹೇಳುವುದಿಲ್ಲ. ಮುಖ್ಯ-ಮುಖ್ಯರಾದವರ ಹೆಸರುಗಳನ್ನು ಮಾತ್ರವೇ ಹೇಳುತ್ತಾನೆ.

ಧೃತರಾಷ್ಟ್ರನ ಮಕ್ಕಳಲ್ಲಿಯೂ ಮುಖ್ಯರಾದವರ ಹೆಸರುಗಳನ್ನು ಮಾತ್ರವೇ ಹೇಳುತ್ತಾನೆ: ಭೀಷ್ಮ, ದ್ರೋಣರು, ಕರ್ಣ, ವಿವಿಂಶತಿ, ವಿಕರ್ಣ, ವಿಂದಾನುವಿಂದರು, ಸೈಂಧವ, ಲಕ್ಷ್ಮಣ, ದೌಃಶಾಸನಿ, ಭಗದತ್ತ, ಭೂರಿಶ್ರವಸ, ಶ್ರುತಾಯುಷ, ದುಃಶಾಸನ, ಸುದಕ್ಷಿಣ, ಕೋಸಲನರೇಶ, ವೃಷಸೇನ, ಶ್ರುತಾಯುಷ, ರುಕ್ಮರಥ, ಭಗೀರಥ, ವೃದ್ಧಕ್ಷತ್ರ, ಭಗದತ್ತನ ಮಗ, ಬಾಹ್ಲೀಕ, ಜಯತ್ಸೇನ, ದುರ್ಮುಖ, ದುಃಸಹ, ದುರ್ಮರ್ಷಣ, ದುರ್ವಿಷಹ, ಕಳಿಂಗ-ವೃಷಕರು, ವೃಷಕರ್ಮಾ, ಪೌರವ, ವಸಾತಿಗಳು, ಶೂರಸೇನರು, ಅಭೀಷಹರು, ಶಿಬಿಗಳು, ಕಳಿಂಗರು, ಗೋಪಾಲಕರು, ಸಂಶಪ್ತಕರು, ವೃಷಕಾಚಲರು, ಉಗ್ರಕರ್ಮಾ, ಓಘವಂತ, ಬೃಹಂತ, ಕ್ಷೇಮಧೂರ್ತಿ, ಜಲಸಂಧ, ಅಲಂಬುಷ, ಕರ್ಣ, ಅವನ ಸಹೋದರರು, ಕೇಕಯರು, ಮಾಲವ-ಮದ್ರಕರೇ ಮೊದಲಾದವರು ಹತರಾದರೆಂದು ಸಂಜಯನು ಹೇಳುತ್ತಾನೆ. ಈ ಹೆಸರುಗಳಲ್ಲಿ ಕಥಾಭಾಗದಲ್ಲಿ ಬಾರದಿರುವ ಹೆಸರುಗಳೂ ಇವೆ. ಓಘವಂತ ಎಂಬುದು ಇಲ್ಲಿ ಹೊರತಾಗಿ ಬೇರೆಲ್ಲೂ ಬಂದಿರುವುದಿಲ್ಲ. ಮರಣಹೊಂದಿರುವ ಧೃತರಾಷ್ಟ್ರನ ೬೯ಮಂದಿ ಮಕ್ಕಳಲ್ಲಿ ೭ಮಂದಿಯ ಹೆಸರುಗಳನ್ನು ಮಾತ್ರವೇ ಸಂಜಯನಿಲ್ಲಿ ಹೇಳುತ್ತಾನೆ.

೬ನೆಯ ಅಧ್ಯಾಯ: ಈ ಅಧ್ಯಾಯದಲ್ಲಿ ಪಾಂಡವರ ಕಡೆಯಲ್ಲಿ ಹತರಾದವರ ನಾಮಧೇಯಗಳನ್ನೂ ಸಂಜಯನು ಹೇಳುತ್ತಾನೆ. ಕುಂತಿ

ಗಳು, ನಾರಾಯಣರು, ಸತ್ಯಜಿತ, ವಿರಾಟ-ದ್ರುಪದರು, ಅಭಿಮನ್ಯು, ಅಂಬಷ್ಠಪುತ್ರ, ಬೃಹಂತ, ಮಣಿಮಂತ, ದಂಡಧಾರ, ಅಂಶುಮಂತ, ಚಿತ್ರಸೇನ, ನೀಲ, ವ್ಯಾಘ್ರದತ್ತ, ಚಿತ್ರಾಯುಧ, ಕೇಕಯರಾಜಕುಮಾರ, ಜನಮೇಜಯ, ರೋಚಮಾನರು, ಪುರುಜಿತ್, ಕುಂತಿಭೋಜ, ಅಭಿಭೂ, ಯುಧಾಮನ್ಯು, ಉತ್ತಮೌಜಸ, ಮಿತ್ರಕರ್ಮಾ, ಕ್ಷತ್ರಧರ್ಮಾ, ಕ್ಷತ್ರದೇವ, ಸುಚಿತ್ರ, ಚಿತ್ರಧರ್ಮಾ, ವಾರ್ಧಕ್ಷೇಮಿ, ಸೇನಾಬಿಂದುವಿನ ಮಗ, ಧೃಷ್ಟಕೇತು, ಸತ್ಯಧೃತಿ, ಸೇನಾಬಿಂದು, ಸುಕೇತು, ಸತ್ಯಧೃತಿ, ಮದಿರಾಶ್ವ, ಸೂರ್ಯದತ್ತ, ಶ್ರೇಣಿಮಂತ, ಮಾಗಧ, ಶಂಖ, ಉತ್ತರ, ವಸುದಾನ.

ಕೆಲವು ಹೆಸರುಗಳು ಎರಡು ಪಕ್ಷಗಳಲ್ಲಿಯೂ ಇವೆ. ಒಂದೇ ಹೆಸರಿನ ಬೇರೆ-ಬೇರೆಯವರೆಂದು ಭಾವಿಸಬೇಕು. ಇಲ್ಲಿ ದಂಡಧಾರನ ಹೆಸರಿದೆ. ದಂಡಧಾರನೆಂಬುವನು ಕೌರವಪಕ್ಷದಲ್ಲಿಯೂ ಇದ್ದಾನೆ. ಇವನನ್ನು ಅರ್ಜುನನು ಸಂಹರಿಸುತ್ತಾನೆ. ಧೃತರಾಷ್ಟ್ರನ ಮಕ್ಕಳಲ್ಲಿಯೂ ದಂಡಧಾರ ನೆಂಬುವನಿದ್ದಾನೆ. ಈ ಪ್ರಕರಣದಲ್ಲಿ ಹೇಳಿರುವ ಮಣಿಮಂತ-ದಂಡಧಾರರು ಅಣ್ಣ-ತಮ್ಮಂದಿರಿರಬಹುದು. ಅಥವಾ ಪಿತಾಪುತ್ರರಿರಬಹುದು. ಆದಿಪರ್ವ ೧೮೬-೭ರಲ್ಲಿಯೂ ಮತ್ತು ಉದ್ಯೋಗಪರ್ವ ೪೨೦-೨೧ರಲ್ಲಿಯೂ ಇವರ ನಾಮಧೇಯಗಳು ಒಟ್ಟಾಗಿಯೇ ನಿರೂಪಿತವಾಗಿವೆ. ಮತ್ತೊಂದು ಗಮನಿಸಬೇಕಾದ ವಿಷಯವೆಂದರೆ: ಇವರು ದ್ರೋಣರೊಡನೆ ಯುದ್ಧಮಾಡಿ ಮರಣಹೊಂದಿದ ವಿಷಯವು ಹಿಂದಿನ ಕಥಾಭಾಗದಲ್ಲಿ ಬಂದಿರುವುದಿಲ್ಲ. ಸಂಜಯನ ಹೇಳಿಕೆಯಿಂದ ಇವರು ದ್ರೋಣರಿಂದ ಹತರಾದರೆಂದು ತಿಳಿದುಬರುತ್ತದೆ.

ಹಿಂದೆ ನಾವು ಯುದ್ಧಪ್ರಕರಣವನ್ನು ವಿಶ್ಲೇಷಣೆಮಾಡುವಾಗ ಭೀಷ್ಮಪರ್ವದಲ್ಲಿ ಬರುವ ಶ್ವೇತನ ಪ್ರಕರಣವು ಹೆಚ್ಚು ಪಾಠವಿರಬಹುದೆಂದು ಅಭಿಪ್ರಾಯಪಟ್ಟಿದ್ದೆವು. ಅದರಂತೆ ಇಲ್ಲಿ ವಿರಾಟನ ಮಕ್ಕಳಾದ ಶಂಖ ಮತ್ತು ಉತ್ತರರ ಹೆಸರುಗಳು ಬಂದಿವೆಯೇ ಹೊರತು ಶ್ವೇತನ ಹೆಸರು ಬಂದಿರುವು ದಿಲ್ಲ. ಈ ಮಧ್ಯದಲ್ಲಿ ಘಟೋತ್ಕಚನ ಹೆಸರು ಬಿಟ್ಟುಹೋಗಿರುವುದು ಅಚ್ಚರಿ ಎನಿಸುತ್ತದೆ.

೭ನೆಯ ಅಧ್ಯಾಯ: ಈ ಅಧ್ಯಾಯದಲ್ಲಿ ಧೃತರಾಷ್ಟ್ರನ ಅಪೇಕ್ಷೆ ಯಂತೆ ಸಂಜಯನು ದುರ್ಯೋಧನನ ಪಕ್ಷದಲ್ಲಿ ಅಳಿದು ಉಳಿದವರು

ಯಾರೆಂಬುದನ್ನು ಹೇಳುತ್ತಾನೆ. ಹಾಗೆ ಹೇಳುವಾಗ ಸಂಜಯನು ಧೃತರಾಷ್ಟ್ರನಿಗೆ ಸಮಾಧಾನವಾಗುವ ರೀತಿಯಲ್ಲಿ ಶ್ಲೋಕಗಳ ವೃತ್ತವನ್ನೂ ಬದಲಾಯಿಸಿ ವೀರರ ವಿಶೇಷವರ್ಣನೆಯೊಡನೆ ಹೇಳುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಉಳಿದಿರುವ ಧೃತರಾಷ್ಟ್ರನ ಮಕ್ಕಳ ಹೆಸರುಗಳನ್ನು ಹೇಳುವಾಗಲೂ ಕೆಲವರ ನಾಮಧೇಯಗಳನ್ನು ಮಾತ್ರವೇ ಹೇಳುತ್ತಾನೆ. ಈ ಹೆಸರುಗಳಲ್ಲಿಯೂ ಸಹ ಸತ್ಯವ್ರತ ಮತ್ತು ಪುರುಮಿತ್ರ ಎಂಬ ಹೆಸರುಗಳು ಹಿಂದೆ ಬಂದಿರುವ ನೂರು ಹೆಸರುಗಳಲ್ಲಿ ಇರುವುದಿಲ್ಲ. ಆದಿಪರ್ವದ ೬೩ನೆಯ ಅಧ್ಯಾಯದಲ್ಲಿ ಧೃತರಾಷ್ಟ್ರನ ಮಕ್ಕಳಲ್ಲಿ ಮಹಾರಥರಾರೆಂಬುದನ್ನು ಹೇಳುವಾಗ ಜಯಃ **ಸತ್ಯವ್ರತಶ್ಚೈವ ಪುರುಮಿತ್ರಶ್ಚ ಭಾರತ ||೧೨೦||** ಎಂದಿದೆ. ಇವುಗಳು ಉಪನಾಮಗಳಿರಬಹುದೆಂದು ಹೇಳಬಹುದಾಗಿದೆ.

ದುರ್ಯೋಧನನ ಪಕ್ಷದಲ್ಲಿ ಉಳಿದಿರುವ ಧೃತರಾಷ್ಟ್ರನ ಮಕ್ಕಳಲ್ಲಿ ಸತ್ಯಸೇನ, ಶ್ರುತಾಯು, ಧೃತಾಯುಧ, ಚಿತ್ರಾಯುಧ, ಶ್ರುತವರ್ಮಾ, ಜಯ, ಶಲ, ಸತ್ಯವ್ರತ, ಪುರುಮಿತ್ರ, ದುಃಶಲರ ನಾಮಧೇಯಗಳು ಮಾತ್ರವೇ ಬಂದಿರುತ್ತವೆ.

ಸಂಜಯನು ತನ್ನ ಪಕ್ಷದಲ್ಲಿ ಉಳಿದಿರುವ ವೀರರನ್ನು ಹೆಸರಿಸಿದ ನಂತರವೂ ತನ್ನ ಪಕ್ಷಕ್ಕೆ ವಿಜಯವು ಸಿಕ್ಕಲಾರದೆಂದು ಸುದೃಢವಾಗಿ ಧೃತರಾಷ್ಟ್ರನು ಹೇಳುತ್ತಾನೆ. ಪುನಃ ಮೂರ್ಛೆಹೋಗುತ್ತಾನೆ.

೮ನೆಯ ಅಧ್ಯಾಯ: ಧೃತರಾಷ್ಟ್ರನು ಕರ್ಣನಿಗಾಗಿ ಬಹಳ ದುಃಖಿಸುತ್ತಾನೆ. ಕರ್ಣನ ವಧೆಯಾಯಿತೆಂಬುದನ್ನು ನಂಬಲೇ ಸಾಧ್ಯವಿಲ್ಲವೆನ್ನುತ್ತಾನೆ. ಅವನೊಬ್ಬನಾದರೂ ತನ್ನ ಮಗನಿಗೆ ವಿಜಯವನ್ನು ಗಳಿಸಿಕೊಡುವನೆಂಬ ಆಶೆಯು ಧೃತರಾಷ್ಟ್ರನಿಗೆ ಬಹಳವಾಗಿದ್ದಿತು. ಈ ಅಧ್ಯಾಯದಲ್ಲಿ ಕರ್ಣನ ಸಾಹಸಕಾರ್ಯಗಳನ್ನು ರಾಜನು ನೆನೆದುಕೊಂಡು ವಿಲಪಿಸುತ್ತಾನೆ. ತನಗೆ ಈ ದುಃಖವನ್ನು ಸಹಿಸಲು ಸಾಧ್ಯವಾಗಲಾರದೆಂದೂ ವಿಷಪ್ರಾಶನ, ಅಗ್ನಿ ಪ್ರವೇಶವೇ ಮೊದಲಾದ ಯಾವುದಾದರೂ ಉಪಾಯದಿಂದ ಪ್ರಾಣತ್ಯಾಗ ಮಾಡುವೆನೆನ್ನುತ್ತಾನೆ. ಧೃತರಾಷ್ಟ್ರನಿಗೆ ಕರ್ಣನ ಮೇಲೆ ಅಷ್ಟೊಂದು ವಿಶ್ವಾಸವಿರುತ್ತದೆ.

೯ನೆಯ ಅಧ್ಯಾಯ: ಈ ಅಧ್ಯಾಯದಲ್ಲಿಯೂ ಕರ್ಣನ ಸಲುವಾಗಿ ಧೃತರಾಷ್ಟ್ರನ ವಿಲಾಪವೇ ಮುಂದುವರಿಯುತ್ತದೆ. 'ಅಹೋ ನು ಬಲವ ದ್ದೈವಂ ಕಾಲಶ್ಚ ದುರತಿಕ್ರಮಃ-ದೈವವು ಬಲಿಷ್ಠವಾದುದು; ಕಾಲವು ಅನತಿಕ್ರಮಣೀಯ' (೨೦) ಎಂದು ಉದ್ಗಾರಹಾಕುತ್ತಾನೆ. ಈ ಸಂದರ್ಭದಲ್ಲಿ ದುಃಶಾಸನನ ವಿಷಯವನ್ನೂ ಒಮ್ಮೆ ಪ್ರಸ್ತಾಪಮಾಡುತ್ತಾನೆ. ಆದರೆ ಅವನಿಗಾಗಿ ರಾಜನು ಹೆಚ್ಚು ಶೋಕಪಡುವುದಿಲ್ಲ. ಕರ್ಣನ ಸಂಹಾರವೂ ಅನ್ಯಾಯದಿಂದಲೇ ಆಗಿರಬಹುದೆಂದು ಧೃತರಾಷ್ಟ್ರನು ಶಂಕಿಸುತ್ತಾನೆ. ಭೀಷ್ಮ-ದ್ರೋಣರ ಸಂಹಾರವು ನ್ಯಾಯಸಮ್ಮತವಾದ ರೀತಿಯಲ್ಲಿ ನಡೆಯಲಿಲ್ಲ ವೆಂಬುದು ಅವನ ಅಭಿಪ್ರಾಯವಾಗಿರುತ್ತದೆ. **ಅನ್ತರೇಣ ಹತಾವೇತೌ ಛಲೇನ ಚ ವಿಶೇಷತಃ ॥೩೯॥** 'ಛಿದ್ರಾನ್ವೇಷಣದಿಂದಲೇ ಇವರು ಕೊಲ್ಲಲ್ಪಟ್ಟರು.'

ಸರ್ಪಬಾಣವನ್ನು ಹೊಂದಿದ್ದ ಕರ್ಣನು ಹೇಗೆ ಮೃತನಾದನೆಂಬುದು ಧೃತರಾಷ್ಟ್ರನಿಗೆ ದೊಡ್ಡ ಸಮಸ್ಯೆಯಾಗಿರುತ್ತದೆ. ಅದು ಹೇಗೆ ವ್ಯರ್ಥವಾಗಿ ಹೋಯಿತೆಂದು ಸಂಜಯನನ್ನು ಪುನಃ ಪುನಃ ಪ್ರಶ್ನಿಸುತ್ತಾನೆ. ಧೃತರಾಷ್ಟ್ರನಿಗೆ ಭೀಷ್ಮ-ದ್ರೋಣ-ಕರ್ಣರು ಹತರಾದನಂತರ ತನ್ನ ಜೀವಿತವೂ ವ್ಯರ್ಥ ವೆನಿಸುತ್ತದೆ. 'ಪಾಂಡವರು ಕರ್ಣನನ್ನು ಸಂಹರಿಸಿದರೆಂಬ ವಾರ್ತೆಯನ್ನು ಕೇಳಲೂ ನನಗೆ ಸಹನೆಯಿಲ್ಲ. ಇದನ್ನು ನಾನು ಸಹಿಸಿಕೊಳ್ಳಲಾರೆನು'– ಎನ್ನುತ್ತಾನೆ ಧೃತರಾಷ್ಟ್ರ. ಕಡೆಗೆ ಕರ್ಣನು ಹೇಗೆ ಯುದ್ಧಮಾಡಿದನೆಂಬುದನ್ನು ವಿಸ್ತಾರವಾಗಿ ಹೇಳುವಂತೆ ರಾಜನು ಸಂಜಯನಿಗೆ ಹೇಳುತ್ತಾನೆ.

೧೦ನೆಯ ಅಧ್ಯಾಯ:- ಈ ಅಧ್ಯಾಯದಲ್ಲಿ ಸಂಜಯನು ದ್ರೋಣರು ಹತರಾದನಂತರದ ವಾರ್ತೆಯನ್ನು ಧೃತರಾಷ್ಟ್ರನಿಗೆ ಹೇಳಲು ಉಪಕ್ರಮಿಸು ತ್ತಾನೆ. ಅಶ್ವತ್ಥಾಮನ ಪ್ರಯತ್ನವು ವಿಫಲವಾದುದನ್ನು ಹೇಳಿ ಅಲ್ಲಿಂದ ಮುಂದಿನ ವೃತ್ತಾಂತವನ್ನು ಹೇಳುತ್ತಾನೆ. ದುರ್ಯೋಧನನು ತನ್ನ ಸೈನ್ಯವನ್ನು ಹುರಿದುಂಬಿಸಿ ಯುದ್ಧವನ್ನು ಮುಂದುವರಿಸಿದ ವಿಷಯವು ಈ ಅಧ್ಯಾಯ ದಿಂದ ನಮಗೆ ತಿಳಿದುಬರುತ್ತದೆ. **ಯುದ್ಧ್ವಾ ಚ ಸುಚಿರಂ ಕಾಲಂ ಪಾಣ್ಡವೈಃ ಸಹ ಭಾರತ । ಸಂಧ್ಯಾಕಾಲಂ ಸಮಾಸಾದ್ಯ ಪ್ರತ್ಯಾಹಾರ ಮಕಾರಯತ್ ॥೫॥**

ದುರ್ಯೋಧನನು ದ್ರೋಣರು ಹತರಾದನಂತರ ಮುಂದಿನ ಯುದ್ಧದ ವ್ಯವಸ್ಥೆಯ ಬಗೆಗೆ ತನ್ನ ಮಿತ್ರಾಮಾತ್ಯರೊಡನೆ ಸಮಾಲೋಚನೆ ನಡೆಸುತ್ತಾನೆ. ಆ ಸಮಯದಲ್ಲಿ ರಾಜನ ಅಭಿಪ್ರಾಯವನ್ನು ತಿಳಿದು ಅಶ್ವತ್ಥಾಮನು ಕರ್ಣನಿಗೆ ಸೇನಾಪತ್ಯವನ್ನು ವಹಿಸಬೇಕೆಂಬ ಸಲಹೆಯನ್ನು ನೀಡುತ್ತಾನೆ. **ಕರ್ಣಂ ಸೇನಾಪತಿಂ ಕೃತ್ವಾ ಪ್ರಮಥಿಷ್ಯಾಮಹೇ ರಿಪೂನ್ ||೧೬||**

ಅಶ್ವತ್ಥಾಮನ ಈ ಮಾತನ್ನು ಕೇಳಿ ದುರ್ಯೋಧನನಿಗೆ ಅಮಿತಾನಂದ ವಾಗುತ್ತದೆ. ಕರ್ಣನನ್ನು ಕುರಿತು ಯುಕ್ತಿಯುಕ್ತವಾದ ಸಮಯೋಚಿತವಾದ, ಉತ್ತೇಜಕವಾದ ಮಾತುಗಳನ್ನಾಡುತ್ತಾನೆ. ಕರ್ಣನೂ ಸಹ ಪಾಂಡವರನ್ನು ಜಯಿಸುವುದಾಗಿ ದುರ್ಯೋಧನನಿಗೆ ಆಶ್ವಾಸನೆಯನ್ನು ನೀಡುತ್ತಾನೆ. ವಿಧಿಪೂರ್ವಕವಾಗಿ ಕರ್ಣನಿಗೆ ಪಟ್ಟಾಭಿಷೇಕಮಾಡುತ್ತಾರೆ. ಕರ್ಣನನ್ನು ಸೇನಾಪತಿಯನ್ನಾಗಿ ಮಾಡಿ ತಾನು ಕೃತಕೃತ್ಯನಾದೆನೆಂದು ದುರ್ಯೋಧನನು ಭಾವಿಸುತ್ತಾನೆ.

೧೧ನೆಯ ಅಧ್ಯಾಯ: ಹದಿನಾರನೆಯ ದಿವಸದ ಯುದ್ಧಕ್ಕೆ ಸೈನ್ಯವನ್ನು ಸಜ್ಜುಗೊಳಿಸುತ್ತಾರೆ. ಕರ್ಣನು ಅಂದು ಮಕರವ್ಯೂಹವನ್ನು ರಚಿಸುತ್ತಾನೆ. ಐದನೆಯ ದಿವಸದ ಯುದ್ಧದಲ್ಲಿ ಭೀಷ್ಮರು ಇದೇ ವ್ಯೂಹವನ್ನು ರಚಿಸಿದ್ದರು. ಇದಕ್ಕೆ ಪ್ರತಿಯಾಗಿ ಪಾಂಡವರು ಅರ್ಧಚಂದ್ರಾಕಾರವ್ಯೂಹವನ್ನು ರಚಿಸುತ್ತಾರೆ. ಹಿಂದೆ ಪಾಂಡವರು ಮಕರವ್ಯೂಹಕ್ಕೆ ಎದುರಾಗಿ ಶ್ಯೇನವ್ಯೂಹ ವನ್ನು ರಚಿಸಿದ್ದರು. ಕರ್ಣನನ್ನು ಸೇನಾಪತಿಯನ್ನಾಗಿ ಪಡೆದುಕೊಂಡು ಕೌರವರು ದ್ರೋಣರ ಮರಣದಿಂದಾದ ದುಃಖವನ್ನೂ ಮರೆತುಬಿಡುತ್ತಾರೆ. **ನ ದ್ರೋಣವ್ಯಸನಂ ಕಶ್ಚಿಜ್ಜಾನೀತೇ ತತ್ರ ಭಾರತ ||೩೯||** ಅನಂತರ ಎರಡೂ ಪಕ್ಷಗಳ ಸೈನಿಕರಿಗೂ ಘೋರವಾದ ಯುದ್ಧವು ಪ್ರಾರಂಭವಾಗುತ್ತದೆ.

೧೨ನೆಯ ಅಧ್ಯಾಯ: ಮೊದಲಿನಲ್ಲಿ ಯೋಧರ ಯುದ್ಧದ ವರ್ಣನೆಯಿದೆ. ಅನಂತರ ಭೀಮಸೇನನಿಗೂ ಮತ್ತು ಕ್ಷೇಮಧೂರ್ತಿಗೂ ನಡೆದ ಯುದ್ಧವನ್ನು ಸಂಜಯನು ವರ್ಣಿಸುತ್ತಾನೆ. ಅವರಿಬ್ಬರೂ ಆನೆಗಳ ಮೇಲೆ ಕುಳಿತು ಯುದ್ಧಮಾಡುತ್ತಿರುತ್ತಾರೆ. ಕಡೆಗೆ ಭೀಮಸೇನನು ಕ್ಷೇಮ

ಧೂರ್ತಿಯ ಆನೆಯನ್ನು ಸಂಹರಿಸಿ ಅವನನ್ನೂ ಸಂಹರಿಸುತ್ತಾನೆ. ಕೌರವರ ಕಡೆಯ ಸೈನಿಕರು ಪಲಾಯನಮಾಡುತ್ತಾರೆ.

೧೩ನೆಯ ಅಧ್ಯಾಯ: ಮೊದಲಲ್ಲಿ ಕರ್ಣನ ಪರಾಕ್ರಮದ ಕಥನವಿದೆ. ನಕುಲನು ಕರ್ಣನೊಡನೆ ಯುದ್ಧದಲ್ಲಿ ತೊಡಗುತ್ತಾನೆ. ಭೀಮಸೇನನು ಅಶ್ವತ್ಥಾಮನೊಡನೆಯೂ, ಸಾತ್ಯಕಿಯು ವಿಂದಾನುವಿಂದರೊಡನೆಯೂ ಯುದ್ಧಮಾಡುತ್ತಾರೆ. ಶ್ರುತಕರ್ಮನು ಚಿತ್ರಸೇನನನ್ನೂ, ಪ್ರತಿವಿಂಧ್ಯನು ಚಿತ್ರನನ್ನೂ ಎದುರಿಸಿ ಯುದ್ಧಮಾಡುತ್ತಾರೆ. ದುರ್ಯೋಧನನು ಧರ್ಮಪುತ್ರ ನೊಡನೆ ಯುದ್ಧಮಾಡುತ್ತಾನೆ. ಅರ್ಜುನನು ಸಂಶಪ್ತಕರೊಡನೆಯೂ, ಧೃಷ್ಟದ್ಯುಮ್ನನು ಕೃಪರೊಡನೆಯೂ ಯುದ್ಧಮಾಡುತ್ತಾರೆ. ಶಿಖಂಡಿಯು ಕೃತವರ್ಮನನ್ನು ಎದುರಿಸುತ್ತಾನೆ. ಶ್ರುತಕೀರ್ತಿಯು ಶಲ್ಯನನ್ನೂ, ಸಹದೇವನು ದುಃಶಾಸನನನ್ನೂ ಎದುರಿಸಿ ಯುದ್ಧಮಾಡುತ್ತಾರೆ. ವಿಂದಾನುವಿಂದರೂ ಕೇಕಯರಾಜರೂ ಸಾತ್ಯಕಿಯೊಡನೆ ಯುದ್ಧಮಾಡುತ್ತಾರೆ. ಸಾತ್ಯಕಿ ಮತ್ತು ವಿಂದಾನುವಿಂದರ ಯುದ್ಧದ ವರ್ಣನೆಯು ಅಧ್ಯಾಯದ ಕಡೆಯವರೆಗೂ ಇದೆ. ವಿಂದಾನುವಿಂದರು ಸಾತ್ಯಕಿಯಿಂದ ಹತರಾಗುತ್ತಾರೆ. ಅನಂತರ ಸಾತ್ಯಕಿಯು ಕೇಕಯಸೈನ್ಯವನ್ನೂ ಧ್ವಂಸಮಾಡುತ್ತಾನೆ. ಸೈನಿಕರು ಸಾತ್ಯಕಿಯನ್ನು ಬಿಟ್ಟು ಪಲಾಯನಮಾಡುತ್ತಾರೆ.

೧೪ನೆಯ ಅಧ್ಯಾಯ: ದ್ರೌಪದಿಯ ಮಗನಾದ ಶ್ರುತಕರ್ಮನಿಗೂ ಚಿತ್ರಸೇನನಿಗೂ ಯುದ್ಧವು ಪ್ರಾರಂಭವಾಗುತ್ತದೆ. ಚಿತ್ರಸೇನನು ಅಭಿಸಾರ ದೇಶದ ಅರಸು. ಭಯಂಕರಯುದ್ಧದ ಕಡೆಯಲ್ಲಿ ಶ್ರುತಕರ್ಮನು ಚಿತ್ರಸೇನ ನನ್ನು ಸಂಹರಿಸುತ್ತಾನೆ. ಚಿತ್ರಸೇನನ ಸೈನಿಕರು ಪಲಾಯನಮಾಡುತ್ತಾರೆ. ಅನಂತರ ಇದೇ ಅಧ್ಯಾಯದಲ್ಲಿ ಪ್ರತಿವಿಂಧ್ಯ ಮತ್ತು ಚಿತ್ರರ ಯುದ್ಧದ ವರ್ಣನೆಯಿದೆ. ಚಿತ್ರನು ಕೌರವರ ಪಕ್ಷದ ಒಬ್ಬ ವೀರಯೋಧ. ಇವನನ್ನು ಪ್ರತಿವಿಂಧ್ಯನು ತೋಮರದಿಂದ ಸಂಹರಿಸುತ್ತಾನೆ. ಭೀಮಾಶ್ವತ್ಥಾಮರ ಯುದ್ಧದ ಪೀಠಿಕೆಯೊಂದಿಗೆ ಅಧ್ಯಾಯವು ಮುಗಿಯುತ್ತದೆ.

೧೫ನೆಯ ಅಧ್ಯಾಯ: ಅಧ್ಯಾಯವು ಭೀಮಾಶ್ವತ್ಥಾಮರ ಯುದ್ಧದ ವರ್ಣನೆಯಿಂದ ಪ್ರಾರಂಭವಾಗುತ್ತದೆ. ಅಧ್ಯಾಯಪೂರ್ತಿಯಾಗಿ ಇವರ

ಯುದ್ಧದ ವರ್ಣನೆಯೇ ಇದೆ. ಕಟ್ಟಕಡೆಗೆ ಯಾರೂ ಸೋಲುವುದೂ ಇಲ್ಲ; ಗೆಲ್ಲುವುದೂ ಇಲ್ಲ. ಪರಸ್ಪರಪ್ರಹಾರಗಳಿಂದ ಮೂರ್ಛಿತರಾಗಿ ಇಬ್ಬರೂ ಕೆಳಗೆ ಬೀಳುತ್ತಾರೆ. ನಿಪೇತತುರ್ಮಹಾವೀರ್ಯೌ ರಥೋಪಸ್ಥೇ ತಯೋಸ್ತದಾ ॥೪೨॥ ಮೂರ್ಛಿತರಾದ ಭೀಮಾಶ್ವತ್ಥಾಮರನ್ನು ನೋಡಿ ಇಬ್ಬರ ಸಾರಥಿಗಳೂ ರಥಗಳನ್ನು ರಣಭೂಮಿಯಿಂದ ಹೊರಕ್ಕೆ ಒಯ್ಯುತ್ತಾರೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೧೬ನೆಯ ಅಧ್ಯಾಯ: ಈ ಅಧ್ಯಾಯವು ಅರ್ಜುನ-ಸಂಶಪ್ತಕರ ಯುದ್ಧದೊಡನೆ ಪ್ರಾರಂಭವಾಗುತ್ತದೆ. ಅರ್ಜುನನ ಪರಾಕ್ರಮದ ವರ್ಣನೆ ಯಿದೆ. ಸಿದ್ಧ-ಚಾರಣರೂ ಇದನ್ನು ಹೊಗಳುತ್ತಾರೆ. ದೇವದುಂದುಭಿಗಳು ಮೊಳಗುತ್ತವೆ. ಕೃಷ್ಣಾರ್ಜುನರ ಮೇಲೆ ಪುಷ್ಪವೃಷ್ಟಿಯಾಗುತ್ತದೆ. ಆ ಸಮಯದಲ್ಲಿ ಅಶ್ವತ್ಥಾಮನು ಅರ್ಜುನನೊಡನೆ ಯುದ್ಧಮಾಡಲು ಬರುತ್ತಾನೆ. ಶ್ರೀಕೃಷ್ಣನ ಸಲಹೆಯಂತೆ ಅರ್ಜುನನು ಅಶ್ವತ್ಥಾಮನೊಡನೆ ಯುದ್ಧಮಾಡು ತ್ತಾನೆ. ಅಶ್ವತ್ಥಾಮನ ಕೈ ಮೇಲಾಗುತ್ತದೆ. ಶ್ರೀಕೃಷ್ಣನು ಅರ್ಜುನನನ್ನು ಹುರಿದುಂಬಿಸುವ ಮಾತುಗಳನ್ನಾಡುತ್ತಾನೆ. ಕ್ಷಣಮಾತ್ರದಲ್ಲಿ ಅಶ್ವತ್ಥಾಮನು ಬಿಟ್ಟ ಬಾಣಗಳೆಲ್ಲವನ್ನೂ ಕಿರೀಟಿಯು ಧ್ವಂಸಮಾಡುತ್ತಾನೆ. ಆದರೆ ಮುಂದೆ ಅಶ್ವತ್ಥಾಮನೊಡನೆ ಯುದ್ಧವನ್ನು ಮುಂದುವರಿಸುವುದಿಲ್ಲ. ಪುನಃ ಸಂಶಪ್ತಕ ರೊಡನೆಯೇ ಯುದ್ಧದಲ್ಲಿ ತೊಡಗುತ್ತಾನೆ. ಸಂಶಪ್ತಕರ ಸಮೂಹವನ್ನು ಅರ್ಜುನನು ಸಂಪೂರ್ಣವಾಗಿ ಧ್ವಂಸಮಾಡುತ್ತಾನೆ. ಈ ಮಧ್ಯದಲ್ಲಿ ಅಶ್ವತ್ಥಾಮನು ಅರ್ಜುನನೊಡನೆ ಯುದ್ಧಕ್ಕೆ ಬರುತ್ತಾನೆ. ಅರ್ಜುನನು ಸಂಶಪ್ತಕರನ್ನು ವಿಸರ್ಜಿಸಿ ಪುನಃ ಅಶ್ವತ್ಥಾಮನೊಡನೆ ಯುದ್ಧದಲ್ಲಿ ತೊಡಗುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೧೭ನೆಯ ಅಧ್ಯಾಯ: ಅಧ್ಯಾಯದ ಮೊದಲಿನಲ್ಲಿ ಅಶ್ವತ್ಥಾಮಾರ್ಜುನರ ಯುದ್ಧದ ವರ್ಣನೆಯಿದೆ. ಈ ಅಧ್ಯಾಯದಲ್ಲಿಯೂ ಅಶ್ವತ್ಥಾಮನು ಮೃತ್ಯುವೂ ವ್ಯಥೆಪಡುವಂತಹ ಬಾಣಗಳನ್ನು ಕೃಷ್ಣಾರ್ಜುನರ ಮೇಲೆ ಪ್ರಯೋಗಿಸುತ್ತಾನೆ. ಮೃತ್ಯುರಪಿ ವ್ಯಥೇತ (೬) ಅರ್ಜುನನು ದ್ರೌಣಿಯ ಬಾಣಗಳನ್ನು ನಿವಾರಣೆಮಾಡಿಕೊಂಡು ಅವನನ್ನು ಬಾಣಗಳಿಂದ

ಮುಚ್ಚಿ ಪುನಃ ಸಂಶಪ್ತಕರೊಡನೆ ಯುದ್ಧವನ್ನು ಪ್ರಾರಂಭಿಸುತ್ತಾನೆ. ಸಂಶಪ್ತಕರನ್ನು ಧ್ವಂಸಮಾಡಿದ ಸುಂದರವಾದ ವರ್ಣನೆಯಿದೆ. ಅವರನ್ನು ಧ್ವಂಸಮಾಡಿದನಂತರ ಪುನಃ ಅರ್ಜುನನು ಅಶ್ವತ್ಥಾಮನನ್ನು ಬಲವಾಗಿ ಪ್ರಹರಿಸಿ ಅವನ ಕುದುರೆಗಳ ಕಡಿವಾಣಗಳನ್ನೂ ಕತ್ತರಿಸಿ ಕುದುರೆಗಳನ್ನೂ ಬಾಣಗಳಿಂದ ಪ್ರಹರಿಸುತ್ತಾನೆ. ಭಯಗೊಂಡ ಕುದುರೆಗಳು ರಣಾಂಗಣದಿಂದ ಬಹಳ ದೂರಕ್ಕೆ ಓಡಿಹೋಗುತ್ತವೆ. ಅರ್ಜುನನಿಗೆ ಜಯವು ಕಟ್ಟಿಟ್ಟಿದೆಂಬುದನ್ನು ಮನಗಂಡ ಅಶ್ವತ್ಥಾಮನು ಪುನಃ ಅರ್ಜುನನೊಡನೆ ಯುದ್ಧಕ್ಕೆ ಹೋಗಲು ಇಚ್ಛಿಪಡುವುದಿಲ್ಲ. ಕರ್ಣನ ಸಮೀಪಕ್ಕೆ ಹೊರಟುಹೋಗುತ್ತಾನೆ. ಪುನಃ ಕೃಷ್ಣಾರ್ಜುನರು ಸಂಶಪ್ತಕಸೈನ್ಯದೊಡನೆ ಯುದ್ಧಮಾಡಲು ಹೊರಟುಹೋಗುತ್ತಾರೆ.

೧೮ನೆಯ ಅಧ್ಯಾಯ: ದಂಡಧಾರನ ದಾಳಿಯೊಡನೆ ಅಧ್ಯಾಯವು ಪ್ರಾರಂಭವಾಗುತ್ತದೆ. ದಂಢದಾರನು ಆನೆಯ ಮೇಲೆ ಕುಳಿತು ಯುದ್ಧ ಮಾಡುತ್ತಾನೆ. ಇವನು ಪಾಂಡವರ ಸೈನ್ಯದ ಮೇಲೆ ದಾಳಿಮಾಡುತ್ತಿರುವುದನ್ನು ತಿಳಿದು ಶ್ರೀಕೃಷ್ಣನು ಅರ್ಜುನನಿಗೆ ದಂಡಧಾರನನ್ನು ಸಂಹರಿಸಿದನಂತರ ಸಂಶಪ್ತಕರೊಡನೆ ಯುದ್ಧವನ್ನು ಮುಂದುವರಿಸುವಂತೆ ಹೇಳುತ್ತಾನೆ. ಅರ್ಜುನ-ದಂಡಧಾರರ ನಡುವೆ ಯುದ್ಧವು ಪ್ರಾರಂಭವಾಗುತ್ತದೆ. ಅರ್ಜುನನು ದಂಡಧಾರನ ಆನೆಯನ್ನು ಸಂಹರಿಸಿ, ದಂಡಧಾರನನ್ನೂ ಸಂಹರಿಸುತ್ತಾನೆ. ಅನಂತರ ಅವನ ತಮ್ಮ ದಂಡನು ಅರ್ಜುನನೊಡನೆ ಯುದ್ಧಮಾಡುತ್ತಾನೆ. ಅರ್ಜುನನು ದಂಡನನ್ನು ಸಂಹರಿಸಿ ಅವನ ಆನೆಯನ್ನೂ ಸಂಹರಿಸುತ್ತಾನೆ. ಅನಂತರ ಬಂದ ಅವನ ಕಡೆಯ ಗಜಯೋಧರನ್ನೂ ಧ್ವಂಸಮಾಡಿ ಸುಹೃದರ ಪ್ರಶಂಸೆಗೆ ಪಾತ್ರನಾಗುತ್ತಾನೆ. ಎಲ್ಲರಿಂದಲೂ ಪುರಸ್ಕೃತನಾದ ಅರ್ಜುನನು ಪುನಃ ಸಂಶಪ್ತಕರೊಡನೆ ಯುದ್ಧಕ್ಕೆ ಹೋಗುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೧೯ನೆಯ ಅಧ್ಯಾಯ: ಸಂಶಪ್ತಕರಿಗೂ ಅರ್ಜುನನಿಗೂ ಪುನಃ ಘೋರಯುದ್ಧವು ಪ್ರಾರಂಭವಾಗುತ್ತದೆ. ಅರ್ಜುನನ ಬಾಣಗಳಿಂದ ಪ್ರಾಣತೊರೆದ ಗಜಾಶ್ವ-ಪದಾತಿಗಳ ವಿಪುಲವಾದ ವರ್ಣನೆಯಿದೆ. ಸಂಶಪ್ತಕ

ರನ್ನು ಸಂಪೂರ್ಣವಾಗಿ ಧ್ವಂಸಮಾಡಿದನಂತರ ಶ್ರೀಕೃಷ್ಣನು ಅರ್ಜುನನಿಗೆ ಭೀರುಗಳಿಂದ ನೋಡಲು ಸಾಧ್ಯವಾಗದ ಭಯಂಕರವಾದ ರಣರಂಗವನ್ನು ತೋರಿಸಿಕೊಂಡು ವರ್ಣಿಸುತ್ತಾ ಬರುತ್ತಿರುವಾಗ ದುರ್ಯೋಧನನ ಸೈನ್ಯದಲ್ಲಿ ಅಲ್ಲೋಲಕಲ್ಲೋಲವಾಗುತ್ತಿರುತ್ತದೆ. ಪಾಂಡ್ಯನು ಕೌರವರ ಸೈನ್ಯವನ್ನು ಸದೆಬಡೆಯುತ್ತಿರುವುದೇ ಇದಕ್ಕೆ ಕಾರಣವಾಗಿರುತ್ತದೆ. ಪಾಂಡ್ಯರಾಜನ ಪರಾಕ್ರಮವನ್ನು ಕಂಡು ಕೃಷ್ಣಾರ್ಜುನರೂ ಅಚ್ಚರಿಗೊಳ್ಳುತ್ತಾರೆ. ಪಾಂಡ್ಯ-ಕೌರವರ ಯುದ್ಧದೊಂದಿಗೆ ಅಧ್ಯಾಯವು ಮುಗಿಯುತ್ತದೆ.

೨೦ನೆಯ ಅಧ್ಯಾಯ: ಪಾಂಡ್ಯರಾಜನ ಪರಾಕ್ರಮವನ್ನು ಸವಿಸ್ತರವಾಗಿ ಹೇಳುವಂತೆ ಧೃತರಾಷ್ಟ್ರನು ಸಂಜಯನಿಗೆ ಹೇಳುತ್ತಾನೆ. ಸಂಜಯನು ಅವನ ಪರಾಕ್ರಮವನ್ನು ವರ್ಣಿಸುತ್ತಾನೆ. ಪಾಂಡ್ಯನು ಭೀಷ್ಮ-ದ್ರೋಣರ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವುಳ್ಳವನೆಂಬುದು ಸಂಜಯನ ಮಾತಿನಿಂದ ಗೊತ್ತಾಗುತ್ತದೆ. ಪಾಂಡ್ಯರಾಜನು ಕೌರವರ ಸೈನ್ಯವನ್ನು ಬಿರುಗಾಳಿಯು ಮೋಡಗಳನ್ನು ವಿನಾಶಗೊಳಿಸುವಂತೆ–ವಿನಾಶಮಾಡುತ್ತಿರುತ್ತಾನೆ. ಕೌರವರ ಪಕ್ಷದ ಚತುರಂಗಬಲವೂ ವಿಧ್ವಸ್ತವಾಗುತ್ತಿರುವುದನ್ನು ಕಂಡು ಅಶ್ವತ್ಥಾಮನು ಅವನೊಡನೆ ಯುದ್ಧಕ್ಕೆ ಹೋಗುತ್ತಾನೆ. ಪಾಂಡ್ಯ ಮತ್ತು ಅಶ್ವತ್ಥಾಮರ ಯುದ್ಧದ ಅದ್ಭುತವಾದ ವರ್ಣನೆಯಿದೆ. ಕಡೆಗೆ ಅಶ್ವತ್ಥಾಮನು ಪಾಂಡ್ಯನ ಸೂತಾಶ್ವರಥಗಳನ್ನು ಧ್ವಂಸಮಾಡುತ್ತಾನೆ. ಧನುಸ್ಸನ್ನೂ ಕತ್ತರಿಸುತ್ತಾನೆ. ಆದರೆ ಪಾಂಡ್ಯನೊಡನೆ ಯುದ್ಧವನ್ನು ಮುಂದುವರಿಸಬೇಕೆಂಬ ಆಶೆಯಿಂದ ಅಶ್ವತ್ಥಾಮನು ಅವನನ್ನು ಸಂಹರಿಸುವುದಿಲ್ಲ.

ಈ ಮಧ್ಯದಲ್ಲಿ ಈ ಪ್ರಕರಣಕ್ಕೆ ಸಂಬಂಧವಿಲ್ಲದಂತೆ ಎರಡು ಶ್ಲೋಕಗಳು ಬಂದಿವೆ. 'ಕರ್ಣನು ಪಾಂಡವರ ಗಜಸೈನ್ಯದ ಮೇಲೆ ಆಕ್ರಮಣ ನಡೆಸುತ್ತಾನೆ' ......(೩೭-೩೮)

ಇದಾದನಂತರ ಪುನಃ ಅಶ್ವತ್ಥಾಮನು ಪಾಂಡ್ಯನನ್ನು ರಥಹೀನನನ್ನಾಗಿ ಮಾಡಿದರೂ ಅವನೊಡನೆ ಯುದ್ಧಮಾಡುವ ಇಚ್ಛೆಯಿಂದ ಅವನನ್ನು ಸಂಹರಿಸಲಿಲ್ಲ–ಎಂಬ ಶ್ಲೋಕವು ಬರುತ್ತದೆ. ಈ ಮೂರು

ಶ್ಲೋಕಗಳು ಹೆಚ್ಚಿಂದು ಸ್ಪಷ್ಟವಾಗಿ ಕಾಣುತ್ತದೆ. ಭಂ. ರಿ. ಇನ್ಸ್‌ಸ್ಟಿಟ್ಯೂಟಿನ ಪುಸ್ತಕದಲ್ಲಿ ಈ ಮೂರು ಶ್ಲೋಕಗಳು ಇರುವುದಿಲ್ಲ.

ಮುಂದೆ ಪುನಃ ಪಾಂಡ್ಯಾಶ್ವತ್ಥಾಮರ ಯುದ್ಧವರ್ಣನೆಯು ಮುಂದು ವರಿಯುತ್ತದೆ. ಮಾವುತನಿಲ್ಲದ ಆನೆಯು ಆ ಸಮಯಕ್ಕೆ ಸರಿಯಾಗಿ ಪಾಂಡ್ಯನ ಸಮೀಪಕ್ಕೆ ಬರುತ್ತದೆ. ಪಾಂಡ್ಯನು ಅದರ ಮೇಲೆ ಕುಳಿತು ಅಶ್ವತ್ಥಾಮನ ಮೇಲೆ ತೋಮರವನ್ನು ಪ್ರಯೋಗಿಸುತ್ತಾನೆ. ಅದು ಅಶ್ವತ್ಥಾಮನ ಮುಕುಟವನ್ನು ಕತ್ತರಿಸಿ ಕೆಳಗೆ ಬೀಳುತ್ತದೆ. ಅನಂತರ ಅಶ್ವತ್ಥಾಮನು ಪಾಂಡ್ಯನನ್ನೂ ಮತ್ತು ಆನೆಯನ್ನೂ ಸಂಹರಿಸುತ್ತಾನೆ. ದುರ್ಯೋಧನನು ಪ್ರಸನ್ನನಾಗಿ ಅಶ್ವತ್ಥಾಮನನ್ನು ಪುರಸ್ಕರಿಸುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೨೧ನೆಯ ಅಧ್ಯಾಯ: ಪಾಂಡ್ಯನು ಹತನಾದನಂತರ ಅರ್ಜುನನು ಏನು ಮಾಡಿದನೆಂದು ಧೃತರಾಷ್ಟ್ರನು ಪ್ರಶ್ನಿಸುತ್ತಾನೆ. ಸಂಜಯನು ವಿವರಣೆ ನೀಡುತ್ತಾನೆ. ಪುನಃ ಎರಡು ಪಕ್ಷದವರೂ ಘೋರಯುದ್ಧದಲ್ಲಿ ತೊಡಗು ತ್ತಾರೆ. ಭೀಮಸೇನಪ್ರಮುಖರಾದ ಪಾಂಡವರೂ ಯುದ್ಧದಲ್ಲಿ ಭಾಗ ವಹಿಸುತ್ತಾರೆ. ಅರ್ಜುನನೂ ಸಹ ಶ್ರೀಕೃಷ್ಣನ ಪ್ರೇರಣೆಯಂತೆ ಯುದ್ಧದಲ್ಲಿ ಭಾಗವಹಿಸುತ್ತಾನೆ. ಆದರೆ ಕರ್ಣನೊಬ್ಬನ ಪರಾಕ್ರಮವೇ ಈ ಆಧ್ಯಾಯದಲ್ಲಿ ಹೆಚ್ಚು ವರ್ಣಿತವಾಗಿದೆ. ಕರ್ಣನು ಅನೇಕಪಾಂಚಾಲರಥಿಕರನ್ನು ಸಂಹರಿಸು ತ್ತಾನೆ. ಕರ್ಣನ ಪರಾಕ್ರಮದ ವರ್ಣನೆಯಾದನಂತರ ಎರಡೂ ಪಕ್ಷಗಳ ಚತುರಂಗಸೈನ್ಯಗಳೂ ಪರಸ್ಪರವಾಗಿ ಸಂಘರ್ಷಿಸುವುದನ್ನು ಅಧ್ಯಾಯದ ಕಡೆಯವರೆಗೂ ಸಂಜಯನು ವರ್ಣಿಸುತ್ತಾನೆ.

೨೨ನೆಯ ಅಧ್ಯಾಯ: ದುರ್ಯೋಧನನು ಗಜಸೈನ್ಯವನ್ನು ಪಾಂಡವರ ಮೇಲೆ ಆಕ್ರಮಣಕ್ಕಾಗಿ ಕಳುಹಿಸಿಕೊಡುತ್ತಾನೆ. ಗಜಸೈನಿಕರು ಪಾಂಡವರ ಕಡೆಯ ಸೇನಾಪತಿಯಾದ ಧೃಷ್ಟದ್ಯುಮ್ನನನ್ನು ಆಕ್ರಮಿಸುತ್ತಾರೆ. ಗಜ ಸೈನಿಕರೊಡನೆ ಯುದ್ಧಮಾಡಲು ಪಾಂಡವರ ಕಡೆಯ ನಕುಲ-ಸಹ ದೇವರು, ದ್ರೌಪದೇಯರು, ಪ್ರಭದ್ರಕರು, ಸಾತ್ಯಕಿ, ಶಿಖಂಡಿ, ಚೇಕಿತಾನ ಇವರೆಲ್ಲರೂ ಧೃಷ್ಟದ್ಯುಮ್ನನೊಡನೆ ಸೇರಿಕೊಳ್ಳುತ್ತಾರೆ. ಸಾತ್ಯಕಿಯು ವಂಗ

ರಾಜನ ಆನೆಯನ್ನು ಸಂಹರಿಸುತ್ತಾನೆ. ಅನಂತರ ಆನೆಯಿಂದ ಕೆಳಕ್ಕೆ ಧುಮುಕುತ್ತಿದ್ದ ವಂಗನನ್ನು ಸಾತ್ಯಕಿಯು ಸಂಹರಿಸುತ್ತಾನೆ. ಪುಂಡ್ರನ ಆನೆಯನ್ನು ಸಹದೇವನು ಸಂಹರಿಸುತ್ತಾನೆ. ಅನಂತರ ಸಹದೇವನು ಅಂಗನೊಡನೆ ಯುದ್ಧಮಾಡಲು ಹೋಗುತ್ತಾನೆ. ಆದರೆ ನಕುಲನು ಸಹದೇವನಿಗೆ ಯುದ್ಧ ಮಾಡಲು ಬಿಡುವುದಿಲ್ಲ. ಅಂಗನೊಡನೆ ಯುದ್ಧವನ್ನು ತಾನೇ ಮುಂದುವರಿಸಿ ಮ್ಲೇಚ್ಛಜಾತಿಯವನಾದ ಅಂಗನನ್ನೂ ಮತ್ತು ಅವನ ಆನೆಯನ್ನೂ ಸಂಹರಿಸುತ್ತಾನೆ. ಈ ಪ್ರಕರಣದಲ್ಲಿ ಅಂಗಪುತ್ರನ ವಿಷಯವು ಬರುವುದಿಲ್ಲ. ಆದರೆ ಮುಂದಿನ ಶ್ಲೋಕವು **ಅಥಾಙ್ಗಪುತ್ರೇ** ನಿಹತೇ ಎಂದು ಪ್ರಾರಂಭ ವಾಗುತ್ತದೆ. ಆದುದರಿಂದ **ಅಙ್ಗಪುತ್ರೇ** ಎಂಬುದಕ್ಕೆ **ಅಙ್ಗರಾಜಪುತ್ರೇ**- ಅಂಗರಾಜಪುತ್ರನು ಅರ್ಥಾತ್ ಅಂಗನು ಹತನಾಗಲಾಗಿ ಎಂದೇ ಅರ್ಥಮಾಡಬೇಕಾಗುತ್ತದೆ. ಒಂದು ಪುಸ್ತಕದಲ್ಲಿ '**ಆಚಾರ್ಯಪುತ್ರೇ** ನಿಹತೇ' ಎಂಬ ಪಾಠವಿದೆ.

ಅಂಗರಾಜನ ವಧೆಯಿಂದ ಕುಪಿತರಾದ ಅಂಗಯೋಧರು ನಕುಲನನ್ನು ಆಕ್ರಮಿಸುತ್ತಾರೆ. ಪಾಂಡು-ಪಾಂಚಾಲಯೋಧರು ನಕುಲನ ಸಹಾಯಕ್ಕೆ ಹೋಗುತ್ತಾರೆ. ಸಹದೇವನು ಎಂಟು ಮಹಾಗಜಗಳನ್ನು ಸಂಹರಿಸುತ್ತಾನೆ. ನಕುಲನೂ ಸಹ ಅನೇಕ ಮದಗಜಗಳನ್ನು ಮಾವುತರೊಡನೆ ಸಂಹರಿಸು ತ್ತಾನೆ. ಪಾಂಡವಯೋಧರೆಲ್ಲರೂ ಒಟ್ಟಾಗಿ ಸೇರಿಕೊಂಡು ಗಜಸೈನ್ಯವನ್ನೂ ಧ್ವಂಸಮಾಡಿ ಕರ್ಣನೊಡನೆ ಯುದ್ಧಮಾಡಲು ಹೋಗುತ್ತಾರೆ.

೨೩ನೆಯ ಅಧ್ಯಾಯ: ಸಹದೇವ-ದುಃಶಾಸನರ ಯುದ್ಧದಿಂದ ಅಧ್ಯಾಯವು ಪ್ರಾರಂಭವಾಗುತ್ತದೆ. ಅಧ್ಯಾಯಪೂರ್ತಿಯಾಗಿ ಇವರ ಯುದ್ಧದ ವರ್ಣನೆಯೇ ಇದೆ. ಕಡೆಗೆ ಸಹದೇವನು ದುಃಶಾಸನನನ್ನು ಮೂರ್ಛೆಗೊಳಿಸುತ್ತಾನೆ. ಅವನ ಸಾರಥಿಯು ರಥವನ್ನು ರಣರಂಗದಿಂದ ಹೊರಕ್ಕೆ ಒಯ್ಯುತ್ತಾನೆ. ವಿಜಯಿಯಾದ ಸಹದೇವನು ದುರ್ಯೋಧನನ ಸೈನ್ಯದ ಮೇಲೆ ದಾಳಿಮಾಡುತ್ತಾನೆ. ಕೆಂಜಿಗದ ಗೂಡನ್ನು ಮನುಷ್ಯನು ಕ್ಷಣಮಾತ್ರದಲ್ಲಿ ತೀಡಿ ಧ್ವಂಸಮಾಡುವಂತೆ–ಸಹದೇವನು ಕೌರವಸೈನ್ಯವನ್ನು ಧ್ವಂಸಮಾಡುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೨೪ನೆಯ ಅಧ್ಯಾಯ: ಕರ್ಣ-ನಕುಲರ ಯುದ್ಧದೊಡನೆ ಅಧ್ಯಾಯವು ಪ್ರಾರಂಭವಾಗುತ್ತದೆ. ಮೊದಲು ನಕುಲನು ಕರ್ಣನೊಡನೆ ಸಾಹಸದ ಮಾತುಗಳನ್ನಾಡುತ್ತಾನೆ. 'ಶೂರರು ಯಾವಾಗಲೂ ಮಾತನಾಡುವುದಿಲ್ಲ. ಕೃತಿಯಲ್ಲಿ ತೋರಿಸುತ್ತಾರೆ. ಅದೇ ರೀತಿಯಲ್ಲಿ ನೀನೂ ಸಹ ನಿನ್ನ ಶಕ್ತಿಮೀರಿ ಯುದ್ಧಮಾಡು. ನಿನ್ನ ದರ್ಪವನ್ನು ನಾನು ಮುರಿಯುತ್ತೇನೆ'–ಎಂದು ಪ್ರತ್ಯುತ್ತರಿಸಿ ಕರ್ಣನೇ ಯುದ್ಧವನ್ನು ಆರಂಭಿಸುತ್ತಾನೆ. ನಕುಲನು ಸಾಹಸಪೂರ್ಣವಾದ ಯುದ್ಧವನ್ನೇ ಮಾಡುತ್ತಾನೆ. ಇವನ ಸಾಹಸವನ್ನು ಕಂಡು ರಥಿಗಳೂ ಮತ್ತು ಪ್ರೇಕ್ಷಕರಾಗಿದ್ದ ದೇವತೆಗಳೂ ವಿಸ್ಮಯವನ್ನು ಹೊಂದುತ್ತಾರೆ. ವಿಸ್ಮಯಂ ಪರಮಂ ಜಗ್ಮೂ ರಥಿನಃ ಸಹ ದೈವತೈಃ (೧೫). ಪರಸ್ಪರವಾಗಿ ಒಬ್ಬರ ಸೈನ್ಯವನ್ನು ಮತ್ತೊಬ್ಬರು ಧ್ವಂಸಮಾಡುತ್ತಾರೆ. ೩೫ನೆಯ ಶ್ಲೋಕದವರೆಗೂ ಬಂದಿರುವ ವರ್ಣನೆಯಲ್ಲಿ ನಕುಲನ ಪರಾಕ್ರಮಕ್ಕೂ ಕರ್ಣನ ಪರಾಕ್ರಮಕ್ಕೂ ಹೆಚ್ಚು ವ್ಯತ್ಯಾಸವಿರುವಂತೆಯೇ ಕಾಣುವುದಿಲ್ಲ. ಕರ್ಣನಂತೆಯೇ ನಕುಲನೂ ಮಹಾಸ್ತ್ರಗಳನ್ನು ಪ್ರಯೋಗಿಸುತ್ತಾನೆ.

ಅನಂತರ ಕರ್ಣನು ತನ್ನ ಬಾಣಗಳಿಂದ ನಕುಲನ ರಥಾಶ್ವ-ಸೂತರನ್ನೂ ಧ್ವಂಸಮಾಡುತ್ತಾನೆ. ಪತಾಕೆ, ಚಕ್ರರಕ್ಷಕರು, ಗದೆ, ಖಡ್ಗ, ಗುರಾಣಿ– ಎಲ್ಲವನ್ನೂ ಧ್ವಂಸಮಾಡುತ್ತಾನೆ. ನಕುಲನು ಪರಿಘವನ್ನು ಕೈಯಲ್ಲಿ ಹಿಡಿದು ರಥದಿಂದಿಳಿಯುತ್ತಾನೆ. ಕರ್ಣನು ಆ ಪರಿಘವನ್ನೂ ಬಾಣಗಳಿಂದ ಕತ್ತರಿಸು ತ್ತಾನೆ. ನಕುಲನು ಪಲಾಯನಮಾಡುತ್ತಾನೆ. ಇಂತಹ ಸಮಯಗಳಲ್ಲಿ ಪಲಾಯನಮಾಡುವುದು ಅಥವಾ ತಮ್ಮ ಕಡೆಯವರ ರಥದಲ್ಲಿ ಹತ್ತಿಕೊಳ್ಳುವುದು ಸ್ವಾಭಾವಿಕವಾಗಿರುತ್ತದೆ. ಮಹಾವೀರರು ಸಾಮಾನ್ಯವಾಗಿ ಓಡಿಹೋಗುತ್ತಿರುವವರನ್ನೂ, ನಿರಾಯುಧರನ್ನೂ ಸಂಹರಿಸುವುದಿಲ್ಲ.

ಆದರೆ ಇಲ್ಲಿ ಭೀಮ-ಸಹದೇವನ ಪ್ರಕರಣದಂತೆಯೇ ಪ್ರಕರಣವು ಪ್ರಾರಂಭವಾಗುತ್ತದೆ. ಪಾದಚಾರಿಯಾಗಿ ಓಡಿಹೋಗುತ್ತಿರುವ ನಕುಲ ನನ್ನು ರಥದಲ್ಲಿ ಕುಳಿತಿರುವ ಕರ್ಣನು ಅಟ್ಟಿಸಿಕೊಂಡು ಹೋಗುತ್ತಾನೆ. ಕುತ್ತಿಗೆಗೆ ಧನುಸ್ಸನ್ನು ಹಾಕುವಾಗ ಕರ್ಣನು ರಥದಲ್ಲಿಯೇ ಇದ್ದನೇ? ರಥದಿಂದ ಇಳಿದಿದ್ದನೇ?–ತಿಳಿಯದು. ಕುತ್ತಿಗೆಯಲ್ಲಿ ಧನುಸ್ಸನ್ನು ಹಾಕಿ ಎಳೆಯುವಾಗ ನಕುಲನು ಸುಮ್ಮನಿದ್ದನೇ? ಇಂತಹ ಅವಮಾನವನ್ನು

ಸಾಮಾನ್ಯ ಪದಾತಿಯೇ ಆಗಿದ್ದರೂ ಸಹಿಸಿಕೊಳ್ಳುತ್ತಿರಲಿಲ್ಲ. ಈ ಹಿಂದೆಯೇ ಕರ್ಣಸಮಾನಪರಾಕ್ರಮನೆಂದು ವರ್ಣಿಸಲ್ಪಟ್ಟಿರುವ ನಕುಲನು ಕುತ್ತಿಗೆಗೆ ಧನುಸ್ಸನ್ನು ಹಾಕಿ ಕರ್ಣನು ಎಳೆಯುತ್ತಿದ್ದರೂ ಯಾವ ಪ್ರತಿಕ್ರಿಯೆಯೂ ಇಲ್ಲದೇ ಸುಮ್ಮನಿದ್ದನೇ? ಕಟ್ಟಕಡೆಗೆ ಧನುಸ್ಸನ್ನಾದರೂ ಪೌರುಷದಿಂದ ಕಿತ್ತೊಗೆಯಲು ಆಗುತ್ತಿರಲಿಲ್ಲವೇ? ನಕುಲನ ವೇಷಧಾರಿಗಳಿಗೂ ಇಂತಹ ಸಮಯಗಳಲ್ಲಿ ಸುಮ್ಮನಿರಲು ಸಾಧ್ಯವಾಗಲಾರದು. ಅನಂತರ ಕರ್ಣನು ಭೀಮ-ಸಹದೇವರನ್ನು ಮೂದಲಿಸಿದಂತೆಯೇ ನಕುಲನನ್ನೂ ಮೂದಲಿಸಿ ಬಿಟ್ಟುಬಿಡುತ್ತಾನೆ. ಹಿಂದೆ ಬಂದಿರುವ ಶ್ಲೋಕಗಳೇ ಪುನರಾವರ್ತಿತವಾಗಿವೆ. ಇಲ್ಲಿಯೂ ಸಹ ಕುಂತಿಯ ಮಾತನ್ನು ಸ್ಮರಿಸಿ ಕರ್ಣನು ನಕುಲನನ್ನು ಸಂಹರಿಸದೇ ಬಿಟ್ಟನೆಂದು ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ. ಕುಂತಿಯು ಕರ್ಣನೊಡನೆ ರಹಸ್ಯದಲ್ಲಾಡಿದ ಮಾತು ಧೃತರಾಷ್ಟ್ರನಿಗಾಗಲೀ-ಸಂಜಯನಿಗಾಗಲೀ ಹೇಗೆ ತಿಳಿಯಿತೆಂಬುದು ದೊಡ್ಡ ಸಮಸ್ಯೆಯೇ ಆಗಿದೆ.

ನಕುಲನು ಬಳಿಕ ನಾಚಿಕೆಪಟ್ಟುಕೊಂಡು ಯುಧಿಷ್ಠಿರನ ರಥದ ಬಳಿಗೆ ಹೋಗಿ ರಥವನ್ನು ಹತ್ತಿ ಕುಳಿತುಕೊಳ್ಳುತ್ತಾನೆ.

ಇಲ್ಲಿಯೂ ಸಹ ೪೪ನೆಯ ಶ್ಲೋಕದಿಂದ ೫೩ನೆಯ ಶ್ಲೋಕದವರೆಗೆ ಇರುವ ಶ್ಲೋಕಗಳು ಹೆಚ್ಚಿನ ಶ್ಲೋಕಗಳೆಂದೇ ನಮ್ಮ ಅಭಿಪ್ರಾಯವಾಗಿದೆ. ಇವುಗಳನ್ನು ಬಿಟ್ಟರೂ ಆನುಪೂರ್ವಿಯು ಚೆನ್ನಾಗಿ ಹೊಂದಿಕೊಳ್ಳುತ್ತದೆ.

**ಸ ಹನ್ಯಮಾನಃ ಸಮರೇ ಕೃತಾಸ್ತ್ರೇಣ ಬಲೀಯಸಾ ।**
**ಪ್ರಾದ್ರವತ್ಸಹಸಾ ರಾಜನ್ನಕುಲೋ ವ್ಯಾಕುಲೇನ್ದ್ರಿಯಃ ॥೪೪॥**

**ತಂ ವಿಜಿತ್ಯಾಥ ಕರ್ಣೋಽಪಿ ಪಞ್ಚಾಲಾಂಸ್ತ್ವರಿತೋ ಯಯೌ ।**
**ರಥೇನಾತಿಪತಾಕೇನ ಚನ್ದ್ರವರ್ಣಹಯೇನ ಚ ॥೫೪॥**

ಕುಂತಿಯೊಡನೆ ಕರ್ಣನ ಸಂಭಾಷಣೆಯನ್ನು ಓದಿರುವ ವಾಚಕರಿಗೆ "ಈ ಸಮಯದಲ್ಲಿ ಕರ್ಣನು ಭೀಮ-ನಕುಲ-ಸಹದೇವರನ್ನು ಸಂಹರಿಸ ಬಹುದಾಗಿತ್ತು"–ಎಂಬ ಅನುಮಾನವು ಬರಬೇಕೇ ಹೊರತು ಧೃತರಾಷ್ಟ್ರ ನಾಗಲೀ ಸಂಜಯನಾಗಲೀ ಅವರನ್ನು ಕೊಲ್ಲದಿರುವುದಕ್ಕೆ ಕಾರಣ ವನ್ನು ಹೇಳಿದರೆ ಅದು ಅಸಂಗತವೆನಿಸುತ್ತದೆ. ವಿದ್ವಾಂಸರೇನಾದರೂ ಈ

ವಿಷಯದ ಬಗೆಗೆ ಸಮಾಧಾನವನ್ನು ಹೇಳುವುದಾದಲ್ಲಿ ಅದನ್ನು ಕೃತಜ್ಞತೆಯಿಂದ ಅಂಗೀಕರಿಸಲಾಗುವುದು.

ಕರ್ಣನು ಪಾಂಚಾಲರಥಿಕರ ಮೇಲೆ ದಾಳಿಮಾಡಲು ಹೋದುದನ್ನು ಕಂಡು ಪಾಂಡವರ ಸೈನ್ಯದಲ್ಲಿ ದೊಡ್ಡ ಕೋಲಾಹಲವೇ ಉಂಟಾಗುತ್ತದೆ. ಅಧ್ಯಾಯದ ಕಡೆಯವರೆಗೂ ಕರ್ಣನು ಪಾಂಚಾಲರ ಸೈನ್ಯವನ್ನು ನಾನಾ ರೀತಿಯಲ್ಲಿ ಧ್ವಂಸಮಾಡಿದ ವರ್ಣನೆಯಿದೆ.

೨೫ನೆಯ ಅಧ್ಯಾಯ: ಯುಯುತ್ಸು ಮತ್ತು ಉಲೂಕರ ಯುದ್ಧದೊಡನೆ ಅಧ್ಯಾಯವು ಪ್ರಾರಂಭವಾಗುತ್ತದೆ. ಯುಯುತ್ಸುವು ಧೃತರಾಷ್ಟ್ರನ ಮಗ. ಪಾಂಡವರ ಕಡೆಗೆ ಸೇರಿರುತ್ತಾನೆ. ಉಲೂಕನು ಶಕುನಿಯ ಮಗ. ಇಬ್ಬರೂ ವೀರಾವೇಶದಿಂದ ಯುದ್ಧಮಾಡುತ್ತಾರೆ. ಕಡೆಗೆ ಉಲೂಕನು ಯುಯುತ್ಸುವಿನ ಕುದುರೆಗಳನ್ನೂ ಸಾರಥಿಯನ್ನೂ ಸಂಹರಿಸುತ್ತಾನೆ. ರಥಹೀನನಾದ ಯುಯುತ್ಸುವು ಬೇರೆ ರಥದಲ್ಲಿ ಹತ್ತಿಕೊಳ್ಳುತ್ತಾನೆ. ಅನಂತರ ಶತಾನೀಕ-ಶ್ರುತಕರ್ಮರ ಯುದ್ಧವು ಪ್ರಾರಂಭವಾಗುತ್ತದೆ. ಶತಾನೀಕನು ನಕುಲನ ಮಗ. ಶ್ರುತಕರ್ಮನು ಧೃತರಾಷ್ಟ್ರನ ಮಗನೆಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಶ್ರುತಕರ್ಮಾ ಸುತಸ್ತವ (೧೩) ತವ ಪುತ್ರಸ್ಯ ಮಾರಿಷ (೧೪) ಪುತ್ರಸ್ತು ತವ ಸಂಭ್ರಾನ್ತಃ (೧೭) ಆದರೆ ಧೃತರಾಷ್ಟ್ರನ ನೂರು ಮಂದಿ ಮಕ್ಕಳಲ್ಲಿ ಶ್ರುತಕರ್ಮಾ ಎಂಬ ಹೆಸರು ಬರುವುದಿಲ್ಲ. ಸಹದೇವನ ಮಗನ ಹೆಸರು ಶ್ರುತಕರ್ಮಾ ಅಥವಾ ಶ್ರುತಸೇನ. ಅರ್ಜುನನ ಮಗನಿಗೆ ಶ್ರುತಕರ್ಮಾ ಮತ್ತು ಶ್ರುತಕೀರ್ತಿ ಎಂಬ ಎರಡು ಹೆಸರುಗಳೂ ಇವೆ. ಇದು ಹೊರತಾಗಿ ಶ್ರುತಕರ್ಮಾ ಎಂಬ ಹೆಸರು ಮತ್ತೆಲ್ಲಿಯೂ ಬರುವುದಿಲ್ಲ. ಭೀಮಸೇನನಿಂದ ವಧೆಮಾಡಲ್ಪಟ್ಟ ಧೃತರಾಷ್ಟ್ರನ ಮಕ್ಕಳಲ್ಲಿಯೂ ಶ್ರುತಕರ್ಮಾ ಎಂಬ ಹೆಸರು ಬರುವುದಿಲ್ಲ. ಧೃತರಾಷ್ಟ್ರನ ಮಗ ಎಂದು ಬಂದಿರುವುದು ಇದೊಂದೇ ಸಂದರ್ಭದಲ್ಲಿ. ಈ ವಿಷಯವನ್ನು ವ್ಯಾಖ್ಯಾನಕಾರರಾಗಲೀ ಭಂ. ರಿ. ಇನ್ಸ್ಟಿಟ್ಯೂಟಿನವರಾಗಲೀ ಪ್ರಸ್ತಾಪಿಸಿರುವುದಿಲ್ಲ. ಎಲ್ಲ ಪುಸ್ತಕಗಳಲ್ಲಿಯೂ ಇದೇ ಪಾಠವಿದೆ. ಅಳಿದು ಉಳಿದಿರುವ ಧೃತರಾಷ್ಟ್ರನ ಮಕ್ಕಳಲ್ಲಿ ಶ್ರುತಕರ್ಮಾ ಎಂಬುದು

ಯಾರದೋ ಉಪನಾಮವಿರಬಹುದೆಂದು ಸಮಾಧಾನವನ್ನು ಹೇಳಬೇಕಾಗುತ್ತದೆ. ಅಥವಾ ಧೃತರಾಷ್ಟ್ರನ ಮಕ್ಕಳ ಹೆಸರುಗಳಲ್ಲಿ ಯಾವುದಾದರೂ ಹೆಸರು ಪಲ್ಲಟವಾಗಿರಬಹುದು. ಲಿಪಿಕಾರನ ದೋಷವಿರಬಹುದೆಂದೂ ಹೇಳಬಹುದಾಗಿದೆ. ಇಷ್ಟು ಮಾತ್ರ ನಿಜ: ಶ್ರುತಕರ್ಮಾ ಎಂಬ ಮಗನು ಧೃತರಾಷ್ಟ್ರನಿಗೆ ಜನಿಸಿದ ಪ್ರಸಂಗವಾಗಲೀ-ಭೀಮನಿಂದ ಮರಣ ಹೊಂದಿದ ಪ್ರಸಂಗವಾಗಲೀ ಮಹಾಭಾರತದಲ್ಲಿ ಮತ್ತೆಲ್ಲಿಯೂ ಕಾಣಬರುವುದಿಲ್ಲ.

ಮುಂದೆ ಸುತಸೋಮನಿಗೂ-ಶಕುನಿಗೂ ಯುದ್ಧವಾಗುತ್ತದೆ. ಶಕುನಿಯು ಸುತಸೋಮನ ರಥವನ್ನೂ ಧನುಸ್ಸನ್ನೂ ಧ್ವಂಸಮಾಡುತ್ತಾನೆ. ಸುತಸೋಮನು ಕತ್ತಿಯನ್ನೇ ಹಿಡಿದು ವರಸೆ-ವರಸೆಯಾಗಿ ತಿರುಗಿಸುತ್ತಾ ರಣಾಂಗಣದಲ್ಲಿ ಸುತ್ತುತ್ತಿರುತ್ತಾನೆ. ಶಕುನಿಯು ಅವನ ಕತ್ತಿಯನ್ನೂ ಕತ್ತರಿಸುತ್ತಾನೆ. ಕತ್ತಿಯ ಅರ್ಧಭಾಗವು ಸುತಸೋಮನ ಕೈಯಲ್ಲೇ ಉಳಿದಿರುತ್ತದೆ. ಅದನ್ನೇ ರಭಸದಿಂದ ಪ್ರಯೋಗಿಸಿ ಶಕುನಿಯ ಧನುಸ್ಸನ್ನು ಕತ್ತರಿಸುತ್ತಾನೆ. ಅನಂತರ ಶ್ರುತಕೀರ್ತಿಯು ರಥವನ್ನು ಹತ್ತುತ್ತಾನೆ. ಶಕುನಿಯು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಪಾಂಡವರ ಸೈನ್ಯವನ್ನು ಧ್ವಂಸಮಾಡುತ್ತಾನೆ.

೨೬ನೆಯ ಅಧ್ಯಾಯ: ಈ ಅಧ್ಯಾಯವು ಕೃಪ-ಧೃಷ್ಟದ್ಯುಮ್ನರ ಯುದ್ಧದಿಂದ ಪ್ರಾರಂಭವಾಗುತ್ತದೆ. ಆದರೆ ಆ ಸಮಯದಲ್ಲಿ ಧೃಷ್ಟದ್ಯುಮ್ನನು ಕೃಪರೊಡನೆ ಯುದ್ಧಮಾಡುವುದಕ್ಕೆ ಭಯಪಡುತ್ತಾನೆ. ಕೃಪರು ಸತತವಾಗಿ ಬಾಣಗಳನ್ನು ಬಿಡುತ್ತಿದ್ದರೆ ತಾನೇನು ಮಾಡಬೇಕೆಂಬುದೇ ಪಾರ್ಷತನಿಗೆ ತಿಳಿಯುವುದಿಲ್ಲ. ಇದನ್ನು ಗಮನಿಸಿದ ಅವನ ಸಾರಥಿಗೂ ಅಚ್ಚರಿಯಾಗುತ್ತದೆ. '**ಈದೃಶಂ ವ್ಯಸನಂ ಯುದ್ಧೇ ನ ತೇ ದೃಷ್ಟಂ ಮಯಾ ಕ್ವಚಿತ್** – ಯುದ್ಧದಲ್ಲಿ ನೀನು ಹೀಗೆ ವ್ಯಸನಪಟ್ಟುದನ್ನು ನಾನು ಈ ಹಿಂದೆ ಕಂಡಿರಲೇ ಇಲ್ಲ'–ಎನ್ನುತ್ತಾನೆ. ಧೃಷ್ಟದ್ಯುಮ್ನನು ತನ್ನ ಆಗಿನ ಸ್ಥಿತಿಯನ್ನು ವಿವರಿಸುತ್ತಾ ಭೀಮಸೇನನ ಬಳಿಗಾಗಲೀ ಅರ್ಜುನನ ಬಳಿಗಾಗಲೀ ಕರೆದುಕೊಂಡು ಹೋಗುವಂತೆ ಸಾರಥಿಗೆ ಹೇಳುತ್ತಾನೆ. ಅವನ

ಮಾತಿನಂತೆ ಸಾರಥಿಯು ಭೀಮಸೇನನು ಯುದ್ಧಮಾಡುತ್ತಿದ್ದ ಸ್ಥಳಕ್ಕೆ ಪಾರ್ಷತನ ರಥವನ್ನು ನಡೆಸಿಕೊಂಡು ಹೋಗುತ್ತಾನೆ. ಆದರೂ ಸಹ ಕೃಪರು ಧೃಷ್ಟದ್ಯುಮ್ನನನ್ನು ಬಿಡದೇ ಬೆನ್ನಟ್ಟಿಹೋಗಿ ಬಾಣಗಳನ್ನು ಸುರಿಸುತ್ತಾ ಅವನನ್ನು ಬಹಳವಾಗಿ ಪೀಡಿಸುತ್ತಲೇ ಇರುತ್ತಾರೆ.

ಮುಂದೆ ಶಿಖಂಡೀ-ಕೃತವರ್ಮರ ಯುದ್ಧವರ್ಣನೆಯಿದೆ. ಇಬ್ಬರಿಗೂ ಘೋರವಾದ ಯುದ್ಧವಾಗುತ್ತದೆ. ಕಡೆಗೆ ಕೃತವರ್ಮನು ಘೋರವಾದ ಒಂದು ಬಾಣದಿಂದ ಶಿಖಂಡಿಯನ್ನು ಪ್ರಹರಿಸುತ್ತಾನೆ. ಅದರಿಂದ ಶಿಖಂಡಿಯು ಮೂರ್ಛಿತನಾಗುತ್ತಾನೆ. ಒಡನೆಯೇ ಅವನ ಸಾರಥಿಯು ರಥವನ್ನು ರಣಾಂಗಣದ ಹೊರಕ್ಕೆ ಶೀಘ್ರವಾಗಿ ನಡೆಸಿಕೊಂಡು ಹೋಗುತ್ತಾನೆ. ಪಾಂಡವರ ಸೈನ್ಯವು ಪಲಾಯನಮಾಡುತ್ತದೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೨೭ನೆಯ ಅಧ್ಯಾಯ: ಅರ್ಜುನ ಮತ್ತು ಸಂಶಪ್ತಕರ ಯುದ್ಧದೊಡನೆ ಅಧ್ಯಾಯವು ಪ್ರಾರಂಭವಾಗುತ್ತದೆ. ಸತ್ಯಸೇನ, ಚಂದ್ರದೇವ, ಮಿತ್ರದೇವ, ಶ್ರುತಂಜಯ, ಸೌಶ್ರುತಿ, ಚಿತ್ರಸೇನ, ಮಿತ್ರಕರ್ಮಾ ಮತ್ತು ತ್ರಿಗರ್ತರಾಜನಾದ ಸುಶರ್ಮಾ—ಇವರೆಲ್ಲರೂ ಅರ್ಜುನನೊಡನೆ ಯುದ್ಧ ಮಾಡುತ್ತಿರುತ್ತಾರೆ. ಅರ್ಜುನನು ಶ್ರುತಂಜಯ-ಸೌಶ್ರುತಿ-ಚಂದ್ರದೇವರನ್ನು ಸಂಹರಿಸುತ್ತಾನೆ. ಅದರಿಂದ ಕ್ರುದ್ಧನಾದ ಸತ್ಯಸೇನನು ತೋಮರವನ್ನು ಶ್ರೀಕೃಷ್ಣನ ಮೇಲೆ ರಭಸದಿಂದ ಎಸೆಯುತ್ತಾನೆ. ಶ್ರೀಕೃಷ್ಣನ ಎಡತೋಳಿಗೆ ಏಟುಬಿದ್ದು ಕೈಯ್ಯಲ್ಲಿದ್ದ ಕಡಿವಾಣ ಮತ್ತು ಚಾವಟಿಗಳು ಕೆಳಗೆ ಬೀಳುತ್ತವೆ. ಇಲ್ಲಿ ಮೂರು ಶ್ಲೋಕಗಳಿವೆ. ಇವುಗಳ ಒಟ್ಟು ತಾತ್ಪರ್ಯ: "ಭಿನ್ನಾಂಗನಾದ ವಾಸುದೇವನನ್ನು ನೋಡಿ ಕ್ರೋಧಾಭಿಭೂತನಾದ ಅರ್ಜುನನು 'ಸತ್ಯಸೇನನ ಸಮೀಪಕ್ಕೆ ರಥವನ್ನು ನಡೆಸು. ಅವನನ್ನು ಈಗಲೇ ಯಮಾಲಯಕ್ಕೆ ಕಳುಹಿಸುತ್ತೇನೆ' ಎಂದು ಶ್ರೀಕೃಷ್ಣನಿಗೆ ಹೇಳುತ್ತಾನೆ. ಅರ್ಜುನನ ಮಾತುಗಳನ್ನು ಕೇಳಿ ಶ್ರೀಕೃಷ್ಣನು ಮತ್ತೊಂದು ಚಾವಟಿಯನ್ನು ತೆಗೆದುಕೊಂಡು ಕಡಿವಾಣಗಳನ್ನೂ ಹಿಡಿದು ಸತ್ಯಸೇನನ ಬಳಿಗೆ ರಥವನ್ನು ನಡೆಸುತ್ತಾನೆ." ಇದು ೧೮-೧೯ ಮತ್ತು ೨೦ನೆಯ ಶ್ಲೋಕಗಳ ತಾತ್ಪರ್ಯ. ೨೧ನೆಯ ಶ್ಲೋಕದಲ್ಲಿ ಪುನಃ "ವಿಷ್ವಕ್ಸೇನಂ ತು

ನಿರ್ಭಿನ್ನಂ ದೃಷ್ಟ್ವಾ ಪಾರ್ಥೋ ಧನಂಜಯಃ-ಭಿನ್ನಾಂಗನಾದ ವಿಷ್ವಕ್ಸೇನನನ್ನು ನೋಡಿ ಧನಂಜಯನು"- ಎಂಬುದಾಗಿಯೇ ಪ್ರಾರಂಭವಾಗುತ್ತದೆ. ಈ ಸಂದರ್ಭವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ೧೮-೧೯ ಮತ್ತು ೨೦ನೆಯ ಶ್ಲೋಕಗಳು ಹೆಚ್ಚು ಪಾಠವಿರಬಹುದೆನ್ನಿಸುತ್ತದೆ. ಸತ್ಯಸೇನ, ಚಂದ್ರಸೇನ ಇವರೆಲ್ಲರೂ ಒಟ್ಟಾಗಿಯೇ ನಿಂತು ಯುದ್ಧಮಾಡುತ್ತಿದ್ದರು. ಈ ಹಿಂದೆ ಸತ್ಯಸೇನನು ಪಾಂಡವನನ್ನು ಮೂರು ಬಾಣಗಳಿಂದ ಪ್ರಹರಿಸಿದನೆಂಬ ಪ್ರಸ್ತಾಪವು ಬಂದಿದೆ (೮) ಅರ್ಜುನನು ಸತ್ಯಸೇನನನ್ನೂ ಮೂರು ಬಾಣಗಳಿಂದ ಪ್ರಹರಿಸಿದನೆಂಬ ಪ್ರಸ್ತಾಪವೂ ಬಂದಿದೆ. (೧೦) ಸತ್ಯಸೇನನು ಎದುರಾಗಿ ನಿಂತೇ ಕೃಷ್ಣನನ್ನು ತೋಮರದಿಂದ ಪ್ರಹರಿಸಿದ್ದಾನೆ. ಹೀಗಿರುವಾಗ ಸತ್ಯಸೇನನ ರಥದ ಸಮೀಪಕ್ಕೆ ರಥವನ್ನು ನಡೆಸೆಂದು ಅರ್ಜುನನು ಹೇಳುವ ಕಾರಣವಿಲ್ಲ. ಕೃಷ್ಣನು ಅಲ್ಲಿಗೆ ರಥವನ್ನು ನಡೆಸುವ ಕಾರಣವೂ ಇಲ್ಲ. ಆದುದರಿಂದ ಈ ಮೂರು ಶ್ಲೋಕಗಳೂ ಇಲ್ಲದಿದ್ದರೂ ಕಥೆಯು ಸಾಂಗತ್ಯದಿಂದಲೇ ಮುಂದುವರಿಯುತ್ತದೆ. ದ್ವಿರುಕ್ತಿಯ ದೋಷವೂ ಇರುವುದಿಲ್ಲ–ಎಂಬುದು ನಮ್ಮ ಅಭಿಪ್ರಾಯವಾಗಿದೆ.

ಭಂ. ರಿ. ಇನ್ಸ್‌ಸ್ಟಿಟ್ಯೂಟಿನವರು ಪ್ರಕಟಿಸಿರುವ ಈ ಪುಸ್ತಕದಲ್ಲಿ ಮೂರು ಶ್ಲೋಕಗಳಿಗೆ ಬದಲಾಗಿ

**ಸ ಪ್ರತೋದಂ ಪುನರ್ಗೃಹ್ಯ ರಶ್ಮೀಂಶ್ಚೈವ ಮಹಾಯಶಾಃ ।**
**ವಾಹಯಾಮಾಸ ತಾನಶ್ವಾನ್ಸತ್ಯಸೇನರಥಂ ಪ್ರತಿ ॥೧೫॥**

ಎಂಬ ಒಂದು ಶ್ಲೋಕವು ಮಾತ್ರವೇ ಇದೆ.

ಮುಂದೆ ಅರ್ಜುನನು ಸತ್ಯಸೇನನನ್ನೂ, ಮಿತ್ರಕರ್ಮನನ್ನೂ, ಮಿತ್ರದೇವನನ್ನೂ ಸಂಹರಿಸುತ್ತಾನೆ. ರಾಜನಾದ ಸುಶರ್ಮನನ್ನೂ ಜತ್ರುದೇಶದಲ್ಲಿ ಗಾಯಗೊಳಿಸುತ್ತಾನೆ. ಅದರಿಂದ ಕ್ರುದ್ಧರಾದ ಸಂಶಪ್ತಕರು ಪುನಃ ಅರ್ಜುನನ ಮೇಲೆ ದಾಳಿಮಾಡುತ್ತಾರೆ. ಆ ಸಮಯದಲ್ಲಿ ಅರ್ಜುನನು ಐಂದ್ರಾಸ್ತ್ರವನ್ನು ಪ್ರಯೋಗಿಸುತ್ತಾನೆ. ಅದರ ಪರಿಣಾಮವನ್ನು ಸಂಜಯನು ಹೃದಯಂಗಮವಾಗಿ ವರ್ಣಿಸುತ್ತಾನೆ. ಸಂಶಪ್ತಕರಲ್ಲಿ ಅನೇಕರು ಅಸುನೀಗುತ್ತಾರೆ. ಉಳಿದವರು ಪಲಾಯನಮಾಡುತ್ತಾರೆ. ಅರ್ಜುನನು ಧೂಮರಹಿತನಾದ ಯಜ್ಞೇಶ್ವರನಂತೆಯೇ ವಿರಾಜಿಸುತ್ತಾನೆ.

೨೮ನೆಯ ಅಧ್ಯಾಯ: ಯುಧಿಷ್ಠಿರ-ದುರ್ಯೋಧನರ ಯುದ್ಧದೊಡನೆ ಈ ಅಧ್ಯಾಯವು ಪ್ರಾರಂಭವಾಗುತ್ತದೆ. ಹದಿಮೂರು ಬಾಣಗಳ ಪ್ರಯೋಗದಿಂದ ಯುಧಿಷ್ಠಿರನು ದುರ್ಯೋಧನನ ನಾಲ್ಕು ಕುದುರೆಗಳನ್ನೂ ಸಾರಥಿಯನ್ನೂ ಸಂಹರಿಸಿ, ಧ್ವಜ-ಧನುಸ್ಸುಗಳನ್ನೂ, ಕತ್ತಿಯನ್ನೂ ಕತ್ತರಿಸಿ ಉಳಿದೈದು ಬಾಣಗಳಿಂದ ದುರ್ಯೋಧನನನ್ನು ಪೀಡಿಸುತ್ತಾನೆ.

ಆ ಸಮಯದಲ್ಲಿ ದುರ್ಯೋಧನನ ಸಹಾಯಕ್ಕೆ ಕರ್ಣಾಶ್ವತ್ಥಾಮರಾದಿಯಾಗಿ ಕುರುಯೋಧರೆಲ್ಲರೂ ಬರುತ್ತಾರೆ. ಯುಧಿಷ್ಠಿರನ ಕಡೆಗೆ ಭೀಮಾದಿಗಳೂ ಸೇರಿಕೊಳ್ಳುತ್ತಾರೆ. ಎರಡು ಪಕ್ಷಗಳ ಸೈನಿಕರಿಗೂ ಭಯಂಕರವಾದ ಯುದ್ಧವು ಪ್ರಾರಂಭವಾಗುತ್ತದೆ. ಅಧ್ಯಾಯದ ಕಡೆಯವರೆಗೂ ಹದ್ದುಬಸ್ತು ತಪ್ಪಿದ ಯುದ್ಧದ ವರ್ಣನೆಯಿದೆ. ಪಾಂಚಾಲಯೋಧರನ್ನು ಕರ್ಣನೂ, ತ್ರಿಗರ್ತರನ್ನು ಅರ್ಜುನನೂ ಸಂಹರಿಸುತ್ತಾರೆ. ಭೀಮಸೇನನು ಕುರುಗಳ ಗಜಸೈನ್ಯವನ್ನು ಸಂಪೂರ್ಣವಾಗಿ ವಿನಾಶಮಾಡುತ್ತಾನೆ. ಹೀಗೆ ಕುರು-ಪಾಂಡವರ ಸೈನ್ಯಗಳಲ್ಲಿ ಅಪಾರವಾದ ಜನಹಾನಿಯಾಗುತ್ತದೆ.

೨೯ನೆಯ ಅಧ್ಯಾಯ: ಯುದ್ಧದ ವೃತ್ತಾಂತವನ್ನು ಕೇಳಿ ಧೃತರಾಷ್ಟ್ರನಿಗೆ ಬಹಳ ದುಃಖವಾಗುತ್ತದೆ. "ನ ಸನ್ತಿ ಸೂತ ಕೌರವ್ಯಾಃ ಕುರುಗಳು ಇನ್ನು ಉಳಿಯಲಾರರು"-ಎಂದು ಉದ್ಗಾರಹಾಕುತ್ತಾನೆ. 'ದುರ್ಯೋಧನನು ರಥಹೀನನಾದ ವಿಷಯವನ್ನು ಹೇಳಿದೆ. ಮುಂದೇನಾಯಿತು?'–ಎಂದು ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ. ಸಂಜಯನು ಮುಂದಿನ ವಿಷಯವನ್ನು ಹೇಳುತ್ತಾ ಹೋಗುತ್ತಾನೆ.

ದುರ್ಯೋಧನನು ಮತ್ತೊಂದು ರಥವನ್ನು ತೆಗೆದುಕೊಂಡು ಧರ್ಮಜನೊಡನೆ ಯುದ್ಧಕ್ಕೆ ಹೋಗುತ್ತಾನೆ. ಇಬ್ಬರಿಗೂ ಭಯಂಕರವಾದ ಯುದ್ಧವು ಪ್ರಾರಂಭವಾಗುತ್ತದೆ. ದುರ್ಯೋಧನನು ಧರ್ಮಜನ ಬಿಲ್ಲನ್ನು ಕತ್ತರಿಸುತ್ತಾನೆ. ಧರ್ಮಜನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಕೌರವನ ಧನುಸ್ಸನ್ನೂ ಧ್ವಜವನ್ನೂ ಕತ್ತರಿಸುತ್ತಾನೆ. ದುರ್ಯೋಧನನು ಮತ್ತೊಂದು ಧನುಸ್ಸನ್ನು ತೆಗೆದುಕೊಳ್ಳುತ್ತಾನೆ. ಇಬ್ಬರಿಗೂ ಬಾಣಗಳ ಮೂಲಕವಾಗಿ ಯುದ್ಧವು ಸ್ವಲ್ಪಹೊತ್ತು ನಡೆಯುತ್ತದೆ. ಅನಂತರ ದುರ್ಯೋಧನನು

ಧರ್ಮಜನ ಮೇಲೆ ಶಕ್ತ್ಯಾಯುಧವನ್ನು ಪ್ರಯೋಗಿಸುತ್ತಾನೆ. ಧರ್ಮಜನು ಅದನ್ನು ಕತ್ತರಿಸಿದನಂತರ ದುರ್ಯೋಧನನು ಭಲ್ಲಗಳಿಂದ ಯುಧಿಷ್ಠಿರನನ್ನು ಗಾಯಗೊಳಿಸುತ್ತಾನೆ. ಅನಂತರ ಯುಧಿಷ್ಠಿರನು ಕೋಪಗೊಂಡು ತೀಕ್ಷ್ಣವಾದ ಬಾಣವೊಂದನ್ನು ಧನುಸ್ಸಿನಲ್ಲಿ ಯೋಜಿಸಿ ದುರ್ಯೋಧನನ ಮೇಲೆ ಬಿಡುತ್ತಾನೆ. ಅದರಿಂದ ದುರ್ಯೋಧನನು ಮೂರ್ಛೆಹೊಂದುತ್ತಾನೆ. ಈ ಸಂದರ್ಭದಲ್ಲಿ ಗಮನಿಸಬೇಕಾದ ಒಂದಂಶವಿದೆ:

೨೮ನೆಯ ಅಧ್ಯಾಯ: **'ಸ ತು ಬಾಣಃ ತವ ಪುತ್ರಂ ರಾಜಾನಂ ಸಮಾಸಾದ್ಯ ವ್ಯಾಮೋಹಯತ**-ಆ ಬಾಣವು ನಿನ್ನ ಮಗನಾದ ದುರ್ಯೋಧನನನ್ನು ಘಾಸಿಪಡಿಸಿ ಮೂರ್ಛಿತನನ್ನಾಗಿ ಮಾಡಿತು'- ಎಂದಿದೆ. ಇದಾದನಂತರ ಮುಂದಿನ ಮೂರು ಶ್ಲೋಕಗಳ ತಾತ್ಪರ್ಯವು ಹೀಗಿದೆ: 'ಕ್ರುದ್ಧನಾದ ದುರ್ಯೋಧನನು ಗದೆಯನ್ನೆತ್ತಿಕೊಂಡು ಧರ್ಮರಾಜನ ಬಳಿಗೆ ಧಾವಿಸಿದನು. ಅದನ್ನು ಕಂಡ ಧರ್ಮರಾಜನು ನಿನ್ನ ಮಗನ ಮೇಲೆ ಶಕ್ತ್ಯಾಯುಧವನ್ನು ಪ್ರಯೋಗಿಸಿದನು. ರಥದಲ್ಲಿದ್ದ ದುರ್ಯೋಧನನು ಪ್ರಹೃತನಾಗಿ ಮೂರ್ಛೆ ಹೋದನು.' ೨೮ನೆಯ ಶ್ಲೋಕದಲ್ಲಿಯೇ 'ಬಾಣವು ದುರ್ಯೋಧನನನ್ನು ಮೂರ್ಛಿತನನ್ನಾಗಿ ಮಾಡಿತು.' ಎಂದಿರುವಾಗ ದುರ್ಯೋಧನನು ಗದೆಯನ್ನೆತ್ತಿಕೊಂಡು ಹೋದುದು ಹೇಗೆ? **ಗದಾಮುದ್ಯಮ್ಯ ಧರ್ಮರಾಜಮುಪಾದ್ರವತ್** (೨೯) ಗದೆಯನ್ನೆತ್ತಿ ಕೊಂಡು ಯುಧಿಷ್ಠಿರನ ಕಡೆಗೆ ಧಾವಿಸಿದನು– ಎಂದು ಸ್ಪಷ್ಟವಾಗಿರುವಾಗ ಧರ್ಮರಾಜನು ಪ್ರಹರಿಸಿದ ಶಕ್ತಿಯು ರಥಸ್ಥನಾಗಿದ್ದ ದುರ್ಯೋಧನನನ್ನು ಹೇಗೆ ಪ್ರಹರಿಸಿತು? ಗದೆಯನ್ನೆತ್ತಿಕೊಂಡು ಹೊರಟವನು ರಥಸ್ಥನಾಗಿರಲು ಸಾಧ್ಯವಿಲ್ಲವಲ್ಲವೇ? ಇದರ ಮುಂದಿನ ಶ್ಲೋಕದಲ್ಲಿ 'ಭೀಮನು ತನ್ನ ಪ್ರತಿಜ್ಞೆಯ ಪ್ರಕಾರ ತಾನೇ ದುರ್ಯೋಧನನನ್ನು ಸಂಹರಿಸಬೇಕಾಗಿರುವುದ ರಿಂದ ದುರ್ಯೋಧನನನ್ನು ಕೊಲ್ಲಕೂಡದೆಂದು ಯುಧಿಷ್ಠಿರನಿಗೆ ಹೇಳಿದನು' **ನಾಯಂ ವಧ್ಯಸ್ತವ ನೃಪ**(೩೩)–ಎಂದಿದೆ. ಸಾಮಾನ್ಯವಾಗಿ ಮೂರ್ಛೆಹೋದವರನ್ನು ಯಾರೂ ಸಂಹರಿಸುವುದಿಲ್ಲ. ಯುಧಿಷ್ಠಿರನು

ದುರ್ಯೋಧನನನ್ನು ಸಂಹರಿಸಲು ಹೊರಟಿದ್ದನು ಎಂಬುದಕ್ಕೆ ಇಲ್ಲಿ ಸಮರ್ಥನೆಯೂ ಇಲ್ಲ. ಆದುದರಿಂದ ಭೀಮಸೇನನ ಈ ಮಾತೂ ಅಸಹಜವೆಂದೇ ಕಾಣುತ್ತದೆ. ಈ ಕಾರಣಗಳಿಂದ ಇಲ್ಲಿರುವ ೪ ಶ್ಲೋಕಗಳೂ ಹೆಚ್ಚು ಶ್ಲೋಕಗಳಾಗಿರಬಹುದೆಂದು ಅನುಮಾನಿಸಬಹುದಾಗಿದೆ. ವಿರೋಧಾಭಾಸಗಳಿರುವ ಈ ಶ್ಲೋಕಗಳಿಲ್ಲದಿದ್ದರೆ ಕಥೆಯು ಸಾಂಗತ್ಯದಿಂದ ಮುಂದುವರಿಯುತ್ತದೆ.

**ಸ ತು ಬಾಣಃ ಸಮಾಸಾದ್ಯ ತವ ಪುತ್ರಂ ಮಹಾರಥಮ್ ।**
**ವ್ಯಾಮೋಹಯತ ರಾಜಾನಂ ಧರಣೀಂ ಚ ದದಾರ ಹ ॥೨೮॥**

**ತತಸ್ತ್ವರಿತಮಾಗಮ್ಯ ಕೃತವರ್ಮಾ ತವಾತ್ಮಜಮ್ ।**
**ಪ್ರತ್ಯಪದ್ಯತ ರಾಜಾನಂ ನಿಮಗ್ನಂ ವ್ಯಸನಾರ್ಣವೇ ॥೩೪॥**

ಭಂ. ರಿ. ಇನ್ಸ್‌ಟಿಟ್ಯೂಟಿನ ಪುಸ್ತಕದಲ್ಲಿ ಭೀಮಸ್ತಮಾಹ ಚ ತತಃ ಎಂಬ ೩೩ನೆಯ ಶ್ಲೋಕವಿರುವುದಿಲ್ಲ.

ಅನಂತರ ಭೀಮಸೇನನು ಗದೆಯನ್ನು ಹಿಡಿದು ಕೃತವರ್ಮನೊಡನೆ ಯುದ್ಧಮಾಡಲು ಹೋಗುತ್ತಾನೆ. ಹೀಗೆ ಅಪರಾಹ್ಣಕಾಲದಲ್ಲಿ ಕೌರವ-ಪಾಂಡವರ ಯುದ್ಧವು ನಡೆಯುತ್ತದೆ.

೩೦ನೆಯ ಅಧ್ಯಾಯ: ಕರ್ಣಪುರಃಸರರಾದ ಕೌರವರು ಪುನಃ ಯುದ್ಧವನ್ನು ಪ್ರಾರಂಭಿಸುತ್ತಾರೆ. ಸಾತ್ಯಕಿಯು ಕರ್ಣನನ್ನು ಎದುರಿಸಿ ಯುದ್ಧಮಾಡುತ್ತಾನೆ. ಆ ಸಮಯದಲ್ಲಿ ಕೃಷ್ಣಾರ್ಜುನರೂ ಯುದ್ಧದಲ್ಲಿ ಪಾಲುಗೊಳ್ಳಲು ಬರುತ್ತಾರೆ. ಆ ವೇಳೆಗೆ ಸಂಧ್ಯಾಕಾಲವಾಗುತ್ತದೆ. ಇದನ್ನು ಸೂಚಿಸಲೋ ಎಂಬಂತೆ ಇಲ್ಲೊಂದು ಶ್ಲೋಕವಿದೆ. ಈ ಶ್ಲೋಕದಿಂದ ನಾವು ಕೃಷ್ಣಾರ್ಜುನರ ಕರ್ಮನಿಷ್ಠೆಯೆಷ್ಟೆಂಬುದನ್ನೂ ಅರಿತುಕೊಳ್ಳಬಹುದಾಗಿದೆ.
**ಅಥ ಪುರುಷವರೌ ಕೃತಾಹ್ನಿಕೌ । ಭವಮಭಿಪೂಜ್ಯ ಯಥಾವಿಧಿ ಪ್ರಭುಮ್ ॥೧೩॥**

'ಸಾಯಂಕಾಲ ಮಾಡಬೇಕಾದ ಆಹ್ನಿಕವನ್ನು ಮುಗಿಸಿ, ಪ್ರಭುವಾದ ಭವನನ್ನು ಯಥಾವಿಧಿಯಾಗಿ ಸಂಪೂಜಿಸಿ ರಣಾಂಗಣಕ್ಕೆ ಧಾವಿಸಿದರು." ಅರ್ಜುನನು ರಣಾಂಗಣಕ್ಕೆ ಕಾಲಿಡುವಾಗಲೇ ಶತ್ರುಸೈನಿಕರನ್ನು ಧ್ವಂಸ

ಮಾಡಿಕೊಂಡೇ ಹೋಗುತ್ತಾನೆ. ದುರ್ಯೋಧನನು ಅರ್ಜುನನನ್ನು ಎದುರಿಸುತ್ತಾನೆ. ಅರ್ಜುನನು ಎಂಟು ಬಾಣಗಳಿಂದ ಅವನ ಸೂತನನ್ನೂ ಮತ್ತು ನಾಲ್ಕು ಕುದುರೆಗಳನ್ನೂ ಸಂಹರಿಸಿ ಧನುಸ್ಸನ್ನೂ, ಧ್ವಜವನ್ನೂ ಮತ್ತು ಛತ್ರವನ್ನೂ ಕತ್ತರಿಸುತ್ತಾನೆ. ಪ್ರಾಣಾಂತಕರವಾದ ಒಂಬತ್ತನೆಯ ಬಾಣವನ್ನು ದುರ್ಯೋಧನನ ಮೇಲೆ ಬಿಟ್ಟಾಗ ಅಶ್ವತ್ಥಾಮನು ಅದನ್ನು ಕತ್ತರಿಸುತ್ತಾನೆ. ಅದಕ್ಕೆ ಪ್ರತಿಯಾಗಿ ಅರ್ಜುನನು ಅಶ್ವತ್ಥಾಮಾ, ಕೃತವರ್ಮಾ ಮತ್ತು ದುಃಶಾಸನರ ಧನುಸ್ಸುಗಳನ್ನೂ ಕತ್ತರಿಸಿ ಕರ್ಣನೊಡನೆ ಯುದ್ಧಮಾಡಲು ಹೋಗುತ್ತಾನೆ. ಸಾತ್ಯಕಿಯೊಡನೆ ಯುದ್ಧಮಾಡುತ್ತಿದ್ದ ಕರ್ಣನು ಅವನನ್ನು ಅಲ್ಲಿಯೇ ಬಿಟ್ಟು ಕೃಷ್ಣ-ಪಾರ್ಥರನ್ನು ಬಾಣಗಳಿಂದ ಪ್ರಹರಿಸುತ್ತಾನೆ. ಆ ಸಮಯದಲ್ಲಿ ಪಾಂಡವರ ಕಡೆಯ ಮಹಾರಥರೆಲ್ಲರೂ ಒಟ್ಟಾಗಿ ಕರ್ಣನನ್ನು ಆಕ್ರಮಿಸುತ್ತಾರೆ. ಅವರೆಲ್ಲರನ್ನೂ ಕರ್ಣನೊಬ್ಬನೇ ಎದುರಿಸಿ ತಡೆದು ನಿಲ್ಲಿಸುತ್ತಾನೆ. ಅನಂತರ ಅರ್ಜುನನು ಪುನಃ ಕರ್ಣನಿಗೆ ಎದುರಾಗಿ ನಿಂತು ಎಲ್ಲ ದಿಕ್ಕುಗಳನ್ನೂ ಬಾಣಗಳಿಂದಲೇ ತುಂಬಿಬಿಡುತ್ತಾನೆ. ಅರ್ಜುನನ ಬಾಣಪ್ರಹಾರವನ್ನು ಸಹಿಸಿಕೊಳ್ಳಲಾರದೇ ಕೌರವಸೈನಿಕರು ಪಲಾಯನ ಮಾಡುತ್ತಾರೆ. ಆ ವೇಳೆಗೆ ಸೂರ್ಯನೂ ಅಸ್ತಂಗತನಾಗುತ್ತಾನೆ. ಕೌರವರಿಗೆ ರಾತ್ರಿಯ ಯುದ್ಧವು ಬೇಡವಾಗುತ್ತದೆ. ಎಲ್ಲರೂ ತಮ್ಮ-ತಮ್ಮ ಶಿಬಿರಗಳಿಗೆ ತೆರಳುತ್ತಾರೆ. ಪಾಂಡವರು ವಿಜಯಿಗಳಾಗಿ ಸಿಂಹನಾದಗಳನ್ನು ಮಾಡಿ ಕೊಂಡು ಮಂಗಳವಾದ್ಯಗಳೊಡನೆ ಶಿಬಿರಕ್ಕೆ ಹಿಂದಿರುಗುತ್ತಾರೆ. ಆ ಘೋರರಾತ್ರಿಯಲ್ಲಿ ರಾಕ್ಷಸ-ಪಿಶಾಚರು ಗುಂಪು-ಗುಂಪಾಗಿ ರಣಾಂಗಣವನ್ನು ಪ್ರವೇಶಿಸುತ್ತಾರೆ. ಕರ್ಣನ ಸೇನಾಪತ್ಯದ ಮೊದಲನೆಯ ದಿನದ ಅಥವಾ ಪಾಂಡವ-ಕೌರವರ ಹದಿನಾರನೆಯ ದಿವಸದ ಯುದ್ಧವು ಈ ಅಧ್ಯಾಯದೊಂದಿಗೆ ಮುಗಿಯುತ್ತದೆ.

## ರಾತ್ರಿಯಲ್ಲಿ ಕೌರವರ ಮಂತ್ರಾಲೋಚನೆ: ಧೃತರಾಷ್ಟ್ರನು ದೈವದ ಪ್ರಾಬಲ್ಯವನ್ನು ಪ್ರತಿಪಾದಿಸುವುದು: ಸಂಜಯನಿಂದ ಧೃತರಾಷ್ಟ್ರನ ದೋಷಾರೋಪಣೆ: ಕರ್ಣ-ದುರ್ಯೋಧನರ ಸಂಭಾಷಣೆ

ಧೃತರಾಷ್ಟ್ರನು ಹೇಳುತ್ತಾನೆ:

"ಸಂಜಯ! ನಿಶ್ಚಯವಾಗಿಯೂ ಅರ್ಜುನನು ಸ್ವೇಚ್ಛೆಯಿಂದಲೇ (ತನ್ನ ಅಭಿಪ್ರಾಯಕ್ಕೆ ತಕ್ಕಂತೆಯೇ) ಸಮರದಲ್ಲಿ ನಮ್ಮ ಕಡೆಯವರೆಲ್ಲರನ್ನೂ ಸಂಹರಿಸಿದನು. ಸಮರಾಂಗಣದಲ್ಲಿ ಯಮರಾಜನೂ ಸಹ ವಧೋದ್ಯತನಾದ ಅರ್ಜುನನಿಂದ ಬಿಡುಗಡೆ ಹೊಂದಲಾರನು.

**ಪಾರ್ಥಶ್ಚೈಕೋಽಹರದ್ಭದ್ರಾಮೇಕಶ್ಚಾಗ್ನಿಮತರ್ಪಯತ್ ।**
**ಏಕಶ್ಚೇಮಾಂ ಮಹೀಂ ಜಿತ್ವಾ ಚಕ್ರೇ ಬಲಿಭೃತೋ ನೃಪಾನ್ ॥೨॥**

ಅರ್ಜುನನೊಬ್ಬನೇ ಏಕಾಕಿಯಾಗಿ ಸುಭದ್ರೆಯನ್ನು ಹರಣಮಾಡಿದನು. ಏಕಾಕಿಯಾಗಿಯೇ ಖಾಂಡವವನದಲ್ಲಿ ಅಗ್ನಿಯನ್ನು ತೃಪ್ತಿಪಡಿಸಿದನು. ಪಾರ್ಥನೊಬ್ಬನೇ ಈ ಪ್ರಪಂಚವೆಲ್ಲವನ್ನೂ ಜಯಿಸಿ ಎಲ್ಲ ರಾಜರೂ ಯುಧಿಷ್ಠಿರನಿಗೆ ಕಪ್ಪ-ಕಾಣಿಕೆಗಳನ್ನು ಕೊಡುವಂತೆ ಮಾಡಿದನು.

**ಏಕೋ ನಿವಾತಕವಚಾನಹನದ್ದಿವ್ಯಕಾರ್ಮುಕಃ ।**
**ಏಕಃ ಕಿರಾತರೂಪೇಣ ಸ್ಥಿತಂ ಶರ್ವಮಯೋಧಯತ್ ॥೩॥**

ದಿವ್ಯಧನುರ್ಧರನಾದ ಅರ್ಜುನನೊಬ್ಬನೇ ನಿವಾತಕವಚರೆಲ್ಲರನ್ನೂ ಸಂಹರಿಸಿದನು. ಅರ್ಜುನನೊಬ್ಬನೇ ಕಿರಾತರೂಪದಲ್ಲಿದ್ದ ಈಶ್ವರನೊಡನೆ ಯುದ್ಧಮಾಡಿದನು.

**ಏಕೋ ಹ್ಯರಕ್ಷದ್ಭರತಾನೇಕೋ ಭವಮತೋಷಯತ್ ।**
**ತೇನೈಕೇನ ಜಿತಾಃ ಸರ್ವೇ ಮಹೀಪಾ ಹ್ಯುಗ್ರತೇಜಸಾ ॥೪॥**

ಘೋಷಯಾತ್ರಾಸಮಯದಲ್ಲಿ ದುರ್ಯೋಧನನೇ ಮೊದಲಾದ ಕೌರವರನ್ನು ರಕ್ಷಣೆಮಾಡಿದನು. ಏಕಾಕಿಯಾಗಿಯೇ ಕಿರಾತರೂಪನಾದ ಈಶ್ವರನನ್ನು ಯುದ್ಧದ ಮೂಲಕವಾಗಿ ಸಂತೋಷಗೊಳಿಸಿದನು. ಉಗ್ರ

ತೇಜಸ್ವಿಯಾದ ಆ ಅರ್ಜುನನೊಬ್ಬನಿಂದಲೇ ನಮ್ಮ ಕಡೆಯ ಎಲ್ಲ ಮಹೀಪಾಲರೂ ಪರಾಜಿತರಾದರು.

ಈ ಕಾರಣಗಳಿಂದ ಅರ್ಜುನನ ಕೈಯಲ್ಲಿ ಸೋತುಹೋದ ನಮ್ಮ ಕಡೆಯ ಯೋಧರು ನಿಶ್ಚಯವಾಗಿಯೂ ನಿಂದೆಗೆ ಅರ್ಹರಲ್ಲ. ಇದಕ್ಕೆ ಬದಲಾಗಿ ಅವರು ಪ್ರಶಂಸೆಗೇ ಪಾತ್ರರಾಗಿದ್ದಾರೆ. ಆ ನಮ್ಮ ಸೈನಿಕರು ಮುಂದೇನು ಮಾಡಿದರೆಂಬುದನ್ನು ಹೇಳು. ದುರ್ಯೋಧನನು ಶಿಬಿರಕ್ಕೆ ಹಿಂದಿರುಗಿದನಂತರ ಏನು ಮಾಡಿದನು?"

"ಮಹಾರಾಜ! ಕೌರವಸೈನಿಕರು ಬಾಣಗಳಿಂದ ಗಾಯಗೊಂಡು ಛಿನ್ನ-ಭಿನ್ನವಾದ ಅವಯವಗಳುಳ್ಳವರಾಗಿದ್ದರು. ಕವಚಗಳಿಂದಲೂ, ಆಯುಧ ಗಳಿಂದಲೂ ಮತ್ತು ವಾಹನಗಳಿಂದಲೂ ವಿಹೀನರಾಗಿದ್ದರು. ಶತ್ರುಗಳಿಂದ ಬಹಳವಾಗಿ ಪೀಡಿಸಲ್ಪಟ್ಟು ಪರಾಜಿತರಾಗಿದ್ದ ಮಾನಧನರಾದ ಅವರೆಲ್ಲರೂ ಬಹಳ ದೀನಸ್ವರದಿಂದ ಮಾತನಾಡುತ್ತಿದ್ದರು. ಹಲ್ಲುಗಳನ್ನು ಕಿತ್ತು ವಿಷಹೀನವನ್ನಾಗಿ ಮಾಡಿ ಕಾಲುಗಳಿಂದ ತುಳಿಯಲ್ಪಟ್ಟ ಸರ್ಪಗಳಂತಿದ್ದ ಕೌರವರು ಶಿಬಿರಗಳಲ್ಲಿ ಪುನಃ ತಾವು ಮುಂದೆ ಕೈಗೊಳ್ಳಬೇಕಾದ ಕಾರ್ಯಾಚರಣೆಯ ಬಗೆಗೆ ಸಮಾಲೋಚಿಸುತ್ತಿದ್ದರು.

ಕರ್ಣನು ಕೋಪಗೊಂಡ ಸರ್ಪವು ಬುಸುಗುಟ್ಟುವಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ, ಕೈಯಿಂದ ಕೈಯನ್ನು ಉಜ್ಜಿಕೊಳ್ಳುತ್ತಾ, ನಿನ್ನ ಮಗನನ್ನು ನೋಡುತ್ತಾ ಅಲ್ಲಿದ್ದವರೆಲ್ಲರನ್ನೂ ಉದ್ದೇಶಿಸಿ ಹೇಳಿದನು:

**ಯತ್ತೋ ದೃಢಶ್ಚ ದಕ್ಷಶ್ಚ ಧೃತಿಮಾನರ್ಜುನಸ್ತದಾ ।**
**ಸಮ್ಬೋಧಯತಿ ಚಾಪ್ಯೇನಂ ಯಥಾಕಾಲಮಧೋಕ್ಷಜಃ ॥೯॥**

ಅರ್ಜುನನು ಪ್ರಯತ್ನಶೀಲನೂ, ದೃಢನೂ (ಹಿಡಿದ ಕೆಲಸವನ್ನು ಬಿಡದವನು), ದಕ್ಷನೂ ಮತ್ತು ಧೈರ್ಯವಂತನೂ ಆಗಿದ್ದಾನೆ. ಇದರ ಜೊತೆಗೆ ಅಧೋಕ್ಷಜನು ಸಮಯಗಳಲ್ಲಿ ಅರ್ಜುನನಿಗೆ ತತ್ಕಾಲೋಚಿತವಾದ ಸಲಹೆಗಳನ್ನೂ ನೀಡುತ್ತಿರುತ್ತಾನೆ.

ಮಹೀಪತಿಯೇ! ಅವನು ಬಹಳ ಬೇಗ ಅಸ್ತ್ರಗಳನ್ನು ಬಿಡುತ್ತಿದ್ದುದರಿಂದ ಇಂದು ನಾವು ಅವನಿಂದ ವಂಚಿತರಾದೆವು. ಆದರೆ ನಾಳೆ ನಾನು ಅವನ ಸಂಕಲ್ಪಗಳೆಲ್ಲವನ್ನೂ ನಿರರ್ಥಕಗೊಳಿಸುತ್ತೇನೆ."

ಮಹಾರಾಜ! ಕರ್ಣನ ಮಾತಿಗೆ ದುರ್ಯೋಧನನು ಹಾಗೆಯೇ ಆಗಲೆಂದು ಹೇಳಿ, ಅಲ್ಲಿ ನೆರೆದಿದ್ದ ರಾಜರಿಗೆ ತಮ್ಮ ತಮ್ಮ ಶಿಬಿರಗಳಿಗೆ ಹೋಗಲು ಅನುಮತಿಯನ್ನಿತ್ತನು. ರಾಜನಿಂದ ಅನುಜ್ಞೆಯನ್ನು ಪಡೆದು ಆ ರಾಜರೆಲ್ಲರೂ ತಮ್ಮ-ತಮ್ಮ ಶಿಬಿರಗಳನ್ನು ಸೇರಿದರು. ಆ ರಾತ್ರಿಯನ್ನು ಸುಖವಾಗಿ ಕಳೆದು ಬೆಳಗಾಗುತ್ತಲೇ ಪರಮಹೃಷ್ಟರಾಗಿ ಯುದ್ಧಕ್ಕೆ ಹೊರಟರು. ರಣಾಂಗಣಕ್ಕೆ ಬಂದ ಕುರುಯೋಧರು, ಬೃಹಸ್ಪತಿ ಮತ್ತು ಶುಕ್ರರ ಅಭಿಪ್ರಾಯಾನುಸಾರವಾಗಿ ಧರ್ಮರಾಜನು ಬಹಳ ಪ್ರಯತ್ನದಿಂದ ರಚಿಸಿದ್ದ ದುರ್ಜಯವಾದ ವ್ಯೂಹವನ್ನು ನೋಡಿದರು. ಬಳಿಕ ಶತ್ರುವೀರಹಂತಕನಾದ ದುರ್ಯೋಧನನು, ಶತ್ರುಗಳು ರಚಿಸಿರುವ ವ್ಯೂಹಕ್ಕೆ ವಿರುದ್ಧವಾಗಿ ವ್ಯೂಹವನ್ನು ರಚಿಸುವ ಸಾಮರ್ಥ್ಯವಿರುವ, ವೃಷಭಸ್ಕಂಧನಾದ, ಪ್ರಮುಖ ವೀರನಾದ ಕರ್ಣನನ್ನು ಸ್ಮರಿಸಿದನು.

ಪುರನ್ದರಸಮಂ ಯುದ್ಧೇ ಮರುದ್ಗಣಸಮಂ ಬಲೇ ।
ಕಾರ್ತವೀರ್ಯಸಮಂ ವೀರ್ಯೇ ಕರ್ಣಂ ರಾಜ್ಞೋಽಗಮನ್ಮನಃ ॥

ಯುದ್ಧದಲ್ಲಿ ಇಂದ್ರನಿಗೆ ಸಮಾನನಾಗಿ ಯುದ್ಧಮಾಡುವವನಾಗಿದ್ದ, ಬಲದಲ್ಲಿ ಮರುದ್ಗಣಗಳಿಗೆ ಸಮಾನನಾಗಿದ್ದ, ವೀರ್ಯದಲ್ಲಿ ಕಾರ್ತವೀರ್ಯನಿಗೆ ಸಮಾನನಾಗಿದ್ದ ಕರ್ಣನನ್ನು ದುರ್ಯೋಧನರಾಜನ ಮನಸ್ಸು ಸ್ಮರಿಸಿತು.

ನಾಶಕರವಾದ ಕಷ್ಟಸ್ಥಿತಿಯಲ್ಲಿರುವವನು ಬಂಧುಜನರನ್ನು ಸ್ಮರಿಸುವಂತೆ–(ಸಮಸ್ತಸೈನಿಕರೂ) ಮಹಾಧನುರ್ಧರನಾದ, ಸೂತಪುತ್ರನಾದ ಕರ್ಣನನ್ನೇ ಸ್ಮರಿಸಿದನು."

ಧೃತರಾಷ್ಟ್ರನು ಕುಪಿತನಾಗಿ ಹೇಳುತ್ತಾನೆ:

"ಸಂಜಯ! ಅನಂತರ ದುರ್ಯೋಧನನು ಏನು ಮಾಡಿದನು? ಮೂರ್ಖರೇ! ನಿಮ್ಮೆಲ್ಲರ ಮನಸ್ಸು ವೈಕರ್ತನಕರ್ಣನನ್ನು ಕುರಿತು ಏಕೆ ಚಿಂತಿಸುತ್ತಿದ್ದಿತು? ಚಳಿಯಿಂದ ಪೀಡಿತರಾದ ಜನರು ಸೂರ್ಯನ ಕಡೆಗೆ ನೋಡುವಂತೆ–ಆ ಸಮಯದಲ್ಲಿ ನೀವು ರಾಧೇಯನನ್ನು ಹುಡುಕುತ್ತಿದ್ದಿರಾ? ಸಾಯಂಕಾಲವಾಗುತ್ತಲೇ ಸೈನಿಕರೆಲ್ಲರೂ ಶಿಬಿರಗಳಿಗೆ ಹಿಂದಿರುಗಿದರು.

ಬೆಳಗಾಗುತ್ತಲೇ ಪುನಃ ಸಂಗ್ರಾಮವು ಆರಂಭವಾಯಿತು. ವೈಕರ್ತನ ಕರ್ಣನು ಅಂದು ಅಲ್ಲಿ ಹೇಗೆ ಯುದ್ಧಮಾಡಿದನು? ಪಾಂಡವರೆಲ್ಲರೂ ಕರ್ಣನೊಡನೆ ಹೇಗೆ ಯುದ್ಧಮಾಡಿದರು?

**ಕರ್ಣೋ ಹ್ಯೇಕೋ ಮಹಾಬಾಹುರ್ಹನ್ಯಾತ್ಪಾರ್ಥಾನ್ಸಸೃಂಜಯಾನ್ ।**
**ಕರ್ಣಸ್ಯ ಭುಜಯೋರ್ವೀರ್ಯಂ ಶಕ್ರವಿಷ್ಣುಸಮಂ ಯುಧಿ ॥೧೯॥**
**ತಸ್ಯ ಶಸ್ತ್ರಾಣಿ ಘೋರಾಣಿ ವಿಕ್ರಮಶ್ಚ ಮಹಾತ್ಮನಃ ।**
**ಕರ್ಣಮಾಶ್ರಿತ್ಯ ಸಂಗ್ರಾಮೇ ಮತ್ತೋ ದುರ್ಯೋಧನೋ ನೃಪಃ ॥೨೦॥**

'ಮಹಾಬಾಹುವಾದ ಕರ್ಣನೊಬ್ಬನೇ ಸೃಂಜಯಸಮೇತರಾದ ಪಾರ್ಥರೆಲ್ಲರನ್ನೂ ಸಂಹರಿಸಬಲ್ಲನು. ಯುದ್ಧದಲ್ಲಿ ಕರ್ಣನ ಭುಜಗಳ ಪರಾಕ್ರಮವು ಇಂದ್ರೋಪೇಂದ್ರರ ಪರಾಕ್ರಮಕ್ಕೆ ಸಮಾನವಾದುದು. ಮಹಾತ್ಮನಾದ ಕರ್ಣನ ಶಸ್ತ್ರಗಳು ಅತಿಘೋರವಾದುವುಗಳು. ಅವನ ಪರಾಕ್ರಮವೂ ಸಹ ಅದ್ಭುತವಾದುದು'–ಹೀಗೆಂಬುದಾಗಿ ಯೋಚಿಸುತ್ತಾ ದುರ್ಯೋಧನನು ಕರ್ಣನನ್ನೇ ಸಂಪೂರ್ಣವಾಗಿ ಅವಲಂಬಿಸಿ ಅದರಿಂದಲೇ ಮತ್ತನಾಗಿಬಿಟ್ಟಿದ್ದನು. ಪಾಂಡುಪುತ್ರನಾದ ಯುಧಿಷ್ಠಿರನಿಂದ ಬಹಳವಾಗಿ ಪೀಡಿಸಲ್ಪಟ್ಟ ದುರ್ಯೋಧನನನ್ನು ನೋಡಿ ಕರ್ಣನೇನು ಹೇಳಿದನು? ಪಾಂಡುಪುತ್ರರು ಪರಮಾದ್ಭುತವಾದ ಪರಾಕ್ರಮವನ್ನು ರಣರಂಗದಲ್ಲಿ ತೋರಿಸುತ್ತಿದ್ದುದನ್ನು ನೋಡಿದನಂತರ ಅದಕ್ಕೆ ಮಹಾರಥನಾದ ಕರ್ಣನ ಪರಾಕ್ರಮವೆಷ್ಟೆಂಬುದು ದುರ್ಯೋಧನನಿಗೆ ಪ್ರತ್ಯಕ್ಷನಿದರ್ಶನವಾಗಿದ್ದರೂ ಈ ಮೂಢನು ಪುನಃ ಕರ್ಣನನ್ನೇ ಅವಲಂಬಿಸಿ ಯುದ್ಧದಲ್ಲಿ ಕೇಶವನೊಡಗೂಡಿರುವ ಪುತ್ರಸಹಿತರಾದ ಪಾಂಡವರನ್ನು ಜಯಿಸಲು ಉತ್ಸಾಹಿತನಾಗಿದ್ದನು. ಸಂಜಯ! ನಿಶ್ಚಯವಾಗಿಯೂ ಇದಕ್ಕಿಂತಲೂ ದುಃಖತರವಾದುದು ಮತ್ತೊಂದಿಲ್ಲ. ಮಹಾವೇಗವಂತನಾದ (ಪ್ರತಾಪಶಾಲಿಯಾದ) ಕರ್ಣನೂ ಯುದ್ಧದಲ್ಲಿ ಪಾಂಡವರನ್ನು ದಾಟಲು (ಜಯಿಸಲು) ಅಸಮರ್ಥನಾದನು. ನಿಶ್ಚಯವಾಗಿಯೂ ದೈವವೇ ಎಲ್ಲರಿಗೂ ಪರಮಾಶ್ರಯವಾಗಿದೆ. ದೈವಂ ನೂನಂ ಪರಾಯಣಮ್ (ಎಷ್ಟೇ

ಅತುಲಪರಾಕ್ರಮಿಗಳಾಗಿದ್ದರೂ ಮನುಷ್ಯಮಾತ್ರದವರನ್ನು ಅವಲಂಬಿಸುವು ದರಿಂದ ಯಾವ ಪ್ರಯೋಜನವೂ ಇಲ್ಲವೆಂಬುದು ಈ ನಿದರ್ಶನದಿಂದಲೇ ವ್ಯಕ್ತವಾಗುತ್ತದೆ.)

ಕಾರ್ಯಸಿದ್ಧಿಗಾಗಿ ದ್ಯೂತದಲ್ಲಿ ವಿಶ್ವಾಸವನ್ನಿಟ್ಟುದೇ ಈಗ ಘೋರವಾಗಿ ಪರಿಣಮಿಸಿದೆ. ಅಯ್ಯೋ! ನಾನು ದುರ್ಯೋಧನನು ಮಾಡಿದ ಅನೇಕಾಪ ರಾಧಗಳಿಂದ ಪ್ರಾಪ್ತವಾಗಿರುವ, ಮಹಾಘೋರವಾದ ಶಲ್ಯಗಳಂತೆ ಎದೆ ಯಲ್ಲಿ ನಾಟಿಕೊಂಡಿರುವ ಅನೇಕ ದುಃಖಗಳನ್ನೂ ಸಹಿಸಿಕೊಂಡಿರುತ್ತೇನೆ.

**ಸೌಬಲಂ ಚ ಸದಾ ತಾತ ನೀತಿಮಾನಿತಿ ಮನ್ಯತೇ ।**
**ಕರ್ಣಶ್ಚ ರಭಸೋ ನಿತ್ಯಂ ರಾಜಾ ತಂ ಚಾಪ್ಯನುವ್ರತಃ ॥೨೫॥**

ಆ ಸಮಯದಲ್ಲಿ ದುರ್ಯೋಧನನು ಜೂಜುಕೋರನಾದ ಶಕುನಿ ಯನ್ನೇ ಮಹಾನೀತಿಜ್ಞನೆಂದು ಭಾವಿಸಿದ್ದನು. ಕರ್ಣನು ಮಹಾವೇಗಶಾಲಿ ಯಾದ ಅದ್ವಿತೀಯನಾದ ಪರಾಕ್ರಮಿಯೆಂದೂ ಭಾವಿಸಿದ್ದನು. ಈ ಕಾರಣ ದಿಂದಲೇ ದುರ್ಯೋಧನನು ಅವನನ್ನೇ ಅನುಸರಣೆಮಾಡಿಕೊಂಡಿದ್ದನು. ನನ್ನ ಮಗನ ಅಭಿಪ್ರಾಯಕ್ಕೆ ವಿರುದ್ಧವಾಗಿಯೋ ಎಂಬಂತೆ ಈಗ ನಡೆಯುತ್ತಿರುವ ಮಹಾಯುದ್ಧಗಳಲ್ಲಿ ನನ್ನ ಮಕ್ಕಳು ಹತರಾಗುತ್ತಿರುವುದನ್ನೇ ಅನುದಿನವೂ ಕೇಳುತ್ತಲಿದ್ದೇನೆ.

**ನ ಪಾಣ್ಡವಾನಾಂ ಸಮರೇ ಕಶ್ಚಿದಸ್ತಿ ನಿವಾರಕಃ ।**
**ಸ್ತ್ರೀಮಧ್ಯಮಿವ ಗಾಹನ್ತೇ ದೈವಂ ತು ಬಲವತ್ತರಮ್ ॥೨೭॥**

ಅಬಲೆಯರ ಮಧ್ಯದಲ್ಲಿ ಧೈರ್ಯವಾಗಿ ನುಗ್ಗಿಹೋಗುವಂತೆ- ಪಾಂಡವರು ನಮ್ಮ ಸೈನ್ಯದ ಮಧ್ಯದಲ್ಲಿ ನುಗ್ಗಿಹೋಗುತ್ತಾರೆ. ಯುದ್ಧದಲ್ಲಿ ಪಾಂಡವರ ನಿವಾರಕನು (ಪಾಂಡವರನ್ನು ಹಿಂದಕ್ಕೆ ಸರಿಸುವವನು ಅರ್ಥಾತ್ ಪರಾಜಯಗೊಳಿಸುವವನು) ನಮ್ಮ ಪಕ್ಷದಲ್ಲಿ ಯಾರೂ ಇಲ್ಲವೆಂದೇ ನಾನು ಭಾವಿಸಿದ್ದೇನೆ. ನಿಶ್ಚಯವಾಗಿಯೂ ಈ ವಿಷಯದಲ್ಲಿ ದೈವವೇ ಬಲವತ್ತರವಾದುದೆಂದೂ ಭಾವಿಸುತ್ತೇನೆ.”

"ಮಹಾರಾಜ! ಇಂದಿನ ಈ ಮಹಾದುಃಖಗಳಿಗೆ ಮೂಲಕಾರಣವಾದ (ನಿನ್ನ ದೃಷ್ಟಿಯಲ್ಲಿ) ಧಾರ್ಮಿಕಕಾರ್ಯಗಳೆನಿಸಿದ್ದ ದ್ಯೂತವೇ ಮೊದಲಾದ ಹಿಂದಿನ ಪ್ರಸಂಗಗಳನ್ನೇ ಈಗಲೂ ಚಿಂತಿಸುತ್ತಿರುವೆ.

**ಅತಿಕ್ರಾನ್ತಂ ಹಿ ಯತ್ಕಾರ್ಯಂ ಪಶ್ಚಾಚ್ಚಿನ್ತಯತೇ ನರಃ ।**
**ತಚ್ಚಾಸ್ಯ ನ ಭವೇತ್ಕಾರ್ಯಂ ಚಿನ್ತಯಾ ಚ ವಿನಶ್ಯತಿ ॥೨೯॥**

ಮನುಷ್ಯನು ಹಿಂದೆ ನಡೆದುಹೋದ ಕಾರ್ಯದ ವಿಷಯವಾಗಿ ಈಗ ಚಿಂತಿಸುತ್ತಾ ಕುಳಿತುಕೊಂಡರೆ ಆ ಕಾರ್ಯವು ಕೈಗೂಡುವುದೂ ಇಲ್ಲ; ಚಿಂತೆಯಿಂದ ಅವನೇ ವಿನಾಶಹೊಂದುತ್ತಾನೆ.

ಹಿಂದೆ ಈ ವಿಷಯವು ನಿನಗೆ ತಿಳಿಯದೇ ಇರಲಿಲ್ಲ. ನಿನ್ನ ಮಕ್ಕಳು ಅಧರ್ಮಮಾರ್ಗದಲ್ಲಿ ಹೋಗುತ್ತಿರುವರೆಂಬುದನ್ನು ನೀನೂ ಮನಗಂಡಿದ್ದೆ. ಈ ವಿಧವಾದ ನೀತಿಯಿಂದ ಮುಂದೆ ನೀನು ಅತಿದುಃಖಕ್ಕೆ ಭಾಗಿಯಾಗಬೇಕಾಗುವುದೆಂದು ಸುಹೃದರೂ ಹೇಳಿದ್ದರು. ಆದರೆ ನೀನು 'ಇನ್ನೂ ಅನೇಕ ವರ್ಷಗಳಿವೆಯಲ್ಲಾ! ನೋಡಿಕೊಳ್ಳೋಣ'–ಎಂದೇ ಸುಮ್ಮನಿದ್ದುಬಿಟ್ಟೆ. ಈ ವಿಧವಾದ ಧೋರಣೆಯಿಂದಲೇ ನೀನು ಹಿಂದೆ ನಿನ್ನ ಮಗನು ಅನುಸರಿಸಿದ ಮಾರ್ಗವು ಉಚಿತವಾದುದೇ-ಅನುಚಿತವಾದುದೇ ಎಂದೂ ವಿಚಾರಮಾಡಲಿಲ್ಲ. ಪಾಂಡವರೇ ನಿನ್ನೊಡನೆ 'ಯುದ್ಧಮಾಡುವುದು ಬೇಡ'–ಎಂದು ಹಲವು ಬಾರಿ ಹೇಳಿದರು. ಆದರೆ ನಿನ್ನ ಮಗನ ಮೇಲಿನ ವಿಶೇಷವ್ಯಾಮೋಹದಿಂದಾಗಿ ನೀನು ಅವರ ಮಾತನ್ನು ಅಂಗೀಕರಿಸಲಿಲ್ಲ. ಪಾಂಡವರ ವಿಷಯದಲ್ಲಿ ನೀನು ಅನೇಕವಾದ ಘೋರಪಾಪಕರ್ಮಗಳನ್ನು ಮಾಡಿರುವೆ. ನಿನಗೋಸ್ಕರವಾಗಿಯೇ ಈಗ ಅತಿಘೋರವಾದ ರೀತಿಯಲ್ಲಿ ಪಾರ್ಥಿವಜನರ ಕ್ಷಯವೂ ಆಗುತ್ತಿದೆ. ಭರತರ್ಷಭ! ಆದುದರಿಂದ ಈಗ ನೀನು ನಡೆದುಹೋದ ಕಾರ್ಯವನ್ನು ಸ್ಮರಿಸಿ ದುಃಖಿಸಬೇಡ. (ದುಃಖಿಸುವುದರಿಂದ ಯಾವ ಪ್ರಯೋಜನವೂ ಇಲ್ಲ.) ಯುದ್ಧದ ವೃತ್ತಾಂತವನ್ನು ಯಥಾವತ್ತಾಗಿ ಕೇಳು. ಆ ಭಯಂಕರಸಂಹಾರಕಾರ್ಯದ ವರ್ಣನೆಯನ್ನು ಮಾಡುತ್ತೇನೆ.

ಮಹಾರಾಜ! ನಾನು ಈ ಹಿಂದೆ ಹೇಳಿದಂತೆ ಪ್ರಾತಃಕಾಲದಲ್ಲಿ ದುರ್ಯೋಧನನು ಯೋಚಿಸುತ್ತಿದ್ದ ವೇಳೆಗೆ ಸರಿಯಾಗಿ ಕರ್ಣನು ಬಂದು ಹೇಳಿದನು:

**ಅದ್ಯ ರಾಜನ್ಸಮೇಷ್ಯಾಮಿ ಪಾಣ್ಡವೇನ ಯಶಸ್ವಿನಾ ।**
**ನಿಹನಿಷ್ಯಾಮಿ ತಂ ವೀರಂ ಸ ವಾ ಮಾಂ ನಿಹನಿಷ್ಯತಿ ॥೩೭॥**

"ದುರ್ಯೋಧನ! ನಾನಿಂದು ಯಶೋವಂತನಾದ ಅರ್ಜುನನೊಡನೆ ಯುದ್ಧದಲ್ಲಿ ತೊಡಗುತ್ತೇನೆ. ಆ ವೀರನನ್ನು ನಾನಿಂದು ಸಂಹರಿಸುತ್ತೇನೆ ಅಥವಾ ಅವನಾದರೂ ನನ್ನನ್ನು ಸಂಹರಿಸುತ್ತಾನೆ.

ಇದುವರೆಗೆ ನನಗೂ (ಸೃಂಜಯ-ಪಾಂಚಾಲರ ಸಂಹಾರರೂಪವಾದ) ಕಾರ್ಯಗಳು ಬಹಳವಾಗಿದ್ದುವು. ಅದೇ ರೀತಿಯಲ್ಲಿ ಪಾರ್ಥನಿಗೂ (ಸಂಶಪ್ತಕರ ಸಂಹಾರವೇ ಮುಂತಾದ) ಅನೇಕ ಕಾರ್ಯಗಳಿದ್ದುವು. ಆದುದರಿಂದ ಇದುವರೆಗೆ ನನಗೂ ಮತ್ತು ಅರ್ಜುನನಿಗೂ ನೇರವಾದ ಸಮಾಗಮವೇ (ದ್ವೈರಥಯುದ್ಧವು) ಆಗಿರುವುದಿಲ್ಲ. ನನ್ನ ಬುದ್ಧಿಗೆ ತೋಚಿದಂತೆ ಆಡುತ್ತಿರುವ ಈ ಮಾತನ್ನೂ ನೀನೀಗ ಕೇಳು, ದುರ್ಯೋಧನ!

**ಅನಿಹತ್ಯ ರಣೇ ಪಾರ್ಥಂ ನಾಹಮೇಷ್ಯಾಮಿ ಭಾರತ ॥೩೭॥**

ಯುದ್ಧದಲ್ಲಿ ನಾನು ಪಾರ್ಥನನ್ನು ಸಂಹರಿಸದೇ ಹಿಂತಿರುಗುವುದಿಲ್ಲ. ಇಂದು ಪಾರ್ಥನು ನನ್ನ ಮೇಲೆ ಯುದ್ಧಕ್ಕೆ ಬರುವನೆಂಬುದಕ್ಕೆ ಸಮರ್ಥನೆಯೂ ಇದೆ. ನಮ್ಮ ಕಡೆಯಲ್ಲಿ ಪಾರ್ಥನಿಗೆ ಎದುರಾಗಿ ನಿಲ್ಲುವ ಮಹಾಪ್ರಮುಖರೆಲ್ಲರೂ ಹತರಾಗಿಹೋದರು. ಅವನನ್ನು ಎದುರಿಸಬಲ್ಲ ನಾನೊಬ್ಬನು ಮಾತ್ರವೇ ಈ ಪಕ್ಷದಲ್ಲುಳಿದಿದ್ದೇನೆ. ಮೇಲಾಗಿ ನಾನೀಗ ಇಂದ್ರನ ಶಕ್ತ್ಯಾಯುಧದಿಂದಲೂ ವಿಹೀನನಾಗಿದ್ದೇನೆ. ಆದುದರಿಂದ ಅವನಿಂದು ನನ್ನನ್ನು ಎದುರಿಸಿಯೇ ಎದುರಿಸುತ್ತಾನೆ. ಈ ವಿಷಯದಲ್ಲಿ ಸಂಶಯವೇ ಇಲ್ಲ. ಆದುದರಿಂದ ಶ್ರೇಯಸ್ಕರವಾದ ಇನ್ನೂ ಕೆಲವು ಮಾತುಗಳನ್ನು ನಿನ್ನೊಡನೆ ಹೇಳುತ್ತೇನೆ. ಅದನ್ನೂ ಲಾಲಿಸು. ನನಗೂ ಮತ್ತು ಅರ್ಜುನನಿಗೂ ದಿವ್ಯಾಸ್ತ್ರಗಳ ಬಲವಿದೆ. ಆದರೆ:

**ಕಾಯಸ್ಯ ಮಹತೋ ಭೇದೇ ಲಾಘವೇ ದೂರಪಾತನೇ ।**
**ಸೌಷ್ಠವೇ ಚಾಸ್ತ್ರಪಾತೇ ಚ ಸವ್ಯಸಾಚೀ ನ ಮತ್ಸಮಃ ॥೪೦॥**

ದೊಡ್ಡ-ದೊಡ್ಡ ಶರೀರವುಳ್ಳ ಆನೆಯೇ ಮೊದಲಾದ ಪ್ರಾಣಿಗಳ ಶರೀರಭೇದನದ ಕೌಶಲದಲ್ಲಿ, ಶೀಘ್ರಾತಿಶೀಘ್ರವಾಗಿ ಬಾಣಗಳನ್ನು ಬಿಡುವುದರಲ್ಲಿ, ಬಹಳ ದೂರದಲ್ಲಿರುವ ಲಕ್ಷ್ಯವನ್ನು ಭೇದಿಸುವುದರಲ್ಲಿ, ಯುದ್ಧಕೌಶಲದಲ್ಲಿ, ದಿವ್ಯಾಸ್ತ್ರಗಳ ಪ್ರಯೋಗದಲ್ಲಿ ಸವ್ಯಸಾಚಿಯು ನನಗೆ ಸಮನಲ್ಲ.

**ಪ್ರಾಣೇ ಶೌರ್ಯೇಽಥ ವಿಜ್ಞಾನೇ ವಿಕ್ರಮೇ ಚಾಪಿ ಭಾರತ ।**
**ನಿಮಿತ್ತಜ್ಞಾನಯೋಗೇ ಚ ಸವ್ಯಸಾಚೀ ನ ಮತ್ಸಮಃ ॥೪೧॥**

ಶರೀರಬಲದಲ್ಲಿ, ಶೌರ್ಯದಲ್ಲಿ, ಅಸ್ತ್ರವಿಜ್ಞಾನದಲ್ಲಿ, ಪರಾಕ್ರಮದಲ್ಲಿ, ಶತ್ರುಪಕ್ಷದವರ ಪ್ರಾಬಲ್ಯವು ಯಾವ ಮೂಲಕವಾಗಿದೆಯೆಂಬುದನ್ನು ತಿಳಿಯುವುದರಲ್ಲಿ ಮತ್ತು ಆ ಪ್ರಾಬಲ್ಯವನ್ನು ಮುರಿಯಲು ಉಪಾಯವನ್ನು ಕಂಡುಹಿಡಿಯುವುದರಲ್ಲಿ ಸವ್ಯಸಾಚಿಯು ನನಗೆ ಸಮನಲ್ಲ.

**ಸರ್ವಾಯುಧಮಹಾಮಾತ್ರಂ ವಿಜಯಂ ನಾಮ ತದ್ಧನುಃ ।**
**ಇನ್ದ್ರಾರ್ಥಂ ಪ್ರಿಯಕಾಮೇನ ನಿರ್ಮಿತಂ ವಿಶ್ವಕರ್ಮಣಾ ॥೪೨॥**

ದುರ್ಯೋಧನ! 'ವಿಜಯ' ಎಂದು ನನ್ನ ಧನುಸ್ಸಿನ ಹೆಸರು. ಈ ಧನುಸ್ಸು ಎಲ್ಲ ಆಯುಧಗಳಿಗಿಂತಲೂ ಶ್ರೇಷ್ಠವಾದುದು. ಇಂದ್ರನಿಗೆ ಪ್ರಿಯವನ್ನುಂಟುಮಾಡುವ ಇಚ್ಛೆಯಿಂದ ವಿಶ್ವಕರ್ಮನೇ ಈ ಧನುಸ್ಸನ್ನು ನಿರ್ಮಿಸಿದನು.

**ಯೇನ ದೈತ್ಯಗಣಾನ್ರಾಜಞ್ಜಿತವಾನ್ಸ್ವೈ ಶತಕ್ರತುಃ ।**
**ಯಸ್ಯ ಘೋಷೇಣ ದೈತ್ಯಾನಾಂ ವ್ಯಾಮುಹ್ಯನ್ತ ದಿಶೋ ದಶ ॥೪೩॥**
**ತದ್ಭಾರ್ಗವಾಯ ಪ್ರಾಯಚ್ಛಚ್ಛಕ್ರಃ ಪರಮಸಮ್ಮತಮ್ ।**
**ತದ್ದಿವ್ಯಂ ಭಾರ್ಗವೋ ಮಹ್ಯಮದದಾದ್ಧನುರುತ್ತಮಮ್ ॥೪೪॥**

ಈ ಧನುಸ್ಸಿನಿಂದಲೇ ಇಂದ್ರನು ದೈತ್ಯರ ಸಮೂಹಗಳೆಲ್ಲವನ್ನೂ ಜಯಿಸಿದನು. ಈ ಧನುಸ್ಸಿನ ಟೇಂಕಾರದಿಂದಲೇ ದೈತ್ಯರಿಗೆ ಹತ್ತು ದಿಕ್ಕುಗಳೂ ಕಾಣಿಸುತ್ತಿರಲೇ ಇಲ್ಲ. (ಮೋಹಪರವಶರಾಗಿ ದಿಕ್ಕುಗಾಣದೇ ಚಡಪಡಿಸುತ್ತಿದ್ದರು.) ಇಂತಹ ಪರಮಪ್ರಿಯವಾದ ದಿವ್ಯಧನುಸ್ಸನ್ನು ಇಂದ್ರನು ನನ್ನ ಗುರುವಾದ ಪರಶುರಾಮನಿಗೆ ಕೊಟ್ಟನು. ಆ ಶ್ರೇಷ್ಠವಾದ ದಿವ್ಯಧನುಸ್ಸನ್ನೇ ಭಾರ್ಗವನು ನನಗೆ ಅನುಗ್ರಹಿಸಿ ಕೊಟ್ಟನು.

ದುರ್ಯೋಧನ! ಇದೇ ಧನುಸ್ಸಿನಿಂದಲೇ ಸಮರಾಂಗಣಕ್ಕೆ ಬಂದ ದೈತ್ಯರೊಡನೆ ಇಂದ್ರನು ಯುದ್ಧಮಾಡಿದಂತೆ–ವಿಜಯಿಗಳಲ್ಲಿ ಶ್ರೇಷ್ಠನಾದ ಅರ್ಜುನನೊಡನೆ ನಾನು ಯುದ್ಧಮಾಡುತ್ತೇನೆ.

**ಧನುರ್ಘೋರಂ ರಾಮದತ್ತಂ ಗಾಣ್ಡೀವಾತ್ತದ್ವಿಶಿಷ್ಯತೇ ।**
**ತ್ರಿಸ್ಸಪ್ತಕೃತ್ವಃ ಪೃಥಿವೀ ಧನುಷಾ ಯೇನ ನಿರ್ಜಿತಾ ॥೪೬॥**

ನನ್ನಲ್ಲಿರುವ ಪರಶುರಾಮದತ್ತವಾದ ಘೋರಧನುಸ್ಸು ಅರ್ಜುನನಲ್ಲಿರುವ ಗಾಂಡೀವಧನುಸ್ಸಿಗಿಂತಲೂ ಅತಿಶಯವಾದುದು. ಈ ಧನುಸ್ಸಿನಿಂದಲೇ ಭಾರ್ಗವನು ಇಪ್ಪತ್ತೊಂದು ಬಾರಿ ಅಖಂಡಭೂಮಂಡಲವನ್ನೂ ಜಯಿಸಿದ್ದನು.

ಈ ಧನುಸ್ಸನ್ನು ನನಗೆ ದಯಪಾಲಿಸಿದ ಸಮಯದಲ್ಲಿ ಭಾರ್ಗವನೇ ಈ ಧನುಸ್ಸಿನ ದಿವ್ಯಕರ್ಮಗಳೆಲ್ಲವನ್ನೂ ವಿಶದವಾಗಿ ಹೇಳಿದ್ದನು. ಇಂತಹ ಮಹಾಧನುಸ್ಸನ್ನೇ ಭಾರ್ಗವನು ನನಗೆ ದಯಪಾಲಿಸಿದನು. ಈ ದಿವ್ಯಧನುಸ್ಸಿನಿಂದಲೇ ನಾನು ಅರ್ಜುನನೊಡನೆ ಯುದ್ಧಮಾಡುತ್ತೇನೆ.

**ಅದ್ಯ ದುರ್ಯೋಧನಾಹಂ ತ್ವಾಂ ನನ್ದಯಿಷ್ಯೇ ಸಬಾನ್ಧವಮ್ ।**
**ನಿಹತ್ಯ ಸಮರೇ ವೀರಮರ್ಜುನಂ ಜಯತಾಂ ವರಮ್ ॥೪೮॥**

ದುರ್ಯೋಧನ! ಇಂದು ನಾನು ವಿಜಯಿಗಳಲ್ಲಿ ಶ್ರೇಷ್ಠನಾದ, ವೀರನಾದ ಅರ್ಜುನನನ್ನು ಯುದ್ಧದಲ್ಲಿ ಸಂಹರಿಸಿ ಬಂಧುಗಳಿಂದ ಕೂಡಿರುವ ನಿನ್ನನ್ನು ಸಂತೋಷಗೊಳಿಸುತ್ತೇನೆ.

**ಸಪರ್ವತವನದ್ವೀಪಾ ಹತವೀರಾ ಸಸಾಗರಾ ।**
**ಪುತ್ರಪೌತ್ರಪ್ರತಿಷ್ಠಾ ತೇ ಭವಿಷ್ಯತ್ಯದ್ಯ ಪಾರ್ಥಿವ ॥೪೯॥**

ಹತಪ್ರತಿವೀರಳಾದ (ಪ್ರತಿವೀರರಿಂದ ನಿರ್ಮುಕ್ತಳಾದ), ಪರ್ವತ-ವನ-ದ್ವೀಪ-ಸಾಗರಗಳಿಂದ ಕೂಡಿರುವ ಈ ಪೃಥ್ವಿಯು ನಿನ್ನ ಪುತ್ರ-ಪೌತ್ರರ ಪರಂಪರೆಯಲ್ಲಿ ಪ್ರತಿಷ್ಠಿತಳಾಗುತ್ತಾಳೆ.

(ಮಹಾವೀರನಾದ ಅರ್ಜುನನೊಬ್ಬನು ಹೋಗಿಬಿಟ್ಟರೆ ನೀನು ಈ ಭೂಮಂಡಲವನ್ನು ವಂಶಪಾರಂಪರ್ಯವಾಗಿ ಆಳಬಹುದಾಗಿದೆ.)

**ನಾಶಕ್ಯಂ ವಿದ್ಯತೇ ಮೇಽದ್ಯ ತ್ವತ್ಪ್ರಿಯಾರ್ಥಂ ವಿಶೇಷತಃ ।**
**ಸಮ್ಯಗ್ಧರ್ಮಾನುರಕ್ತಸ್ಯ ಸಿದ್ಧಿರಾತ್ಮವತೋ ಯಥಾ ॥೫೦॥**

ಉತ್ತಮವಾದ ಧರ್ಮದಲ್ಲಿಯೇ ಅನುರಕ್ತನಾದ ಜಿತೇಂದ್ರಿಯನಿಗೆ ಸಕಲವೂ ಸಿದ್ಧಿಸುವಂತೆ ನನಗೆ ಅಶಕ್ಯವಾದುದು ಯಾವುದೂ ಇರುವುದಿಲ್ಲ. ಮಿಗಿಲಾಗಿ ನಿನ್ನ ಪ್ರೀತ್ಯರ್ಥವಾಗಿ ನಾನು ಮಾಡಲಾಗದ ಕಾರ್ಯವೂ ಇಲ್ಲ.

**ನ ಹಿ ಮಾಂ ಸಮರೇ ಸೋಢುಂ ಸಂಶಕ್ತೋಽಗ್ನಿಂ ತರುರ್ಯಥಾ ।**
**ಅವಶ್ಯಂ ತು ಮಯಾ ವಾಚ್ಯಂ ಯೇನ ಹೀನೋಽಸ್ಮಿ ಫಾಲ್ಗುನಾತ್ ॥**

ವೃಕ್ಷವು ಅಗ್ನಿಯ ಆಕ್ರಮಣವನ್ನು ಸಹಿಸಲಾಗದಂತೆ–ಅರ್ಜುನನು ನನ್ನನ್ನು ಯುದ್ಧದಲ್ಲಿ ಎದುರಿಸಲು ಸಮರ್ಥನಲ್ಲ. ಅನೇಕ ವಿಷಯಗಳಲ್ಲಿ ನಾನು ಅರ್ಜುನನನ್ನೂ ಅತಿಶಯಿಸುವೆನೆಂದು ಹೇಳಿದನಂತರ ಅರ್ಜುನನಿಗಿಂತಲೂ ನಾನು ಯಾವ ವಿಷಯಗಳಲ್ಲಿ ಹೀನನಾಗಿರುವೆನೆಂಬುದನ್ನು ಹೇಳುವುದೂ ನನ್ನ ಕರ್ತವ್ಯವಾಗಿರುತ್ತದೆ.

**ಜ್ಯಾತಸ್ಯ ಧನುಷೋ ದಿವ್ಯಾ ತಥಾಕ್ಷಯ್ಯೇ ಮಹೇಷುಧೀ ।**
**ಸಾರಥಿಸ್ತಸ್ಯ ಗೋವಿನ್ದೋ ಮಮ ತಾದೃಙ್ನ ವಿದ್ಯತೇ ॥೫೨॥**

ಅರ್ಜುನನ ಗಾಂಡೀವಧನುಸ್ಸಿನ ಮೌರ್ವಿಯು ದಿವ್ಯವಾದುದು. ಅಂತೆಯೇ ಅವನಲ್ಲಿ ದಿವ್ಯವಾದ ಮತ್ತು ಅಕ್ಷಯವಾದ ಎರಡು ಬತ್ತಳಿಕೆಗಳಿವೆ. ಎಲ್ಲಕ್ಕಿಂತಲೂ ಮಿಗಿಲಾಗಿ ಗೋವಿಂದನು ಅವನ ಸಾರಥಿಯಾಗಿದ್ದಾನೆ. ಅಂತಹ ಸಾರಥಿಯಾಗಲೀ, ಮೌರ್ವಿಯಾಗಲೀ, ಅಕ್ಷಯ ತೂಣೀರಗಳಾಗಲೀ-ನನ್ನಲ್ಲಿರುವುದಿಲ್ಲ.

**ತಸ್ಯ ದಿವ್ಯಂ ಧನುಃ ಶ್ರೇಷ್ಠಂ ಗಾಣ್ಡೀವಮಜಿತಂ ಯುಧಿ ।**
**ವಿಜಯಂ ಚ ಮಹದ್ದಿವ್ಯಂ ಮಮಾಪಿ ಧನುರುತ್ತಮಮ್ ॥೫೩॥**

ಅವನ ಬಳಿ ಇದುವರೆಗೆ ಯಾರಿಂದಲೂ ಜಯಿಸಲ್ಪಡದೇ ಇರುವ, ದಿವ್ಯವಾದ ಶ್ರೇಷ್ಠವಾದ ಗಾಂಡೀವಧನುಸ್ಸಿದೆ. ನನ್ನಲ್ಲಿಯೂ ದಿವ್ಯವಾದ ವಿಜಯವೆಂಬ ಹೆಸರಿನ ಮಹಾಧನುಸ್ಸಿದೆ.

ರಾಜನೇ! ಧನುಸ್ಸಿನ ದೃಷ್ಟಿಯಿಂದೇನೋ ನಾನು ಅರ್ಜುನನಿಗಿಂತಲೂ ಅಧಿಕನಾಗಿದ್ದೇನೆ. ಆದರೆ ಅರ್ಜುನನು ಯಾವ ವಿಷಯದಲ್ಲಿ ನನಗಿಂತಲೂ ಅಧಿಕನಾಗಿರುವನೆಂಬುದನ್ನೂ ಕೇಳು.

**ರಶ್ಮಿಗ್ರಾಹಶ್ಚ ದಾಶಾರ್ಹಃ ಸರ್ವಲೋಕನಮಸ್ಕೃತಃ ।**
**ಅಗ್ನಿದತ್ತಶ್ಚ ವೈ ದಿವ್ಯೋ ರಥಃ ಕಾಞ್ಚನಭೂಷಣಃ ॥೫೫॥**
**ಅಚ್ಛೇದ್ಯಃ ಸರ್ವತೋ ವೀರ ವಾಜಿನಶ್ಚ ಮನೋಜವಾಃ ।**
**ಧ್ವಜಶ್ಚ ದಿವ್ಯೋ ದ್ಯುತಿಮಾನ್ವಾನರೋ ವಿಸ್ಮಯಂಕರಃ ॥೫೬॥**
**ಕೃಷ್ಣಶ್ಚ ಸ್ರಷ್ಟಾ ಜಗತೋ ರಥಂ ತಮಭಿರಕ್ಷತಿ ।**
**ಏತೈರ್ದ್ರವ್ಯೈರಹಂ ಹೀನೋ ಯೋದ್ಧುಮಿಚ್ಛಾಮಿ ಪಾಣ್ಡವಮ್ ॥**

ಅರ್ಜುನನ ರಥದ ಕಡಿವಾಣಗಳನ್ನು ಹಿಡಿದಿರುವವನು ದಶಾರ್ಹಕುಲ ತಿಲಕನಾದ ಸರ್ವಲೋಕನಮಸ್ಕೃತನಾದ ಶ್ರೀಕೃಷ್ಣನು. ಸುವರ್ಣಭೂಷಿತ ವಾದ, ದಿವ್ಯವಾದ ಅವನ ರಥವು ಅಗ್ನಿದತ್ತವಾದುದು. ಆ ರಥದ ಯಾವುದೇ ಭಾಗವನ್ನೇ ಆಗಲಿ ಮುಕ್ಕುಮಾಡಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಮನೋವೇಗವುಳ್ಳ ಕುದುರೆಗಳು ಅವನ ರಥಕ್ಕೆ ಹೂಡಲ್ಪಟ್ಟಿವೆ. ಅವನ ರಥದಲ್ಲಿ ದಿವ್ಯವಾದ ಕಾಂತಿಯಿಂದ ಕೂಡಿದ ಧ್ವಜವಿದೆ. ಆ ಧ್ವಜದಲ್ಲಿ ವಿಸ್ಮಯಕಾರಕನಾದ ಹನುಮಂತನ ಉಪಸ್ಥಿತಿಯಿದೆ.

ಪ್ರಪಂಚವನ್ನೇ ಸೃಷ್ಟಿಸಿರುವ ಶ್ರೀಕೃಷ್ಣನು ಆ ದಿವ್ಯರಥವನ್ನು ರಕ್ಷಿಸುತ್ತಾನೆ. ಇಂತಹ ವಸ್ತುಗಳಿಂದ ನಾನು ಹೀನನಾಗಿದ್ದೇನೆ. ಆದರೂ ನಾನು ಪಾಂಡವ ನೊಡನೆ ಯುದ್ಧಮಾಡಲು ಇಚ್ಛಿಸಿದ್ದೇನೆ. ಜಯವನ್ನೂ ಗಳಿಸುತ್ತೇನೆ. ಆದರೆ ಸಾರಥಿಯ ನ್ಯೂನತೆಯನ್ನು ಹೀಗೆ ಬಗೆಹರಿಸಬೇಕು.

**ಅಯಂ ತು ಸದೃಶಃ ಶೌರೇಃ ಶಲ್ಯಃ ಸಮಿತಿಶೋಭನಃ ।**
**ಸಾರಥ್ಯಂ ಯದಿ ಮೇ ಕುರ್ಯಾದ್ಧ್ರುವಸ್ತೇ ವಿಜಯೋ ಭವೇತ್ ॥**

ಸಮರಶೋಭಿಯಾದ ಈ ಶಲ್ಯನು ಶ್ರೀಕೃಷ್ಣನಿಗೆ ಸಮಾನನಾಗಿದ್ದಾನೆ. ಇವನೇನಾದರೂ ನನಗೆ ಸಾರಥಿಯಾಗುವುದಾದರೆ ನಿನಗೆ ನಿಶ್ಚಯವಾಗಿಯೂ ವಿಜಯವು ಲಭಿಸುತ್ತದೆ.

ಶತ್ರುಗಳಿಂದ ಜಯಿಸಲು ಸುಲಭಸಾಧ್ಯನಲ್ಲದ ಶಲ್ಯನು ನನಗೆ ಸಾರಥಿಯಾಗಲಿ. ಹಲವಾರು ಬಂಡಿಗಳು ರಣಹದ್ದಿನ ರೆಕ್ಕೆಗಳಿರುವ ನಾರಾಚ ಗಳನ್ನು ತುಂಬಿಕೊಂಡು ಹಿಂದೆ ಬರಲಿ. ಉತ್ತಮವಾದ ಕುದುರೆಗಳಿಂದ ಕೂಡಿದ ಮುಖ್ಯವಾದ (ಶ್ರೇಷ್ಠವಾದ) ರಥಗಳು ಸತತವಾಗಿ ನನ್ನ ಹಿಂದೆಯೇ ಬರುತ್ತಿರಲಿ. ಇಂತಹ ಸೌಲಭ್ಯಗಳು ಒದಗಿದಲ್ಲಿ ವಿಜಯಕ್ಕೆ ಸಾಧನವಾದ ಗುಣಗಳ ಆಧಿಕ್ಯದಿಂದ ನಾನು ಪಾರ್ಥನಿಗಿಂತಲೂ ಅಧಿಕನಾಗುತ್ತೇನೆ. ಶಲ್ಯನು ಕೃಷ್ಣನಿಗಿಂತಲೂ ಅಧಿಕನಾಗುತ್ತಾನೆ. ಅರ್ಜುನನಿಗಿಂತಲೂ ನಾನು ಅಧಿಕ ನಾಗುತ್ತೇನೆ.

**ಯಥಾಶ್ವಹೃದಯಂ ವೇದ ದಾಶಾರ್ಹಃ ಪರವೀರಹಾ ।**
**ತಥಾ ಶಲ್ಯೋ ವಿಜಾನೀತೇ ಹಯಜ್ಞಾನಂ ಮಹಾರಥಃ ॥೬೨॥**

ಶತ್ರುವೀರಹಂತಕನಾದ ಶ್ರೀಕೃಷ್ಣನು ಯಾವ ರೀತಿಯಲ್ಲಿ ಅಶ್ವಹೃದಯವನ್ನು (ಅಶ್ವಶಾಸ್ತ್ರವನ್ನು) ತಿಳಿದಿರುವನೋ–ಅದೇ ರೀತಿಯಲ್ಲಿ ಮಹಾರಥನಾದ ಶಲ್ಯನೂ ಕುದುರೆಗೆ ಸಂಬಂಧಿಸಿದ ಎಲ್ಲ ವಿವರಗಳನ್ನೂ ತಿಳಿದಿರುತ್ತಾನೆ.

**ಬಾಹುವೀರ್ಯೇ ಸಮೋ ನಾಸ್ತಿ ಮದ್ರರಾಜಸ್ಯ ಕಶ್ಚನ ।**
**ತಥಾಸ್ತ್ರೇ ಮತ್ಸಮೋ ನಾಸ್ತಿ ಕಶ್ಚಿದೇವ ಧನುರ್ಧರಃ ॥೬೩॥**

ಬಾಹುಬಲದಲ್ಲಿ ಮದ್ರರಾಜನಾದ ಶಲ್ಯನಿಗೆ ಸಮಾನನಾದವನು ಯಾರೂ ಇರುವುದಿಲ್ಲ. ಅಂತೆಯೇ ಅಸ್ತ್ರವಿದ್ಯೆಯಲ್ಲಿ ನನಗೆ ಸಮಾನನಾದ ಧನುರ್ಧರನೂ ಯಾರೂ ಇರುವುದಿಲ್ಲ.

**ತಥಾ ಶಲ್ಯಸಮೋ ನಾಸ್ತಿ ಹಯಜ್ಞಾನೇ ಹಿ ಕಶ್ಚನ ।**
**ಸೋಽಯಮಭ್ಯಧಿಕಃ ಕೃಷ್ಣಾದ್ಭವಿಷ್ಯತಿ ರಥೋ ಮಮ ॥೬೪॥**

ಅಶ್ವಲಕ್ಷಣವನ್ನು ತಿಳಿದಿರುವವರಲ್ಲಿ ಶಲ್ಯನಿಗೆ ಸಮಾನನಾದವನು ಮತ್ತಾರೂ ಇರುವುದಿಲ್ಲ. ಆದುದರಿಂದ ಶಲ್ಯನೇನಾದರೂ ನನಗೆ ಸಾರಥಿ ಯಾಗುವುದಾದರೆ ನನ್ನ ರಥವು ಕೃಷ್ಣನು ನಡೆಸುವ ಪಾರ್ಥನ ರಥಕ್ಕಿಂತಲೂ ಅಧಿಕಗುಣವುಳ್ಳದ್ದಾಗುತ್ತದೆ.

ಈ ವಿಧವಾದ ವ್ಯವಸ್ಥೆಯಿಂದ ನಾನು ರಥದಲ್ಲಿ ಕುಳಿತರೆ ಅರ್ಜುನನಿಗಿಂತಲೂ ಗುಣಗಳಲ್ಲಿ ಅಧಿಕನಾಗುತ್ತೇನೆ. ಯುದ್ಧದಲ್ಲಿ ಖಂಡಿತವಾಗಿಯೂ ಅರ್ಜುನನನ್ನು ಜಯಿಸುತ್ತೇನೆ. ಶಲ್ಯನ ಸಾರಥ್ಯವನ್ನು ಹೊಂದಿ ಯುದ್ಧಕ್ಕೆ ಸಿದ್ಧನಾಗಿ ನಿಂತ ನನ್ನನ್ನು ಇಂದ್ರನಿಂದ ಕೂಡಿದ ದೇವತೆಗಳೂ ಜಯಿಸಲಾರರು. ಪರಂತಪನೇ! ಈ ಒಂದು ಕಾರ್ಯವನ್ನು ನೀನು ಮಾಡಿಕೊಡಬೇಕೆಂದು ನಾನು ಇಚ್ಛಿಸುತ್ತಿದ್ದೇನೆ. ನನ್ನ ಈ ಒಂದು ಮನೋರಥವನ್ನು ಪೂರೈಸಿಕೊಡು, ದುರ್ಯೋಧನ! ಕಾಲವು ವ್ಯರ್ಥವಾಗಿ ಹೋಗದಂತೆ ಸಾಧ್ಯವಾದಷ್ಟು ಬೇಗ ಈ ಕಾರ್ಯವನ್ನು ಸಾಧಿಸಿಕೊಡು. ನೀನು ನನಗೆ ಈ ಸಹಕಾರವನ್ನು ಒದಗಿಸಿಕೊಡುವುದಾದರೆ ನನ್ನ ಕಾಮನೆಗಳೆಲ್ಲಕ್ಕೂ ಸಂಪೂರ್ಣವಾದ ಸಹಕಾರವು ಸಿಕ್ಕಿದಂತಾಗುತ್ತದೆ. ಅನಂತರ ನಾನು ಸಮರಾಂಗಣದಲ್ಲಿ ಏನು ಮಾಡುವೆನೆಂಬುದನ್ನು ನೀನೇ ನೋಡಲಿರುವೆ. ನನ್ನೊಡನೆ ಯುದ್ಧಮಾಡಲು ಬರುವ ಎಲ್ಲ ಪಾಂಡವರನ್ನೂ ಸರ್ವಪ್ರಕಾರಗಳಿಂದಲೂ ನಾನು ಜಯಿಸುತ್ತೇನೆ. ನನ್ನನ್ನು ಎದುರಿಸಲು ದೇವಾಸುರರಿಂದಲೂ ಸಾಧ್ಯವಾಗುವುದಿಲ್ಲ. ಹೀಗಿರುವಾಗ ಮನುಷ್ಯಯೋನಿಯಲ್ಲಿ ಹುಟ್ಟಿರುವ ಈ ಪಾಂಡವರು ನನಗೆಷ್ಟರವರು? (ಅವರಿಗೆ ನನ್ನನ್ನು ಎದುರಿಸಿ ನಿಲ್ಲಲು ಸಾಧ್ಯವಿಲ್ಲವೆಂಬುದನ್ನು ಪ್ರತ್ಯೇಕವಾಗಿ ಹೇಳುವ ಕಾರಣವಿಲ್ಲ.)"

ಮಹಾರಾಜ! ಸಮರಾಂಗಣಕ್ಕೆ ತಿಲಕಪ್ರಾಯನಾದ ಕರ್ಣನು ಹೀಗೆ ಹೇಳಲಾಗಿ ನಿನ್ನ ಮಗನು ಪ್ರಹೃಷ್ಟವಾದ ಅಂತರಂಗವುಳ್ಳವನಾದನು. (ಅವನ ಆನಂದಕ್ಕೆ ಪಾರವೇ ಇಲ್ಲದಂತಾಯಿತು.) ಕರ್ಣನನ್ನು ಯಥೋಚಿತವಾಗಿ ಸಮ್ಮಾನಿಸಿ ಹೇಳಿದನು:

"ಕರ್ಣ! ಹೇಗೆ ಮಾಡಿದರೆ ನಮಗೆ ವಿಜಯವು ಲಭ್ಯವಾಗುವುದೆಂದು ನೀನು ಭಾವಿಸುವೆಯೋ ನಾನು ಹಾಗೆಯೇ ಮಾಡುತ್ತೇನೆ. ಶ್ರೇಷ್ಠವಾದ ಅಶ್ವಗಳಿಂದಲೂ, ಬತ್ತಳಿಕೆಗಳಿಂದಲೂ ಕೂಡಿದ ಸುಸಜ್ಜಿತವಾದ ರಥಗಳು ನಿನ್ನ ಹಿಂದೆಯೇ ಬರುತ್ತಿರುತ್ತವೆ. ನಿನ್ನ ಇಚ್ಛೆಯಂತೆಯೇ ಅನೇಕ ಬಂಡಿಗಳು ಹದ್ದಿನ ರೆಕ್ಕೆಗಳುಳ್ಳ ನಾರಾಚಗಳನ್ನು ಹೊತ್ತು ನಿನ್ನ

ಹಿಂದೆ ಸಿದ್ಧವಾಗಿರುತ್ತವೆ. ನಾವೂ ಮತ್ತು ನಮ್ಮ ಸಮಸ್ತಭೂಪಾಲಕರೂ ನಿನ್ನನ್ನೇ ಅನುಸರಿಸಿ ಬರುತ್ತಿರುತ್ತೇವೆ."

ಮಹಾರಾಜ! ಪ್ರತಾಪವಂತನಾದ ನಿನ್ನ ಮಗ ದುರ್ಯೋಧನನು ಕರ್ಣನೊಡನೆ ಈ ಮಾತುಗಳನ್ನೂ ಹೇಳಿ ಶಲ್ಯನ ಬಳಿಗೆ ಹೋಗಿ ಅವನನ್ನು ಕುರಿತು ಹೇಳಿದನು."

ಷ೧ನೆಯ ಅಧ್ಯಾಯವು ಮುಗಿಯಿತು.

ಷ೨ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ದುರ್ಯೋಧನನು ಕರ್ಣನಿಗೆ ಸಾರಥಿಯಾಗುವಂತೆ ಶಲ್ಯನನ್ನು ಪ್ರಾರ್ಥಿಸಿದುದು: ಶಲ್ಯನ ಪ್ರಬಲವಿರೋಧ: 'ನೀನು ಕೃಷ್ಣನಿಗಿಂತಲೂ ಅಧಿಕನು' ಎಂಬ ಪ್ರಶಂಸೆಯನ್ನು ದುರ್ಯೋಧನನಿಂದ ಕೇಳಿದ ಶಲ್ಯನು ಸಾರಥಿಯಾಗಲು ಒಪ್ಪಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ನಿನ್ನ ಮಗನು ಮಹಾರಥನಾದ ಮದ್ರರಾಜನ ಬಳಿಗೆ ವಿನಯಾನ್ವಿತನಾಗಿ ಹೋಗಿ ಪ್ರೇಮಪೂರ್ವಕವಾಗಿ ಅವನೊಡನೆ ಈ ಮಾತುಗಳನ್ನು ಹೇಳಿದನು:

"ಸತ್ಯವ್ರತನೇ! ಮಹಾಭಾಗನೇ! ಶತ್ರುಗಳಿಗೆ ತಾಪವನ್ನು ವರ್ಧಿಸುವವನೇ! ಮದ್ರೇಶ್ವರನೇ! ರಣಶೂರನೇ! ಯುದ್ಧದಲ್ಲಿ ಶತ್ರುಸೈನ್ಯಕ್ಕೆ ಭಯವನ್ನುಂಟುಮಾಡತಕ್ಕವನೇ! ಸವಿಮಾತುಗಳನ್ನಾಡುವವರಲ್ಲಿ ಶ್ರೇಷ್ಠನಾದವನೇ! ಕರ್ಣನು ಹೇಳಿದುದನ್ನು ಕೇಳಿದೆಯಲ್ಲವೇ? ಅವನ ಸಲಹೆಯಂತೆ ರಾಜಸಿಂಹರ ಮಧ್ಯದಲ್ಲಿ ನಾನಾಗಿಯೇ ನಿನ್ನನ್ನು ಕರ್ಣನ ಸಾರಥ್ಯಕ್ಕಾಗಿ ಆಹ್ವಾನಿಸುತ್ತಿದ್ದೇನೆ. ಅಪ್ರತಿಹತವಾದ ವೀರ್ಯವುಳ್ಳವನೇ! ಶತ್ರುಪಕ್ಷ ಕ್ಷಯಕರನೇ! ಮದ್ರೇಶ್ವರನೇ! ರಥಿಕರಲ್ಲಿ ಶ್ರೇಷ್ಠನಾದವನೇ! ತಲೆಬಾಗಿ ವಿನಯಾನ್ವಿತನಾಗಿ ಪ್ರಾರ್ಥಿಸಿಕೊಳ್ಳುತ್ತೇನೆ. ಪಾರ್ಥನ ವಿನಾಶಾರ್ಥವಾಗಿಯೂ ನನ್ನ ಹಿತಾರ್ಥವಾಗಿಯೂ ಕೇವಲ ಪ್ರೀತಿಯ ಸಲುವಾಗಿ ನೀನು ಕರ್ಣನ ಸಾರಥ್ಯವನ್ನು ಮಾಡಬೇಕಾಗಿದೆ. ನೀನು

ಸಾರಥಿಯಾದ ಪಕ್ಷದಲ್ಲಿ ರಾಧೇಯನು ನನ್ನ ಶತ್ರುಗಳನ್ನು ಖಂಡಿತವಾಗಿಯೂ ಜಯಿಸುತ್ತಾನೆ. ಮಹಾಭಾಗನೇ! ವಾಸುದೇವಸದೃಶನಾದ ನಿನ್ನೊಬ್ಬನನ್ನು ಬಿಟ್ಟರೆ ಯುದ್ಧದಲ್ಲಿ ಕರ್ಣನ ಕುದುರೆಗಳ ಕಡಿವಾಣಗಳನ್ನು ಹಿಡಿಯಲು ಸಮರ್ಥನಾದ ಬೇರೆ ಯಾರೂ ನಮ್ಮ ಪಕ್ಷದಲ್ಲಿರುವುದಿಲ್ಲ.

**ಸ ಪಾಹಿ ಸರ್ವಥಾ ಕರ್ಣಂ ಯಥಾ ಬ್ರಹ್ಮಾ ಮಹೇಶ್ವರಮ್ ।**
**ಯಥಾ ಚ ಸರ್ವಥಾಪತ್ಸು ವಾರ್ಷ್ಣೇಯಃ ಪಾತಿ ಪಾಣ್ಡವಮ್ ।**
**ತಥಾ ಮದ್ರೇಶ್ವರಾದ್ಯ ತ್ವಂ ರಾಧೇಯಂ ಪ್ರತಿಪಾಲಯ ॥೮॥**

ಮದ್ರೇಶ್ವರನೇ! ಬ್ರಹ್ಮನು ಸಾರಥಿಯಾಗಿ ಮಹೇಶ್ವರನನ್ನು ಕಾಪಾಡಿದಂತೆ–ಎಲ್ಲ ಆಪತ್ತುಗಳಲ್ಲಿಯೂ ಶ್ರೀಕೃಷ್ಣನು ಅರ್ಜುನನನ್ನು ರಕ್ಷಿಸುತ್ತಿರುವಂತೆ–ಈಗ ನೀನು ಕರ್ಣನನ್ನು ಸರ್ವಪ್ರಕಾರದಲ್ಲಿಯೂ ರಕ್ಷಿಸು. ರಾಧೇಯನನ್ನು ಕಾಪಾಡು.

**ಭೀಷ್ಮ ದ್ರೋಣಃ ಕೃಪಃ ಕರ್ಣೋ ಭವಾನ್ಭೋಜಶ್ಚ ವೀರ್ಯವಾನ್ ।**
**ಶಕುನಿಃ ಸೌಬಲೋ ದ್ರೌಣಿರಹಮೇವ ಚ ನೋ ಬಲಮ್ ॥೯॥**

ಭೀಷ್ಮ, ದ್ರೋಣರು, ಕೃಪರು, ಕರ್ಣ, ವೀರ್ಯವಂತನಾದ ಕೃತವರ್ಮಾ, ಸುಬಲನ ಮಗನಾದ ಶಕುನಿ, ಅಶ್ವತ್ಥಾಮಾ, ನೀನು ಮತ್ತು ನಾನು–ಇಷ್ಟೇ ಮಂದಿ ನಮ್ಮ ಪಕ್ಷದಲ್ಲಿ ಪ್ರಬಲರು. (ಈ ಬಲವನ್ನೇ ನಮ್ಮ ಪಕ್ಷವು ಅವಲಂಬಿಸಿದೆ.)

**ಏವಮೇಷ ಕೃತೋ ಭಾಗೋ ನವಧಾ ಪೃಥಿವೀಪತೇ ।**
**ನ ಚ ಭಾಗೋಽತ್ರ ಭೀಷ್ಮಸ್ಯ ದ್ರೋಣಸ್ಯ ಚ ಮಹಾತ್ಮನಃ ।**
**ತಾಭ್ಯಾಮತೀತ್ಯ ತೌ ಭಾಗೌ ನಿಹತಾ ಮಮ ಶತ್ರವಃ ॥೧೦॥**

ನಿನಗೆ ತಿಳಿದಿರುವಂತೆಯೇ ಈ ಒಂಬತ್ತು ಮಂದಿ ವೀರರಿಗೂ ಪಾಂಡವರ ಏಳು ಅಕ್ಷೌಹಿಣೀ ಸೈನ್ಯವನ್ನೂ, ಸಂಹರಿಸಲು ಹಂಚಿಕೊಡಲಾಗಿತ್ತು. ಆದರೆ ಈಗ ಭೀಷ್ಮನ ಭಾಗವಾಗಲೀ, ಮಹಾತ್ಮರಾದ ದ್ರೋಣರ ಭಾಗವಾಗಲೀ ಉಳಿದಿಲ್ಲ. ಅವರಿಬ್ಬರೂ ತಮ್ಮ ಭಾಗವೆಷ್ಟೆಂಬುದರ ವಿವೇ

ಚನೆಯನ್ನೂ ಮಾಡದೇ ತಮಗೆ ವಹಿಸಿಕೊಟ್ಟಿದ್ದ ಭಾಗಗಳ ಮಿತಿಯನ್ನೂ ಮೀರಿ ನಮ್ಮ ಶತ್ರುಗಳನ್ನು ಸಂಹರಿಸಿದರು. ಮಹಾಧನುಷ್ಮಂತರಾಗಿದ್ದ ಮತ್ತು ವೃದ್ಧರಾಗಿದ್ದ ಭೀಷ್ಮ-ದ್ರೋಣರನ್ನು ನಮ್ಮ ಶತ್ರುಗಳು ವಂಚನೆಯಿಂದ ಸಂಹರಿಸಿದರು. ಅನಘನೇ! ಅವರಿಬ್ಬರೂ ದುಷ್ಕರವಾದ ಸಾಹಸಕಾರ್ಯವನ್ನು ಮಾಡಿ ಇಲ್ಲಿಂದ ಸ್ವರ್ಗಲೋಕಕ್ಕೆ ತೆರಳಿದರು. ಅನಘನೇ! ಅದೇ ರೀತಿಯಲ್ಲಿ ಇನ್ನೂ ಅನೇಕಪುರುಷವ್ಯಾಘ್ರರು ಶತ್ರುಗಳಿಂದ ಯುದ್ಧದಲ್ಲಿ ಹತರಾದರು. ನಮ್ಮ ಕಡೆಯ ಅನೇಕಯೋಧರು ವಿಜಯವನ್ನು ಪಡೆಯುವ ಸಲುವಾಗಿ ಶಕ್ತಿಮೀರಿ ಶತ್ರುಗಳೊಡನೆ ಹೋರಾಡುತ್ತಾ ರಣಾಂಗಣದಲ್ಲಿಯೇ ಪ್ರಾಣಗಳನ್ನು ತೊರೆದು ಸ್ವರ್ಗಲೋಕವನ್ನೈದಿದರು. ನರಾಧಿಪನೇ! ಈ ರೀತಿಯಲ್ಲಿ ನನ್ನ ಸೈನ್ಯದಲ್ಲಿ ಅಧಿಕಾಂಶವು ನಷ್ಟವಾಗಿ ಹೋಗಿದೆ. ಯುದ್ಧದ ಪ್ರಾರಂಭದಲ್ಲಿ ನಮ್ಮಲ್ಲಿ ಹನ್ನೊಂದು ಅಕ್ಷೌಹಿಣೀಸೈನ್ಯವಿದ್ದಿತು. ಹಾಗಿದ್ದಾಗಲೇ ಅಲ್ಪಸಂಖ್ಯಾತವಾದ ಸೈನ್ಯವಿರುವ ಪಾರ್ಥರು ಬಹುಸಂಖ್ಯಾತವಾದ ನಮ್ಮ ಸೈನ್ಯವನ್ನು ನಿರ್ಮೂಲಗೊಳಿಸಿಬಿಟ್ಟರು. ಸೈನ್ಯಬಲವೂ ಕಡಿಮೆಯಾಗಿರುವ ಈ ಸಮಯದಲ್ಲಿ ಹೇಳತಕ್ಕದ್ದೇನಿದೆ?

**ಬಲವನ್ತೋ ಮಹಾತ್ಮಾನಃ ಕೌನ್ತೇಯಾಃ ಸತ್ಯವಿಕ್ರಮಾಃ ।**
**ಬಲಂ ಶೇಷಂ ನ ಹನ್ಯುರ್ಮೇ ಯಥಾ ತತ್ಕುರು ಪಾರ್ಥಿವ ॥೧೫॥**

ಶಲ್ಯಮಹಾರಾಜ! ಮಹಾಬಲಿಷ್ಠರಾದ, ಸತ್ಯವಿಕ್ರಮರಾದ, ಮಹಾತ್ಮರಾದ ಕುಂತಿಯ ಮಕ್ಕಳು ನನ್ನ ಅಳಿದುಳಿದಿರುವ ಅಲ್ಪಸೈನ್ಯವನ್ನೂ ವಿನಾಶಗೊಳಿಸದಂತೆ ಸಹಕಾರವನ್ನು ನೀಡು.

ಪಾಂಡವರು ಸಮರಾಂಗಣದಲ್ಲಿ ನನ್ನ ಸೈನ್ಯದಲ್ಲಿದ್ದ ವೀರರೆಲ್ಲರನ್ನೂ ಸಂಹರಿಸಿಬಿಟ್ಟಿದ್ದಾರೆ. ಈ ಸಮಯದಲ್ಲಿ ಮಹಾಬಾಹುವಾದ ಕರ್ಣನೊಬ್ಬನೇ ನಮಗೆ ಪ್ರಿಯವನ್ನುಂಟುಮಾಡುವುದರಲ್ಲಿಯೂ ಹಿತವನ್ನುಂಟುಮಾಡುವುದರಲ್ಲಿಯೂ ಆಸಕ್ತನಾಗಿದ್ದಾನೆ.

ಪುರುಷಶ್ರೇಷ್ಠನಾದ ಶಲ್ಯನೇ! ನೀನಾದರೋ ಸಾಮಾನ್ಯನಲ್ಲ. ವಿಶ್ವ

ವಿಖ್ಯಾತನಾದ ಮಹಾರಥನಾಗಿರುವೆ. ನಮ್ಮ ಹಿತೈಷಿಯೂ ಆಗಿರುವೆ. ಈಗ ಕರ್ಣನು ಅರ್ಜುನನೊಡನೆ ಯುದ್ಧಮಾಡಲು ಇಚ್ಛಿಸಿದ್ದಾನೆ. ಮದ್ರರಾಜ! ನರಾಧಿಪ! ಕರ್ಣನಿಗೆ ಅರ್ಜುನನನ್ನು ಜಯಿಸುವ ಆಸೆ ಬಹಳವಾಗಿದೆ. ನನ್ನ ಗೆಲುವಿನ ಆಸೆಯು ಕರ್ಣನಲ್ಲಿಯೇ ಪೂರ್ಣವಾಗಿ ನೆಲೆಸಿದೆ. ಆದರೆ ಅವನ ಪರಾಕ್ರಮಕ್ಕೆ ಅನುರೂಪವಾಗಿ ಅವನ ಕುದುರೆಗಳ ಕಡಿವಾಣಗಳನ್ನು ಹಿಡಿದು ನಿಯಂತ್ರಿಸುವವನು ನಿನ್ನೊಬ್ಬನ ಹೊರತಾಗಿ ಪ್ರಪಂಚದಲ್ಲಿಯೇ ಬೇರೊಬ್ಬನಿರುವುದಿಲ್ಲ.



ಅರ್ಜುನನ ರಥದಲ್ಲಿ ಶ್ರೀಕೃಷ್ಣನು ಕುದುರೆಗಳ ಕಡಿವಾಣಗಳನ್ನು ಹಿಡಿದು ಹೇಗೆ ಸಾರಥಿಯಾಗಿರುವನೋ–ಹಾಗೆಯೇ ನೀನೂ ಕರ್ಣನ ರಥದಲ್ಲಿ

ಕುದುರೆಗಳ ಕಡಿವಾಣಗಳನ್ನು ಹಿಡಿದು ಶ್ರೇಷ್ಠನಾದ ಸಾರಥಿಯಾಗು. ಶ್ರೀಕೃಷ್ಣನಿಂದ ಯುಕ್ತನಾದ ಮತ್ತು ಸಂರಕ್ಷಿತನಾದ ಪಾರ್ಥನು ಎಂತೆಂತಹ ಅದ್ಭುತಸಾಹಸಕರ್ಮಗಳನ್ನು ಮಾಡುತ್ತಿರುವನೆಂಬುದು ನಿನಗೆ ಪ್ರತ್ಯಕ್ಷನಿದರ್ಶನವೇ ಆಗಿದೆ. ಹಿಂದೆ ಇದೇ ಅರ್ಜುನನು ಈ ರೀತಿಯಲ್ಲಿ ಶತ್ರುಗಳನ್ನು ಸಂಹರಿಸುತ್ತಿರಲಿಲ್ಲ. ಇದಾನೀಂ ವಿಕ್ರಮೋಹ್ಯಸ್ಯ ಕೃಷ್ಣೇನ **ಸಹಿತಸ್ಯ ಚ॥** ಈಗ ಕೃಷ್ಣನಿಂದ ಸಹಿತನಾಗಿರುವುದರಿಂದಲೂ ಮತ್ತು ರಕ್ಷಿಸಲ್ಪಡುತ್ತಿರು ವುದರಿಂದಲೂ ಇಂತಹ ಪರಮಾದ್ಭುತವಾದ ಪರಾಕ್ರಮವನ್ನು ತೋರಿಸುತ್ತಿ ದ್ದಾನೆ. ಮದ್ರೇಶ! ಕೃಷ್ಣಸಹಿತನಾದ ಪಾರ್ಥನು ನನ್ನ ಮಹಾಸೈನ್ಯವನ್ನು ಸತತವಾದ ಬಾಣಗಳ ಪ್ರಹಾರದಿಂದ ಓಡಿಸುತ್ತಿರುವುದು ಅನುದಿನವೂ ಕಂಡುಬರುತ್ತಲೇ ಇದೆ. ಮಹಾದ್ಯುತಿಮಂತನೇ! ಹಿಂದೆ ಹಂಚಿಕೆಯಾಗಿದ್ದಂತೆ ನೀನೂ ಮತ್ತು ಕರ್ಣನೂ ವಧಿಸಬೇಕಾಗಿರುವ ಭಾಗವಿನ್ನೂ ಹಾಗೆಯೇ ಉಳಿದಿರುವುದು. ಆದುದರಿಂದ ನೀನು ಕರ್ಣನೊಡನೆ ಸೇರಿಕೊಂಡು ವಧಿಸಬೇಕಾಗಿರುವ ಆ ನಿನ್ನ ಭಾಗವನ್ನೂ ಒಂದೇ ಸಮಯದಲ್ಲಿ ವಿನಾಶ ಮಾಡು. (ಒಬ್ಬೊಬ್ಬರೂ ಪ್ರತ್ಯೇಕ-ಪ್ರತ್ಯೇಕವಾಗಿ ನಿಮ್ಮ-ನಿಮ್ಮ ಭಾಗಗಳನ್ನು ಸಂಹರಿಸುವುದಕ್ಕಿಂತಲೂ ಇಬ್ಬರೂ ಒಟ್ಟಾಗಿ ಸೇರಿಕೊಂಡು ಏಕಕಾಲದಲ್ಲಿ ನಿಮ್ಮ ಭಾಗಗಳನ್ನು ವಿನಾಶಮಾಡಿರಿ.) ಸೂರ್ಯದೇವನು ಅರುಣನೊಡನೆ ಸೇರಿಕೊಂಡು ಪ್ರಪಂಚದ ಕತ್ತಲೆಯನ್ನು ಹೋಗಲಾಡಿಸುವಂತೆ-ಕರ್ಣ ಸಹಿತನಾದ ನೀನು ಪಾರ್ಥನನ್ನು ಯುದ್ಧದಲ್ಲಿ ಸಂಹರಿಸು.

**ಉದ್ಯನ್ತೌ ಚ ಯಥಾ ಸೂರ್ಯೌ ಬಾಲಸೂರ್ಯಸಮಪ್ರಭೌ ।**
**ಕರ್ಣಶಲ್ಯೌ ರಣೇ ದೃಷ್ಟ್ವಾ ವಿದ್ರವನ್ತು ಮಹಾರಥಾಃ ॥೨೫॥**

ಪ್ರಾತಃಕಾಲದಲ್ಲಿ ಉದಯಿಸಿದ ಇಬ್ಬರು ಸೂರ್ಯರಂತೆ– ಬಾಲಸೂರ್ಯನಿಗೆ ಸಮಾನವಾದ ಪ್ರಭೆಯಿಂದ ಕೂಡಿರುವ ಕರ್ಣ-ಶಲ್ಯರನ್ನು ರಣಾಂಗಣದಲ್ಲಿ ನೋಡಿದ ಶತ್ರುಪಕ್ಷದ ಮಹಾರಥರು ಪಲಾಯನಮಾಡಲಿ.

ಸೂರ್ಯ ಮತ್ತು ಅರುಣರನ್ನು ಕಂಡೊಡನೆಯೇ ತಮಸ್ಸು ಯಾವ

ರೀತಿಯಲ್ಲಿ ವಿನಾಶವನ್ನು ಹೊಂದುತ್ತದೆಯೋ–ಅದೇ ರೀತಿಯಲ್ಲಿ ಸೂರ್ಯಾರುಣಸದೃಶರಾದ ನಿಮ್ಮನ್ನು ನೋಡಿ ಪಾಂಚಾಲ-ಸೃಂಜಯ ಸಹಿತರಾದ ಪಾಂಡವರು ವಿನಾಶವನ್ನು ಹೊಂದಲಿ.

**ರಥಿನಾಂ ಪ್ರವರಃ ಕರ್ಣೋ ಯನ್ತೄಣಾಂ ಪ್ರವರೋ ಭವಾನ್ ।**
**ಸಂಯೋಗೋ ಯುವಯೋರ್ಲೋಕೇ ನಾಭೂನ್ನ ಚ ಭವಿಷ್ಯತಿ ॥**

ಕರ್ಣನು ರಥಿಗಳಲ್ಲಿ ಶ್ರೇಷ್ಠನು. ನೀನು ಸಾರಥಿಗಳಲ್ಲಿ ಶ್ರೇಷ್ಠನು. ನಿಮ್ಮಿಬ್ಬರ ಸಮಾಗಮದಂತಹ ಅಪೂರ್ವಸಮಾಗಮವು ಹಿಂದೆಯೂ ಆಗಿಲ್ಲ; ಮುಂದೆಯೂ ಆಗುವುದಿಲ್ಲ. ಯಾವ ರೀತಿಯಲ್ಲಿ ಎಲ್ಲ ಸಂದರ್ಭಗಳಲ್ಲಿಯೂ ಕೃಷ್ಣನು ಅರ್ಜುನನನ್ನು ಸಂರಕ್ಷಿಸುತ್ತಾನೆಯೋ–ಅದೇ ರೀತಿಯಲ್ಲಿ ನೀನು ವೈಕರ್ತನಕರ್ಣನನ್ನು ರಕ್ಷಿಸಲು ಸಮರ್ಥನಾಗಿರುವೆ. ನಿನ್ನ ಸಾರಥ್ಯವನ್ನು ಪಡೆದ ಕರ್ಣನು ಇಂದ್ರಸಹಿತರಾದ ದೇವತೆಗಳನ್ನೂ ಪರಾಜಯಗೊಳಿಸ ಬಲ್ಲನು. (ದೇವತೆಗಳಿಗೂ ಗೆಲ್ಲಲು ಅಶಕ್ಯನು.) ಹೀಗಿರುವಾಗ ಪಾಂಡವರ ವಿಷಯದಲ್ಲಿ ಹೇಳತಕ್ಕದ್ದೇನಿದೆ? ನಿನ್ನನ್ನು ಸಾರಥಿಯನ್ನಾಗಿ ಪಡೆದ ಕರ್ಣನು ಪಾಂಡವರನ್ನು ಜಯಿಸುವನೆಂಬ ನನ್ನ ಈ ಮಾತಿನಲ್ಲಿ ನೀನು ಸಂದೇಹ ಪಡಬೇಡ. (ಆದುದರಿಂದ ದಯಮಾಡಿ ನೀನು ಕರ್ಣನ ಸಾರಥಿಯಾಗು.)"

ಮಹಾರಾಜ! ದುರ್ಯೋಧನನ ಮಾತನ್ನು ಕೇಳುತ್ತಲೇ ಶಲ್ಯನು ಬಹಳವಾಗಿ ಕೋಪಗೊಂಡನು. ಅವನ ಹುಬ್ಬಿನ ಮೇಲೆ (ಹುಬ್ಬನ್ನು ಗಂಟಿಕ್ಕಿಕೊಂಡುದರ ಕಾರಣವಾಗಿ) ಮೂರು ಗೆರೆಗಳು ಕಾಣಿಸಿಕೊಂಡುವು. ಎರಡು ತೋಳುಗಳನ್ನೂ ಪುನಃ-ಪುನಃ ಹಿಂದಕ್ಕೂ ಮುಂದಕ್ಕೂ ಆಡಿಸುತ್ತಿದ್ದನು. ಅವನ ವಿಶಾಲವಾದ ಕಣ್ಣುಗಳು ಕ್ರೋಧದ ಕಾರಣದಿಂದ ಕೆಂಡದಂತಾಗಲಾಗಿ ಕುಲ, ಐಶ್ವರ್ಯ, ವಿದ್ಯೆ ಮತ್ತು ಪರಾಕ್ರಮಗಳಿಂದ ದರ್ಪಿಷ್ಠನಾಗಿದ್ದ ಶಲ್ಯನು ದುರ್ಯೋಧನನ ಕಡೆಗೆ ತಿರುಗಿ ಹೇಳಿದನು:

"ಗಾಂಧಾರೀಪುತ್ರನೇ! ನೀನು ಸ್ವಲ್ಪವೂ ಅಳುಕದೇ, ನಿರ್ಭಯವಾಗಿ ನನ್ನನ್ನು ಕರ್ಣನಿಗೆ ಸಾರಥಿಯಾಗುವಂತೆ ಹೇಳಿ ಅವಮಾನಗೊಳಿಸುತ್ತಿ ರುವೆ. ನಿಶ್ಚಯವಾಗಿಯೂ ನನ್ನ ವಿಷಯದಲ್ಲಿ ನೀನು ಸಂದೇಹಪಟ್ಟಿರುವೆ. ನೀನು ಕರ್ಣನನ್ನು ನನಗಿಂತಲೂ ಅಧಿಕಪರಾಕ್ರಮಿಯೆಂದು ಭಾವಿಸಿ ನನ್ನೆದುರಿನಲ್ಲಿಯೇ ಅವನನ್ನು ಪ್ರಶಂಸೆಮಾಡುತ್ತಿರುವೆ. ಆದರೆ ಯುದ್ಧದಲ್ಲಿ ರಾಧೇಯನು ನನಗೆ ಸಮಾನನೆಂಬುದನ್ನು ನಾನು ಒಪ್ಪಿಕೊಳ್ಳುವುದಿಲ್ಲ.

ಶತ್ರುಪಕ್ಷದಲ್ಲಿ ಅಧಿಕಾಂಶವನ್ನೇ ಬೇಕಾದರೂ ನನ್ನ ಭಾಗಕ್ಕೆ ವಹಿಸು. ಆ ನನ್ನ ಭಾಗವನ್ನು ಪರಾಜಯಗೊಳಿಸಿ ನನ್ನ ದೇಶಕ್ಕೆ ಪ್ರಯಾಣಮಾಡುತ್ತೇನೆ. ಅಥವಾ ನೀವು ಯಾರೂ ಯುದ್ಧಕ್ಕೆ ಬರುವುದೇ ಬೇಡ. ನಾನೊಬ್ಬನೇ ಶತ್ರುಗಳೊಡನೆ ಯುದ್ಧಮಾಡುತ್ತೇನೆ. ಆಗ ನೀನು ಯುದ್ಧಸಮಯದಲ್ಲಿ ಶತ್ರುಗಳನ್ನು ಎಡೆಬಿಡದೇ ದಹಿಸುವ ನನ್ನ ಪರಾಕ್ರಮವನ್ನಾದರೂ ಕಾಣುವೆ ಯಂತೆ. ನನ್ನಂತಹ ವೀರಪುರುಷರು ಕಾಮನೆಗಳನ್ನು ಹೃದಯದಲ್ಲಿಟ್ಟು ಕೊಂಡು (ಶತ್ರುಪಕ್ಷದವರ ಮೇಲೆ ಮಮತೆಯನ್ನಿಟ್ಟುಕೊಂಡು) ಯುದ್ಧದಲ್ಲಿ ಪ್ರವೃತ್ತರಾಗುವುದಿಲ್ಲ. ಆದುದರಿಂದ ನೀನು ನನ್ನ ವಿಷಯದಲ್ಲಿ ಸಂದೇಹ ಪಡಬೇಡ. ಯುದ್ಧಸಮಯದಲ್ಲಿ ನೀನು ನನ್ನನ್ನು ಯಾವುದೇ ಕಾರಣ ದಿಂದಲೂ ಅವಮಾನಿಸಬಾರದು. ಇದು ನಿನಗೆ ಸರ್ವಥಾ ಯೋಗ್ಯವಲ್ಲ. ಸ್ಥೂಲವಾಗಿರುವ ಮತ್ತು ವಜ್ರಕ್ಕೆ ಸಮಾನವಾಗಿ ಸುದೃಢವಾಗಿರುವ ಈ ನನ್ನ ಭುಜಗಳನ್ನಾದರೂ ನೋಡು. ವಿಚಿತ್ರವಾಗಿರುವ ಈ ಧನುಸ್ಸನ್ನು ನೋಡು. ವಿಷಸರ್ಪಸದೃಶವಾದ ನನ್ನ ಬಾಣಗಳನ್ನು ನೋಡು. ಸಕಲವಿಧವಾದ ಯುದ್ಧಸಾಮಗ್ರಿಗಳಿಂದಲೂ ಸಜ್ಜಾಗಿರುವ ಈ ನನ್ನ ರಥವನ್ನು ನೋಡು. ಈ ನನ್ನ ರಥವು ವಾಯುವೇಗಕ್ಕೆ ಸಮಾನವಾದ ವೇಗದಿಂದ ಕೂಡಿರುವ ಒಳ್ಳೆಯ ಜಾತಿಯ ಕುದುರೆಗಳಿಂದ ಸಜ್ಜಾಗಿರುವುದು. ದುರ್ಯೋಧನ ! ಸುವರ್ಣದ ಪಟ್ಟಿಯಿಂದ ಕೂಡಿರುವ ಈ ನನ್ನ ಗದೆಯನ್ನೂ ನೋಡು.

**ದಾರಯೇಯಂ ಮಹೀಂ ಕೃತ್ಸ್ನಾಂ ವಿಕಿರೇಯಂ ಚ ಪರ್ವತಾನ್ ।**
**ಶೋಷಯೇಯಂ ಸಮುದ್ರಾಂಶ್ಚ ತೇಜಸಾ ಸ್ವೇನ ಪಾರ್ಥಿವ ॥೩೯॥**

ನನ್ನ ಮಹಾತೇಜಸ್ಸಿನಿಂದ ಸಮಗ್ರವಾದ ಈ ಭೂಮಿಯನ್ನೇ ಸೀಳಿ ಬಿಡಬಲ್ಲೆನು. ಈ ಭೂಮಿಯ ಮೇಲಿರುವ ಪರ್ವತಗಳೆಲ್ಲವನ್ನೂ ಪುಡಿ ಪುಡಿಮಾಡಿ ಎರಚಿಬಿಡಬಲ್ಲೆನು! ಸಮುದ್ರಗಳನ್ನೂ ಶೋಷಿಸಿಬಿಡ ಬಲ್ಲೆನು! ಶತ್ರುನಿಗ್ರಹದಲ್ಲಿ ಅತ್ಯಂತಸಮರ್ಥನಾದ ಇಂತಹ ನನ್ನನ್ನು ನೀಚನಾದ ಸೂತಪುತ್ರನ ಸಾರಥ್ಯಕ್ಕೆ ಏಕೆ ನಿಯೋಜಿಸುವೆ? ಈ ನೀಚಕಾರ್ಯಕ್ಕೆ ನನ್ನನ್ನು ಯೋಜಿಸುವುದು ನಿನಗೆ ಖಂಡಿತವಾಗಿಯೂ ಯೋಗ್ಯ ವೆನಿಸುವುದಿಲ್ಲ. ಕುಲೈಶ್ವರ್ಯ-ಶ್ರುತ-ಬಲಗಳಲ್ಲಿ ಶ್ರೇಷ್ಠನಾಗಿರುವ ನಾನು

ಪಾಪಿಷ್ಠನಾದ ಪುರುಷನೊಬ್ಬನ ಸೇವೆಮಾಡಲು ಖಂಡಿತವಾಗಿಯೂ ಉತ್ಸಾಹಿತನಾಗಿಲ್ಲ. (ಒಡಂಬಡುವುದಿಲ್ಲ.)

**ಯೋ ಹ್ಯಭ್ಯುಪಗತಂ ಪ್ರೀತ್ಯಾ ಗರೀಯಾಂಸಂ ವಶೇ ಸ್ಥಿತಮ್ ।**
**ವಶೇ ಪಾಪೀಯಸೋ ಧತ್ತೇ ತತ್ಪಾಪಮಧರೋತ್ತರಮ್ ॥೪೨॥**

ಕೇವಲ ಪ್ರೀತಿಯ ಕಾರಣದಿಂದ ಬಂದಿರುವ ಮತ್ತು ಆಜ್ಞಾಧಾರಕನಾಗಿರುವ ಶ್ರೇಷ್ಠನಾದ ಪುರುಷನನ್ನು ಯಾರು ಪಾಪಿಷ್ಠನಾದವನೊಬ್ಬನ ಅಧೀನಕ್ಕೆ ಒಳಪಡಿಸುತ್ತಾನೆಯೋ ಅವನಿಗೆ ಉಚ್ಚನನ್ನು ನೀಚನನ್ನಾಗಿಯೂ ನೀಚನನ್ನು ಉಚ್ಚನನ್ನಾಗಿಯೂ ಎಣಿಸುವವನಿಗೆ ಪ್ರಾಪ್ತವಾಗುವ ಮಹಾ ಪಾಪವೇ ಪ್ರಾಪ್ತವಾಗುತ್ತದೆ.

**ಬ್ರಹ್ಮಣಾ ಬ್ರಾಹ್ಮಣಾಃ ಸೃಷ್ಟಾ ಮುಖಾತ್ಕ್ಷತ್ರಂ ಚ ಬಾಹುತಃ ।**
**ಊರುಭ್ಯಾಮಸೃಜದ್ವೈಶ್ಯಾಞ್ಛೂದ್ರಾನ್ಪದ್ಭ್ಯಾಮಿತಿ ಶ್ರುತಿಃ ॥೪೩॥**

ಬ್ರಹ್ಮನು ಬ್ರಾಹ್ಮಣರನ್ನು ತನ್ನ ಮುಖದಿಂದಲೂ, ಕ್ಷತ್ರಿಯರನ್ನು ಭುಜಗಳಿಂದಲೂ, ವೈಶ್ಯರನ್ನು ತೊಡೆಗಳಿಂದಲೂ ಮತ್ತು ಶೂದ್ರರನ್ನು ಕಾಲುಗಳಿಂದಲೂ ಸೃಷ್ಟಿಸಿದನೆಂದು ಶ್ರುತಿವಾಕ್ಯವಿದೆ.

ಈ ನಾಲ್ಕು ವರ್ಣಗಳಲ್ಲಿ ಪರಸ್ಪರಸಂಯೋಗದಿಂದ ಅನುಲೋಮ-ವಿಲೋಮಕ್ರಮದಲ್ಲಿ ವಿಭಿನ್ನವರ್ಣಗಳ ಉತ್ಪತ್ತಿಯಾಗುತ್ತದೆ.

**ಗೋಪ್ತಾರಾಃ ಸಂಗೃಹೀತಾರೋ ದಾತಾರಃ ಕ್ಷತ್ರಿಯಾಃ ಸ್ಮೃತಾಃ ।**
**ಯಾಜನಾಧ್ಯಾಪನೈರ್ವಿಪ್ರಾ ವಿಶುದ್ಧೈಶ್ಚ ಪ್ರತಿಗ್ರಹೈಃ ।**
**ಲೋಕಸ್ಯಾನುಗ್ರಹಾರ್ಥಾಯ ಸ್ಥಾಪಿತಾ ಬ್ರಹ್ಮಣಾ ಭುವಿ ॥೪೬॥**

ಈ ನಾಲ್ಕು ವರ್ಣದವರಲ್ಲಿ ಕ್ಷತ್ರಿಯರು ರಕ್ಷಕರು; ಕಪ್ಪ-ಕಾಣಿಕೆಗಳನ್ನೂ ಮತ್ತು ತೆರಿಗೆಗಳನ್ನೂ ಸಂಗ್ರಹಿಸತಕ್ಕವರು ಮತ್ತು ದಾನಕೊಡತಕ್ಕವರು ಎಂದು ವಿಹಿತವಾಗಿದೆ. ಯಜ್ಞಮಾಡಿಸುವುದು ಅಧ್ಯಯನವನ್ನು ಹೇಳಿಕೊಡುವುದು; ವಿಶುದ್ಧವಾದ ದಾನವನ್ನು ಸ್ವೀಕರಿಸುವುದು ಮತ್ತು

ಇವುಗಳಿಂದ ಲೋಕಾನುಗ್ರಹಮಾಡುವುದು–ಇವುಗಳಿಗಾಗಿ ಪ್ರಪಂಚದಲ್ಲಿ ಬ್ರಾಹ್ಮಣರ ಸೃಷ್ಟಿಯಾಗಿದೆ.

**ಕೃಷಿಶ್ಚ ಪಾಶುಪಾಲ್ಯಂ ಚ ವಿಶಾಂ ದಾನಂ ಚ ಧರ್ಮತಃ ।**
**ಬ್ರಹ್ಮಕ್ಷತ್ರವಿಶಾಂ ಶೂದ್ರಾ ವಿಹಿತಾಃ ಪರಿಚಾರಕಾಃ ॥೪೭॥**

ಕೃಷಿ, ಪಶುಪಾಲನೆ ಮತ್ತು ಧರ್ಮಾನುಸಾರವಾಗಿ ದಾನಮಾಡುವುದು ವೈಶ್ಯರ ಕರ್ಮವಾಗಿದೆ. ಶೂದ್ರರು ಬ್ರಾಹ್ಮಣ-ಕ್ಷತ್ರಿಯ-ವೈಶ್ಯರ ಪರಿಚರ್ಯೆಯಲ್ಲಿ ನಿಯುಕ್ತರಾಗಿದ್ದಾರೆ. ಈ ಕ್ರಮದಲ್ಲಿ:

**ಬ್ರಹ್ಮಕ್ಷತ್ರಸ್ಯ ವಿಹಿತಾಃ ಸೂತಾ ವೈ ಪರಿಚಾರಕಾಃ ।**
**ನ ಕ್ಷತ್ರಿಯೋ ವೈ ಸೂತಾನಾಂ ಶೃಣುಯಾಚ್ಚ ಕಥಞ್ಚನ ॥೪೮॥**

ಬ್ರಾಹ್ಮಣ-ಕ್ಷತ್ರಿಯರಿಗೆ ಸೂತರು ಪರಿಚಾರಕರೆಂಬುದು ವಿಹಿತವಾಗಿದೆ. ಆದರೆ ಕ್ಷತ್ರಿಯನು ಸೂತರಿಗೆ ಸೇವಕನಾಗುವ ವಿಷಯವು ಯಾವುದೇ ಸಮಯದಲ್ಲಿಯೂ-ಯಾವುದೇ ಕಾರಣದಿಂದಲೂ-ಎಲ್ಲಿಯೂ ಕೇಳಲ್ಪಟ್ಟಿಲ್ಲ. (ಇಂತಹ ಅಸಂಬದ್ಧವಾದ ವಿಷಯವನ್ನೇ ನಾನು ಇದುವರೆಗೂ ಕೇಳಿಲ್ಲ.)

**ಅಹಂ ಮೂರ್ಧಾಭಿಷಿಕ್ತೋ ಹಿ ರಾಜರ್ಷಿಕುಲಜೋ ನೃಪಃ ।**
**ಮಹಾರಥಃ ಸಮಾಖ್ಯಾತಃ ಸೇವ್ಯಃ ಸ್ತುತ್ಯಶ್ಚ ವನ್ದಿನಾಮ್ ॥೪೯॥**

ನಾನು ರಾಜರ್ಷಿಗಳ ಕುಲದಲ್ಲಿ ಹುಟ್ಟಿರುವ ಪಟ್ಟಾಭಿಷಿಕ್ತನಾದ ರಾಜನಾಗಿದ್ದೇನೆ. ಮಹಾರಥನೆಂದು ಪ್ರಸಿದ್ಧಿಯನ್ನು ಪಡೆದಿರುತ್ತೇನೆ. ಸೂತರಿಂದ ಸೇವಿಸಲ್ಪಡತಕ್ಕವನೂ, ವಂದಿ-ಮಾಗಧರಿಂದ ಸ್ತುತಿಸಲ್ಪಡತಕ್ಕವನೂ ಆಗಿದ್ದೇನೆ.

**ಸೋಽಹಮೇತಾದೃಶೋ ಭೂತ್ವಾ ನೇಹಾರಿಬಲಸೂದನಃ ।**
**ಸೂತಪುತ್ರಸ್ಯ ಸಂಗ್ರಾಮೇ ಸಾರಥ್ಯಂ ಕರ್ತುಮುತ್ಸಹೇ ॥೫೦॥**

ಇಂತಹ ಪ್ರತಿಷ್ಠಿತವ್ಯಕ್ತಿಯಾಗಿ ಶತ್ರುಸೈನ್ಯದ ಸಂಹಾರದಲ್ಲಿ ಸಮರ್ಥನಾಗಿರುವ ನನಗೆ ಯುದ್ಧದಲ್ಲಿ ಒಬ್ಬ ಸೂತನ ಮಗನ ಸಾರಥ್ಯವನ್ನು ಮಾಡಲು ಖಂಡಿತವಾಗಿಯೂ ಸಾಧ್ಯವಿಲ್ಲ. ಇಷ್ಟು ಮಾತ್ರವಲ್ಲ;

**ಅವಮಾನಮಹಂ ಪ್ರಾಪ್ಯ ನ ಯೋತ್ಸ್ಯಾಮಿ ಕಥಞ್ಚನ।**
**ಆಪೃಚ್ಛೇ ತ್ವಾದ್ಯ ಗಾನ್ಧಾರೇ ಗಮಿಷ್ಯಾಮಿ ಗೃಹಾಯ ವೈ ॥೫೧॥**

ಇಂದು ನಿನ್ನಿಂದ ಹೀಗೆ ಅವಮಾನಿತನಾದ ನಾನು ಯಾವುದೇ ಕಾರಣದಿಂದಲೂ ಮುಂದೆ ಯುದ್ಧಮಾಡುವುದಿಲ್ಲ. ನಾನಿನ್ನು ನನ್ನ ದೇಶಕ್ಕೆ ಹೊರಟುಹೋಗುತ್ತೇನೆ. ಗಾಂಧಾರೇ! ಇದಕ್ಕಾಗಿ ನಿನ್ನ ಅನುಜ್ಞೆಯನ್ನು ಪ್ರಾರ್ಥಿಸುತ್ತೇನೆ.”

ಮಹಾರಾಜ! ಸಭೆಗೆ ಅಲಂಕಾರಪ್ರಾಯನಾಗಿದ್ದ, (ಸಮರಶೋಭನನಾದ), ಕೋಪಿಷ್ಠನಾಗಿದ್ದ ಶಲ್ಯನು ಹೀಗೆ ಹೇಳಿ ಆಸನದಿಂದ ಮೇಲೆದ್ದು ರಾಜರ ಮಧ್ಯದಿಂದ ಸರ-ಸರನೆ ಹೊರಟೇಬಿಟ್ಟನು.



ಒಡನೆಯೇ ನಿನ್ನ ಮಗನು ಶಲ್ಯನ ಮೇಲಿನ ಪ್ರೀತಿಯಿಂದಲೂ ಮತ್ತು ಗೌರವದಿಂದಲೂ ಅವನನ್ನು ಮುಂದೆಹೋಗದಂತೆ ತಡೆದು, ವಿನೀತನಾಗಿ ಸರ್ವಾರ್ಥಸಾಧಕವಾದ ಅತಿಮಧುರವಾದ ಈ ಮಾತನ್ನು ಹೇಳಿದನು:

"ಶಲ್ಯರಾಜ! ನೀನು ಧರ್ಮಾಧರ್ಮಗಳನ್ನು ಹೇಗೆ ತಿಳಿದಿರುವೆಯೋ ಅದು ಹಾಗೆಯೇ ಸರಿ. ಈ ವಿಷಯದಲ್ಲಿ ಸಂದೇಹವೇ ಇಲ್ಲ. ಆದರೆ ಜನೇಶ್ವರನೇ! ಈ ಸಂದರ್ಭದಲ್ಲಿ ನನ್ನ ಈ ಒಂದು ಅಭಿಪ್ರಾಯವನ್ನಾದರೂ ಆಲಿಸು.

ನ ಕರ್ಣೋಽಭ್ಯಧಿಕಸ್ತ್ವತ್ತೋ ನ ಶಙ್ಕೇ ತ್ವಾಂ ಚ ಪಾರ್ಥಿವ ।
ನ ಹಿ ಮದ್ರೇಶ್ವರೋ ರಾಜಾ ಕುರ್ಯಾದ್ಯದನೃತಂ ಭವೇತ್ ॥೫೫॥

ಮದ್ರೇಶ್ವರ! ಕರ್ಣನು ನಿನಗಿಂತಲೂ ಖಂಡಿತವಾಗಿಯೂ ಅಧಿಕನಲ್ಲ. ನಿನ್ನ ವಿಷಯದಲ್ಲಿ ನನಗೆ ಸಂದೇಹವೂ ಇಲ್ಲ. ಮದ್ರದೇಶಕ್ಕೆ ಸ್ವಾಮಿಯಾದ ಶಲ್ಯರಾಜನು ತನ್ನ ಕೀರ್ತಿ-ಪ್ರತಿಷ್ಠೆಗಳನ್ನು ಸುಳ್ಳಾಗಿಸುವ ಕಾರ್ಯವನ್ನೆಂದಿಗೂ ಮಾಡಲಾರನೆಂದೂ ನಾನು ಭಾವಿಸಿದ್ದೇನೆ.

ಋತಮೇವ ಹಿ ಪೂರ್ವಾಸ್ತೇ ವದನ್ತಿ ಪುರುಷೋತ್ತಮಾಃ ।
ತಸ್ಮಾದಾರ್ತಾಯನಿಃ ಪ್ರೋಕ್ತೋ ಭವಾನಿತಿ ಮತಿರ್ಮಮ ॥೫೬॥

ಪುರುಷಶ್ರೇಷ್ಠರಾದ ನಿನ್ನ ಪೂರ್ವಜರೆಲ್ಲರೂ ಸತ್ಯವನ್ನೇ ಹೇಳುತ್ತಿದ್ದರು. ಆದುದರಿಂದಲೇ ತಿಳಿಯದವರು ನಿನ್ನನ್ನು 'ಆರ್ತಾಯನಿ' ಎಂದೂ ಕರೆಯುತ್ತಾರೆಂದೂ ನನ್ನ ಭಾವನೆಯಾಗಿದೆ.

ಶಲ್ಯಭೂತಸ್ತು ಶತ್ರೂಣಾಂ ಯಸ್ಮಾತ್ತ್ವಂ ಯುಧಿ ಮಾನದ ।
ತಸ್ಮಾಚ್ಛಲ್ಯೋ ಹಿ ತೇ ನಾಮ ಕಥ್ಯತೇ ಪೃಥಿವೀತಲೇ ॥೫೭॥

ಮಾನದನೇ! (ಈ ಸಮಯದಲ್ಲಿ ನನ್ನ ಮಾನವುಳಿಸುವ ಸಾಮರ್ಥ್ಯವುಳ್ಳವನೇ!) ನೀನು ಯುದ್ಧದಲ್ಲಿ ಶತ್ರುಗಳಿಗೆ ಶಲ್ಯ (ಮುಳ್ಳಿನ) ಪ್ರಾಯನಾಗಿರುವೆ. ಆದುದರಿಂದ ಪೃಥ್ವಿಯಲ್ಲಿ ನಿನ್ನನ್ನು 'ಶಲ್ಯ' ಎಂಬ ಅನ್ವರ್ಥನಾಮದಿಂದಲೇ ಕರೆಯುತ್ತಾರೆ. ಭೂರಿದಕ್ಷಿಣನೇ! (ಯಜ್ಞದಲ್ಲಿ ಹೇರಳವಾದ ಭೂರಿದಕ್ಷಿಣೆಗಳನ್ನು ಕೊಡತಕ್ಕವನೇ!) ಧರ್ಮಜ್ಞನೇ!

ನೀನು ಈ ಹಿಂದೆ ಏನು ಹೇಳಿದೆಯೋ ಮತ್ತು ಈ ಸಮಯದಲ್ಲಿ ನೀನು ಏನು ಹೇಳುತ್ತಿರುವೆಯೋ ಅದನ್ನೇ ನೀನು ನನ್ನ ಸಲುವಾಗಿ ಮಾಡು.

**ನ ಚ ತ್ವತ್ತೋ ಹಿ ರಾಧೇಯೋ ನ ಚಾಹಮಪಿ ವೀರ್ಯವಾನ್ ।**
**ವೃಣೇಽಹಂ ತ್ವಾಂ ಹಯಾಗ್ರ್ಯಾಣಾಂ ಯನ್ತಾರಮಿಹ ಸಂಯುಗೇ ॥**

ಪರಾಕ್ರಮದಲ್ಲಿ ನಿನಗೆ ರಾಧೇಯನೂ ಸಮನಲ್ಲ; ನಾನೂ ಸಮನಲ್ಲ. ನಿನ್ನಷ್ಟು ಪರಾಕ್ರಮಶಾಲಿಯೂ ನಾನಲ್ಲ. ಈ ಕಾರಣದಿಂದಲೇ ಯುದ್ಧದಲ್ಲಿ ಶ್ರೇಷ್ಠವಾದ ಕುದುರೆಗಳನ್ನು ನಿಯಂತ್ರಿಸುವ ಸಲುವಾಗಿ ಅಶ್ವಲಕ್ಷಣ ಪಾರಂಗತನಾದ ನಿನ್ನನ್ನೇ ಆರಿಸಿಕೊಂಡಿರುತ್ತೇನೆ.

**ಮನ್ಯೇ ಚಾಭ್ಯಧಿಕಂ ಶಲ್ಯ ಗುಣೈಃ ಕರ್ಣಂ ಧನಂಜಯಾತ್ ।**
**ಭವನ್ತಂ ವಾಸುದೇವಾಚ್ಚ ಲೋಕೋಽಯಮಿತಿ ಮನ್ಯತೇ ॥೬೦॥**

ಶಲ್ಯ! ಕರ್ಣನು ಅರ್ಜುನನಿಗಿಂತಲೂ ಅಧಿಕಗುಣಗಳನ್ನು ಹೊಂದಿರುವನೆಂದು ನಾನು ಭಾವಿಸಿದ್ದೇನೆ. ಆದರೆ ವಸುದೇವನ ಮಗನಾದ ಶ್ರೀಕೃಷ್ಣನಿಗಿಂತಲೂ (ಸಾರಥ್ಯದಲ್ಲಿ) ನೀನು ಅಧಿಕನಾದವನೆಂದು ಪ್ರಪಂಚವೇ ಭಾವಿಸಿದೆ.

**ಕರ್ಣೋಹ್ಯಭ್ಯಧಿಕಃ ಪಾರ್ಥಾದಸ್ತ್ರೈರೇವ ನರರ್ಷಭ ।**
**ಭವಾನಭ್ಯಧಿಕಃ ಕೃಷ್ಣಾದಶ್ವಜ್ಞಾನೇ ಬಲೇ ತಥಾ ॥೬೧॥**

ಶಲ್ಯರಾಜ! ಇದಕ್ಕೂ ಮಿಗಿಲಾಗಿ, ಕರ್ಣನು ಅಸ್ತ್ರಗಳ ಜ್ಞಾನದಿಂದ ಮಾತ್ರವೇ ಅರ್ಜುನನಿಗಿಂತಲೂ ಅಧಿಕನಾಗಿದ್ದಾನೆ. ನೀನಾದರೋ ಅಶ್ವಜ್ಞಾನ ಮತ್ತು ಬಲ-ಈ ಎರಡರಲ್ಲಿಯೂ ಶ್ರೀಕೃಷ್ಣನಿಗಿಂತಲೂ ಅಧಿಕನಾಗಿರುವೆ.

**ಯಥಾಶ್ವಹೃದಯಂ ವೇದ ವಾಸುದೇವೋ ಮಹಾಮನಾಃ ।**
**ದ್ವಿಗುಣಂ ತ್ವಂ ತಥಾ ವೇತ್ಸಿ ಮದ್ರರಾಜೇಶ್ವರಾತ್ಮಜ ॥೬೨॥**

ಮದ್ರರಾಜಕುಮಾರ! ಮಹಾತ್ಮನಾದ ವಾಸುದೇವನು ಅಶ್ವಹೃದಯ ವನ್ನು ತಿಳಿದಿರುವಂತೆ ನೀನೂ ಅಶ್ವಹೃದಯವನ್ನು ತಿಳಿದಿರುವುದು ಮಾತ್ರವಲ್ಲ; ಅವನು ತಿಳಿದಿರುವುದಕ್ಕೆ ಎರಡು ಪಟ್ಟು ಹೆಚ್ಚಾಗಿ ಕುದುರೆಗಳ ಲಕ್ಷಣಗಳನ್ನೂ ನೀನು ತಿಳಿದುಕೊಂಡಿರುವೆ.”

ಹೊಗಳಿಕೆ ಮಾತುಗಳಿಂದ ಶಲ್ಯನು ಉಬ್ಬಿಹೋದನು. ಕೋಪಿಷ್ಠನಾಗಿದ್ದವನು ಸಂತುಷ್ಟಹೃದಯನಾಗಿ ದುರ್ಯೋಧನನೊಡನೆ ಹೇಳಿದನು:

**ಯನ್ಮಾಂ ಬ್ರವೀಷಿ ಗಾನ್ಧಾರೇ ಮಧ್ಯೇ ಸೈನ್ಯಸ್ಯ ಕೌರವ ।**
**ವಿಶಿಷ್ಟಂ ದೇವಕಿಪುತ್ರಾತ್ಪ್ರೀತಿಮಾನಸ್ಮ್ಯಹಂ ತ್ವಯಿ ॥೬೩॥**

"ಗಾಂಧಾರೀಪುತ್ರ! ನೀನು ಸರ್ವಸೈನ್ಯದ ಮಧ್ಯದಲ್ಲಿ ನನ್ನನ್ನು ದೇವಕಿಯ ಮಗನಾದ ಶ್ರೀಕೃಷ್ಣನಿಗಿಂತಲೂ ಅಧಿಕನಾದವನೆಂದು ಹೇಳಿದೆಯಲ್ಲವೇ! ಈ ಕಾರಣದಿಂದ ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿದ್ದೇನೆ.

ನಿನ್ನ ಅಭಿಪ್ರಾಯದಂತೆಯೇ ಪಾಂಡವಾಗ್ರ್ಯನಾದ ಅರ್ಜುನನೊಡನೆ ಯುದ್ಧಮಾಡುವ ಯಶೋವಂತನಾದ ಕರ್ಣನಿಗೆ ನಾನು ಸಾರಥಿಯಾಗಿ ಕಾರ್ಯಮಾಡುತ್ತೇನೆ. ಆದರೆ ನನ್ನದೊಂದು ನಿಬಂಧನೆಯಿದೆ. ನಾನು ಇವನ ಸಮೀಪದಲ್ಲಿರುವಾಗ (ಇವನ ಸಾರಥಿಯಾಗಿ ಕಾರ್ಯಮಾಡುವಾಗ) ನನಗಿಚ್ಛೆಬಂದಂತೆ ಕರ್ಣನೊಡನೆ ಮಾತನಾಡುತ್ತೇನೆ."

ಮಹಾರಾಜ! ಶಲ್ಯನು ಹೀಗೆಂದು ಹೇಳಿದೊಡನೆಯೇ ನಿನ್ನ ಮಗನು ಕರ್ಣನೊಡಗೂಡಿ 'ಹಾಗೆಯೇ ಆಗಲಿ! ನೀನು ಸ್ವಚ್ಛಂದವಾಗಿ ಮಾತನಾಡಬಹುದು'–ಎಂಬುದಾಗಿ ಹೇಳಿ ಶಲ್ಯನ ಷರತ್ತನ್ನು ಒಪ್ಪಿಕೊಂಡನು."

ಒ೨ನೆಯ ಅಧ್ಯಾಯವು ಮುಗಿಯಿತು.

ಒಒನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ)

## ದುರ್ಯೋಧನನು ಶಲ್ಯನಿಗೆ ತ್ರಿಪುರಗಳ ಉತ್ಪತ್ತಿಕ್ರಮವನ್ನು ಹೇಳಿದುದು: ತ್ರಿಪುರಾಸುರರಿಂದ ಭಯಗೊಂಡ ಇಂದ್ರನೇ ಮೊದಲಾದ ದೇವತೆಗಳು ಬ್ರಹ್ಮನೊಡನೆ ಶಂಕರನ ಬಳಿಗೆ ಹೋಗಿ ಸ್ತುತಿಸಿದುದು

ದುರ್ಯೋಧನನು ಪುನಃ ಶಲ್ಯನಿಗೆ ಸಾರಥಿಯು ರಥಿಗಿಂತಲೂ ಶ್ರೇಷ್ಠನಾಗಿರುತ್ತಾನೆಂಬುದನ್ನು ನಿರೂಪಿಸುವ ಸಲುವಾಗಿ ತ್ರಿಪುರಾಖ್ಯಾನವನ್ನು ಹೇಳುತ್ತಾನೆ:

"ಮದ್ರರಾಜ! ಬ್ರಹ್ಮನು ಶಂಕರನಿಗೆ ಹಿಂದೆ ಹೇಗೆ ಸಾರಥಿಯಾದನು? ದೇವಾಸುರರ ಯುದ್ಧಸಮಯದಲ್ಲಿ ಇದು ಹೇಗೆ ನಡೆ

ಯಿತು?–ಆ ವಿಷಯವನ್ನು ಕುರಿತು ನಿನ್ನೊಡನೆ ಹೇಳುತ್ತೇನೆ. ಆಲಿಸು. ಮಾರ್ಕಂಡೇಯ ಮಹರ್ಷಿಗಳು ಯಾವ ಈ ಚರಿತವನ್ನು ನನ್ನ ಸಮ್ಮುಖದಲ್ಲಿ ನನ್ನ ತಂದೆಯೊಡನೆ ಹೇಳಿದರೋ–ಅದೇ ಚರಿತವನ್ನೇ ನಾನು ಸಂಪೂರ್ಣವಾಗಿ ನಿನ್ನೊಡನೆ ಹೇಳುತ್ತೇನೆ: ರಾಜರ್ಷಿಸತ್ತಮನೇ! ನಾನು ಹೇಳಲಿರುವ ವಿಷಯವನ್ನು ನೀನು ಮನಸ್ಸಿಟ್ಟು ಕೇಳು. ಈ ವಿಷಯದಲ್ಲಿ ಬೇರೆ ಯಾವ ವಿಚಾರವನ್ನೂ ಮಾಡಹೋಗಬೇಡ.

ದೇವತೆಗಳಿಗೂ ಮತ್ತು ರಾಕ್ಷಸರಿಗೂ ಒಬ್ಬರು ಮತ್ತೊಬ್ಬರನ್ನು ಜಯಿಸಬೇಕೆಂಬ ಇಚ್ಛೆಯಿಂದ ಮೊದಲನೆಯದಾದ *ತಾರಕಾಮಯ (ರೋಗರೂಪನಾದ ತಾರಕನೊಡನೆ) ಸಂಗ್ರಾಮವು ನಡೆಯಿತು.

ಆ ಸಮಯದಲ್ಲಿ ದೇವತೆಗಳು ದೈತ್ಯರನ್ನು ಜಯಿಸಿದರೆಂಬುದನ್ನೂ ನಾವು ಕೇಳಿದೆವು. ಆದರೆ ದೈತ್ಯರು ಪರಾಜಿತರಾದ ಬಳಿಕ ತಾರಕನ ಮೂವರು ಮಕ್ಕಳಾದ ತಾರಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲೀ-ಎಂಬುವರು ಉಗ್ರ ವಾದ ತಪಸ್ಸನ್ನು ಪ್ರಾರಂಭಿಸಿ ಶ್ರೇಷ್ಠವಾದ ನಿಯಮಗಳನ್ನು ಪಾಲಿಸತೊಡಗಿ ದರು. ಶತ್ರುತಾಪನನೇ! ತಪಸ್ಸಿನಿಂದಲೂ, ಇಂದ್ರಿಯನಿಗ್ರಹದಿಂದಲೂ, ನಿಯಮಾನುಷ್ಠಾನಗಳಿಂದಲೂ, ಸಮಾಧಿಸ್ಥಿತಿಯಲ್ಲಿಯೇ ಬಹಳ ಕಾಲದ ವರೆಗೆ ಇದ್ದುದರಿಂದಲೂ-ತಮ್ಮ ದೇಹಗಳನ್ನವರು ಬಹಳವಾಗಿ ಕೃಶಗೊಳಿಸಿ ದರು. ಆ ಕಠೋರತಪಸ್ಸಿನಿಂದ ಸುಪ್ರೀತನಾದ ಪಿತಾಮಹನು ಅವರಿಗೆ ವರವನ್ನು ದಯಪಾಲಿಸಲು ಪ್ರತ್ಯಕ್ಷವಾಗಿ ಬಂದನು. ಆ ಮೂವರೂ ಒಟ್ಟಾಗಿ ಸೇರಿ ಸರ್ವಲೋಕಪಿತಾಮಹನಾದ ಬ್ರಹ್ಮನನ್ನು ಯಾವುದೇ ಪ್ರಾಣಿ ಯಿಂದಲೂ ಯಾವುದೇ ಕಾಲದಲ್ಲಿಯೂ ವಧ್ಯರಾಗಕೂಡದೆಂಬ ವರವನ್ನು ಕೇಳಿದರು. ಅದಕ್ಕೆ ಉತ್ತರವಾಗಿ ಲೋಕಗಳಿಗೆ ಪ್ರಭುವೂ, ಈಶ್ವರನೂ, ಸರ್ವಲೋಕಗಳಿಗೂ ದೇವನೂ ಆದ ಬ್ರಹ್ಮನು ಅವರೊಡನೆ ಹೇಳಿದನು: “ಅಸುರರೇ! ನಿಮ್ಮೆಲ್ಲರಿಗೂ ಅಮರತ್ವವನ್ನು ದಯಪಾಲಿಸಲು ಸಾಧ್ಯವಾಗುವು ದಿಲ್ಲ. ಆದುದರಿಂದ ನೀವು ಈ ವರದಿಂದ ಹಿಂತೆಗೆಯಿರಿ. (ಈ ಕೋರಿಕೆ

---

* ತಾರಕಾಮಯಃ-ಎಂಬುದಕ್ಕೆ ವ್ಯಾಖ್ಯಾನಕಾರರ ವಿವರಣೆ ಹೀಗಿದೆ: ತಾರಕಾಮಯಃ ತಾರಕಾಸುರ ಏವ ಅಮಯಃ ತಾರಕಾಸುರನೇ ಒಂದು ರೋಗ. ರೋಗವತ್ಪರಾಭವಹೇತುಃ ಯಸ್ಯ ಸಃ

ಯನ್ನು ತ್ಯಜಿಸಿರಿ.) ಅಮರತ್ವವೊಂದನ್ನು ಬಿಟ್ಟು ನಿಮಗೆ ಬಹಳ ಪ್ರಿಯವಾದ ಬೇರೆ ಯಾವುದಾದರೂ ವರವನ್ನು ಕೇಳಿರಿ."

ಅನಂತರ ಆ ಮೂವರೂ ಒಟ್ಟಾಗಿ ಸೇರಿ ಹಲವು ಬಾರಿ ಅನೇಕಪ್ರಕಾರವಾಗಿ ಸಮಾಲೋಚಿಸಿ ಒಂದು ನಿರ್ಧಾರಕ್ಕೆ ಬಂದು ಸರ್ವ ಲೋಕೇಶ್ವರನಾದ, ಪ್ರಭುವಾದ ಬ್ರಹ್ಮನನ್ನು ನಮಸ್ಕರಿಸಿ ಈ ಮಾತನ್ನು ಹೇಳಿದರು: "ಪಿತಾಮಹನೇ! ನಮಗೆ ಈ ವರವನ್ನಾದರೂ ದಯಪಾಲಿಸು.

**ವಯಂ ಪುರಾಣಿ ತ್ರೀಣ್ಯೇವ ಸಮಾಸ್ಥಾಯ ಮಹೀಮಿಮಾಮ್ ।**
**ವಿಚರಿಷ್ಯಾಮ ಲೋಕೇಽಸ್ಮಿಂಸ್ತ್ವತ್ಪ್ರಸಾದಪುರಸ್ಕೃತಾಃ ॥೧೨॥**
**ತತೋ ವರ್ಷಸಹಸ್ರೇ ತು ಸಮೇಷ್ಯಾಮಃ ಪರಸ್ಪರಮ್ ।**
**ಏಕೀಭಾವಂ ಗಮಿಷ್ಯನ್ತಿ ಪುರಾಣ್ಯೇತಾನಿ ಚಾನಘ ॥೧೩॥**
**ಸಮಾಗತಾನಿ ಚೈತಾನಿ ಯೋ ಹನ್ಯಾದ್ಭಗವಂಸ್ತದಾ ।**
**ಏಕೇಷುಣಾ ದೇವವರಃ ಸ ನೋ ಮೃತ್ಯುರ್ಭವಿಷ್ಯತಿ ॥೧೪॥**

ನಾವು ಮೂವರೂ ಈ ಲೋಕದಲ್ಲಿ ಮೂರು ಪಟ್ಟಣಗಳನ್ನು ನಿರ್ಮಿಸಿಕೊಂಡು ಅಲ್ಲಿಯೇ ಇದ್ದುಕೊಂಡು ನಿನ್ನ ಕೃಪಾಪ್ರಸಾದದಿಂದ ಈ ಪೃಥ್ವಿಯಲ್ಲಿ ಸಂಚರಿಸುತ್ತಿರುತ್ತೇವೆ. ಒಂದು ಸಾವಿರ ವರ್ಷಗಳು ಕಳೆದನಂತರ ನಾವು ಮೂವರೂ ಒಟ್ಟಾಗಿ ಸೇರುತ್ತೇವೆ. ನಮ್ಮ ತ್ರಿಪುರಗಳೂ ಆ ಸಮಯದಲ್ಲಿ ಏಕೀಭಾವವನ್ನು ಹೊಂದುತ್ತವೆ. ಏಕೀಭಾವವನ್ನು ಹೊಂದಿದ ತ್ರಿಪುರಗಳನ್ನೂ ಆ ಸಮಯದಲ್ಲಿ ಯಾವ ದೇವಶ್ರೇಷ್ಠನು ಒಂದೇ ಬಾಣದಿಂದ ಭಗ್ನಗೊಳಿಸುತ್ತಾನೆಯೋ ಅವನೇ ನಮಗೆ ಮೃತ್ಯುವಾಗುತ್ತಾನೆ."

ಅಸುರರ ಮಾತುಗಳನ್ನು ಕೇಳಿದ ಬ್ರಹ್ಮನು ಹಾಗೆಯೇ ಆಗಲೆಂದು ಹೇಳಿ ಸ್ವರ್ಗಕ್ಕೆ ಹೊರಟುಹೋದನು.

ಬ್ರಹ್ಮನಿಂದ ತಾವು ಅಪೇಕ್ಷಿಸಿದ ವರವನ್ನು ಪಡೆದು ಸುಪ್ರೀತರಾದ ಆ ಅಸುರರು ಪರಸ್ಪರವಾಗಿ ಸಮಾಲೋಚಿಸಿ ಮೂರು ಪುರಗಳನ್ನು ನಿರ್ಮಾಣಮಾಡುವ ಸಲುವಾಗಿ ದೈತ್ಯ-ದಾನವಪೂಜಿತನಾದ, ಮುಪ್ಪಿ

ನಿಂದ ವಿಮುಕ್ತನಾಗಿದ್ದ, ಮಹಾಸುರನಾದ, ದೇವಶಿಲ್ಪಿಯಾದ ವಿಶ್ವಕರ್ಮನಿಗೆ ಸಮಾನನಾದ ಮಯನನ್ನು ಆಮಂತ್ರಿಸಿದರು. ಅನಂತರ ಧೀಮಂತನಾದ ಮಯನು ತನ್ನ ತಪಶ್ಶಕ್ತಿಯಿಂದ ಒಂದು ಚಿನ್ನದ ಪುರವನ್ನೂ, ಒಂದು ಬೆಳ್ಳಿಯ ಪುರವನ್ನೂ ಮತ್ತು ಒಂದು ಕಬ್ಬಿಣದ ಪುರವನ್ನೂ–ಹೀಗೆ ಮೂರು ಪಟ್ಟಣಗಳನ್ನು ಮೂವರು ಅಸುರರಿಗೆ ನಿರ್ಮಾಣಮಾಡಿಕೊಟ್ಟನು.

**ಕಾಞ್ಚನಂ ದಿವಿ ತತ್ರಾಸೀದನ್ತರಿಕ್ಷೇ ಚ ರಾಜತಮ್ ।**
**ಆಯಸಂ ಚಾಭವದ್ಭೌಮಂ ಚಕ್ರಸ್ಥಂ ಪೃಥಿವೀಪತೇ ॥೧೮॥**

ಸುವರ್ಣದಿಂದ ನಿರ್ಮಿತವಾಗಿದ್ದ ಪುರವು ಸ್ವರ್ಗಲೋಕದಲ್ಲಿದ್ದಿತು. ಬೆಳ್ಳಿಯಿಂದ ನಿರ್ಮಿತವಾಗಿದ್ದ ಪುರವು ಅಂತರಿಕ್ಷದಲ್ಲಿದ್ದಿತು. ಲೋಹದಿಂದ ನಿರ್ಮಿತವಾಗಿದ್ದ ಪುರವು ಸುತ್ತುತ್ತಿರುವ ಚಕ್ರದ ಮಧ್ಯದಲ್ಲಿ ಭೂಮಿ ಯಲ್ಲಿದ್ದಿತು.

ಒಂದೊಂದು ಪುರವೂ ನೂರು ಯೋಜನಗಳಷ್ಟು ಅಗಲವಾಗಿಯೂ-ನೂರು ಯೋಜನಗಳಷ್ಟು ಉದ್ದವಾಗಿಯೂ ಇದ್ದಿತು. ಹಲವು ಮನೆ ಗಳಿಂದಲೂ ಉಪ್ಪರಿಗೆಮನೆಗಳಿಂದಲೂ ಆ ಪುರಗಳು ನಿಬಿಡ ವಾಗಿದ್ದುವು. ಆ ಪಟ್ಟಣಗಳು ಅನೇಕಪ್ರಾಕಾರಗಳಿಂದಲೂ ಮತ್ತು ಅನೇಕ ಬಹಿರ್ದ್ವಾರಗಳಿಂದಲೂ ಸಮಲಂಕೃತವಾಗಿದ್ದುವು. ಆ ತ್ರಿಪುರಗಳು ಶ್ರೇಷ್ಠ ವಾದ ಸೌಧಗಳಿಂದ ನಿಬಿಡವಾಗಿದ್ದುವು. ಆದರೆ ರಾಜಮಾರ್ಗಗಳು ಬಹಳ ವಿಶಾಲವಾಗಿದ್ದುದರಿಂದ ಜನಗಳ ಒತ್ತಡವಿಲ್ಲದೇ ಇದ್ದುವು. ತ್ರಿಪುರಗಳು ವಿಧ-ವಿಧವಾದ ಪ್ರಾಸಾದಗಳಿಂದಲೂ ಮತ್ತು ಮಹಾದ್ವಾರಗಳಿಂದಲೂ ಪರಿಶೋಭಿಸುತ್ತಿದ್ದುವು. ಆ ಮೂರು ಪುರಗಳಲ್ಲಿಯೂ ಪ್ರತ್ಯೇಕ ಪ್ರತ್ಯೇಕ ವಾದ ರಾಜರೇ ಇದ್ದರು. ಸ್ವರ್ಗಲೋಕದಲ್ಲಿದ್ದ ಸುವರ್ಣಮಯವಾದ ವಿಚಿತ್ರವಾದ ಪಟ್ಟಣಕ್ಕೆ ಮಹಾತ್ಮನಾದ ತಾರಕಾಕ್ಷನು ರಾಜನಾಗಿದ್ದನು. ಅಂತರಿಕ್ಷದಲ್ಲಿದ್ದ ಬೆಳ್ಳಿಯ ಪುರಕ್ಕೆ ಕಮಲಾಕ್ಷನು ರಾಜನಾಗಿದ್ದನು. ಭೂಮಿಯಲ್ಲಿದ್ದ ಲೋಹಪುರಕ್ಕೆ ವಿದ್ಯುನ್ಮಾಲೀ ಎಂಬುವನು ರಾಜ ನಾಗಿದ್ದನು. ಆ ಮೂವರು ದೈತ್ಯರಾಜರೂ ಒಟ್ಟಾಗಿಸೇರಿ ಮಹಾಸ್ತ್ರಗಳ ತೇಜಸ್ಸಿನಿಂದ ಮೂರುಲೋಕಗಳನ್ನೂ ಆಕ್ರಮಿಸಿ ತಮ್ಮ ಅಧಿಕಾರವನ್ನು ಸ್ಥಾಪಿಸಿದರು. ಅನಂತರ ದರ್ಪಿಷ್ಠರಾಗಿದ್ದ ಅವರು ತಮಗೆ ವರವನ್ನು ಕೊಟ್ಟ ಬ್ರಹ್ಮನನ್ನೇ 'ಆ ಪ್ರಜಾಪತಿ ಎಂಬುವನಾರು?'–ಎಂದೆನ್ನುತ್ತಾ

ತಾತ್ಸಾರದಿಂದ ಕಾಣತೊಡಗಿದರು. ಮೂವರು ದೈತ್ಯರಾಜರ ಬಳಿಗೂ ದೇಶ-ದೇಶಾಂತರಗಳಿಂದ ಲಕ್ಷೋಪಲಕ್ಷ, ಕೋಟ್ಯನುಕೋಟಿ ಅಪ್ರತಿಮ ಸಾಹಸಿಗಳಾದ ದೈತ್ಯವೀರರು ಆಗಮಿಸಿದರು. ಅವರೆಲ್ಲರೂ ಮಾಂಸಾಶಿಗಳಾಗಿದ್ದರು. ದೃಪ್ತರಾಗಿದ್ದರು. ಹಿಂದೆ ದೇವತೆಗಳಿಂದ ಅವಮಾನಿತರಾಗಿದ್ದ ಆ ದೈತ್ಯರೆಲ್ಲರೂ ದೇವತೆಗಳು ಕಸಿದುಕೊಂಡಿದ್ದ ಅಪಾರ ವಾದ ಐಶ್ವರ್ಯವನ್ನು ಪುನಃ ಪಡೆದುಕೊಳ್ಳುವ ಇಚ್ಛೆಯಿಂದ ತ್ರಿಪುರಗಳ ದುರ್ಗಗಳಲ್ಲಿ ಆಶ್ರಯವನ್ನು ಪಡೆದರು. ಅಲ್ಲಿ ಆಶ್ರಯಪಡೆದ ದೈತ್ಯರೆಲ್ಲರಿಗೂ ಮಯನು ದುರ್ಲಭವಾಗಿದ್ದ ಸಕಲವಸ್ತುಗಳನ್ನೂ ಒದಗಿಸಿಕೊಡುತ್ತಿದ್ದನು. ಮಯನನ್ನು ಆಶ್ರಯಿಸಿ ಆ ದೈತ್ಯರೆಲ್ಲರೂ ನಿರ್ಭಯರಾಗಿದ್ದರು.

ತ್ರಿಪುರಗಳಲ್ಲಿ ಆಶ್ರಯಪಡೆದಿದ್ದ ದೈತ್ಯರು ಯಾವ-ಯಾವುದು ಬೇಕೆಂದು ಆಸೆಪಡುತ್ತಿದ್ದರೋ–ಆ ಎಲ್ಲ ಕಾಮನಾವಸ್ತುಗಳನ್ನೂ ಮಯಾಸುರನು ತನ್ನ ಮಾಯೆಯಿಂದ ಆ ಕ್ಷಣದಲ್ಲಿಯೇ ಸಿದ್ಧಮಾಡಿಕೊಡುತ್ತಿದ್ದನು. ಸುವರ್ಣ ಪುರಕ್ಕೆ ಅಧಿಪತಿಯಾಗಿದ್ದ ತಾರಕಾಕ್ಷನ ಮಗನಾದ, ಮಹಾಬಲನಾದ ಹರಿ ಎಂಬುವನು ಬ್ರಹ್ಮನನ್ನು ಕುರಿತು ಅತ್ಯಂತಶ್ರೇಷ್ಠವಾದ ತಪಸ್ಸನ್ನು ಮಾಡಿದನು. ಅವನ ತಪಸ್ಸಿನಿಂದ ಪ್ರಜಾಪತಿಯು ಸುಪ್ರೀತನಾದನು. ವರಕೊಡಲು ಪ್ರತ್ಯಕ್ಷನಾಗಿ ಬಂದ ಬ್ರಹ್ಮನನ್ನು ಕುರಿತು ಹರಿಯು ಈ ವರವನ್ನು ಕೇಳಿದನು:

**ವಾಪೀ ಭವತು ನಃ ಪುರೇ।**
**ಶಸ್ತ್ರೈರ್ವಿನಿಹತಾ ಯತ್ರ ಕ್ಷಿಪ್ತಾಸ್ಸ್ಯುರ್ಬಲವತ್ತರಾಃ ॥೨೮॥**

"ಬ್ರಹ್ಮದೇವ! ಶಸ್ತ್ರಾಘಾತಗಳಿಂದ ಸತ್ತುಹೋದ ದೈತ್ಯರನ್ನು ಬಾವಿಯಲ್ಲಿ ಹಾಕಿದರೆ ಅವರು ಬದುಕಿ ಬರುವುದು ಮಾತ್ರವಲ್ಲದೇ ಮೊದಲಿಗಿಂತಲೂ ಹೆಚ್ಚು ಬಲಿಷ್ಠರಾಗಿ ಹೊರಬರುವಂತಾಗಬೇಕು. ಅಂತಹ ಅಮೋಘವಾದ ಬಾವಿಯೊಂದು ನಮ್ಮ ಪುರದಲ್ಲಿ ಇರುವಂತಾಗಲಿ."

ಬ್ರಹ್ಮದೇವನು **'ತಥಾಸ್ತು'** ಎಂದನು. ಅಂತಹ ಅಮೋಘವಾದ ವರವನ್ನು ಪಡೆದ ವೀರನಾದ ತಾರಕಾಕ್ಷನ ಮಗನಾದ ಹರಿಯು ಮೃತಸಂಜೀವಿನಿಯಾದ ಬಾವಿಯೊಂದನ್ನು ತನ್ನ ಪುರದಲ್ಲಿ ನಿರ್ಮಿಸಿದನು. ದೈತ್ಯನು ಯಾವರೂಪದಲ್ಲಿಯೇ ಸತ್ತಿರಲಿ; ಯಾವ ವೇಷದಲ್ಲಿಯೇ ಅಸುನೀಗಿರಲಿ-ಮೃತನಾದವನನ್ನು ಆ ಬಾವಿಯಲ್ಲಿ ಹಾಕಿದೊಡನೆಯೇ

ಅವನು ಅದೇ ರೂಪದಿಂದ ಪ್ರಕಟವಾಗಿ ಹೊರಬರುತ್ತಿದ್ದನು. ಅಸುನೀಗಿದ ದೈತ್ಯರು ಹೀಗೆ ಬಾವಿಯಲ್ಲಿ ಎಸೆಯಲ್ಪಟ್ಟು ಪುನಃ ನವಚೇತನವನ್ನು ಪಡೆದು ಹೊರಬಂದು ಮೂರು ಲೋಕಗಳನ್ನೂ ಬಾಧೆಪಡಿಸುತ್ತಿದ್ದರು. ದೇವತೆಗಳ ಭಯವರ್ಧಕರಾಗಿದ್ದ ಆ ದೈತ್ಯರು ಅನೇಕಪ್ರಕಾರವಾದ ಮಹಾತಪಸ್ಸುಗಳಿಂದ ನಾನಾವಿಧವಾದ ಸಿದ್ಧಿಗಳನ್ನು ಪಡೆದಿದ್ದರು. ಆ ಪುರದಲ್ಲಿ ಮೃತಸಂಜೀವಿನೀ ರೂಪವಾದ ಆ ಬಾವಿಯಿದ್ದ ಕಾರಣದಿಂದಲೇ ಯುದ್ಧದಲ್ಲಿ ದೈತ್ಯರು ವಿನಾಶ ಹೊಂದುತ್ತಲೇ ಇರಲಿಲ್ಲ. ಆ ದೈತ್ಯರು ಕಾಲಾನುಕ್ರಮದಲ್ಲಿ ಲೋಭ-ಮೋಹ ಗಳಿಗೆ ವಶರಾಗಿ ವಿವೇಕಶೂನ್ಯರಾದರು. ಎಲ್ಲ ದೈತ್ಯರೂ ನಿರ್ಲಜ್ಜರಾಗಿ ಮೂರು ಲೋಕಗಳಲ್ಲಿಯೂ ಅನೇಕಪ್ರಕಾರವಾದ ದಾಂಧಲೆಗಳನ್ನು ಪ್ರಾರಂ ಭಿಸಿದರು. ವರದಾನದಿಂದ ದರ್ಪಿಷ್ಠರಾಗಿದ್ದ ಆ ದೈತ್ಯರು ಅಲ್ಲಲ್ಲಿರುತ್ತಿದ್ದ ದೇವತೆಗಳನ್ನೂ ಮತ್ತು ಅವರ ಗಣಗಳನ್ನೂ ಅವರಿದ್ದ ಸ್ಥಳಗಳಿಂದ ಓಡಿಸುತ್ತಾ ತಮ್ಮ ಇಚ್ಛಾನುಸಾರವಾಗಿ ಮೂರು ಲೋಕಗಳಲ್ಲಿಯೂ ಸಂಚರಿಸುತ್ತಿದ್ದರು. ಮರ್ಯಾದಾಶೂನ್ಯರಾಗಿದ್ದ ದುಷ್ಟಚಾರಿಗಳಾದ ದಾನವರು ದೇವತೆಗಳಿಗೆ ಅತ್ಯಂತ ಪ್ರಿಯವಾಗಿದ್ದ ಉದ್ಯಾನವನಗಳನ್ನೂ, ಪುಣ್ಯತಮವಾದ ಋಷಿಗಳ ಆಶ್ರಮಗಳನ್ನೂ ಮತ್ತು ಸುಂದರವಾದ ದೇಶಗಳನ್ನೂ ಅವ್ಯಾಹತವಾಗಿ ನಾಶಗೊಳಿಸುತ್ತಿದ್ದರು.

ಈ ರೀತಿಯಲ್ಲಿ ತ್ರಿಪುರದೈತ್ಯರಿಂದ ಮೂರು ಲೋಕಗಳೂ ಪೀಡಿಸ ಲ್ಪಡುತ್ತಿರಲಾಗಿ ಮರುದ್ಗಣಗಳಿಂದ ಪರಿವೃತನಾದ ಇಂದ್ರನು ತ್ರಿಪುರಗಳನ್ನೂ ಮುತ್ತಿಗೆಹಾಕಿ ಎಲ್ಲ ಕಡೆಗಳಿಂದಲೂ ವಜ್ರಾಯುಧದಿಂದ ಆ ಪಟ್ಟಣಗಳನ್ನು ಪ್ರಹರಿಸಿದನು. ಆದರೆ ಬ್ರಹ್ಮನ ವರದಾನದಿಂದ ಅಭೇದ್ಯವಾಗಿದ್ದ ಆ ತ್ರಿಪುರಗಳನ್ನು ಭಗ್ನಗೊಳಿಸಲು ಇಂದ್ರನಿಗೆ ಸಾಧ್ಯವಾಗಲಿಲ್ಲ. ಆದುದರಿಂದ ಭಯಗೊಂಡ ಇಂದ್ರನು ತ್ರಿಪುರಗಳ ಆಕ್ರಮಣವನ್ನು ಪರಿತ್ಯಜಿಸಿ, ತನ್ನೊಡನೆ ಯುದ್ಧಕ್ಕೆ ಬಂದಿದ್ದ ದೇವತೆಗಳೊಡನೆ ದೈತ್ಯರ ಅತ್ಯಾಚಾರಗಳನ್ನು ತಿಳಿಸುವ ಸಲುವಾಗಿ ಪ್ರಜಾಪತಿಯ ಬಳಿಗೆ ಹೋದನು. ಇಂದ್ರಪ್ರಮುಖರಾದ ದೇವತೆಗಳು ಬ್ರಹ್ಮನಿಗೆ ತಲೆಬಾಗಿ ನಮಸ್ಕರಿಸಿ ವರದರ್ಪಿತರಾದ ದೈತ್ಯರು ಮಾಡುತ್ತಿರುವ ಅತ್ಯಾಚಾರಗಳೆಲ್ಲವನ್ನೂ ತಿಳಿಯಪಡಿಸಿ, ತ್ರಿಪುರಾಸುರರ ವಧೋಪಾಯವು ಹೇಗೆಂದು ಭಗವಂತನಾದ ಪಿತಾಮಹನನ್ನೇ ಪ್ರಶ್ನಿಸಿದರು. ಭಗವಂತನಾದ, ದೇವದೇವನಾದ ಬ್ರಹ್ಮನು ದೇವತೆಗಳು ಹೇಳಿದುದನ್ನು ಕೇಳಿ ಉತ್ತರಿಸಿದನು:

"ದೇವತೆಗಳೇ! ನಿಮ್ಮ ವಿಷಯದಲ್ಲಿ ಯಾರು ನಿಷ್ಠುರವಾಗಿ ವರ್ತಿಸುತ್ತಿದ್ದಾರೆಯೋ, ಅವರು ನನಗೂ ಅಪರಾಧಿಗಳೇ ಸರಿ. ದೇವತೆಗಳ ಶತ್ರುಗಳಾದ, ದುರಾತ್ಮರಾದ, ನಿಮಗೆ ಸದಾಕಾಲದಲ್ಲಿಯೂ ಪೀಡೆ ಯನ್ನುಂಟುಮಾಡುವ ದೈತ್ಯರು ನನ್ನ ವಿಷಯದಲ್ಲಿಯೂ ಸರ್ವಕಾಲ ಗಳಲ್ಲಿಯೂ ಅಪರಾಧಗಳನ್ನು ಮಾಡುತ್ತಲೇ ಇರುತ್ತಾರೆ. ಬ್ರಹ್ಮಾಂಡದಲ್ಲಿ ಹುಟ್ಟಿರುವ ಸಮಸ್ತಪ್ರಾಣಿಗಳಲ್ಲಿಯೂ ನನಗೆ ಸಮಭಾವವೇ ಇದೆ. (ನನಗೆ ನೀವು ಹೇಗೆ ಮಕ್ಕಳೋ ದೈತ್ಯರೂ ಹಾಗೆಯೇ ಮಕ್ಕಳು.) ಈ ವಿಷಯದಲ್ಲಿ ಸಂಶಯವೇ ಇಲ್ಲ. ಆದರೆ:

**ಅಧಾರ್ಮಿಕಾಸ್ತು ಹನ್ತವ್ಯಾ ಇತಿ ಮೇ ವ್ರತಮಾಹಿತಮ್ ॥೪೩॥**

ಅಧಾರ್ಮಿಕರನ್ನು ಸಂಹರಿಸಬೇಕೆಂಬುದೇ ನನ್ನ ವ್ರತವಾಗಿದೆ.

**ಏಕೇಷುಣಾ ವಿಭೇದ್ಯಾನಿ ತಾನಿ ದುರ್ಗಾಣಿ ನಾನ್ಯಥಾ ।**
**ನ ಚ ಸ್ಥಾಣುಮೃತೇ ಶಕ್ತೋ ಭೇತ್ತುಮೇಕೇಷುಣಾ ಪುರಃ ॥೪೪॥**

ದುರ್ಗಮವಾದ ಆ ತ್ರಿಪುರಗಳನ್ನೂ ಒಂದೇ ಬಾಣದಿಂದ ಭೇದಿಸಬೇಕು. ಸ್ಥಾಣುವೊಬ್ಬನ ಹೊರತಾಗಿ ಬೇರೆ ಯಾರಿಂದಲೂ ಒಂದೇ ಬಾಣದಿಂದ ಆ ತ್ರಿಪುರಗಳನ್ನು ಭಗ್ನಗೊಳಿಸಲು ಸಾಧ್ಯವಾಗುವುದಿಲ್ಲ. ಆದುದರಿಂದ, ಆದಿತ್ಯರೇ! ನೀವೆಲ್ಲರೂ ಸ್ಥಾಣುವಾದ, ಈಶಾನನಾಮಕ ನಾದ, ಜಿಷ್ಣುವಾದ, ಅನಾಯಾಸದಿಂದ ದುಷ್ಕರವಾದ ಕಾರ್ಯಗಳನ್ನು ಮಾಡುವ ಈಶ್ವರನನ್ನು ಯೋಧನನ್ನಾಗಿ ಆರಿಸಿಕೊಳ್ಳಿರಿ. ಆ ದೈತ್ಯರೆಲ್ಲರನ್ನೂ ಈಶ್ವರನು ಸಂಹರಿಸುತ್ತಾನೆ."

ಶಲ್ಯರಾಜ! ಬ್ರಹ್ಮನ ಮಾತುಗಳನ್ನು ಕೇಳಿ ಇಂದ್ರಪುರಃಸರರಾದ ದೇವತೆಗಳು ಬ್ರಹ್ಮನನ್ನೇ ಮುಂದುಮಾಡಿಕೊಂಡು ವೃಷಾಂಕನಾದ ಈಶ್ವರ ನನ್ನು ಶರಣುಹೊಂದಿದರು. ಧರ್ಮಜ್ಞರಾದ ದೇವತೆಗಳು ತಪೋನಿಯಮ ಗಳನ್ನು ಅನುಷ್ಠಾನಮಾಡುತ್ತಾ, ಋಷಿಗಳೊಡನೆ ಕೂಡಿಕೊಂಡು ಸನಾತನನಾದ ಪರಬ್ರಹ್ಮರೂಪನಾದ ಶಿವನನ್ನು ಸ್ತೋತ್ರಮಾಡುತ್ತಾ ಸರ್ವ ಪ್ರಕಾರದಿಂದಲೂ ಅವನ ಸಾನ್ನಿಧ್ಯವನ್ನು ಪಡೆದರು. (ಶರೀರಮಾತ್ರ ವಲ್ಲದೇ ಮನಸ್ಸಿನಿಂದಲೂ ಅವನನ್ನು ಹೊಂದಿದರು.) ಯಾವನು ಆತ್ಮಸ್ವರೂಪದಿಂದ ಎಲ್ಲರನ್ನೂ ವ್ಯಾಪಿಸಿದ್ದಾನೆಯೋ–ಯಾವನು ಮಹಾ

ಭಯದ ಸಮಯದಲ್ಲಿಯೂ ಅಭಯಪ್ರದನಾಗಿರುವನೋ–ಅಂತಹ ಮಹಾತ್ಮನಾದ, ಸರ್ವಾತ್ಮನಾದ ಶಿವನನ್ನು ಅವನಿಗೆ ಇಷ್ಟವಾದ ಸ್ತೋತ್ರಗಳಿಂದ ದೇವರ್ಷಿಗಳು ಸ್ತೋತ್ರಮಾಡಿದರು. ನಾನಾಪ್ರಕಾರವಾದ ವಿಶೇಷತಪಸ್ಸುಗಳಿಂದ ಯಾವನು ಚಿತ್ತವೃತ್ತಿನಿರೋಧದ ಉಪಾಯಗಳನ್ನು ಕಂಡುಕೊಂಡಿರುವನೋ, ಯಾವನು ತನ್ನ ಜ್ಞಾನಸ್ವರೂಪವನ್ನು ತಿಳಿದುಕೊಂಡಿರುವನೋ, ಯಾವನು ತನ್ನ ಮನಸ್ಸನ್ನು ಸದಾಕಾಲದಲ್ಲಿಯೂ ವಶದಲ್ಲಿಟ್ಟುಕೊಂಡಿರುವನೋ, ಯಾವನಿಗೆ ಸದೃಶರಾದವರು ಈ ಬ್ರಹ್ಮಾಂಡದಲ್ಲಿಯೇ ಬೇರೆ ಯಾರೂ ಇಲ್ಲವೋ– ಅಂತಹ ತೇಜೋರಾಶಿಯಾದ, ಕಲ್ಮಷರಹಿತನಾದ, ಭಗವಂತನಾದ, ಉಮಾಪತಿಯಾದ ಈಶಾನನನ್ನು ದೇವತೆಗಳು ನೋಡಿದರು.

**ಏಕಂ ಚ ಭಗವನ್ತಂ ತೇ ನಾನಾರೂಪಮಕಲ್ಪಯನ್ ।**
**ಆತ್ಮನಃ ಪ್ರತಿರೂಪಾಣಿ ರೂಪಾಣ್ಯಥ ಮಹಾತ್ಮನಿ ।**
**ಪರಸ್ಪರಸ್ಯ ಚಾಪಶ್ಯನ್ಸರ್ವೇ ಪರಮವಿಸ್ಮಿತಾಃ ॥೫೧॥**

ಭಗವಂತನಾದ ಒಬ್ಬನೇ ಒಬ್ಬ ಶಿವನನ್ನು ದೇವತೆಗಳು ತಮ್ಮ-ತಮ್ಮ ಭಾವನೆಗಳಿಗೆ ಅನುಸಾರವಾಗಿ ಕಲ್ಪಿಸಿಕೊಂಡರು. ತಮ್ಮ-ತಮ್ಮ ಕಲ್ಪನೆಗಳಂತೆಯೇ ಅವರು ಶಿವಸ್ವರೂಪವನ್ನು ಕಂಡುಕೊಂಡರು. ಇಷ್ಟುಮಾತ್ರವಲ್ಲ. ಆ ಪರಮಾತ್ಮನಲ್ಲಿ ತಮ್ಮ ರೂಪಗಳನ್ನೂ ನೋಡಿದರು ಮತ್ತು ಇತರರ ರೂಪಗಳನ್ನೂ ನೋಡಿದರು. ಇಂತಹ ಚಿದೇಕಸ್ವರೂಪನಾದ ಪರಮಾತ್ಮನನ್ನು ನೋಡಿದ ದೇವತೆಗಳು ಅತ್ಯಂತವಿಸ್ಮಿತರಾಗಿ ಒಬ್ಬರನ್ನೊಬ್ಬರು ಕುತೂಹಲದಿಂದ ವೀಕ್ಷಿಸಿದರು. ಹುಟ್ಟು-ಸಾವುಗಳಿಲ್ಲದ, ವಿಶ್ವಪತಿಯಾದ, ಸರ್ವಭೂತಮಯನಾದ (ಸರ್ವಪ್ರಾಣಿಗಳನ್ನೂ ತನ್ನಲ್ಲಿಯೇ ಅಡಗಿಸಿಕೊಂಡಿರುವ) ಈಶಾನಮೂರ್ತಿಯನ್ನು ನೋಡಿದ ದೇವತೆಗಳೂ ಮತ್ತು ಬ್ರಹ್ಮರ್ಷಿಗಳೂ ಸಾಷ್ಟಾಂಗನಮಸ್ಕಾರಗಳನ್ನು ಮಾಡಿದರು.

'ನಿಮಗೆ ಮಂಗಳವಾಗಲಿ'–ಎಂಬ ಸ್ವಸ್ತಿವಾಚನದಿಂದ ಭಗವಾನ್ ಶಂಕರನು ಅವರನ್ನು ಮೇಲಕ್ಕೆಬ್ಬಿಸಿ ನಸುನಗುತ್ತಾ 'ನಿಮಗೆ ನನ್ನಿಂದ ಏನಾಗಬೇಕಾಗಿದೆ? ಹೇಳಿರಿ! ಬೇಗನೆ ಹೇಳಿರಿ'–ಎಂದು ಹೇಳಿದನು.

ಈ ಪ್ರಕಾರವಾಗಿ ತ್ರ್ಯಂಬಕನಿತ್ತ ಆಶ್ವಾಸನೆಯಿಂದ ಸಮಾಧಾನ

ಹೊಂದಿದ ಇಂದ್ರಪ್ರಮುಖರಾದ ದೇವತೆಗಳು "ಪ್ರಭೋ! ನಮೋ ನಮೋ ನಮಸ್ತೇಽಸ್ತು-ಪ್ರಭುವೇ ನಮೋ ನಮಃ. ನಿನಗೆ ನಮ್ಮೆಲ್ಲರ ನಮಸ್ಕಾರ ವಿರಲಿ"–ಎಂಬ ವಾಕ್ಯದೊಡನೆ ಸ್ತೋತ್ರಮಾಡಲು ಉಪಕ್ರಮಿಸಿದರು:-

ನಮೋ ದೇವಾಧಿದೇವಾಯ ಧನ್ವಿನೇ ವನಮಾಲಿನೇ ।
ಪ್ರಜಾಪತಿಮುಖಘ್ನಾಯ ಪ್ರಜಾಪತಿಭಿರೀಡ್ಯತೇ ।
ನಮಃ ಸ್ತುತಾಯ ಸ್ತುತ್ಯಾಯ ಸ್ತೂಯಮಾನಾಯ ಶಮ್ಭವೇ ॥೫೬॥
ವಿಲೋಹಿತಾಯ ರುದ್ರಾಯ ನೀಲಗ್ರೀವಾಯ ಶೂಲಿನೇ ।
ಅಮೋಘಾಯ ಮೃಗಾಕ್ಷಾಯ ಪ್ರವರಾಯುಧಯೋಧಿನೇ ॥೫೭॥
ಅರ್ಹಾಯ ಚೈವ ಶುದ್ಧಾಯ ಕ್ಷಯಾಯ ಕ್ರಥನಾಯ ಚ ।
ದುರ್ವಾರಣಾಯ ಶುಕ್ರಾಯ ಬ್ರಹ್ಮಣೇ ಬ್ರಹ್ಮಚಾರಿಣೇ ॥೫೮॥
ಈಶಾನಾಯಾಪ್ರಮೇಯಾಯ ನಿಯನ್ತ್ರೇ ಚರ್ಮವಾಸಸೇ ।
ತಪೋರತಾಯ ಪಿಙ್ಗಾಯ ವ್ರತಿನೇ ಕೃತ್ತಿವಾಸಸೇ ॥೫೯॥
ಕುಮಾರಪಿತ್ರೇ ತ್ರ್ಯಕ್ಷಾಯ ಪ್ರವರಾಯುಧಧಾರಿಣೇ ।
ಪ್ರಪನ್ನಾರ್ತಿವಿನಾಶಯ ಬ್ರಹ್ಮದ್ವಿಟ್ಸಂಘಘಾತಿನೇ ॥೬೦॥
ವನಸ್ಪತೀನಾಂ ಪತಯೇ ನರಾಣಾಂ ಪತಯೇ ನಮಃ ।
ಗವಾಂ ಚ ಪತಯೇ ನಿತ್ಯಂ ಯಜ್ಞಾನಾಂ ಪತಯೇ ನಮಃ ॥೬೧॥
ನಮೋಽಸ್ತುತೇ ಸಸೈನ್ಯಾಯ ತ್ರ್ಯಮ್ಬಕಾಯಾಮಿತೌಜಸೇ ।
ಮನೋವಾಕ್ಕರ್ಮಭಿರ್ದೇವ ತ್ವಾಂ ಪ್ರಪನ್ನಾನ್ಭಜಸ್ವ ನಃ ॥೬೨॥

"ದೇವತೆಗಳನ್ನು ಕಾಪಾಡುವ ದೇವನಾದ ನಿನಗೆ ನಮಸ್ಕಾರವಿರಲಿ. ಧನುರ್ಧರನಾದ, ವನಮಾಲೆಯನ್ನು ಧರಿಸಿರುವ ನಿನಗೆ ನಮಸ್ಕಾರವಿರಲಿ. ದಕ್ಷಪ್ರಜಾಪತಿಯ ಯಜ್ಞವನ್ನು ಧ್ವಂಸಮಾಡಿದವನೇ! ನಿನ್ನನ್ನು ಪ್ರಜಾ ಪತಿಗಳು ಸ್ತೋತ್ರಮಾಡುತ್ತಾರೆ. ಎಲ್ಲರಿಂದಲೂ ಸ್ತೋತ್ರಮಾಡಲ್ಪಡತಕ್ಕ ವನೇ! ಸ್ತೋತ್ರಾರ್ಹನೇ! ಸ್ತುತಿಸಲ್ಪಡುತ್ತಿರುವವನೇ! ಶಂಭುವೇ! ನಿನಗೆ

ನಮಸ್ಕಾರವಿರಲಿ. ವಿಶೇಷವಾದ ಕೆಂಪುಬಣ್ಣದಿಂದ ಕೂಡಿರುವವನೇ! ಪಾಪಿಗಳನ್ನು ಅಳಿಸುವವನೇ! ಕಪ್ಪಾದ ಕುತ್ತಿಗೆಯುಳ್ಳವನೇ! ತ್ರಿಶೂಲಪಾಣಿಯೇ! ಅಮೋಘವಾದ ಫಲಗಳನ್ನು ಕೊಡತಕ್ಕವನೇ! ಮೃಗದ ಕಣ್ಣುಗಳಿಗೆ ಸಮಾನವಾದ ಕಣ್ಣುಗಳನ್ನು ಹೊಂದಿರತಕ್ಕವನೇ! ಶ್ರೇಷ್ಠವಾದ ಆಯುಧಗಳಿಂದ ಯುದ್ಧಮಾಡುವವನೇ! ನಿನಗೆ ನಮಸ್ಕಾರವಿರಲಿ. ಪೂಜೆಗೆ ಯೋಗ್ಯನಾದವನೇ! ಶುದ್ಧಾತ್ಮನೇ! ಶತ್ರುಗಳ ಕ್ಷಯಕರನೇ! ಪ್ರಳಯಕಾಲದಲ್ಲಿ ಸಕಲಪ್ರಾಣಿಗಳ ವಿಧ್ವಂಸಕನೇ! ಪರಾಜಯಗೊಳಿಸಲು ಅಶಕ್ಯನಾದವನೇ! ಶುಕ್ಲವರ್ಣನೇ! ಪರಬ್ರಹ್ಮಸ್ವರೂಪನೇ! ಬ್ರಹ್ಮಚಾರಿಯೇ! ನಿನಗೆ ನಮಸ್ಕಾರವಿರಲಿ. ಈಶಾನಮೂರ್ತಿಯೇ! ಅಪ್ರಮೇಯನೇ! ವಿಶ್ವವನ್ನು ನಿಯಂತ್ರಿಸುವವನೇ! ವ್ಯಾಘ್ರಚರ್ಮವನ್ನೇ ವಸ್ತ್ರವನ್ನಾಗಿ ಧರಿಸಿರತಕ್ಕವನೇ! ನಿನಗೆ ನಮಸ್ಕಾರವಿರಲಿ. ತಪಸ್ಸಿನಲ್ಲಿಯೇ ಸದಾಕಾಲದಲ್ಲಿಯೂ ನಿರತನಾಗಿರತಕ್ಕವನೇ! ಪಿಂಗಳವರ್ಣನೇ! ವ್ರತನಿಷ್ಠನೇ! ಜಿಂಕೆ, ಹುಲಿ–ಇವೇ ಮೊದಲಾದ ಪ್ರಾಣಿಗಳ ಚರ್ಮವನ್ನು ಧರಿಸಿರತಕ್ಕವನೇ! ನಿನಗೆ ನಮಸ್ಕಾರವಿರಲಿ. ಕುಮಾರಸ್ವಾಮಿಯ ತಂದೆಯೇ! ಮುಕ್ಕಣ್ಣನೇ! ಶ್ರೇಷ್ಠವಾದ ಆಯುಧಗಳನ್ನು ಧರಿಸಿರತಕ್ಕವನೇ! ಶರಣಾಗತರಾದವರ ಸಂಕಟಗಳನ್ನು ಪರಿಹರಿಸತಕ್ಕವನೇ! ಬ್ರಹ್ಮದ್ವೇಷಿಗಳಾದವರ ಸಮೂಹವನ್ನೇ ನಿರ್ಮೂಲ ಮಾಡುವವನೇ! ನಿನಗೆ ನಮಸ್ಕಾರವಿರಲಿ. ವನಸ್ಪತಿಗಳ ಪರಿಪಾಲಕನೇ! ನರಪತಿಯೇ! ಗೋ ಪತಿಯೇ! ಯಜ್ಞಪತಿಯೇ! ನಿನಗೆ ನಮಸ್ಕಾರವಿರಲಿ.

ಸೇನಾಸಹಿತನಾದ ನಿನಗೆ ನಮಸ್ಕಾರವಿರಲಿ. ಅಮಿತೌಜಸ್ಕನಾದ ತ್ರ್ಯಂಬಕನಿಗೆ ನಮಸ್ಕಾರವಿರಲಿ. ದೇವ! ಮನಸ್ಸು ಮಾತು ಮತ್ತು ಕರ್ಮಗಳಿಂದ ಶರಣಾಗತರಾಗಿರುವ ನಮ್ಮನ್ನು ಕಾಪಾಡು.”

ಶಲ್ಯರಾಜ! ದೇವತೆಗಳು ಮಾಡಿದ ಸ್ತೋತ್ರದಿಂದ ಪ್ರಸನ್ನನಾದ ಭಗವಾನ್ ಶಂಕರನು ಸ್ವಾಗತಪೂರ್ವಕವಾಗಿ ದೇವತೆಗಳನ್ನು ಅಭಿನಂದಿಸಿ ಹೇಳಿದನು: "ದೇವತೆಗಳೇ! ನಿಮ್ಮ ಭಯವು ದೂರವಾಗಲಿ; ನಿಮಗಾಗಿ ಏನು ಮಾಡಬೇಕೆಂಬುದನ್ನು ಹೇಳಿರಿ."

೩೩ನೆಯ ಅಧ್ಯಾಯವು ಮುಗಿಯಿತು.

೩೪ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ದುರ್ಯೋಧನನು ಶಲ್ಯನಿಗೆ ಶಿವನ ವಿಚಿತ್ರರಥವನ್ನು ವರ್ಣಿಸಿದುದು: ತ್ರಿಪುರಾಸುರರ ಸಂಹಾರ: ಪರಶುರಾಮನು ಕರ್ಣನಿಗೆ ದಿವ್ಯಾಸ್ತ್ರಗಳನ್ನು ದಯಪಾಲಿಸಿದ ವಿಷಯವನ್ನು ಹೇಳಿದುದು

ದುರ್ಯೋಧನನು ಕಥೆಯನ್ನು ಮುಂದುವರಿಸಿ ಹೇಳುತ್ತಾನೆ:

"ಶಲ್ಯರಾಜ! ಮಹಾತ್ಮನಾದ ತ್ರ್ಯಂಬಕನು ತನ್ನನ್ನು ಸಂದರ್ಶಿಸಲು ಬಂದ ಪಿತೃ-ದೇವರ್ಷಿಸಮೂಹಕ್ಕೆ ಅಭಯಪ್ರದಾನಮಾಡಲಾಗಿ ಲೋಕಪಿತಾಮಹನಾದ ಬ್ರಹ್ಮನು ಶಂಕರನನ್ನು ಯಥಾಯೋಗ್ಯವಾಗಿ ಸತ್ಕರಿಸಿ ಲೋಕಕ್ಕೆ ಹಿತಕರವಾದ ಈ ಮಾತುಗಳನ್ನು ಹೇಳಿದನು:

"ದೇವೇಶ! ನಿನ್ನ ಆದೇಶಾನುಸಾರವಾಗಿ ಪ್ರಜಾಪತಿಯ ಸ್ಥಾನವನ್ನು ವಹಿಸಿಕೊಂಡಿರುವ ನಾನು ದಾನವರಿಗೆ ಮಹತ್ತರವಾದ ವರವೊಂದನ್ನು ದಯಪಾಲಿಸಿರುವೆನು. ಭೂತಭವ್ಯೇಶನೇ! ಆ ವರದಿಂದ ದೃಪ್ತರಾಗಿ ಲೋಕಮರ್ಯಾದೆಯನ್ನೇ ಮೀರಿ ವರ್ತಿಸುತ್ತಿರುವ ದೈತ್ಯರನ್ನು ನಿನ್ನೊಬ್ಬನ ಹೊರತಾಗಿ ಬೇರೆ ಯಾರೂ ಸಂಹರಿಸಲಾರರು. ಆ ದೈತ್ಯರ ವಧೆಯ ಸಲುವಾಗಿ ನೀನು ಪ್ರತಿಪಕ್ಷದ ವೈರಿಯಾಗು. (ನಮ್ಮ ಪಕ್ಷವನ್ನು ಪ್ರತಿನಿಧಿಸಿ ಅವರನ್ನು ಸಂಹರಿಸು.) ದೇವೇಶ! ಮಹಾದೇವ! ತಲೆಬಾಗಿ ಯಾಚನೆಮಾಡುತ್ತಿರುವ ದೇವತೆಗಳ ವಿಷಯದಲ್ಲಿ ನೀನು ಪ್ರಸನ್ನನಾಗು. ಶಂಕರನೇ! ದಾನವರನ್ನು ಸಂಹರಿಸು. ಮಾನದನೇ! ನಿನ್ನ ಪ್ರಸಾದದಿಂದಲೇ ಎಲ್ಲ ಜಗತ್ತುಗಳೂ ಸುಖವನ್ನೂ ವೃದ್ಧಿಯನ್ನೂ ಹೊಂದುತ್ತವೆ.

ಲೋಕೇಶ! ನೀನೇ ಶರಣ್ಯನು. (ಶರಣಾಗತರಕ್ಷಕನು.) ಈ ಕಾರಣದಿಂದಲೇ ನಾವೆಲ್ಲರೂ ನಿನಗೆ ಶರಣಾಗತರಾಗಿದ್ದೇವೆ."

"ಬ್ರಹ್ಮಪುರಃಸರರಾದ ದೇವತೆಗಳೇ! ನಿಮ್ಮ ಶತ್ರುಗಳೆಲ್ಲರನ್ನೂ ಸಂಹರಿಸಬೇಕೆಂಬುದೇ ನನ್ನ ಅಭಿಮತವೂ ಅಗಿದೆ. ಆದರೆ ನಾನೊಬ್ಬನೇ ಅವರೆಲ್ಲರನ್ನೂ ಸಂಹರಿಸಲು ಸಾಧ್ಯವಿಲ್ಲ. ಏಕೆಂದರೆ: **ಬಲಸ್ಥಾಹಿ ಸುರದ್ವಿಷಃ**–ದೇವತೆಗಳ ಶತ್ರುಗಳಾದ ದೈತ್ಯರು ಮಹಾಬಲಿಷ್ಠರು. ಆದುದರಿಂದ:

**ತೇ ಯೂಯಂ ಸಂಹತಾಃ ಸರ್ವೇ ಮದೀಯೇನಾರ್ಧತೇಜಸಾ।**
**ಜಯಧ್ವಂ ಯುಧಿ ತಾಞ್ಶತ್ರೂನ್ಸಂಹತಾ ಹಿ ಮಹಾಬಲಾಃ ॥೭॥**

ನೀವೆಲ್ಲರೂ ಒಟ್ಟಾಗಿ ಸೇರಿ ನನ್ನ ಅರ್ಧತೇಜಸ್ಸನ್ನು ಪಡೆದುಕೊಂಡು ಸುಪುಷ್ಟರಾಗಿ ಯುದ್ಧದಲ್ಲಿ ಆ ನಿಮ್ಮ ಶತ್ರುಗಳನ್ನು ಜಯಿಸಿರಿ. ಸಂಘಟಿತರಾಗಿದ್ದವರು ಮಹಾಬಲಿಷ್ಠರಾಗಿರುತ್ತಾರಲ್ಲವೇ!"

**ಅಸ್ಮತ್ತೇಜೋಬಲಂ ಯಾವತ್ತಾವದ್ದ್ವಿಗುಣಮಾಹವೇ।**
**ತೇಷಾಮಿತಿ ಹಿ ಮನ್ಯಾಮೋ ದೃಷ್ಟತೇಜೋಬಲಾ ಹಿ ತೇ ॥೮॥**

"ಶಂಕರ! ನೀನು ಹೇಳಿದುದು ನಿಜ. ಯುದ್ಧಸಮಯದಲ್ಲಿ ನಮಗೆ ಎಷ್ಟು ತೇಜಸ್ಸು ಮತ್ತು ಬಲಗಳಿರುತ್ತವೆಯೋ ಅದಕ್ಕೆ ಎರಡು ಪಟ್ಟು ಹೆಚ್ಚಾಗಿ ದೈತ್ಯರಲ್ಲಿ ತೇಜೋಬಲಗಳಿರುತ್ತವೆಯೆಂದು ನಾವು ಭಾವಿಸಿದ್ದೇವೆ. ಅವರಲ್ಲಿರುವ ತೇಜೋಬಲಗಳನ್ನು ನಾವು ಪ್ರತ್ಯಕ್ಷವಾಗಿ ಕಂಡಿದ್ದೇವೆ."

ದೇವತೆಗಳ ಮಾತನ್ನು ಕೇಳಿ ಶಂಕರನು ತನ್ನ ಅಭಿಪ್ರಾಯವನ್ನು ಪುನರುಚ್ಚರಿಸಿದನು:

**ವಧ್ಯಾಸ್ತೇ ಸರ್ವತಃ ಪಾಪಾ ಯೇ ಯುಷ್ಮಾಸ್ವಪರಾಧಿನಃ।**
**ಮಮ ತೇಜೋಬಲಾರ್ಧೇನ ಸರ್ವಾನ್ನಿಘ್ನತ ಶಾತ್ರವಾನ್ ॥೯॥**

"ನಿಮ್ಮಗಳ ವಿಷಯದಲ್ಲಿ ಅಪರಾಧವನ್ನೆಸಗಿರುವ ಆ ಪಾಪಾತ್ಮರು ಸರ್ವಪ್ರಕಾರದಿಂದಲೂ ವಧ್ಯರೇ ಸರಿ. ನನ್ನ ತೇಜೋಬಲಗಳಲ್ಲಿ ಅರ್ಧ ಭಾಗವನ್ನು ಪಡೆದುಕೊಂಡು ಆ ನಿಮ್ಮ ಶತ್ರುಗಳೆಲ್ಲರನ್ನೂ ಸಂಹರಿಸಿರಿ."

**ಬಿಭರ್ತುಂ ಭವತೋಽರ್ಧಂ ತು ನ ಶಕ್ಷ್ಯಾಮೋ ಮಹೇಶ್ವರ।**
**ಸರ್ವೇಷಾಂ ನೋ ಬಲಾರ್ಧೇನ ತ್ವಮೇವ ಜಹಿ ಶಾತ್ರವಾನ್॥೧೦॥**

"ಪರಮೇಶ್ವರ! ನಿನ್ನ ತೇಜೋಬಲಗಳ ಅರ್ಧಭಾಗವನ್ನು ಧರಿಸಿ ಕೊಳ್ಳಲು ನಮಗೆ ಸಾಮರ್ಥ್ಯವಿಲ್ಲ. ಆದುದರಿಂದ ನೀನೇ ನಮ್ಮೆಲ್ಲರ ತೇಜೋಬಲಗಳ ಅರ್ಧಭಾಗವನ್ನು ಪಡೆದುಕೊಂಡು ಶತ್ರುಗಳನ್ನು ಸಂಹರಿಸು."

**ಯದಿ ಶಕ್ತಿರ್ನ ವಃ ಕಾಚಿದ್ಬಿಭರ್ತುಂ ಮಾಮಕಂ ಬಲಮ್।**
**ಅಹಮೇತಾನ್ಹನಿಷ್ಯಾಮಿ ಯುಷ್ಮತ್ತೇಜೋಽರ್ಧಬೃಂಹಿತಃ ॥೧೧॥**

"ದೇವತೆಗಳೇ! ನಿಮಗೆ ನನ್ನ ಬಲಾರ್ಧವನ್ನು ಭರಿಸಲು ಶಕ್ತಿಯಿಲ್ಲವಾದರೆ ನಿಮ್ಮೆಲ್ಲರ ಅರ್ಧಭಾಗ ತೇಜಸ್ಸಿನಿಂದ ಪರಿಪುಷ್ಟನಾಗಿ ನಾನೇ ಆ ದೈತ್ಯರನ್ನು ಸಂಹರಿಸುತ್ತೇನೆ."

ಶಲ್ಯರಾಜ! ಈಶ್ವರನ ಮಾತನ್ನು ಕೇಳಿದ ದೇವತೆಗಳು ಹಾಗೆಯೇ ಆಗಲೆಂದರು. ಅಂತೆಯೇ ಈಶ್ವರನು ದೇವತೆಗಳೆಲ್ಲರ ಅರ್ಧಭಾಗ ಬಲವನ್ನು ಪಡೆದುಕೊಂಡು ಅತ್ಯಧಿಕತೇಜಸ್ವಿಯಾದನು.

**ಸ ತು ದೇವೋ ಬಲೇನಾಸೀತ್ಸರ್ವೇಭ್ಯೋ ಬಲವತ್ತರಃ।**
**ಮಹಾದೇವ ಇತಿ ಖ್ಯಾತಸ್ತತಃ ಪ್ರಭೃತಿ ಶಙ್ಕರಃ ॥೧೩॥**

ಈ ಕಾರಣದಿಂದ ರುದ್ರದೇವನು ಎಲ್ಲರಿಗಿಂತಲೂ ಅತ್ಯಧಿಕವಾದ ಬಲವುಳ್ಳವನಾದನು. ಅಂದು ಮೊದಲುಗೊಂಡು ಶಂಕರನು 'ಮಹಾದೇವ' ಎಂದೂ ಖ್ಯಾತನಾದನು.

ಅನಂತರ ಮಹಾದೇವನು ದೇವತೆಗಳೊಡನೆ ಹೇಳಿದನು:

"ದಿವೌಕಸರೇ! ನಾನು ಧನುರ್ಬಾಣಗಳನ್ನು ಹಿಡಿದು ರಥದಲ್ಲಿ ಕುಳಿತು ನಿಮ್ಮ ಆ ಶತ್ರುಗಳನ್ನು ಸಂಹರಿಸುತ್ತೇನೆ. ನೀವೆಲ್ಲರೂ ಸೇರಿ ನನಗಾಗಿ ಒಂದು ದಿವ್ಯರಥವನ್ನೂ ಧನುರ್ಬಾಣಗಳನ್ನೂ ಹುಡುಕಿರಿ.

ಅವುಗಳ ಮೂಲಕವಾಗಿ ನಾನು ಈಗಲೇ ಆ ದೈತ್ಯರನ್ನು ಸಂಹರಿಸಿ ಭೂಮಿಯ ಮೇಲೆ ಕೆಡುಹುತ್ತೇನೆ.”

“ದೇವೇಶ್ವರ! ನಾವು ಮೂರು ಲೋಕಗಳಲ್ಲಿಯೂ ಅಲ್ಲಲ್ಲಿರುವ ತೇಜೋಮಾತ್ರೆಗಳನ್ನು (ತೇಜಸ್ಸಿನ ಅಂಶಗಳನ್ನು) ಒಂದೆಡೆಯಲ್ಲಿ ಸೇರಿಸಿ ಮಹಾತೇಜಸ್ಸಿನಿಂದ ಕೂಡಿದ ಒಂದು ರಥವನ್ನು ನಿನ್ನ ಸಲುವಾಗಿ ಕಲ್ಪಿಸುತ್ತೇವೆ. ಶುಭಪ್ರದವಾದ ಆ ಮಹಾರಥವು ವಿಶ್ವಕರ್ಮನ ಬುದ್ಧಿಯಲ್ಲಿ ಮೊದಲು ರೂಪಗೊಂಡು ಅನಂತರ ಅವನಿಂದಲೇ ಸಿದ್ಧಗೊಳಿಸಲ್ಪಡುತ್ತದೆ. (ವಿಶ್ವಕರ್ಮನು ತ್ರೈಲೋಕ್ಯದಲ್ಲಿರುವ ಶಕ್ತಿಯುತವಾದ ಪದಾರ್ಥಗಳನ್ನು ಜೋಡಿಸಿ ಎಲ್ಲಕ್ಕಿಂತಲೂ ಶ್ರೇಷ್ಠವಾದ ರಥದ ರೂಪ-ರೇಖೆಗಳನ್ನು ಮೊದಲು ತನ್ನ ಬುದ್ಧಿಯಲ್ಲಿ ರೂಪುಗೊಳಿಸಿಕೊಂಡು ಅನಂತರ ಒಂದು ಮಹಾರಥವನ್ನು ಸಜ್ಜುಗೊಳಿಸುತ್ತಾನೆ.)”

ಮದ್ರೇಶ್ವರ! ಹೀಗೆ ಹೇಳಿದ ವಿಬುಧರು ಅತ್ಯುತ್ತಮವಾದ ರಥ ವೊಂದನ್ನು ಪರಶಿವನಿಗಾಗಿ ಸಿದ್ಧಗೊಳಿಸಿದರು. ವಿಷ್ಣು, ಸೋಮ ಮತ್ತು ಅಗ್ನಿ– ಈ ಮೂವರ ತೇಜಸ್ಸುಗಳಿಂದ ಒಂದು ಬಾಣವನ್ನು ಪರಮೇಶ್ವರನಿಗೆ ಕಲ್ಪಿಸಿಕೊಟ್ಟರು. ಅಗ್ನಿಯು ಆ ಬಾಣದ ಗಿಣ್ಣಿನ ರೂಪದಲ್ಲಿದ್ದನು. ಸೋಮನು ಅಲುಗಿನ ರೂಪವಾಗಿದ್ದನು. ಮಹಾವಿಷ್ಣುವು ಮೊಗ್ಗಿನಂತಿ ರುವ ಬಾಣದ ತುದಿಯಲ್ಲಿ ಉಪಸ್ಥಿತನಾಗಿದ್ದನು. ವಿಶಾಲವಾದ ಪಟ್ಟಣ ಗಳ ಸಾಲುಗಳಿಂದ ಸಮಲಂಕೃತಳಾಗಿದ್ದ, ಪರ್ವತ-ವನ-ದ್ವೀಪಗಳಿಂದ ಸಂಪನ್ನಳಾಗಿದ್ದ, ಸರ್ವಪ್ರಾಣಿಗಳನ್ನೂ ಧರಿಸಿರುವ ಭೂದೇವಿಯನ್ನೇ ದೇವತೆಗಳು ಪರಶಿವನಿಗೆ ರಥವನ್ನಾಗಿ ಕಲ್ಪಿಸಿಕೊಟ್ಟರು. ಮಂದರ ಪರ್ವತವೇ ಆ ಮಹಾರಥದ ಅಚ್ಚುಮರವಾಗಿದ್ದಿತು. ಮಹಾನದಿಯಾದ ಗಂಗೆಯೇ ಮಹಾರಥದ ತಳಭಾಗವಾಗಿದ್ದಿತು. ದಿಕ್ಕುಗಳು ಮತ್ತು ಉಪ ದಿಕ್ಕುಗಳೇ ಆ ಮಹಾರಥಕ್ಕೆ ಆವರಣಗಳಾಗಿದ್ದುವು. ನಕ್ಷತ್ರಗಳ ಸಾಲುಗಳೇ ಮಹಾರಥದ ಈಷಾದಂಡವಾಗಿದ್ದಿತು. ಕೃತಯುಗವು ನೊಗವಾಗಿದ್ದಿತು. ಸರ್ಪಶ್ರೇಷ್ಠನಾದ ವಾಸುಕಿಯು ಆ ಮಹಾ ರಥದ ನೊಗವನ್ನಿಡುವ ಮೂಕೀಮರವಾಗಿದ್ದನು. ಹಿಮವತ್ಪರ್ವತವು ರಥದ ಅವಯವವಾಗಿದ್ದಿತು.

ವಿಂಧ್ಯಪರ್ವತವು ರಥಕ್ಕೆ ಆಧಾರಭೂತವಾದ ಮರವಾಗಿದ್ದಿತು. ಉದಯಾಚಲ-ಅಸ್ತಾಚಲಗಳೇ ಅಧಿಷ್ಠಾನಭೂತವಾದುವು.

ದಾನವರಿಗೆ ಉತ್ತಮನಿವಾಸಸ್ಥಾನವಾದ ಸಮುದ್ರವನ್ನು ಮಹಾ ದೇವನ ರಥಕ್ಕೆ ಕಟ್ಟುವ ಹಗ್ಗವನ್ನಾಗಿ ಮಾಡಿಕೊಂಡರು. ಸಪ್ತರ್ಷಿಮಂಡಲವು ಆ ದಿವ್ಯರಥದ ಅಲಂಕಾರವಸ್ತುವಾಗಿದ್ದಿತು. ಗಂಗಾ, ಸರಸ್ವತೀ ಮತ್ತು ಸಿಂಧೂ ನದಿಗಳು ಆ ಮಹಾರಥದ ತ್ರಿವೇಣುಗಳಾದುವು. ಆಕಾಶವು ತ್ರಿವೇಣು ಯುಕ್ತವಾದ ನೊಗವಾಯಿತು. ಎಲ್ಲ ನದಿಗಳೂ ಮತ್ತು ತಟಾಕ-ಸಮುದ್ರ ಗಳೂ ಆ ರಥದ ಸಾಮಗ್ರಿಗಳಾದುವು. ಹಗಲು-ರಾತ್ರಿಗಳು, ಕಲಾ, ಕಾಷ್ಠಾ ಮತ್ತು ಆರು ಋತುಗಳು ಆ ಮಹಾರಥದ ತೋಳುಮರಗಳಾದುವು. ಮಿನುಗುವ ತಾರೆಗಳೂ ಮತ್ತು ಪ್ರಜ್ವಲಿಸುವ ಗ್ರಹಗಳು ರಥದ ಆವರಣ ಗಳಾದುವು. ಒಟ್ಟಾಗಿ ಸೇರಿದ ಧರ್ಮಾರ್ಥ-ಕಾಮಗಳು ಸುಂದರವಾದ ತ್ರಿವೇಣುದಂಡಗಳಾದುವು. ಫಲ-ಪುಷ್ಪಭರಿತವಾದ ಓಷಧಿಗಳೂ ಮತ್ತು ಬಳ್ಳಿಗಳೂ ರಥದ ಘಂಟೆಗಳಾದುವು. ಆ ಶ್ರೇಷ್ಠವಾದ ರಥಕ್ಕೆ ಸೂರ್ಯ-ಚಂದ್ರರನ್ನೇ ಗಾಲಿಗಳನ್ನಾಗಿ ಕಲ್ಪಿಸಿದರು. ರಾತ್ರಿ ಮತ್ತು ಹಗಲುಗಳು ಪೂರ್ವಪಕ್ಷ ಮತ್ತು ಅಪರಪಕ್ಷಗಳ ರೂಪದಲ್ಲಿ ಆ ರಥದಲ್ಲಿ ಪ್ರತಿಷ್ಠಿತ ವಾಗಿದ್ದುವು. ಧೃತರಾಷ್ಟ್ರನೇ ಮೊದಲಾದ ಹತ್ತು ಮಂದಿ ನಾಗಪ್ರಮುಖರು ಈಷಾದಂಡದಲ್ಲಿ ಸ್ಥಾನವನ್ನು ಪಡೆದರು. ಬುಸುಗುಟ್ಟುತ್ತಿದ್ದ ಮಹಾಸರ್ಪಗಳೇ ಕಡಿವಾಣಗಳಾದುವು. ಸ್ವರ್ಗಲೋಕವೇ ಆ ರಥಕ್ಕೆ ನೊಗವಾಗಿ ಪರಿಣಮಿ ಸಿತು. ಪ್ರಳಯಕಾಲದ ಮೇಘಗಳನ್ನೇ ನೊಗದ ಚರ್ಮವನ್ನಾಗಿ ಮಾಡಿದರು. ಕಾಲಪೃಷ್ಠ, ನಹುಷ, ಕರ್ಕೋಟಕ, ಧನಂಜಯ ಮತ್ತು ಇತರ ಸರ್ಪಗಳು ಕುದುರೆಗಳ ಬಾಲಕ್ಕೆ ಬಿಗಿಯುವ ಹಗ್ಗಗಳಾಗಿ ಪರಿಣಮಿಸಿದುವು. ದಿಕ್ಕುಗಳು ಮತ್ತು ಉಪದಿಕ್ಕುಗಳು ರಥದ ಕುದುರೆಗಳ ಕಡಿವಾಣಗಳಾಗಿ ಪರಿಣಮಿಸಿದುವು. ಸಂಧ್ಯಾ, ಧೃತಿ, ಮೇಧಾ, ಸ್ಥಿತಿ, ಸನ್ನತಿ, ಗ್ರಹ-ನಕ್ಷತ್ರ-ತಾರೆಗಳಿಂದ ಚಿತ್ರಿತವಾದ ಆಕಾಶವನ್ನೇ ಆ ರಥಕ್ಕೆ ಚರ್ಮದ ಹೊದ್ದಿಕೆಯನ್ನಾಗಿ ಕಲ್ಪಿಸಿದರು. ಇಂದ್ರ, ವರುಣ, ಯಮ,

ಕುಬೇರರನ್ನೇ ಕುದುರೆಗಳನ್ನಾಗಿ ಕಲ್ಪಿಸಿದರು. ಸಿನೀವಾಲೀ, ಅನುಮತಿ, ಕುಹೂ, ಒಳ್ಳೆಯ ವ್ರತಗಳನ್ನು ಪಾಲನೆಮಾಡುವ ರಾಕಾ-ಇವರನ್ನು ಕುದುರೆಗಳ ಕಡಿವಾಣಗಳನ್ನಾಗಿ ಮಾಡಿದರು. ರೋಹಕರನ್ನು (ದೊಡ್ಡ ದೇವತೆಗಳನ್ನು) ಕಡಿವಾಣಗಳಲ್ಲಿರುವ ಮುಳ್ಳುಗಳನ್ನಾಗಿ ಮಾಡಿದರು.

ಧರ್ಮ, ಸತ್ಯ, ತಪಸ್ಸು ಮತ್ತು ಅರ್ಥಗಳು ಕುದುರೆಗಳ ಕಡಿವಾಣ ಗಳಾದುವು. ಮನಸ್ಸೇ ರಥಕ್ಕೆ ಆಧಾರಭೂತವಾದ ಭೂಮಿಯಾಯಿತು. ಸರಸ್ವತಿಯು ರಥವು ಮುಂದೆ ಸರಿಯುವ ಮಾರ್ಗವಾಗಿ ಪರಿಣಮಿಸಿದಳು. ನಾನಾವರ್ಣಗಳ ಚಿತ್ರ-ವಿಚಿತ್ರವಾದ ಪತಾಕೆಗಳು ಗಾಳಿಯ ಬಡಿತದಿಂದ ಫರ-ಫರನೆ ಹಾರಾಡುತ್ತಿದ್ದುವು. ವಿದ್ಯುತ್ತಿನಿಂದಲೂ ಮತ್ತು ಕಾಮನಬಿಲ್ಲಿ ನಿಂದಲೂ ನಿಬದ್ಧವಾಗಿದ್ದ ಪ್ರದೀಪ್ತವಾಗಿದ್ದ ಆ ರಥವನ್ನು ದೇವತೆಗಳು ಈ ರೀತಿಯಲ್ಲಿ ಪ್ರಕಾಶಗೊಳಿಸಿದರು. ವಷಟ್ಕಾರವು ಕುದುರೆಗಳನ್ನು ಪ್ರಚೋದಿಸುವ ಚಾವಟಿಯಾಗಿ ಪರಿಣಮಿಸಿತು. ಗಾಯತ್ರಿಯು ರಥದ ಮೇಲ್ಭಾಗದಲ್ಲಿ ಕಟ್ಟುವ ಹಗ್ಗವಾಗಿ ಪರಿಣಮಿಸಿತು. ಹಿಂದೆ ಮಹಾತ್ಮನಾದ ಮಹಾದೇವನ ಯಜ್ಞದಲ್ಲಿ ನಿರ್ಮಿತವಾದ ಸಂವತ್ಸರವೇ ಮಹಾದೇವನ ಧನುಸ್ಸಾಗಿ ಪರಿಣಮಿಸಿತು. ಸಾವಿತ್ರೀದೇವಿಯೇ ಆ ಧನುಸ್ಸಿನಲ್ಲಿ ಟೇಂಕರಿ ಸುವ ಮೌರ್ವಿಯಾದಳು. ಮಹಾದೇವನಿಗಾಗಿ ಬಹುಮೂಲ್ಯವಾದ, ರತ್ನಭೂಷಿತವಾದ, ಅಭೇದ್ಯವಾದ, ಧೂಳಿನಿಂದ ರಹಿತವಾದ, ಕಾಲಚಕ್ರವನ್ನು ಹೊರಭಾಗದಲ್ಲಿ ಹೊಂದಿರುವ ದಿವ್ಯವಾದ ಕವಚವು ಸಿದ್ಧವಾಯಿತು. ಸುವರ್ಣಮಯವಾದ, ಕಾಂತಿಯುಕ್ತವಾದ ಮೇರು ಪರ್ವತವು ಧ್ವಜದ ದಂಡವಾಯಿತು. ಮಿಂಚುಗಳಿಂದ ಸಮಲಂಕೃತವಾದ ಮೇಘಗಳು ಶಿವನ ರಥದ ಪತಾಕೆಗಳಾದುವು. ಆ ಪತಾಕೆಗಳು ಯಜ್ಞಗಳಲ್ಲಿ ಅಧ್ವರ್ಯುಗಳ ಮಧ್ಯಭಾಗದಲ್ಲಿರುವ ಪ್ರಜ್ವಲಿಸುತ್ತಿರುವ ಅಗ್ನಿಗಳಂತೆಯೇ ಪ್ರಕಾಶಿಸುತ್ತಿದ್ದುವು. ಎಲ್ಲ ಲೋಕಗಳ ತೇಜಸ್ಸುಗಳೂ ಒಂದೇ ಕಡೆಯಲ್ಲಿ ಬಂದು ಸೇರಿದಂತೆ ಕಾಣುತ್ತಿದ್ದ ಆ ದಿವ್ಯರಥವನ್ನು ನೋಡಿ ದೇವತೆಗಳೇ ವಿಸ್ಮಿತರಾದರು. ಅನಂತರ ದೇವತೆಗಳು ಮಹಾತ್ಮನಾದ ಮಹಾದೇವನಿಗೆ ರಥವು ಸಿದ್ಧವಾಗಿರುವುದೆಂಬ ವಾರ್ತೆಯನ್ನು ನಿವೇದಿಸಿದರು.

ಪುರುಷಸಿಂಹನೇ! ಶಲ್ಯಮಹಾರಾಜ! ಈ ರೀತಿಯಲ್ಲಿ ಶತ್ರುಗಳ ವಿನಾಶಾರ್ಥವಾಗಿ ದೇವತೆಗಳು ಶ್ರೇಷ್ಠವಾದ ರಥವೊಂದನ್ನು ಸಿದ್ಧಗೊಳಿಸ ಲಾಗಿ, ಶಂಕರನು ತನ್ನ ಮುಖ್ಯ-ಮುಖ್ಯವಾದ ಆಯುಧಗಳನ್ನು ಆ ಮಹಾರಥದಲ್ಲಿರಿಸಿದನು. ಆಕಾಶವನ್ನೇ ಧ್ವಜಯಷ್ಟಿಯನ್ನಾಗಿ ಮಾಡಿ ಅದರ ಮೇಲುಭಾಗದಲ್ಲಿದ್ದ ಧ್ವಜಪಟದಲ್ಲಿ ನಂದಿಕೇಶ್ವರನನ್ನು ಸ್ಥಾಪಿಸಿದನು. ಬ್ರಹ್ಮದಂಡ, ಕಾಲದಂಡ, ರುದ್ರದಂಡ ಮತ್ತು ಜ್ವರಗಳು ಆ ಮಹಾರಥಕ್ಕೆ ಪಾರ್ಶ್ವರಕ್ಷಕರಾಗಿ ರಥದ ಸುತ್ತಲೂ ಆಯುಧಗಳನ್ನು ಮೇಲೆತ್ತಿನಿಂತಿದ್ದುವು. ಮಹಾತ್ಮನಾದ ಶಿವನ ರಥಕ್ಕೆ ಅಥರ್ವಾಂಗಿರಸರೇ ಚಕ್ರರಕ್ಷಕರಾಗಿದ್ದರು. ಋಗ್ವೇದ-ಸಾಮವೇದ-ಪುರಾಣಗಳು ಆ ರಥದಲ್ಲಿ ಮುಂದೆಹೋಗುವ ಯೋಧರಾಗಿದ್ದರು. ಇತಿಹಾಸ-ಯಜುರ್ವೇದಗಳು ಪೃಷ್ಠರಕ್ಷಕರಾಗಿದ್ದರು. ದಿವ್ಯವಾಣಿ ಮತ್ತು ದಿವ್ಯವಿದ್ಯೆಗಳು ರಥದ ಪಾರ್ಶ್ವವರ್ತಿಗಳಾಗಿದ್ದುವು. ಸ್ತೋತ್ರ-ಕವಚ-ವಷಟ್ಕಾರ-ಓಂಕಾರಗಳು ರಥದ ಮುಖಭಾಗದಲ್ಲಿದ್ದು ಅತ್ಯಂತ ಶೋಭಾಯಮಾನವಾಗಿ ಕಾಣುತ್ತಿದ್ದುವು. ಆರು ಋತುಗಳಿಂದ ಯುಕ್ತವಾದ ಸಂವತ್ಸರವನ್ನೇ ಧನುಸ್ಸನ್ನಾಗಿ ಮಾಡಿಕೊಂಡು ತನ್ನ ಛಾಯೆಯನ್ನೇ ಮಹಾದೇವನು ಆ ಮಹಾಧನುಸ್ಸಿಗೆ ನಾಶರಹಿತವಾದ ಮೌರ್ವಿಯನ್ನಾಗಿ ಮಾಡಿಕೊಂಡನು.

**ಕಾಲೋ ಹಿ ಭಗವಾನ್ರುದ್ರಸ್ತಸ್ಯ ಸಂವತ್ಸರೋ ಧನುಃ।**
**ತಸ್ಮಾದ್ರೌದ್ರೀ ಕಾಲರಾತ್ರಿರ್ಜ್ಯಾ ಕೃತಾ ಧನುಷೋಽಜರಾ ॥೪೮॥**

ಭಗವಂತನಾದ ರುದ್ರನು ಕಾಲಸ್ವರೂಪನು. ಆದುದರಿಂದಲೇ ಕಾಲದ ಅವಯವಭೂತವಾದ ಸಂವತ್ಸರವು ಅವನ ಧನುಸ್ಸಾಯಿತು. ಕಾಲ ರಾತ್ರಿಯೂ ರುದ್ರನ ಅಂಶದಿಂದಲೇ ಹುಟ್ಟಿದುದು. (ಛಾಯಾರೂಪವಾದ ರಾತ್ರಿಯೂ ಕಾಲನದೇ.) ಈ ಕಾರಣದಿಂದಲೇ ಕಾಲರಾತ್ರಿಯು ಅಥವಾ ರುದ್ರನ ಛಾಯೆಯು ಸಂವತ್ಸರವೆಂಬ ಮಹಾಧನುಸ್ಸಿನ ಅವಿನಾಶಿಯಾದ ಮೌರ್ವಿಯಾಗಿ ಮಾಡಲ್ಪಟ್ಟಿತು.

**ಇಷುಶ್ಚಾಪ್ಯಭವದ್ವಿಷ್ಣುರ್ಜ್ವಲನಃ ಸೋಮ ಏವ ಚ।**
**ಅಗ್ನೀಷೋಮೌ ಜಗತ್ಕೃತ್ಸ್ನಂ ವೈಷ್ಣವಂ ಚೋಚ್ಯತೇ ಜಗತ್ ॥೪೯॥**

ವಿಷ್ಣು, ಅಗ್ನಿ ಮತ್ತು ಚಂದ್ರಮಸರು ಬಾಣವಾದರು. ಈ ಸಂಪೂರ್ಣ

ವಾದ ಜಗತ್ತು ಅಗ್ನಿ ಮತ್ತು ಸೋಮರ ಸ್ವರೂಪಗಳೇ ಆಗಿದೆ. ಮೇಲಾಗಿ ಈ ಜಗತ್ತನ್ನು ವಿಷ್ಣುಮಯವೆಂದೂ ಹೇಳುತ್ತಾರೆ.

**ವಿಷ್ಣುಶ್ಚಾತ್ಮಾ ಭಗವತೋ ಭವಸ್ಯಾಮಿತತೇಜಸಃ।**
**ತಸ್ಮಾದ್ಧನುರ್ಜ್ಯಾಸಂಸ್ಪರ್ಶಂ ನ ವಿಷೇಹುರ್ಹರಸ್ಯ ತೇ ॥೫೦॥**

ಮಹಾತೇಜಸ್ವಿಯಾದ ಭಗವಂತನಾದ ಹರನಿಗೆ ವಿಷ್ಣುವೇ ಆತ್ಮಸ್ವರೂಪನು. ಆದುದರಿಂದ ದೈತ್ಯರು ಶಿವನ ಧನುಸ್ಸು, ಮೌರ್ವೀ ಮತ್ತು ಬಾಣಗಳ ಸ್ಪರ್ಶವನ್ನೂ ಸಹಿಸಿಕೊಳ್ಳಲು ಅಸಮರ್ಥರಾಗಿದ್ದರು.

ಮಹೇಶ್ವರನು ಆ ಬಾಣದಲ್ಲಿ ತನ್ನ ಸುತೀಕ್ಷ್ಣವಾದ ಕೋಪವನ್ನೂ-ಭೃಗು ಮತ್ತು ಆಂಗಿರಸರ ಕೋಪದಿಂದ ಹುಟ್ಟಿದ, ಸಹಿಸಿಕೊಳ್ಳಲು ಅಸಾಧ್ಯವಾದ ಕ್ರೋಧಾಗ್ನಿಯನ್ನೂ ಸಂಸ್ಥಾಪಿಸಿದನು. ಅನಂತರ ಧೂಮ್ರವರ್ಣನಾದ, ವ್ಯಾಘ್ರಚರ್ಮಧರನಾದ, ದೇವತೆಗಳಿಗೆ ಅಭಯವನ್ನು ದಯಪಾಲಿಸುವ ಮತ್ತು ದೈತ್ಯರಿಗೆ ಭಯವನ್ನುಂಟುಮಾಡುವ, ಸಹಸ್ರಸೂರ್ಯಸದೃಶನಾದ, ನೀಲಲೋಹಿತನಾದ ಪರಶಿವನು ತೇಜೋಮಯವಾದ ಜ್ವಾಲೆಗಳಿಂದ ಆವೃತನಾಗಿ ಪ್ರಕಾಶಿಸಿದನು. ಅಳ್ಳಾಡಿಸುವುದಕ್ಕೆ ಆಗದೇ ಇರುವವರನ್ನೂ ಅಳ್ಳಾಡಿಸಿಬಿಡುವ, ವಿಜಯಶಾಲಿಯಾದ, ಬ್ರಹ್ಮದ್ವೇಷಿಗಳ ವಿನಾಶಕನಾದ ಹರನು ಧರ್ಮವನ್ನು ಆಶ್ರಯಿಸಿದವರನ್ನು ನಿತ್ಯವೂ ರಕ್ಷಿಸುತ್ತಾನೆ. ಅಧರ್ಮಿಗಳಾದವರನ್ನು ಸಂಹರಿಸುತ್ತಾನೆ. ಸ್ಥಾಣುವು ತನ್ನದೇ ಆದ ಗುಣಗಳನ್ನು ಹೊಂದಿದ್ದ ರಥಾಶ್ವಗಳಿಂದ ಕೂಡಿದ್ದನು. ಅವನ ಉಪಕರಣಗಳೂ ಸಹ (ರಥ-ಕುದುರೆ-ಆಯುಧ ಮೊದಲಾದುವುಗಳು) ಶತ್ರುಗಳನ್ನು ಮಥಿಸುವುಗಳಾಗಿಯೂ, ಭಯಂಕರವಾದ ಬಲವುಳ್ಳವುಗಳಾಗಿಯೂ, ಭಯಂಕರವಾದ ರೂಪವುಳ್ಳವುಗಳಾಗಿಯೂ, ಮನೋವೇಗವುಳ್ಳವುಗಳಾಗಿಯೂ ಇದ್ದುವು. ಇಂತಹ ಆತ್ಮಗುಣಗಳುಳ್ಳ ಉಪಕರಣಗಳಿಂದ ಕೂಡಿದ್ದ ಮಹಾದೇವನು ಬಹುವಾಗಿ ಪ್ರಕಾಶಿಸಿದನು.

ಮದ್ರೇಶ! ಅದ್ಭುತವಾಗಿ ಕಾಣುವ ಚರಾಚರಾತ್ಮಕವಾದ ಈ ಸಕಲ

ಜಗತ್ತೂ ಪರಶಿವನ ಪಂಚಭೂತಸ್ವರೂಪವಾದ ಅಂಗಗಳನ್ನು ಆಶ್ರಯಿಸಿ ಪ್ರಕಾಶಿಸಿತು. ಸಜ್ಜಾಗಿದ್ದ ಆ ರಥವನ್ನು ನೋಡಿ ಪರಮೇಶ್ವರನು ಕವಚವನ್ನು ತೊಟ್ಟು, ಧನುಷ್ಪಾಣಿಯಾಗಿ, ಸೋಮ-ವಿಷ್ಣು-ಅಗ್ನಿಗಳಿಂದ ಸಂಭೂತವಾದ ದಿವ್ಯವಾದ ಬಾಣವನ್ನು ಹಿಡಿದು ಯುದ್ಧಸನ್ನದ್ಧನಾಗಿ ನಿಂತನು. ಆ ಸಮಯದಲ್ಲಿ ದೇವತೆಗಳು ಪುಣ್ಯಸುಗಂಧವನ್ನು ಹೊತ್ತುತರುವ ದೇವಶ್ರೇಷ್ಠ ನಾದ ವಾಯುದೇವನನ್ನು ಶಿವನಿಗೆ ಗಾಳಿ ಬೀಸುವ ಕಾರ್ಯದಲ್ಲಿ ನಿಯೋಜಿಸಿದರು. ಆಗ ಮಹಾದೇವನು ದೈತ್ಯರ ವಧೆಗಾಗಿ ಪ್ರಯತ್ನಶೀಲ ನಾಗಿ ಭೂಮಿಯನ್ನೇ ನಡುಗಿಸುತ್ತಿರುವನೋ ಎಂಬಂತೆ ದೇವತೆಗಳನ್ನೂ ಭಯಗೊಳಿಸುತ್ತಾ ಆ ರಥವನ್ನು ಹತ್ತಿದನು. ದಿವ್ಯವಾದ ರಥವನ್ನು ಹತ್ತುತ್ತಿರುವ ಪರಮೇಶ್ವರನನ್ನು ಪರಮರ್ಷಿಗಳೂ, ಗಂಧರ್ವರೂ, ದೇವತೆ ಗಳೂ, ಅಪ್ಸರೆಯರೂ ಸ್ತೋತ್ರಮಾಡಿದರು. ಬ್ರಹ್ಮರ್ಷಿಗಳು ಸ್ತೋತ್ರಮಾಡು ತ್ತಿರಲಾಗಿ, ವಂದಿ-ಮಾಗಧರು ಹೊಗಳಿಕೆಯ ಗೀತೆಗಳನ್ನು ಹೇಳಿಕೊಂಡು ವಂದಿಸುತ್ತಿರಲಾಗಿ, ನೃತ್ಯಕೋವಿದೆಯರಾದ ಅಪ್ಸರೆಯರ ಸಮೂಹಗಳು ನೃತ್ಯಮಾಡುತ್ತಿರಲಾಗಿ, ಅತ್ಯಂತಶೋಭಾಯಮಾನನಾಗಿ ಕಾಣುತ್ತಿದ್ದ, ವರದನಾದ, ಖಡ್ಗವನ್ನೂ-ಧನುರ್ಬಾಣಗಳನ್ನೂ ಧರಿಸಿದ್ದ ಪರಮಶಿವನು ನಗುತ್ತಿರುವ ಮುಖಭಾವದಿಂದ 'ಸಾರಥಿಃ ಕೋ ಭವಿಷ್ಯತಿ?' 'ನನಗೆ ಯಾರು ಸಾರಥಿಯಾಗುತ್ತಾರೆ?'–ಎಂದು ಕೇಳಿದನು.

ಮಹಾದೇವನ ಮಾತನ್ನು ಕೇಳಿ ದೇವತೆಗಳು ಹೇಳಿದರು:

"ಮಹಾದೇವ! ನೀನು ಯಾವನನ್ನು ಸಾರಥಿಯ ಕೆಲಸಕ್ಕೆ ನಿಯೋಜಿಸು ವೆಯೋ ಅವನೇ ನಿನ್ನ ಸಾರಥಿಯಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ. (ನೀನು ಯಾರನ್ನಾದರೂ ಸಾರಥಿಯನ್ನಾಗಿ ಆರಿಸಿಕೊಳ್ಳಬಹುದು.)" ಹೀಗೆ ಉತ್ತರಿಸಿದ ದೇವತೆಗಳನ್ನು ಕುರಿತು ಪುನಃ ಈಶಾನನು ಹೇಳಿದನು: "**ಮತ್ತಃ ಶ್ರೇಷ್ಠತರೋ ಹಿ ಯಃ । ತಂ ಸಾರಥಿಂ ಕುರುಧ್ವಂ ಮೇ ಸ್ವಯಂ ಸಂಚಿನ್ತ್ಯ ಮಾಚಿರಮ್ ॥೬೩॥** ನೀವೇ ನಿಮ್ಮಲ್ಲಿ ಸಮಾಲೋಚಿಸಿ, ನನಗಿಂತಲೂ ಶ್ರೇಷ್ಠನಾದವನು ನಿಮ್ಮಲ್ಲಿ ಯಾರಿದ್ದಾರೆಯೋ ಅವನನ್ನೇ ನನ್ನ ಸಾರಥ್ಯಕ್ಕೆ ನಿಯೋಜಿಸಿರಿ. ತಡಮಾಡಬೇಡಿರಿ."

ಮದ್ರೇಶ್ವರ! ಮಹಾತ್ಮನಾದ ಪರಶಿವನು ಹೇಳಿದ ಈ ಮಾತನ್ನು ಕೇಳಿ ದೇವತೆಗಳು ಪಿತಾಮಹನ ಬಳಿಗೆ ಹೋಗಿ ಸ್ತೋತ್ರಾದಿಗಳಿಂದ ಅವನನ್ನು ಪ್ರಸನ್ನಗೊಳಿಸಿ ಈ ಮಾತನ್ನು ಹೇಳಿದರು:

"ಬ್ರಹ್ಮದೇವ! ದೇವತೆಗಳ ಶತ್ರುಗಳನ್ನು ವಿನಾಶಮಾಡುವ ಸಲುವಾಗಿ ನೀನು ಹೇಗೆ ಹೇಳಿದ್ದೆಯೋ ಹಾಗೆಯೇ ನಾವು ಮಾಡಿದೆವು. (ಪರಮೇಶ್ವರನನ್ನು ಕಂಡು ಪ್ರಾರ್ಥಿಸಿದೆವು.) ವೃಷಧ್ವಜನು ನಮ್ಮ ವಿಷಯದಲ್ಲಿ ಪ್ರಸನ್ನನಾಗಿದ್ದಾನೆ. ವಿಚಿತ್ರವಾದ ಆಯುಧಗಳಿಂದ ಸಂಪನ್ನವಾದ ರಥವನ್ನೂ ಸಜ್ಜುಗೊಳಿಸಿದೆವು. ಆದರೆ ಆ ಶ್ರೇಷ್ಠವಾದ ರಥವನ್ನು ನಿಯಂತ್ರಿಸುವ ಸಾರಥಿಯು ಯಾರೆಂಬುದನ್ನು ನಾವು ತಿಳಿದವರಾಗಿಲ್ಲ. ಆದುದರಿಂದ ದೇವಶ್ರೇಷ್ಠನೇ! ಯಾರಾದರೊಬ್ಬ ಸಾರಥಿಯನ್ನು ಸಿದ್ಧಗೊಳಿಸು. ನಮಗೆ ಕೊಟ್ಟ ಮಾತನ್ನು ಸಫಲಗೊಳಿಸಲು ನೀನು ಯೋಗ್ಯನಾಗಿರುವೆ. ಭಗವನ್! ನೀನು ಈ ಹಿಂದೆ ನಮ್ಮನ್ನು ಕುರಿತು '**ಹಿತಕರ್ತಾಸ್ಮಿ ಭವತಾಂ**'-'ನಾನು ನಿಮ್ಮ ಹಿತಕರನಾಗಿದ್ದೇನೆ.' ಎಂದು ಹೇಳಿದ್ದೆ. ಈಗ ನೀನು ನಮಗೆ ಹಿತವಾದ ಈ ಕಾರ್ಯವನ್ನೂ ಮಾಡಬೇಕಾಗಿದೆ.

ದೇವದೇವನೇ! ನಾವು ಶಿವನಿಗಾಗಿ ಸಿದ್ಧಪಡಿಸಿರುವ ಶ್ರೇಷ್ಠವಾದ ರಥವು ಶತ್ರುಗಳನ್ನು ಪಲಾಯನಪರಾಯಣರನ್ನಾಗಿ ಮಾಡಲು ಸಮರ್ಥವಾಗಿದೆ; ಎದುರಿಸಲು ಅಸಾಧ್ಯವಾಗಿದೆ. ಪಿನಾಕಪಾಣಿಯಾದ ಶಂಕರನು ಆ ಮಹಾರಥದಲ್ಲಿ ಕುಳಿತು ದಾನವರನ್ನು ಭಯಪಡಿಸುತ್ತಾ ಯುದ್ಧೋದ್ಯತನಾಗಿದ್ದಾನೆ. ಮಹಾತ್ಮನಾದ ರುದ್ರನಿಗೆ ಪರ್ವತಗಳಿಂದ ಯುಕ್ತವಾದ ಭೂಮಿಯೇ ರಥವಾಗಿದೆ. ನಾಲ್ಕು ವೇದಗಳೇ ಶ್ರೇಷ್ಠವಾದ ಕುದುರೆಗಳಾಗಿವೆ. ನಕ್ಷತ್ರಸಮುದಾಯರೂಪವಾದ ಧ್ವಜದಿಂದಲೂ ಮತ್ತು ಆವರಣದಿಂದಲೂ ಸುಶೋಭಿತನಾದ ಹರನು ಆ ಮಹಾರಥದಲ್ಲಿ ರಥಯೋಧನಾಗಿ ಕುಳಿತಿದ್ದಾನೆ. ಆದರೆ ಆ ಮಹಾರಥಕ್ಕೆ ಸಾರಥಿಯಾರೆಂಬುದನ್ನು ನಾವು ತಿಳಿಯದವರಾಗಿದ್ದೇವೆ. ಬ್ರಹ್ಮದೇವ! ಈ ರಥಾಶ್ವಯೋಧರಿಗಿಂತಲೂ ವಿಶಿಷ್ಟನಾದವನನ್ನು (ಶ್ರೇಷ್ಠನಾದವನನ್ನು) ರಥಕ್ಕೆ ಸಾರಥಿಯನ್ನಾಗಿ ನಿಯಮಿಸಬೇಕಾಗಿದೆ. ಏಕೆಂದರೆ ರಥಾಶ್ವ

ಯೋಧರು ಸಾರಥಿಯಲ್ಲಿಯೇ ಪ್ರತಿಷ್ಠಿತರಾಗಿರುತ್ತಾರೆ. ಅವನನ್ನೇ ಆಶ್ರಯಿಸಿರುತ್ತಾರೆ. ಕವಚಗಳು, ಶಸ್ತ್ರಗಳು, ಧನುಸ್ಸು–ಎಲ್ಲವೂ ಸಾರಥಿಯನ್ನೇ ಅವಲಂಬಿಸಿವೆ. (ಈ ವಸ್ತುಗಳಲ್ಲಿ ಯಾವುದು ಎಷ್ಟೇ ಶ್ರೇಷ್ಠ ವಾಗಿದ್ದರೂ ರಥವನ್ನು ಸಮೀಚೀನವಾಗಿ ನಿಯಂತ್ರಿಸುವ ಸಾರಥಿಯಿಲ್ಲದಿದ್ದರೆ ಅವು ಪ್ರಯೋಜನಕ್ಕೆ ಬಾರವು.) ನಿನ್ನೊಬ್ಬನ ಹೊರತಾಗಿ ಆ ರಥದ ಸಾರಥ್ಯಕ್ಕೆ ಬೇರೆ ಯಾರನ್ನೂ ನಾವು ಕಾಣೆವು. ನೀನು ಸರ್ವಗುಣಸಂಪನ್ನ ನಾಗಿರುವುದಲ್ಲದೇ ಎಲ್ಲ ದೇವತೆಗಳಿಗಿಂತಲೂ ಅಧಿಕನಾಗಿರುವೆ. ದೇವದ್ವೇಷಿ ಗಳ ವಧೆಗಾಗಿಯೂ ಮತ್ತು ದೇವತೆಗಳ ವಿಜಯಕ್ಕಾಗಿಯೂ ನೀನು ಈಗಲೇ ರಥಾರೋಹಣಮಾಡಿ ಶ್ರೇಷ್ಠವಾದ ಕುದುರೆಗಳನ್ನು ನಿಯಂತ್ರಿಸು."

ದೇವತೆಗಳು ಹೀಗೆ ಹೇಳಿ ತ್ರಿಲೋಕೇಶನಾದ ಪಿತಾಮಹನಿಗೆ ತಲೆಬಾಗಿ ನಮಸ್ಕರಿಸಿ ಸಾರಥಿಯಾಗಲು ಒಪ್ಪಿಸಿದರು. ಈ ವಿಷಯವನ್ನು ನಾನು ಮತ್ತು ನನ್ನ ತಂದೆಯೂ, ಮಾರ್ಕಂಡೇಯಮಹರ್ಷಿಗಳಿಂದ ಕೇಳಿ ತಿಳಿದುಕೊಂಡೆವು. ದೇವತೆಗಳ ಮಾತುಗಳನ್ನು ಕೇಳಿ ಪ್ರಸನ್ನನಾದ ಪಿತಾಮಹನು ಹೇಳಿದನು:

"ದೇವತೆಗಳೇ! ನೀವು ಹೇಳಿದ ಮಾತುಗಳಲ್ಲಿ ಯಾವುದೂ ಸುಳ್ಳಲ್ಲ. ಕಪರ್ದಿಯು ಯುದ್ಧಮಾಡುವಾಗ ನಾನು ಕುದುರೆಗಳನ್ನು ನಿಯಂತ್ರಿಸುತ್ತೇನೆ."

ಮದ್ರೇಶ್ವರ! ಮಹಾತ್ಮನಾದ ಈಶಾನನ ಸಾರಥ್ಯದಲ್ಲಿ ದೇವತೆ ಗಳಿಂದ ನಿಯೋಜಿತನಾದ, ಲೋಕದ ಹುಟ್ಟಿಗೆ ಕಾರಣನಾದ, ದೇವದೇವ ನಾದ, ಭಗವಂತನಾದ ಪಿತಾಮಹನು ಲೋಕಪೂಜಿತವಾದ ರಥದಲ್ಲಿ ಕುಳಿತುಕೊಳ್ಳಲಾಗಿ, ವಾಯುವೇಗದಿಂದ ಧಾವಿಸುವ ಕುದುರೆಗಳು ಭೂಮಿಯ ಮೇಲೆ ಮುಗ್ಗರಿಸಿ ಬಿದ್ದುವು. (ಭೂಮಿಗೆ ತಲೆಬಾಗಿಸಿ ನಿಂತುಬಿಟ್ಟುವು.) ತನ್ನ ತೇಜಸ್ಸಿನಿಂದ ದೇದೀಪ್ಯಮಾನನಾಗಿ ಕಾಣುತ್ತಿದ್ದ ಭಗವಾನ್ ಬ್ರಹ್ಮನು ರಥಾರೋಹಣಮಾಡಿ ಕುದುರೆಗಳ ಕಡಿವಾಣ ಗಳನ್ನೂ ಮತ್ತು ಚಾವಟಿಯನ್ನೂ ಕೈಗೆತ್ತಿಕೊಂಡನು. ಸುರಶ್ರೇಷ್ಠನಾದ ಪಿತಾ

ಮಹನು ವಾಯುವಿಗೆ ಸಮಾನವಾದ ವೇಗವುಳ್ಳ ಆ ಕುದುರೆಗಳನ್ನು ಮೇಲಕ್ಕೆಬ್ಬಿಸಿ ರಥಾರೋಹಣ ಮಾಡುವಂತೆ ಸ್ಥಾಣುವಿಗೆ ಹೇಳಿದನು. ಬ್ರಹ್ಮನ ಮಾತನ್ನು ಕೇಳಿ ರುದ್ರದೇವನು ವಿಷ್ಣು-ಸೋಮಾಗ್ನಿಗಳಿಂದ ಹುಟ್ಟಿದ ಬಾಣವನ್ನು ತೆಗೆದುಕೊಂಡು ಧನುಷ್ಟೇಂಕಾರದಿಂದ ಶತ್ರುಗಳನ್ನು ನಡುಗಿಸುತ್ತಾ ರಥಾರೋಹಣಮಾಡಿದನು. ರಥಾರೋಹಣಮಾಡಿದ ದೇವೇಶನಾದ ರುದ್ರನನ್ನು ಮಹರ್ಷಿಗಳೂ, ಗಂಧರ್ವರೂ, ದೇವತೆಗಳೂ ಮತ್ತು ಅಪ್ಸರೆಯರೂ ಸ್ತೋತ್ರಮಾಡಿದರು. ಖಡ್ಗ-ಧನುರ್ಬಾಣಗಳನ್ನು ಹಿಡಿದು ಶೋಭಾಯಮಾನವಾಗಿ ಕಾಣುತ್ತಿದ್ದ, ವರದನಾದ ಪರಶಿವನು ಆತ್ಮತೇಜಸ್ಸಿನಿಂದ ಮೂರು ಲೋಕಗಳನ್ನೂ ಬೆಳಗಿಸುತ್ತಾ ರಥದಲ್ಲಿ ಉಪವಿಷ್ಟನಾದನು. ದೇವದೇವನಾದ ಪಿನಾಕಿಯು ಪುನಃ ಇಂದ್ರಪುರಃಸರರಾದ ದೇವತೆಗಳನ್ನು ಕುರಿತು ಹೇಳಿದನು:

**ನ ಹನ್ಯಾದಿತಿ ಕರ್ತವ್ಯೋ ನ ಶೋಕೋ ವಃ ಕಥಂಚನ**
**ಹತಾನಿತ್ಯೇವ ಜಾನೀತ ಬಾಣೇನಾನೇನ ಚಾಸುರಾನ್ ॥೮೪॥**

"ನಾನು ಪ್ರಾಯಶಃ ದೈತ್ಯರನ್ನು ಸಂಹರಿಸಲಾರೆನೆಂದು ಭಾವಿಸಿ ಖಂಡಿತವಾಗಿಯೂ ನೀವು ದುಃಖಪಡಬೇಕಾಗಿಲ್ಲ. ಈ ನನ್ನ ಬಾಣದಿಂದ ಅಸುರರು ಹತರಾದರೆಂದೇ ಭಾವಿಸಿರಿ."

ಆ ಮಾತನ್ನು ಕೇಳಿ ದೇವತೆಗಳು ಹೇಳಿದರು: "ಪ್ರಭುವೇ! ನಿನ್ನ ಮಾತು ಸತ್ಯ. ದೈತ್ಯರೆಲ್ಲರೂ ಹತರಾಗಿಯೇ ಹೋದರು. ಭಗವಂತನಾದ, ಪ್ರಭುವಾದ ಶಂಕರನು ಹೇಳಿದ ಮಾತು ಖಂಡಿತವಾಗಿಯೂ ಸುಳ್ಳಾಗುವುದಿಲ್ಲ"– ಹೀಗೆಂಬುದಾಗಿ ಚಿಂತಿಸಿ ದೇವತೆಗಳು ಬಹಳವಾಗಿ ಸಂತೋಷಪಟ್ಟರು.

ಅನಂತರ ದೇವೇಶನಾದ ಮಹಾದೇವನು ಎಲ್ಲ ದೇವಗಣ ಗಳಿಂದಲೂ ಪರಿವೃತನಾಗಿ, ಅನುಪಮವಾದ ವಿಶಾಲವಾದ ಮಹಾರಥ ದಲ್ಲಿ ಕುಳಿತು ಹೊರಟನು. ಆ ಸಮಯದಲ್ಲಿ ಮಹಾಯಶೋವಂತನಾದ ಪರಮೇಶ್ವರನ ಪರಿಷದ್ವರ್ಗದವರೂ ಅವನನ್ನು ಸಂಪೂಜಿಸಿದರು. ಅವರಲ್ಲಿ ಕೆಲವರು ನೃತ್ಯಮಾಡುತ್ತಿದ್ದರು. ಮಾಂಸಾಶಿಗಳಾದ, ದುರಾಸದರಾದ,

ಪರಸ್ಪರವಾಗಿ ಗದರಿಸುತ್ತಿದ್ದ ಕೆಲವು ಭೂತಗಣಗಳು ಸುತ್ತಲೂ ಓಡಾಡುತ್ತಿದ್ದುವು. ಮಹಾಗುಣಶಾಲಿಗಳಾದ, ಮಹಾಭಾಗರಾದ, ತಪಸ್ಸಿನಿಂದ ಯುಕ್ತರಾಗಿದ್ದ ಋಷಿಗಳೂ, ಅನೇಕ ಜನರೂ ಮತ್ತು ದೇವತೆಗಳೂ ಸರ್ವಪ್ರಕಾರದಿಂದಲೂ ಮಹಾದೇವನಿಗೆ ವಿಜಯವನ್ನು ಕೋರುತ್ತಿದ್ದರು. ಈ ರೀತಿಯಲ್ಲಿ ಲೋಕಗಳಿಗೆ ಅಭಯಂಕರನಾದ ಮಹೇಶನು ತ್ರಿಪುರಸಂಹಾರಕ್ಕೋಸ್ಕರ ಪ್ರಯಾಣಮಾಡಲಾಗಿ, ಎಲ್ಲ ಜಗತ್ತುಗಳೂ ಸಂತುಷ್ಟವಾದುವು; ದೇವತೆಗಳೂ ಪರಿತುಷ್ಟರಾದರು. ಋಷಿಗಳು ದೇವೇಶನಾದ ಮಹೇಶನನ್ನು ಅನೇಕ ಪ್ರಕಾರವಾದ ಸ್ತೋತ್ರಗಳಿಂದ ಸ್ತುತಿಮಾಡುತ್ತಾ, ಪರಮೇಶ್ವರನ ತೇಜಸ್ಸನ್ನೂ ತಮ್ಮ ತಪಃಪ್ರಭಾವದಿಂದ ಪುನಃ ಹೆಚ್ಚಿಸುತ್ತಿದ್ದರು. ಪರಶಿವನು ತ್ರಿಪುರ ಸಂಹಾರಕ್ಕಾಗಿ ದಿವ್ಯರಥದಲ್ಲಿ ಕುಳಿತು ಪ್ರಯಾಣಮಾಡುತ್ತಿದ್ದ ಕಾಲದಲ್ಲಿ ಲಕ್ಷೋಪಲಕ್ಷ-ಕೋಟ್ಯನುಕೋಟಿ ಗಂಧರ್ವರು ವಿಧ-ವಿಧವಾದ ವಾದ್ಯ ಗಳನ್ನು ಬಾರಿಸುತ್ತಾ ಪರಶಿವನ ಜೊತೆಯಲ್ಲಿಯೇ ಹೋಗುತ್ತಿದ್ದರು. ವರದನಾದ ವಿಶ್ವೇಶನು ರಥವನ್ನು ಹತ್ತಿ ತ್ರಿಪುರಾಸುರರ ಸಮೀಪಕ್ಕೆ ಪ್ರಯಾಣಹೊರಟಬಳಿಕ 'ಸಾಧು-ಸಾಧು' ಎಂದು ಹೇಳುತ್ತಾ ಮುಗುಳ್ನಗೆ ಯಿಂದ ಸಾರಥಿಯಾದ ಬ್ರಹ್ಮನಿಗೆ ಹೇಳಿದನು:

"ದೇವ! ದೈತ್ಯರಿರುವೆಡೆಗೆ ಸಾವಧಾನವಾಗಿ ಕುದುರೆಗಳನ್ನು ಓಡಿಸು. ಯುದ್ಧದಲ್ಲಿ ಶತ್ರುಗಳನ್ನು ನಿಗ್ರಹಿಸಲಿರುವ ನನ್ನ ಬಾಹುಗಳ ಬಲವನ್ನಾದರೂ ನೀನಿಂದು ನೋಡು."

ಮಹಾದೇವನು ಹೀಗೆಂದು ಹೇಳಿದನಂತರ ಬ್ರಹ್ಮನು ಮನೋವೇಗ-ವಾಯುವೇಗಸದೃಶವಾದ ವೇಗದಿಂದ ಕೂಡಿದ್ದ ಕುದುರೆಗಳನ್ನು ದೈತ್ಯ-ದಾನವ ರಿಂದ ಸಂರಕ್ಷಿತವಾಗಿದ್ದ ತ್ರಿಪುರಗಳ ಕಡೆಗೆ ಶೀಘ್ರವಾಗಿ ಓಡಿಸಿದನು. ಆಕಾಶ ವನ್ನೇ ನುಂಗುತ್ತಿವೆಯೋ ಎಂಬಂತೆ ಕಾಣುತ್ತಿದ್ದ, ಲೋಕಪೂಜಿತವಾದ ಆ ಕುದುರೆಗಳ ಮೂಲಕವಾಗಿ ರುದ್ರನು ದೇವತೆಗಳಿಗೆ ವಿಜಯವನ್ನು ಸಾಧಿಸಿಕೊಡಲು ಅತ್ಯಂತಶೀಘ್ರವಾಗಿ ರಾಕ್ಷಸರ ಪಟ್ಟಣದ ಸಮೀಪಕ್ಕೆ ಹೋಗುತ್ತಿದ್ದನು. ಭವನು ರಥದಲ್ಲಿ ಕುಳಿತು ತ್ರಿಪುರಾಭಿಮುಖವಾಗಿ ಪ್ರಯಾಣಮಾಡುವಾಗ ಧ್ವಜಸ್ಥನಾಗಿದ್ದ ನಂದೀಶ್ವರನು ಗಟ್ಟಿಯಾಗಿ ಗರ್ಜನೆ

ಮಾಡಿ ಎಲ್ಲ ದಿಕ್ಕುಗಳನ್ನೂ ಧ್ವನಿಯಿಂದ ತುಂಬಿಬಿಟ್ಟನು. ಮಹಾ ಭಯಂಕರವಾದ ನಂದೀಶ್ವರನ ಗರ್ಜನೆಯನ್ನು ಕೇಳಿ ದೇವತೆಗಳ ಶತ್ರುಗಳಾದ ತಾರಕರೆಂಬ ರಾಕ್ಷಸರು ಇದ್ದಲ್ಲಿಯೇ ವಿನಾಶಹೊಂದಿದರು. ಅಲ್ಲಿದ್ದ ಮತ್ತೆ ಕೆಲವು ದೈತ್ಯರು ನಿರ್ಭಯರಾಗಿ ಯುದ್ಧಮಾಡಲು ಪರಮೇಶ್ವರನಿಗೆ ಅಭಿಮುಖವಾಗಿ ನಿಂತರು. ಅನಂತರ ಶೂಲಧರನಾದ ಸ್ಥಾಣುವು ಕ್ರೋಧ ಮೂರ್ಛಿತನಾದನು. ಅದರಿಂದಾಗಿ ಸಮಸ್ತಪ್ರಾಣಿಗಳೂ ಭಯಗೊಂಡುವು. ಮೂರು ಲೋಕಗಳೂ ನಡುಗಿದುವು. ಭೂಮಿಯು ಕಂಪಿಸಿತು. ರುದ್ರನು ಧನುಸ್ಸಿನಲ್ಲಿ ಬಾಣವನ್ನು ಯೋಜಿಸುತ್ತಿದ್ದಾಗ ಚಂದ್ರಾಗ್ನಿ-ವಿಷ್ಣು-ಬ್ರಹ್ಮ-ರುದ್ರರ ಕೋಪದ ಕಾರಣದಿಂದ ಅತಿಘೋರವಾದ ನಿಮಿತ್ತಗಳು (ದೇವತೆಗಳಿಗೆ ಒಳ್ಳೆಯದನ್ನೂ-ದೈತ್ಯರಿಗೆ ಕೆಟ್ಟುದನ್ನೂ ಸೂಚಿಸುವ ಘಟನೆಗಳು) ಕಂಡುಬಂದುವು. ಧನುಸ್ಸಿನ ಅಲುಗಾಟದ ಕ್ಷೋಭೆಯಿಂದ ಈಶ್ವರನು ಕುಳಿತಿದ್ದ ರಥವು ಬಹಳವಾಗಿ ಕುಸಿಯಿತು. ಆಗ ನಾರಾಯಣನು ಬಾಣದ ಒಂದು ಭಾಗದಿಂದ ಹೊರಬಂದು ವೃಷಭದ ರೂಪವನ್ನು ಧರಿಸಿ ಈಶ್ವರನ ಮಹಾರಥವನ್ನು ಮೇಲೆತ್ತಿದನು. ಧನುಸ್ಸಿನ ಸಂಚಾಲನದಿಂದ ರಥವು ಕುಸಿಯುತ್ತಿರಲಾಗಿ, ದೈತ್ಯರು ಗರ್ಜನೆಮಾಡುತ್ತಿರಲಾಗಿ, ಮಹಾಬಲಿಷ್ಠನಾದ ಭಗವಾನ್ ಶಿವನು ಸಂಭ್ರಮದಿಂದ ಗಟ್ಟಿಯಾಗಿ ಗರ್ಜನೆಮಾಡಿದನು. ಆ ಸಮಯದಲ್ಲಿ ವೃಷಭದ ತಲೆಯ ಮೇಲೂ ಮತ್ತು ಕುದುರೆಯ ಬೆನ್ನಿನ ಮೇಲೂ ಕುಳಿತಿದ್ದ ರುದ್ರನು ದಾನವಪುರಗಳನ್ನು ನೋಡಿದನು. ವೃಷಭದ ತಲೆಯ ಮೇಲೂ ಕುದುರೆಯ ಬೆನ್ನಿನ ಮೇಲೂ ಕುಳಿತಿದ್ದ ಶಂಕರನು ಕುದುರೆಯ ಸ್ತನಗಳನ್ನು ಕಿತ್ತುಹಾಕಿದನು; ವೃಷಭದ ಗೊರಸುಗಳನ್ನು ಎರಡಾಗಿ ಸೀಳಿಬಿಟ್ಟನು.

ಮಾನದನೇ! ನಿನಗೆ ಮಂಗಳವಾಗಲಿ. ಅದು ಮೊದಲಾಗಿ ಗೋಜಾತಿಗೆ ಗೊರಸುಗಳು ಎರಡು ಭಾಗಗಳಾಗಿ ಪರಿಣಮಿಸಿದುವು. ಅದ್ಭುತಕರ್ಮನಾದ, ಮಹಾಬಲಿಷ್ಠನಾದ ರುದ್ರನಿಂದ ಪೀಡಿಸಲ್ಪಟ್ಟ ಕುದುರೆಗಳಿಗೆ ಸ್ತನಗಳೇ ಇಲ್ಲವಾದುವು.

ಅನಂತರ ಶಿವನು ಧನುಸ್ಸಿಗೆ ಹೆದೆಯನ್ನೇರಿಸಿ ಮಹಾಬಾಣವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಬಾಣವನ್ನು ಪಾಶುಪತಾಸ್ತ್ರದೊಡನೆ ಸಂಯೋಜಿಸಿ ತ್ರಿಪುರಗಳು ಒಟ್ಟಿಗೆ ಸೇರುವುದನ್ನು ನಿರೀಕ್ಷಿಸತೊಡಗಿದನು. ಸಜ್ಜುಗೊಳಿಸಿದ ಧನುಸ್ಸನ್ನು ಹಿಡಿದುನಿಂತಿದ್ದ ರುದ್ರನು ಆ ಸ್ಥಿತಿಯಲ್ಲಿರಲಾಗಿ ಕಾಲದ ಪ್ರೇರಣೆಯಿಂದ ಆ ಮೂರು ಪುರಗಳೂ ಒಟ್ಟಿಗೆ ಸೇರಿಕೊಂಡುವು. ಪ್ರತ್ಯೇಕವಾಗಿದ್ದ ಮೂರು ಪಟ್ಟಣಗಳೂ ಒಂದಾಗಿಸೇರಿ ತ್ರಿಪುರತ್ವವನ್ನು ಹೊಂದಲಾಗಿ ಮಹಾತ್ಮರಾದ ದೇವತೆಗಳಿಗೆ ಅಪಾರವಾದ ಸಂತೋಷ ವಾಯಿತು. ಅನಂತರ ದೇವಸಮೂಹಗಳೂ, ಸಿದ್ಧರೂ ಮತ್ತು ಮಹರ್ಷಿ ಗಳೂ ಮಹೇಶ್ವರನನ್ನು ನಾನಾಪ್ರಕಾರವಾಗಿ ಸ್ತೋತ್ರಮಾಡುತ್ತಾ ‘ಜಯ ರುದ್ರದೇವ! ಜಯ ಪರಮೇಶ್ವರ!’ ಎಂದು ಜಯಕಾರಗಳನ್ನು ಹಾಕಿದರು. ಅಸುರರನ್ನು ಸಂಹರಿಸುತ್ತಿದ್ದ, ಅವರ್ಣನೀಯವಾದ ಭಯಂಕರರೂಪವನ್ನು ಹೊಂದಿದ್ದ, ಸಹಿಸಲು ಅಸಾಧ್ಯವಾದ ತೇಜಸ್ಸಿನಿಂದ ಕೂಡಿದ್ದ, ದೇವ ದೇವನಾದ ಮಹಾದೇವನ ಮುಂಭಾಗದಲ್ಲಿ ಮೂರು ಪಟ್ಟಣಗಳ ಸಮುದಾಯವು ಒಡನೆಯೇ ಪ್ರಕಟವಾಯಿತು. ಲೋಕೇಶ್ವರನಾದ, ಭಗವಂತನಾದ ಶಿವನು ಆ ಮಹಾಧನುಸ್ಸನ್ನು ಆಕರ್ಣವಾಗಿ ಸೆಳೆದು ತ್ರೈಲೋಕ್ಯಸಾರಭೂತವಾಗಿದ್ದ ಆ ಬಾಣವನ್ನು ಶೀಘ್ರವಾಗಿ ತ್ರಿಪುರಗಳ ಕಡೆಗೆ ಬಿಟ್ಟನು. ಮಹಾಭಾಗನೇ! ಮದ್ರೇಶ! ಶ್ರೇಷ್ಠವಾದ ಆ ಬಾಣವನ್ನು ಪರಶಿವನು ಬಿಡಲಾಗಿ ಕೆಳಕ್ಕೆ ಬೀಳುತ್ತಿದ್ದ ಪಟ್ಟಣಗಳಲ್ಲಿ ಭಯಂಕರವಾದ ಆರ್ತನಾದ ವುಂಟಾಯಿತು. ಆ ಬಾಣವು ತ್ರಿಪುರಗಳಲ್ಲಿದ್ದ ರಾಕ್ಷಸರ ಸಮೂಹಗಳನ್ನು ಸಂಪೂರ್ಣವಾಗಿ ಭಸ್ಮಮಾಡಿ ಪಶ್ಚಿಮಸಮುದ್ರದಲ್ಲಿ ಹಾಕಿಬಿಟ್ಟಿತು. ಈ ರೀತಿಯಲ್ಲಿ ಮೂರು ಲೋಕಗಳಿಗೂ ಹಿತೈಷಿಯಾದ ಕ್ರುದ್ಧನಾಗಿದ್ದ ಮಹೇಶ್ವರನು ತ್ರಿಪುರಗಳನ್ನೂ ಮತ್ತು ಅದರಲ್ಲಿದ್ದ ಅಶೇಷದಾನವರನ್ನೂ ಭಸ್ಮಮಾಡಿದನು. ಆತ್ಮಕ್ರೋಧದಿಂದ ಹುಟ್ಟಿದ್ದ ಬೆಂಕಿಯನ್ನೂ ಪರಮೇಶ್ವರನು ‘ಹಾ ಹಾ’ ಎಂದು ಹೇಳಿ ನಿವಾರಣೆಮಾಡಿದನು ಮತ್ತು ಆ ಕ್ರೋಧಾಗ್ನಿಯನ್ನು ಕುರಿತು ‘ಮಾ ಕಾರ್ಷೀರ್ಭಸ್ಮಸಾಲ್ಲೋಕಾನ್’ “ಲೋಕಗಳೆಲ್ಲವನ್ನೂ ಭಸ್ಮೀ ಭೂತವನ್ನಾಗಿ ಮಾಡಬೇಡ”–ಎಂದೂ ಹೇಳಿದನು. ತ್ರಿಪುರಾಸುರರ ವಧೆ ಯಾದನಂತರ ದೇವತೆಗಳೂ, ಮಹರ್ಷಿಗಳೂ ಮತ್ತು ಮೂರು ಲೋಕಗಳ

ಪ್ರಾಣಿಗಳೂ ಸ್ವಸ್ಥವಾದುವು. (ಉದ್ವೇಗವನ್ನೂ ಭಯವನ್ನೂ ತೊರೆದುವು.) ಎಲ್ಲರೂ ಅಪ್ರತಿಮಶಕ್ತಿಶಾಲಿಯಾದ ಮಹಾದೇವನನ್ನು ಶ್ರೇಷ್ಠವಾದ ಸ್ತೋತ್ರಗಳಿಂದ ಸ್ತೋತ್ರಮಾಡಿದರು.

ವಿಶೇಷಪ್ರಯತ್ನದಿಂದ ತಮ್ಮ ಅಭಿಲಾಷೆಯನ್ನು ಪೂರೈಸಿಕೊಂಡ ಪ್ರಜಾಪತಿಪುರಃಸರರಾದ ದೇವತೆಗಳೆಲ್ಲರೂ ವಿಶ್ವೇಶ್ವರನಿಂದ ಅನುಜ್ಞೆಯನ್ನು ಪಡೆದುಕೊಂಡು ತಾವು ಬಂದಿದ್ದ ಸ್ಥಳಗಳಿಗೆ ಹಿಂದಿರುಗಿದರು. ಈ ರೀತಿಯಲ್ಲಿ ಜಗತ್ತಿನ ಸೃಷ್ಟಿಗೆ ಕಾರಣನಾದ, ಭಗವಂತನಾದ, ದೇವತೆಗಳಿಗೂ ಮತ್ತು ಅಸುರರಿಗೂ ಅಧ್ಯಕ್ಷನಾದ ಮಹೇಶ್ವರದೇವನು ಲೋಕಕಲ್ಯಾಣವನ್ನು ಮಾಡಿದನು.

ಮದ್ರೇಶ್ವರ! ವಿಶ್ವವಿಧಾತನಾದ, ಸರ್ವೋತ್ಕೃಷ್ಟನಾದ, ಅವಿನಾಶಿಯಾದ ಭಗವಾನ್ ಬ್ರಹ್ಮನು ಯಾವ ರೀತಿಯಲ್ಲಿ ರುದ್ರನಿಗೆ ಸಾರಥ್ಯವನ್ನು ಮಾಡಿದನೋ–ಅದೇ ರೀತಿಯಲ್ಲಿ ನೀನೂ ಸಹ ಬಹಳ ಶೀಘ್ರವಾಗಿ, ಪಿತಾಮಹನು ರುದ್ರನ ಕುದುರೆಗಳನ್ನು ನಿಯಂತ್ರಿಸಿದಂತೆ, ಮಹಾತ್ಮನಾದ ರಾಧೇಯನ ಕುದುರೆಗಳನ್ನು ನಿಯಂತ್ರಿಸು.

**ತ್ವಂ ಹಿ ಕೃಷ್ಣಾಚ್ಚ ಕರ್ಣಾಚ್ಚ ಫಾಲ್ಗುನಾಚ್ಚ ವಿಶೇಷತಃ**
**ವಿಶಿಷ್ಟೋ ರಾಜಶಾರ್ದೂಲ ನಾಸ್ತಿ ತತ್ರ ವಿಚಾರಣಾ ॥೧೨೨॥**

ನೀನು ಶ್ರೀಕೃಷ್ಣನಿಗಿಂತಲೂ ವಿಶಿಷ್ಟನಾದವನು. ಕರ್ಣನಿಗಿಂತಲೂ ಹೆಚ್ಚಿನವನು. ಅದರಲ್ಲಿಯೂ ವಿಶೇಷವಾಗಿ ಅರ್ಜುನನನ್ನೂ ನೀನು ಅತಿಶಯಿಸುವೆ. ಈ ವಿಷಯದಲ್ಲಿ ವಿಚಾರಮಾಡುವ ಅವಶ್ಯಕತೆಯೇ ಇರುವುದಿಲ್ಲ.

**ಯುದ್ಧೇ ಹ್ಯಯಂ ರುದ್ರ ಕಲ್ಪಸ್ತ್ವಂ ಚ ಬ್ರಹ್ಮಸಮೋ ನಯೇ**
**ತಸ್ಮಾಚ್ಛಕ್ತೋ ಭವಾಞ್ಜೇತುಂ ಮಚ್ಛತ್ರೂಂಸ್ತಾನಿವಾಸುರಾನ್ ॥೧೨೩॥**

ಯುದ್ಧದಲ್ಲಿ ಕರ್ಣನು ರುದ್ರನಿಗೆ ಸಮಾನನು. ನೀನು ಅಶ್ವನಯನದಲ್ಲಿ (ನೀತಿಶಾಸ್ತ್ರದಲ್ಲಿ) ಬ್ರಹ್ಮನಿಗೆ ಸಮಾನನಾಗಿರುವೆ. ಬ್ರಹ್ಮ-ರುದ್ರರು ಸೇರಿಕೊಂಡು ಅಸುರರನ್ನು ಸಂಹಾರಮಾಡಿದಂತೆ–ನೀನು ಕರ್ಣನೊಡನೆ

ಸೇರಿಕೊಂಡು ನನ್ನ ಶತ್ರುಗಳನ್ನು ಜಯಿಸಲು ಸಮರ್ಥನಾಗಿರುವೆ. ಶಲ್ಯ! ಕರ್ಣನು ಶ್ವೇತಾಶ್ವನಾದ, ಕೃಷ್ಣಸಾರಥಿಯಾದ ಪಾರ್ಥನನ್ನು ಮಥಿಸಿ ಸಂಹರಿಸುವಂತೆ ನೀನು ಶೀಘ್ರವಾಗಿ ಕಾರ್ಯವನ್ನು ಕೈಗೊಳ್ಳಬೇಕಾಗಿದೆ.

ಮದ್ರೇಶ! ನಿಶ್ಚಯವಾಗಿ ಹೇಳುವುದಾದರೆ ರಾಜ್ಯವನ್ನು ಪಡೆದು ಕೊಳ್ಳಬೇಕೆಂಬ ಆಸೆ ಮತ್ತು ಬದುಕಿರಬೇಕೆಂಬ ಆಸೆ–ನನ್ನ ಈ ಎರಡು ಆಸೆಗಳೂ ನಿನ್ನನ್ನೇ ಅವಲಂಬಿಸಿವೆ. ಕರ್ಣನ ಸಾರಥ್ಯವನ್ನು ಮಾಡುವುದರಿಂದ ಈಗ ನನ್ನ ವಿಜಯದ ಆಸೆಯೂ ನಿನ್ನನ್ನೇ ಅವಲಂಬಿಸಿದೆ. (ನನ್ನ ಬದುಕು, ವಿಜಯ ಮತ್ತು ರಾಜ್ಯಗಳು ನಿನ್ನ ಪರಮಾನುಗ್ರಹದಿಂದಲೇ ಲಭಿಸಬೇಕಾಗಿವೆ.)

**ತ್ವಯಿ ಕರ್ಣಶ್ಚ ರಾಜ್ಯಂ ಚ ವಯಂ ಚೈವ ಪ್ರತಿಷ್ಠಿತಾಃ**
**ವಿಜಯಶ್ಚೈವ ಸಂಗ್ರಾಮೇ ಸಂಯಚ್ಛಾದ್ಯ ಹಯೋತ್ತಮಾನ್ ॥೧೨೫॥**

ಶಲ್ಯರಾಜ! ಕರ್ಣ, ವಿಜಯ, ರಾಜ್ಯ ಮತ್ತು ನಾವೆಲ್ಲರೂ ನಿನ್ನಲ್ಲಿಯೇ ಪ್ರತಿಷ್ಠಿತರಾಗಿದ್ದೇವೆ. (ಕರ್ಣನ ವಿಜಯವು ನಿನ್ನನ್ನೇ ಅವಲಂಬಿಸಿದೆ. ಇವನ ವಿಜಯದಿಂದಲೇ ನಮಗೆ ರಾಜ್ಯದ ಪ್ರಾಪ್ತಿಯಾಗುತ್ತದೆ. ಆದುದರಿಂದ ನೀನೊಬ್ಬನೇ ನಮಗಿಂದು ಕೇಂದ್ರಬಿಂದುವಾಗಿರುವೆ.) ಆದುದರಿಂದ ಇಂದಿನ ಸಂಗ್ರಾಮದಲ್ಲಿ ನೀನು ಕರ್ಣನ ಶ್ರೇಷ್ಠವಾದ ಕುದುರೆಗಳನ್ನು ನಿನ್ನ ವಶಕ್ಕೆ ತೆಗೆದುಕೊ.

ಮದ್ರೇಶ! ನಾನು ಹೇಳಲಿರುವ ಮತ್ತೊಂದು ಇತಿಹಾಸವನ್ನೂ ಕೇಳು. ನನ್ನ ತಂದೆಯ ಬಳಿಯಲ್ಲಿ ಕುಳಿತು ಧರ್ಮವಿದನಾದ ಬ್ರಾಹ್ಮಣನೊಬ್ಬನು ಈ ಇತಿಹಾಸವನ್ನು ಹೇಳಿದನು. ಕಾರ್ಯ-ಕಾರಣ-ಪ್ರಯೋಜನಗಳಿಂದ ಕೂಡಿರುವ ವಿಚಿತ್ರವಾದ ಈ ಇತಿಹಾಸವನ್ನು ಕೇಳಿದನಂತರವಾದರೂ ನಾನು ಹೇಳಿದ ಕಾರ್ಯವನ್ನು ಮಾಡಲು ನಿಶ್ಚಯಿಸು. ಪುನಃ ಪುನಃ ಯೋಚಿಸಬೇಡ.

ಮಹಾಯಶೋವಂತನಾದ ಜಮದಗ್ನಿ ಎಂಬುವನು ಭಾರ್ಗವರ ವಂಶದಲ್ಲಿ ಹುಟ್ಟಿದನು. ಅವನಿಗೆ ತೇಜಸ್ಸಿನಿಂದಲೂ ಸಕಲಸದ್ಗುಣ ಗಳಿಂದಲೂ ಸಮನ್ವಿತನಾದ ಮಗನು ಹುಟ್ಟಿ 'ರಾಮ' ಎಂಬ ಹೆಸರಿ ನಿಂದ ಪ್ರಸಿದ್ಧನಾದನು. ಅಸ್ತ್ರಗಳನ್ನು ಪಡೆದುಕೊಳ್ಳುವ ಸಲುವಾಗಿ ರಾಮನು

ನಿಯತಾಹಾರದಿಂದಲೂ, ಇಂದ್ರಿಯಗಳ ಸಂಯಮದಿಂದಲೂ, ಪ್ರಸನ್ನವಾದ ಮನಸ್ಸಿನಿಂದಲೂ ಸುತೀವ್ರವಾದ ತಪಸ್ಸನ್ನು ಆಚರಿಸಿ ಭಗವಾನ್ ಶಂಕರನನ್ನು ಮೆಚ್ಚಿಸಿದನು. ರಾಮನ ಭಕ್ತಿಯಿಂದಲೂ ಮತ್ತು ಮನಸ್ಸಿನ ಸಂಯಮದಿಂದಲೂ ಪ್ರಸನ್ನನಾದ ಮಹಾದೇವನು ಅವನ ಹೃದ್ಗತವಾದ ಆಶಯವೇನೆಂಬುದನ್ನು ತಿಳಿದು ಪ್ರತ್ಯಕ್ಷನಾದನು.

**ರಾಮ ತುಷ್ಟೋಽಸ್ಮಿ ಭದ್ರಂ ತೇ ವಿದಿತಂ ಮೇ ತವೇಪ್ಸಿತಮ್।**
**ಕುರುಷ್ವ ಪೂತಮಾತ್ಮಾನಂ ಸರ್ವಮೇತದವಾಪ್ಸ್ಯಸಿ ॥೧೩೨॥**

"ರಾಮ! ನಿನ್ನ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದೇನೆ. ನಿನಗೆ ಮಂಗಳವಾಗಲಿ. ನಿನ್ನ ಹೃದ್ಗತವಾದ ಇಚ್ಛೆಯೇನೆಂಬುದು ನನಗೆ ತಿಳಿದಿದೆ. ನಿನ್ನನ್ನು ಪರಿಶುದ್ಧಗೊಳಿಸು. (ನೀನು ಪರಿಶುದ್ಧನಾಗು). ನೀನು ಇಚ್ಛೆಪಟ್ಟಿರುವುದೆಲ್ಲವನ್ನೂ ಪಡೆದುಕೊಳ್ಳುವೆ.

**ದಾಸ್ಯಾಮಿ ತೇ ತದಾಸ್ತ್ರಾಣಿ ಯದಾ ಪೂತೋ ಭವಿಷ್ಯಸಿ**
**ಅಪಾತ್ರಮಸಮರ್ಥಂ ಚ ದಹನ್ತ್ಯಸ್ತ್ರಾಣಿ ಭಾರ್ಗವ ॥೧೩೩॥**

ನೀನು ಯಾವಾಗ ಪರಿಶುದ್ಧನಾಗುವೆಯೋ ಆಗ ನಾನು ನಿನಗೆ ಅಸ್ತ್ರಗಳನ್ನು ದಯಪಾಲಿಸುತ್ತೇನೆ. ಭಾರ್ಗವ! ಅಸ್ತ್ರಧಾರಣೆಗೆ ಅಪಾತ್ರನಾದವನನ್ನೂ ಮತ್ತು ಅಸಮರ್ಥನಾದವನನ್ನೂ ಅಸ್ತ್ರಗಳೇ ದಹಿಸಿಬಿಡುತ್ತವೆ."

ದೇವದೇವನಾದ ಶೂಲಿಯು ರಾಮನಿಗೆ ಹೀಗೆಂದು ಹೇಳಲಾಗಿ ರಾಮನು ಮಹಾತ್ಮನಾದ, ಪ್ರಭುವಾದ ಶಂಕರನನ್ನು ತಲೆಬಾಗಿ ನಮಿಸಿ ಹೇಳಿದನು:

**ಯದಾ ಜಾನಾತಿ ದೇವೇಶಃ ಪಾತ್ರಂ ಮಾಮಸ್ತ್ರಧಾರಣೇ**
**ತದಾ ಶುಶ್ರೂಷವೇಽಸ್ತ್ರಾಣಿ ಭವಾನ್ಮೇ ದಾತುಮರ್ಹತಿ ॥೧೩೪॥**

"ಮಹಾನುಭಾವ! ಅಸ್ತ್ರಧಾರಣೆಗೆ ಪಾತ್ರನಾಗಿದ್ದೇನೆಂದು ನನ್ನನ್ನು ನೀನು ಯಾವಾಗ ತಿಳಿದುಕೊಳ್ಳುವೆಯೋ–ಆಗಲೇ ನೀನು ನಿನ್ನ ಸೇವೆಯಲ್ಲಿ ನಿರತನಾದ ನನಗೆ ಅಸ್ತ್ರಗಳನ್ನು ದಯಪಾಲಿಸು."

ಶಲ್ಯರಾಜ! ಅನಂತರ ರಾಮನು ಅನೇಕವರ್ಷಗಳ ಪರ್ಯಂತವಾಗಿ

ತಪಸ್ಸಿನಿಂದಲೂ, ಇಂದ್ರಿಯಗಳ ಸಂಯಮದಿಂದಲೂ, ನಿಯತವಾದ ಅನುಷ್ಠಾನಗಳಿಂದಲೂ, ಹೋಮಮಂತ್ರಪುರಃಸರವಾದ ಪೂಜಾ-ನಿವೇದನ-ಬಲಿಪ್ರದಾನಗಳಿಂದಲೂ ಶಂಕರಭಗವಂತನ ಆರಾಧನೆಯನ್ನು ಮಾಡಿದನು. ಮಹಾತ್ಮನಾದ ಭಾರ್ಗವರಾಮನ ಜಪ-ತಪ-ಅರ್ಚನೆಗಳಿಂದ ಸುಪ್ರೀತನಾದ ಮಹಾದೇವನು ಪಾರ್ವತೀದೇವಿಯ ಬಳಿಯಲ್ಲಿ ರಾಮನ ಅನೇಕಗುಣಗಳನ್ನು ವರ್ಣಿಸಿ ಹೇಳಿದನು:

ಸುಪ್ರೀತನಾದ ಶಂಕರನು 'ದೃಢವ್ರತನಾದ ಈ ರಾಮನು ಯಾವಾಗಲೂ ನನ್ನಲ್ಲಿ ಪರಮಭಕ್ತಿಭಾವದಿಂದ ಇರತಕ್ಕವನು'–ಇವೇ ಮುಂತಾಗಿ ರಾಮನ ಅನೇಕಗುಣಗಳನ್ನು ದೇವ-ಪಿತೃಗಳ ಸಮಕ್ಷದಲ್ಲಿಯೂ ಹಲವು ಬಾರಿ ವರ್ಣಿಸಿ ಹೇಳಿದನು. ಅದೇ ಕಾಲದಲ್ಲಿ ದೈತ್ಯರು ವರದಾನ ಗಳಿಂದ ಬಹಳ ಬಲಿಷ್ಠರಾಗಿದ್ದರು. ದರ್ಪ-ಮೋಹಾದಿಗಳಿಗೆ ವಶೀಭೂತ ರಾಗಿದ್ದ ದೈತ್ಯರು ದೇವತೆಗಳನ್ನು ಬಹಳವಾಗಿ ಹಿಂಸಿಸತೊಡಗಿದರು. ಆಗ ದೇವತೆಗಳೆಲ್ಲರೂ ಒಟ್ಟಾಗಿ ಸೇರಿ ದೈತ್ಯರನ್ನು ಸಂಹರಿಸಲು ನಿಶ್ಚಯಿಸಿ ಅವರನ್ನು ವಧಿಸಲು ಬಹಳವಾಗಿ ಪ್ರಯತ್ನಿಸಿದರು. ಆದರೆ ದೃಪ್ತರಾಗಿದ್ದ ದೈತ್ಯರನ್ನು ಜಯಿಸಲು ದೇವತೆಗಳಿಗೆ ಸಾಧ್ಯವಾಗಲಿಲ್ಲ. ಅನಂತರ ದೇವತೆಗಳೆಲ್ಲರೂ ಉಮಾಪತಿಯಾದ ಮಹೇಶ್ವರನ ಬಳಿಗೆ ಹೋಗಿ ಭಕ್ತಿಯಿಂದ ಅವನನ್ನು ಪ್ರಸನ್ನಗೊಳಿಸಿ ಶತ್ರುಗಣಗಳನ್ನು ಸಂಹಾರಮಾಡ ಬೇಕೆಂದು ಕೇಳಿಕೊಂಡರು.

ಸುಪ್ರೀತನಾದ ಪರಶಿವನು ದೇವಶತ್ರುಗಳನ್ನು ಸಂಹರಿಸುವುದಾಗಿ ಪ್ರತಿಜ್ಞೆಮಾಡಿ ಭಾರ್ಗವರಾಮನನ್ನು ಆಹ್ವಾನಿಸಿ ಹೇಳಿದನು:

"ಭಾರ್ಗವರಾಮ! ಲೋಕಗಳ ಹಿತಾರ್ಥವಾಗಿಯೂ, ನನ್ನ ಪ್ರೀತಿಗಾಗಿಯೂ ನಿನ್ನೊಡನೆ ಯುದ್ಧಕ್ಕೆ ಬರುವ ಎಲ್ಲ ದೇವಶತ್ರುಗಳನ್ನೂ ಸಂಹರಿಸು."

ತ್ರ್ಯಂಬಕನು ಹೀಗೆಂದು ಹೇಳುತ್ತಲೇ ಭಾರ್ಗವರಾಮನು ವರದನಾದ, ಪ್ರಭುವಾದ ಶಂಕರನನ್ನು ಕುರಿತು ವಿನೀತವಾಗಿ ಹೇಳಿದನು.

**ಕಾ ಶಕ್ತಿರ್ಮಮ ದೇವೇಶ ಆಕೃತಾಸ್ತ್ರಸ್ಯ ಸಂಯುಗೇ।**
**ನಿಹಂತುಂ ದಾನವಾನ್ಸರ್ವಾನ್ಕೃತಾಸ್ತ್ರಾನ್ಯುದ್ಧದುರ್ಮದಾನ್॥**

"ದೇವೇಶ! ಅಸ್ತ್ರವಿದ್ಯೆಯನ್ನೇ ತಿಳಿಯದಿರುವ ನನಗೆ ಯುದ್ಧದುರ್ಮದ ರಾದ ಅಸ್ತ್ರವಿದ್ಯಾಪಾರಂಗತರಾದ ಎಲ್ಲ ದೈತ್ಯರನ್ನೂ ಯುದ್ಧದಲ್ಲಿ ಸಂಹರಿಸಲು ಯಾವ ಶಕ್ತಿಯಿದೆ?"

"ರಾಮ! ನನ್ನಿಂದ ಅನುಜ್ಞಾತನಾದ ನೀನು ದೇವಶತ್ರುಗಳಾದ ದಾನವರೊಡನೆ ಯುದ್ಧಕ್ಕೆ ಹೊರಡು. ಎಲ್ಲ ಶತ್ರುಗಳನ್ನೂ ನೀನು ಸಂಹರಿಸುವೆ. ಇಷ್ಟು ಮಾತ್ರವಲ್ಲ. ಎಲ್ಲ ಶತ್ರುಗಳನ್ನೂ ಜಯಿಸಿದ ಬಳಿಕ ಅಗಣಿತವಾದ ಗುಣಗಣಗಳನ್ನೂ ಪಡೆದುಕೊಳ್ಳುವೆ."

ರಾಮನು ಮಹಾದೇವನ ಮಾತನ್ನು ಕೇಳಿ, ಸರ್ವಪ್ರಕಾರದಿಂದಲೂ ವಿನೀತನಾಗಿ ಅವನ ಅನುಜ್ಞೆಯನ್ನು ಪ್ರತಿಗ್ರಹಿಸಿ ಸ್ವಸ್ತಿವಾಚನಾದಿ ಮಂಗಳಕಾರ್ಯಗಳಾದನಂತರ ದಾನವರ ಬಳಿಗೆ ಹೊರಟುಹೋದನು. ಮಹಾದರ್ಪಿಷ್ಠರೂ ಮತ್ತು ಬಲಿಷ್ಠರೂ ಆಗಿದ್ದ ದೇವಶತ್ರುಗಳನ್ನು ಕುರಿತು ರಾಮನು ಹೇಳಿದನು: "ಯುದ್ಧಮದದಿಂದ ಉದ್ಧತರಾದ ದೈತ್ಯರೇ! ನನ್ನೊಡನೆ ಯುದ್ಧಮಾಡಿರಿ. ಮಹಾಸುರರೇ! ನಿಮ್ಮನ್ನು ಜಯಿಸುವ ಸಲುವಾಗಿ ಮಹಾದೇವನು ನನ್ನನ್ನಿಲ್ಲಿಗೆ ಕಳುಹಿಸಿದ್ದಾನೆ."

ಶಲ್ಯರಾಜ! ಭಾರ್ಗವರಾಮನು ಹೀಗೆಂದು ಹೇಳುತ್ತಲೇ ದಾನವರು ಅವನೊಡನೆ ಯುದ್ಧವನ್ನು ಉಪಕ್ರಮಿಸಿದರು. ಭಾರ್ಗವನಂದನನು ಯುದ್ಧದಲ್ಲಿ ವಜ್ರಾಯುಧಸ್ಪರ್ಶಕ್ಕೆ ಸಮಾನವಾದ ತೀಕ್ಷ್ಣಸ್ಪರ್ಶವಿದ್ದ ಪ್ರಹಾರಗಳಿಂದಲೇ ದೈತ್ಯರೆಲ್ಲರನ್ನೂ ಸಂಹರಿಸಿದನು. ದೈತ್ಯರು ಬಿಟ್ಟ ಬಾಣಗಳಿಂದ ಭಾರ್ಗವನ ಶರೀರವು ಕ್ಷತ-ವಿಕ್ಷತವೂ ಆಗಿದ್ದಿತು.

ವಿಜಯಿಯಾದ ಭಾರ್ಗವರಾಮನನ್ನು ಸ್ಥಾಣುವು ಒಮ್ಮೆ ಮುಟ್ಟಿದೊಡನೆಯೇ ಅವನ ಶರೀರದಲ್ಲಿದ್ದ ಗಾಯಗಳೆಲ್ಲವೂ ಮಾಯ್ದುಹೋದುವು. ರಾಮನ ಆ ಸಾಹಸಕಾರ್ಯದಿಂದ ಮಹಾದೇವನು ಸುಪ್ರೀತನೂ ಆದನು. ಮಹೇಶನು ಮಹಾತ್ಮನಾದ ಭಾರ್ಗವರಾಮನಿಗೆ

ಬಹುವಿಧವಾದ ವರಗಳನ್ನೂ ದಯಪಾಲಿಸಿದನು. ಅನಂತರ ಪ್ರೀತಿಯುಕ್ತನಾದ ಶೂಲಿಯು ರಾಮನೊಡನೆ ಹೇಳಿದನು:

"ಭೃಗುನಂದನನೇ! ನಿನ್ನ ಶರೀರದ ಮೇಲೆ ಶಸ್ತ್ರಗಳ ಪ್ರಹಾರವು ಬಿದ್ದು ಗಾಯಗಳಾದುದರಿಂದ ಮನುಷ್ಯಸಂಬಂಧವಾದ ಕರ್ಮಗಳೆಲ್ಲವೂ ನಿನಗೆ ಕಳೆದೇಹೋದುವು. (ನೀನೀಗ ಪೂತನಾಗಿ ದೇವಸದೃಶನಾಗಿರುವೆ.) ನಿನ್ನ ಇಚ್ಛೆಯಂತೆಯೇ ನನ್ನಿಂದ ದಿವ್ಯಾಸ್ತ್ರಗಳನ್ನು ಸ್ವೀಕರಿಸು."

ಮದ್ರೇಶ! ಭವನು ಹೇಳಿದಂತೆ ಪರಶುರಾಮನು ತನ್ನ ಮನೋ ವಾಂಛಿತವಾದ ಅನೇಕವರಗಳನ್ನೂ ಸಮಸ್ತವಾದ ಅಸ್ತ್ರಗಳನ್ನೂ ಶಿವನಿಂದ ಪಡೆದುಕೊಂಡನು. ಅನಂತರ ಮಹಾತಪಸ್ವಿಯಾದ ರಾಮನು ತಾನು ಬಂದಿದ್ದ ಸ್ಥಳಕ್ಕೆ ಹೊರಟುಹೋದನು.

ಈ ಇತಿಹಾಸವು ಹಿಂದೆ ಹೀಗೆ ನಡೆಯಿತು. ನನ್ನ ತಂದೆಯ ಮುಂದೆ ಆ ಋಷಿಯು ಈ ಎಲ್ಲ ವಿಷಯಗಳನ್ನೂ ನಾನು ನಿನಗೆ ಹೇಳಿದಂತೆಯೇ ಹೇಳಿದನು. ಅನಂತರ ಭಾರ್ಗವನೂ ಸಹ ಸುಪ್ರೀತವಾದ ಮನಸ್ಸಿನಿಂದ ಕೂಡಿದವನಾಗಿ ಮಹಾತ್ಮನಾದ ಕರ್ಣನಿಗೆ ದಿವ್ಯವಾದ ಧನುರ್ವೇದವನ್ನು ಉಪದೇಶಿಸಿದನು. ಕರ್ಣನಲ್ಲಿ ಯಾವುದಾದರೂ ಅತ್ಯಲ್ಪವಾದ ದೋಷ-ಪಾಪಗಳೇನಾದರೂ ಇದ್ದಿದ್ದರೆ ಭಾರ್ಗವರಾಮನು ಕರ್ಣನಿಗೆ ದಿವ್ಯಾಸ್ತ್ರಗಳನ್ನು ಖಂಡಿತವಾಗಿಯೂ ದಯಪಾಲಿಸುತ್ತಿರಲಿಲ್ಲ.

**ನಾಪಿ ಸೂತಕುಲೇ ಜಾತಂ ಕರ್ಣಂ ಮನ್ಯೇ ಕಥಂಚನ**
**ದೇವಪುತ್ರಮಹಂ ಮನ್ಯೇ ಕ್ಷತ್ರಿಯಾಣಾಂ ಕುಲೋದ್ಭವಮ್।**
**ವಿಸೃಷ್ಟಮವಬೋಧಾರ್ಥಂ ಕುಲಸ್ಯೇತಿ ಮತಿರ್ಮಮ ॥೧೬೦॥**

ಕರ್ಣನು ಸೂತಕುಲಪ್ರಸೂತನೆಂದು ನಾನು ಯಾವುದೇ ರೀತಿ ಯಲ್ಲಿಯೂ ಭಾವಿಸುವುದಿಲ್ಲ. ಇವನು ಕ್ಷತ್ರಿಯವಂಶದಲ್ಲಿ ಜನಿಸಿದ ದೇವಪುತ್ರನೇ ಇರಬೇಕೆಂಬುದು ನನ್ನ ಭಾವನೆಯಾಗಿದೆ. ಇವನು ಅನ್ಯಕುಲ ದವನೆಂದು ವಿಖ್ಯಾತನಾಗಬೇಕೆಂಬ ಅಭಿಪ್ರಾಯದಿಂದಲೇ ಇವನನ್ನು ಯಾರೋ ಎಲ್ಲಿಯೋ ವಿಸರ್ಜಿಸಿರಬೇಕೆಂದು ನಾನು ಭಾವಿಸುತ್ತೇನೆ.

**ಸರ್ವಥಾ ನ ಹ್ಯಯಂ ಶಲ್ಯ ಕರ್ಣಃ ಸೂತಕುಲೋದ್ಭವಃ**

**ಸಕುಣ್ಡಲಂ ಸಕವಚಂ ದೀರ್ಘಬಾಹುಂ ಮಹಾರಥಮ್।**
**ಕಥಮಾದಿತ್ಯಸದೃಶಂ ಮೃಗೀ ವ್ಯಾಘ್ರಂ ಜನಿಷ್ಯತಿ ॥೧೬೧॥**

ಶಲ್ಯರಾಜ! ಕರ್ಣನು ಸರ್ವಥಾ ಸೂತಕುಲದಲ್ಲಿ ಹುಟ್ಟಿದವನಲ್ಲ. ಕುಂಡಲಸಹಿತನಾದ, ಕವಚಯುಕ್ತನಾದ, ದೀರ್ಘಬಾಹುವಾದ, ಮಹಾರಥನಾದ, ಆದಿತ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಬೆಳಗುತ್ತಿರುವ ಕರ್ಣನಿಗೆ ಸೂತಸ್ತ್ರೀಯು ಹೇಗೆ ತಾನೇ ಜನ್ಮವಿತ್ತಾಳು? ಜಿಂಕೆಯ ಹೊಟ್ಟೆಯಲ್ಲಿ ವ್ಯಾಘ್ರವು ಹುಟ್ಟುವುದೇ?

ರಾಜೇಂದ್ರ! ಗಜರಾಜನ ಸೊಂಡಿಲಿನಂತೆ ಇವನಿಗೆ ದಪ್ಪವಾದ ಭುಜಗಳಿರುವುದನ್ನು ನೋಡು. ಸರ್ವಶತ್ರುಗಳನ್ನೂ ಸಂಹಾರಮಾಡಲು ಸಮರ್ಥವಾಗಿರುವ ಇವನ ವಿಶಾಲವಾದ ವಕ್ಷಃಸ್ಥಳವನ್ನು ನೋಡು. ಧರ್ಮಾತ್ಮನಾದ ವೈಕರ್ತನಕರ್ಣನು ಒಬ್ಬ ಸಾಮಾನ್ಯಮನುಷ್ಯನಲ್ಲ. ಕರ್ಣನು ಮಹಾತ್ಮನು; ಪ್ರತಾಪವಂತನು; ಎಲ್ಲಕ್ಕಿಂತಲೂ ಮಿಗಿಲಾಗಿ ಮಹಾತ್ಮನಾದ ಭಾರ್ಗವರಾಮನ ಪ್ರಿಯಶಿಷ್ಯನು."

ಇಳನೆಯ ಅಧ್ಯಾಯವು ಮುಗಿಯಿತು.

ಇಚನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಶಲ್ಯ-ದುರ್ಯೋಧನರ ಸಂಭಾಷಣೆ: ಕರ್ಣನಿಗೆ ಸಾರಥಿಯಾಗಲು ಶಲ್ಯನ ಒಪ್ಪಿಗೆ

ದುರ್ಯೋಧನನು ಶಲ್ಯನೊಡನೆ ಹೇಳುತ್ತಾನೆ:

"ಮದ್ರೇಶ! ಈ ರೀತಿಯಲ್ಲಿ ಹಿಂದೆ ಸರ್ವಲೋಕಪಿತಾಮಹನಾದ ದೇವೋತ್ತಮನಾದ ಭಗವಾನ್ ಬ್ರಹ್ಮದೇವನು ರಥಿಯಾಗಿದ್ದ ರುದ್ರದೇವನಿಗೆ ಸಾರಥ್ಯವನ್ನು ಮಾಡಿದ್ದನು. ಹೀಗೆ ರಥಿಗಿಂತಲೂ ಶ್ರೇಷ್ಠನಾದವನನ್ನೇ ರಥದ ಸಾರಥಿಯನ್ನಾಗಿ ನಿಯಮಿಸುವುದು ಕರ್ತವ್ಯವೇ ಆಗಿರುತ್ತದೆ. (ನಾನು ಹಿಂದೆ ಹೇಳಿದಂತೆ ಕರ್ಣನಿಗಿಂತಲೂ ನೀನು ಶ್ರೇಷ್ಠನಾಗಿರುವೆ.) ಪುರುಷವ್ಯಾಘ್ರನೇ! ಈ ಕಾರಣದಿಂದಲೇ ನೀನು ಕರ್ಣನ ಕುದುರೆಗಳನ್ನು ಯುದ್ಧದಲ್ಲಿ ನಿಯಂತ್ರಿಸು. ದೇವತೆಗಳೆಲ್ಲರೂ ಸೇರಿ ಅತ್ಯಂತಪ್ರಯತ್ನ

ದಿಂದ ಸರ್ವೋತ್ತಮನಾದ ಬ್ರಹ್ಮನನ್ನು ರುದ್ರನ ಸಾರಥ್ಯಕ್ಕೆ ಆರಿಸಿಕೊಂಡಂತೆ ನಾವೂ ಸಹ ಪ್ರಯತ್ನಪೂರ್ವಕವಾಗಿ ಕರ್ಣನಿಗಿಂತಲೂ ಅಧಿಕನಾಗಿರುವ ನಿನ್ನನ್ನೇ ಕರ್ಣನ ಸಾರಥಿಯನ್ನಾಗಿ ಆರಿಸಿಕೊಂಡಿರುತ್ತೇವೆ.

ಮಹಾರಾಜ! ದೇವತೆಗಳು ರುದ್ರನಿಗಿಂತಲೂ ಅಧಿಕನಾದ ಬ್ರಹ್ಮನನ್ನು ಸಾರಥ್ಯಕ್ಕಾಗಿ ಆರಿಸಿಕೊಂಡಂತೆ ನಾವು ನಿನ್ನನ್ನು ಕರ್ಣನ ಸಾರಥ್ಯಕ್ಕೆ ಆರಿಸಿ ಕೊಂಡಿರುತ್ತೇನೆ. ದ್ಯುತಿಮಂತನೇ! ಪಿತಾಮಹನು ಈಶ್ವರನ ಸಾರಥ್ಯಮಾಡಿ ದಂತೆ ಯುದ್ಧದಲ್ಲಿ ನೀನೂ ಸಹ ರಾಧೇಯನ ಕುದುರೆಗಳನ್ನು ನಿಯಂತ್ರಿಸು."

ಶಲ್ಯನು ಉತ್ತರಿಸುತ್ತಾನೆ:

"ನರಶ್ರೇಷ್ಠನೇ! ನಾನೂ ಸಹ ಅಮರಶ್ರೇಷ್ಠರಾದ ಬ್ರಹ್ಮ-ರುದ್ರರ ಅತಿಮಾನುಷವಾದ ದಿವ್ಯಾಖ್ಯಾನವು ಹೇಳಲ್ಪಡುತ್ತಿದ್ದುದನ್ನು ಹಲವು ಬಾರಿ ಕೇಳಿದ್ದೇನೆ. ಯಾವ ರೀತಿಯಲ್ಲಿ ಪಿತಾಮಹನು ಭವನ ಸಾರಥ್ಯವನ್ನು ಮಾಡಿದನು ಮತ್ತು ಯಾವ ರೀತಿಯಲ್ಲಿ ಪರಶಿವನು ಅದ್ಭುತವಾದ ಒಂದೇ ಬಾಣದಿಂದ ತ್ರಿಪುರಗಳ ದೈತ್ಯರೆಲ್ಲರನ್ನೂ ಸಂಪೂರ್ಣವಾಗಿ ಧ್ವಂಸ ಮಾಡಿದನು–ಎಂಬ ಇತಿಹಾಸವನ್ನೂ ಕೇಳಿದ್ದೇನೆ. ಹಿಂದೆ ಯಾವ ರೀತಿಯಲ್ಲಿ ಪಿತಾಮಹನು ಭವನಿಗೆ ಸಾರಥ್ಯಮಾಡಿದನು–ಎಂಬ ವಿಷಯವು ಶ್ರೀಕೃಷ್ಣನಿಗೂ ತಿಳಿದ ವಿಷಯವೇ ಆಗಿದೆ. ಏಕೆಂದರೆ: ಶ್ರೀಕೃಷ್ಣನು ಹಿಂದಿನದನ್ನೂ ಮುಂದಾಗುವುದನ್ನೂ ತತ್ತ್ವತಃ ತಿಳಿದಿರುತ್ತಾನೆ. ಈ ವಿಷಯವನ್ನು ಅವನು ಚೆನ್ನಾಗಿ ತಿಳಿದಿರುವುದರಿಂದಲೇ ದೇವೋತ್ತಮನಾದ ಬ್ರಹ್ಮನು ರುದ್ರನಿಗೆ ಸಾರಥಿಯಾದಂತೆ ಪುರುಷೋತ್ತಮನಾದ ಕೃಷ್ಣನು ಅರ್ಜುನನಿಗೆ ಸಾರಥಿಯಾಗಿದ್ದಾನೆ.

**ಯದಿ ಹನ್ಯಾಚ್ಚ ಕೌನ್ತೇಯಂ ಸೂತಪುತ್ರಃ ಕಥಂಚನ**
**ದೃಷ್ಟ್ವಾ ಪಾರ್ಥಂ ಹಿ ನಿಹತಂ ಸ್ವಯಂ ಯೋತ್ಸ್ಯತಿ ಕೇಶವಃ**
**ಶಙ್ಖಚಕ್ರಗದಾಪಾಣಿರ್ಧಕ್ಷ್ಯತೇ ತವ ವಾಹಿನೀಮ್ ॥೧೦॥**

ಯಾವುದಾದರೂ ರೀತಿಯಲ್ಲಿ ಕರ್ಣನೇನಾದರೂ ಅರ್ಜುನನನ್ನು ಸಂಹರಿಸಿದ್ದೇ ಆದರೆ ಕೃಷ್ಣನು ಸುಮ್ಮನಿದ್ದುಬಿಡುವುದಿಲ್ಲ. ಪಾರ್ಥನು ಹತ ನಾದುದನ್ನು ನೋಡಿ ಕೇಶವನು ತಾನೇ ನಿನ್ನ ಸೈನಿಕರೊಡನೆ ಯುದ್ಧ ಮಾಡುತ್ತಾನೆ. ಶಂಖ-ಚಕ್ರ-ಗದಾಪಾಣಿಯಾದ ಶ್ರೀಕೃಷ್ಣನು ನಿನ್ನ ಸೈನ್ಯ

ವನ್ನು ದಹಿಸಿಬಿಡುತ್ತಾನೆ. ಮಹಾತ್ಮನಾದ, ಪರಮಕ್ರುದ್ಧನಾದ ಶ್ರೀಕೃಷ್ಣನು ಸ್ವಯಂ ಯುದ್ಧವನ್ನು ಆರಂಭಿಸಿಬಿಟ್ಟರೆ ಅವನ ಎದುರು ಪಕ್ಷದಲ್ಲಿ (ನಿನ್ನ ಪಕ್ಷದಲ್ಲಿ) ಅವನನ್ನೆದುರಿಸಿ ಯಾವ ರಾಜನೂ ರಣರಂಗದಲ್ಲಿ ನಿಲ್ಲಲಾರನು."

ಧೃತರಾಷ್ಟ್ರಮಹಾರಾಜ! ಹೀಗೆ ಮಾತನಾಡುತ್ತಿದ್ದ ಮದ್ರರಾಜನನ್ನು ಕುರಿತು ಶತ್ರುಹಂತಕನಾದ ಮಹಾಬಾಹುವಾದ, ಧೀರನಾದ ನಿನ್ನ ಮಗನು ಹೇಳಿದನು:

"ಮಹಾಬಾಹುವೇ! ಸರ್ವಶಾಸ್ತ್ರಾರ್ಥಪಾರಂಗತನಾದ, ಸರ್ವಶಸ್ತ್ರ ಧಾರಿಗಳಲ್ಲಿಯೂ ಶ್ರೇಷ್ಠನಾದ ವೈಕರ್ತನಕರ್ಣನನ್ನು ಅವಮಾನಮಾಡಬೇಡ. (ಕರ್ಣನ ಪರಾಕ್ರಮದ ವಿಷಯದಲ್ಲಿ ತಿರಸ್ಕಾರಭಾವದಿಂದ ಮಾತನಾಡ ಬೇಡ.) ಕರ್ಣನ ಧನುಸ್ಸಿನ ಮೌರ್ವಿಯ ಅತಿಭಯಂಕರವಾದ ಶಬ್ದವನ್ನು ಕೇಳುತ್ತಲೇ ಪಾಂಡವರ ಸೈನಿಕರು ಹತ್ತು ದಿಕ್ಕುಗಳಿಗೂ ಓಡಿಹೋಗುತ್ತಾರೆ. ಮಹಾಬಾಹುವೇ! ಅಂದು ರಾತ್ರಿಯ ಯುದ್ಧದಲ್ಲಿ ನೂರಾರು ಮಾಯೆಗಳನ್ನು ಸೃಷ್ಟಿಸುತ್ತಿದ್ದ ಮಾಯಾವಿಯಾದ ಘಟೋತ್ಕಚನನ್ನು ಈ ಕರ್ಣನು ನಿನ್ನ ಸಮಕ್ಷದಲ್ಲಿಯೇ ಸಂಹರಿಸಿದನು. ಇಷ್ಟು ದಿವಸಗಳವರೆಗೂ ಕರ್ಣನ ಭಯದಿಂದ ಪೀಡಿತನಾಗಿದ್ದ ಅರ್ಜುನನು ಒಂದು ಬಾರಿಯಾದರೂ ಕರ್ಣನನ್ನು ಎದುರಿಸಿ ಯುದ್ಧಕ್ಕೆ ನಿಲ್ಲಲಿಲ್ಲ. ಮಹಾಬಲಿಷ್ಠನೆಂದು ಖ್ಯಾತನಾದ ಭೀಮಸೇನನನ್ನೂ ಕರ್ಣನು ಧನುಸ್ಸಿನ ತುದಿಯಿಂದ ಚುಚ್ಚಿದನು. ಧೀರನಾದ ಕರ್ಣನು 'ಮೂಢ! ಹೊಟ್ಟೆಬಾಕ!' ಎಂದೂ ಭೀಮಸೇನನನ್ನು ಮೂದಲಿಸಿದನು. ಮಹಾಶೂರರಾದ ಮಾದ್ರಿಯ ಮಕ್ಕಳನ್ನೂ ಕರ್ಣನು ಜಯಿಸಿದನು. ಆದರೆ ಯಾವುದೋ ಉದ್ದೇಶವನ್ನು ಪುರಸ್ಕರಿಸಿ ಅವರನ್ನಿವನು ಸಂಹರಿಸಲಿಲ್ಲ. ಸಾತ್ವತರಲ್ಲಿ ಶ್ರೇಷ್ಠನಾದ, ವೃಷ್ಣಿಪ್ರವೀರನಾದ ಸಾತ್ಯಕಿಯನ್ನು ಜಯಿಸಿ ಬಲಪೂರ್ವಕವಾಗಿ ಅವನನ್ನು ರಥಹೀನನನ್ನಾಗಿಯೂ ಮಾಡಿದನು. ಇದೂ ಅಲ್ಲದೇ ಧೃಷ್ಟದ್ಯುಮ್ನನೇ ಮೊದಲಾದ ಸಕಲಸೃಂಜಯಯೋಧರನ್ನೂ ರಣಾಂಗಣದಲ್ಲಿ ನಗು-ನಗುತ್ತಲೇ ಹಲವು ಬಾರಿ ಪರಾಜಯಗೊಳಿಸಿರುವನು.

**ತಂ ಕಥಂ ಪಾಣ್ಡವಾ ಯುದ್ಧೇ ವಿಜೇಷ್ಯನ್ತಿ ಮಹಾರಥಮ್**
**ಯೋ ಹನ್ಯಾತ್ಸಮರೇ ಕ್ರುದ್ಧೋ ವಜ್ರಹಸ್ತಂ ಪುರಂದರಮ್ ॥೨೧॥**

ಯಾವ ಕರ್ಣನು ಕುಪಿತನಾದರೆ ಯುದ್ಧದಲ್ಲಿ ವಜ್ರಹಸ್ತನಾದ

ಪುರಂದರನನ್ನೇ ಸಂಹಾರಮಾಡಬಲ್ಲನೋ–ಮಹಾರಥನಾದ ಅಂತಹ ಕರ್ಣನನ್ನು ಪಾಂಡವರು ಯುದ್ಧದಲ್ಲಿ ಹೇಗೆ ತಾನೇ ಜಯಿಸುತ್ತಾರೆ?

**ತ್ವಂ ಚ ಸರ್ವಾಸ್ತ್ರವಿದ್ವೀರಃ ಸರ್ವವಿದ್ಯಾಸ್ತ್ರಪಾರಗಃ।**
**ಬಾಹುವೀರ್ಯೇಣ ತೇ ತುಲ್ಯಃ ಪೃಥಿವ್ಯಾಂ ನಾಸ್ತಿ ಕಶ್ಚನ ॥೨೨॥**

ನೀನೂ ಸರ್ವಾಸ್ತ್ರಗಳನ್ನೂ ತಿಳಿದಿರತಕ್ಕವನು; ಮಹಾವೀರನು; ಸಕಲ ವಿದ್ಯೆಗಳಲ್ಲಿಯೂ ಅಸ್ತ್ರಗಳಲ್ಲಿಯೂ ಪಾರಂಗತನಾದವನು. ಬಾಹುವೀರ್ಯದಲ್ಲಿ ನಿನಗೆ ಸಮಾನನಾದವನು ಈ ವಿಶ್ವದಲ್ಲಿಯೇ ಮತ್ತೊಬ್ಬನಿಲ್ಲ.

ಶತ್ರುಗಳಿಗೆ ನೀನು ಕಂಟಕಪ್ರಾಯನಾಗಿರುವೆ. ಪರಾಕ್ರಮದಲ್ಲಿ ಶತ್ರುಗಳಿಗೆ ಸಹಿಸಿಕೊಳ್ಳಲು ಅಸಾಧ್ಯನಾದವನು. ಅರಿಸೂದನನೇ! ಈ ಕಾರಣದಿಂದಲೇ ನೀನು 'ಶಲ್ಯ' ಎಂಬ ಅನ್ವರ್ಥನಾಮದಿಂದಲೇ ಪ್ರಸಿದ್ಧನಾಗಿರುವೆ. ಎಲ್ಲ ಸಾತ್ವತರೂ ಸಂಘಟಿತರಾದರೂ ನಿನ್ನ ಬಾಹುಬಲದ ಎದುರಿನಲ್ಲಿ ನಿಲ್ಲಲು ಸಮರ್ಥರಲ್ಲ. ಹೀಗಿರುವಾಗ ನಿನ್ನ ಬಾಹುಬಲ-ಪರಾಕ್ರಮಗಳಿಗಿಂತಲೂ ಶ್ರೀಕೃಷ್ಣನ ಬಾಹುಬಲ-ಪರಾಕ್ರಮಗಳು ಹೆಚ್ಚಿನದಾಗುವುವೇ? ನಿನ್ನ ಅಭಿಪ್ರಾಯದಂತೆ ಅರ್ಜುನನು ಹತನಾಗಿ ಶ್ರೀಕೃಷ್ಣನು ಪಾಂಡವರ ಸೈನ್ಯದ ರಕ್ಷಣೆಯ ಭಾರವನ್ನು ವಹಿಸಿಕೊಳ್ಳುವುದಾದರೆ, ಕರ್ಣನ ಅವಸಾನವಾದರೆ ನಮ್ಮ ಮಹಾಸೈನ್ಯದ ರಕ್ಷಣಾಭಾರವನ್ನು ನೀನೇ ವಹಿಸಿಕೊಳ್ಳಬೇಕು. ವಾಸುದೇವನು ಮಾಡುವುದೇನು? ನೀನು ಮಾಡದೇ ಇರುವುದೇನು?

ಯಾವ ಕಾರಣದಿಂದ ಶ್ರೀಕೃಷ್ಣನು ಯುದ್ಧದಲ್ಲಿ ನಮ್ಮ ಸೈನ್ಯವನ್ನು ತಡೆದು ನಿಲ್ಲಿಸುತ್ತಾನೆ? ಯಾವ ಕಾರಣದಿಂದ ನೀನು ಶತ್ರುಗಳ ಸೈನ್ಯವನ್ನು ಸಂಹರಿಸುವುದಿಲ್ಲ? (ಅರ್ಜುನನು ಅವಸಾನಹೊಂದಿದನಂತರ ಶ್ರೀಕೃಷ್ಣನು ನಮ್ಮ ಸೈನ್ಯವನ್ನು ಧ್ವಂಸಮಾಡುವುದಾದರೆ ನೀನೂ ಅವರ ಸೈನ್ಯವನ್ನು ಧ್ವಂಸಮಾಡುವೆಯಲ್ಲವೇ?) ನನ್ನ ವಿಷಯವಾಗಿ ಹೇಳುವುದಾದರೆ ನಾನು ನಿನ್ನ ಸಲುವಾಗಿ ನನ್ನ ಸೋದರರ, ವೀರರ ಮತ್ತು ಸರ್ವಮಹೀಪಾಲರ ಹಾದಿಯನ್ನೇ ಹಿಡಿದು ಹೋಗಲು ಇಚ್ಛಿಸಿದ್ದೇನೆ. (ನಿನ್ನ ಸಲುವಾಗಿ ಪ್ರಾಣಗಳನ್ನಾದರೂ ಬಿಡಲು ಸಿದ್ಧನಾಗಿದ್ದೇನೆ.)"

ದುರ್ಯೋಧನನ ಮಾತುಗಳನ್ನು ಕೇಳಿ ಪರಮಪ್ರೀತನಾದ ಶಲ್ಯನು ಹೇಳುತ್ತಾನೆ:

"ಮಾನದನೇ! ಗಾಂಧಾರೀಪುತ್ರನೇ! ಈ ಸೈನ್ಯದ ಅಗ್ರಭಾಗದಲ್ಲಿ (ಸರ್ವಸೈನಿಕರ ಸಮ್ಮುಖದಲ್ಲಿ) ನೀನು ನನ್ನನ್ನು ದೇವಕಿಯ ಮಗನಾದ ಕೃಷ್ಣನಿಗಿಂತಲೂ ವಿಶಿಷ್ಟನಾದವನೆಂದು ಹೇಳಿದುದರಿಂದ ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿದ್ದೇನೆ. ಪಾಂಡವಾಗ್ರ್ಯನಾದ ಅರ್ಜುನನೊಡನೆ ಯುದ್ಧಮಾಡುವ ಸಮಯದಲ್ಲಿ ನಿನ್ನ ಅಭಿಪ್ರಾಯದಂತೆಯೇ ನಾನು ಕರ್ಣನ ಸಾರಥ್ಯವನ್ನು ಮಾಡುತ್ತೇನೆ. ಆದರೆ ಒಂದು ನಿಬಂಧನೆಯೊಡನೆ ನಾನು ಈ ಸಾರಥ್ಯವನ್ನು ಒಪ್ಪಿಕೊಳ್ಳುತ್ತೇನೆ. ಇವನ ಸಮೀಪದಲ್ಲಿ ನಾನು ಮನಬಂದಂತೆ ಮಾತನಾಡುತ್ತೇನೆ. (ನಾನು ನನ್ನ ಮನಸ್ಸಿಗೆ ತೋಚಿದಂತೆ ಯಾವುದೇ ಮಾತುಗಳನ್ನಾಡಿದರೂ ಇವನು ಆಕ್ಷೇಪಿಸಬಾರದು.)"

ಮಹಾರಾಜ! ನಿನ್ನ ಮಗನು ಕರ್ಣನೊಡನೆ ಶಲ್ಯನ ನಿಬಂಧನೆಗೆ ಸಮ್ಮತಿಸಿ ಎಲ್ಲ ರಾಜರ ಸಮ್ಮುಖದಲ್ಲಿ ಶಲ್ಯನೊಡನೆ 'ನಾನು ನಿನ್ನ ನಿಬಂಧನೆಗೆ ಒಪ್ಪಿದ್ದೇನೆ'–ಎಂದೂ ಹೇಳಿದನು. ಕರ್ಣನಿಗೆ ಸಾರಥ್ಯಮಾಡಲು ಶಲ್ಯನು ಆಶ್ವಾಸನೆಯನ್ನು ಕೊಟ್ಟನಂತರ ದುರ್ಯೋಧನನು ಪರಮಹೃಷ್ಟನಾಗಿ ಕರ್ಣನನ್ನು ಆಲಿಂಗನೆಮಾಡಿಕೊಂಡನು. ಆ ಸಮಯದಲ್ಲಿ ವಂದಿಜನರಿಂದ ಸ್ತೋತ್ರಮಾಡಲ್ಪಡುತ್ತಿದ್ದ ನಿನ್ನ ಮಗನು ಕರ್ಣನನ್ನು ಕುರಿತು ಹೇಳಿದನು:

"ಕರ್ಣ! ಮಹೇಂದ್ರನು ದಾನವರನ್ನು ಸಂಹರಿಸಿದಂತೆ–ನೀನು ಎಲ್ಲ ಪಾರ್ಥರನ್ನೂ ಸಂಹರಿಸು."

ಕರ್ಣನ ರಥದ ಕುದುರೆಗಳನ್ನು ನಿಯಂತ್ರಿಸಲು ಶಲ್ಯನು ಒಪ್ಪಿಗೆ ಕೊಟ್ಟನೆಂಬುದು ತಿಳಿದನಂತರ ಕರ್ಣನೂ ಸಹ ಪರಮಹೃಷ್ಟನಾಗಿ ದುರ್ಯೋಧನನೊಡನೆ ಹೇಳಿದನು: "ದುರ್ಯೋಧನ! ಮದ್ರರಾಜನಾದ ಶಲ್ಯನು ಅತ್ಯಂತಸಂತೋಷದಿಂದ ನನ್ನ ಸಾರಥ್ಯವನ್ನು ಒಪ್ಪಿಕೊಂಡಂತೆ ಮಾತನಾಡುತ್ತಿಲ್ಲ. ಪುನಃ ಅವನೊಡನೆ ಮಧುರವಾದ ಮಾತುಗಳನ್ನಾಡಿ ಪೂರ್ಣಮನಸ್ಸಿನಿಂದಲೂ, ಪೂರ್ಣಸಂತೋಷದಿಂದಲೂ ಅವನು ಈ ಕಾರ್ಯವನ್ನು ವಹಿಸಿಕೊಳ್ಳುವಂತೆ ಹೇಳು."

ಅನಂತರ ಸರ್ವಾಸ್ತ್ರಕುಶಲನಾದ, ಬಲಿಷ್ಠನಾದ, ಮಹಾಪ್ರಾಜ್ಞನಾದ ದುರ್ಯೋಧನನು ಮಹೀಪತಿಯಾದ ಮದ್ರರಾಜನೊಡನೆ ತನ್ನ ಧ್ವನಿಯಿಂದ ಆ ಪ್ರದೇಶವನ್ನೇ ತುಂಬಿಬಿಡುವನೋ ಎಂಬಂತೆ–ಮೇಘದ ಶಬ್ದಕ್ಕೆ ಸಮಾನವಾದ ಗಂಭೀರಧ್ವನಿಯಲ್ಲಿ ಹೇಳಿದನು:

"ಶಲ್ಯರಾಜ! ಕರ್ಣನೀಗ ಅರ್ಜುನನೊಡನೆ ಯುದ್ಧಮಾಡಬೇಕೆಂದು ಭಾವಿಸಿದ್ದಾನೆ. ಪುರುಷವ್ಯಾಘ್ರನೇ! ಆದುದರಿಂದ ಯುದ್ಧದಲ್ಲಿ ನೀನು ಅವನ ಕುದುರೆಗಳನ್ನು ನಿಯಂತ್ರಿಸು. (ಸಾರಥ್ಯಕ್ಕೆ ಸಿದ್ಧನಾಗು.) ಈ ದಿನ ಕರ್ಣನು ಪಾಂಡವರ ಕಡೆಯ ಎಲ್ಲ ಯೋಧರನ್ನೂ ಸಂಹರಿಸಿ ಅನಂತರ ಅರ್ಜುನನನ್ನು ಸಂಹರಿಸಲು ಇಚ್ಛಿಸಿದ್ದಾನೆ. ಅವನ ರಥದಲ್ಲಿರುವ ಕುದುರೆಗಳ ಲಗಾಮು ಗಳನ್ನು ಹಿಡಿಯಲು ನಿನ್ನನ್ನು ಪುನಃ ಪುನಃ ಪ್ರಾರ್ಥಿಸಿಕೊಳ್ಳುತ್ತೇನೆ. ಯಾವ ರೀತಿಯಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಶ್ರೇಷ್ಠಸಚಿವನೂ ಮತ್ತು ಸಾರಥಿಯೂ ಆಗಿರುವನೋ–ಅದೇ ರೀತಿಯಲ್ಲಿ ನೀನೂ ಸಹ ಕರ್ಣನಿಗೆ ಶ್ರೇಷ್ಠನಾದ ಸಲಹೆಗಾರನೂ ಮತ್ತು ಸಾರಥಿಯೂ ಆಗಿ ಅವನನ್ನು ಸಂರಕ್ಷಿಸು."

ಧೃತರಾಷ್ಟ್ರಮಹಾರಾಜ! ಅನಂತರ ದುರ್ಯೋಧನನ ಸವಿಮಾತುಗಳಿಂದ ಪರಮಪ್ರೀತನಾದ, ಮದ್ರಾಧಿಪತಿಯಾದ ಶಲ್ಯನು ಶತ್ರುಹಂತಕನಾದ ನಿನ್ನ ಮಗನನ್ನು ಆಲಿಂಗನೆಮಾಡಿಕೊಂಡು ಈ ಮಾತುಗಳನ್ನು ಹೇಳಿದನು:

"ಪ್ರಿಯದರ್ಶನನೇ! ಗಾಂಧಾರೀಪುತ್ರ! ನೀನು ನನ್ನನ್ನು ಹೀಗೆ ಭಾವಿಸುವೆಯಾದರೆ ನಿನಗೆ ಪ್ರಿಯವಾದ ಅಲ್ಪ-ಸ್ವಲ್ಪ ಕಾರ್ಯಗಳು ಯಾವುವು ಇವೆಯೋ ಆ ಎಲ್ಲ ಕಾರ್ಯಗಳನ್ನೂ ನಾನು ಖಂಡಿತವಾಗಿಯೂ ನಿರ್ವಹಿಸಿ ಕೊಡುತ್ತೇನೆ. ನಾನು ಎಲ್ಲಿ ಯಾವ ಕಾರ್ಯಮಾಡಲು ಯೋಗ್ಯನಾಗಿರು ವೆನೋ ಆ ಕಾರ್ಯಕ್ಕೇ ನೀನು ನನ್ನನ್ನು ಯೋಜಿಸಿದನಂತರ ಆ ಕಾರ್ಯಭಾರವನ್ನು ನಾನು ಸಂಪೂರ್ಣಮನಸ್ಸಿನಿಂದ ಮಾಡುವೆನೆಂಬುದನ್ನು ನಿನಗೆ ಸ್ಪಷ್ಟವಾಗಿ ಹೇಳಬಯಸುತ್ತೇನೆ. ನಮ್ಮ ಪಕ್ಷಕ್ಕೆ ಹಿತವಾಗಬೇಕೆಂದು ಅಪೇಕ್ಷಿಸಿರುವ ನಾನು ಕರ್ಣನನ್ನು ಕುರಿತು, ಅವನಿಗೆ ಪ್ರಿಯವೋ ಅಥವಾ ಅಪ್ರಿಯವೋ ಆದ ಮಾತುಗಳನ್ನು ಹೇಳುವೆನಾದರೆ ಅಂತಹ ಮಾತುಗಳನ್ನು ನೀನೂ ಮತ್ತು ಕರ್ಣನೂ ಸರ್ವಾತ್ಮನಾ ಕ್ಷಮಿಸಿಬಿಡಬೇಕು."

ಶಲ್ಯನು ಹೀಗೆ ಹೇಳಿದನಂತರ ಕರ್ಣನು ಹೇಳುತ್ತಾನೆ:

**ಈಶಾನಸ್ಯ ಯಥಾ ಬ್ರಹ್ಮಾ ಯಥಾ ಪಾರ್ಥಸ್ಯ ಕೇಶವಃ।**
**ತಥಾ ನಿತ್ಯಂ ಹಿತೇ ಯುಕ್ತೋ ಮದ್ರರಾಜ ಭವಸ್ವ ನಃ ॥೪೪॥**

"ಮದ್ರರಾಜ! ತ್ರಿಪುರಾಸುರಯುದ್ಧಸಮಯದಲ್ಲಿ ಈಶ್ವರನಿಗೆ ಬ್ರಹ್ಮನು ಯಾವ ರೀತಿಯಲ್ಲಿ ಹಿತಕರನಾಗಿದ್ದನೋ ಪಾರ್ಥನಿಗೆ ಕೃಷ್ಣನು ಯಾವ ರೀತಿಯಲ್ಲಿ ಹಿತವನ್ನೇ ಮಾಡುತ್ತಿರುವನೋ ಅದೇ ರೀತಿಯಲ್ಲಿ ನೀನೂ ನಮ್ಮ ಹಿತದಲ್ಲಿಯೇ ಸರ್ವದಾ ಆಸಕ್ತನಾಗಿರು."

ಅದಕ್ಕೆ ಉತ್ತರರೂಪವಾಗಿ ಶಲ್ಯನು ಹೇಳುತ್ತಾನೆ:

**ಆತ್ಮನಿನ್ದಾತ್ಮಪೂಜಾ ಚ ಪರನಿನ್ದಾ ಪರಸ್ತವಃ।**
**ಅನಾಚರಿತಮಾರ್ಯಾಣಾಂ ವೃತ್ತಮೇತಚ್ಚತುರ್ವಿಧಮ್ ॥೪೫॥**

"ಕರ್ಣ! ತನ್ನನ್ನು ತಾನೇ ನಿಂದಿಸಿಕೊಳ್ಳುವುದು; ತನ್ನನ್ನು ತಾನೇ ಪ್ರಶಂಸೆಮಾಡಿಕೊಳ್ಳುವುದು; ಇತರರನ್ನು ಯಾವಾಗಲೂ ನಿಂದಿಸುತ್ತಿರುವುದು; ಇತರರನ್ನು ಯಾವಾಗಲೂ ಸ್ತೋತ್ರಮಾಡುತ್ತಿರುವುದು–ಎಂಬ ನಾಲ್ಕು ವಿಧವಾದ ವ್ಯವಹಾರಗಳಿವೆ. ಇಂತಹ ವ್ಯವಹಾರಗಳಲ್ಲಿ ಆರ್ಯರಾದವರು ಖಂಡಿತವಾಗಿಯೂ ತೊಡಗುವುದಿಲ್ಲ. ಆದರೆ ವಿದ್ವಾಂಸನೇ! ನಿನಗೆ ವಿಶ್ವಾಸವುಂಟಾಗಲೆಂಬ ಕಾರಣದಿಂದ ಸ್ವಪ್ರಶಂಸಾರೂಪವಾದ ಮಾತುಗಳನ್ನೂ ನಿನ್ನೊಡನೆ ಹೇಳುತ್ತೇನೆ. ಕೇಳು:

**ಅಹಂ ಶಕ್ರಸ್ಯ ಸಾರಥ್ಯೇ ಯೋಗ್ಯೋ ಮಾತಲಿವತ್ಪ್ರಭೋ।**
**ಅಪ್ರಮಾದಾತ್ಪ್ರಯೋಗಾಚ್ಚ ಜ್ಞಾನವಿದ್ಯಾಚಿಕಿತ್ಸನೈಃ ॥೪೬॥**

ಪ್ರಭೋ ಕರ್ಣ! ನಾನು ಪ್ರಮಾದವಿಲ್ಲದೇ ಇರುವಿಕೆ, ಅಶ್ವಸಂಚಾಲನಜ್ಞಾನ, ವಿದ್ಯೆ ಮತ್ತು ಚಿಕಿತ್ಸೆ–ಇವೇ ಮುಂತಾದ ಸಾರಥ್ಯಕ್ಕೆ ಸಂಬಂಧಿಸಿದ ಗುಣಗಳಲ್ಲಿ ಇಂದ್ರನ ಸಾರಥ್ಯವನ್ನು ಮಾಡುವ ಮಾತಲಿಗೆ ಸಮಾನನಾಗಿ ಸಾರಥ್ಯವನ್ನು ಮಾಡಲು ಅರ್ಹನಾಗಿರುತ್ತೇನೆ.

ಆದುದರಿಂದ ಪಾರ್ಥನೊಡನೆ ಯುದ್ಧಮಾಡುವಾಗ ನಿನ್ನ ಕುದುರೆಗಳನ್ನು ನಾನು ನಡೆಸುತ್ತೇನೆ. ನಿನ್ನ ಆತಂಕವನ್ನು ದೂರಮಾಡು. (ನಿಶ್ಚಿಂತೆಯಿಂದಿರು.)"

ಇ೫ನೆಯ ಅಧ್ಯಾಯವು ಮುಗಿಯಿತು.

೩೭ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣನು ಯುದ್ಧಕ್ಕೆ ಹೊರಟುದು: ಕರ್ಣ-ಶಲ್ಯರ ಸಂಭಾಷಣೆ

ದುರ್ಯೋಧನನು ಕರ್ಣನಿಗೆ ಹೇಳುತ್ತಾನೆ:

"ಕರ್ಣ! ಸಾರಥ್ಯದಲ್ಲಿ ಕೃಷ್ಣನಿಗೂ ಅಧಿಕನಾದ, ಇಂದ್ರನ ಸಾರಥಿಯಾದ ಮಾತಲಿಗೆ ಸಮಾನನಾದ ಈ ಮದ್ರರಾಜನು ನಿನಗೆ ಸಾರಥ್ಯವನ್ನು ಮಾಡುತ್ತಾನೆ. ಯಾವ ರೀತಿಯಲ್ಲಿ ಮಾತಲಿಯು ಇಂದ್ರನ ಕುದುರೆಗಳ ಕಡಿವಾಣಗಳನ್ನು ಕೈಗೆತ್ತಿಕೊಳ್ಳುವನೋ–ಅದೇ ರೀತಿಯಲ್ಲಿ ಶಲ್ಯನು ನಿನ್ನ ಕುದುರೆಗಳ ಕಡಿವಾಣಗಳನ್ನು ಹಿಡಿದು ಅವುಗಳನ್ನು ನಿಯಂತ್ರಿಸುತ್ತಾನೆ. ಮಹಾಯೋಧನಾದ ನೀನು ರಥಸ್ಥನಾಗಿರಲಾಗಿ, ಮದ್ರರಾಜನಾದ ಶಲ್ಯನು ಸಾರಥಿಯಾಗಿರಲಾಗಿ, ನಿನ್ನ ಶ್ರೇಷ್ಠರಥವು ಯುದ್ಧದಲ್ಲಿ ನಿಶ್ಚಯವಾಗಿಯೂ ಪಾಂಡವರನ್ನು ಪರಾಜಯಗೊಳಿಸುತ್ತದೆ."

ಧೃತರಾಷ್ಟ್ರಮಹಾರಾಜ! ಪ್ರಾತಃಕಾಲದಲ್ಲಿ ಯುದ್ಧದ ಸಮಯವು ಸನ್ನಿಹಿತವಾಗಲಾಗಿ ಪುನಃ ದುರ್ಯೋಧನನು ವೇಗಶಾಲಿಯಾದ ಶಲ್ಯನನ್ನು ಕುರಿತು ಹೇಳಿದನು:

"ಮದ್ರರಾಜ! ಯುದ್ಧಸಮಯದಲ್ಲಿ ಕರ್ಣನ ಶ್ರೇಷ್ಠವಾದ ಕುದುರೆಗಳನ್ನು ನಿಯಂತ್ರಿಸು. ನಿನ್ನಿಂದ ರಕ್ಷಿತನಾದ ರಾಧೇಯನು ಧನಂಜಯನನ್ನು ಖಂಡಿತವಾಗಿಯೂ ಜಯಿಸುತ್ತಾನೆ." ದುರ್ಯೋಧನನು ಹೀಗೆ ಹೇಳಲಾಗಿ ಶಲ್ಯನು ರಥವನ್ನು ಸ್ಪರ್ಶಿಸಿ ಹಾಗೆಯೇ ಆಗಲೆಂದನು. ಶಲ್ಯನು ಕರ್ಣನ ಸಾರಥ್ಯವನ್ನು ಅಂಗೀಕರಿಸಿದನಂತರ ಕರ್ಣನು ಪ್ರಸನ್ನಚಿತ್ತನಾಗಿ ತನ್ನ ಹಿಂದಿನ ಸಾರಥಿಯೊಡನೆ ಅವಸರದಿಂದ ಹೇಳಿದನು:

"ಸೂತ! ನನ್ನ ರಥವನ್ನು ಒಡನೆಯೇ ಸಜ್ಜುಗೊಳಿಸು." ಕರ್ಣನ ಆಜ್ಞೆಯಂತೆ ಸಾರಥಿಯು ಗಂಧರ್ವನಗರದಂತೆ ವಿಶಾಲವಾಗಿದ್ದ, ಜಯಶೀಲವಾಗಿದ್ದ, ಮಂಗಳಕರವಾದ ರಥವನ್ನು ಸಕಲಸಂಭಾರಗಳಿಂದಲೂ ವಿಧಿವತ್ತಾಗಿ ಸಜ್ಜುಗೊಳಿಸಿ ಕರ್ಣನ ಬಳಿಗೆ ಬಂದು 'ಸ್ವಾಮಿನ್! ನಿನಗೆ ಮಂಗಳವಾಗಲಿ. ವಿಜಯಿಯಾಗು. ರಥವು ಸಿದ್ಧವಾಗಿದೆ'–ಎಂದು ನಿವೇದಿಸಿದನು.

ಅದಕ್ಕೆ ಮೊದಲೇ ಬ್ರಹ್ಮವಿದರಾದ ಪುರೋಹಿತರ ಸ್ವಸ್ತಿವಾಚನಗಳಿಂದ ಸಂಪ್ರೋಕ್ಷಿಸಲ್ಪಟ್ಟಿದ್ದ, ಪರಿಶುದ್ಧವಾದ ಮತ್ತು ಸಕಲವಿಧವಾದ ಯುದ್ಧಸಾಮಗ್ರಿ ಗಳಿಂದಲೂ ಸಮೃದ್ಧವಾಗಿದ್ದ ರಥವನ್ನು ಕರ್ಣನು ಯಥಾವಿಧಿಯಾಗಿ ಸಂಪೂಜಿಸಿ ಪ್ರದಕ್ಷಿಣೆಮಾಡಿ, ಪ್ರಯತ್ನಪೂರ್ವಕವಾಗಿ ಸೂರ್ಯೋಪಸ್ಥಾನ ಮಾಡಿ, ಅನಂತರ ತನ್ನ ಸಮೀಪದಲ್ಲಿದ್ದ ಮದ್ರರಾಜನಿಗೆ ಮೊದಲು ರಥಾರೋಹಣಮಾಡುವಂತೆ ಪ್ರಾರ್ಥಿಸಿದನು. ಕರ್ಣನ ಮಾತಿನಂತೆ ಮಹಾತೇಜಸ್ವಿಯಾದ ಶಲ್ಯನು–ಸಿಂಹವು ಪರ್ವತವನ್ನು ಹತ್ತುವಂತೆ–ದುರ್ಧರ್ಷವಾದ, ವಿಶಾಲವಾದ ಮತ್ತು ಶ್ರೇಷ್ಠವಾದ ಕರ್ಣನ ರಥವನ್ನು ಹತ್ತಿದನು. ತನ್ನ ರಥವು ಶಲ್ಯನ ಆಶ್ರಯವನ್ನು ಪಡೆದುದನ್ನು ಕಂಡು ಕರ್ಣನು–ವಿದ್ಯುತ್ತಿನಿಂದ ಕೂಡಿದ ಮೇಘಗಳ ಮೇಲೆ ಸೂರ್ಯನು ಪ್ರತಿಷ್ಠಿತನಾಗುವಂತೆ–ಶ್ರೇಷ್ಠವಾದ ರಥದಲ್ಲಿ ಉಪವಿಷ್ಟನಾದನು. ಸೂರ್ಯಾಗ್ನಿ ಗಳು ಒಟ್ಟಾಗಿ ಆಕಾಶದಲ್ಲಿರುವ ಮೇಘಮಂಡಲದ ಮೇಲೆ ಪ್ರಕಾಶಿಸು ವಂತೆ–ಒಂದೇ ರಥದಲ್ಲಿ ಕುಳಿತಿದ್ದ, ಸೂರ್ಯಾಗ್ನಿಗಳ ಕಾಂತಿಗೆ ಸಮಾನವಾದ ಕಾಂತಿಯನ್ನು ಹೊಂದಿದ್ದ ಕರ್ಣ-ಶಲ್ಯರು ಪ್ರಕಾಶಿಸಿದರು. ಯಜ್ಞದಲ್ಲಿ ಋತ್ವಿಜರೂ ಮತ್ತು ಸದಸ್ಯರೂ ಇಂದ್ರಾಗ್ನಿಗಳನ್ನು ಮಹಾಮಂತ್ರಗಳ ಮೂಲಕವಾಗಿ ಸ್ತೋತ್ರಮಾಡುವಂತೆ–ವಿಶೇಷವಾದ ಕಾಂತಿಯಿಂದ ಬೆಳಗುತ್ತಿದ್ದ ವೀರರಾದ ಕರ್ಣ-ಶಲ್ಯರನ್ನು ವಂದಿ-ಮಾಗಧರು ಸ್ತೋತ್ರ ಮಾಡುತ್ತಿದ್ದರು. ಶಲ್ಯನಿಂದ ನಿಯಂತ್ರಿಸಲ್ಪಡುತ್ತಿದ್ದ ಕುದುರೆಗಳಿಂದ ಸಜ್ಜಾಗಿದ್ದ ರಥದಲ್ಲಿ ಕುಳಿತಿದ್ದ ಕರ್ಣನು ತನ್ನ ಘೋರವಾದ ಧನುಸ್ಸನ್ನು ಟೇಂಕರಿಸುತ್ತಾ–ಪರಿವೇಷದಿಂದ ಯುಕ್ತನಾದ ಸೂರ್ಯನಂತೆಯೇ– ಪ್ರಕಾಶಿ ಸುತ್ತಿದ್ದನು. ಆ ಶ್ರೇಷ್ಠವಾದ ರಥದಲ್ಲಿ ಕುಳಿತಿದ್ದ, ಬಾಣಗಳೆಂಬ ಕಿರಣಗಳಿಂದ ಯುಕ್ತನಾಗಿದ್ದ, ಪುರುಷಸಿಂಹನಾದ ಕರ್ಣನು–ಮಂದರಪರ್ವತದ ಮೇಲಿರುವ ಸೂರ್ಯನಂತೆಯೇ ಕಾಣುತ್ತಿದ್ದನು. ಪಾಂಡವರೊಡನೆ ಯುದ್ಧ ಮಾಡುವ ಸಲುವಾಗಿ ಆ ಮಹಾರಥದಲ್ಲಿ ಕುಳಿತು ಹೊರಟಿದ್ದ ಮಹಾಬಾಹುವಾದ, ಮಹಾತೇಜಸ್ವಿಯಾದ ರಾಧೇಯನನ್ನು ಕುರಿತು ದುರ್ಯೋಧನನು ಹೇಳಿದನು:

**ಅಕೃತಂ ದ್ರೋಣಭೀಷ್ಮಾಭ್ಯಾಂ ದುಷ್ಕರಂ ಕರ್ಮ ಸಂಯುಗೇ।**
**ಕುರುಷ್ವಾಧಿರಥೇ ವೀರ ಮಿಷತಾಂ ಸರ್ವಧನ್ವಿನಾಮ್ ॥೧೭॥**

"ವೀರಕರ್ಣ! ಇಂದಿನ ಯುದ್ಧದಲ್ಲಿ ಎಲ್ಲ ಧನುಷ್ಮಂತರ ಸಮಕ್ಷದಲ್ಲಿ ದ್ರೋಣ-ಭೀಷ್ಮರಿಬ್ಬರೂ ಮಾಡದೇ ಇರುವ ದುಷ್ಕರವಾದ ಕರ್ಮವನ್ನು ನೀನು ಮಾಡಿ ತೋರಿಸಬೇಕು.

ಮಹಾರಥರಾದ ಭೀಷ್ಮ-ದ್ರೋಣರು ಅರ್ಜುನ-ಭೀಮರನ್ನು ಸಂಹರಿಸುವರೆಂಬ ದೃಢವಾದ ನಿಶ್ಚಯವು ನನ್ನ ಮನಸ್ಸಿನಲ್ಲಿದ್ದಿತು. ಆದರೆ ಅವರು ಹಾಗೆ ಮಾಡಲಿಲ್ಲ. ಇಂದಿನ ಮಹಾಯುದ್ಧದಲ್ಲಿ ಅವರು ಮಾಡದೇ ಇರುವ ವೀರಕರ್ಮವನ್ನು ವಜ್ರಪಾಣಿಯಾದ ಬೇರೊಬ್ಬ ಇಂದ್ರನಂತೆ ಮಾಡಿ ತೋರಿಸು.

**ಗೃಹಾಣ ಧರ್ಮರಾಜಂ ವಾ ಜಹಿ ವಾ ತ್ವಂ ಧನಂಜಯಮ್।**
**ಭೀಮಸೇನಂ ಚ ರಾಧೇಯ ಮಾದ್ರೀಪುತ್ರೌ ಯಮಾವಪಿ ॥೨೦॥**

ಧರ್ಮರಾಜನನ್ನಾದರೂ ನೀನು ಜೀವಗ್ರಹಣಮಾಡು. (ಜೀವಸಹಿತವಾಗಿ ಸೆರೆಹಿಡಿದುಕೊಂಡು ಬಾ) ಅಥವಾ ಧನಂಜಯ, ಭೀಮಸೇನ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರು–ಇವರನ್ನಾದರೂ ನಾಶಗೊಳಿಸು. (ಪರಾಜಯಗೊಳಿಸು)

ನಿನಗೆ ಜಯವಾಗಲಿ. ನಿನಗೆ ಮಂಗಳವಾಗಲಿ. ನೀನಿನ್ನು ಯುದ್ಧಕ್ಕೆ ಪ್ರಯಾಣಮಾಡು. ಪಾಂಡುಪುತ್ರನ ಎಲ್ಲ ಸೈನಿಕರನ್ನೂ ಭಸ್ಮೀಭೂತರನ್ನಾಗಿ ಮಾಡು."

ಮಹಾರಾಜ! ದುರ್ಯೋಧನನು ಹೀಗೆ ಹೇಳುತ್ತಿದ್ದಂತೆಯೇ ಆಕಾಶ ದಲ್ಲಾಗುವ ಮೇಘಗಳ ಭಯಂಕರ ಗರ್ಜನೆಯಂತೆ–ಸಾವಿರಾರು ರಣವಾದ್ಯ ಗಳೂ, ಅನೇಕಸಹಸ್ರರಣಭೇರಿಗಳೂ ಮೊಳಗಿದುವು.

ರಥದಲ್ಲಿ ಕುಳಿತಿದ್ದ, ರಥಿಗಳಲ್ಲಿ ಶ್ರೇಷ್ಠನಾದ ಕರ್ಣನು ದುರ್ಯೋಧನನು ಹೇಳಿದ ಮಾತುಗಳನ್ನು ಆದರಪೂರ್ವಕವಾಗಿ ಪರಿಗ್ರಹಿಸಿ ಯುದ್ಧವಿಶಾರದನಾದ ಶಲ್ಯನೊಡನೆ ಹೇಳಿದನು:

"ಮಹಾಬಾಹುವೇ! ಧನಂಜಯನನ್ನೂ, ಭೀಮನನ್ನೂ, ನಕುಲ-ಸಹದೇವರನ್ನೂ ಮತ್ತು ಯುಧಿಷ್ಠಿರನನ್ನೂ ಸಂಹಾರಮಾಡಲು ನನಗೆ ಸಾಧ್ಯವಾಗುವಂತೆ ಕುದುರೆಗಳನ್ನು ನಡೆಸು. ರಣಹದ್ದುಗಳ ರೆಕ್ಕೆಗಳನ್ನು

ಹೊಂದಿರುವ ಲಕ್ಷೋಪಲಕ್ಷ ಬಾಣಗಳನ್ನು ಧನುಸ್ಸಿನಿಂದ ಅವ್ಯಾಹತವಾಗಿ ಬಿಡುವ ನನ್ನ ಬಾಹುವೀರ್ಯವನ್ನು ಇಂದು ಧನಂಜಯನು ನೋಡಲಿ. ಶಲ್ಯ! ಇಂದು ನಾನು ಪಾಂಡವರ ವಿನಾಶಾರ್ಥವಾಗಿಯೂ ಮತ್ತು ದುರ್ಯೋಧನನ ವಿಜಯಾರ್ಥವಾಗಿಯೂ ಹೆಚ್ಚು ಹರಿತವಾದ ಬಾಣಗಳನ್ನು ಶತ್ರುಗಳ ಮೇಲೆ ಸುರಿಸುತ್ತೇನೆ."

"ಸೂತಪುತ್ರ! ಸರ್ವಾಸ್ತ್ರವಿದರಾದ, ಮಹಾಧನುಷ್ಮಂತರಾದ, ಮಹಾ ಬಲರಾದ, ಯುದ್ಧದಲ್ಲಿ ಹಿಂದಿರುಗದ, ಮಹಾಭಾಗರಾದ, ಜಯಿಸಲು ಅಸಾಧ್ಯರಾದ, ಸತ್ಯವಿಕ್ರಮರಾದ ಪಾಂಡವರನ್ನು ನೀನು ಹೇಗೆ ಕೀಳಾಗಿ ತಿಳಿಯುವೆ? (ಪರಾಜಯಗೊಳಿಸುವೆ?) ಪಾಂಡವರು ಸಾಕ್ಷಾತ್ ಇಂದ್ರನಿಗೂ ಭಯವನ್ನುಂಟುಮಾಡಲು ಸಮರ್ಥರಾದವರು. ಯುದ್ಧಸ್ಥಳದಲ್ಲಿ ಸಿಡಿಲಿನ ಧ್ವನಿಗೆ ಸಮಾನವಾದ ಗಾಂಡೀವಧನುಸ್ಸಿನ ಟೇಂಕಾರವನ್ನು ಕೇಳಿದನಂತರ ನೀನು ಹೀಗೆ ಮಾತನಾಡುವುದಿಲ್ಲ. ಭೀಮಸೇನನು ಯುದ್ಧದಲ್ಲಿ ಗಜಸೈನ್ಯ ದೊಳಗೆ ನುಗ್ಗಿ ಆನೆಗಳ ದಂತಗಳನ್ನು ಮುರಿದು ಸಂಹರಿಸುತ್ತಿರುವುದನ್ನು ನೋಡಿದನಂತರ ನೀನು ಹೀಗೆ ಮಾತನಾಡುವುದಿಲ್ಲ. ಯುದ್ಧದಲ್ಲಿ ಹಸ್ತಲಾಘವದಿಂದ ಕೂಡಿರುವ, ದುರಾಸದರಾದ ಯುಧಿಷ್ಠಿರ-ನಕುಲ-ಸಹದೇವರೂ ಮತ್ತು ಇತರ ರಾಜರೂ ಮೋಡಗಳ ನೆಳಲಿನೋಪಾದಿಯಲ್ಲಿ ನಿಶಿತವಾದ ಬಾಣಗಳಿಂದ ಆಕಾಶವನ್ನು ತುಂಬಿಬಿಡುತ್ತಾರೆ. ನಿರಂತರವಾಗಿ ಬಾಣಗಳನ್ನು ಬಿಡುತ್ತಾ ಶತ್ರುಗಳ ಸೈನ್ಯವನ್ನು ಕ್ಷೀಣಗೊಳಿಸುತ್ತಾರೆ. ಆ ದೃಶ್ಯವನ್ನು ನೋಡಿದನಂತರ ನೀನು ಇಂತಹ ಮಾತುಗಳನ್ನಾಡುವುದಿಲ್ಲ."

ಧೃತರಾಷ್ಟ್ರಮಹಾರಾಜ! ತನ್ನನ್ನು ಹಳಿದು ಹೇಳಿದ ಶಲ್ಯನ ಮಾತನ್ನು ಕರ್ಣನು ಉಪೇಕ್ಷಿಸಿದನು. ವೇಗವಂತನಾದ ಮದ್ರರಾಜನು ಹೇಳಿದುದಕ್ಕೆ ಉತ್ತರವಾಗಿ 'ಮುಂದೆ ನಡೆ' ಎಂದು ಮಾತ್ರ ಕರ್ಣನು ಹೇಳಿದನು."

ಜ೬ನೆಯ ಅಧ್ಯಾಯವು ಮುಗಿಯಿತು.

೩೭ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕೌರವಸೈನ್ಯದಲ್ಲಿ ಅಪಶಕುನಗಳು ಕಾಣಿಸಿಕೊಂಡುದು: ಕರ್ಣನ ಆತ್ಮಪ್ರಶಂಸೆ: ಶಲ್ಯನು ಕರ್ಣನನ್ನು ಹಾಸ್ಯಮಾಡುತ್ತಾ ಅರ್ಜುನನ ಬಲ-ಪರಾಕ್ರಮಗಳನ್ನು ವರ್ಣಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಮಹಾಧನುಷ್ಮಂತನಾದ ಕರ್ಣನು ಯುದ್ಧ ಮಾಡುವ ಇಚ್ಛೆಯಿಂದ ರಣರಂಗದಲ್ಲಿ ಉಪಸ್ಥಿತನಾದುದನ್ನು ಕಂಡು ಕೌರವಸೈನಿಕರು ಪರಮಹೃಷ್ಟರಾಗಿ ಸರ್ವತ್ರ ಜಯಕಾರಗಳನ್ನು ಮಾಡಿದರು. ದುಂದುಭಿಗಳ ನಿರ್ಘೋಷಗಳಾಗುತ್ತಿರಲಾಗಿ, ಭೇರಿಗಳು ನಿನದಿಸುತ್ತಿರಲಾಗಿ, ಬಾಣಗಳು 'ಸೊಯ್' ಎಂಬ ಶಬ್ದಮಾಡುತ್ತಿರಲಾಗಿ, ವೇಗಶಾಲಿಗಳಾದ ವೀರರು ವಿಧ-ವಿಧವಾಗಿ ಗರ್ಜನೆಮಾಡುತ್ತಿರಲಾಗಿ ನಿನ್ನ ಸೈನಿಕರು ಮೃತ್ಯುವನ್ನೇ ತಮ್ಮ ಹಿಂದಿರುಗುವ ಗುರಿಯನ್ನಾಗಿ ಮಾಡಿಕೊಂಡು ಯುದ್ಧಕ್ಕೆ ಹೊರಟರು. ಮಹಾನಂದಯುಕ್ತರಾಗಿದ್ದ ಯೋಧರೂ ಮತ್ತು ಕರ್ಣನೂ ಯುದ್ಧಕ್ಕೆ ಹೊರಡಲಾಗಿ ಭೂಮಿಯೇ ನಡುಗಿತು ಮತ್ತು ಅವ್ಯಕ್ತವಾಗಿ ಶಬ್ದಮಾಡಿತು. ಆ ಶಬ್ದವು ಸರ್ವತ್ರ ವ್ಯಾಪಿಸಿತು. ಸೂರ್ಯಮಂಡಲದಿಂದ ಏಳು ಮಹಾಗ್ರಹಗಳು ಹೊರಬರುತ್ತಿರುವುದು ಕಂಡುಬಂದಿತು. ಉಲ್ಕಾಪಾತಗಳಾದುವು. ಎಲ್ಲ ದಿಕ್ಕುಗಳಲ್ಲಿಯೂ ಬೆಂಕಿಯು ಬೀಳುತ್ತಿದ್ದಿತು. ಮೋಡದಿಂದ ಶೂನ್ಯವಾಗಿದ್ದ ಆಕಾಶದಲ್ಲಿ ಸಿಡಿಲಿನ ಶಬ್ದವು ಕೇಳಿಬರುತ್ತಿದ್ದಿತು. ಭಯಂಕರವಾದ ಚಂಡಮಾರುತವು ಬೀಸತೊಡಗಿತು. ಮೃಗ-ಪಕ್ಷಿಸಮೂಹಗಳು ಮುಂದುಂಟಾಗುವ ಮಹಾಭಯವನ್ನು ಸೂಚಿಸುತ್ತಿವೆಯೋ ಎಂಬಂತೆ ನಿನ್ನ ಸೈನ್ಯವನ್ನು ಬಲಕ್ಕೆ ಬಿಟ್ಟುಕೊಂಡು (ಅಪ್ರದಕ್ಷಿಣೆಮಾಡುತ್ತ) ಅನೇಕಬಾರಿ ಓಡಾಡಿದುವು. ಕರ್ಣನು ಯುದ್ಧಕ್ಕೆ ಹೊರಟೊಡನೆಯೇ ಅವನ ರಥದ ಕುದುರೆಗಳು ಮುಗ್ಗರಿಸಿ ಬಿದ್ದುವು. ಅಂತರಿಕ್ಷದಿಂದ ಭಯಾನಕವಾದ ಮೂಳೆಗಳ ಮಳೆಯೇ ಸುರಿದುಹೋಯಿತು. ಶಸ್ತ್ರಗಳು ದೇದೀಪ್ಯಮಾನವಾಗಿ ಬೆಳಗ

ತೊಡಗಿದುವು. ಧ್ವಜಗಳು ಪರ-ಪರನೆ ನಡುಗತೊಡಗಿದುವು. ಆನೆ-ಕುದುರೆ ಮೊದಲಾದ ವಾಹನಗಳು ಕಂಬನಿಗರೆದುವು. ಇವುಗಳೇ ಅಲ್ಲದೇ ಸುದಾರುಣವಾದ ಕೌರವರ ವಿನಾಶಸೂಚಕವಾದ ಇನ್ನೂ ಅನೇಕ ಉತ್ಪಾತಗಳು ಅಲ್ಲಿ ಸಂಭವಿಸಿದುವು. ಆದರೆ ದೈವದಿಂದ ವಿಮೋಹಿತರಾಗಿದ್ದ ಕೌರವರು ಆ ಅಪಶಕುನಗಳನ್ನು ಗಮನಕ್ಕೆ ತೆಗೆದುಕೊಳ್ಳಲೇ ಇಲ್ಲ. ಕೌರವರ ಕಡೆಯ ರಾಜರೆಲ್ಲರೂ ಕರ್ಣನು ರಥದಲ್ಲಿ ಕುಳಿತು ಯುದ್ಧಕ್ಕೆ ಹೊರಟೊಡನೆಯೇ 'ಜಯ ಕರ್ಣ!' 'ವಿಜಯೀ ಭವ!'-ಎಂಬುದಾಗಿ ನಭೋಮಂಡಲವನ್ನು ಮುಟ್ಟುವಂತೆ ಜಯಕಾರಮಾಡಿದರು. ಕರ್ಣನು ಪಾಂಡವರನ್ನು ಜಯಿಸಿಬಿಟ್ಟನೆಂದೇ ಕೌರವರು ಭಾವಿಸಿದರು.

ಪ್ರಜ್ವಲಿಸುವ ಸೂರ್ಯನ ಮತ್ತು ಅಗ್ನಿಯ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ, ಶತ್ರುವೀರಹಂತಕನಾದ, ರಥಸ್ಥನಾಗಿದ್ದ, ರಥಶ್ರೇಷ್ಠನಾದ ವೈಕರ್ತನಕರ್ಣನು ಮಹಾಯುದ್ಧದಲ್ಲಿ ಭೀಷ್ಮ-ದ್ರೋಣರ ವೀರ್ಯವೂ ಅಸ್ತವಾಗಿ ಹೋದುದನ್ನು ಚೆನ್ನಾಗಿ ಗಮನಿಸಿದನು. ಪಾರ್ಥನ ಅತಿಶಯವಾದ ಸಾಹಸಕಾರ್ಯವನ್ನು ಚಿಂತಿಸಿ, ಅಭಿಮಾನದಿಂದಲೂ ಮತ್ತು ದರ್ಪದಿಂದಲೂ ಪ್ರಜ್ವಲಿಸುತ್ತಿದ್ದ ಕರ್ಣನು ಕೋಪದಿಂದ ಉರಿಯುತ್ತಿರುವನೋ ಎಂಬಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಶಲ್ಯನನ್ನು ಸಂಬೋಧಿಸಿ ಹೇಳಿದನು:

> ನಾಹಂ ಮಹೇನ್ದ್ರಾದಪಿ ವಜ್ರಪಾಣೇಃ
> ಕ್ರುದ್ಧಾದ್ಬಿಭೇಮ್ಯಾಯುಧವಾನ್ರಥಸ್ಥಃ।
> ದೃಷ್ಟ್ವಾ ಹಿ ಭೀಷ್ಮಪ್ರಮುಖಾಞ್ಶಯಾನಾ-
> ನತೀವ ಮಾಂ ಹ್ಯಸ್ಥಿರತಾ ಜಹಾತಿ ॥೧೩॥

"ಮದ್ರೇಶ! ನಾನು ಆಯುಧಪಾಣಿಯಾಗಿ ರಥದಲ್ಲಿ ಕುಳಿತಿರುವಾಗ ವಜ್ರಪಾಣಿಯಾದ ಮತ್ತು ಕ್ರುದ್ಧನಾದ ಮಹೇಂದ್ರನಿಗೂ ಹೆದರುವುದಿಲ್ಲ. ಭೀಷ್ಮಪ್ರಮುಖರಾದ ಮಹಾಯೋಧರು ಪ್ರಾಣಗಳನ್ನು ತೊರೆದು ರಣಾಂಗಣದಲ್ಲಿ ಬಿದ್ದಿರುವುದನ್ನು ನೋಡಿಯೂ ನನ್ನ ಮನಸ್ಸು ಸ್ಥಿರವಾಗಿಯೇ ಉಳಿದಿದೆ. (ಅಸ್ಥಿರತೆ ಅಥವಾ ಗಾಬರಿಯು ನನ್ನಿಂದ ಬಹಳ ದೂರ ಸರಿದಿದೆ.)

ಮಹೇನ್ದ್ರವಿಷ್ಣುಪ್ರತಿಮಾವನಿನ್ದಿತೌ
ರಥಾಶ್ವನಾಗಪ್ರವರಪ್ರಮಾಥಿನೌ।
ಅವಧ್ಯಕಲ್ಪೌ ನಿಹತೌ ಯದಾ ಪರೈ-
ಸ್ತತೋ ನ ಮೇಽಪ್ಯಸ್ತಿ ರಣೇಽದ್ಯ ಸಾಧ್ವಸಮ್ ॥೧೪॥



ಶಲ್ಯ! ಭೀಷ್ಮ-ದ್ರೋಣರು ವಿಷ್ಣು-ಮಹೇಂದ್ರರಿಗೆ ಸಮಾನರಾಗಿದ್ದರು. ಸರ್ವರಿಂದಲೂ ಪ್ರಶಂಸಿತರಾಗಿದ್ದರು. ರಥಾಶ್ವ-ಗಜಸಮೂಹಗಳನ್ನು ಮಥನಮಾಡುತ್ತಿದ್ದರು. ಅವರಿಬ್ಬರೂ ಮರಣವಿಲ್ಲದವರಂತೆಯೇ ಇದ್ದರು. ಅಂತಹವರೂ ನಮ್ಮ ಶತ್ರುಗಳಿಂದ ವಧಿಸಲ್ಪಟ್ಟರು. ಅದರಿಂದಲೂ ನನಗೆ ಈ ರಣಾಂಗಣದಲ್ಲಿ ಸ್ವಲ್ಪವಾದರೂ ಭಯವುಂಟಾಗಿಲ್ಲ.

ಇದೊಂದು ನನಗೆ ದೊಡ್ಡ ಸಮಸ್ಯೆಯೇ ಆಗಿಬಿಟ್ಟಿದೆ, ಮದ್ರೇಶ! ಮಹಾಸ್ತ್ರಗಳೆಲ್ಲವನ್ನೂ ಚೆನ್ನಾಗಿ ತಿಳಿದಿದ್ದ, ಬ್ರಾಹ್ಮಣಶ್ರೇಷ್ಠರಾದ, ಎಲ್ಲರಿಗೂ ಆಚಾರ್ಯರಾದ ದ್ರೋಣರು, ಸೂತ-ಗಜ-ರಥಗಳಿಂದ ಕೂಡಿದ ಅತಿ ಬಲಿಷ್ಠರಾದ ನಮ್ಮ ಕಡೆಯ ನರಶ್ರೇಷ್ಠರು ಶತ್ರುಗಳಿಂದ ಅಪಾರಸಂಖ್ಯೆಯಲ್ಲಿ ಹತರಾಗುತ್ತಿದ್ದುದನ್ನು ಪ್ರತ್ಯಕ್ಷವಾಗಿಯೇ ನೋಡುತ್ತಿದ್ದರೂ ಅವರೇಕೆ ನಮ್ಮೆಲ್ಲ ಶತ್ರುಗಳನ್ನೂ ಸಂಪೂರ್ಣವಾಗಿಯೇ ಸಂಹರಿಸಲಿಲ್ಲ? ಮಹಾಸಮರದಲ್ಲಿ ಮರಣಹೊಂದಿದ ದ್ರೋಣರನ್ನೇ ನಾನು ಸ್ಮರಿಸುತ್ತಾ ಸತ್ಯವಾದ ಮಾತನ್ನು ಹೇಳುತ್ತೇನೆ. ಕೌರವರೇ! ನಾನು ಹೇಳಲಿರುವ ಈ ಮಾತುಗಳನ್ನು ಕೇಳಿರಿ. ಯುದ್ಧಕ್ಕಾಗಮಿಸಿದ ಮೃತ್ಯುವಿನಂತೆ ಉಗ್ರರೂಪಿಯಾದ ಅರ್ಜುನನನ್ನು ನನ್ನೊಬ್ಬನ ಹೊರತಾಗಿ ಬೇರೆ ಯಾರೂ ಎದುರಿಸಲಾರರು. ಅವನ ವೇಗವನ್ನೂ ಸಹಿಸಿಕೊಳ್ಳಲಾರರು.

**ಶಿಕ್ಷಾಪ್ರಮಾದಶ್ಚ ಬಲಂ ಧೃತಿಶ್ಚ**
**ದ್ರೋಣೇ ಮಹಾಸ್ತ್ರಾಣಿ ಚ ಸಂನತಿಶ್ಚ ।**
**ಸ ಚೇದಗಾನ್ಮೃತ್ಯುವಶಂ ಮಹಾತ್ಮಾ**
**ಸರ್ವಾನನ್ಯಾನಾತುರಾನದ್ಯ ಮನ್ಯೇ ॥೧೭॥**

ಧನುರ್ವಿದ್ಯೆಯಲ್ಲಿ ಅಮೋಘವಾದ ಶಿಕ್ಷಣ, ಅಪ್ರಮತ್ತತೆ, ಬಲ, ಧೈರ್ಯ, ಮಹಾಸ್ತ್ರಗಳು, ವಿನಯ-ಈ ಎಲ್ಲ ಗುಣಗಳೂ ದ್ರೋಣರಲ್ಲಿ ನೆಲೆಗೊಂಡಿದ್ದುವು. ಅಂತಹ ಮಹಾತ್ಮರೇ ಮೃತ್ಯುವಶರಾದರೆಂದಮೇಲೆ ಉಳಿದವರೆಲ್ಲರೂ ಆಸನ್ನಮರಣರಾಗಿರುವರೆಂದೇ ನಾನು ಭಾವಿಸುತ್ತೇನೆ.

**ನೇಹ ಧ್ರುವಂ ಕಿಂಚಿದಪಿ ಪ್ರಚಿನ್ತಯ-**
**ನ್ವಿದ್ಯಾಂ ಲೋಕೇ ಕರ್ಮಣೋಽನಿತ್ಯಯೋಗಾತ್।**
**ಸೂರ್ಯೋದಯೇ ಕೋ ಹಿ ವಿಮುಕ್ತಸಂಶಯೋ**
**ಭಾವಂ ಕುರ್ವೀತಾದ್ಯ ಗುರೌ ನಿಪಾತಿತೇ ॥೧೮॥**

ಕರ್ಮಕ್ಕೆ ಯಾವಾಗಲೂ ನಿತ್ಯತೆ ಅಥವಾ ಶಾಶ್ವತತ್ವವು ಇಲ್ಲದೇ ಇರುವುದರಿಂದ ನಾನೆಷ್ಟೇ ಯೋಚಿಸಿದರೂ ಪ್ರಪಂಚದಲ್ಲಿರುವ ಯಾವ ವಸ್ತುವೂ ಶಾಶ್ವತವಾಗಿ ಉಳಿಯುವಂತೆ ಕಾಣುವುದಿಲ್ಲ. ಅಮರಸದೃಶ

ರಾದ ಆಚಾರ್ಯದ್ರೋಣರೇ ಹತರಾದರೆಂದಮೇಲೆ ನಾಳೆ ಸೂರ್ಯೋದಯದವರೆಗೂ ನಾನು ಜೀವಿಸಿಯೇ ಇರುವೆನೆಂದು ಯಾವನು ತಾನೇ ನಿಸ್ಸಂದೇಹವಾಗಿ ಭಾವಿಸುತ್ತಾನೆ?

ನ ನೂನಮಸ್ತ್ರಾಣಿ ಬಲಂ ಪರಾಕ್ರಮಃ
ಕ್ರಿಯಾಃ ಸುನೀತಂ ಪರಮಾಯುಧಾನಿ ವಾ।
ಅಲಂ ಮನುಷ್ಯಸ್ಯ ಸುಖಾಯ ವರ್ತಿತುಂ
ತಥಾ ಹಿ ಯುದ್ಧೇ ನಿಹತಃ ಪರೈರ್ಗುರುಃ ॥೧೯॥

ಅಸ್ತ್ರಗಳು, ಬಲ, ಪರಾಕ್ರಮ, ಒಳ್ಳೆಯ ಕ್ರಿಯೆಗಳು, ಒಳ್ಳೆಯ ನೀತಿ, ಶ್ರೇಷ್ಠವಾದ ಆಯುಧಗಳು-ಇವುಗಳಾವುವೂ ಮನುಷ್ಯನಿಗೆ ಸುಖವನ್ನುಂಟು ಮಾಡುವ ಸಾಧನಗಳಾಗಲಾರವು. ಏಕೆಂದರೆ: ಈ ಎಲ್ಲ ಗುಣಗಳೂ ಇದ್ದ ಆಚಾರ್ಯರೂ ಶತ್ರುಗಳಿಂದ ವಧಿಸಲ್ಪಟ್ಟರಲ್ಲವೇ!

ಹುತಾಶನಾದಿತ್ಯಸಮಾನತೇಜಸಂ
ಪರಾಕ್ರಮೇ ವಿಷ್ಣುಪುರನ್ದರೋಪಮಮ್।
ನಯೇ ಬೃಹಸ್ಪತ್ಯುಶನೋಃ ಸದಾ ಸಮಂ
ನ ಚೈನಮಸ್ತ್ರಂ ತದುಪಾಸ್ತ ದುಃಸಹಮ್ ॥೨೦॥

ಅಗ್ನ್ಯಾದಿತ್ಯರ ತೇಜಸ್ಸಿಗೆ ಸಮಾನವಾದ ತೇಜಸ್ಸನ್ನು ಹೊಂದಿದ್ದ, ಪರಾಕ್ರಮದಲ್ಲಿ ಇಂದ್ರೋಪೇಂದ್ರಸದೃಶರಾಗಿದ್ದ, ರಾಜನೀತಿಯಲ್ಲಿ ಬೃಹಸ್ಪತಿ-ಶುಕ್ರರಿಗೆ ಸಮಾನರಾಗಿದ್ದ ದ್ರೋಣರನ್ನು ಅವರಲ್ಲಿದ್ದ ದುಃಸಹವಾದ ಅಸ್ತ್ರವೂ ರಕ್ಷಣೆಮಾಡಲಿಲ್ಲ. ಮದ್ರೇಶ! ದ್ರೋಣರ ವಧೆಯಾದನಂತರ 'ತ್ರಾಹಿ-ತ್ರಾಹಿ' ಎಂಬ ಆರ್ತನಾದವು ನಮ್ಮ ಸೈನ್ಯದಲ್ಲಿ ಸರ್ವತ್ರ ಕೇಳಿಬರುತ್ತಿದ್ದಿತು. ಸ್ತ್ರೀಯರೂ ಮತ್ತು ಮಕ್ಕಳೂ ಗಟ್ಟಿಯಾಗಿ ರೋದನಮಾಡುತ್ತಿದ್ದರು. ದುರ್ಯೋಧನನ ಪೌರುಷಕ್ಕೆ ಸೋಲುಂಟಾಯಿತು. ಇಂತಹ ಸಮಯದಲ್ಲಿ ದುರ್ಯೋಧನನಿಗೆ ಸಹಾಯಮಾಡುವುದು ನನ್ನ ಮುಖ್ಯಕರ್ತವ್ಯವೆಂದು ಭಾವಿಸಿದ್ದೇನೆ. ಆದುದರಿಂದ ಶೀಘ್ರವಾಗಿ ಶತ್ರುಗಳ ಸೈನ್ಯದ ಕಡೆಗೆ ಕುದುರೆಗಳನ್ನು ಓಡಿಸು.

ಮದ್ರೇಶ! ವ್ಯವಸ್ಥಿತರಾಗಿ ನಿಂತಿರುವ ಸತ್ಯಸಂಧನಾದ ಯುಧಿಷ್ಠಿರ

ರಾಜ, ಭೀಮಾರ್ಜುನರು ಮತ್ತು ವಾಸುದೇವ-ಸಾತ್ಯಕಿ-ಸೃಂಜಯ-ನಕುಲ-ಸಹದೇವರು-ಇವರೆಲ್ಲರ ವೇಗವನ್ನು ನಾನೊಬ್ಬನಲ್ಲದೇ ಮತ್ತಾರುತಾನೇ ಸಹಿಸಿಕೊಂಡಾರು? ಆದುದರಿಂದ ಮದ್ರೇಶ! ಪಾಂಡು-ಪಾಂಚಾಲ-ಸೃಂಜಯರ ಬಳಿಗೆ ಬೇಗ ಹೋಗು. ಅವರೆಲ್ಲರನ್ನೂ ಒಟ್ಟಾಗಿ ಸೇರಿಸಿ ಇಂದಿನ ಯುದ್ಧದಲ್ಲಿ ಸಂಹರಿಸುತ್ತೇನೆ. ಅಥವಾ ಅವರಿಂದಾದರೂ ಹತನಾಗಿ ದ್ರೋಣರು ಹೋದ ಮಾರ್ಗದ ಮೂಲಕವಾಗಿ ಯಮಲೋಕಕ್ಕಾದರೂ ಹೋಗುತ್ತೇನೆ. ಶಲ್ಯ! ಆ ಮಹಾಶೂರರ ಮಧ್ಯದಲ್ಲಿ ಯುದ್ಧಮಾಡಲು ನಾನು ಹೋಗುವುದಿಲ್ಲವೆಂದು ನೀನು ಶಂಕಿಸಬೇಡ. (ನಾನು ಸರ್ವಾತ್ಮನಾ ಹೋಗುವೆನೆಂದೇ ತಿಳಿ). ಈ ಸಮಯದಲ್ಲಿ ನಾನೇನಾದರೂ ಯುದ್ಧಮಾಡದೇ ಹಿಂದಿರುಗಿದರೆ ಮಿತ್ರದ್ರೋಹವನ್ನೇ ಎಸಗಿದಂತಾಗುತ್ತದೆ. ಮಿತ್ರದ್ರೋಹವಾಗುವುದನ್ನು ನಾನು ಖಂಡಿತವಾಗಿಯೂ ಸಹಿಸುವುದಿಲ್ಲ. ಶತ್ರುಗಳೊಡನೆ ಕಡೆಯವರೆಗೂ ಯುದ್ಧಮಾಡುತ್ತಿದ್ದು ಅಸುನೀಗಿ ದ್ರೋಣರನ್ನೇ ಅನುಸರಿಸಿ ಹೋಗುತ್ತೇನೆ.

> **ಪ್ರಾಜ್ಞಸ್ಯ ಮೂಢಸ್ಯ ಚ ಜೀವಿತಾನ್ತೇ**
> **ನಾಸ್ತಿ ಪ್ರಮೋಕ್ಷೋಽನ್ತಕಸತ್ಕೃತಸ್ಯ।**
> **ಅತೋ ವಿದ್ವನ್ನಭಿಯಾಸ್ಯಾಮಿ ಪಾರ್ಥಾ-**
> **ನ್ದಿಷ್ಟಂ ನ ಶಕ್ಯಂ ವ್ಯತಿವರ್ತಿತುಂ ವೈ ॥೨೫॥**

ವಿದ್ವಾಂಸನಿಗೇ ಆಗಲೀ, ಮೂಢನಿಗೇ ಆಗಲೀ ಆಯುಷ್ಯವು ಮುಗಿದೊಡನೆಯೇ ಯಮರಾಜನಿಂದ ಯಥಾಯೋಗ್ಯವಾದ ಸತ್ಕಾರವು ನಡೆದೇತೀರುತ್ತದೆ. ಇದನ್ನು ಯಾರೂ ತಪ್ಪಿಸಿಕೊಳ್ಳಲಾರರು. ಮರಣದಿಂದ ಯಾರಿಗೂ ಬಿಡುಗಡೆಯಿಲ್ಲ. ಈ ಸಿದ್ಧಾಂತವನ್ನು ಸ್ಪಷ್ಟವಾಗಿ ತಿಳಿದುಕೊಂಡಿರುವ ನಾನು ಕುಂತಿಯ ಮಕ್ಕಳೊಡನೆ ಯುದ್ಧಮಾಡಲು ಹೋಗುತ್ತೇನೆ. ಅದೃಷ್ಟವು ಹೇಗಿದೆಯೋ ಹಾಗೆಯೇ ನಡೆಯುತ್ತದೆ. ದೈವನಿಯಮವನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಾಗುವುದಿಲ್ಲ.

ಧೃತರಾಷ್ಟ್ರನ ಮಗನಾದ ದುರ್ಯೋಧನನು ನನಗೆ ಮಂಗಳವನ್ನುಂಟುಮಾಡುವುದರಲ್ಲಿ ಸದಾಕಾಲದಲ್ಲಿಯೂ ನಿರತನಾಗಿದ್ದಾನೆ.

ಇಂದು ನಾನು ಅವನ ಅಭೀಷ್ಟಸಿದ್ಧಿಗಾಗಿ ನನಗೆ ಪ್ರಿಯವಾದ ಭೋಗಗಳನ್ನೂ ತ್ಯಾಗಮಾಡುತ್ತೇನೆ ಮತ್ತು ಪರಿತ್ಯಜಿಸಲು ಅತಿಕಷ್ಟವಾದ ಪ್ರಾಣಗಳನ್ನೂ ದುರ್ಯೋಧನನಿಗಾಗಿ ತ್ಯಾಗಮಾಡುತ್ತೇನೆ. ನನ್ನ ಆಚಾರ್ಯನಾದ ಪರಶುರಾಮನು ನನಗೆ ವ್ಯಾಘ್ರಚರ್ಮದಿಂದ ಆಚ್ಛಾದಿತವಾದ, ಉತ್ತಮಾಶ್ವ ಗಳಿಂದ ಯುಕ್ತವಾದ, ಶ್ರೇಷ್ಠವಾದ ಈ ರಥವನ್ನೂ ದಯಪಾಲಿಸಿರುವನು. ಇದರಲ್ಲಿ ಸುವರ್ಣಮಯವಾದ ಮೂರು ಕೋಶಗಳೂ ಮತ್ತು ರಜತಮಯವಾದ ತ್ರಿವೇಣುಗಳೂ ಇವೆ. ಪ್ರಯಾಣಮಾಡುವಾಗ ಈ ರಥದ ಚಕ್ರಗಳಿಂದ ಶಬ್ದವೇ ಉಂಟಾಗುವುದಿಲ್ಲ. ಇಂತಹ ಅಮೋಘವಾದ ರಥವನ್ನು ಪರಶುರಾಮನು ನನಗೆ ಕೊಟ್ಟನಂತರ ನನ್ನನ್ನು ಪುನಃ ಅನುಗ್ರಹದೃಷ್ಟಿಯಿಂದ ನೋಡಿ ವಿಚಿತ್ರವಾದ ಧನುಸ್ಸುಗಳನ್ನೂ, ಧ್ವಜಗಳನ್ನೂ, ಗದೆಗಳನ್ನೂ, ಉಗ್ರರೂಪದಿಂದ ಕೂಡಿದ್ದ ಬಾಣಗಳನ್ನೂ, ಕತ್ತಿಯನ್ನೂ, ಥಳ-ಥಳಿಸುವ ಶ್ರೇಷ್ಠವಾದ ಇನ್ನೂ ಅನೇಕ ಆಯುಧಗಳನ್ನೂ, ಭಯಂಕರವಾದ ಧ್ವನಿಯಿಂದ ಕೂಡಿದ ಶುಭ್ರವಾದ ಶಂಖವನ್ನೂ ನನಗೆ ದಯಪಾಲಿಸಿದನು.

ಶಲ್ಯರಾಜ! ಗುರುಗಳಿಂದ ಅನುಗೃಹೀತವಾದ ಈ ರಥವು ಮಿಕ್ಕೆಲ್ಲ ರಥಗಳಿಗಿಂತಲೂ ಶ್ರೇಷ್ಠವಾಗಿದೆ. ಈ ರಥದ ಮೇಲೆ ಪತಾಕೆಗಳು ಹಾರಾಡುತ್ತಿವೆ. ಬಿಳಿಯ ಕುದುರೆಗಳಿಂದ ಇದು ಯುಕ್ತವಾಗಿದೆ. ಈ ರಥದಲ್ಲಿ ಮಂಗಳಕರವಾದ ಬತ್ತಳಿಕೆಗಳಿವೆ. ಈ ರಥವು ಮುಂದೆ-ಮುಂದೆ ಹೋಗುತ್ತಿದ್ದರೆ ಸಿಡಿಲು ಬಡಿದಾಗ ಉಂಟಾಗುವಂತಹ ಘೋರನಿನಾದವೇ ಆಗುತ್ತದೆ. ಇಂತಹ ಅದ್ಭುತವಾದ ರಥದಲ್ಲಿ ಕುಳಿತು ನಾನು ಬಲಪೂರ್ವಕ ವಾಗಿ ಅರ್ಜುನನನ್ನು ಸಂಹಾರಮಾಡುತ್ತೇನೆ. ಎಲ್ಲ ಪ್ರಾಣಿಗಳ ಪ್ರಾಣಗಳನ್ನೂ ಅಪಹರಿಸುವ ಮೃತ್ಯುವೇ ಅಪ್ರಮತ್ತವಾದ ಪಾಂಡುಪುತ್ರನಾದ ಅರ್ಜುನನನ್ನು ರಕ್ಷಿಸುತ್ತಿದ್ದರೂ ನಾನು ಅವನೊಡನೆ ಯುದ್ಧಮಾಡಿ ಅವನನ್ನು ಸಂಹರಿಸು ತ್ತೇನೆ. ಅಥವಾ ಅವನಿಂದ ಹತನಾಗಿ ಭೀಷ್ಮನನ್ನೇ ಅನುಸರಿಸಿ ಯಮನ ಪಟ್ಟಣಕ್ಕಾದರೂ ಹೋಗುತ್ತೇನೆ. ಹೆಚ್ಚು ಮಾತನಾಡು ವುದರಲ್ಲಿ ಪ್ರಯೋಜನವೇನಿದೆ? ಶಲ್ಯರಾಜ! ಇಂದಿನ ಮಹಾಸಮರದಲ್ಲಿ

ಅರ್ಜುನನನ್ನು ರಕ್ಷಣೆಮಾಡುವ ಸಲುವಾಗಿ ತಮ್ಮ-ತಮ್ಮ ಗಣಗಳೊಡನೆ ಯಮ-ವರುಣ-ಕುಬೇರ-ವಾಸವರು ಒಟ್ಟಾಗಿಯೇ ಬಂದರೂ ಸಹ ಅವರೆಲ್ಲರೊಡನೆ ನಾನು ಅರ್ಜುನನನ್ನು ಗೆಲ್ಲುತ್ತೇನೆ.”

ಧೃತರಾಷ್ಟ್ರರಾಜ! ಮಹಾಪರಾಕ್ರಮಿಯಾದ ಶಲ್ಯನು ರಣರಭಸನಾದ (ಯುದ್ಧದಲ್ಲಿ ಬಹಳ ವೇಗವಾಗಿ ಸಂಹಾರಕಾರ್ಯವನ್ನು ಮಾಡುವ) ಕರ್ಣನು ಹೇಳಿದ ಆತ್ಮಪ್ರಶಂಸೆಯ ಮಾತುಗಳನ್ನು ಕೇಳಿ, ಕರ್ಣನ ಮಾತುಗಳೆಲ್ಲವೂ ‘ಪೊಳ್ಳು ಮಾತುಗಳು’ ಎಂದು ಸೂಚಿಸಲೋ ಎಂಬಂತೆ ಗಹ-ಗಹಿಸಿ ನಕ್ಕುಬಿಟ್ಟನು. ಹೀಗೆ ಕರ್ಣನನ್ನು ಅವಮಾನಿಸಿ ಅವನು ಮುಂದೆ ಮಾತನಾಡದಂತೆ ತಡೆದನು. ಕರ್ಣನ ಮಾತುಗಳಿಗೆ ಯಥೋಚಿತವಾದ ಉತ್ತರವನ್ನೂ ಹೇಳತೊಡಗಿದನು:

**ವಿರಮ ವಿರಮ ಕರ್ಣ ಕತ್ಥನಾ-**
**ದತಿರಭಸೋಽಪ್ಯತಿವಾಚಮುಕ್ತವಾನ್ ।**
**ಕ್ವ ಚ ಹಿ ನರವರೋ ಧನಂಜಯಃ**
**ಕ್ವ ಪುನರಹೋ ಪುರುಷಾಧಮೋ ಭವಾನ್ ॥೩೩॥**

“ನಿನ್ನ ಈ ಹರಟೆಯಿಂದ ವಿರತನಾಗು, ಕರ್ಣ! ಮಾತನ್ನು ನಿಲ್ಲಿಸಿಬಿಡು. ನೀನು ಯುದ್ಧದಲ್ಲಿ ಅತಿರಭಸನೆಂಬುದೇನೋ ನಿಜ. ಆದರೂ ಸಹ ನಿನ್ನ ಪರಾಕ್ರಮದ ವಿಷಯವಾಗಿ ಹೆಚ್ಚು ಮಾತನಾಡಿದೆ. ನಿನಗೆ ತಕ್ಕುದಲ್ಲದ ಮಾತುಗಳನ್ನೇ ಆಡಿರುವೆ. ನಿನಗೂ ಧನಂಜಯನಿಗೂ ಯಾವುದರಲ್ಲಾದರೂ ಸಾಮ್ಯವಿರುವುದೇ? ನರಶ್ರೇಷ್ಠನಾದ ಧನಂಜಯನೆಲ್ಲಿ? ನರಾಧಮನಾದ ನೀನೆಲ್ಲಿ?

**ಯದುಸದನಮುಪೇನ್ದ್ರಪಾಲಿತಂ**
**ತ್ರಿದಶಮಿವಾಮರರಾಜರಕ್ಷಿತಮ್ ।**
**ಪ್ರಸಭಮತಿವಿಲೋಡ್ಯ ಕೋ ಹರೇ-**
**ತ್ಪುರುಷವರಾವರಜಾಮೃತೇಽರ್ಜುನಾತ್ ॥೩೪॥**

ದೇವೇಂದ್ರನಿಂದ ರಕ್ಷಿತವಾದ ಅಮರಾವತಿಯಂತೆ–ಉಪೇಂದ್ರನಿಂದ (ಶ್ರೀಕೃಷ್ಣನಿಂದ) ರಕ್ಷಿಸಲ್ಪಡುತ್ತಿದ್ದ ಯಾದವರ ಪಟ್ಟಣವು ಸುಭದ್ರವಾಗಿ

ದ್ದಿತು. ಅಂತಹ ಪಟ್ಟಣವನ್ನೂ ಬಲಪೂರ್ವಕವಾಗಿ ಅಲ್ಲೋಲ-ಕಲ್ಲೋಲಗೊಳಿಸಿ, ಪುರುಷಶ್ರೇಷ್ಠನಾದ ಶ್ರೀಕೃಷ್ಣನ ತಂಗಿಯಾದ ಸುಭದ್ರೆಯನ್ನು ಮಹಾಸಾಹಸಿಯಾದ ಅರ್ಜುನನಲ್ಲದೇ ಮತ್ತಾರು ತಾನೇ ಅಪಹರಿಸಿಕೊಂಡು ಬರುತ್ತಿದ್ದರು?

**ತ್ರಿಭುವನವಿಭುಮೀಶ್ವರೇಶ್ವರಂ**
**ಕ ಇಹ ಪುಮಾನ್ಭವಮಾಹ್ವಯೇದ್ಯುಧಿ।**
**ಮೃಗವಧಕಲಹೇ ಋತೇಽರ್ಜುನಾ-**
**ತ್ಸುರಪತಿವೀರ್ಯಸಮಪ್ರಭಾವತಃ ॥೩೫॥**

ದೇವರಾಜನಾದ ಇಂದ್ರನಿಗೆ ಸಮಾನವಾದ ವೀರ್ಯ ಮತ್ತು ಪ್ರಭಾವಗಳನ್ನು ಹೊಂದಿದ್ದ ಅರ್ಜುನನ ಹೊರತಾಗಿ ಮತ್ತಾವ ಪುರುಷನು ತಾನೇ ಮೃಗವಧೆಯ ಜಗಳದಲ್ಲಿ ಮೂರು ಲೋಕಗಳಿಗೂ ಒಡೆಯನಾದ, ಈಶ್ವರರೆಲ್ಲರಿಗೂ ಈಶ್ವರನಾದ ಭವನನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದನು?

**ಅಸುರಸುರಮಹೋರಗಾನ್ನರಾ-**
**ನ್ಗರುಡಪಿಶಾಚಸಯಕ್ಷರಾಕ್ಷಸಾನ್।**
**ಇಷುಭಿರಜಯದಗ್ನಿಗೌರವಾ-**
**ತ್ಸ್ವಭಿಲಷಿತಂ ಚ ಹವಿರ್ದದೌ ಜಯಃ ॥೩೬॥**

ಅರ್ಜುನನು ಅಗ್ನಿಯ ಮೇಲಿನ ಗೌರವದಿಂದಾಗಿ ಅಸುರ-ಸುರ-ಮಹಾಸರ್ಪಗಳನ್ನೂ, ನರ-ಗರುಡ-ಪಿಶಾಚರನ್ನೂ;, ಯಕ್ಷ-ರಾಕ್ಷಸರನ್ನೂ ನಿಶಿತವಾದ ಬಾಣಗಳಿಂದ ಪರಾಜಯಗೊಳಿಸಿದನು ಮತ್ತು ಅಗ್ನಿಯು ಆಶಿಸಿದ್ದ ಹವಿಸ್ಸನ್ನೂ ದಯಪಾಲಿಸಿದನು.

**ಸ್ಮರಸಿ ನನು ಯದಾ ಪರೈರ್ಹೃತಃ**
**ಸ ಚ ಧೃತರಾಷ್ಟ್ರಸುತೋಽಪಿ ಮೋಕ್ಷಿತಃ।**
**ದಿನಕರಸದೃಶೈಃ ಶರೋತ್ತಮೈ-ರ್ಯುಧಾ**
**ಕುರುಷು ಬಹೂನ್ವಿನಿಹತ್ಯ ತಾನರೀನ್ ॥೩೭॥**

ಈ ವಿಷಯವಾದರೂ ನಿನ್ನ ಸ್ಮರಣೆಯಲ್ಲಿರುವುದೇ? ಕರ್ಣ! ಕುರುಜಾಂಗಲಪ್ರದೇಶದಲ್ಲಿ ನೀವೆಲ್ಲರೂ ಘೋಷಯಾತ್ರೆಗೆ ಹೋಗಿದ್ದಾಗ

ಗಂಧರ್ವರು ದುರ್ಯೋಧನನ ಶತ್ರುಗಳಾಗಿ ಅವನನ್ನು ಅಪಹರಿಸಿಕೊಂಡು ಹೋದರು. ಆ ಸಮಯದಲ್ಲಿ ವನವಾಸದಲ್ಲಿದ್ದ ಅರ್ಜುನನು ಸೂರ್ಯ ಕಿರಣಗಳಿಗೆ ಸಮಾನವಾಗಿದ್ದ ಶ್ರೇಷ್ಠವಾದ ಬಾಣಗಳಿಂದ ಶತ್ರುಗಳಲ್ಲಿ ಅನೇಕರನ್ನು ಸಂಹರಿಸಿ ದುರ್ಯೋಧನನನ್ನು ಬಂಧನದಿಂದ ಬಿಡುಗಡೆ ಮಾಡಿದನು. ಆ ಸಮಯದಲ್ಲಿ ನೀನು ತೋರಿಸಿದ ಪರಾಕ್ರಮವು ನಿನ್ನ ನೆನಪಿನಲ್ಲಿರುವುದೇ? ನೆನಪಿಲ್ಲದಿದ್ದರೆ ಅದನ್ನೀಗ ನಾನು ನಿನ್ನ ಜ್ಞಾಪಕಕ್ಕೆ ತರುತ್ತೇನೆ.

**ಪ್ರಥಮಮಪಿ ಪಲಾಯಿತೇ ತ್ವಯಿ**
**ಪ್ರಿಯಕಲಹಾ ಧೃತರಾಷ್ಟ್ರಸೂನವಃ।**
**ಸ್ಮರಸಿ ನನು ಯದಾ ಪ್ರಮೋಚಿತಾಃ**
**ಖಚರಗಣಾನವಜಿತ್ಯ ಪಾಣ್ಡವೈಃ ॥೩೮॥**

ಕರ್ಣ! ಯುದ್ಧವು ಪ್ರಾರಂಭವಾಗುತ್ತಲೇ ನೀನೇ ಮೊದಲು ಪಲಾಯನಮಾಡಿದೆ. ಅನಂತರ ಪಾಂಡವರು ಗಂಧರ್ವರನ್ನು ಜಯಿಸಿ ಕಲಹಪ್ರಿಯರಾದ ಧೃತರಾಷ್ಟ್ರನ ಮಕ್ಕಳನ್ನು ಯಾವಾಗ ಬಿಡಿಸಿದರೆಂಬುದಾದರೂ ನಿನ್ನ ಸ್ಮರಣೆಯಲ್ಲಿರುವುದೇ?

ನೀನು ಅರ್ಜುನನಿಂದ ಪರಾಜಿತನಾದ ಮತ್ತೊಂದು ಪ್ರಕರಣವನ್ನೂ ಪ್ರಕಟಿಸಲೇ?

**ಸಮುದಿತಬಲವಾಹನಾಃ ಪುನಃ**
**ಪುರುಷವರೇಣ ಜಿತಾಃ ಸ್ಥ ಗೋಗ್ರಹೇ।**
**ಸಗುರುಗುರುಸುತಾಃ ಸಭೀಷ್ಮಕಾಃ**
**ಕಿಮು ನ ಜಿತಃ ಸ ತದಾ ತ್ವಯಾರ್ಜುನಃ ॥೩೯॥**

ವಿರಾಟನಗರದಲ್ಲಾದ ಗೋಗ್ರಹಣಸಮಯದಲ್ಲಿ ದ್ರೋಣಾಶ್ವತ್ಥಾಮ-ಭೀಷ್ಮರಿಂದ ಕೂಡಿದ್ದ, ಬಲಿಷ್ಠವಾದ ಆನೆ-ಕುದುರೆಗಳಿಂದ ಸಂಪನ್ನರಾಗಿದ್ದ ನಿಮ್ಮನ್ನು ಅರ್ಜುನನೊಬ್ಬನೇ ಪರಾಜಯಗೊಳಿಸಿದನು. ಆ ಸಮಯದಲ್ಲಿ ನೀನೇಕೆ ಏಕಾಕಿಯಾಗಿದ್ದ ಅರ್ಜುನನನ್ನು ಪರಾಜಯಗೊಳಿಸಲಿಲ್ಲ?

ಇದಮಪರಮುಪಸ್ಥಿತಂ ಪುನ-
ಸ್ತವ ನಿಧನಾಯ ಸುಯುದ್ಧಮದ್ಯ ವೈ।
ಯದಿ ನ ರಿಪುಭಯಾತ್ಪಲಾಯಸೇ
ಸಮರಗತೋಽದ್ಯ ಹತೋಽಸಿ ಸೂತಜ ॥೪೦॥



ಸೂತಪುತ್ರ! ಈಗ ನಿನ್ನ ವಧೆಗಾಗಿಯೇ ಪುನಃ ಮತ್ತೊಂದು ಉತ್ತಮವಾದ ಯುದ್ಧವು ಸನ್ನಿಹಿತವಾಗಿದೆ. ನೀನು ಶತ್ರುಭಯದಿಂದ ಪಲಾಯನಮಾಡದೇ ಇದ್ದರೆ ರಣಭೂಮಿಗೆ ಆಗಮಿಸಿರುವ ನೀನು ಹತನಾಗುವೆ.”

ಧೃತರಾಷ್ಟ್ರಮಹಾರಾಜ! ಮನಸ್ವಿಯಾದ, ಮದ್ರಪತಿಯಾದ ಶಲ್ಯನು ಕರ್ಣಕಠೋರವಾದ ರೀತಿಯಲ್ಲಿ ಹೀಗೆ ಶತ್ರುವಿನ ಸ್ತೋತ್ರಮಾಡುತ್ತಿರಲಾಗಿ ಶತ್ರುತಾಪಕನಾದ, ಕುರುಸೇನಾಪತಿಯಾದ ಕರ್ಣನು ಅತ್ಯಂತರುಷ್ಟನಾಗಿ ಶಲ್ಯನೊಡನೆ ಈ ಮಾತುಗಳನ್ನು ಹೇಳಿದನು:

**ಭವತು ಭವತು ಕಿಂ ವಿಕತ್ಥಸೇ**
**ನನು ಮಮ ತಸ್ಯ ಹಿ ಯುದ್ಧಮುದ್ಯತಮ್**
**ಯದಿ ಸ ಜಯತಿ ಮಾಮಿಹಾಹವೇ**
**ತತ ಇದಮಸ್ತು ಸುಕತ್ಥಿತಂ ತವ ॥೪೨॥**

"ಶಲ್ಯ! ಆಗಲಿ, ಆಗಲಿ! ಶತ್ರುವನ್ನು ಹೀಗೇಕೆ ಹೊಗಳುತ್ತಿರುವೆ? ನನಗೂ ಮತ್ತು ಅರ್ಜುನನಿಗೂ ಯುದ್ಧವು ಪ್ರಾರಂಭವಾಗಲಿದೆ. ಯುದ್ಧದಲ್ಲಿ ಅವನೇನಾದರೂ ನನ್ನನ್ನು ಜಯಿಸಿದರೆ ಆಗ ನಿನ್ನ ಈ ವಿಕತ್ಥನೆಯು ಸುಶ್ಲಾಘನೆಯಾಗಿ ಪರಿಣಮಿಸಲಿ."

ಮಹಾರಾಜ! ಕರ್ಣನ ಮಾತನ್ನು ಕೇಳಿ ಮದ್ರೇಶನು 'ಏವಮಸ್ತು–ಹಾಗೆಯೇ ಆಗಲಿ'–ಎಂದು ಮಾತ್ರ ಹೇಳಿ ಮುಂದೆ ಮಾತನಾಡಲಿಲ್ಲ. ಯುದ್ಧಮಾಡುವ ಉತ್ಸುಕತೆಯಿಂದ ಕೂಡಿದ್ದ ಕರ್ಣನು ಶಲ್ಯನಿಗೆ 'ಮುಂದೆ ಹೋಗು' ಎಂದು ಹೇಳಿದನು.

ಅನಂತರ ಶಲ್ಯನನ್ನು ಸಾರಥಿಯನ್ನಾಗಿ ಹೊಂದಿದ್ದ, ಬಿಳಿಯ ಕುದುರೆಗಳಿಂದ ಯುಕ್ತವಾಗಿದ್ದ ಕರ್ಣನ ರಥವು ಅಂಧಕಾರವನ್ನು ವಿನಾಶಮಾಡುವ ಸೂರ್ಯದೇವನಂತೆ ಶತ್ರುಗಳನ್ನು ಸಂಹರಿಸುತ್ತಾ ಮುಂದೆ ಹೋಯಿತು. ಬಳಿಕ ಪ್ರಸನ್ನಮನಸ್ಕನಾದ ಕರ್ಣನು, ವ್ಯಾಘ್ರಚರ್ಮದಿಂದ ಆಚ್ಛಾದಿತವಾಗಿದ್ದ ಮತ್ತು ಶ್ವೇತಾಶ್ವಗಳಿಂದ ಯುಕ್ತವಾಗಿದ್ದ ರಥದ ಮೂಲಕವಾಗಿ ರಣಾಂಗಣಕ್ಕೆ ಪ್ರಯಾಣಮಾಡಿದನು. ಪಾಂಡವರ ಮಹಾಸೈನ್ಯವನ್ನು ನೋಡಿದ ಕರ್ಣನು 'ಈ ಸೈನ್ಯದ ಮಧ್ಯದಲ್ಲಿ ಅರ್ಜುನನು ಎಲ್ಲಿರುವನು?'–ಎಂದು ಅವಸರದಿಂದ ಪ್ರಶ್ನಿಸಿದನು."

ಜ೭ನೆಯ ಅಧ್ಯಾಯವು ಮುಗಿಯಿತು.

## ಕೃಷ್ಣಾರ್ಜುನರ ಸುಳಿವನ್ನು ತಿಳಿಸಿದವರಿಗೆ ನಾನಾವಿಧವಾದ ಬಹುಮಾನಗಳನ್ನು ಕೊಡುವುದಾಗಿ ಕರ್ಣನು ಘೋಷಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಕರ್ಣನ ಯುದ್ಧಪ್ರಕರಣವನ್ನು ವರ್ಣಿಸಿ ಹೇಳುತ್ತಾನೆ:

"ಮಹಾರಾಜ! ಪ್ರಯಾಣಕಾಲದಲ್ಲಿ ಕರ್ಣನು ನಿನ್ನ ಸೈನಿಕರನ್ನು ಹರ್ಷಗೊಳಿಸುತ್ತಾ ಸಮರಭೂಮಿಗೆ ಹೋದನಂತರ ಸಮರಾಂಗಣದಲ್ಲಿದ್ದ ಒಬ್ಬೊಬ್ಬ ಯೋಧನನ್ನೂ ನೋಡಿ ಅರ್ಜುನನ ವಿಷಯವಾಗಿ ಪ್ರಶ್ನಿಸುತ್ತಿದ್ದನು. 'ಈಗ ಯಾರು ನನಗೆ ಮಹಾತ್ಮನಾದ, ಶ್ವೇತವಾಹನನಾದ ಅರ್ಜುನನನ್ನು ತೋರಿಸುತ್ತಾನೆಯೋ ಅವನಿಗೆ ನಾನು ಇಷ್ಟವಾದುದೆಲ್ಲವನ್ನೂ ಕೊಡುತ್ತೇನೆ ಮತ್ತು ಅವನು ಮನಸ್ಸಿನಿಂದ ಆಶಿಸಿದಷ್ಟು ಹಣವನ್ನೂ ಕೊಡುತ್ತೇನೆ. ಇಷ್ಟೂ ಸಾಲದೆಂದು ಅವನ ಅಭಿಪ್ರಾಯವಿರುವುದಾದರೆ ಅವನಿಗೆ ಮತ್ತಷ್ಟು ಹಣವನ್ನೂ ಕೊಡುತ್ತೇನೆ. ಯಾವನು ನನಗೆ ಅರ್ಜುನನೆಲ್ಲಿರುವನೆಂಬುದನ್ನು ಹೇಳುತ್ತಾನೆಯೋ ಅವನಿಗೆ ರತ್ನಗಳಿಂದ ತುಂಬಿದ ಬಂಡಿಯನ್ನೇ ಪಾರಿತೋಷಿಕವಾಗಿ ಕೊಡುತ್ತೇನೆ. ಅರ್ಜುನನನ್ನು ತೋರಿಸಿಕೊಡುವ ಆ ಮನುಷ್ಯನಿಗೆ ರತ್ನದಿಂದ ತುಂಬಿದ ಬಂಡಿಯೂ ಸಾಲದೆನಿಸಿದರೆ ನೂರು ಹಸುಗಳನ್ನೂ-ನಿತ್ಯವೂ ಹಾಲು ಕರೆಯಲು ಬೇಕಾಗುವ ಕಂಚಿನ ಪಾತ್ರೆಗಳನ್ನೂ ಬಹುಮಾನವಾಗಿ ಕೊಡುತ್ತೇನೆ. ಅರ್ಜುನನನ್ನು ತೋರಿಸಿಕೊಡುವ ಪುರುಷನಿಗೆ ಶ್ರೇಷ್ಠವಾದ ನೂರು ಗ್ರಾಮಗಳನ್ನಾದರೂ ಕೊಡುತ್ತೇನೆ. ಇದರ ಜೊತೆಗೆ ಹೇಸರಕತ್ತೆಗಳಿಂದ ಯುಕ್ತವಾದ ಬಿಳಿಯ ರಥವನ್ನೂ ಕೊಡುತ್ತೇನೆ. ಆ ರಥದಲ್ಲಿ ಕಪ್ಪಾದ ಕೇಶರಾಶಿಯನ್ನು ಹೊಂದಿರುವ ಯುವತಿಯರೂ ಇರುತ್ತಾರೆ. ಧನಂಜಯನು ಎಲ್ಲಿರುವನೆಂದು ಹೇಳುವವರು ಈ ನನ್ನ ಪಾರಿತೋಷಿಕಕ್ಕೆ ಅರ್ಹರಾಗಿರುತ್ತಾರೆ. ಅರ್ಜುನನನ್ನು ತೋರಿಸಿಕೊಡುವ ಮನುಷ್ಯನು ಈ ಬಹುಮಾನವನ್ನೂ ಕಡಿಮೆಯೆಂದು ಭಾವಿಸುವುದಾದರೆ ಅವನಿಗೆ ಸುವರ್ಣಮಯವಾದ, ಆನೆಗಳಂತೆ ಹೃಷ್ಟ-ಪುಷ್ಟವಾಗಿರುವ ಆರು ಎತ್ತುಗಳಿಂದ ಯುಕ್ತವಾದ ರಥವನ್ನೇ ಕೊಡುತ್ತೇನೆ. ಇದರ ಜೊತೆಗೆ ಶ್ಯಾಮಲ

ವರ್ಣದವರಾದ (ಹದಿನಾರು ವರ್ಷ ಪ್ರಾಯದ), ಸುವರ್ಣಮಯವಾದ ಕಂಠಾಭರಣಗಳನ್ನು ಧರಿಸಿರುವ, ಗೀತ-ವಾದ್ಯವಿದುಷಿಯರಾದ, ಆಭರಣ ಗಳಿಂದ ಸಮಲಂಕೃತರಾದ ನೂರು ಮಂದಿ ಯುವತಿಯರನ್ನೂ ಕೊಡುತ್ತೇನೆ. ಅರ್ಜುನನನ್ನು ತೋರಿಸಿಕೊಡುವ ಪುರುಷನು ಈ ಬಹುಮಾನವನ್ನೂ ಕಡಿಮೆಯೆಂದು ಭಾವಿಸುವುದಾದರೆ ಅವನಿಗೆ ನಾನು ನೂರು ಆನೆಗಳನ್ನೂ ನೂರು ಗ್ರಾಮಗಳನ್ನೂ-ಸುವರ್ಣಮಯವಾದ ನೂರು ರಥಗಳನ್ನೂ ಹೃಷ್ಟ-ಪುಷ್ಟವಾದ, ಗುಣಯುಕ್ತವಾದ, ವಿನೀತವಾದ ಸುಶಿಕ್ಷಿತವಾದ ಮತ್ತು ರಥದ ಭಾರವನ್ನು ವಹಿಸಲು (ಭಾರವಾದ ರಥವನ್ನೆಳೆಯಲು) ಸಮರ್ಥವಾದ ಹತ್ತು ಸಾವಿರ ಕುದುರೆಗಳನ್ನೂ ಕೊಡುತ್ತೇನೆ.

ಅರ್ಜುನನಿರುವ ಸ್ಥಳವನ್ನು ಪತ್ತೆಮಾಡಿ ಹೇಳಿದವನಿಗೆ ನಾನು ಸುವರ್ಣ ಮಯವಾದ ಕೊಂಬುಗಳಿಂದ ಕೂಡಿರುವ, ಹಾಲುಕೊಡುವ ನಾಲ್ಕು ನೂರು ಹಸುಗಳನ್ನು ಕೊಡುತ್ತೇನೆ. ಅರ್ಜುನನನ್ನು ತೋರಿಸಿ ಕೊಡುವವನು ಈ ನನ್ನ ಕೊಡುಗೆಗೂ ಒಪ್ಪದಿದ್ದರೆ ಸುವರ್ಣಮಯವಾದ ಆಭರಣಗಳಿಂದ ಸಮಲಂಕೃತ ವಾದ, ಶುದ್ಧವಾದ ಮಣಿಗಳಿಂದ ವಿಭೂಷಿತವಾದ ಐದು ನೂರು ಬಿಳಿಯ ಕುದುರೆಗಳನ್ನು ಕೊಡುತ್ತೇನೆ. ಧನಂಜಯನಿರುವ ಸ್ಥಳವನ್ನು ಸೂಚಿಸುವವನಿಗೆ ಐದು ನೂರು ಕುದುರೆಗಳೇ ಅಲ್ಲದೇ ರಥಸಂಚಾಲನದಲ್ಲಿ ಚೆನ್ನಾಗಿ ಪಳಗಿದ ಹದಿನೆಂಟು ಕುದುರೆಗಳನ್ನೂ ಕೊಡುತ್ತೇನೆ. ಶುಭ್ರವಾದ, ಸುವರ್ಣಮಯ ವಾದ, ಸುವರ್ಣಮಾಲೆಗಳಿಂದ ಸಮಲಂಕೃತವಾದ ಮತ್ತು ಶ್ರೇಷ್ಠವಾದ ಕಾಂಬೋಜದೇಶದ ಕುದುರೆಗಳಿಂದ ಯುಕ್ತವಾದ ರಥವನ್ನೂ ವಿಧ-ವಿಧ ವಾದ ಸುವರ್ಣದ ಭೂಷಣಗಳಿಂದ ಆಚ್ಛಾದಿತವಾದ, ಸುವರ್ಣಮಯ ವಾದ ಮಾಲೆಗಳನ್ನೂ ಧರಿಸಿರುವ, ಪಶ್ಚಿಮಸೀಮೆಯ ಕಾಡುಗಳಲ್ಲಿ ಹುಟ್ಟಿದ, ಹಸ್ತಿಶಿಕ್ಷಕರಿಂದ ಪಳಗಿಸಲ್ಪಟ್ಟ ಆರು ನೂರು ಆನೆಗಳನ್ನೂ ಕೊಡುತ್ತೇನೆ. ಅರ್ಜುನದರ್ಶಿಯು ಇದರಿಂದಲೂ ತೃಪ್ತನಾಗದಿದ್ದರೆ ಇದಕ್ಕಿಂತಲೂ ಅಧಿಕವಾದ ಮತ್ತೊಂದು ಪಾರಿತೋಷಿಕವನ್ನೂ ಅವನಿಗೆ ಕೊಡುತ್ತೇನೆ. ಧಾನ್ಯ ಸಮೃದ್ಧವಾದ, ಧನಸಮೃದ್ಧವಾದ, ಸಮೀಪದಲ್ಲಿಯೇ ಅರಣ್ಯಗಳೂ ಮತ್ತು ತಟಾಕಗಳೂ ಇರುವ, ಭಯವೆಂಬುದೇ ಇಲ್ಲದಿರುವ, ಸಕಲವಿಧವಾದ

ನಿತ್ಯೋಪಯೋಗಿವಸ್ತುಗಳಿಂದಲೂ ಸಂಪನ್ನವಾದ, ರಾಜಭೋಗ್ಯವಾದ ಹದಿನಾಲ್ಕು ವೈಶ್ಯಗ್ರಾಮಗಳನ್ನು ಕೊಡುತ್ತೇನೆ. ಅರ್ಜುನನೆಲ್ಲಿರುವನೆಂದು ಹೇಳುವವನಿಗೆ ಸುವರ್ಣಮಾಲೆಗಳನ್ನು ಧರಿಸಿರುವ ಮಗಧದೇಶದ ನವಯುವತಿಯರಾದ ನೂರು ಮಂದಿ ದಾಸಿಯರನ್ನು ಕೊಡುತ್ತೇನೆ. ಅರ್ಜುನನನ್ನು ತೋರಿಸಿಕೊಡುವಂತಹ ಮಹಾಕಾರ್ಯಕ್ಕೆ ಈ ಕೊಡುಗೆಯೂ ಸಾಲದೆನ್ನುವುದಾದರೆ ಯಾವ ವರವನ್ನು ಅರ್ಜುನದರ್ಶಿಯು ಅಪೇಕ್ಷಿಸುತ್ತಾನೆಯೋ ಆ ವರವನ್ನೇ ಕೊಡುತ್ತೇನೆ. ಸ್ತ್ರೀಯರು, ಪುತ್ರರು, ವಿಹಾರಸ್ಥಾನಗಳು–ಈ ಎಲ್ಲವನ್ನೂ ಇವುಗಳೇ ಅಲ್ಲದೇ ನನ್ನಲ್ಲಿರುವ ಐಶ್ವರ್ಯವನ್ನೂ ಅವನಿಗೆ ಕೊಟ್ಟುಬಿಡುತ್ತೇನೆ. ಅವನು ಮನಸ್ಸಿನಲ್ಲಿ ಏನೇನು ಬೇಕೆಂದು ಇಚ್ಛಿಸುತ್ತಾನೆಯೋ ಅವುಗಳೆಲ್ಲವನ್ನೂ ಕೊಟ್ಟುಬಿಡುತ್ತೇನೆ. ನನ್ನಲ್ಲಿರುವ ಐಶ್ವರ್ಯವನ್ನು ಮಾತ್ರವೇ ಅಲ್ಲ;

**ಹತ್ವಾ ಚ ಸಹಿತೌ ಕೃಷ್ಣೌ ತಯೋರ್ವಿತ್ತಾನಿ ಸರ್ವಶಃ**
**ತಸ್ಮೈ ದದ್ಯಾಮಹಂ ಯೋ ಮೇ ಪ್ರಬ್ರೂಯಾತ್ಕೇಶವಾರ್ಜುನೌ ॥**

ಕೃಷ್ಣಾರ್ಜುನರು ಎಲ್ಲಿರುವರೆಂಬ ಸೂಚನೆಯನ್ನು ಕೊಡುವವರಿಗೆ ಕೃಷ್ಣಾರ್ಜುನರನ್ನು ಸಂಹರಿಸಿದನಂತರ ಅವರ ಐಶ್ವರ್ಯವನ್ನೂ ಕೊಟ್ಟುಬಿಡುತ್ತೇನೆ."

ಮಹಾರಾಜ! ಇಂತಹುದೇ ಮಾತುಗಳನ್ನು ಕರ್ಣನು ಹಲವು ಬಾರಿ ಹೇಳುತ್ತಾ, ಸಮುದ್ರದಲ್ಲಿ ಉತ್ಪನ್ನವಾದ ಶುದ್ಧವಾದ ಸ್ವರದಿಂದ ಕೂಡಿದ ಶ್ರೇಷ್ಠವಾದ ಶಂಖವನ್ನೂದಿದನು. ಆ ಸಮಯಕ್ಕೆ ಸಮುಚಿತವಾದ, ಸೂತಪುತ್ರನಾಡಿದ ಮಾತುಗಳನ್ನು ಕೇಳಿ ಅನುಯಾಯಿಗಳೊಡನಿದ್ದ ದುರ್ಯೋಧನನು ಪರಮಹೃಷ್ಟನಾದನು. ಪುನಃ ಸರ್ವತ್ರ ದುಂದುಭಿಗಳ ನಿರ್ಘೋಷವು ಮೊಳಗಿತು. ಮೃದಂಗಗಳ ಧ್ವನಿಯಾಯಿತು. ಮಂಗಳ ವಾದ್ಯಗಳೊಡನೆ ವೀರರು ಸಿಂಹನಾದಗಳನ್ನು ಮಾಡಿದರು. ಆನೆಗಳು ಘೀಂಕರಿಸಿದುವು. ಪುರುಷರ್ಷಭನೇ! ಆ ಸಮಯದಲ್ಲಿ ನಮ್ಮ ಕಡೆಯ ಸೈನ್ಯಗಳಲ್ಲಿ ಸಂಪ್ರಹೃಷ್ಟರಾದ ಯೋಧರ ಹರ್ಷಧ್ವನಿಗಳೂ ಮತ್ತು ಗರ್ಜನೆಗಳೂ ಆಗತೊಡಗಿದುವು. ಹೀಗೆ ಸಂತೋಷಭರಿತವಾದ ಸೈನ್ಯದ

ಮಧ್ಯದಲ್ಲಿ ಹೋಗುತ್ತಿದ್ದ, ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುತ್ತಿದ್ದ, ಅರಿಮರ್ದನನಾದ, ಮಹಾರಥನಾದ ಕರ್ಣನನ್ನು ಕುರಿತು ಮದ್ರರಾಜನು ಗಹ-ಗಹಿಸಿ ನಗುತ್ತಾ ಹೇಳತೊಡಗಿದನು."

೩೮ನೆಯ ಅಧ್ಯಾಯವು ಮುಗಿಯಿತು.

೩೯ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಶಲ್ಯನು ಕರ್ಣನನ್ನು ಕುರಿತು ಆಕ್ಷೇಪಪೂರ್ವಕವಾದ ಮಾತುಗಳನ್ನಾಡಿದುದು.

ಶಲ್ಯನು ಹೇಳುತ್ತಾನೆ:

"ಸೂತಪುತ್ರ! ಅರ್ಜುನನಿರುವೆಡೆಯನ್ನು ತೋರಿಸಿಕೊಡುವ ಸಲುವಾಗಿ ನೀನು ಆನೆಯಂತೆ ಹೃಷ್ಟ-ಪುಷ್ಟವಾದ ಆರು ಎತ್ತುಗಳಿಂದ ಯುಕ್ತವಾದ ಸುವರ್ಣಮಯವಾದ ರಥವನ್ನು ಯಾರಿಗೂ ಕೊಡಬೇಕಾದ ಅವಶ್ಯಕತೆಯೇನಿಲ್ಲ. ಯಾರೂ ತೋರಿಸಿಕೊಡದೇ ಇದ್ದರೂ ನೀನಿಂದು ಅವಶ್ಯವಾಗಿ ಧನಂಜಯನನ್ನು ನೋಡುವೆ.

ಕೇವಲ ಮೂರ್ಖತೆಯ ಕಾರಣದಿಂದ (ಹುಡುಗತನದಿಂದ) ನೀನು ಕುಬೇರನಂತೆ ಹಣವನ್ನು ವ್ಯಯಮಾಡಲು ಹೊರಟಿರುವೆ. ಯಾವ ವಿಧವಾದ ಯತ್ನವೂ ಇಲ್ಲದೆಯೇ (ಯಾರಿಗೂ ಯಾವ ವಿಧವಾದ ಪಾರಿತೋಷಿಕವನ್ನೂ ಕೊಡದೆಯೇ) ನೀನೀಗ ಧನಂಜಯನನ್ನು ನೋಡುವೆ. ಕಡುಮೂಢನಂತೆ ನೀನು ನಿನ್ನಲ್ಲಿರುವ ಬಹುವಿತ್ತವನ್ನು ಅಲ್ಪವಾದ ಹಣದಂತೆ ತ್ಯಾಗಮಾಡುತ್ತಿರುವೆ. ಅಪಾತ್ರನಾದವನಿಗೆ ದಾನ ಮಾಡಿದರೆ ಅದರಿಂದ ಯಾವ ವಿಧವಾದ ದೋಷಗಳು ಸಂಭವಿಸುತ್ತವೆಯೆಂಬುದನ್ನು ನೀನು ಮೋಹಪರವಶನಾಗಿರುವ ಕಾರಣ ಮನಗಂಡಿರುವುದಿಲ್ಲ. ನೀನು ಬಹುಮಾನರೂಪವಾಗಿ ಕೊಡುವೆನೆಂದು ಘೋಷಣೆ ಮಾಡುತ್ತಿರುವ ಅಪಾರವಾದ ಈ ದ್ರವ್ಯದಿಂದ ಅನೇಕವಿಧವಾದ ಯಜ್ಞಗಳನ್ನು ಮಾಡಲು ಶಕ್ಯವಿದೆ. ಆದುದರಿಂದ ನೀನು ನಿನ್ನಲ್ಲಿರುವ ದ್ರವ್ಯವನ್ನು ಅಪಾತ್ರರಾದವರಿಗೆ ದಾನಮಾಡುವುದಕ್ಕೆ ಬದಲಾಗಿ

ಅದೇ ದ್ರವ್ಯದಿಂದಲೇ ಯಜ್ಞವನ್ನು ಮಾಡು. ನೀನು ಕೇವಲ ಮೋಹಪರವಶನಾಗಿ ಕೃಷ್ಣಾರ್ಜುನರನ್ನು ಸಂಹರಿಸಲು ಇಚ್ಛಿಸಿರುವೆ. ಇದು ವ್ಯರ್ಥಪ್ರಯತ್ನವೇ ಸರಿ. ಆದರೆ: **ನ ಹಿ ಶುಶ್ರುಮ ಸಮ್ಮರ್ದೇ ಕ್ರೋಷ್ಟ್ರಾ ಸಿಂಹೌ ನಿಪಾತಿತೌ**-ಸಂಘರ್ಷಣೆಯಲ್ಲಿ ಗುಳ್ಳೇನರಿಯೊಂದು ಎರಡು ಸಿಂಹಗಳನ್ನು ಸಂಹರಿಸಿತೆಂಬ ವಾರ್ತೆಯನ್ನು ನಾವು ಇದುವರೆಗೂ ಕೇಳಿಲ್ಲ. ಇದುವರೆಗೂ ಯಾರೂ ಮಾಡಲು ಇಚ್ಛಿಸದೇ ಇರುವುದನ್ನು ನೀನು ಮಾಡಲು ಹೊರಟಿರುವೆ. ನಿನಗೆ ಸುಹೃದರಾದವರು ಯಾರೂ ಇಲ್ಲವೆಂದೇ ಕಾಣುತ್ತದೆ. ಏಕೆಂದರೆ: ಬೆಂಕಿಯಲ್ಲಿ ಬೀಳುತ್ತಿರುವ ನಿನ್ನನ್ನು ತಡೆಯಲು ಯಾರೂ ಮುಂದೆ ಬರುತ್ತಿಲ್ಲ. ಅಂತಹ ಸುಹೃದರನ್ನು ನೀನು ಪಡೆದು ಕೊಂಡಿಲ್ಲ. 'ಕಾರ್ಯವು ಯಾವುದು? ಅಕಾರ್ಯವು ಯಾವುದು?'–ಎಂಬುದೇ ನಿನಗೆ ತಿಳಿದಿರುವುದಿಲ್ಲ. ಕಾಲನಿಂದ ನೀನು ಪಕ್ವವಾಗಿ ಮಾಡಲ್ಪಟ್ಟಿರುವೆ. (ಪಕ್ವವಾದ ಹಣ್ಣು ಕೆಳಕ್ಕುದುರುವಂತೆ ನೀನೂ ಕೆಳಕ್ಕೆ ಬೀಳುವ ಕಾಲವು ಸನ್ನಿಹಿತವಾಗಿದೆ.) ಇದರಲ್ಲಿ ಸಂದೇಹವೇ ಇಲ್ಲ. ಹಾಗಿಲ್ಲದಿದ್ದರೆ ಜೀವಿಸಿರಲು ಇಚ್ಛಿಸುವ ಯಾವನು ತಾನೇ ಕಿವಿಯಿಂದ ಕೇಳಲೂ ಸಾಧ್ಯವಾಗದೇ ಇರುವುದೂ ಅಬದ್ಧವೂ ಆದ ಮಾತು ಗಳನ್ನಾಡುತ್ತಾನೆ?

**ಸಮುದ್ರತರಣಂ ದೋರ್ಭ್ಯಾಂ ಕಣ್ಠೇ ಬದ್ಧ್ವಾ ಯಥಾ ಶಿಲಾಮ್**
**ಗಿರ್ಯಗ್ರಾದ್ವಾ ನಿಪತನಂ ತಾದೃಕ್ತವ ಚಿಕೀರ್ಷಿತಮ್ ॥೮॥**

ಕಲ್ಲನ್ನು ಕುತ್ತಿಗೆಗೆ ಕಟ್ಟಿಕೊಂಡು ಎರಡು ತೋಳುಗಳಿಂದ ಸಮುದ್ರವನ್ನು ಈಜಲು ಇಚ್ಛಿಸುವುದು ಅಥವಾ ಪರ್ವತದ ಶಿಖರದ ಮೇಲಿನಿಂದ ಕೆಳಕ್ಕೆ ಧುಮುಕಲು ಆಸೆಪಡುವುದು ಎಷ್ಟು ಅಸಮಂಜಸವಾಗಿ ಕಾಣುತ್ತದೆಯೋ ಅದೇ ರೀತಿಯಲ್ಲಿ ನೀನು ಮಾಡಲು ಇಚ್ಛಿಸಿರುವ ಕಾರ್ಯವು ಅಸಮಂಜಸವೂ, ಅಸಂಗತವೂ ಆಗಿದೆ.

**ಸಹಿತಃ ಸರ್ವಯೋಧೈಸ್ತ್ವಂ ವ್ಯೂಢಾನೀಕೈಃ ಸುರಕ್ಷಿತಃ।**
**ಧನಂಜಯೇನ ಯುಧ್ಯಸ್ವ ಶ್ರೇಯಶ್ಚೇತ್ಪ್ರಾಪ್ತುಮಿಚ್ಛಸಿ ॥೯॥**

ಕರ್ಣ! ನೀನು ಶ್ರೇಯಸ್ಸನ್ನು ಇಚ್ಛಿಸುವೆಯಾದರೆ ವ್ಯೂಹಕ್ರಮದಲ್ಲಿ

ಸೈನಿಕರಿಂದ ಸಂರಕ್ಷಿತನಾಗಿ ನಮ್ಮ ಪಕ್ಷದಲ್ಲಿರುವ ಎಲ್ಲ ಯೋಧರೊಡನೆಯೂ ಕೂಡಿಕೊಂಡು ಧನಂಜಯನೊಡನೆ ಯುದ್ಧಮಾಡು.



**ಹಿತಾರ್ಥಂ ಧಾರ್ತರಾಷ್ಟ್ರಸ್ಯ ಬ್ರವೀಮಿ ತ್ವಾಂ ನ ಹಿಂಸಯಾ**
**ಶ್ರದ್ಧತ್ಸ್ವೃತನ್ಮಯಾ ಪ್ರೋಕ್ತಂ ಯದಿ ತೇಽಸ್ತಿ ಜಿಜೀವಿಷಾ ॥೧೦॥**

ಕರ್ಣ! ದುರ್ಯೋಧನನ ಹಿತಾರ್ಥವಾಗಿಯೂ ನಾನು ನಿನ್ನೊಡನೆ ಈ ಮಾತುಗಳನ್ನಾಡುತ್ತಿದ್ದೇನೆ. ನಿನ್ನ ಮನಸ್ಸಿಗೆ ಹಿಂಸೆಯನ್ನುಂಟುಮಾಡ ಬೇಕೆಂಬ ಕಾರಣದಿಂದ ಈ ಮಾತುಗಳನ್ನಾಡುತ್ತಿಲ್ಲ. ನಿನಗೆ ಜೀವಿಸಿರುವ

ಆಶೆಯಿರುವುದಾದರೆ ನನ್ನ ಮಾತಿನಲ್ಲಿ ವಿಶ್ವಾಸವನ್ನಿಡು. ಅದರಂತೆ ಆಚರಿಸು.”

“ಶಲ್ಯ! ನನ್ನ ಬಾಹುಬಲವನ್ನು ಆಶ್ರಯಿಸಿಯೇ ನಾನು ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದೇನೆ. ನೀನಾದರೋ ಮಿತ್ರಮುಖನಾದ ಶತ್ರುವಾಗಿರುವೆ. (ತೋರಿಕೆಗೆ ಮಾತ್ರ ಮಿತ್ರನಾಗಿರುವೆ. ನಿಜವಾಗಿಯೂ ನೀನು ನನ್ನ ಶತ್ರು.) ನೀನು ಮಾತುಗಳಿಂದ ನನ್ನನ್ನು ಭಯಪಡಿಸಲು ಪ್ರಯತ್ನಿಸುತ್ತಿರುವೆ. ಆದರೆ ನನ್ನ ದೃಢವಾದ ಅಭಿಪ್ರಾಯದಿಂದ ಯಾರೂ ನನ್ನನ್ನು ಹಿಮ್ಮೆಟ್ಟಿಸಲಾರರು. ವಜ್ರಾಯುಧವನ್ನೆತ್ತಿಕೊಂಡು ಇಂದ್ರನೇ ಬಂದರೂ ನಾನು ನನ್ನ ಸಂಕಲ್ಪದಿಂದ ಚ್ಯುತನಾಗುವುದಿಲ್ಲ. ಹೀಗಿರುವಾಗ ಮನುಷ್ಯಮಾತ್ರನಾದ ನೀನು ನನ್ನನ್ನು ಹೇಗೆ ಭಯಪಡಿಸುವೆ?”

ಮಹಾರಾಜ! ಕರ್ಣನು ಈ ವಾಕ್ಯವನ್ನು ಮುಗಿಸುತ್ತಿದ್ದಂತೆಯೇ ಮದ್ರೇಶ್ವರನಾದ ಶಲ್ಯನು, ಕರ್ಣನನ್ನು ಅತ್ಯಂತಕುಪಿತನನ್ನಾಗಿ ಮಾಡಬೇಕೆಂಬ ಇಚ್ಛೆಯಿಂದ ಉತ್ತರಿಸಿದನು:

> ಯದಾ ವೈ ತ್ವಾಂ ಫಾಲ್ಗುನವೇಗಯುಕ್ತಾ
> ಜ್ಯಾಚೋದಿತಾ ಹಸ್ತವತಾ ವಿಸೃಷ್ಟಾಃ।
> ಅನ್ವೇತಾರಃ ಕಙ್ಕಪತ್ರಾಃ ಸಿತಾಗ್ರಾ-
> ಸ್ತದಾ ತಪ್ಸ್ಯಸ್ಯರ್ಜುನಸ್ಯಾನುಯೋಗಾತ್ ॥೧೪॥

“ಕರ್ಣ! ವೇಗಯುಕ್ತವಾದ, ಮೌರ್ವಿಯಿಂದ ಪ್ರಚೋದಿತವಾದ, ಸುಶಿಕ್ಷಿತವಾದ ಕೈಯುಳ್ಳವನಿಂದ ಬಿಡಲ್ಪಟ್ಟ, ನಿಶಿತವಾದ ಅಗ್ರಭಾಗಗಳಿಂದ ಕೂಡಿರುವ, ರಣಹದ್ದಿನ ರೆಕ್ಕೆಗಳನ್ನು ಹೊಂದಿರುವ ಅರ್ಜುನನ ಬಾಣಗಳು ನಿನ್ನ ಶರೀರದಲ್ಲಿ ನಾಟಲು ಪ್ರಾರಂಭಿಸಿದಾಗ ಈಗ ನೀನು ಅರ್ಜುನನ ವಿಷಯದಲ್ಲಿ ಆಡುತ್ತಿರುವ ಮಾತಿಗೆ ಮತ್ತು ಮಾಡುತ್ತಿರುವ ಚೇಷ್ಟೆಗೆ ಪರಿತಾಪಪಡುವೆ.

> ಯದಾ ದಿವ್ಯಂ ಧನುರಾದಾಯ ಪಾರ್ಥಃ
> ಪ್ರತಾಪಯನ್ಪೃತನಾಂ ಸವ್ಯಸಾಚೀ।
> ತ್ವಾಂ ಮರ್ದಯಿಷ್ಯನ್ನಿಶಿತೈಃ ಪೃಷತ್ಕೈ-
> ಸ್ತದಾ ಪಶ್ಚಾತ್ತಪ್ಸ್ಯಸೇ ಸೂತಪುತ್ರ ॥೧೫॥

ಸೂತಪುತ್ರ! ಯಾವಾಗ ಸವ್ಯಸಾಚಿಯಾದ ಪೃಥಾಪುತ್ರನು ದಿವ್ಯವಾದ ಗಾಂಡೀವಧನುಸ್ಸನ್ನು ಹಿಡಿದು ಶತ್ರುಸೈನ್ಯವನ್ನು ಬಾಣಗಳಿಂದ ಸಂತಾಪ ಗೊಳಿಸುತ್ತಾ ನಿಶಿತವಾದ ಬಾಣಗಳಿಂದ ನಿನ್ನನ್ನು ಮರ್ದನಮಾಡು ತ್ತಾನೆಯೋ–ಆಗ ನೀನು ಪಶ್ಚಾತ್ತಾಪಪಡುವೆ.

**ಬಾಲಶ್ಚನ್ದ್ರಂ ಮಾತುರಙ್ಕೇ ಶಯಾನೋ**
**ಯಥಾ ಕಶ್ಚಿತ್ಪ್ರಾರ್ಥಯತೇಽಪಹರ್ತುಮ್।**
**ತದ್ವನ್ಮೋಹಾದ್ದ್ಯೋತಮಾನಂ ರಥಸ್ಥಂ**
**ಸಮ್ಪ್ರಾರ್ಥಯಸ್ಯರ್ಜುನಂ ಜೇತುಮದ್ಯ ॥೧೬॥**

ತಾಯಿಯ ತೊಡೆಯ ಮೇಲೆ ಮಲಗಿರುವ ಬಾಲಕನೊಬ್ಬನು ಅಂತರಿಕ್ಷದಲ್ಲಿರುವ ಚಂದ್ರನನ್ನು ಹಿಡಿದುಕೊಳ್ಳಲು ಇಚ್ಛಿಸುವಂತೆ–ನೀನೂ ಮೋಹವಶನಾಗಿ ರಥದಲ್ಲಿ ಕುಳಿತಿರುವ ಮಹಾತೇಜಸ್ಸಿನಿಂದ ಪ್ರಕಾಶಿಸು ತ್ತಿರುವ ಅರ್ಜುನನನ್ನು ಇಂದು ಜಯಿಸಲು ಇಚ್ಛಿಸುತ್ತಿರುವೆ.

**ತ್ರಿಶೂಲಮಾಶ್ರಿತ್ಯ ಸುತೀಕ್ಷ್ಣಧಾರಂ**
**ಸರ್ವಾಣಿ ಗಾತ್ರಾಣಿ ವಿಘರ್ಷಸಿ ತ್ವಮ್।**
**ಸುತೀಕ್ಷ್ಣಧಾರೋಪಮಕರ್ಮಣಾ ತ್ವಂ**
**ಯುಯುತ್ಸಸೇ ಯೋಽರ್ಜುನೇನಾದ್ಯ ಕರ್ಣ ॥೧೭॥**

ಸುತೀಕ್ಷ್ಣವಾದ ಕತ್ತಿಯ ಅಲುಗು ಮಾಡುವ ಕಾರ್ಯಕ್ಕೆ ಅನುರೂಪವಾದ ಕರ್ಮವನ್ನು ಮಾಡುವ (ಶತ್ರುಗಳನ್ನು ಕತ್ತರಿಸಿಹಾಕುವ) ಅರ್ಜುನನೊಡನೆ ನೀನೀಗ ಯುದ್ಧಮಾಡಲು ಇಚ್ಛಿಸಿರುವೆ. ಇದರ ಪರಮಾರ್ಥವೇನೆಂದರೆ ಸುತೀಕ್ಷ್ಣವಾದ ಅಲುಗುಳ್ಳ ತ್ರಿಶೂಲವನ್ನು ತೆಗೆದುಕೊಂಡು ನಿನ್ನ ಎಲ್ಲ ಅವಯವಗಳನ್ನೂ ನೀನೇ ಚುಚ್ಚಿಕೊಂಡಂತಾಗಿದೆ. (ತ್ರಿಶೂಲವನ್ನು ನೆಟ್ಟು ಅದರ ಮೆಲೆ ಬಿದ್ದು ಮೈಯೆಲ್ಲವನ್ನೂ ಗಾಯಗೊಳಿಸಿಕೊಂಡಂತಾಗಿದೆ.)

**ಕ್ರುದ್ಧಂ ಸಿಂಹಂ ಕೇಸರಿಣಂ ಬೃಹನ್ತಂ**
**ಬಾಲೋ ಮೂಢಃ ಕ್ಷುದ್ರಮೃಗಸ್ತರಸ್ವೀ।**
**ಸಮಾಹ್ವಯೇತ್ತದ್ವದೇತತ್ತವಾದ್ಯ**
**ಸಮಾಹ್ವಾನಂ ಸೂತಪುತ್ರಾರ್ಜುನಸ್ಯ ॥೧೮॥**

ಸೂತಪುತ್ರ! ಎಳೆಯದಾದ, ಬುದ್ಧಿಯಿಲ್ಲದ, ಆತುರಬುದ್ಧಿಯ ಕ್ಷುದ್ರಮೃಗವೊಂದು–ಕೋಪಗೊಂಡಿರುವ, ಕೇಸರಯುಕ್ತವಾದ, ವಿಶಾಲಕಾಯದ ಸಿಂಹವನ್ನು ಜಗಳಕ್ಕೆ ಕರೆಯುವಂತೆ–ನೀನು ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸುತ್ತಿರುವೆ.

**ಮಾ ಸೂತಪುತ್ರಾಹ್ವಯ ರಾಜಪುತ್ರಂ**
**ಮಹಾವೀರ್ಯಂ ಕೇಸರಿಣಂ ಯಥೈವ**
**ವನೇ ಶೃಗಾಲಃ ಪಿಶಿತೇನ ತೃಪ್ತೋ**
**ಮಾ ಪಾರ್ಥಮಾಸಾದ್ಯ ವಿನಂಕ್ಷ್ಯಸಿ ತ್ವಮ್ ॥೧೯॥**

ಸೂತಪುತ್ರ! ನೀನು ಮಹಾಪರಾಕ್ರಮಿಯಾದ, ರಾಜಪುತ್ರನಾದ ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸಬೇಡ. ಮಾಂಸಭಕ್ಷಣದಿಂದ ತೃಪ್ತಿಹೊಂದಿದ ಗುಳ್ಳೇನರಿಯು ಅರಣ್ಯದಲ್ಲಿರುವ ಮಹಾಶಕ್ತಿಶಾಲಿಯಾದ ಸಿಂಹವನ್ನು ಜಗಳಕ್ಕೆ ಕರೆದು ನಾಶಹೊಂದುವಂತೆ–ಪಾರ್ಥನೊಡನೆ ಯುದ್ಧ ಮಾಡಲು ಹೋಗಿ ವಿನಾಶಹೊಂದಬೇಡ.

**ಈಷಾದನ್ತಂ ಮಹಾನಾಗಂ ಪ್ರಭಿನ್ನಕರಟಾಮುಖಮ್**
**ಶಶಕೋ ಹ್ವಯಸೇ ಯುದ್ಧೇ ಕರ್ಣ ಪಾರ್ಥಂ ಧನಂಜಯಮ್**

ಕರ್ಣ! ಈಷಾದಂಡದಂತೆ ಕೋರೆದಾಡೆಗಳಿರುವ, ಮದೋದಕವನ್ನು ಸುರಿಸುತ್ತಿರುವ ಮದಗಜವನ್ನು ಮೊಲವೊಂದು ಜಗಳಕ್ಕೆ ಕರೆಯುವಂತೆ–ನೀನು ಧನಂಜಯನನ್ನು ಯುದ್ಧಕ್ಕೆ ಆಹ್ವಾನಿಸುತ್ತಿರುವೆ.

**ಬಿಲಸ್ಥಂ ಕೃಷ್ಣಸರ್ಪಂ ತ್ವಂ ಬಾಲ್ಯಾತ್ಕಾಷ್ಠೇನ ವಿಧ್ಯಸಿ**
**ಮಹಾವಿಷಂ ಪೂರ್ಣಕೋಪಂ ಯತ್ಪಾರ್ಥಂ ಯೋದ್ಧುಮಿಚ್ಛಸಿ**

ಮಹಾವಿಷಯುಕ್ತವಾದ, ಪೂರ್ಣಕೋಪದಿಂದಿರುವ, ಬಿಲದಲ್ಲಡಗಿರುವ ಕೃಷ್ಣಸರ್ಪವನ್ನು ಮೂರ್ಖತನದ ಕಾರಣದಿಂದ ಕೋಲೊಂದನ್ನು ತೆಗೆದುಕೊಂಡು ಚುಚ್ಚುತ್ತಿರುವೆ. ನೀನು ಪಾರ್ಥನೊಡನೆ ಯುದ್ಧಮಾಡಲು ಇಚ್ಛಿಸಿರುವುದು ಈ ಉಪಮಾನಕ್ಕೆ ಅನುರೂಪವಾಗಿದೆ.

**ಸಿಂಹಂ ಕೇಸರಿಣಂ ಕ್ರುದ್ಧಮತಿಕ್ರಮ್ಯಾಭಿನರ್ದಸಿ**
**ಶೃಗಾಲ ಇವ ಮೂಢಸ್ತ್ವಂ ನೃಸಿಂಹಂ ಕರ್ಣ ಪಾಣ್ಡವಮ್ ॥೨೨॥**

ಕರ್ಣ! ನಿಶ್ಚಯವಾಗಿಯೂ ನೀನು ಮೂರ್ಖನೇ ಸರಿ. ಗುಳ್ಳೇನರಿಯು ಕೋಪಗೊಂಡ ಕೇಸರಯುಕ್ತವಾದ ಸಿಂಹವನ್ನು ಅನಾದರಿಸಿ ಗರ್ಜನೆ ಮಾಡುವಂತೆ-ನೀನೂ ಸಹ ನರಸಿಂಹನಾದ ಅರ್ಜುನನನ್ನು ಅನಾದರಿಸಿ ಗರ್ಜನೆಮಾಡುತ್ತಿರುವೆ.

**ಸುಪರ್ಣಂ ಪತಗಶ್ರೇಷ್ಠಂ ವೈನತೇಯಂ ತರಸ್ವಿನಮ್।**
**ಭೋಗೀವಾಹ್ವಯಸೇ ಪಾತೇ ಕರ್ಣ ಪಾರ್ಥಂ ಧನಂಜಯಮ್ ॥**

ಕರ್ಣ! ಯಾವ ರೀತಿಯಲ್ಲಿ ಸರ್ಪವೊಂದು ತನ್ನ ವಿನಾಶಕ್ಕಾಗಿಯೇ ಪಕ್ಷಿಶ್ರೇಷ್ಠನಾದ, ವೇಗವಂತನಾದ, ವಿನತೆಯ ಮಗನಾದ, ಸುಪರ್ಣನಾದ ಗರುಡನನ್ನು ತನ್ನ ಮೇಲೆ ಬೀಳುವಂತೆ ಆಹ್ವಾನಿಸುತ್ತದೆಯೋ-ಅದೇ ರೀತಿಯಲ್ಲಿ ನೀನೂ ಸಹ ಧನಂಜಯನನ್ನು ನಿನ್ನ ವಿನಾಶಕ್ಕಾಗಿಯೇ ಯುದ್ಧಕ್ಕೆ ಆಹ್ವಾನಿಸುತ್ತಿರುವೆ.

**ಸರ್ವಾಮ್ಭಸಾಂ ನಿಧಿಂ ಭೀಮಂ ಮೂರ್ತಿಮನ್ತಂ ಝಷಾಯುತಮ್।**
**ಚನ್ದ್ರೋದಯೇ ವಿವರ್ಧನ್ತಮಪ್ಲವಃ ಸಂತ್ತಿತೀರ್ಷಸಿ ॥೨೪॥**

ಕರ್ಣ! ಚಂದ್ರೋದಯದಲ್ಲಿ ಉಕ್ಕಿಬರುತ್ತಿರುವ, ಜಲಜಂತುಗಳಿಂದ ಸಮೃದ್ಧವಾಗಿರುವ, ಎತ್ತರವಾದ ಅಲೆಗಳಿಂದ ವ್ಯಾಪ್ತವಾಗಿರುವ, ಅಗಾಧವಾದ ಜಲರಾಶಿಯಿಂದ ಕೂಡಿರುವ ಭಯಂಕರವಾದ ಸಮುದ್ರವನ್ನು ದೋಣಿಯ ಸಹಾಯವೇ ಇಲ್ಲದೆ ಕೇವಲ ಬಾಹುಗಳಿಂದಲೇ ದಾಟಲು ನೀನು ಇಚ್ಛಿಸಿರುವೆ.

**ಋಷಭಂ ದುನ್ದುಭಿಗ್ರೀವಂ ತೀಕ್ಷ್ಣಶೃಙ್ಗಂ ಪ್ರಹಾರಿಣಮ್।**
**ವತ್ಸ ಆಹ್ವಯಸೇ ಯುದ್ಧೇ ಕರ್ಣ ಪಾರ್ಥಂ ಧನಂಜಯಮ್॥೨೫॥**

ಕರ್ಣ! ದುಂದುಭಿಯ ನಿನಾದದಂತೆ ಗಂಭೀರವಾದ ಕಂಠಧ್ವನಿಯಿರುವ, ತೀಕ್ಷ್ಣವಾದ ಕೊಂಬಿನಿಂದ ಕೂಡಿರುವ, ಪ್ರಹಾರಕುಶಲವಾದ ವೃಷಭವನ್ನು ಗೋವತ್ಸವು ಹೋರಾಟಕ್ಕೆ ಕರೆಯುವಂತೆ–ಅತುಲ ಪರಾಕ್ರಮಿಯಾದ ಪಾರ್ಥನನ್ನು ನೀನು ಯುದ್ಧಕ್ಕೆ ಆಹ್ವಾನಿಸುತ್ತಿರುವೆ.

**ಮಹಾಮೇಘಂ ಮಹಾಘೋರಂ ದರ್ದುರಃ ಪ್ರತಿನರ್ದತಿ।**
**ಬಾಣತೋಯಪ್ರದಂ ಲೋಕೇ ನರಪರ್ಜನ್ಯಮರ್ಜುನಮ್ ॥೨೬॥**

ಯಾವ ರೀತಿಯಲ್ಲಿ ಮಹಾಘೋರವಾದ ಮಹಾಮೇಘದ ಧ್ವನಿಗೆ ಪ್ರತಿಯಾಗಿ ಕಪ್ಪೆಯೊಂದು ವಟಗುಟ್ಟುತ್ತದೆಯೋ-ಅದೇ ರೀತಿಯಲ್ಲಿ ನೀನೂ ಸಹ ಬಾಣವೆಂಬ ನೀರನ್ನು ಸುರಿಸುವ ನರರೂಪಿಯಾದ ಅರ್ಜುನನೆಂಬ ಪರ್ಜನ್ಯನನ್ನು ನೋಡುತ್ತಲೇ ನಿಷ್ಪ್ರಯೋಜಕವಾದ ಗರ್ಜನೆಯನ್ನು ಮಾಡುತ್ತಿರುವೆ.

**ಯಥಾ ಚ ಸ್ವಗೃಹಸ್ಥಃ ಶ್ವಾ ವ್ಯಾಘ್ರಂ ವನಗತಂ ಭಷೇತ್।**
**ತಥಾ ತ್ವಂ ಭಷಸೇ ಕರ್ಣ ನರವ್ಯಾಘ್ರಂ ಧನಂಜಯಮ್ ॥೨೭॥**

ತನ್ನ ಗೂಡಿನಲ್ಲಿ ಕುಳಿತಿರುವ ನಾಯಿಯೊಂದು ಅರಣ್ಯದಲ್ಲಿರುವ ವ್ಯಾಘ್ರದ ಕಡೆಗೆ ಮುಖಮಾಡಿ ಬಗುಳುವಂತೆ–ನೀನೂ ಸಹ ನರವ್ಯಾಘ್ರನಾದ ಧನಂಜಯನನ್ನು ಲಕ್ಷ್ಯದಲ್ಲಿಟ್ಟುಕೊಂಡು ಮನಬಂದಂತೆ ಗಳಹುತ್ತಿರುವೆ.

**ಶೃಗಾಲೋಽಪಿ ವನೇ ಕರ್ಣ ಶಶೈಃ ಪರಿವೃತೋ ವಸನ್।**
**ಮನ್ಯತೇ ಸಿಂಹಮಾತ್ಮಾನಂ ಯಾವತ್ಸಿಂಹಂ ನ ಪಶ್ಯತಿ ॥೨೮॥**

ಕರ್ಣ! ಅರಣ್ಯದಲ್ಲಿರುವ ಗುಳ್ಳೇನರಿಯೂ ಮೊಲಗಳಿಂದ ಪರಿವೃತವಾಗಿ ಅವುಗಳೊಂದಿಗೆ ವಾಸಮಾಡುತ್ತಿರುವಾಗ 'ತಾನೇ ಸಿಂಹ' ಎಂದು ಭಾವಿಸಿಕೊಳ್ಳುತ್ತದೆ. ಆದರೆ ಆ ಭಾವನೆಯು ಅದಕ್ಕೆ ನಿಜವಾದ ಸಿಂಹವನ್ನು ನೋಡುವವರಿಗೆ ಮಾತ್ರವೇ ಇರುತ್ತದೆ. (ಮೊಲಗಳ ರೂಪದಲ್ಲಿರುವ ಕುರುಯೋಧರ ಮಧ್ಯದಲ್ಲಿ ನೀನು ಯದ್ಯಪಿ ಗುಳ್ಳೇನರಿಯೇ ಆಗಿದ್ದರೂ, 'ಪುರುಷಸಿಂಹ' ಎಂಬ ಅಭಿಮಾನದಿಂದ ಮೆರೆಯುತ್ತಿರುವೆ. ಆದರೆ ಪುರುಷಸಿಂಹನಾದ ಅರ್ಜುನನನ್ನು ನೀನು ನೋಡಿದನಂತರ 'ನಾನೇ ಪುರುಷಸಿಂಹ' ಎಂಬ ಭಾವನೆಯು ನಿನ್ನಲ್ಲಿ ಉಳಿಯವುದಿಲ್ಲ. ಇದನ್ನೇ ಮುಂದಿನ ಶ್ಲೋಕದಲ್ಲಿ ವಿವರಿಸಿದ್ದಾರೆ.)

**ತಥಾ ತ್ವಮಪಿ ರಾಧೇಯ ಸಿಂಹಮಾತ್ಮಾನಮಿಚ್ಛಸಿ**
**ಅಪಶ್ಯಞ್ಛತ್ರುದಮನಂ ನರವ್ಯಾಘ್ರಂ ಧನಂಜಯಮ್ ॥೨೯॥**

ಅದೇ ರೀತಿಯಲ್ಲಿ ನೀನಾದರೂ ಶತ್ರುದಮನನಾದ, ಪುರುಷಸಿಂಹ ನಾದ ಅರ್ಜುನನನ್ನು ಕಾಣದೇ ಇರುವುದರಿಂದ ನಾನೇ ಪುರುಷಸಿಂಹ ಎಂದು ಹೇಳಿಕೊಳ್ಳಲು ಇಚ್ಛೆಪಡುತ್ತಿರುವೆ.

**ವ್ಯಾಘ್ರಂ ತ್ವಂ ಮನ್ಯಸೇಽತ್ಮಾನಂ ಯಾವತ್ಕೃಷ್ಣೌ ನ ಪಶ್ಯಸಿ**
**ಸಮಾಸ್ಥಿತಾವೇಕರಥೇ ಸೂರ್ಯಾಚನ್ದ್ರಮಸಾವಿವ ॥೩೦॥**

ಒಂದೇ ರಥದಲ್ಲಿ ಕುಳಿತು ಸೂರ್ಯ-ಚಂದ್ರರಂತೆ ಪ್ರಕಾಶಿಸುತ್ತಿರುವ ಕೃಷ್ಣಾರ್ಜುನರನ್ನು ನೀನು ಎಲ್ಲಿಯವರೆಗೆ ನೋಡುವುದಿಲ್ಲವೋ– ಅಲ್ಲಿಯವರೆಗೆ 'ನಾನೇ ಪುರುಷಸಿಂಹ' ಎಂದೇ ನೀನು ಭಾವಿಸುವೆ.

**ಯಾವದ್ಗಾಣ್ಡೀವಘೋಷಂ ತ್ವಂ ನ ಶೃಣೋಷಿ ಮಹಾಹವೇ**
**ತಾವದೇವ ತ್ವಯಾ ಕರ್ಣ ಶಕ್ಯಂ ವಕ್ತುಂ ಯಥೇಚ್ಛಸಿ ॥೩೧॥**

ಕರ್ಣ! ರಣಾಂಗಣದಲ್ಲಿ ಎಲ್ಲಿಯವರೆಗೆ ನೀನು ಗಾಂಡೀವಧನುಸ್ಸಿನ ಟೇಂಕಾರವನ್ನು ಕೇಳುವುದಿಲ್ಲವೋ–ಅಲ್ಲಿಯವರೆಗೆ ಮಾತ್ರವೇ ನಿನಗಿಷ್ಟ ಬಂದಂತೆ ನೀನು ಹರಟಿಕೊಳ್ಳಬಹುದಾಗಿದೆ.

**ರಥಶಬ್ದಧನುಃಶಬ್ದೈರ್ನಾದಯನ್ತಂ ದಿಶೋ ದಶ**
**ನರ್ದನ್ತಮಿವ ಶಾರ್ದೂಲಂ ದೃಷ್ಟ್ವಾ ಕ್ರೋಷ್ಟಾ ಭವಿಷ್ಯಸಿ ॥೩೨॥**

ರಥದ ಗಡಾ-ಗಡಾ ಶಬ್ದದಿಂದಲೂ ಮತ್ತು ಗಾಂಡೀವಧನುಸ್ಸಿನ ಟೇಂಕಾರಶಬ್ದದಿಂದಲೂ ಹತ್ತು ದಿಕ್ಕುಗಳನ್ನೂ ಪ್ರತಿಧ್ವನಿಗೊಳಿಸುವ, ಸಿಂಹದಂತೆಯೇ ಗರ್ಜನೆಮಾಡುವ ಅರ್ಜುನನನ್ನು ನೋಡಿದೊಡನೆಯೇ ನೀನು ಗುಳ್ಳೇನರಿಯಾಗಿಬಿಡುವೆ.

**ನಿತ್ಯಮೇವ ಶೃಗಾಲಸ್ತ್ವಂ ನಿತ್ಯಂ ಸಿಂಹೋ ಧನಂಜಯಃ**
**ವೀರಪ್ರದ್ವೇಷಣಾನ್ಮೂಢ ತಸ್ಮಾತ್ಕ್ರೋಷ್ಟೇವ ಲಕ್ಷ್ಯಸೇ ॥೩೩॥**

ಪುರುಷಸಿಂಹನಾದ ಅರ್ಜುನನನ್ನು ನೋಡಿದನಂತರವೇ ನೀನು ಗುಳ್ಳೇನರಿಯಾಗುವುದಿಲ್ಲ. ನೀನು ಎಂದೆಂದಿಗೂ ಗುಳ್ಳೇನರಿಯೇ ಸರಿ. ಅರ್ಜುನನು ಎಂದೆಂದಿಗೂ ಪುರುಷಸಿಂಹನೇ ಸರಿ. ಮೂರ್ಖ! ವೀರರಾದ ವರನ್ನು ಬಹಳವಾಗಿ ದ್ವೇಷಿಸುವುದರಿಂದಲೇ ನೀನು ಗುಳ್ಳೇನರಿಯಂತೆ ಕಾಣುವೆ.

**ಯಥಾಖುಃ ಸ್ಯಾದ್ಬಿಡಾಲಶ್ಚ ಶ್ವಾ ವ್ಯಾಘ್ರಶ್ಚ ಬಲಾಬಲೇ**
**ಯಥಾ ಶೃಗಾಲಃ ಸಿಂಹಶ್ಚ ಯಥಾ ಚ ಶಶಕುಞ್ಜರೌ ॥೩೪॥**

ಬಲಾಬಲಗಳ ತುಲನೆಯಲ್ಲಿ ಅರ್ಜುನನಿಗೂ ಮತ್ತು ನಿನಗೂ ಬೆಕ್ಕು-ಇಲಿಗಳ ಸಾಮ್ಯವಿದೆ. ವ್ಯಾಘ್ರ ಮತ್ತು ನಾಯಿಗಳ ಸಾಮ್ಯವಿದೆ. ಸಿಂಹ ಮತ್ತು ಗುಳ್ಳೇನರಿಗಳ ಸಾಮ್ಯವಿದೆ. ಆನೆ ಮತ್ತು ಮೊಲಗಳ ಸಾಮ್ಯವಿದೆ. (ಅರ್ಜುನನ ಎದುರಿನಲ್ಲಿ ನೀನು ಅತ್ಯಂತದುರ್ಬಲನು.)

**ಯಥಾನೃತಂ ಚ ಸತ್ಯಂ ಚ ಯಥಾ ಚಾಪಿ ವಿಷಾಮೃತೇ**
**ತಥಾ ತ್ವಮಪಿ ಪಾರ್ಥಶ್ಚ ಪ್ರಖ್ಯಾತಾವಾತ್ಮಕರ್ಮಭಿಃ ॥೩೫॥**

ನೀನೂ ಮತ್ತು ಪಾರ್ಥನೂ ಮಾಡಿರುವ ದುಷ್ಕರ್ಮ-ಸತ್ಕರ್ಮಗಳಿಂದ ಸುಳ್ಳು ಮತ್ತು ಸತ್ಯಗಳಂತೆಯೂ ವಿಷ ಮತ್ತು ಅಮೃತಗಳಂತೆಯೂ ಖ್ಯಾತಿಯನ್ನು ಹೊಂದಿರುವಿರಿ."

ಶ೯ನೆಯ ಅಧ್ಯಾಯವು ಮುಗಿಯಿತು.

೪೦ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣನು ಮದ್ರದೇಶದ ನಿವಾಸಿಗಳನ್ನು ನಿಂದಿಸುವ ವ್ಯಾಜದಿಂದ ಶಲ್ಯನನ್ನು ನಿಂದಿಸಿದುದು

ಮಹಾರಾಜ! ಮಹಾತೇಜಸ್ವಿಯಾದ ಶಲ್ಯನು ಕರ್ಣನನ್ನು ಬಹಳ ಹೀನವಾಗಿ ನಿಂದಿಸಲಾಗಿ, ಅತ್ಯಂತಕ್ರುದ್ಧನಾದ ಕರ್ಣನು ವಚನರೂಪವಾದ ಬಾಣಗಳನ್ನು ಬಿಡುವುದರಿಂದಲೇ ಮದ್ರೇಶ್ವರನಿಗೆ ಶಲ್ಯನೆಂಬ ಹೆಸರು ಬಂದಿರಬಹುದೆಂದು ಭಾವಿಸಿ ಅವನನ್ನು ಕುರಿತು ಹೇಳಿದನು:

**ಗುಣಾನ್ಗುಣವತಾಂ ಶಲ್ಯ ಗುಣವಾನ್ವೇತ್ತಿ ನಾಗುಣಃ**
**ತ್ವಂ ತು ಶಲ್ಯ ಗುಣೈರ್ಹೀನಃ ಕಿಂ ಜ್ಞಾಸ್ಯಸಿ ಗುಣಾಗುಣಮ್ ॥೨॥**

"ಶಲ್ಯ! ಗುಣವಂತನಾದವನು ಮಾತ್ರವೇ ಗುಣವಂತರ ಗುಣಗಳನ್ನು ತಿಳಿದುಕೊಳ್ಳುತ್ತಾನೆ. ಗುಣಹೀನನಾದವನು ಖಂಡಿತವಾಗಿಯೂ ತಿಳಿಯಲಾರನು. ನೀನಾದರೋ ಗುಣಗಳಿಂದ ಹೀನನಾಗಿರುವೆ. ಆದುದರಿಂದ ನೀನು ಗುಣಾಗುಣಗಳನ್ನು ಹೇಗೆ ತಾನೇ ತಿಳಿಯುವೆ?

ಮಹಾತ್ಮನಾದ ಅರ್ಜುನನಲ್ಲಿರುವ ಮಹಾಸ್ತ್ರಗಳು, ಅವನ

ಕ್ರೋಧ-ವೀರ್ಯಗಳು, ಅವನಲ್ಲಿರುವ ಅಜೇಯವಾದ ಧನುಸ್ಸು, ಅಕ್ಷಯವಾದ ಬಾಣಗಳು, ಅವನ ಪರಾಕ್ರಮ–ಇವುಗಳೆಲ್ಲವನ್ನೂ ನಾನು ಚೆನ್ನಾಗಿಯೇ ತಿಳಿದುಕೊಂಡಿದ್ದೇನೆ. ಇದೇ ರೀತಿಯಲ್ಲಿ ರಾಜಶಿರೋಮಣಿಯಾದ ಶ್ರೀಕೃಷ್ಣನ ಮಾಹಾತ್ಮ್ಯವನ್ನೂ ತಿಳಿದುಕೊಂಡಿದ್ದೇನೆ. ಅವರ ವಿಷಯದಲ್ಲಿ ನಾನು ತಿಳಿದುಕೊಂಡಿರುವಷ್ಟು ನೀನು ಖಂಡಿತವಾಗಿಯೂ ತಿಳಿದಿರುವುದಿಲ್ಲ. ಹೀಗೆ ನಾನು ನನ್ನಲ್ಲಿರುವ ಪರಾಕ್ರಮವನ್ನೂ ಪಾರ್ಥನಲ್ಲಿರುವ ವೀರ್ಯವನ್ನೂ ಸ್ಪಷ್ಟವಾಗಿ ತಿಳಿದುಕೊಂಡಿರುವುದರಿಂದಲೇ ಗಾಂಡೀವಧರನಾದ ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದೇನೆ.

ನನ್ನಲ್ಲಿರುವ ವೀರ್ಯಸಂಪತ್ತಿಯನ್ನೂ ನಿನಗೆ ಹೇಳುತ್ತೇನೆ, ಕೇಳು:

**ಅಸ್ತಿ ವಾಯುಮಿಷುಃ ಶಲ್ಯ ಸುಪುಙ್ಖೋ ರಕ್ತಭೋಜನಃ**
**ಏಕತೂಣೀಶಯಃ ಪತ್ರೀ ಸುಧೌತಃ ಸಮಲಂಕೃತಃ ॥೬॥**

ಶಲ್ಯ! ನನ್ನಲ್ಲಿ ಸುಂದರವಾದ ಹಿಂಭಾಗವನ್ನು ಹೊಂದಿರುವ ರಕ್ತಭೋಜಿಯಾದ ಒಂದು ಬಾಣವಿದೆ. ಆ ಒಂದು ಬಾಣವನ್ನೇ ಪ್ರತ್ಯೇಕವಾಗಿ ಒಂದು ತೂಣೀರದಲ್ಲಿಟ್ಟಿದ್ದೇನೆ. ಆ ಬಾಣವು ಚೆನ್ನಾಗಿ ಶುದ್ಧಗೊಳಿಸಲ್ಪಟ್ಟಿದ್ದು ರಣಹದ್ದಿನ ರೆಕ್ಕೆಗಳಿಂದ ಸಮಲಂಕೃತವಾಗಿದೆ.

**ಶೇತೇ ಚನ್ದನಚೂರ್ಣೇಷು ಪೂಜಿತೋ ಬಹುಲಾಃ ಸಮಾಃ**
**ಆಹೇಯೋ ವಿಷವಾನುಗ್ರೋ ನರಾಶ್ವಾದ್ವಿಪಸಂಘಹಾ ॥೭॥**

ಅನೇಕವರ್ಷಗಳಿಂದ ಪೂಜೆಗೊಳ್ಳುತ್ತಿರುವ, ನರಾಶ್ವ-ಗಜಸಮೂಹಗಳನ್ನು ಒಂದೇಬಾರಿಗೆ ಧ್ವಂಸಮಾಡುವ, ವಿಷಯುಕ್ತವಾದ ಮತ್ತು ಭಯಂಕರವಾದ ಸರ್ಪಮಯವಾದ ಆ ಬಾಣವು ಗಂಧದ ಪುಡಿಯ ಮಧ್ಯದಲ್ಲಿ ಮಲಗಿದೆ.

**ಘೋರರೂಪೋ ಮಹಾರೌದ್ರಸ್ತನುತ್ರಾಸ್ಥಿವಿದಾರಣಃ**
**ನಿರ್ಭಿನ್ದ್ಯಾಂ ಯೇನ ರುಷ್ಟೋಽಹಮಪಿ ಮೇರುಂ ಮಹಾಗಿರಿಮ್ ॥೮॥**

ನನ್ನಲ್ಲಿರುವ ಆ ಸರ್ಪಾಸ್ತ್ರವು ಘೋರರೂಪವಾದುದು; ಮಹಾಭಯಂಕರವಾದುದು; ಕವಚವನ್ನೂ ಮತ್ತು ಮೂಳೆಗಳನ್ನೂ ಭೇದಿಸುವ

ಸಾಮರ್ಥ್ಯವುಳ್ಳದ್ದು; ನಾನೇನಾದರೂ ಕುಪಿತನಾದರೆ ಆ ಒಂದು ಬಾಣದಿಂದಲೇ ಮಹಾಗಿರಿಯಾದ ಮೇರುವನ್ನಾದರೂ ಭೇದಿಸಿಬಿಡಬಲ್ಲೆನು.

**ತಮಹಂ ಜಾತು ನಾಸ್ಯೇಯಮನ್ಯಸ್ಮಿನ್ಫಾಲ್ಗುನಾದೃತೇ।**
**ಕೃಷ್ಣಾದ್ವಾ ದೇವಕೀಪುತ್ರಾತ್ಸತ್ಯಂ ಚಾಪಿ ಶೃಣುಷ್ವ ಮೇ ॥೯॥**

ಆ ಮಹಾಸ್ತ್ರವನ್ನು ನಾನು ಅರ್ಜುನ ಅಥವಾ ದೇವಕಿಯ ಮಗನಾದ ಶ್ರೀಕೃಷ್ಣನನ್ನು ಬಿಟ್ಟು ಮತ್ತಾರ ಮೇಲೂ ಪ್ರಯೋಗಿಸುವುದಿಲ್ಲ. ನನ್ನ ಸತ್ಯವಚನವನ್ನು ಕಿವಿಗೊಟ್ಟು ಕೇಳು.

ಶಲ್ಯ! ಪರಮಕ್ರುದ್ಧನಾದ ನಾನು ಆ ಬಾಣದಿಂದಲೇ ವಾಸುದೇವ-ಧನಂಜಯರೊಡನೆ ಯುದ್ಧಮಾಡುತ್ತೇನೆ. ಹೀಗೆ ಮಾಡುವುದು ನನ್ನ ಪರಾಕ್ರಮಕ್ಕೆ ಅನುಗುಣವಾಗಿಯೇ ಇದೆ.

**ಸರ್ವೇಷಾಂ ವೃಷ್ಣಿವೀರಾಣಾಂ ಕೃಷ್ಣೇ ಲಕ್ಷ್ಮೀಃ ಪ್ರತಿಷ್ಠಿತಾ।**
**ಸರ್ವೇಷಾಂ ಪಾಣ್ಡುಪುತ್ರಾಣಾಂ ಜಯಃ ಪಾರ್ಥೇ ಪ್ರತಿಷ್ಠಿತಃ।**
**ಉಭಯಂ ತು ಸಮಾಸಾದ್ಯ ಕೋ ನಿವರ್ತಿತುಮರ್ಹತಿ ॥೧೧॥**

ಎಲ್ಲ ವೃಷ್ಣಿವೀರರ ಸಂಪತ್ತಿಯೂ ಶ್ರೀಕೃಷ್ಣನಲ್ಲಿಯೇ ಪ್ರತಿಷ್ಠಿತವಾಗಿದೆ. ಎಲ್ಲ ಪಾಂಡುಪುತ್ರರ ವಿಜಯವೂ ಅರ್ಜುನನಲ್ಲಿಯೇ ಪ್ರತಿಷ್ಠಿತವಾಗಿದೆ. ಇಂತಹ ಮಹಾನುಭಾವರಿಬ್ಬರನ್ನೂ ಎದುರಿಸಿ ಯಾವ ವೀರನು ತಾನೇ ಯುದ್ಧದಿಂದ ಹಿಂದಿರುಗಲು ಅಪೇಕ್ಷಿಸುತ್ತಾನೆ? (ಕೃಷ್ಣಾರ್ಜುನರನ್ನು ಎದುರಿಸುವುದೇ ಒಂದು ಗೌರವ. ಅವರಿಬ್ಬರನ್ನೂ ಏಕಕಾಲದಲ್ಲಿ ಜಯಿಸುವುದರಿಂದ ವಿಜಯ ಮತ್ತು ಸಂಪತ್ತು–ಎರಡೂ ಲಭಿಸಿದಂತಾಗುತ್ತದೆ. ಇಂತಹ ಸದವಕಾಶವನ್ನು ಯಾರು ತಾನೇ ಕಳೆದುಕೊಳ್ಳಲು ಇಚ್ಛಿಪಡುತ್ತಾರೆ?)

**ತಾವೇತೌ ಪುರುಷವ್ಯಾಘ್ರೌ ಸಮೇತೌ ಸ್ಯನ್ದನೇ ಸ್ಥಿತೌ।**
**ಮಾಮೇಕಮಭಿಸಂಯಾತೌ ಸುಜಾತಂ ಪಶ್ಯ ಶಲ್ಯ ಮೇ ॥೧೨॥**

ಆ ಪುರುಷಸಿಂಹರಿಬ್ಬರೂ ಒಂದೇ ರಥದಲ್ಲಿ ಕುಳಿತು ಏಕಾಕಿಯಾದ ನನ್ನೊಬ್ಬನ ಮೇಲೆಯೇ ಆಕ್ರಮಣನಡೆಸಲು ಬರುತ್ತಾರೆ. ಇದರಿಂದ ನನ್ನ ಜನ್ಮವು ಎಷ್ಟು ಶ್ರೇಷ್ಠವೆಂಬುದನ್ನು ನೀನೇ ಯೋಚಿಸು.

**ಪಿತೃಷ್ವಸಾಮಾತುಲಜೌ ಭ್ರಾತರಾವಪರಾಜಿತೌ।**
**ಮಣೀ ಸೂತ್ರ ಇವ ಪ್ರೋತೌ ದೃಷ್ಟ್ವಾಸಿ ನಿಹತೌ ಮಯಾ ॥೧೩॥**

ಶ್ರೀಕೃಷ್ಣನಿಗೆ ಅರ್ಜುನನು ಸೋದರತ್ತೆಯ ಮಗ. ಅರ್ಜುನನಿಗೆ ಶ್ರೀಕೃಷ್ಣನು ಸೋದರಮಾವನ ಮಗ. ಇಬ್ಬರೂ ಸಹೋದರರಂತೆಯೇ ಇರತಕ್ಕವರು. ಪರಾಜಯವೆಂಬುದನ್ನೇ ಕಾಣದವರು. ದಾರದಲ್ಲಿ ಪೋಣಿಸಿರುವ ಎರಡು ಮಣಿಗಳಂತೆ ಯಾವಾಗಲೂ ಜೊತೆಯಲ್ಲಿಯೇ ಇರತಕ್ಕವರು. ಆ ಇಬ್ಬರೂ ಇಂದು ನನ್ನಿಂದ ಹತರಾಗುವುದನ್ನು ನೀನೇ ಕಾಣುವೆ.

**ಅರ್ಜುನೇ ಗಾಣ್ಡಿವಂ ಕೃಷ್ಣೇ ಚಕ್ರಂ ತಾರ್ಕ್ಷ್ಯಕಪಿಧ್ವಜೌ।**
**ಭೀರೂಣಾಂ ತ್ರಾಸಜನನಂ ಶಲ್ಯ ಹರ್ಷಕರಂ ಮಮ ॥೧೪॥**

ಅರ್ಜುನನ ಕೈಯಲ್ಲಿ ಗಾಂಡೀವಧನುಸ್ಸಿದೆ. ಕೃಷ್ಣನ ಕೈಯಲ್ಲಿ ಚಕ್ರವಿದೆ. ಕೃಷ್ಣನು ಗರುಡಧ್ವಜನು. ಅರ್ಜುನನು ಕಪಿಧ್ವಜನು. ಈ ದೃಶ್ಯವನ್ನು ನೋಡಿದೊಡನೆಯೇ ಭೀರುಗಳಿಗೆ ಭಯವುಂಟಾಗುತ್ತದೆ. ನನಗಾದರೋ ಈ ದೃಶ್ಯವನ್ನು ನೋಡುವುದರಿಂದ ಅತಿಶಯವಾದ ಸಂತೋಷವಾಗುತ್ತದೆ.

**ತ್ವಂ ತು ದುಷ್ಪ್ರಕೃತಿರ್ಮೂಢೋ ಮಹಾಯುದ್ಧೇಷ್ವಕೋವಿದಃ**
**ಭಯಾವದೀರ್ಣಃ ಸಂತ್ರಾಸಾದಬದ್ಧಂ ಬಹು ಭಾಷಸೇ ॥೧೫॥**

ಶಲ್ಯ! ನೀನು ಬಹಳ ದುಷ್ಟಸ್ವಭಾವದವನು. ಮಹಾಮೂರ್ಖನು. ಮಹಾಯುದ್ಧಗಳ ವಿಷಯವೇ ನಿನಗೆ ತಿಳಿಯದು. ಭಯದಿಂದ ನಿನ್ನ ಹೃದಯವು ಈಗಾಗಲೇ ಒಡೆದುಹೋಗಿದೆ. ಈ ಕಾರಣದಿಂದಲೇ ನೀನು ಅಸಂಗತವಾದ ಮಾತುಗಳನ್ನೇ ಬಹಳವಾಗಿ ಆಡುತ್ತಿರುವೆ.

**ಸಂಸ್ತೌಷಿ ತೌ ತು ಕೇನಾಪಿ ಹೇತುನಾ ತ್ವಂ ಕುದೇಶಜ**
**ತೌ ಹತ್ವಾ ಸಮರೇ ಹನ್ತಾ ತ್ವಾಮದ್ಯ ಸಹಬಾನ್ಧವಮ್।**
**ಪಾಪದೇಶಜ ದುರ್ಬುದ್ಧೇ ಕ್ಷುದ್ರ ಕ್ಷತ್ರಿಯಪಾಂಸನ ॥೧೬॥**

ಕ್ಷುದ್ರನೇ! ಕ್ಷತ್ರಿಯಕುಲಕಳಂಕನೇ! ಪಾಪಭೂಯಿಷ್ಠವಾದ ದೇಶದಲ್ಲಿ ಹುಟ್ಟಿದವನೇ! ಕುತ್ಸಿತವಾದ ದೇಶದಲ್ಲಿ ಜನ್ಮತಾಳಿರುವವನೇ! ಕೆಟ್ಟಬುದ್ಧಿಯವನೇ! ನೀನು ಆ ಇಬ್ಬರನ್ನೂ ಯಾವುದೋ ಸ್ವಾರ್ಥದ

ಕಾರಣದಿಂದಲೇ ಸ್ತೋತ್ರಮಾಡುತ್ತಿರುವೆ. ಆದರೆ ಈಗ ನಾನು ಸಮರಾಂಗಣದಲ್ಲಿ ಅವರಿಬ್ಬರನ್ನೂ ಸಂಹರಿಸಿದ ಕೂಡಲೇ ಬಂಧು-ಬಾಂಧವರೊಡನೆ ನಿನ್ನನ್ನೂ ಸಂಹಾರಮಾಡುತ್ತೇನೆ.

**ಸುಹೃದ್ಭೂತ್ವಾ ರಿಪುಃ ಕಿಂ ಮಾಂ ಕೃಷ್ಣಾಭ್ಯಾಂ ಭೀಷಯಿಷ್ಯಸಿ।**
**ತೌ ವಾ ಮಾಮದ್ಯ ಹನ್ತಾರೌ ಹನಿಷ್ಯೇ ವಾಪಿ ತಾವಹಮ್ ॥೧೮॥**

ನೀನು ನಿಶ್ಚಯವಾಗಿಯೂ ನನ್ನ ಶತ್ರುವೇ ಸರಿ. ಆದರೆ ಸುಹೃದನಾಗಿ (ಸ್ನೇಹಿತನ ಸೋಗಿನಿಂದ) ಕೃಷ್ಣಾರ್ಜುನರಿಗೆ ನಾನು ಭಯಪಡುವಂತೆ ಮಾಡುತ್ತಿರುವೆಯಾ? ಇಂದಿನ ಪ್ರಕರಣದಲ್ಲಿ ಇಷ್ಟೇ ನಡೆಯುತ್ತದೆ. ಅವರಾದರೂ ನನ್ನನ್ನು ಸಂಹರಿಸುತ್ತಾರೆ; ನಾನಾದರೂ ಅವರನ್ನು ಸಂಹರಿಸುತ್ತೇನೆ.

**ನಾಹಂ ಬಿಭೇಮಿ ಕೃಷ್ಣಾಭ್ಯಾಂ ವಿಜಾನನ್ನಾತ್ಮನೋ ಬಲಮ್।**
**ವಾಸುದೇವಸಹಸ್ರಂ ವಾ ಫಾಲ್ಗುನಾನಾಂ ಶತಾನಿ ಚ।**
**ಅಹಮೇಕೋ ಹನಿಷ್ಯಾಮಿ ಜೋಷಮಾಸ್ಸ್ವ ಕುದೇಶಜ ॥೧೯॥**

ನನ್ನಲ್ಲಿ ಎಷ್ಟು ಬಲವಿರುವುದೆಂಬುದು ನನಗೆ ಗೊತ್ತಿದೆ. ಆದುದರಿಂದ ಕೃಷ್ಣಾರ್ಜುನರಿಗೆ ನಾನು ಎಂದಿಗೂ ಹೆದರುವವನಲ್ಲ. ಕೃಷ್ಣಾರ್ಜುನರಿಬ್ಬರು ಮಾತ್ರವೇ ಏಕೆ? ಸಾವಿರ ಕೃಷ್ಣರೇ ಬಂದರೂ-ನೂರು ಅರ್ಜುನರೇ ಬಂದರೂ ನಾನೊಬ್ಬನೇ ಅವರೆಲ್ಲರನ್ನೂ ಸಂಹಾರಮಾಡುತ್ತೇನೆ. ನೀಚದೇಶಜನೇ! ನೀನು ಮಾತ್ರ ಇನ್ನು ಮುಂದೆ ಬಾಯಿಮುಚ್ಚಿಕೊಂಡು ಮಾತನಾಡದೇ ಕುಳಿತುಕೊ.

ಪ್ರಾಯಶಃ ಕ್ರೀಡೆಗಳಲ್ಲಿ ತೊಡಗಿರುವ ಸ್ತ್ರೀಯರೂ, ಬಾಲಕರೂ, ವೃದ್ಧರೂ, ಅಧ್ಯಯನಮಾಡುವವರೂ–ಈ ಎಲ್ಲರೂ ದುರಾತ್ಮರಾದ ಮದ್ರದೇಶೀಯರ ವಿಷಯದಲ್ಲಿ ಹಾಡುಗಳನ್ನು ಕಟ್ಟಿ ಹಾಡುತ್ತಾರೆ. ಹಿಂದೆ ರಾಜಸನ್ನಿಧಿಯಲ್ಲಿ ಬ್ರಾಹ್ಮಣರು ಹೇಳಿದ್ದ ಇಂತಹ ಹಾಡುಗಳನ್ನು ಕೇಳು. ಏಕಾಗ್ರಚಿತ್ತನಾಗಿ ಆ ಗಾದೆಗಳನ್ನು ಕೇಳಿ ಅನಂತರವಾದರೂ ಬಾಯಿ ಮುಚ್ಚಿಕೊಂಡಿರು. ಅಥವಾ ಅವರು ಕಟ್ಟಿರುವ ಹಾಡುಗಳಿಗೆ ಸಮಂಜಸವಾದ ಉತ್ತರವನ್ನಾದರೂ ಹೇಳು.

**ಮಿತ್ರಧ್ರುಙ್ಮದ್ರಕೋ ನಿತ್ಯಂ ಯೋ ನೋ ದ್ವೇಷ್ಟಿ ನ ಮದ್ರಕಃ**
**ಮದ್ರಕೇ ಸಂಗತಂ ನಾಸ್ತಿ ಕ್ಷುದ್ರವಾಕ್ಯೇ ನರಾಧಮೇ ॥೨೩॥**

"ಮದ್ರದೇಶದ ಜನರು ಯಾವಾಗಲೂ ಮಿತ್ರದ್ರೋಹಿಗಳೇ ಆಗಿರುತ್ತಾರೆ. ಯಾರು ನಮ್ಮನ್ನು ನಿಷ್ಕಾರಣವಾಗಿ ದ್ವೇಷಿಸುತ್ತಾರೆಯೋ ಅವರನ್ನು ಖಚಿತವಾಗಿ ಮದ್ರಕರೆಂದು ಹೇಳಿಬಿಡಬಹುದು. ಕ್ಷುದ್ರವಾದ ಮಾತುಗಳನ್ನೇ ಆಡುವ, ನರಾಧಮನಾದ ಮದ್ರದೇಶೀಯನಲ್ಲಿ ಸೌಹಾರ್ದದ ಭಾವನೆಯೇ ಇರುವುದಿಲ್ಲ.

**ದುರಾತ್ಮಾ ಮದ್ರಕೋ ನಿತ್ಯಂ ನಿತ್ಯಮಾನೃತಿಕೋಽನೃಜುಃ।**
**ಯಾವದನ್ತ್ಯಂ ಹಿ ದೌರಾತ್ಮ್ಯಂ ಮದ್ರಕೇಷ್ವಿತಿ ನಃ ಶ್ರುತಮ್॥೨೪॥**

ಮದ್ರದೇಶವಾಸಿಯಾದ ಮನುಷ್ಯನು ಸದಾಕಾಲದಲ್ಲಿಯೂ ದುರಾತ್ಮನೇ ಆಗಿರುತ್ತಾನೆ. ನಿರಂತರವಾಗಿ ಸುಳ್ಳನ್ನೇ ಹೇಳುತ್ತಾನೆ. ಸರ್ವದಾ ಕುಟಿಲ ನಾಗಿಯೇ ಇರುತ್ತಾನೆ. ಮದ್ರಕರಲ್ಲಿರುವ ದುಷ್ಟಸ್ವಭಾವವು ಅವರು ಅವಸಾನ ಹೊಂದುವವರೆಗೂ ಅವರನ್ನು ಬಿಟ್ಟುಹೋಗುವುದಿಲ್ಲವೆಂಬ ವಿಷಯವನ್ನು ನಾವು ಕೇಳಿರುವೆವು.

**ಪಿತಾ ಪುತ್ರಶ್ಚ ಮಾತಾ ಚ ಶ್ವಶ್ರೂಶ್ವಶುರಮಾತುಲಾಃ।**
**ಜಾಮಾತಾ ದುಹಿತಾ ಭ್ರಾತಾ ನಪ್ತಾನ್ಯೇ ತೇ ಚ ಬಾನ್ಧವಾಃ ॥೨೫॥**
**ವಯಸ್ಯಾಭ್ಯಾಗತಾಶ್ಚಾನ್ಯೇ ದಾಸೀದಾಸಂ ಚ ಸಂಗತಮ್।**
**ಪುಮ್ಭಿರ್ವಿಮಿಶ್ರಾ ನಾರ್ಯಶ್ಚ ಜ್ಞಾತಾಜ್ಞಾತಾಃ ಸ್ವಯೇಚ್ಛಯಾ ॥೨೬॥**
**ಯೇಷಾಂ ಗೃಹೇಷ್ವಶಿಷ್ಟಾನಾಂ ಸಕ್ತುಮತ್ಸ್ಯಾಶಿನಾಂ ತಥಾ।**
**ಪೀತ್ವಾ ಸೀಧು ಸಗೋಮಾಂಸಂ ಕ್ರನ್ದನ್ತಿ ಚ ಹಸನ್ತಿ ಚ ॥೨೭॥**
**ಗಾಯನ್ತಿ ಚಾಪ್ಯಬದ್ಧಾನಿ ಪ್ರವರ್ತನ್ತೇ ಚ ಕಾಮತಃ।**
**ಕಾಮಪ್ರಲಾಪಿನೋಽನ್ಯೋನ್ಯಂ ತೇಷು ಧರ್ಮಃ ಕಥಂ ಭವೇತ್।**
**ಮದ್ರಕೇಷ್ವವಲಿಪ್ತೇಷು ಪ್ರಖ್ಯಾತಾಶುಭಕರ್ಮಸು ॥೨೮॥**

ಹಿಟ್ಟನ್ನೂ ಮೀನುಗಳನ್ನೂ ತಿನ್ನುವ, ಶಿಷ್ಟಾಚಾರಹೀನರಾದ ಮದ್ರ ಕರ ಮನೆಗಳಲ್ಲಿ, ತಂದೆ-ಮಗ-ತಾಯಿ-ಅತ್ತೆ-ಮಾವ-ಮಾತುಲ-ಅಳಿಯ

ಮಗಳು-ಅಣ್ಣತಮ್ಮಂದಿರು-ಮೊಮ್ಮಗ-ಇತರ ಬಾಂಧವರು-ಸ್ನೇಹಿತರು-ಹೊರಗಿನಿಂದ ಬಂದವರು-ದಾಸಿಯರು-ದಾಸರು ಇವರೆಲ್ಲರೂ ತಮ್ಮ ಇಚ್ಛೆಗೆ ಅನುಸಾರವಾಗಿ ಯಾವ ವಿಧವಾದ ಕಟ್ಟುಪಾಡುಗಳೂ ಇಲ್ಲದೇ ಪರಸ್ಪರ ಸಂಗತರಾಗುತ್ತಾರೆ. ಪರಿಚಿತರಾದವರು, ಅಪರಿಚಿತರಾದವರು–ಎಂಬ ವಿವೇಚನೆಯೂ ಇಲ್ಲದೇ ಸ್ತ್ರೀಯರು ಪುರುಷರೊಡನೆ ಸಮಾಗಮ ಮಾಡುತ್ತಾರೆ. ಆ ಸಮಯದಲ್ಲಿ ಆ ಸ್ತ್ರೀ-ಪುರುಷರು ಗೋಮಾಂಸವನ್ನು ತಿಂದು ಮದ್ಯವನ್ನೂ ಯಥೇಚ್ಛವಾಗಿ ಕುಡಿದು ಆಕ್ರಂದನಮಾಡುತ್ತಾರೆ. ಅರ್ಥವಿಲ್ಲದೇ ನಗುತ್ತಾರೆ. ಯಾವಾಗಲೂ ಕಾಮಸಂಬಂಧವಾದ ಮಾತುಗಳನ್ನೇ ಆಡುತ್ತಿರುತ್ತಾರೆ. ಅಂತಹ ಗರ್ವಿಷ್ಠರಾದ, ಕೆಟ್ಟ ಕೆಲಸಗಳನ್ನು ಮಾಡುವುದರಲ್ಲಿ ಸುವಿಖ್ಯಾತರಾದ ಮದ್ರಕರಲ್ಲಿ ಧರ್ಮವು ಹೇಗೆ ತಾನೇ ಇದ್ದೀತು?

**ನಾಪಿ ವೈರಂ ನ ಸೌಹಾರ್ದಂ ಮದ್ರಕೇಣ ಸಮಾಚರೇತ್**
**ಮದ್ರಕೇ ಸಂಗತಂ ನಾಸ್ತಿ ಮದ್ರಕೋ ಹಿ ಸದಾಮಲಃ ॥೨೯॥**

ಮದ್ರಕನೊಡನೆ ಶತ್ರುತ್ವವನ್ನೂ ಬೆಳೆಸಬಾರದು; ಮಿತ್ರತ್ವವನ್ನೂ ಬೆಳೆಸಬಾರದು. ಮಿತ್ರತ್ವವನ್ನೇಕೆ ಬೆಳೆಸಬಾರದೆಂದರೆ ಮದ್ರಕರಲ್ಲಿ ಸೌಹಾರ್ದದ ಭಾವನೆಯೇ ಇರುವುದಿಲ್ಲ. ಮದ್ರಕನು ಯಾವಾಗಲೂ ಅಪರಿಶುದ್ಧನು.

**ಮದ್ರಕೇಷು ಚ ಸಂಸೃಷ್ಟಂ ಶೌಚಂ ಗಾನ್ಧಾರಕೇಷು ಚ**
**ರಾಜಯಾಜಕಯಾಜ್ಯೇ ಚ ನಷ್ಟಂ ದತ್ತಂ ಹವಿರ್ಭವೇತ್ ॥೩೦॥**

**ಶೂದ್ರಸಂಸ್ಕಾರಕೋ ವಿಪ್ರೋ ಯಥಾ ಯಾತಿ ಪರಾಭವಮ್**
**ಯಥಾ ಬ್ರಹ್ಮದ್ವಿಷೋ ನಿತ್ಯಂ ಗಚ್ಛನ್ತೀಹ ಪರಾಭವಮ್ ॥೩೧॥**

**ಯಥೈವ ಸಂಗತಂ ಕೃತ್ವಾ ನರಃ ಪತತಿ ಮದ್ರಕೈಃ।**
**ಮದ್ರಕೇ ಸಂಗತಂ ನಾಸ್ತಿ ಹತಂ ವೃಶ್ಚಿಕ ತೇ ವಿಷಮ್**
**ಆಥರ್ವಣೇನ ಮನ್ತ್ರೇಣ ಯಥಾ ಶಾನ್ತಿಃ ಕೃತಾ ಮಯಾ ॥೩೨॥**

ಮದ್ರಕರಲ್ಲಿ ನ್ಯಾಸಪೂರ್ವಕವಾಗಿ ಇಟ್ಟ ವಸ್ತುಗಳು (ಮದ್ರಕರಲ್ಲಿ ಇಟ್ಟ ಸ್ನೇಹಸಂಬಂಧವು) ನಷ್ಟವಾಗಿಹೋಗುತ್ತವೆ. ಗಾಂಧಾರದೇಶೀಯ

ರಲ್ಲಿ ಶೌಚಾಚಾರಗಳು ಯಾವುದೂ ಇರುವುದಿಲ್ಲ. ಕ್ಷತ್ರಿಯನೇ ಪುರೋಹಿತನಾಗಿರುವ ಯಜಮಾನನ ಯಜ್ಞದಲ್ಲಿ ದತ್ತವಾದ ಹವಿಸ್ಸು ನಷ್ಟವಾಗಿ ಹೋಗುವಂತೆ (ನಿರರ್ಥಕವಾಗುವಂತೆ)–ಶೂದ್ರಾದಿಗಳಿಗೆ ಉಪ ನಯನಾದಿ ಸಂಸ್ಕಾರಾದಿಗಳನ್ನು ಮಾಡಿಸುವ ಬ್ರಾಹ್ಮಣನು ಎಲ್ಲರಿಂದಲೂ ತಿರಸ್ಕೃತನಾಗುವಂತೆ, ಬ್ರಹ್ಮದ್ವೇಷಿಗಳು ಪ್ರಪಂಚದಲ್ಲಿ ಸರ್ವದಾ ಪರಾಭವ ಹೊಂದುವಂತೆ–ಮದ್ರಕರೊಡನೆ ಸ್ನೇಹಬೆಳೆಸಿದ ಮನುಷ್ಯನೂ ಪತಿತ ನಾಗುತ್ತಾನೆ. ಮದ್ರಕರ ಹೃದಯಶೂನ್ಯತೆಯನ್ನು ಆಧರಿಸಿ ಈ ಗಾದೆಯನ್ನೂ ಹೇಳಿದ್ದಾರೆ. ಚೇಳಿನ ವಿಷವನ್ನು ಹೋಗಲಾಡಿಸುವ ಮಾಂತ್ರಿಕನೊಬ್ಬನು ಅಥರ್ವಮಂತ್ರದಿಂದ ಅಭಿಮಂತ್ರಿಸುತ್ತಾ ಹೇಳುತ್ತಾನೆ. 'ವೃಶ್ಚಿಕವೇ! ಮದ್ರಕರಲ್ಲಿ ಸೌಹಾರ್ದಭಾವನೆಯು ಲೇಶವಾದರೂ ಇಲ್ಲದಂತೆ ನಿನ್ನ ವಿಷವು ನಾಶವಾಗಿಹೋಗಿದೆ. ಅಥರ್ವ ಮಂತ್ರಪುನಶ್ಚರಣೆಯಿಂದ ನಿನ್ನ ವಿಷವನ್ನು ನಾನು ಉಪಶಮನಗೊಳಿಸಿಬಿಟ್ಟಿದ್ದೇನೆ'-ಹೀಗೆಂಬುದಾಗಿ ಹೇಳಿಕೊಂಡು ಪ್ರಾಜ್ಞರಾದ ವೈದ್ಯರು ಚೇಳುಕಡಿದು ವಿಷವೇಗದಿಂದ ಪೀಡಿತನಾದ ಮನುಷ್ಯನಿಗೆ ಮಂತ್ರಹಾಕುತ್ತಾರೆ. ಕೆಲವು ವೇಳೆ ಅದೂ ಸತ್ಯವಾಗಿಯೇ ಪರಿಣಮಿಸುತ್ತದೆ. (ಹೀಗೆ ಹೇಳಿಕೊಂಡು ಮಂತ್ರಹಾಕಿ ಚೇಳಿನ ವಿಷದಿಂದ ಪೀಡಿತರಾದವರನ್ನು ವಿಷವೈದ್ಯರು ಗುಣಪಡಿಸಿದ್ದಾರೆ.)

ವಿದ್ವಾಂಸನಾದ ಶಲ್ಯನೇ! ನಿನ್ನ ದೇಶದಲ್ಲಿರುವ ಈ ದುಷ್ಟವಾದ ನಡವಳಿಕೆಯನ್ನಾದರೂ ಸ್ಮರಿಸಿಕೊಂಡು ಇತರರನ್ನು ನಿಂದಿಸದೆ ಮೌನದಿಂದಿರು. ನಿನ್ನ ದೇಶೀಯರ ಗುಣಕಥನವಿನ್ನೂ ಮುಗಿದಿರುವುದಿಲ್ಲ. ಪುನಃ ಹೇಳುತ್ತೇನೆ. ಸಾವಧಾನಚಿತ್ತನಾಗಿ ಕೇಳು.

**ವಾಸಾಂಸ್ಯುತ್ಸೃಜ್ಯ ನೃತ್ಯನ್ತಿ ಸ್ತ್ರಿಯೋ ಯಾ ಮದ್ಯಮೋಹಿತಾಃ।**
**ಮೈಥುನೇಽಸಂಯತಾಶ್ಚಾಪಿ ಯಥಾಕಾಮವರಾಶ್ಚ ತಾಃ।**
**ತಾಸಾಂ ಪುತ್ರಃ ಕಥಂ ಧರ್ಮಂ ಮದ್ರಕೋ ವಕ್ತುಮರ್ಹತಿ॥**

ಮದ್ಯಕುಡಿದು ಅಮಲೇರಿದ ಮದ್ರದೇಶದ ಸ್ತ್ರೀಯರು ವಸ್ತ್ರಗಳನ್ನೂ ಪರಿತ್ಯಜಿಸಿ ನೃತ್ಯಮಾಡುತ್ತಾರೆ. ಪುರುಷರ ಸಂಗಮಾಡುವಾಗಲೂ ಸಹ ಯಾವ ವಿಧವಾದ ಸಂಯಮವಾಗಲೀ ಮರ್ಯಾದೆಯಾಗಲೀ ಇಲ್ಲದೇ

ವರ್ತಿಸುತ್ತಾರೆ. ತಮಗೆ ಇಚ್ಛೆಬಂದಂತೆ ತಾವಿಚ್ಛಿಸಿದ ಪುರುಷನೊಡನೆ ಸಮಾಗಮಮಾಡುತ್ತಾರೆ. ಅಂತಹ ಸ್ತ್ರೀಯರ ಹೊಟ್ಟೆಯಲ್ಲಿ ಹುಟ್ಟಿರುವ ಮದ್ರಕನು ಬೇರೆಯವರಿಗೆ ಧರ್ಮೋಪದೇಶಮಾಡಲು ಹೇಗೆ ಯೋಗ್ಯನಾಗುತ್ತಾನೆ?

**ಯಾಸ್ತಿಷ್ಠನ್ತ್ಯಃ ಪ್ರಮೇಹನ್ತಿ ಯಥೈವೋಷ್ಟ್ರದಶೇರಕಾ।**
**ತಾಸಾಂ ವಿಭ್ರಷ್ಟಧರ್ಮಾಣಾಂ ನಿರ್ಲಜ್ಜಾನಾಂ ತತಸ್ತತಃ**
**ತ್ವಂ ಪುತ್ರಸ್ತಾದೃಶೀನಾಂ ಹಿ ಧರ್ಮಂ ವಕ್ತುಮಿಹೇಚ್ಛಸಿ ॥೩೭॥**

ಮರುಭೂಮಿಯಲ್ಲಿರುವ ಒಂಟೆಮರಿಗಳಂತೆ ನಿಂತುಕೊಂಡೇ ಮೂತ್ರವಿಸರ್ಜನೆಮಾಡುವ, ಧರ್ಮಭ್ರಷ್ಟರಾದ, ಲಜ್ಜಾಹೀನರಾದ ಮದ್ರದೇಶದ ಸ್ತ್ರೀಯರಲ್ಲಿ ಮಗನಾಗಿ ಹುಟ್ಟಿರುವ ನೀನು ನನಗೆ ಧರ್ಮೋಪದೇಶಮಾಡಲು ಹೊರಟಿರುವೆ.

**ಸುವೀರಕಂ ಯಾಚ್ಯಮಾನಾ ಮದ್ರಿಕಾ ಕರ್ಷತಿ ಸ್ಫಿಚೌ।**
**ಅದಾತುಕಾಮಾ ವಚನಮಿದಂ ವದತಿ ದಾರುಣಮ್ ॥೩೮॥**
**ಮಾ ಮಾಂ ಸುವೀರಕಂ ಕಶ್ಚಿದ್ಯಾಚತಾಂ ದಯಿತಂ ಮಮ**
**ಪುತ್ರಂ ದದ್ಯಾಂ ಪತಿಂ ದದ್ಯಾಂ ನ ತು ದದ್ಯಾಂ ಸುವೀರಕಮ್॥**

ಯಾವನಾದರೂ ಪುರುಷನು ಮದ್ರದೇಶದ ಸ್ತ್ರೀಯನ್ನು ಗಂಜಿಯನ್ನು ಕೊಡೆಂದು ಪ್ರಾರ್ಥಿಸಿದ್ದೇ ಆದರೆ, ಗಂಜಿಯನ್ನು ಕೊಡಲು ಇಷ್ಟವಿಲ್ಲದ ಮದ್ರಿಕೆಯು ಪೀನನಿತಂಬಗಳನ್ನು ಕೆರೆದುಕೊಳ್ಳುತ್ತಾಳೆ ಮತ್ತು "ನನ್ನನ್ನು ಯಾವನೂ ಗಂಜಿಯನ್ನು ಕೇಳಬಾರದು. ಏಕೆಂದರೆ ನನಗೆ ಗಂಜಿಯು ಅತ್ಯಂತಪ್ರಿಯವಾದುದು. ಯಾಚಕನಿಗೆ ನಾನು ಪುತ್ರನನ್ನಾದರೂ ಕೊಟ್ಟುಬಿಡುತ್ತೇನೆ. ಪತಿಯನ್ನಾದರೂ ಕೊಟ್ಟುಬಿಡುತ್ತೇನೆ. ಆದರೆ ನನಗೆ ಎಲ್ಲಕ್ಕಿಂತಲೂ ಪ್ರಿಯವಾದ ಗಂಜಿಯನ್ನು ಮಾತ್ರ ಕೊಡುವುದಿಲ್ಲ"–ಎಂಬ ಕರ್ಣಕಠೋರವಾದ ಮಾತನ್ನೂ ಹೇಳುತ್ತಾಳೆ.

**ಗೌರ್ಯೋ ಬೃಹತ್ಯೋ ನಿರ್ಹ್ರೀಕಾ ಮದ್ರಿಕಾಃ ಕಮ್ಬಲಾವೃತಾ।**
**ಘಸ್ಮರಾ ನಷ್ಟಶೌಚಾಶ್ಚ ಪ್ರಾಯ ಇತ್ಯನುಶುಶ್ರುಮ ॥೪೦॥**

ಮದ್ರದೇಶದ ಸ್ತ್ರೀಯರು ಪ್ರಾಯಶಃ ಬಿಳುಪಾಗಿಯೂ, ಎತ್ತರವಾ

ಗಿಯೂ, ಸ್ಥೂಲರಾಗಿಯೂ, ನಿರ್ಲಜ್ಜರಾಗಿಯೂ, ಕಂಬಳಿಗಳಿಂದ ಆಚ್ಛಾದಿತ ರಾಗಿಯೂ, ಹೊಟ್ಟೆಬಾಕರಾಗಿಯೂ ಮತ್ತು ಶೌಚಾಚಾರಗಳನ್ನು ಬಿಟ್ಟವರಾಗಿಯೂ ಇರುವರೆಂದು ನಾವು ಕೇಳಿದ್ದೇವೆ.

ಕೇಶದ ಅಗ್ರಭಾಗದಿಂದ ಕಾಲುಬೆರಳಿನ ಅಗ್ರಭಾಗದವರೆಗೂ ಹೇಳಬಹುದಾಗಿರುವ ಮದ್ರದೇಶದ ಸ್ತ್ರೀ-ಪುರುಷರ ಕೆಟ್ಟಕೆಲಸಗಳಲ್ಲಿ ನಾನಾಗಲೀ ಇತರರಾಗಲೀ ಇನ್ನೂ ಬಹಳವಾಗಿ ಹೇಳಬಹುದು. (ಕೆಲವನ್ನು ಮಾತ್ರ ಹೇಳಿದ್ದೇನೆ.)

**ಮದ್ರಕಾಃ ಸಿನ್ಧುಸೌವೀರಾ ಧರ್ಮಂ ವಿದ್ಯುಃ ಕಥಂ ತ್ವಿಹ**
**ಪಾಪದೇಶೋದ್ಭವಾ ಮ್ಲೇಚ್ಛಾ ಧರ್ಮಾಣಾಮವಿಚಕ್ಷಣಾಃ ॥೪೨॥**

ಮದ್ರ-ಸಿಂಧು-ಸೌವೀರಗಳು ಪಾಪಭೂಯಿಷ್ಠವಾದ ದೇಶಗಳು. ಈ ದೇಶಗಳಲ್ಲಿ ಹುಟ್ಟಿರುವವರೆಲ್ಲರೂ ಧರ್ಮವೆಂದರೇನೆಂಬುದನ್ನೇ ತಿಳಿಯದಿರುವ ಮ್ಲೇಚ್ಛರು. ಅಂತಹವರು ಸನಾತನಧರ್ಮವನ್ನು ಹೇಗೆ ತಾನೇ ತಿಳಿದಿದ್ದಾರು?

**ಏಷ ಮುಖ್ಯತಮೋ ಧರ್ಮಃ ಕ್ಷತ್ರಿಯಸ್ಯೇತಿ ನಃ ಶ್ರುತಮ್।**
**ಯದಾಜೌ ನಿಹತಃ ಶೇತೇ ಸದ್ಭಿಃ ಸಮಭಿಪೂಜಿತಃ ॥೪೩॥**

ಯುದ್ಧದಲ್ಲಿ ಮಡಿದು, ಸತ್ಪುರುಷರಿಂದ ಪುರಸ್ಕೃತನಾಗಿ, ರಣಾಂಗಣ ದಲ್ಲಿ ಮಲಗುವುದೇ ಕ್ಷತ್ರಿಯನ ಅತಿಮುಖ್ಯವಾದ ಧರ್ಮವೆಂಬುದನ್ನು ನಾವು ಕೇಳಿದ್ದೇವೆ.

**ಆಯುಧಾನಾಂ ಸಾಮ್ಪರಾಯೇ ಯನ್ಮುಚ್ಯೇಯಮಹಂ ತತಃ**
**ಮಮೈಷ ಪ್ರಥಮಃ ಕಲ್ಪೋ ನಿಧನೇ ಸ್ವರ್ಗಮಿಚ್ಛತಃ ॥೪೪॥**

ಶಸ್ತ್ರಗಳ ಮೂಲಕವಾಗಿ ನಡೆಯುವ ಈ ಮಹಾಯುದ್ಧದಲ್ಲಿ ನಾನು ಪ್ರಾಣಗಳನ್ನು ಪರಿತ್ಯಾಗಮಾಡಿದರೆ ಮರಣದಲ್ಲಿಯೇ ಸ್ವರ್ಗವನ್ನು ಅಭಿಲಾಷಿಸುತ್ತಿರುವ ನನಗೆ ಇದು ಉತ್ತಮಪಕ್ಷವೇ ಆಗಿದೆ.

ಶಲ್ಯ! ನಾನು ಧೀಮಂತನಾದ ದುರ್ಯೋಧನನಿಗೆ ಪ್ರಿಯಸಖ ನಾಗಿದ್ದೇನೆ. ನನ್ನಲ್ಲಿರುವ ಸಕಲೈಶ್ವರ್ಯಗಳೂ ಮತ್ತು ನನ್ನ ಪ್ರಾಣಗಳೂ ಅವನಿಗಾಗಿಯೇ ಮುಡುಪಾಗಿವೆ.

ಆದರೆ ಪಾಪದೇಶದಲ್ಲಿ ಹುಟ್ಟಿದವನೇ! ನಮ್ಮ-ನಮ್ಮಲ್ಲಿಯೇ ಭೇದವನ್ನು ಕಲ್ಪಿಸುವ ಸಲುವಾಗಿ ಪಾಂಡವರೇ ನಿನ್ನನ್ನು ಇಲ್ಲಿಟ್ಟಿದ್ದಾರೆಂಬುದು ನಿನ್ನ ಚರ್ಯೆಯಿಂದಲೇ ಸ್ಪಷ್ಟವಾಗಿದೆ. ನಮ್ಮಲ್ಲಿ ನೀನು ಶತ್ರುವಿನಂತೆಯೇ ವ್ಯವಹರಿಸುತ್ತಿರುವೆ. ನಿನ್ನಂತಹವರು ನೂರು ಮಂದಿ ಪ್ರಯತ್ನಿಸಿದರೂ ನಾಸ್ತಿಕರು ಧರ್ಮಜ್ಞನನ್ನು ಧರ್ಮದಿಂದ ವಿಮುಖನನ್ನಾಗಿ ಮಾಡಲು ಸಾಧ್ಯವಾಗದಂತೆ–ಯುದ್ಧದಿಂದ ನನ್ನನ್ನು ವಿಮುಖನನ್ನಾಗಿ ಮಾಡಲು ಸಾಧ್ಯವಾಗುವುದಿಲ್ಲ. ಬಿಸಿಲಿನ ತಾಪದಿಂದ ಬಳಲಿದ ಜಿಂಕೆಯಂತೆ–ನೀನೂ ಸಹ ಯಥೇಚ್ಛವಾಗಿ ವಿಲಪಿಸು. ವಿಲಪಿಸುತ್ತಲೇ ಒಣಗಿಯಾದರೂ ಹೋಗು. ಸರ್ವಥಾ ಕ್ಷತ್ರಧರ್ಮದಲ್ಲಿಯೇ ನಿರತನಾಗಿರುವ ನನ್ನನ್ನು ಮಾತ್ರ ನೀನು ಭಯಪಡಿಸಲಾರೆ.

**ತನುತ್ಯಜಾಂ ನೃಸಿಂಹಾನಾಮಾಹವೇಷ್ವನಿವರ್ತಿನಾಮ್**
**ಯಾ ಗತಿರ್ಗುರುಣಾ ಪ್ರೋಕ್ತಾ ಪುರಾ ರಾಮೇಣ ತಾಂ ಸ್ಮರೇ॥೪೯॥**

ಯುದ್ಧದಲ್ಲಿ ಶತ್ರುಗಳಿಗೆ ಬೆನ್ನುತೋರಿಸದೇ ಶರೀರವನ್ನು ಪರಿತ್ಯಾಗ ಮಾಡುವ ನರಶ್ರೇಷ್ಠರಿಗೆ ಯಾವ ಸದ್ಗತಿಯು ಸಿಕ್ಕುವುದೆಂದು ನನ್ನ ಗುರುವಾದ ಪರಶುರಾಮನು ಹೇಳಿರುವನೋ–ಅದನ್ನೇ ನಾನೀಗ ಸ್ಮರಿಸುತ್ತೇನೆ.

ಶಲ್ಯ! ಪುರೂರವನ (ಯುದ್ಧದಲ್ಲಿ ಯಾವಕಾರಣದಿಂದಲೂ ಹಿಂದಿರುಗದ) ಉತ್ತಮಚರಿತವನ್ನು ಅನುಸರಣೆಮಾಡುತ್ತಾ ಧೃತರಾಷ್ಟ್ರನ ಮಕ್ಕಳ ರಕ್ಷಣಾರ್ಥವಾಗಿಯೂ, ನಮ್ಮ ಶತ್ರುಗಳಾದ ಪಾಂಡವರ ಸಂಹಾರಾರ್ಥವಾಗಿಯೂ ಈ ರಣಾಂಗಣದಲ್ಲಿ ಯುದ್ಧಸನ್ನದ್ಧನಾಗಿ ನಿಂತಿರುವೆನೆಂಬುದನ್ನೂ ತಿಳಿ. ಮದ್ರಪನೇ! ನನ್ನ ಈ ಅಭಿಪ್ರಾಯದಿಂದ ನನ್ನನ್ನು ಚ್ಯುತಗೊಳಿಸುವಂತಹ ಪ್ರಾಣಿಯೊಂದನ್ನು ಮೂರುಲೋಕಗಳಲ್ಲಿಯೂ ಇದುವರೆಗೂ ಕಂಡಿಲ್ಲ. ಇದು ನನ್ನ ಖಚಿತವಾದ ಅಭಿಪ್ರಾಯವಾಗಿದೆ. ನನ್ನ ನಿಶ್ಚಯವಾದ ಅಭಿಪ್ರಾಯವನ್ನು ತಿಳಿದನಂತರವಾದರೂ ಮಾತನಾಡದೇ ಸುಮ್ಮನಿದ್ದುಬಿಡು. ಭಯದ ಕಾರಣದಿಂದ ಮನಬಂದಂತೆ ಹರಟುತ್ತಿರುವೆಯೇಕೆ? ಮದ್ರಕಾಧಮ! ನೀನು ಮುಂದೇನಾದರೂ ಹೀಗೆಯೇ ಮಾತನಾಡಿದ್ದೇ ಆದರೆ ನಿನ್ನನ್ನು ಸಂಹರಿಸಿ ಮಾಂಸಾಶಿಗಳಾದ ಪ್ರಾಣಿಗಳಿಗೆ ಕೊಟ್ಟುಬಿಡುತ್ತೇನೆ. ಹಾಗಾಗದಂತೆ ಜಾಗರೂಕನಾಗಿರು.

**ಮಿತ್ರಪ್ರತೀಕ್ಷಯಾ ಶಲ್ಯ ಧೃತರಾಷ್ಟ್ರಸ್ಯ ಚೋಭಯೋಃ।**
**ಅಪಾವಾದತಿತಿಕ್ಷಾಭಿಸ್ತ್ರಿಭಿರೇತೈರ್ಹಿ ಜೀವಸಿ ॥೫೩॥**

ನಮ್ಮ ಮಿತ್ರನಾದ ದುರ್ಯೋಧನನ ಮತ್ತು ಧೃತರಾಷ್ಟ್ರರಾಜನ ಕಾರ್ಯಸಾಧನೆಯಲ್ಲಿ ನನ್ನ ಮನಸ್ಸನ್ನು ಕೇಂದ್ರೀಕರಿಸಿದ್ದೇನೆ. ನಿನ್ನನ್ನು ಕೊಲ್ಲದಿರಲು ಇದು ಮೊದಲನೆಯ ಕಾರಣ. 'ಏನು ಬೇಕಾದರೂ ಮಾತನಾಡಬಹುದೆಂಬ ಶಲ್ಯನ ಷರತ್ತಿಗೆ ಒಪ್ಪಿ ಅನಂತರ ಕರ್ಣನು ನಿಬಂಧನೆಯನ್ನು ಮುರಿದುಹಾಕಿದನು'–ಎಂಬ ಅಪವಾದವು ಬರುವುದೆಂದು ಹೆದರುತ್ತೇನೆ. ಇದು ನಿನ್ನನ್ನು ಕೊಲ್ಲದಿರಲು ಎರಡನೆಯ ಕಾರಣ. ನೀನು ಇಷ್ಟು ಅಬದ್ಧವಾಗಿ ಮಾತನಾಡುವೆಯೆಂಬುದನ್ನು ನಿರೀಕ್ಷಿಸದೇ ಏನು ಬೇಕಾದರೂ ಹೇಳಿಕೊಳ್ಳಬಹುದೆಂದು ಒಪ್ಪಿಗೆಯನ್ನಿತ್ತ ಕಾರಣ ನೀನಾಡಿದ ಮಾತುಗಳನ್ನೂ ಸೈರಿಸಿಕೊಂಡಿರಬೇಕಾಗಿದೆ. ನಿನ್ನನ್ನು ಕೊಲ್ಲದಿರಲು ಇದು ಮೂರನೆಯ ಕಾರಣ. ಈ ಮೂರು ಕಾರಣಗಳಿಂದಾಗಿ ನೀನಿನ್ನೂ ಜೀವಿಸಿರಲು ಸಾಧ್ಯವಾಗಿದೆ.

**ಪುನಶ್ಚೇದೀದೃಶಂ ವಾಕ್ಯಂ ಮಹಾರಾಜ ವದಿಷ್ಯಸಿ।**
**ಶಿರಸ್ತೇ ಪಾತಯಿಷ್ಯಾಮಿ ಗದಯಾ ವಜ್ರಕಲ್ಪಯಾ ॥೫೪॥**

ಮಹಾರಾಜ! ನೀನು ಪುನಃ ಇದೇ ವಿಧವಾದ ಮಾತುಗಳನ್ನಾಡಿದರೆ ವಜ್ರಾಯುಧಕ್ಕೆ ಸಮಾನವಾದ ಗದೆಯಿಂದ ನಿನ್ನ ತಲೆಯನ್ನು ಕೆಳಕ್ಕೆ ಕೆಡವಿಬಿಡುತ್ತೇನೆ.

ನೀಚದೇಶಜನೇ! ಇಂದು ಈ ಸಮಾಚಾರವನ್ನು ಕೇಳುವವರು ಕೇಳುತ್ತಾರೆ; ನೋಡುವವರು ನೋಡುತ್ತಾರೆ. ಕೃಷ್ಣಾರ್ಜುನರಾದರೂ ಕರ್ಣನನ್ನು ಸಂಹರಿಸುತ್ತಾರೆ. ಕರ್ಣನಾದರೂ ಕೃಷ್ಣಾರ್ಜುನರನ್ನು ಸಂಹರಿಸು ತ್ತಾನೆ."

ಧೃತರಾಷ್ಟ್ರಮಹಾರಾಜ! ರಾಧೇಯನು ಶಲ್ಯನೊಡನೆ ಹೀಗೆ ಹೇಳಿ ಸ್ವಲ್ಪವಾದರೂ ಆತಂಕಗೊಳ್ಳದೇ ಮದ್ರರಾಜನನ್ನು ಕುರಿತು 'ಮುಂದೆ ಹೋಗು; ಬೇಗನೆ ಹೊರಡು' ಎಂದು ಹೇಳಿದನು."

೪೦ನೆಯ ಅಧ್ಯಾಯವು ಮುಗಿಯಿತು.

## ಶಲ್ಯರಾಜನು ಕರ್ಣನಿಗೆ ಹಂಸ-ಕಾಗೆಗಳ ಉಪಾಖ್ಯಾನವನ್ನು ಹೇಳಿದುದು: ಕೃಷ್ಣಾರ್ಜುನರನ್ನು ಪ್ರಶಂಸಿಸುತ್ತಾ ಅವರಿಗೆ ಶರಣಾಗತನಾಗುವಂತೆ ಕರ್ಣನಿಗೆ ಸಲಹೆ ನೀಡಿದುದು

ಸಂಜಯನು ಕರ್ಣನ ಮಾತಿಗೆ ಶಲ್ಯನ ಪ್ರತಿಕ್ರಿಯೆಯು ಏನೆಂಬುದನ್ನು ಹೇಳುತ್ತಾನೆ:

"ಮಾರಿಷ! ಯುದ್ಧಾಭಿನಂದಿಯಾದ ಕರ್ಣನ ಮಾತನ್ನು ಕೇಳಿ ಶಲ್ಯನು ದೃಷ್ಟಾಂತಯುಕ್ತವಾದ ಮಾತನ್ನು ಕರ್ಣನೊಡನೆ ಹೇಳಿದನು:

"ಸೂತಪುತ್ರ! ನಾನು ಯಜ್ಞಮಾಡಿದವರ ವಂಶದಲ್ಲಿ ಹುಟ್ಟಿದ್ದೇನೆ. ಸಂಗ್ರಾಮದಲ್ಲಿ ಹಿಂದಿರುಗದಿರುವ ಮೂರ್ಧಾಭಿಷಿಕ್ತರಾದ ರಾಜರ ಮಹಾ ವಂಶದಲ್ಲಿ ಹುಟ್ಟಿದ್ದೇನೆ. ಎಲ್ಲಕ್ಕಿಂತಲೂ ಮಿಗಿಲಾಗಿ ಧರ್ಮವನ್ನೇ ಸಂಪೂರ್ಣವಾಗಿ ಆಶ್ರಯಿಸಿದ್ದೇನೆ. ಆದರೆ ಕರ್ಣ! ನೀನು ಮದಿರೆಯಿಂದ ಮತ್ತನಾಗಿರುವವನಂತೆ ನನಗಿಂದು ಕಾಣುತ್ತಿರುವೆ. ನೀನು ನನಗೆ ಸುಹೃದನಾಗಿರುವುದರಿಂದ ಪ್ರಮತ್ತನಾಗಿರುವ ನಿನಗೆ ನಾನು ಚಿಕಿತ್ಸೆಮಾಡುತ್ತೇನೆ.

ಕುಲಪಾಂಸನ! ನೀಚಕರ್ಣ! ನಾನು ಈಗ ಹೇಳಲಿರುವ ಕಾಗೆಯ ದೃಷ್ಟಾಂತವನ್ನು ಕೇಳು. ಈ ಆಖ್ಯಾನವನ್ನು ಕೇಳಿದನಂತರ ನಿನಗೆ ಇಷ್ಟಬಂದಂತೆ ಮಾಡು.

ಮಹಾಬಾಹುವಾದ ಕರ್ಣನೇ! ನೀನು ಯಾವ ಕಾರಣಕ್ಕಾಗಿ ನಿರಪರಾಧಿಯಾದ ನನ್ನನ್ನು ಸಂಹರಿಸಲು ಇಚ್ಛಿಸಿರುವೆ? ನಾನು ನಿನಗೆ ಯಾವುದೇ ಒಂದು ಅಪರಾಧವನ್ನು ಮಾಡಿರುವುದೂ ನನ್ನ ಸ್ಮರಣೆಯಲ್ಲಿಲ್ಲ. ದುರ್ಯೋಧನರಾಜನಿಗೆ ಹಿತೈಷಿಯಾಗಿರುವ, ಅದರಲ್ಲಿಯೂ ವಿಶೇಷವಾಗಿ ಈ ರಥದಲ್ಲಿ ಸಾರಥಿಯಾಗಿ ಕುಳಿತಿರುವ ಮತ್ತು ನಿನ್ನ ಹಿತಾಹಿತಗಳನ್ನು ಚೆನ್ನಾಗಿ ತಿಳಿದಿರುವ ನಾನು ಅತ್ಯವಶ್ಯವಾಗಿ ಹಿತವನ್ನು ಹೇಳಲೇಬೇಕಾದುದು ನನ್ನ ಕರ್ತವ್ಯವಾಗಿದೆ.

**ಸಮಂ ಚ ವಿಷಮಂ ಚೈವ ರಥಿನಶ್ಚ ಬಲಾಬಲಮ್।**
**ಶ್ರಮಃ ಖೇದಶ್ಚ ಸತತಂ ಹಯಾನಾಂ ರಥಿನಾ ಸಹ ॥೭॥**

**ಆಯುಧಸ್ಯ ಪರಿಜ್ಞಾನಂ ರುತಂ ಚ ಮೃಗಪಕ್ಷಿಣಾಮ್**
**ಭಾರಶ್ಚಾಪ್ಯತಿಭಾರಶ್ಚ ಶಲ್ಯಾನಾಂ ಚ ಪ್ರತಿಕ್ರಿಯಾ ॥೮॥**
**ಅಸ್ತ್ರಯೋಗಶ್ಚ ಯುದ್ಧಂ ಚ ನಿಮಿತ್ತಾನಿ ತಥೈವ ಚ**
**ಸರ್ವಮೇತನ್ಮಯಾ ಜ್ಞೇಯಂ ರಥಸ್ಯಾಸ್ಯ ಕುಟುಮ್ಬಿನಾ ॥೯॥**
**ಅತಸ್ತ್ವಾಂ ಕಥಯೇ ಕರ್ಣ ನಿದರ್ಶನಮಿದಂ ಪುನಃ**

ಸಮಾವಸ್ಥೆ ಅಥವಾ ವಿಷಮಾವಸ್ಥೆ, ರಥಿಯ ಪ್ರಬಲತೆ ಮತ್ತು ದುರ್ಬಲತೆ, ರಥಿಯೊಡನೆ ಕುದುರೆಗಳ ಸತತವಾದ ಪರಿಶ್ರಮ ಮತ್ತು ಖೇದ, ಆಯುಧಗಳ ಪರಿಜ್ಞಾನ (ಯಾವ ಆಯುಧಗಳನ್ನು ರಥದಲ್ಲಿಟ್ಟು ಕೊಳ್ಳಬೇಕು? ಯಾವ ಆಯುಧಗಳು ಯಾವ ಗುಣಗಳನ್ನು ಹೊಂದಿವೆ? ಯಾವ ಆಯುಧವನ್ನು ಯಾವ ಕಾಲದಲ್ಲಿ ಯಾರ ಮೇಲೆ ಉಪಯೋಗಿಸಬೇಕು?–ಇತ್ಯಾದಿ), ಜಯಾಪಜಯಗಳನ್ನು ಸೂಚಿಸುವ ಮೃಗ-ಪಕ್ಷಿಗಳ ಧ್ವನಿಗಳ ಅರಿವು, ಭಾರ-ಅತಿಭಾರ, ಶಲ್ಯಚಿಕಿತ್ಸೆ (ಬಾಣಗಳಿಂದುಂಟಾದ ಗಾಯಗಳಿಗೆ ಚಿಕಿತ್ಸೆಮಾಡುವುದು), ಅಸ್ತ್ರಪ್ರಯೋಗ, ಯುದ್ಧದ ಶುಭಾಶುಭಸೂಚಕವಾದ ನಿಮಿತ್ತಗಳು–ಈ ಎಲ್ಲವನ್ನೂ ನಾನು ತಿಳಿದಿರಬೇಕಾಗಿದೆ. ಏಕೆಂದರೆ: ನಾನು ಈ ರಥಕುಟುಂಬಕ್ಕೇ ಸೇರಿದವನಾಗಿರುತ್ತೇನೆ. ಕರ್ಣ! ಈ ಕಾರಣಗಳಿಂದ ನಾನು ಪುನಃ ನಿನಗೆ ದೃಷ್ಟಾಂತರೂಪವಾದ ಈ ಆಖ್ಯಾನವನ್ನು ಹೇಳುತ್ತೇನೆ.

ಸಮುದ್ರತೀರದಲ್ಲಿದ್ದ ಧರ್ಮಪ್ರಧಾನನಾದ ರಾಜನೊಬ್ಬನ ರಾಷ್ಟ್ರದಲ್ಲಿ ಧನ-ಧಾನ್ಯಸಂಪನ್ನನಾಗಿದ್ದ ವೈಶ್ಯನೊಬ್ಬನು ಯಾವ ವಿಧವಾದ ಆತಂಕವೂ ಇಲ್ಲದೇ ವಾಸಮಾಡುತ್ತಿದ್ದನು.

ಆ ವೈಶ್ಯನು ಯಾಗಶೀಲನಾಗಿದ್ದನು. ದಾನಿಗಳಲ್ಲಿ ಶ್ರೇಷ್ಠನಾಗಿದ್ದನು. ಕ್ಷಮಾಶೀಲನಾಗಿದ್ದನು. ಸ್ವವರ್ಣಾಶ್ರಮೋಕ್ತವಾದ ನಿತ್ಯ-ನೈಮಿತ್ತಿಕಕರ್ಮಗಳಲ್ಲಿ ಸರ್ವದಾ ನಿರತನಾಗಿದ್ದನು. ಪರಿಶುದ್ಧನಾಗಿದ್ದನು. ಬಹುಪುತ್ರನೂ, ಸಂತಾನಪ್ರಿಯನೂ ಆಗಿದ್ದನು. ಎಲ್ಲ ಪ್ರಾಣಿಗಳಲ್ಲಿಯೂ ಅವನಿಗೆ ಅಪಾರವಾದ ದಯೆಯಿದ್ದಿತು. ಆ ವೈಶ್ಯನಿಗೆ ಚಿಕ್ಕ-ಚಿಕ್ಕ ಮಕ್ಕಳೂ, ಬಾಲಕರೂ,

ಕುಮಾರರೂ ಮತ್ತು ಯಶೋವಂತರಾದ ದೊಡ್ಡ-ದೊಡ್ಡ ಮಕ್ಕಳೂ ಅನೇಕರಿದ್ದರು. ಅವರೆಲ್ಲರೂ ತಿಂದು ಮಿಕ್ಕ ಅನ್ನವನ್ನೇ ತಿಂದು ಜೀವಿಸುತ್ತಿದ್ದ ಒಂದು ಕಾಗೆಯೂ ಅಲ್ಲಿಯೇ ವಾಸಮಾಡಿಕೊಂಡಿದ್ದಿತು. ವೈಶ್ಯನ ಪುತ್ರರು, ಕುಮಾರರು ಮತ್ತು ಚಿಕ್ಕ ಚಿಕ್ಕ ಮಕ್ಕಳು ಆ ಕಾಗೆಗೆ ತಾವು ತಿಂದು ಉಳಿದ ಮಾಂಸ, ಅನ್ನ, ಮೊಸರು, ಹಾಲು, ಪಾಯಸ, ಜೇನುತುಪ್ಪ, ತುಪ್ಪ ಎಲ್ಲವನ್ನೂ ಕೊಡುತ್ತಿದ್ದರು. ವೈಶ್ಯನ ಪುತ್ರರೂ ಕುಮಾರಕರೂ ಕೊಡುತ್ತಿದ್ದ ಉಚ್ಛಿಷ್ಟಾನ್ನವನ್ನೇ ತಿಂದು-ತಿಂದು ಕೊಬ್ಬಿಹೋಗಿದ್ದ ಆ ಕಾಗೆಯು ತನಗೆ ಸಮಾನವಾದ ಮತ್ತು ತನಗಿಂತಲೂ ಶ್ರೇಷ್ಠವಾದ ಪಕ್ಷಿಗಳನ್ನು ತಿರಸ್ಕಾರಪೂರ್ವಕವಾಗಿ ಕಾಣುತ್ತಿದ್ದಿತು.

ಒಂದಾನೊಂದು ದಿನ ಅದೇ ಸಮುದ್ರದ ತೀರಪ್ರದೇಶಕ್ಕೆ (ವೈಶ್ಯನು ವಾಸವಾಗಿದ್ದ ಸ್ಥಳಕ್ಕೆ) ಗರುಡನಿಗೆ ಸಮಾನವಾಗಿ ಹಾರುತ್ತಿದ್ದ, ಮಾನಸ ಸರೋವರದಲ್ಲಿ ವಾಸಮಾಡುವ, ಪ್ರಹೃಷ್ಟವಾದ ಮನಸ್ಸಿನಿಂದ ಕೂಡಿದ್ದ ರಾಜಹಂಸಗಳು ಬಂದುವು. ವೈಶ್ಯನ ಮಕ್ಕಳು ಆ ರಾಜಹಂಸಗಳನ್ನು ನೋಡಿ ಕಾಗೆಗೆ ಹೇಳಿದರು:

**ಭವಾನೇವ ವಿಶಿಷ್ಟೋ ಹಿ ಪತತ್ರಿಭ್ಯೋ ವಿಹಙ್ಗಮ ॥೧೭॥**

"ಕಾಗೆಯೇ! ಎಲ್ಲ ಪಕ್ಷಿಗಳಿಗಿಂತಲೂ ನೀನೇ ಶ್ರೇಷ್ಠನಾಗಿರುವೆ."

ಆ ಅಲ್ಪಬುದ್ಧಿಯ ಬಾಲಕರಿಂದ-ಸತ್ಯಾಂಶಕ್ಕೆ ವಿರೋಧವಾಗಿ ಹೇಳಲ್ಪಟ್ಟು-ವಂಚಿತವಾದ ಕಾಗೆಯು, ಮೂರ್ಖಬಾಲಕರು ಪರಿಹಾಸಕ್ಕಾಗಿ ಹೇಳಿದ ಮಾತುಗಳನ್ನು ತನ್ನ ಮೂರ್ಖತ್ವದಿಂದಲೂ ಮತ್ತು ದರ್ಪದಿಂದಲೂ ಸತ್ಯವೆಂದೇ ಭಾವಿಸಿಬಿಟ್ಟಿತು.

ವೈಶ್ಯಕುಮಾರರ ಉಚ್ಛಿಷ್ಟಾನ್ನವನ್ನೇ ತಿಂದು ಕೊಬ್ಬಿದ್ದ ಕಾಗೆಯು ಆ ಹಂಸಗಳಲ್ಲಿ ಶ್ರೇಷ್ಠವಾದ ಹಂಸವು ಯಾವುದೆಂಬುದನ್ನು ತಿಳಿದುಕೊಳ್ಳುವ ಸಲುವಾಗಿ ಹಾರಿಕೊಂಡು ಬಹಳ ದೂರದವರೆಗೆ ಹಾರುವ ಆ ಹಂಸಗಳಿದ್ದ ಸ್ಥಳಕ್ಕೆ ಹೋಯಿತು. ಬಹಳ ದೂರದವರೆಗೆ ಹಾರುವ ಆ ಹಂಸಪಕ್ಷಿಗಳಲ್ಲಿ ಯಾವುದು ಶ್ರೇಷ್ಠವಾದುದೆಂದು ಭಾವಿಸಿತೋ ಆ ಹಂಸಪಕ್ಷಿಯನ್ನು

ಕುರಿತು ದುರ್ಬುದ್ಧಿಯಿಂದ ಕೂಡಿದ್ದ ಕಾಗೆಯು ಹೇಳಿತು: "ನಾವಿಬ್ಬರೂ ಹಾರೋಣ"

ಬಹಳವಾಗಿ 'ಕಾ-ಕಾ' ಎಂದು ಕೂಗಿಕೊಂಡು ಮಾತನಾಡುತ್ತಿದ್ದ ಕಾಗೆಯ ಮಾತನ್ನು ಕೇಳಿ ಅಲ್ಲಿಗೆ ಆಗಮಿಸಿದ್ದ, ಪಕ್ಷಿಗಳಲ್ಲಿ ಶ್ರೇಷ್ಠವಾದ ಬಲಿಷ್ಠವಾಗಿದ್ದ ಹಂಸಗಳು ನಕ್ಕುಬಿಟ್ಟುವು ಮತ್ತು ಕಾಗೆಯನ್ನು ಕುರಿತು ಹೇಳಿದುವು:

"ಕಾಗೆಯೇ! ನಾವು ಮಾನಸಸರೋವರದಲ್ಲಿ ವಾಸಮಾಡುವ ಹಂಸಪಕ್ಷಿಗಳು. ಈ ಪೃಥ್ವಿಯಲ್ಲಿ ನಾವು ನಿತ್ಯವೂ ಸಂಚರಿಸುತ್ತಲೇ ಇರುತ್ತೇವೆ. ನಾವು ಬಹಳ ದೂರದವರೆಗೆ ಹಾರುವ ಸಾಮರ್ಥ್ಯವನ್ನು ಹೊಂದಿರುವುದರಿಂದಲೇ ಇತರ ಪಕ್ಷಿಗಳಿಂದ ನಾವು ಸಮ್ಮಾನಿತರಾಗಿದ್ದೇವೆ. ಇತರ ಪಕ್ಷಿಗಳಿಗಿಂತಲೂ ವಿಶಿಷ್ಟರೂ ಆಗಿದ್ದೇವೆ. ದುರ್ಬುದ್ಧಿಯ ಕಾಗೆಯೇ! ಬಲಿಷ್ಠವಾದ ಚಕ್ರಾಂಕವನ್ನು ಹೊಂದಿರುವ, ಬಹಳ ದೂರಕ್ಕೆ ಹಾರಬಲ್ಲ ಹಂಸಪಕ್ಷಿಯನ್ನು ಕಾಗೆಯಾಗಿರುವ ನೀನು ಹಾರುವ ಪಂದ್ಯಕ್ಕೇಕೆ ಕರೆಯುತ್ತಿರುವೆ? ಕಾಕನೇ! ನೀನು ನಮ್ಮೊಡನೆ, ನಮಗೆ ಸರಿ-ಸಮನಾಗಿ ಹೇಗೆ ಹಾರುವೆಯೆಂಬುದನ್ನಾದರೂ ಮೊದಲು ಹೇಳು."

ಕರ್ಣ! ವಿವೇಕದಿಂದ ಕೂಡಿದ ಹಂಸಪಕ್ಷಿಗಳ ಮಾತುಗಳನ್ನು ಕೇಳಿ ತನ್ನ ಬಲದ ವಿಷಯವಾಗಿ ಬಡಾಯಿಕೊಚ್ಚುತ್ತಿದ್ದ ಆ ಮೂರ್ಖಕಾಗೆಯು ಹಂಸಗಳನ್ನು ಪುನಃ ಪುನಃ ನಿಂದನೆಮಾಡುತ್ತಾ, ಜಾತಿಗತವಾದ ಕ್ಷುದ್ರತೆಯಿಂದ ಉತ್ತರಿಸಿತು:

**ಶತಮೇಕಂ ಚ ಪಾತಾನಾಂ ಪತಿತಾಸ್ಮಿ ನ ಸಂಶಯಃ**
**ಶತಯೋಜನಮೇಕೈಕಂ ವಿಚಿತ್ರಂ ವಿವಿಧಂ ತಥಾ ॥೨೫॥**

*ನೂರೊಂದು ಬಗೆಯ ಪಾತಗಳಲ್ಲಿಯೂ ನಾನು ಹಾರುತ್ತೇನೆ.

---

* ಶಾಸ್ತ್ರದಲ್ಲಿ ನೂರೊಂದು ಗತಿಗಳು ಹೀಗೆ ವಿವೃತವಾಗಿವೆ:-

ಉಡ್ಡೀನಮೂರ್ಧ್ವಗಮನಮವಡೀನಮಧೋಗತಿಃ । ಪ್ರಡೀನಂ ಸರ್ವತೋಯಾನಂ ಡೀನಂ ಗಮನಮಾತ್ರಕಮ್ ॥ ನಿಡೀನಂ ಶನಕೈರ್ಯಾನಂ ಸಂಡೀನಂ ಲಲಿತಂ ಗತಮ್। ತಿರ್ಯಗ್ಡೀನಂ ಗತಂ ಪ್ರಾಹುಸ್ತಿರಃ ಪ್ರವರಣಂ ಬುಧಾಃ॥ ತಾನ್ಯಾಶಾಭೇದಭಿನ್ನಾನಿ ಚತ್ವಾರಿ ಪ್ರತಿಜಾನತೇ ॥ ತಾನಿ ತಿರ್ಯಗ್ಡೀನಾನಿ। ವಿಡಂಬಿತಂ ವಿಡೀನಂ ಸ್ಯಾತ್ಪರಿಡೀನಂ ತು ಸರ್ವತಃ। ಪಶ್ಚಾದ್ಗತಿಃ ಪರಾಡೀನಂ ಸ್ವರ್ಗತಂ ತು ಸುಡೀನಕಮ್॥ ಆಭಿಮುಖ್ಯೇನ

ಇದರಲ್ಲಿ ಸಂಶಯವೇ ಇಲ್ಲ. ಒಂದೊಂದು ನೂರು ಯೋಜನವನ್ನೂ ಸಹ ವಿಧ-ವಿಧವಾದ ವಿಚಿತ್ರವಾದ ಗತಿಯಿಂದಲೇ ಹಾರುತ್ತೇನೆ.

**ಉಡ್ಡೀನಮವಡೀನಂ ಚ ಪ್ರಡೀನಂ ಡೀನಮೇವ ಚ ।**
**ನಿಡೀನಮಥ ಸಂಡೀನಂ ತೀರ್ಯಗ್ಡೀನಗತಾನಿ ಚ ॥೨೬॥**

**ವಿಡೀನಂ ಪರಿಡೀನಂ ಚ ಪರಾಡೀನಂ ಸುಡೀನಕಮ್ ।**
**ಅಭಿಡೀನಂ ಮಹಾಡೀನಂ ನಿಡೀನಮತಿಡೀನಕಮ್ ॥೨೭॥**

**ಅವಡೀನಂ ಪ್ರಡೀನಂ ಚ ಸಂಡೀನಂ ಡೀನಡೀನಕಮ್ ।**
**ಸಂಡೀನೋಡ್ಡೀನಡೀನಂ ಚ ಪುನರ್ಡೀನವಿಡೀನಕಮ್ ॥೨೮॥**

**ಸಮ್ಪಾತಂ ಸಮುದೀಷಂ ಚ ತತೋನ್ಯದ್ವ್ಯತಿರಿಕ್ತಕಮ್ ।**
**ಗತಾಗತಪ್ರತಿಗತಂ ಬಹ್ವೀಶ್ಚ ನಿಕುಲೀನಕಾಃ ॥೨೯॥**

ಹಂಸಗಳೇ! ನಾನು ಯಾವ ಯಾವ ಗತಿಗಳಲ್ಲಿ ಹಾರಬಲ್ಲೆನೆಂಬುದನ್ನು ಹೇಳುವೆನು ಕೇಳಿರಿ. ಉಡ್ಡೀನ (ಮೇಲಕ್ಕೆ ಹಾರುವುದು), ಅವಡೀನ (ಕೆಳಕ್ಕೆ ಹಾರುವುದು), ಪ್ರಡೀನ (ನಾಲ್ಕು ದಿಕ್ಕುಗಳಿಗೂ ಹಾರುವುದು), ಡೀನ (ಸಾಧಾರಣವಾಗಿ ಹಾರುವುದು), ನಿಡೀನ (ನಿಧಾನವಾಗಿ ಹಾರುವುದು), ಸಂಡೀನ (ಲಲಿತಗತಿಯಿಂದ ಹಾರುವುದು), ತಿರ್ಯಗ್ಡೀನ (ಅಡ್ಡವಾಗಿ ಹಾರುವುದು), ವಿಡೀನ (ಮತ್ತೊಂದು ಪಕ್ಷಿಯು ಹಾರುತ್ತಿರುವ ರೀತಿ

---

ಗಮನಮಭಿಡೀನಂ ಪ್ರಚಕ್ಷತೇ। ಯಾನಂ ಮಹಾಡೀನಮಾಹುಃ ಪವಿತ್ರಾಮೂರ್ಜಿತಾಂ ಗತಿಮ್। ನಿಡೀನಂ ನಿಶ್ಚಲಂ ಯಾನಂ ಪ್ರಚಣ್ಡಮತಿಡೀನಕಮ್। ವಿಡಂಬಿತಂ ಮಲ್ಲವತುಡ್ಡೀಯೋಡ್ಡೀಯ ಗಮನಮ್। ಅವರೋಹೋಽವಡೀನಂ ಸ್ಯಾತ್ಪ್ರಡೀನಂ ಚಿತ್ರಮುಚ್ಯತೇ। ಗತ್ವಾ ಲಲಿತಯಾ ಪೂರ್ವಮುಪಕ್ರಮ್ಯ ಸಮನ್ತತಃ। ಪರಿಕ್ರಮ್ಯ ಪ್ರತರಣಂ ಸಂಡೀನಂ ಡೀನಡೀನಕಮ್। ಸಂಡೀನೋಡ್ಡೀನಡೀನಂ ಸ್ಯಾತ್ತದೇವೋರ್ಧ್ವಪ್ರಕಲ್ಪನಾತ್। ಗತೌ ಗತ್ಯನ್ತರಾದ್ಭೇದೋ ಭವೇಡ್ಡೀನವಿಡೀನಕಮ್ ॥ ಕ್ಷಣಾತ್ಸಂಗತ್ಯ ನಿಷ್ಕಮ್ಯ ಪಕ್ಷಸಂಪಾತಮುಚ್ಯತೇ। ಊರ್ಧ್ವಾಧೋಗತಿಸಂಭೇದಃ ಸಮುದೀಷಂ ಪ್ರಚಕ್ಷತೇ ॥ ಸಂಕಲ್ಪಪಕ್ಷಗಮನಮುಚ್ಯತೇ ವ್ಯತಿರಿಕ್ತಕಮ್। ಷಡ್ವಿಂಶತಿರಮೀ ಭೇದಾಃ ಪಾತಾನಾಮಿಹ ದರ್ಶಿತಾಃ। ಮಹಾಡೀನಂ ವಿಹಾಯೈಷಾಂ ಪಾತಾನಾಂ ತ್ರಿವಿಧಾ ಗತಿಃ। ಗತಂ ತತ್ರ ತಯೋರ್ದ್ದಿಷ್ಟಮಾಗತಂ ಪುನರಾಗಮಃ। ಪ್ರತ್ಯಾವೃತ್ತಿಃ ಪ್ರತಿಗತಿರಿತಿ ಷಟ್ಸಪ್ತತಿಃ ಸ್ಮೃತಾಃ। ತೇಷಾಂ ನಿಪಾತಾಃ ಕಥ್ಯನ್ತೇ ಪ್ರತ್ಯೇಕಂ ಪಞ್ಚವಿಂಶತಿಃ ॥

ಯಲ್ಲಿಯೇ ಹಾರುವುದು), ಪರಿಡೀನ (ಹತ್ತು ದಿಕ್ಕುಗಳಲ್ಲಿಯೂ ಹಾರುವುದು), ಪರಾಡೀನ (ಹಿಂದಕ್ಕೆ ಹಾರುವುದು), ಸುಡೀನ (ಸ್ವರ್ಗದ ಕಡೆಗೆ ಹಾರುವುದು), ಅಭಿಡೀನ (ಮುಂದಕ್ಕೆ ನೇರವಾಗಿ ಹಾರಿಕೊಂಡು ಹೋಗುವುದು), ಮಹಾಡೀನ (ಬಹಳ ವೇಗವಾಗಿ ಹಾರುವುದು), ನಿಡೀನ (ರೆಕ್ಕೆಗಳನ್ನು ಅಳ್ಳಾಡಿಸದೆಯೇ ಹಾರುವುದು), ಅತಿಡೀನ (ಪ್ರಚಂಡವಾಗಿ ಹಾರುವುದು), ಸಂಡೀನಡೀನಡೀನ (ಸುಂದರಗತಿಯಿಂದ ಹಾರಲು ಪ್ರಾರಂಭಿಸಿ ವರ್ತುಲಾಕಾರವಾಗಿ ಸುತ್ತುತ್ತಾ ಕೆಳಕ್ಕೆ ಹಾರಿಬರುವುದು), ಸಂಡೀನೋಡ್ಡೀನಡೀನ (ಸುಂದರವಾದ ಗತಿಯಿಂದ ಹಾರಲು ಪ್ರಾರಂಭಿಸಿ ವರ್ತುಲಾಕಾರವಾಗಿ ಹಾರುತ್ತಾ ಮೇಲಕ್ಕೆ ಹೋಗುವುದು), ಡೀನವಿಡೀನ (ಒಂದು ಪ್ರಕಾರದಲ್ಲಿ ಹಾರಲು ಪ್ರಾರಂಭಿಸಿ ಮತ್ತೊಂದು ಗತಿಯನ್ನು ಹಿಡಿದು ಹಾರುವುದು), ಸಂಪಾತ (ಸ್ವಲ್ಪಕಾಲ ಸುಂದರವಾಗಿ ಹಾರಾಡಿ ಅನಂತರ ರೆಕ್ಕೆಗಳನ್ನು ಬಡಿದುಕೊಂಡು ಹಾರುವುದು), ಸಮುದೀಷ (ಒಮ್ಮೆ ಬಹಳ ಎತ್ತರಕ್ಕೂ ಮತ್ತೊಮ್ಮೆ ಬಹಳ ಕೆಳಕ್ಕೂ ಹಾರುತ್ತಾ ಹೋಗುವುದು), ವ್ಯತಿರಿಕ್ತಕ (ಯಾವುದೋ ಜಾಗಕ್ಕೆ ಹೋಗಬೇಕೆಂದು ಸಂಕಲ್ಪಿಸಿ ಹಾರುವುದು)-ಈ ಎಲ್ಲ ಇಪ್ಪತ್ತಾರು ಗತಿಗಳಲ್ಲಿಯೂ ನಾನು ಹಾರಬಲ್ಲೆನು. ಇವುಗಳಲ್ಲಿ ಮಹಾಡೀನ ವೊಂದನ್ನು ಬಿಟ್ಟು ಉಳಿದ ಗತಿಗಳೆಲ್ಲವೂ ಮೂರು-ಮೂರು ಬಗೆಗಳಾಗಿವೆ. ಗತ (ಯಾವುದೋ ಲಕ್ಷ್ಯವನ್ನು ಕುರಿತು ಹಾರುವುದು), ಅಗತ (ಲಕ್ಷ್ಯದ ಬಳಿಗೆ ಹೋಗಿ ಪುನಃ ಹೊರಟಿದ್ದ ಸ್ಥಳಕ್ಕೇ ಹಿಂದಿರುಗುವುದು), ಪ್ರತಿಗತ (ಹೊರಳಿಕೊಂಡು ಬರುವುದು). ಇವುಗಳೇ ಅಲ್ಲದೆ ಇನ್ನೂ ಇಪ್ಪತ್ತೈದು ನಿಪಾತಗಳೂ ಇವೆ. ಈ ಎಲ್ಲ ನೂರೊಂದು ಗತಿಗಳನ್ನೂ ನಾನು ಬಲ್ಲವ ನಾಗಿದ್ದೇನೆ. ಒಂದೊಂದು ಗತಿಯಲ್ಲಿಯೂ ನೂರು ಯೋಜನಗಳನ್ನು ಹಾರಬಲ್ಲೆನು.

ನೀವೆಲ್ಲರೂ ನೋಡುತ್ತಿರುವಂತೆಯೇ ನಾನು ಈ ಎಲ್ಲ ಗತಿಗಳಲ್ಲಿಯೂ ಹಾರುತ್ತೇನೆ. ಅನಂತರ ನನ್ನ ಬಲವೆಷ್ಟೆಂಬುದನ್ನು ನೀವೇ ಕಾಣುವಿರಿ. ನಿಮ್ಮಲ್ಲಿ ಯಾರೊಡನೆಯಾದರೂ ನಾನು ಅಂತರಿಕ್ಷಕ್ಕೆ ಹಾರಲು ಸಿದ್ಧನಾಗಿದ್ದೇನೆ. ನೀವೆಲ್ಲರೂ ಯಥೋಚಿತವಾಗಿ ವಿಚಾರಮಾಡಿ ನಾನು ಯಾವ ಹಂಸದೊಡನೆ ಹಾರಬೇಕೆಂಬುದನ್ನು ನಿರ್ಧರಿಸಿ ಹೇಳಿರಿ. ಹಂಸಪಕ್ಷಿಗಳೇ!

ಆಶ್ರಯರಹಿತವಾದ ಈ ಅಂತರಿಕ್ಷದಲ್ಲಿ ನಾನು ವಿವರಿಸಿರುವ ಪಾತಗಳಲ್ಲಿ (ಗತಿಗಳಲ್ಲಿ) ಯಾವ ಗತಿಯ ಮೂಲಕವಾಗಿ ಹಾರಬೇಕೆಂಬುದನ್ನು ನೀವೆಲ್ಲರೂ ದೃಢವಾಗಿ ನಿಶ್ಚಯಿಸಿ ನನ್ನೊಡನೆ ಹಾರಲು ಬರುವಿರಲ್ಲವೆ?"



ಕರ್ಣ! ಹೀಗೆ ಕಾಗೆಯು ಹಾರುವುದರಲ್ಲಿರುವ ತನ್ನ ಪಾಂಡಿತ್ಯವನ್ನು ಹೇಳಿಕೊಳ್ಳಲಾಗಿ ಹಂಸಗಳ ಸಮೂಹದಲ್ಲಿ ಒಂದು ಪಕ್ಷಿಯು ಗಹ-ಗಹಿಸಿ ನಗುತ್ತಾ ಕಾಗೆಯೊಡನೆ ಹೇಳಿದ ಮಾತನ್ನೇ ನಿನ್ನೊಡನೆ ಹೇಳುತ್ತೇನೆ, ಕೇಳು:

"ಕಾಗೆಯೇ! ನೀನು ನೂರೊಂದು ಪಾತಗಳ ಮೂಲಕವಾಗಿ ಹಾರುವೆಯೆಂಬುದಂತೂ ನಿಜ. ಯಾವ ಒಂದೇ ಒಂದು ಪಾತವನ್ನು ಎಲ್ಲ

ಪಕ್ಷಿಗಳೂ ತಿಳಿದುಕೊಂಡಿವೆಯೋ ಆ ಒಂದು ಪಾತದಿಂದಲೇ ನಾನು ಹಾರಬಲ್ಲೆನು. ಬೇರೆಯ ಪಾತಗಳು ನನಗೆ ತಿಳಿಯವು. ತಾಮ್ರಾಕ್ಷನೇ! ನಿನಗೆ ಉಚಿತವೆನಿಸಿದರೆ ನಿನಗೆ ತಿಳಿದಿರುವ ಆ ಯಾವುದಾದರೂ ಪಾತದಿಂದ ನೀನು ನನ್ನೊಡನೆ ಹಾರಬಹುದು."

ಹಂಸಪಕ್ಷಿಯು ಹೇಳಿದ ಮಾತನ್ನು ಕೇಳಿ ಅಲ್ಲಿಗೆ ಬಂದಿದ್ದ ಇತರ ಕಾಗೆಗಳೂ ನಗಲು ಪ್ರಾರಂಭಿಸಿದುವು. ಅವುಗಳ ಮನಸ್ಸಿನಲ್ಲಿ ಒಂದು ಸಮಸ್ಯೆಯು ಹುಟ್ಟಿತು. "ನಮ್ಮ ಕಾಗೆಗೆ ನೂರೊಂದು ಪಾತಗಳು ತಿಳಿದಿವೆ. ಈ ಹಂಸಕ್ಕೆ ಒಂದು ಪಾತವು ಮಾತ್ರವೇ ತಿಳಿದಿದೆ. ಆ ಒಂದೇ ಪಾತದಿಂದ ನೂರೊಂದು ಪಾತಗಳನ್ನು ತಿಳಿದಿರುವ ಕಾಗೆಯನ್ನು ಈ ಹಂಸವು ಹೇಗೆ ಜಯಿಸಬಲ್ಲುದು? ನಮ್ಮ ಕಾಗೆಯಾದರೋ ಬಹಳ ಬಲಿಷ್ಠವಾಗಿದೆ. ಆದುದರಿಂದ ಬಹಳ ಶೀಘ್ರವಾಗಿಯೂ ಹಾರಬಲ್ಲದು. ಇದಕ್ಕೆ ತಿಳಿದಿರುವ ನೂರೊಂದು ಪಾತಗಳಲ್ಲಿ ಒಂದು ಪಾತದಿಂದಲೇ ಹಂಸಪಕ್ಷಿಯನ್ನದು ಜಯಿಸಬಲ್ಲುದು."

'ನಾನು ಜಯಿಸುವೆನು; ತಾನು ಜಯಿಸುವೆನು'-ಎಂಬ ಸ್ಪರ್ಧೆಯಿಂದ ಕಾಗೆ-ಹಂಸಗಳು ಹಾರಿದುವು. ಹಂಸವು ಹಾರಲು ಒಂದೇ ಪಾತವನ್ನು (ಗತಿಯನ್ನು) ತಿಳಿದಿದ್ದಿತು. ಆ ಗತಿಯಲ್ಲಿಯೇ ಅದು ಹಾರತೊಡಗಿತು. ಕಾಗೆಯು ನೂರು ಪಾತಗಳನ್ನು ತಿಳಿದುಕೊಂಡಿದ್ದಿತು. ಆ ನೂರು ಗತಿಗಳಿಂದಲೂ ಅದು ಹಾರತೊಡಗಿತು.

ಹೀಗೆ ಹಂಸ-ವಾಯಸಗಳು ಸ್ಪರ್ಧೆಯಿಂದ ಹಾರಲು ತೊಡಗಿದುವು.

ಕಾಗೆಯು ತಾನು ತಿಳಿದಿದ್ದ ಅನೇಕವಿಧವಾದ ಪಾತಗಳಿಂದ ಪ್ರೇಕ್ಷಕರನ್ನು ಆಶ್ಚರ್ಯಚಕಿತರನ್ನಾಗಿ ಮಾಡುವ ಇಚ್ಛೆಯಿಂದ ತನಗೆ ತಿಳಿದಿದ್ದ ಎಲ್ಲ ಪಾತಗಳನ್ನೂ ಪ್ರದರ್ಶಿಸತೊಡಗಿತು. ಕಾಗೆಯ ಚಿತ್ರ-ವಿಚಿತ್ರವಾದ ಪಾತಗಳನ್ನು ಬಾರಿ-ಬಾರಿಗೂ ನೋಡುತ್ತಿದ್ದ ಉಳಿದ ಕಾಗೆಗಳು ಆನಂದಭರಿತವಾಗಿ 'ಕಾ-ಕಾ' ಎಂದು ಗಟ್ಟಿಯಾಗಿ ಕೂಗತೊಡಗಿದುವು. ಮೂಹೂರ್ತಪರ್ಯಂತವಾಗಿ ಕಾಗೆಗಳು ಅಲ್ಲಿಂದಿಲ್ಲಿಗೂ ಇಲ್ಲಿಂದಲ್ಲಿಗೂ

ಹಾರಾಡುತ್ತಾ 'ಅದೋ ನೋಡಿರಿ, ಹಂಸಗಳೇ! ನಮ್ಮ ಕಾಗೆಯು ಈ ಪಾತವನ್ನು ತೋರಿಸುತ್ತಿದೆ. ಆ ಗತಿಯನ್ನಾಶ್ರಯಿಸಿ ಹಾರಾಡುತ್ತಿದೆ'– ಎಂಬುದಾಗಿ ಹೇಳುತ್ತಾ ಹಂಸಪಕ್ಷಿಗಳನ್ನು ಅಪಹಾಸ್ಯಮಾಡುತ್ತಾ ಅಪ್ರಿಯವಾದ ಮಾತುಗಳನ್ನೂ ಹೇಳುತ್ತಿದ್ದುವು. ಕೆಲವು ಕಾಗೆಗಳು ವೃಕ್ಷಗಳಿಂದ ಕೆಳಕ್ಕೂ-ಕೆಳಗಿನಿಂದ ಮೇಲಕ್ಕೂ ಹಾರಾಡುತ್ತಾ ವಿಧವಿಧವಾಗಿ ಕೂಗುತ್ತಾ ತಮ್ಮ ಕಾಗೆಯೇ ಜಯಗಳಿಸಲೆಂದು ಕೋರುತ್ತಿದ್ದುವು.

ಕರ್ಣ! ಹಂಸವಾದರೋ ಮೃದುಗತಿಯೊಂದರಿಂದಲೇ ಹಾರಲು ಪ್ರಾರಂಭಿಸಿತು. ಮುಹೂರ್ತಕಾಲದವರೆಗೆ ಹಂಸವು ಹಿಂದೆಯೇ ಉಳಿ ಯಿತು. ಕಾಗೆಯೇ ಹಂಸವನ್ನು ಪರಾಜಯಗೊಳಿಸಿಬಿಡುವುದೋ ಎಂಬಂತೆ ಕಾಣುತ್ತಿದ್ದಿತು. ಕಾಗೆಗಳು ಪುನಃ ಹಂಸಗಳನ್ನು ಅಪಮಾನಗೊಳಿಸುತ್ತಾ ಹೇಳಿದುವು: 'ಪಂದ್ಯಕಟ್ಟಿಕೊಂಡು ನಿಮ್ಮ ಕಡೆಯಿಂದ ಹಾರಿದ ಹಂಸವು ಹಿಂದೆ ಹಿಂದೆಯೇ ಉಳಿದುಕೊಳ್ಳುತ್ತಿದೆ.'

ಮೇಲೆ ಹಾರಿಹೋಗುತ್ತಿದ್ದ ಹಂಸವು ಕಾಗೆಗಳ ಮಾತನ್ನು ಕೇಳುತ್ತಾ ಪಶ್ಚಿಮದಿಕ್ಕಿಗೆ ತಿರುಗಿ ಬಹಳ ವೇಗವಾಗಿ ಮೇಲು-ಮೇಲಕ್ಕೆ ಹೋಗುತ್ತಾ ಮಕರಾಲಯವಾದ ಸಮುದ್ರದ ಕಡೆಗೆ ಹೋಯಿತು. ಅದನ್ನು ನೋಡಿದ ಪ್ರತಿಸ್ಪರ್ಧಿಯಾದ ಕಾಗೆಯ ಮನಸ್ಸಿನಲ್ಲಿ ಭಯವಂಕುರಿಸಿತು. ಆ ವೇಳೆ ಗಾಗಲೇ ಅದು ಬಹಳ ಬಳಲಿದ್ದಿತು. ಆಶ್ರಯವನ್ನು ಪಡೆಯಲು ಸಮುದ್ರದ ಮಧ್ಯಭಾಗದಲ್ಲಿ ದ್ವೀಪವಾಗಲೀ, ವೃಕ್ಷವಾಗಲೀ ಕಾಣಿಸುತ್ತಿರಲಿಲ್ಲ. ಅದರಿಂದ ಗಾಬರಿಗೊಂಡ ಕಾಗೆಯ ಬುದ್ಧಿಗೆಟ್ಟಿತು. ಆ ಸಮಯದಲ್ಲಿ ಕಾಗೆಯು ಹೀಗೆ ಯೋಚಿಸತೊಡಗಿತು: 'ಬಹಳವಾಗಿ ಬಳಲಿರುವ ನಾನು ಈ ಜಲರಾಶಿಯ ಮಧ್ಯದಲ್ಲಿ ಹೇಗೆ ವಿಶ್ರಮಿಸಿಕೊಳ್ಳಲಿ? ಅನೇಕ ಜಲಜಂತುಗಳಿಗೆ ನಿವಾಸ ಸ್ಥಾನವಾದ ಈ ಸಮುದ್ರವು ನನ್ನಿಂದ ದಾಟಲು ಅಸಾಧ್ಯವಾಗಿ ಕಾಣುತ್ತಿದೆ. ಅಸಂಖ್ಯಾತವಾದ ಪ್ರಾಣಿಗಳಿಂದ ಉದ್ಭಾಸಿತವಾಗಿರುವ, ವಿಶಾಲವಾದ ಈ ಸಮುದ್ರವು ಆಕಾಶಕ್ಕಿಂತಲೂ ದೊಡ್ಡದಾಗಿದೆ. ದಿಕ್ಕುಗಳೇ ಆವರಣ ಗಳಾಗಿರುವ ಸಮುದ್ರದ ಗಾಂಭೀರ್ಯದಿಂದಾಗಿ ಸಮುದ್ರದ ಮೇಲೆ ಪ್ರಯಾಣಮಾಡುವ ಜನರೂ ಅದರಲ್ಲಿರುವ ಜಲರಾಶಿಯ ಅಗಾಧತೆಯನ್ನು ತಿಳಿದವರಾಗಿಲ್ಲ.'

ಕರ್ಣ! ಸ್ವಲ್ಪ ದೂರ ಹಾರಿದ ಮಾತ್ರದಿಂದಲೇ ಕಾಗೆಗೆ ಸಮುದ್ರದ ಅಗಾಧತೆಯು ಹೇಗೆ ತಾನೇ ತಿಳಿದೀತು? ಹಂಸವು ಮುಹೂರ್ತಕಾಲದಲ್ಲಿ ಬಹಳ ದೂರದವರೆಗೆ ಹಾರಿ ಕಾಗೆಯನ್ನೂ ಅತಿಕ್ರಮಿಸಿ ಮುಂದೆ ನಡೆಯಿತು. ಆದರೆ ಕಾಗೆಯು ಮುಂದೆ ಹಾರಿಕೊಂಡು ಬಾರದೇ ಇದ್ದುದನ್ನು ಗಮನಿಸಿ ಹಂಸವು ತಾನೂ ಮುಂದೆ ಹೋಗಲಿಲ್ಲ. ಚಕ್ರಾಂಗವು (ಹಂಸವು) ಕಾಗೆಯನ್ನು ಅತಿಕ್ರಮಿಸಿ ಮುಂದೆ ಹೋಗಬಹುದಾಗಿದ್ದಿತು. ಆದರೂ ಹಂಸವು ಕಾಗೆಯನ್ನು ನಿರೀಕ್ಷಿಸುತ್ತಾ ಅದೂ ಹಾರಿಕೊಂಡು ತನ್ನ ಸಮೀಪಕ್ಕೆ ಬರಲೆಂದು ಯೋಚಿಸಿ ಅಲ್ಲಿಯೇ ನಿಂತುಬಿಟ್ಟಿತು. ಬಹಳ ಆಯಾಸಗೊಂಡ ಕಾಗೆಯು ಸ್ವಲ್ಪಹೊತ್ತಿನ ಮೇಲೆ ನಿಧಾನವಾಗಿ ಹಾರಿಕೊಂಡು ಹಂಸದ ಸಮೀಪಕ್ಕೆ ಬಂದಿತು. ಕಾಗೆಯು ಬಹಳ ಶೋಚನೀಯವಾದ ಸ್ಥಿತಿಯಲ್ಲಿರುವುದನ್ನು ಹಂಸವು ಗಮನಿಸಿತು. ಸತ್ಪುರುಷರ ಆಚರಣೆಯನ್ನು ಸ್ಮರಿಸಿದ ಆ ಹಂಸವು ನೀರಿನಲ್ಲಿ ಮುಳುಗಿಹೋಗಲಿದ್ದ ಕಾಗೆಯನ್ನು ಉದ್ಧರಿಸಬೇಕೆಂದು ಇಚ್ಛಿಸಿ ಕಾಗೆಯೊಡನೆ ಈ ಮಾತುಗಳನ್ನು ಹೇಳಿತು:

“ಕಾಕ! ನೀನು ಬಾರಿ-ಬಾರಿಗೂ ಅನೇಕಾನೇಕ ಪಾತಗಳ ವಿಷಯವಾಗಿ ಮಾತನಾಡುತ್ತಿದ್ದೆ. ಆದರೆ ನೀನೀಗ ಕೈಗೊಂಡಿರುವ ಗತಿಯ ರಹಸ್ಯವನ್ನು ನೀನಾಗ ನಮಗೆ ಹೇಳಲೇ ಇಲ್ಲ. ಈಗ ನೀನು ತೋರಿಸುತ್ತಿರುವ ಪಾತವು ಹಿಂದೆ ನೀನು ವಿವರಿಸಿದುದಕ್ಕಿಂತಲೂ ಬಹಳ ಭಿನ್ನವಾಗಿದೆ. ಇದೊಂದು ಹೊಸಪಾತವೇ?

**ಕಿಂ ನಾಮ ಪತಿತಂ ಕಾಕ ಯತ್ತ್ವಂ ಪತಸಿ ಸಾಮ್ಪ್ರತಮ್ ।**
**ಜಲಂ ಸ್ಪೃಶಸಿ ಪಕ್ಷಾಭ್ಯಾಂ ತುಣ್ಡೇನ ಚ ಪುನಃ ಪುನಃ ॥೫೪॥**

ಈಗಿನ ನಿನ್ನ ಹಾರಾಟವು ಯಾವ ಪಾತಕ್ಕೆ ಸೇರಿದುದು? ಇದರ ಹೆಸರೇನು? ಎರಡು ರೆಕ್ಕೆಗಳಿಂದಲೂ ಮತ್ತು ಕೊಕ್ಕಿನಿಂದಲೂ ನೀರನ್ನು ಪುನಃ ಪುನಃ ಸ್ಪರ್ಶಿಸುತ್ತಲೇ ಇರುವೆ.

**ಪ್ರಬ್ರೂಹಿ ಕತಮೇ ತತ್ರ ಪಾತೇ ವರ್ತಸಿ ವಾಯಸ ।**
**ಏಹ್ಯೇಹಿ ಕಾಕ ಶೀಘ್ರಂ ತ್ವಮೇಷ ತ್ವಾಂ ಪ್ರತಿಪಾಲಯೇ ॥೫೫॥**

ವಾಯಸವೇ! ಬೇಗ ಹೇಳು. ಈಗ ನೀನು ಎಷ್ಟನೆಯ ಪಾತದಲ್ಲಿ ಹಾರಾಡುತ್ತಿರುವೆ? ಬೇಗ ಬಾ. ಈಗ ನಿನ್ನನ್ನೇ ನಾನು ಎದುರು ನೋಡುತ್ತಿದ್ದೇನೆ."



ದುಷ್ಟಾತ್ಮನಾದ ಕರ್ಣನೇ! ಉಚ್ಛಿಷ್ಟಭೋಜನದಿಂದ ದರ್ಪಿಷ್ಠವಾಗಿದ್ದ ಕಾಗೆಯು ಆ ಸಮಯದಲ್ಲಿ ಬಹಳ ಸಂಕಟಪಡುತ್ತಾ ರೆಕ್ಕೆಗಳಿಂದಲೂ ಕೊಕ್ಕಿನಿಂದಲೂ ನೀರನ್ನು ಸ್ಪರ್ಶಿಸುತ್ತಿದ್ದಿತು. ಸಮುದ್ರದ ಪಾರವನ್ನು ಕಾಣದೇ ಪಾತವೇಗದಿಂದ ಸಂಪೂರ್ಣವಾಗಿ ಬಳಲಿಹೋಗಿದ್ದ ಕಾಗೆಯು ಕ್ಷಣ-ಕ್ಷಣಕ್ಕೂ ನೀರಿನಲ್ಲಿ ಬೀಳುತ್ತೇಳುತ್ತಾ ಹಂಸದೊಡನೆ ಹೇಳಿತು:

**ವಯಂ ಕಾಕಾಃ ಕುತೋ ನಾಮ ಚರಾಮಃ ಕಾಕವಾಶಿಕಾಃ।**
**ಹಂಸ ಪ್ರಾಣೈಃ ಪ್ರಪದ್ಯೇ ತ್ವಾಮುದಕಾನ್ತಂ ನಯಸ್ವ ಮಾಮ್ ॥**

"ಹಂಸ! ಕಾಗೆಗಳಾದ ನಾವು ಕಾ-ಕಾ ಎಂದು ಕೂಗಿಕೊಂಡು ಅಲ್ಲಲ್ಲಿಯೇ ಸುತ್ತಾಡುತ್ತಿರುತ್ತೇವೆ. ಹಾರಾಟವು ನಮಗೆಲ್ಲಿ ತಿಳಿದಿರುವುದು? ಪ್ರಾಣಗಳ ಸಹಿತವಾಗಿ ನಿನಗೆ ಶರಣಾಗತನಾಗಿದ್ದೇನೆ. ನನ್ನನ್ನು ಸಮುದ್ರದ ತೀರದವರೆಗೂ ಕರೆದುಕೊಂಡು ಹೋಗು."

ಕರ್ಣ! ಆ ಸಮಯದಲ್ಲಿ ಕಾಗೆಯು ಬಹಳವಾಗಿ ಬಳಲಿಹೋಗಿದ್ದಿತು. ರೆಕ್ಕೆಗಳಿಂದಲೂ ಕೊಕ್ಕಿನಿಂದಲೂ ನೀರನ್ನು ಸ್ಪರ್ಶಿಸುತ್ತಿದ್ದಿತು. ಆದರೆ ಅದಕ್ಕೆ ಹೆಚ್ಚುಹೊತ್ತು ರೆಕ್ಕೆಗಳನ್ನು ಬಡಿದುಕೊಂಡಿರಲೂ ಸಾಧ್ಯವಾಗಲಿಲ್ಲ. ರೆಕ್ಕೆಗಳನ್ನೂ ಬಡಿಯಲಾಗದೇ ಒಡನೆಯೇ ನೀರಿನಲ್ಲಿ ಬಿದ್ದುಬಿಟ್ಟಿತು. ನೀರಿನಲ್ಲಿ ಬಿದ್ದಿದ್ದ, ಕುಗ್ಗಿಹೋದ ಮನಸ್ಸಿನಿಂದ ಕೂಡಿದ್ದ, ಸತ್ತುಹೋಗುವುದರಲ್ಲಿದ್ದ ಕಾಗೆಯನ್ನು ನೋಡಿ ಹಂಸವು ಹೇಳಿತು:

"ಕಾಕ! ನೀನು ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುತ್ತಿದ್ದಾಗ 'ನೂರೊಂದು ವಿಧವಾದ ಪಾತಗಳಲ್ಲಿ ನಾನು ಹಾರಬಲ್ಲೆನು' ಎಂದು ಹೇಳಿದುದನ್ನು ಈಗ ಸ್ಮರಿಸು. ನನಗೆ ಒಂದು ಪಾತವು ಮಾತ್ರವೇ ತಿಳಿದಿದ್ದಿತು. ನಿನಗೆ ನೂರೊಂದು ಪಾತಗಳು ತಿಳಿದಿದ್ದು ನನಗಿಂತಲೂ ಅಧಿಕನಾಗಿದ್ದೆ. ಹೀಗಿದ್ದರೂ ನೀನೀಗ ಬಹಳವಾಗಿ ಬಳಲಿ ಸಮುದ್ರದಲ್ಲೇಕೆ ಬಿದ್ದಿರುವೆ?"

ಕರ್ಣ! ನೀರಿನಲ್ಲಿ ಬಿದ್ದು ವಿನಾಶಹೊಂದುವುದರಲ್ಲಿದ್ದ ಕಾಗೆಯು ನೀರಿನ ಮೇಲುಭಾಗದಲ್ಲಿದ್ದ ಹಂಸವನ್ನು ನೋಡಿ ಅದನ್ನು ಪ್ರಸನ್ನಗೊಳಿಸುತ್ತಾ ಹೀಗೆ ಹೇಳಿತು:

"ಹಂಸ! ವೈಶ್ಯಕುಮಾರರ ಉಚ್ಛಿಷ್ಟಾನ್ನವನ್ನು ತಿಂದು ದರ್ಪಿತನಾಗಿದ್ದ ನಾನು ಇತರ ಕಾಗೆಗಳನ್ನೂ ಮತ್ತು ಪಕ್ಷಿಗಳನ್ನೂ ಅವಮಾನಗೊಳಿಸುತ್ತಾ ಗರುಡಪಕ್ಷಿಗೆ ಸಮಾನನಾದವನೆಂದೇ ಭಾವಿಸಿಕೊಂಡಿದ್ದೆನು. ಪ್ರಾಣಗಳ ಜೊತೆಯಲ್ಲಿಯೇ ನಿನಗೆ ಶರಣಾಗತನಾಗಿದ್ದೇನೆ. ಹೇಗಾದರೂ ಮಾಡಿ ನನ್ನನ್ನು ದ್ವೀಪದ ಬಳಿಗೆ ಬಿಟ್ಟುಬಿಡು. ಪ್ರಭುವೇ! ನಾನು

ಕ್ಷೇಮವಾಗಿ ನನ್ನ ದೇಶಕ್ಕೆ ತಲುಪಿದೆನೆಂದರೆ ಮುಂದೆ ನಾನು ಖಂಡಿತವಾಗಿಯೂ ಯಾರನ್ನೂ ಅವಮಾನಿಸುವುದಿಲ್ಲ. ಈ ವಿಪತ್ತಿನಿಂದ ನನ್ನನ್ನು ಉದ್ಧರಿಸು."

ಕರ್ಣ! ಹೀಗೆ ಹೇಳಿಕೊಂಡು ಅಳುತ್ತಿದ್ದ, ಬುದ್ಧಿಗೆಟ್ಟಿದ್ದ, ಕಾ-ಕಾ ಎಂದು ಅರಚುತ್ತಿದ್ದ, ಮಹಾಸಮುದ್ರದಲ್ಲಿ ಮುಳುಗಿಹೋಗುವುದರಲ್ಲಿದ್ದ, ನೀರಿನಿಂದ ತೋಯ್ದು ನೋಡಲು ಬಹಳ ಅಸಹ್ಯವಾಗಿ ಕಾಣುತ್ತಿದ್ದ ಕಾಗೆಯನ್ನು ಹಂಸಪಕ್ಷಿಯು ದಯಾಭಾವದಿಂದ ಬಹಳ ಶೀಘ್ರವಾಗಿ ಕಾಲುಗಳಿಂದ ಹಿಡಿದು ಮೆಲ್ಲ-ಮೆಲ್ಲಗೆ ಮೇಲೆತ್ತಿ ತನ್ನ ಬೆನ್ನಿನಮೇಲಿಟ್ಟುಕೊಂಡಿತು. ಹಂಸವು ಜ್ಞಾನಾಜ್ಞಾನಸ್ಥಿತಿಯಲ್ಲಿದ್ದ ಕಾಗೆಯನ್ನು ಮೇಲೆ ಕುಳ್ಳಿರಿಸಿಕೊಂಡು–ಸ್ಪರ್ಧೆಯಿಂದ ಎರಡು ಪಕ್ಷಿಗಳೂ ಎಲ್ಲಿಂದ ಹೊರಟಿದ್ದುವೋ ಆ ದ್ವೀಪಕ್ಕೇ–ಬಹಳ ಬೇಗ ಆಗಮಿಸಿತು. ಕಾಗೆಯನ್ನು ತನ್ನ ಬೆನ್ನಿನಮೇಲಿಂದ ಮೆಲ್ಲಗೆ ಕೆಳಗಿಳಿಸಿ, ಪುನಃ ಅದನ್ನು ಉಪಚರಿಸಿ, ಅದಕ್ಕೆ ಸಮಾಧಾನಹೇಳಿ ಮನಸ್ಸಿನಂತೆ ಬಹಳ ವೇಗವಾಗಿ ಹೋಗುವ ಆ ಹಂಸವು ಇಚ್ಛೆಬಂದ ಕಡೆಗೆ ಹಾರಿಹೋಯಿತು.

ಈ ರೀತಿ ಉಚ್ಛಿಷ್ಟಾನ್ನದಿಂದಲೇ ಪುಷ್ಟವಾಗಿದ್ದ ಆ ಕಾಗೆಯು ಹಂಸಪಕ್ಷಿಯಿಂದ ಪರಾಜಯಗೊಂಡು, ಬಲ-ವೀರ್ಯಗಳಿಂದ ಪ್ರಾಪ್ತವಾಗಿದ್ದ ಅಹಂಕಾರವನ್ನು ಸಂಪೂರ್ಣವಾಗಿ ತೊರೆದು ಶಾಂತಿಯನ್ನು ಹೊಂದಿತು.

**ಉಚ್ಛಿಷ್ಟಭೋಜನಃ ಕಾಕೋ ಯಥಾ ವೈಶ್ಯಕುಲೇ ಪರಾ ।**
**ಏವಂ ತ್ವಮುಚ್ಛಿಷ್ಟಭೃತೋ ಧಾರ್ತರಾಷ್ಟ್ರೈರ್ನ ಸಂಶಯಃ ।**
**ಸದೃಶಾಞ್ಶ್ರೇಯಸಶ್ಚಾಪಿ ಸರ್ವಾನ್ಕರ್ಣಾವಮನ್ಯಸೇ ॥೭೨॥**

ಹಿಂದೆ ವೈಶ್ಯಕುಲದಲ್ಲಿದ್ದ ಕಾಗೆಯು ಕುಮಾರರ ಉಚ್ಛಿಷ್ಟದಿಂದ ಹೃಷ್ಟ-ಪುಷ್ಟವಾದಂತೆ, ನೀನೂ ಸಹ ಧೃತರಾಷ್ಟ್ರನ ಮಕ್ಕಳ ಉಚ್ಛಿಷ್ಟಾನ್ನದಿಂದ ಹೃಷ್ಟ-ಪುಷ್ಟನಾಗಿರುವೆ. ಇದರಲ್ಲಿ ಸಂಶಯವೇ ಇಲ್ಲ. ಉಚ್ಛಿಷ್ಟ ಭೋಜಿಯಾದ ಕಾಗೆಯಂತೆಯೇ ನೀನೂ ಸಹ ನಿನಗೆ ಸಮಾನರಾದವರನ್ನೂ ಮತ್ತು ಶ್ರೇಷ್ಠರಾದವರನ್ನೂ ಅಪಮಾನಗೊಳಿಸುತ್ತಿರುವೆ.

**ದ್ರೋಣದ್ರೌಣಿಕೃಪೈರ್ಗುಪ್ತೋ ಭೀಷ್ಮೇಣಾನ್ಯೈಶ್ಚ ಕೌರವೈಃ ।**
**ವಿರಾಟನಗರೇ ಪಾರ್ಥಮೇಕಂ ಕಿಂ ನಾವಧೀಸ್ತದಾ ॥೭೩॥**

ವಿರಾಟನಗರದಲ್ಲಿ ದ್ರೋಣರಿಂದಲೂ, ಅಶ್ವತ್ಥಾಮನಿಂದಲೂ, ಕೃಪರಿಂದಲೂ, ಭೀಷ್ಮನಿಂದಲೂ ಮತ್ತು ಇತರ ಕೌರವರಿಂದಲೂ ಅಭಿರಕ್ಷಿತನಾಗಿದ್ದ ನೀನು, ಆ ಸಮಯದಲ್ಲಿ ಏಕಾಕಿಯಾಗಿದ್ದ ಅರ್ಜುನನನ್ನೇಕೆ ಸಂಹರಿಸಲಿಲ್ಲ?

**ಯತ್ರ ವ್ಯಸ್ತಾಃ ಸಮಸ್ತಾಶ್ಚ ನಿರ್ಜಿತಾಃ ಸ್ಥ ಕಿರೀಟಿನಾ ।**
**ಶೃಗಾಲಾ ಇವ ಸಿಂಹೇನ ಕ್ವ ತೇ ವೀರ್ಯಮಭೂತ್ತದಾ ॥೭೪॥**

ಆ ಸಮಯದಲ್ಲಿ ಏಕಾಕಿಯಾದ ಕಿರೀಟಿಯು–ಸಿಂಹವು ಗುಳ್ಳೇನರಿಗಳನ್ನು ಭಯಪಡಿಸಿ ಚದುರಿಸುವಂತೆ–ನಿಮ್ಮನ್ನು ಪ್ರತ್ಯೇಕವಾಗಿಯೂ ಸಾಮೂಹಿಕವಾಗಿಯೂ ಚದುರಿಸಿ ಪರಾಜಯಗೊಳಿಸಿದನು. ಆ ಸಮಯದಲ್ಲಿ ನಿನ್ನ ಪರಾಕ್ರಮವು ಎಲ್ಲಿಗೆ ಹೋಗಿದ್ದಿತು?

**ಭ್ರಾತರಂ ನಿಹತಂ ದೃಷ್ಟ್ವಾ ಸಮರೇ ಸವ್ಯಸಾಚಿನಾ ।**
**ಪಶ್ಯತಾಂ ಕುರುವೀರಾಣಾಂ ಪ್ರಥಮಂ ತ್ವಂ ಪಲಾಯಿತಃ ॥೭೫॥**

ಯುದ್ಧದಲ್ಲಿ ಅರ್ಜುನನಿಂದ ನಿನ್ನ ತಮ್ಮನು ಹತನಾದುದನ್ನು ನೋಡಿ ಕುರುವೀರರೆಲ್ಲರೂ ನೋಡುತ್ತಿದ್ದಂತೆಯೇ, ಎಲ್ಲರಿಗಿಂತಲೂ ಮೊದಲು ನೀನೇ ಪಲಾಯನಮಾಡಿದೆ.

**ತಥಾ ದ್ವೈತವನೇ ಕರ್ಣ ಗನ್ಧರ್ವೈಃ ಸಮಭಿದ್ರುತಃ ।**
**ಕುರೂನ್ಸಮಗ್ರಾನುತ್ಸೃಜ್ಯ ಪ್ರಥಮಂ ತ್ವಂ ಪಲಾಯಿತಃ ॥೭೬॥**

ಇದೇ ರೀತಿಯಲ್ಲಿ ದ್ವೈತವನದಲ್ಲಿ ಗಂಧರ್ವರು ಆಕ್ರಮಣ ನಡೆಸಿದ್ದಾಗ ಎಲ್ಲ ಕುರುಗಳನ್ನೂ ಬಿಟ್ಟು ಎಲ್ಲರಿಗಿಂತಲೂ ಮೊದಲು ನೀನೇ ಪಲಾಯನಮಾಡಿದೆ.

**ಹತ್ವಾ ಜಿತ್ವಾ ಚ ಗನ್ಧರ್ವಾಂಶ್ಚಿತ್ರಸೇನಮುಖಾನ್ರಣೇ ।**
**ಕರ್ಣ ದುರ್ಯೋಧನಂ ಪಾರ್ಥಃ ಸಭಾರ್ಯಂ ಸಮಮೋಕ್ಷಯತ್ ॥**

ಕರ್ಣ! ರಣರಂಗದಲ್ಲಿ ಅರ್ಜುನನು ಚಿತ್ರಸೇನಪ್ರಮುಖರಾದ

ಗಂಧರ್ವರನ್ನು ಹಿಂಸಿಸಿ ಜಯಶಾಲಿಯಾಗಿ ಭಾರ್ಯಾಸಮೇತನಾದ ದುರ್ಯೋಧನನನ್ನು ಬಂಧನದಿಂದ ಬಿಡುಗಡೆ ಮಾಡಿಸಿದನು.

ಇಷ್ಟೇ ಅಲ್ಲದೇ ನಿನ್ನ ಗುರುವಾದ ಪರಶುರಾಮನೂ ಸಹ ಹಿಂದೆ ರಾಜಸಭೆಯಲ್ಲಿ ಕೃಷ್ಣಾರ್ಜುನರು ಹಿಂದಿನಿಂದಲೂ ಎಷ್ಟು ಪ್ರಭಾವವಂತ ರಾಗಿದ್ದರೆಂಬುದನ್ನು ವರ್ಣನೆಮಾಡಿ ಹೇಳಿರುವನು. 'ಕೃಷ್ಣಾರ್ಜುನರು ಅವಧ್ಯರು' ಎಂಬುದಾಗಿ ಮಹೀಕ್ಷಿತರ ಸನ್ನಿಧಿಯಲ್ಲಿ ದ್ರೋಣ- ಭೀಷ್ಮರು ಪದೇ-ಪದೇ ಹೇಳುತ್ತಿದ್ದುದನ್ನು ನೀನೂ ಕೇಳಿರುವೆ. ಧನಂಜಯನು ಯಾವ-ಯಾವ ಕಾರಣದಿಂದ ಎಷ್ಟೆಷ್ಟು ವಿಧದಲ್ಲಿ ನಿನಗಿಂತಲೂ ಅಧಿಕನಾಗಿರುವ ನೆಂಬುದನ್ನು ನಾನು ನಿನಗೆ ಹೇಳುತ್ತಿದ್ದೇನೆ. ಸರ್ವಪ್ರಾಣಿಗಳಿಗೂ ಬ್ರಾಹ್ಮಣನು ಅಧಿಕನಾಗಿರುವಂತೆ–ಅರ್ಜುನನು ನಿನಗಿಂತಲೂ ಶ್ರೇಷ್ಠನು. ಸರ್ವಶ್ರೇಷ್ಠ ವಾದ ರಥದಲ್ಲಿ ಕುಳಿತಿರುವ ವಸುದೇವನ ಮಗನಾದ ವಾಸುದೇವನನ್ನೂ ಕುಂತಿಯ ಮಗನಾದ ಪಾರ್ಥನನ್ನೂ ಈಗಲೇ ನೀನು ಕಾಣುವೆ.

**ಯಥಾಶ್ರಯತ ಚಕ್ರಾಙ್ಗಂ ವಾಯಸೋ ಬುದ್ಧಿಮಾಸ್ಥಿತಃ ।**
**ತಥಾಶ್ರಯಸ್ವ ವಾರ್ಷ್ಣೇಯಂ ಪಾಣ್ಡವಂ ಚ ಧನಂಜಯಮ್ ॥**

ಸುಬುದ್ಧಿಯನ್ನು ಆಶ್ರಯಿಸಿದ (ಬುದ್ಧಿಯು ಬಂದನಂತರ) ಕಾಗೆಯು ರಾಜಹಂಸವನ್ನು ಯಾವ ರೀತಿಯಲ್ಲಿ ಆಶ್ರಯಿಸಿತೋ–ಹಾಗೆಯೇ ನೀನೂ ಸಹ ನನ್ನ ಹಿತವಚನದಂತೆ ಶ್ರೀಕೃಷ್ಣನನ್ನೂ ಮತ್ತು ಧನಂಜಯನನ್ನೂ ಆಶ್ರಯಿಸು. (ಅವರಿಗೆ ಶರಣಾಗತನಾಗು.)

ನೀನು ರಣರಂಗದಲ್ಲಿ, ಒಂದೇ ರಥದಲ್ಲಿ ಕುಳಿತಿರುವ ಮಹಾಪರಾಕ್ರಮಿಗಳಾದ ವಾಸುದೇವ-ಧನಂಜಯರನ್ನು ನೋಡಿದನಂತರ ಇಂತಹ ಮಾತುಗಳನ್ನಾಡುವುದಿಲ್ಲ. ಪಾರ್ಥನು ನೂರಾರು ಬಾಣಗಳಿಂದ ನಿನ್ನ ದರ್ಪವನ್ನು ಅಡಗಿಸಿದಾಗ ನಿನಗೂ ಮತ್ತು ಅರ್ಜುನನಿಗೂ ಅಂತರವು ಎಷ್ಟಿದೆಯೆಂಬುದನ್ನು ಕಂಡುಕೊಳ್ಳುವೆ. ಮಿಣುಕುಹುಳುಗಳು ಸೂರ್ಯ-ಚಂದ್ರರನ್ನು ತಿರಸ್ಕರಿಸುವಂತೆ, ದೇವಾಸುರ-ಮನುಷ್ಯರಲ್ಲಿ ಸುವಿಖ್ಯಾತರಾದ ಕೃಷ್ಣಾರ್ಜುನರನ್ನು ಕೇವಲ ಮೂರ್ಖತ್ವದ ಕಾರಣದಿಂದ ಅವಮಾನ ಗೊಳಿಸಬೇಡ. ಕೃಷ್ಣಾರ್ಜುನರು ಪ್ರಕಾಶದಲ್ಲಿ ಸೂರ್ಯ-ಚಂದ್ರರಿಗೆ ಸಮಾನರಾದವರೆಂದು ವಿಖ್ಯಾತರಾಗಿದ್ದಾರೆ. ಆದರೆ ನೀನು ಮಾತ್ರ

ಮನುಷ್ಯರ ಸಮೂಹದಲ್ಲಿ ಮಿಣುಕುಹುಳುವಿನಂತಿರುವೆ. ಸೂತಪುತ್ರ! ನೀನು ಮಹಾತ್ಮರಾದ, ಪುರುಷಶ್ರೇಷ್ಠರಾದ ಅಚ್ಯುತಾರ್ಜುನರು ಅದ್ಭುತಪರಾಕ್ರಮಿಗಳೂ ಅಮಿತತೇಜಸ್ವಿಗಳೂ ಆಗಿರುವರೆಂಬುದನ್ನು ಮನಗಂಡು ಅವರನ್ನು ಮಾತಿನಿಂದಾದರೂ ಅವಮಾನಗೊಳಿಸಬೇಡ. ಆತ್ಮಶ್ಲಾಘಾರೂಪವಾದ ಮಾತುಗಳನ್ನು ಸಾಕುಮಾಡು. ತೆಪ್ಪಗೆ ಕುಳಿತಿರು."

ಳ೧೧ನೆಯ ಅಧ್ಯಾಯವು ಮುಗಿಯಿತು.



## ಕೃಷ್ಣಾರ್ಜುನರು ಪ್ರಭಾವಶಾಲಿಗಳೆಂಬುದನ್ನು ಕರ್ಣನು ಒಪ್ಪಿದುದು: ಅಭಿಮಾನಪೂರ್ವಕವಾಗಿ ಶಲ್ಯನನ್ನು ನಿಂದಿಸಿದುದು: ಪರಶುರಾಮನಿಂದಲೂ ಮತ್ತು ಬ್ರಾಹ್ಮಣನಿಂದಲೂ ತನಗೆ ಪ್ರಾಪ್ತವಾದ ಶಾಪವನ್ನು ಶಲ್ಯನಿಗೆ ಹೇಳಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಮದ್ರರಾಜನಾದ ಶಲ್ಯನ ಅಪ್ರಿಯವಾದ ಮಾತುಗಳನ್ನು ಕೇಳಿ ಅಧಿರಥನ ಮಗನಾದ, ಮನಸ್ವಿಯಾದ, ಯುದ್ಧದಲ್ಲಿ ಯಾವಾಗಲೂ ಹಿಮ್ಮೆಟ್ಟದಿರುವ ಕರ್ಣನು ಶಲ್ಯನೊಡನೆ ಹೇಳಿದನು:

"ಶಲ್ಯ! ಅರ್ಜುನ-ವಾಸುದೇವರು ಎಂತಹವರೆಂಬುದು ನನಗೂ ತಿಳಿದಿದೆ. ಅರ್ಜುನನ ರಥವನ್ನು ನಡೆಸುವ ಶ್ರೀಕೃಷ್ಣನಲ್ಲಿರುವ ಬಲವನ್ನೂ ಮತ್ತು ಅರ್ಜುನನಲ್ಲಿರುವ ಮಹಾಸ್ತ್ರಗಳನ್ನೂ ನಾನು ಯಥಾವತ್ತಾಗಿ ತಿಳಿದಿರುತ್ತೇನೆ. ನಿನಗದು ಪರೋಕ್ಷವಾದುದು. ಶ್ರೀಕೃಷ್ಣನ ಬಲದ ಪರಿಚಯವಾಗಲೀ, ಅರ್ಜುನನಲ್ಲಿರುವ ಮಹಾಸ್ತ್ರಗಳ ಪರಿಚಯವಾಗಲೀ ನನಗಿರುವಷ್ಟು ನಿನಗಿರಲು ಸಾಧ್ಯವಿಲ್ಲ. ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ಕೃಷ್ಣಾರ್ಜುನರನ್ನು ನಾನು ಸ್ವಲ್ಪವಾದರೂ ಭಯವಿಲ್ಲದೇ ಯುದ್ಧದಲ್ಲಿ ಎದುರಿಸುತ್ತೇನೆ. ಆದರೆ ನನ್ನ ಗುರುವಾದ ಪರಶುರಾಮನ ಮತ್ತು ಬ್ರಾಹ್ಮಣಶ್ರೇಷ್ಠನ ಶಾಪಗಳು ಈ ಸಮಯದಲ್ಲಿ ನನ್ನನ್ನು ಬಹಳವಾಗಿ ಪರಿತಾಪಗೊಳಿಸುತ್ತಿವೆ.

ಹಿಂದೆ ನಾನು ಪರಶುರಾಮನಿಂದ ದಿವ್ಯಾಸ್ತ್ರಗಳನ್ನು ಪಡೆದುಕೊಳ್ಳುವಸಲುವಾಗಿ ಬ್ರಾಹ್ಮಣನ ವೇಷದಿಂದ ನನ್ನ ಗುರುವಿನ ಬಳಿಯಲ್ಲಿ ವಾಸಮಾಡುತ್ತಿದ್ದೆನು.

ಅಲ್ಲಿಯೂ ಸಹ ಅರ್ಜುನನ ಹಿತಾರ್ಥಿಯಾದ ಇಂದ್ರನಿಂದಲೇ ನನಗೆ ವಿಘ್ನವುಂಟಾಯಿತು. ಒಂದು ದಿನ ನನ್ನ ಗುರುವು ನನ್ನ ತೊಡೆಯಮೇಲೆ ತಲೆಯಿಟ್ಟು ಮಲಗಿದ್ದನು. ಆ ಸಮಯದಲ್ಲಿ ಇಂದ್ರನು ಭಯಂಕರವಾದ ಕೀಟದ ಶರೀರವನ್ನು ಪ್ರವೇಶಿಸಿ ನನ್ನ ಬಳಿಗೆ ಬಂದು ತೊಡೆಯನ್ನು ಕೊರೆಯಲು ತೊಡಗಿದನು. ಹೀಗವನು ನನ್ನ ತೊಡೆಯನ್ನು ಕೊರೆದುದರ ಪರಿಣಾಮವಾಗಿ ನನ್ನ ಅಸ್ತ್ರಪ್ರಾಪ್ತಿಗೆ ದೊಡ್ಡದೊಂದು ವಿಘ್ನವೊದಗಿತು. ಕೀಟರೂಪದಲ್ಲಿದ್ದ ಇಂದ್ರನು ನನ್ನ ತೊಡೆಯನ್ನು ಕೊರೆಯುತ್ತಿದ್ದುದರಿಂದ ಗಾಯವಾದ ಆ ಸ್ಥಳದಿಂದ ರಕ್ತಪ್ರವಾಹವೇ ಹೊರಟಿತು. ತೀವ್ರವಾದ ವೇದನೆಯಾಗುತ್ತಿದ್ದರೂ ಗುರುವಿಗೆ ಎಚ್ಚರವಾಗಿಬಿಡಬಹುದೆಂಬ ಭಯದಿಂದ ನಾನು ಸ್ವಲ್ಪವಾದರೂ ಕದಲಲೇ ಇಲ್ಲ. ಅನಂತರ ಎಚ್ಚರಗೊಂಡ ಪರಶುರಾಮನು ಆ ದೃಶ್ಯವನ್ನು ನೋಡಿದನು. ಅಂತಹ ವೇದನೆಯಲ್ಲಿಯೂ ಸ್ವಲ್ಪವಾದರೂ ವಿಚಲಿತನಾಗದೇ ಧೈರ್ಯದಿಂದ ಕುಳಿತಿರುವುದನ್ನು ಗಮನಿಸಿದ ನನ್ನ ಗುರುವು ನಾನು ಬ್ರಾಹ್ಮಣನಲ್ಲವೆಂಬುದನ್ನು ನಿಶ್ಚಯಿಸಿಬಿಟ್ಟನು. **'ನ ತ್ವಂ ವಿಪ್ರಃ ಕೋಽಸಿ ಸತ್ಯಂ ವದ'** "ನೀನಂತೂ ಬ್ರಾಹ್ಮಣನಲ್ಲ (ಶಾರೀರಿಕ ಬಾಧೆಯನ್ನು ಸಹಿಸಲು ಬ್ರಾಹ್ಮಣನಿಗೆ ಇಷ್ಟು ಸ್ಥೈರಣೆಯಾಗಲೀ-ಧೈರ್ಯವಾಗಲೀ ಇರಲು ಸಾಧ್ಯವಿಲ್ಲ.) ನೀನು ಯಾರೆಂಬುದನ್ನು ನಿಜವಾಗಿ ಹೇಳು"–ಎಂದು ಪ್ರಶ್ನಿಸಿದನು.

ಆ ಸಮಯದಲ್ಲಿ ಪರಶುರಾಮನಿಗೆ ನಾನು ಸೂತಜಾತಿಯವನೆಂಬುದನ್ನು ಯಥಾವತ್ತಾಗಿಯೇ ಹೇಳಿಬಿಟ್ಟೆನು. ನನ್ನ ವೃತ್ತಾಂತವನ್ನು ಕೇಳಿದ ಮಹಾತಪಸ್ವಿಯಾದ ಪರಶುರಾಮನು ರೋಷಪೂರ್ಣವಾದ ಬುದ್ಧಿಯಿಂದ ಕೂಡಿದವನಾಗಿ ನನ್ನನ್ನು ಶಪಿಸಿಬಿಟ್ಟನು:

**ಸೂತೋಪಧಾವಾಪ್ತಮಿದಂ ತವಾಸ್ತ್ರಂ**
**ನ ಕರ್ಮಕಾಲೇ ಪ್ರತಿಭಾಸ್ಯತಿ ತ್ವಾಮ್ ॥೮॥**

"ಸೂತ! ವಂಚನೆಯಿಂದ ಪಡೆದುಕೊಂಡಿರುವ ಈ ಬ್ರಹ್ಮಾಸ್ತ್ರವು

ಸ್ವಪ್ರತಿಜ್ಞಾರಕ್ಷಣಕಾಲದಲ್ಲಿಯೂ ಮೃತ್ಯುಕಾಲದಲ್ಲಿಯೂ ನಿನ್ನ ಸ್ಮರಣೆಗೆ ಬರುವುದಿಲ್ಲ. ಬೇರೆಯ ಕಾಲಗಳಲ್ಲಿ ಈ ಮಹಾಸ್ತ್ರವು ನಿನಗೆ ಪ್ರಯೋಜನಕಾರಿಯಾಗುತ್ತದೆ. ಏಕೆಂದರೆ: ಅಬ್ರಾಹ್ಮಣೇ ಬ್ರಹ್ಮ ನ ಹಿ ಧ್ರುವಂ ಸ್ಯಾತ್-ಅಬ್ರಾಹ್ಮಣನಲ್ಲಿ ಬ್ರಹ್ಮಾಸ್ತ್ರವು ಶಾಶ್ವತವಾಗಿರುವುದಿಲ್ಲ.” ಹೀಗೆಂದು ಪರಶುರಾಮನು ಶಾಪವಿತ್ತನು. ನಿಶ್ಚಯವಾಗಿಯೂ ಭಯಂಕರವಾದ ಮತ್ತು ಅತಿಘೋರವಾದ ಈ ಯುದ್ಧಸಮಯದಲ್ಲಿ ಆ ಮಹಾಸ್ತ್ರವು ನನ್ನ ಸ್ಮರಣೆಯಲ್ಲಿಲ್ಲ.*

ಮದ್ರೇಶ! ವೀರರನ್ನು ಆಕರ್ಷಿಸುವ, ಸರ್ವವಿನಾಶಕವಾದ, ಭರತ ವಂಶೀಯರಲ್ಲಿ ಸಂಭವಿಸಿರುವ ಬಹುಭಯಂಕರವಾದ ಈ ಮಹಾ ಸಂಗ್ರಾಮವು ಕ್ಷತ್ರಿಯಜಾತಿಯಲ್ಲಿ ಪ್ರಧಾನಭೂತರಾದ ವೀರರನ್ನು ಸಂತಾಪ ಗೊಳಿಸುತ್ತದೆ. ಇದರಿಂದ ಪ್ರಜಾನಾಶವೂ ಬಹಳವಾಗಿ ಆಗುತ್ತದೆಂದು ನನ್ನ ಅಭಿಪ್ರಾಯವಾಗಿದೆ. ಶಲ್ಯ! ಉಗ್ರವಾದ ಧನುಸ್ಸನ್ನು ಹೊಂದಿರುವ, ಸರ್ವಶ್ರೇಷ್ಠನಾದ, ವೇಗವಂತನಾದ, ಭಯಂಕರನಾದ, ಶತ್ರುಗಳಿಂದ ಸಹಿಸಿಕೊಳ್ಳಲು ಅಸಾಧ್ಯವಾದಷ್ಟು ಪರಾಕ್ರಮವನ್ನು ಹೊಂದಿರುವ, ಸತ್ಯ ಪ್ರತಿಜ್ಞನಾದ, ಪಾಂಡುವಿನ ಮಗನಾದ ಧನಂಜಯನನ್ನು ನಾನು ಇಂದಿನ ಯುದ್ಧದಲ್ಲಿ ಮೃತ್ಯುವಿನ ಬಾಯಿಗೆ ಕಳುಹಿಸುತ್ತೇನೆ. ಪರಶುರಾಮದತ್ತವಾದ ಬ್ರಹ್ಮಾಸ್ತ್ರವಲ್ಲದೇ ಮತ್ತೊಂದು ಅಸ್ತ್ರವೂ ನನ್ನಲ್ಲಿದೆ. ಆ ಮಹಾಸ್ತ್ರದಿಂದ ನಾನಿಂದು ಶತ್ರುಗಳ ಸಮೂಹವನ್ನು ಧ್ವಂಸಮಾಡಿಬಿಡುತ್ತೇನೆ. ಆ ಮಹಾಸ್ತ್ರ ದಿಂದಲೇ ಪ್ರತಾಪಿಯಾದ ಮಹಾ ಬಲಿಷ್ಠನಾದ, ಅಸ್ತ್ರವಿದ್ಯಾವಿಶಾರದನಾದ, ಉಗ್ರಧನ್ವನಾದ, ಅಪಾರವಾದ ತೇಜಸ್ಸಿನಿಂದ ಕೂಡಿರುವ ಧನಂಜಯನನ್ನು ಇಂದಿನ ಯುದ್ಧದಲ್ಲಿ ಸಂಹರಿಸುತ್ತೇನೆ. ನೀರಿಗೆ ಒಡೆಯನಾದ, ವೇಗವಂತ ನಾದ, ಅಪ್ರಮೇಯನಾದ ಸಮುದ್ರನು ಪ್ರಜಾಕೋಟಿಯನ್ನು ಮುಳುಗಿಸಿ ಬಿಡಲು ತನ್ನ ಮಹಾವೇಗವನ್ನೇ ಅಲೆಗಳ ಮೂಲಕವಾಗಿ ಪ್ರಕಟಿಸುತ್ತಾನೆ.

---

*ಇಲ್ಲಿ ಬಂದಿರುವ ಪರ್ಯಾಪ್ತಂ ಎಂಬ ಶಬ್ದಕ್ಕೆ ವ್ಯಾಖ್ಯಾನಕಾರರು ಸಮಾಪ್ತಂ=ವಿಸ್ಮೃತಂ ಎಂದು ಅರ್ಥಮಾಡಿರುತ್ತಾರೆ.

ಆದರೆ ಅಪ್ರಮೇಯನಾದ, ಮಹಾವೇಗವಂತನಾದ, ಸಮುದ್ರನನ್ನೂ ತೀರಪ್ರದೇಶವೇ ಧಾರಣೆಮಾಡುತ್ತದೆ. (ಮುನ್ನುಗ್ಗಿ ಹೋಗದಂತೆ ತಡೆದು ನಿಲ್ಲಿಸುತ್ತದೆ.)

ಮರ್ಮಸ್ಥಳಗಳನ್ನು ಭೇದಿಸುವ, ವೀರರ ಪ್ರಾಣಗಳನ್ನು ಅಪಹರಿಸುವ, ಸುಂದರವಾದ ರೆಕ್ಕೆಗಳಿಂದ ಕೂಡಿರುವ ಅಪರಿಮಿತವಾದ ಬಾಣಗಳ ಸಮೂಹಗಳನ್ನು ಪುಂಖಾನುಪುಂಖವಾಗಿ ಬಿಡುತ್ತಿರುವ, ಮೌರ್ವಿಯನ್ನು ಸೆಳೆದುಬಿಡುವವರಲ್ಲಿ ಜಗತ್ತಿನಲ್ಲಿಯೇ ಅತ್ಯಂತಶ್ರೇಷ್ಠನಾದವನೆಂದು ವಿಖ್ಯಾತ ನಾಗಿರುವ ಕುಂತಿಯ ಮಗನಾದ ಅರ್ಜುನನೊಡನೆ ರಣರಂಗದಲ್ಲಿ ನಾನಿಂದು ಯುದ್ಧಮಾಡುತ್ತೇನೆ. ಅತಿಬಲನಾದ, ಮಹಾಸ್ತ್ರಗಳನ್ನು ಹೊಂದಿರುವ, ಸಮುದ್ರನಂತೆ ದುರ್ಲಂಘನೀಯನಾದ, ಭಯಂಕರನಾದ, ಬಾಣಗಳ ಸಮೂಹಗಳನ್ನೇ ಶತ್ರುಗಳ ಮೇಲೆ ಸುರಿಸುವ, ಶತ್ರುಪಕ್ಷದ ಅನೇಕರಾಜರನ್ನು ಯುದ್ಧಸಾಗರದಲ್ಲಿ ಮುಳುಗಿಸುವ ಪಾರ್ಥನನ್ನು ಸಮುದ್ರನನ್ನು ತೀರಪ್ರದೇಶವು ತಡೆದು ನಿಲ್ಲಿಸುವಂತೆ–ಬಾಣಗಳಿಂದ ಬಲಪೂರ್ವಕವಾಗಿ ತಡೆಯುತ್ತೇನೆ ಮತ್ತು ಅವನ ವೇಗವನ್ನೂ ಸಹಿಸಿಕೊಳ್ಳುತ್ತೇನೆ.

ಶಲ್ಯ! ಯುದ್ಧದಲ್ಲಿ ಅರ್ಜುನನಿಗೆ ಸಮನಾಗಿ ಯುದ್ಧಮಾಡುವ ಮತ್ತು ಅವನಂತೆ ಧನುಸ್ಸನ್ನು ಹಿಡಿಯುವ ಬೇರೊಬ್ಬ ಮನುಷ್ಯನಿರುವುದನ್ನು ನಾನು ತಿಳಿದಿಲ್ಲ. ಯುದ್ಧದಲ್ಲಿ ಸುರಾಸುರರನ್ನೂ ಜಯಿಸಬಲ್ಲವನವನು. ಅಂತಹ ವನೊಡನೆ ನಾನಿಂದು ಸುಘೋರವಾಗಿ ಯುದ್ಧಮಾಡುವುದನ್ನಾದರೂ ನೋಡು. ಅತ್ಯಂತಮಾನಿಯಾದ ಪಾಂಡುಪುತ್ರನು ನನ್ನೊಡನೆ ಯುದ್ಧ ಮಾಡುವ ಇಚ್ಛೆಯಿಂದ ದಿವ್ಯಾಸ್ತ್ರಗಳೊಡನೆ ನನ್ನ ಮುಂದೆ ಬರುತ್ತಾನೆ. ಯುದ್ಧದಲ್ಲಿ ನಾನು, ಅವನು ಬಿಡುವ ಅಸ್ತ್ರಗಳನ್ನು ಅಸ್ತ್ರಗಳಿಂದಲೇ ನಿರಸನ ಗೊಳಿಸಿ, ಶ್ರೇಷ್ಠವಾದ ಬಾಣಗಳಿಂದ ಅವನನ್ನು ಕೆಳಕ್ಕೆ ಬೀಳಿಸುತ್ತೇನೆ. ಸಹಸ್ರರಶ್ಮಿಯಾದ ಸೂರ್ಯನಂತೆಯೇ ಪ್ರಕಾಶಮಾನನಾಗಿರುವ, ಎಲ್ಲ ದಿಕ್ಕುಗಳನ್ನೂ ಬಾಣಗಳೆಂಬ ಕಿರಣಗಳಿಂದ ಪರಿತಾಪಗೊಳಿಸುವ, ಉಗ್ರನಾದ ಧನಂಜಯನನ್ನು–ಸೂರ್ಯನನ್ನು ಮೇಘಗಳು ಮುಚ್ಚಿಬಿಡುವಂತೆ–ಬಾಣ ಗಳಿಂದ ಮುಚ್ಚಿಬಿಡುತ್ತೇನೆ. ಜಗತ್ತನ್ನೇ ಭಸ್ಮಮಾಡುತ್ತಿರುವ, ತೇಜಸ್ವಿಯಾದ,

ಪ್ರಜ್ವಲಿಸುತ್ತಿರುವ ಧೂಮಶಿಖಿನಾದ ಸಂವರ್ತಕಾಗ್ನಿಯನ್ನು ಪ್ರಳಯಕಾಲದ ಮೇಘವು ಜಲಧಾರೆಗಳಿಂದ ಉಪಶಮನಗೊಳಿಸುವಂತೆ–ನಾನೂ ಸಹ ಮೇಘಭೂತನಾಗಿ ಬಾಣಗಳೆಂಬ ಮಳೆಯಿಂದ ಅಗ್ನಿರೂಪನಾದ ಪಾರ್ಥ ನನ್ನು ಉಪಶಮನಗೊಳಿಸುತ್ತೇನೆ. ಸುತೀಕ್ಷ್ಣವಾದ ಹಲ್ಲುಗಳನ್ನು ಹೊಂದಿ ರುವ ಸರ್ಪಕ್ಕೆ ಸಮಾನನಾದ, ದುರ್ಧರ್ಷನಾದ, ಅಪ್ರಮೇಯನಾದ, ಅಗ್ನಿಯಂತೆ ಪ್ರಭಾವಶಾಲಿಯಾದ, ಕ್ರೋಧದಿಂದ ಪ್ರಜ್ವಲಿಸುತ್ತಿರುವ ಮಹಾಶತ್ರುವಾದ ಅರ್ಜುನನನ್ನು ಭಲ್ಲಗಳಿಂದ ಶಾಂತಗೊಳಿಸುತ್ತೇನೆ. ವೃಕ್ಷಗಳನ್ನು ಮೂಲೋತ್ಪಾಟನಮಾಡುವ, ಉಗ್ರವಾದ ಚಂಡಮಾರುತದ ವೇಗವನ್ನು ಹಿಮವತ್ಪರ್ವತವು ಸಹಿಸಿಕೊಳ್ಳುವಂತೆ–ಶತ್ರುಸೈನ್ಯದಲ್ಲಿ ಕ್ಷೋಭೆ ಯನ್ನುಂಟುಮಾಡುವ, ಮಹಾಬಲಿಷ್ಠನಾದ, ಪ್ರಹಾರಕುಶಲನಾದ, ಅಸಹನ ಶೀಲನಾದ, ಕ್ರುದ್ಧನಾದ ಮತ್ತು ಉಗ್ರನಾದ ಅರ್ಜುನನನ್ನು ಯುದ್ಧದಲ್ಲಿ ನಾನು ಅಚಲನಾಗಿ ಎದುರಿಸುತ್ತೇನೆ.

ರಥಮಾರ್ಗಗಳ ಸಂಚಾರದಲ್ಲಿ ಕುಶಲನಾದ, ಶಕ್ತಿಶಾಲಿಯಾದ, ಸಮರಾಂಗಣದಲ್ಲಿ ಅನುದಿನವೂ ಯುದ್ಧದ ಹೊಣೆಯನ್ನು ಹೊತ್ತಿರುವ, ಶ್ರೇಷ್ಠವೀರನಾದ, ಲೋಕದಲ್ಲಿರುವ ಎಲ್ಲ ಧನುರ್ಧಾರಿಗಳಲ್ಲಿಯೂ ಶ್ರೇಷ್ಠ ನಾದ ಧನಂಜಯನನ್ನು ನಾನಿಂದು ಯುದ್ಧದಲ್ಲಿ ಸಂಧಿಸುತ್ತೇನೆ. ಯುದ್ಧದಲ್ಲಿ ಅರ್ಜುನನಿಗೆ ಸಮಾನನಾಗಿ ಯುದ್ಧಮಾಡುವ, ಅವನಂತೆ ಧನುಸ್ಸನ್ನು ಹಿಡಿಯುವ ಬೇರೊಬ್ಬ ಮನುಷ್ಯನಿರುವುದನ್ನೂ ನಾನು ತಿಳಿದಿಲ್ಲ. ಈ ಸಕಲಭೂಮಂಡಲವನ್ನೂ ಯಾವನು ಜಯಿಸಿರುವನೋ ಅವನೊಡನೆ ಸೇರಿ ನಾನಿಂದು ಘೋರವಾಗಿ ಯುದ್ಧಮಾಡುತ್ತೇನೆ. ಖಾಂಡವಪ್ರಸ್ಥದಲ್ಲಿ ದೇವತೆ ಗಳೂ ಸೇರಿದಂತೆ ಸರ್ವಪ್ರಾಣಿಗಳನ್ನೂ ಜಯಿಸಿದ ಸವ್ಯಸಾಚಿಯಾದ ಅರ್ಜುನನೊಡನೆ ನನ್ನೊಬ್ಬನನ್ನು ಬಿಟ್ಟು, ಜೀವಿತವನ್ನು ರಕ್ಷಿಸಿಕೊಳ್ಳಬೇಕೆಂದು ಇಚ್ಛೆಪಡುವ ಯಾವ ಮನುಷ್ಯನು ತಾನೇ ಯುದ್ಧಮಾಡಲು ಇಚ್ಛಿಸುತ್ತಾನೆ? ಶ್ವೇತವಾಹನನಾದ ಅರ್ಜುನನು ಮಹಾಮಾನಿಯು; ಅಸ್ತ್ರವಿದ್ಯಾವಿಶಾರದನು; ಸಿದ್ಧಹಸ್ತನು; ಅನೇಕದಿವ್ಯಾಸ್ತ್ರಗಳನ್ನು ತಿಳಿದವನು; ಶತ್ರುಗಳನ್ನು ಮಥಿಸುವ

ಸಾಮರ್ಥ್ಯವುಳ್ಳವನು. ಅಂತಹ ಅತಿರಥನಾದ ಅರ್ಜುನನ ಶಿರಸ್ಸನ್ನು ನಿಶಿತವಾದ ಬಾಣಗಳ ಮೂಲಕ ದೇಹದಿಂದ ಹಾರಿಸಿಬಿಡುತ್ತೇನೆ. ಶಲ್ಯ! ನಾನು ರಣಾಂಗಣದಲ್ಲಿ ಮೃತ್ಯುವನ್ನು ಅಥವಾ ವಿಜಯವನ್ನು ಮುಂದೆ ಮಾಡಿಕೊಂಡು ಧನಂಜಯನೊಡನೆ ಯುದ್ಧಮಾಡುತ್ತೇನೆ. ಇಂದ್ರಸದೃಶ ನಾದ ಅರ್ಜುನನೊಡನೆ ರಥೈಕಸಹಾಯಕನಾಗಿ ನಾನೊಬ್ಬನಲ್ಲದೆ ಬೇರೆ ಯಾವ ಮನುಷ್ಯನು ತಾನೇ ಯುದ್ಧಮಾಡುತ್ತಾನೆ?

ಶಲ್ಯ! (ನಾನು ಸಂಕುಚಿತವಾದ ಸ್ವಭಾವದವನಲ್ಲ. ಗುಣಪಕ್ಷಪಾತಿ) ಯುದ್ಧಸ್ಥಳದಲ್ಲಿ ಕ್ಷತ್ರಿಯರ ಸಭೆಯಲ್ಲಿ ಪಾಂಡವನ ಪೌರುಷವನ್ನು ಪರಮಹೃಷ್ಟನಾಗಿ ವರ್ಣಿಸುತ್ತೇನೆ. ಆದರೆ ನಿನ್ನ ಮನಸ್ಸಿನಲ್ಲಿ ಮೌಢ್ಯವು ತುಂಬಿಕೊಂಡುಬಿಟ್ಟಿದೆ. ನೀನು ಮಹಾಮೂರ್ಖನು. ಅರ್ಜುನನ ಪೌರುಷ ಗಳೆಲ್ಲವನ್ನೂ ನೀನು ನನಗೇಕೆ ಹೇಳುವೆ? ನನಗೆ ಅವನ ಗುಣಗಳೆಲ್ಲವೂ ಸಂಪೂರ್ಣವಾಗಿ ಗೊತ್ತಿದೆ. (ನನಗೆ ತಿಳಿದಿರುವುದಕ್ಕಿಂತಲೂ ಹೆಚ್ಚಾಗಿ ನಿನಗೇನೂ ತಿಳಿಯದು. ನೀನು ಅವನ ಗುಣಗಳನ್ನು ನನ್ನ ಮುಂದೆ ವರ್ಣಿಸುವ ಕಾರಣವೂ ಇಲ್ಲ.)

ಅಪ್ರಿಯನೂ, ನಿಷ್ಠುರನೂ, ಕ್ಷುದ್ರಹೃದಯನೂ ಮತ್ತು ಕ್ಷಮಾ ಶೂನ್ಯನೂ ಆದ ಮನುಷ್ಯನು ಕ್ಷಮಾಶೀಲನಾದ ಪುರುಷನನ್ನು ನಿಂದಿಸಿದರೆ- ಅಂತಹ ನೂರು ಜನರನ್ನಾದರೂ ಸಂಹರಿಸಿಬಿಡುತ್ತೇನೆ. ಆದರೆ ಕಾಲವಶ ದಿಂದ ನಿನ್ನನ್ನು ನಾನು ಕ್ಷಮಿಸುತ್ತಿದ್ದೇನೆ.

ಪಾಪಕರ್ಮಿಯೇ! ಅರ್ಜುನನ ಸಲುವಾಗಿ ನೀನು ಮೂಢನಂತೆ ನನ್ನನ್ನು ಭಯಗೊಳಿಸುತ್ತಾ ಅಪ್ರಿಯವಾದ ಮಾತುಗಳನ್ನಾಡಿರುವೆ. ನನ್ನೊಡನೆ ನೀನು ಸರಳತೆಯಿಂದ ವ್ಯವಹರಿಸುವುದು ಯುಕ್ತವಾಗಿದ್ದಿತು. ಆದರೆ ನೀನು ಕುಟಿಲಬುದ್ಧಿಯವನು. ಆದುದರಿಂದಲೇ ನೀನು ಹಾಳಾಗಿಹೋಗುವೆ. **ಸಾಪ್ತಪದಂ ಹಿ ಮೈತ್ರಂ**—ಏಳು ಹೆಜ್ಜೆಗಳು ಜೊತೆಯಲ್ಲಿ ನಡೆದರೆ ಪರಸ್ಪರ ಮೈತ್ರಿಯು ಬೆಳೆಯುವುದೆಂದು ಹಿರಿಯರು ಹೇಳುತ್ತಾರೆ. ನಿನ್ನ ವಿಷಯದಲ್ಲಿ ಅದೂ ಸುಳ್ಳಾಗಿಹೋಯಿತು. ನೀನು ಮಹಾಮಿತ್ರದ್ರೋಹಿಯಾಗಿರುವೆ. ಶಲ್ಯ! ಈಗ ನಮ್ಮ ಮುಂದೆ ಅತಿದಾರುಣವಾದ ಕಾಲವು ಸನ್ನಿಹಿತವಾಗಿದೆ. ದುರ್ಯೋಧನನೂ ಯುದ್ಧಭೂಮಿಗೆ ಆಗಮಿಸಿದ್ದಾನೆ. ಅವನ ಮನೋರಥ

ವನ್ನು ಪೂರೈಸಿಕೊಡಬೇಕೆಂಬ ಆಶಯವು ನನ್ನದಾಗಿದೆ. ಆದರೆ ನಿನ್ನ ಮನಸ್ಸು ಮಾತ್ರ ಬೇರೆಯ ಕಡೆಗೆ ವಾಲಿದೆ. ನೀನು ನಮ್ಮ ಕಡೆಯಲ್ಲಿಯೇ ಇದ್ದರೂ ನಿನ್ನ ಸಖ್ಯವು ಮಾತ್ರ ನಮ್ಮ ಮೇಲಿರುವುದಿಲ್ಲ. (ಶತ್ರುಪಕ್ಷದವರಲ್ಲಿ ನಿನ್ನ ಸ್ನೇಹವಿದೆ. ನಮ್ಮ ಕಡೆಯಲ್ಲಿ ನಿನ್ನ ಶರೀರವಿದೆ.)

ಮಿತ್ರಂ ಮಿನ್ದೇರ್ನನ್ದತೇಃ ಪ್ರೀಯತೇರ್ವಾ
ಸಂತ್ರಾಯತೇರ್ಮಿನುತೇರ್ಮೋದತೇರ್ವಾ ।
ಬ್ರವೀಮಿ ತೇ ಸರ್ವಮಿದಂ ಮಮಾಸ್ತಿ
ತಚ್ಚಾಪಿ ಸರ್ವಂ ಮಮ ವೇತ್ತಿ ರಾಜಾ ॥೩೧॥

(ಮಿತ್ರ ಶಬ್ದದ ಅರ್ಥವಾದರೂ ನಿನಗೆ ತಿಳಿದಿರುವುದೇ? ಶಲ್ಯ! ಮಿತ್ರ ಶಬ್ದವು ಹೇಗೆ ಹುಟ್ಟಿತು? ಅದರ ನಾನಾರ್ಥಗಳೇನು?-ಎಂಬುದನ್ನು ವಿವರಿಸಿ ಹೇಳುವೆನು ಕೇಳು) *ಮಿದ, ನಂದ, ಪ್ರೀ, ತ್ರಾ, ಮಿ ಅಥವಾ ಮುದ್ ಧಾತುಗಳಿಂದ ನಿಪಾತನದ ಮೂಲಕ ಮಿತ್ರಶಬ್ದದ ಸಿದ್ಧಿಯಾಗುತ್ತದೆ. ನಾನು ಸತ್ಯವಾಗಿ ಹೇಳುತ್ತೇನೆ. ಈ ಎಲ್ಲ ಧಾತುಗಳ ಸಂಪೂರ್ಣಾರ್ಥವೂ ನನ್ನಲ್ಲಿದೆ. ದುರ್ಯೋಧನನೂ ಸಹ ನನ್ನಲ್ಲಿರುವ ಈ ಎಲ್ಲ ಧಾತುಗಳ ಅರ್ಥವನ್ನೂ ಚೆನ್ನಾಗಿ ತಿಳಿದಿರುತ್ತಾನೆ. (ಮಿದಿ-ಸ್ನೇಹನೇ–ಎಂಬ ಧಾತುವಿನಿಂದ ಮಿತ್ರಶಬ್ದವು ಹುಟ್ಟಿದೆ. ಮಿದಿ ಇತ್ಯಾದಿ ಧಾತುಗಳ ಅರ್ಥವು ನನಗೆ ಚೆನ್ನಾಗಿ ಗೊತ್ತಿದೆ. ಅದರಂತೆ ನಾನು ನಡೆದುಕೊಳ್ಳುತ್ತಿದ್ದೇನೆ. ಆದರೆ ನಿನಗೆ ಈ ಮಿತ್ರಶಬ್ದದ ಅರ್ಥವು ತಿಳಿಯದು. ಆದುದರಿಂದ ನೀನು ಅದರಂತೆ ನಡೆದುಕೊಳ್ಳುತ್ತಿಲ್ಲ. ಶತ್ರುಶಬ್ದದ ಅರ್ಥವು ನಿನಗೆ ತಿಳಿದಿರಬಹುದು.)

ಶತ್ರುಃ ಶದೇಃ ಶಾಸತೇರ್ವಾಶ್ಯತೇರ್ವಾ
ಶೃಣಾತೇರ್ವಾ ಶ್ವಸತೇಃ ಸೀದತೇರ್ವಾ ।
ಉಪಸರ್ಗಾದ್ಬಹುಧಾ ಸೂದತೇಶ್ಚ
ಪ್ರಾಯೇಣ ಸರ್ವಂ ತ್ವಯಿ ತಚ್ಚ ಮಹ್ಯಮ್ ॥೩೨॥

[1] ಶದ್, ಶಾಸ್, ಶೋ, ಶೃ, ಶ್ವಸ್, ಅಥವಾ ಷದ್ ಮತ್ತು ನಾನಾ

* ಮಿದಿ-ನಂದ ಮೊದಲಾದ ಧಾತುಗಳ ಅರ್ಥವು ಕ್ರಮವಾಗಿ ಹೀಗೆ ಆಗುತ್ತದೆ. ಸ್ನೇಹ, ಆನಂದ, ಪ್ರೀಣನ, ತ್ರಾಣ(ರಕ್ಷೆ), ಸಸ್ನೇಹದರ್ಶನ ಮತ್ತು ಆಮೋದ.

[1] ಶದ್. ಶಾಸ್ ಇವೇ ಮುಂತಾದ ಧಾತುಗಳ ಅರ್ಥವು ಕ್ರಮವಾಗಿ ಹೀಗೆ ಆಗುತ್ತದೆ.

ಪ್ರಕಾರವಾದ ಉಪಸರ್ಗಗಳಿಂದ ಯುಕ್ತವಾದ ಸೂದ್ ಧಾತುಗಳಿಂದ ಶತ್ರು ಶಬ್ದದ ಸಿದ್ಧಿಯಾಗುತ್ತದೆ. ನನ್ನ ವಿಷಯದಲ್ಲಿ ಈ ಎಲ್ಲ ಧಾತುಗಳ ತಾತ್ಪರ್ಯವನ್ನೂ ನೀನು ಪ್ರಾಯಶಃ ಪ್ರಯೋಗಿಸುತ್ತಿರುವೆ.

ದುರ್ಯೋಧನಾರ್ಥೇ ತವ ಚ ಪ್ರಿಯಾರ್ಥಂ
ಯಶೋಽರ್ಥಮಾತ್ಮಾರ್ಥಮಪೀಶ್ವರಾರ್ಥಮ್ ।
ತಸ್ಮಾದಹಂ ಪಾಣ್ಡವವಾಸುದೇವೌ
ಯೋತ್ಸ್ಯೇ ಯತ್ನಾತ್ಕರ್ಮ ತತ್ಪಶ್ಯ ಮೇಽದ್ಯ ॥೩೩॥

ಆದರೆ ನಾನು ದುರ್ಯೋಧನನ ಹಿತಾರ್ಥವಾಗಿಯೂ, ನಿನಗೆ ಪ್ರಿಯವನ್ನುಂಟುಮಾಡುವ ಸಲುವಾಗಿಯೂ, ಯಶಃಪ್ರಾಪ್ತಿಗಾಗಿಯೂ, ನನ್ನ ಆತ್ಮತೃಪ್ತಿಗಾಗಿಯೂ, ಈಶ್ವರಪ್ರೀತಿಗಾಗಿಯೂ ಪಾಂಡುಪುತ್ರನಾದ ಅರ್ಜುನ ನೊಡನೆಯೂ ಮತ್ತು ವಾಸುದೇವನೊಡನೆಯೂ ಪ್ರಯತ್ನಪೂರ್ವಕವಾಗಿ ಯುದ್ಧಮಾಡುತ್ತೇನೆ. ಇಂದು ನನ್ನ ಆ ಸಾಹಸಕರ್ಮವನ್ನಾದರೂ ನೀನು ನೋಡು.

ಶಲ್ಯ! ಇಂದು ನನ್ನಲ್ಲಿರುವ ಉತ್ತಮವಾದ ಬ್ರಹ್ಮಾಸ್ತ್ರಗಳನ್ನೂ, ದಿವ್ಯಾಸ್ತ್ರಗಳನ್ನೂ ಮತ್ತು ಮಾನವಾಸ್ತ್ರಗಳನ್ನೂ ನೋಡು. ಅತಿಯಾಗಿ ಮದಿಸಿದ ಆನೆಯು ಹೆಚ್ಚುಮದದಿಂದ ಕೂಡಿರುವ ಆನೆಯೊಡನೆ ಸೆಣೆ ಸಾಡುವಂತೆ–ಉಗ್ರವೀರ್ಯನಾದ ಅರ್ಜುನನೊಡನೆ ನಾನಿಂದು ಯುದ್ಧ ಮಾಡುತ್ತೇನೆ. ನಾನು ಯುದ್ಧದಲ್ಲಿ ಅಜೇಯವಾದ ಮತ್ತು ಅಮಿತವಾದ ಶಕ್ತಿಯಿಂದ ಕೂಡಿರುವ ಬ್ರಹ್ಮಾಸ್ತ್ರವನ್ನು ಮನಸ್ಸಿನಲ್ಲಿಯೇ ಸ್ಮರಿಸಿ ವಿಜಯ ಗಳಿಸುವ ಸಲುವಾಗಿ ಪಾರ್ಥನ ಮೇಲೆ ಪ್ರಯೋಗಿಸುತ್ತೇನೆ. ಆ ಸಮಯದಲ್ಲಿ ನನ್ನ ರಥದ ಚಕ್ರವು ಹಳ್ಳದಲ್ಲಿ ಬೀಳದೆಯೇ ಹೋದರೆ ನಾನು ಬಿಡುವ ಬ್ರಹ್ಮಾಸ್ತ್ರದಿಂದ ಅರ್ಜುನನು ಖಂಡಿತವಾಗಿಯೂ ಬಿಡುಗಡೆ ಹೊಂದುವುದಿಲ್ಲ. ಶಲ್ಯ! ದಂಡಪಾಣಿಯಾದ, ಸೂರ್ಯನ ಮಗನಾದ

---

ಶಾತನ (ಕತ್ತರಿಸುವುದು ಅಥವಾ ಭೇದನ ಮಾಡುವುದು), ಶಾಸನ, ತನೂಕರಣ (ಕ್ಷೀಣಿಸುವುದು) ಹಿಂಸಾ, ಅವಸಾದನ (ಶಿಥಿಲಗೊಳಿಸುವುದು), ನಿಷೂದನ (ವಧೆಮಾಡುವುದು).

ಯಮನಿಗಾಗಲೀ, ವಜ್ರಾಯುಧಪಾಣಿಯಾದ ಇಂದ್ರನಿಗಾಗಲೀ, ಅಥವಾ ಕೊಲ್ಲುವ ಸ್ವಭಾವವಿರುವ ಬೇರೆ ಯಾವ ಶತ್ರುವಿಗೇ ಆಗಲೀ ನಾನು ಭಯಪಡತಕ್ಕವನಲ್ಲ. ಈ ವಿಷಯವನ್ನು ನೀನು ಚೆನ್ನಾಗಿ ತಿಳಿದುಕೊ. ಆದುದರಿಂದ ನನಗೆ ಪಾರ್ಥನಿಂದಲೂ ಭಯವಿಲ್ಲ; ಜನಾರ್ದನನಿಂದಲೂ ಭಯವಿಲ್ಲ. ಆ ಇಬ್ಬರೊಡನೆಯೂ ಯುದ್ಧವು ರಣಕ್ಷೇತ್ರದಲ್ಲಿ ಅವಶ್ಯವಾಗಿ ನಡೆದೇ ತೀರುತ್ತದೆ.



ನರೇಶ್ವರ! ಹಿಂದೊಮ್ಮೆ ನಾನು ಅಸ್ತ್ರಾಭ್ಯಾಸದ ಸಲುವಾಗಿ ವಿಜಯ ಎಂಬ ಬ್ರಾಹ್ಮಣನ ಆಶ್ರಮದ ಹತ್ತಿರ ತಿರುಗಾಡುತ್ತಿದ್ದೆನು. ಆ ಸಮಯ ದಲ್ಲಿ ನಾನು ಭಯಂಕರವಾದ, ಘೋರರೂಪಿಗಳಾದ ಬಾಣಗಳನ್ನು

ಯಾವುದೋ ಲಕ್ಷ್ಯವನ್ನಿಟ್ಟುಕೊಂಡು ಪ್ರಯೋಗಿಸುತ್ತಿದ್ದಾಗ ಅಜ್ಞಾನದಿಂದ ಪ್ರಮತ್ತನಾಗಿ ಬ್ರಾಹ್ಮಣನ ಹೋಮಧೇನುವಿನ ಕರುವನ್ನು ಒಂದು ಬಾಣದಿಂದ ಸಂಹರಿಸಿಬಿಟ್ಟೆನು. ಬ್ರಾಹ್ಮಣನು ನಿರ್ಜನವಾದ ಪ್ರದೇಶದಲ್ಲಿ ಸಂಚರಿಸುತ್ತಿದ್ದ ನನ್ನನ್ನು ಸಂಧಿಸಿ ಈ ಮಾತುಗಳನ್ನು ಹೇಳಿದನು:

"ಕರ್ಣ! ಪ್ರಮತ್ತನಾದ ನೀನು ನನ್ನ ಹೋಮಧೇನುವಿನ ಕರುವನ್ನು ಸಂಹರಿಸಿದ ಕಾರಣದಿಂದ ರಣಾಂಗಣದಲ್ಲಿ ನೀನು ಯುದ್ಧಮಾಡುತ್ತಿರುವಾಗ ಬಹಳ ಭಯಂಕರಪರಿಸ್ಥಿತಿಯಲ್ಲಿ (ಇಕ್ಕಟ್ಟಿನ ಸನ್ನಿವೇಶದಲ್ಲಿ) ನಿನ್ನ ರಥಚಕ್ರವು ಹಳ್ಳದಲ್ಲಿ ಬೀಳಲಿ."

ಶಲ್ಯರಾಜ! ಬ್ರಾಹ್ಮಣನ ಆ ಶಾಪಕ್ಕೆ ನಾನು ಭಯಪಡುತ್ತಿದ್ದೇನೆ.

**ಏತೇ ಹಿ ಸೋಮರಾಜಾನ ಈಶ್ವರಾಃ ಸುಖದುಃಖಯೋಃ ॥೪೨॥**

ಚಂದ್ರನನ್ನೇ ರಾಜನನ್ನಾಗಿ ಪಡೆದಿರುವ ಬ್ರಾಹ್ಮಣರು ಶಾಪಾನುಗ್ರಹ ಗಳಿಂದ ಇತರರ ಸುಖ-ದುಃಖಗಳಿಗೆ ಈಶ್ವರಪ್ರಾಯರಾಗಿರುತ್ತಾರೆ. (ಶಾಪಾನುಗ್ರಹಸಮರ್ಥರಾಗಿದ್ದಾರೆ) ಮದ್ರಕೇಶ್ವರ! ಶಲ್ಯರಾಜ! ಆ ಬ್ರಾಹ್ಮಣನನ್ನು ಪ್ರಸನ್ನಗೊಳಿಸಲು ನಾನವನಿಗೆ ಸಾವಿರ ಗೋವುಗಳನ್ನೂ ಆರು ನೂರು ಎತ್ತುಗಳನ್ನೂ ದಾನವಾಗಿ ಕೊಟ್ಟೆನು. ಆದರೂ ನನಗೆ ಅವನನ್ನು ಪ್ರಸನ್ನಗೊಳಿಸಲು ಸಾಧ್ಯವಾಗಲಿಲ್ಲ. ಈಷಾದಂಡಕ್ಕೆ ಸಮಾನವಾದ ದಂತ ಗಳನ್ನು ಹೊಂದಿದ್ದ ಏಳು ನೂರು ಆನೆಗಳನ್ನು ದಾನಮಾಡಿದೆನು. ನೂರು-ನೂರು ದಾಸ-ದಾಸಿಯರನ್ನೂ ಬ್ರಾಹ್ಮಣನ ಉಪಚಾರಕ್ಕೆಂದು ಕಳುಹಿಸಿ ಕೊಟ್ಟೆನು. ಆದರೂ ಬ್ರಾಹ್ಮಣನು ನನ್ನನ್ನು ಅನುಗ್ರಹಿಸಲಿಲ್ಲ. ಬಿಳಿಯ ಕರು ಗಳನ್ನು ಹೊಂದಿದ್ದ ಕಪ್ಪುಬಣ್ಣದ ಹದಿನಾಲ್ಕು ಸಾವಿರ ಗೋವುಗಳನ್ನು ಬ್ರಾಹ್ಮಣನಿಗೆ ದಾನವಾಗಿ ಕೊಟ್ಟೆನು. ಆದರೂ ನಾನು ಬ್ರಾಹ್ಮಣನ ಅನುಗ್ರಹವನ್ನು ಪಡೆದುಕೊಳ್ಳಲಾರದೇ ಹೋದೆನು. ಬ್ರಾಹ್ಮಣನನ್ನು ಯಥಾವಿಧಿಯಾಗಿ ಸತ್ಕರಿಸಿ ಸರ್ವವಿಧವಾದ ಕಾಮನೆಗಳಿಂದಲೂ ಸಂಪನ್ನ ವಾಗಿದ್ದ ಮನೆಯನ್ನೂ ಮತ್ತು ನನ್ನಲ್ಲಿದ್ದ ಕಿಂಚಿದೈಶ್ವರ್ಯವನ್ನೂ ಕೊಡಲು ಹೋದೆನು. ಆದರೆ ಅವನು ಅವುಗಳನ್ನು ತೆಗೆದುಕೊಳ್ಳಲು ಇಷ್ಟಪಡಲಿಲ್ಲ. ಆ ಸಮಯದಲ್ಲಿ ನಾನು ಮಾಡಿದ ಅಪರಾಧಕ್ಕಾಗಿ ಬ್ರಾಹ್ಮಣನನ್ನು ಪ್ರಯತ್ನಪೂರ್ವಕವಾಗಿ ಕ್ಷಮೆಯನ್ನು ಯಾಚಿಸುತ್ತಿದ್ದೆನು. ನನ್ನ ಪ್ರಾರ್ಥನೆಗೆ

ಉತ್ತರವಾಗಿ ಬ್ರಾಹ್ಮಣನು ‘ವ್ಯಾಹೃತಂ ಯನ್ಮಯಾ ಸೂತ ತತ್ತಥಾ ನ ತದಾನ್ಯಥಾ ಸೂತನೇ! ನಾನು ಹೇಗೆ ಹೇಳಿದೆನೋ ಅದು ಹಾಗೆಯೇ ನಡೆಯುವುದು. ಬೇರೆಯ ರೀತಿಯಲ್ಲಿ ನಡೆಯಲು ಸಾಧ್ಯವೇ ಇಲ್ಲ’ –ಎಂದೇ ಹೇಳಿಬಿಟ್ಟನು. ಅವನು ಮುಂದುವರಿದು ಹೇಳಿದನು:

**ಅನೃತೋಕ್ತಂ ಪ್ರಜಾಂ ಹನ್ಯಾತ್ತತಃ ಪಾಪಮವಾಪ್ನುಯಾಮ್।**
**ತಸ್ಮಾದ್ಧರ್ಮಾಭಿರಕ್ಷಾರ್ಥಂ ನಾನೃತಂ ವಕ್ತುಮುತ್ಸಹೇ ॥೪೮॥**

“ಅಸತ್ಯಭಾಷಣವು ಪ್ರಜೆಗಳನ್ನು ನಾಶಗೊಳಿಸುತ್ತದೆ. ಅಲ್ಲದೆ ಸುಳ್ಳು ಹೇಳಿದ ಪಾಪಕ್ಕೂ ನಾನು ಭಾಗಿಯಾಗುವೆನು. ಆದುದರಿಂದ ‘ಸತ್ಯನಿಷ್ಠೆ’ ಎಂಬ ಈ ಧರ್ಮವನ್ನು ರಕ್ಷಿಸುವ ಸಲುವಾಗಿ ಸುಳ್ಳು ಹೇಳಲು (ಹೇಳಿದ ಮಾತನ್ನು ಸುಳ್ಳಾಗಿಸಲು) ನಾನು ಇಚ್ಛಿಸುವುದಿಲ್ಲ.

ನೀನು ಬ್ರಾಹ್ಮಣರನ್ನು (ಲೋಭಿಗಳನ್ನಾಗಿಸಿ) ಅವರಿಗೆ ಪ್ರಾಪ್ತವಾಗಬಹುದಾದ ಉತ್ತಮಗತಿಯನ್ನು ವಿನಾಶಮಾಡಬೇಡ. ನೀನು ಪಶ್ಚಾತ್ತಾಪದಿಂದಲೂ ಮತ್ತು ದಾನದಿಂದಲೂ ಧೇನುವತ್ಸವನ್ನು ಸಂಹರಿಸಿದುದಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡಿರುವೆ. ಈ ಲೋಕದಲ್ಲಿ ಯಾರೂ ನನ್ನ ಮಾತನ್ನು ಸುಳ್ಳುಮಾಡಲಾರರು. ಆದುದರಿಂದ ನನ್ನ ಶಾಪವನ್ನೂ ನೀನು ಪಡೆದುಕೊಳ್ಳಲೇಬೇಕು.”

ಶಲ್ಯ! ಯದ್ಯಪಿ ನೀನು ನನ್ನನ್ನು ದೂಷಿಸುತ್ತಿದ್ದರೂ ನಾನು ನಿನ್ನಲ್ಲಿ ಸುಹೃದ್ಭಾವವನ್ನೇ ಇಟ್ಟುಕೊಂಡಿರುವುದರಿಂದ ಈ ವಿಷಯವನ್ನೂ ನಿನಗೆ ಹೇಳಿರುವೆನು. ಆದರೂ ನೀನು ನನ್ನನ್ನು ನಿಂದಿಸುತ್ತಲೇ ಇರುವೆಯೆಂಬುದನ್ನೂ ನಾನು ತಿಳಿದಿದ್ದೇನೆ. ಸುಮ್ಮನಿದ್ದುಬಿಡು. ನಿನ್ನ ಮಾತಿಗೆ ಉತ್ತರವನ್ನೂ ಹೇಳುವೆನು ಕೇಳು.”

ಳ೨ನೆಯ ಅಧ್ಯಾಯವು ಮುಗಿಯಿತು.

ಳ೩ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣನು ಆತ್ಮಪ್ರಶಂಸಾಪೂರ್ವಕವಾಗಿ ಶಲ್ಯನನ್ನು ನಿಂದಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

“ಮಹಾರಾಜ! ಅರಿಂದಮನಾದ ಕರ್ಣನು, ಶಲ್ಯನು ಮಾತನಾಡುವುದನ್ನು ತಡೆದು ಅವನೊಡನೆ ಪುನಃ ಹೀಗೆ ಹೇಳಿದನು:

“ಶಲ್ಯ! ನೀನು ನಿದರ್ಶನಾರ್ಥವಾಗಿ ಕಾಗೆ-ಹಂಸಗಳ ಕಥೆಯನ್ನು ಹೇಳಿ ತನ್ಮೂಲಕವಾಗಿ ನನ್ನನ್ನು ಹಳಿದು ಮಾತುಗಳನ್ನಾಡಿರುವೆ. ಆದರೆ ಯುದ್ಧಸ್ಥಳ ದಲ್ಲಿ ನೀನು ಮಾತಿನಿಂದಲೇ ನನ್ನನ್ನು ಭಯಪಡಿಸಲಾರೆ. ಇಂದ್ರನಿಂದೊಡ ಗೂಡಿದ ದೇವತೆಗಳೇ ನನ್ನೊಡನೆ ಯುದ್ಧಕ್ಕೆ ಬಂದರೂ ನನಗೆ ಭಯ ವೆಂಬುದೇ ಇಲ್ಲ. ಹೀಗಿರುವಾಗ ಕೃಷ್ಣಸಹಿತನಾದ ಅರ್ಜುನನ ವಿಷಯದಲ್ಲಿ ಹೇಳುವುದೇನಿದೆ? (ಇವರು ನನ್ನನ್ನು ಯಾವುದೇ ಕಾರಣದಿಂದಲೂ ಭಯ ಪಡಿಸಲಾರರು.) ಮಾತಿನಿಂದಲೇ ನನ್ನನ್ನು ಭಯಪಡಿಸಲು ಯಾವುದೇ ಕಾರಣದಿಂದಲೂ ನಿನಗೆ ಸಾಧ್ಯವಾಗುವುದಿಲ್ಲ. ಈ ರಣಾಂಗಣದಲ್ಲಿ ಮಾತಿನಿಂದಲೇ ಭಯಪಡತಕ್ಕ ಬೇರೆ ಯಾರಾದರೂ ಇರುವುದಾದರೆ ನೀನು ಅವನನ್ನೇ ಹುಡುಕಿಕೊಂಡು ಹೋಗು. ನೀನು ನನ್ನನ್ನು ಕುರಿತು ಆಡಿದ ಕರ್ಣಕಠೋರವಾದ ಮಾತುಗಳೇ ನೀಚನಾದವನಿಗೆ ಬಲವಾಗಿದೆ. (ನೀಚನ ಬಲವೆಂದರೆ ಯಾವಾಗಲೂ ಕಠಿನವಾದ ಮಾತುಗಳನ್ನೇ ಆಡುತ್ತಿರುವುದು) ದುರ್ಮತಿಯೇ! ನನ್ನಲ್ಲಿರುವ ಗುಣಗಳನ್ನು ಹೇಳಲು ಅಸಮರ್ಥನಾಗಿರುವ ನೀನು ಯದ್ವಾ-ತದ್ವಾ ಮಾತನಾಡುತ್ತಿರುವೆ.

**ನ ಹಿ ಕರ್ಣಃ ಸಮುದ್ಭೂತೋ ಭಯಾರ್ಥಮಿಹ ಮದ್ರಕ ।**
**ವಿಕ್ರಮಾರ್ಥಮಹಂ ಜಾತೋ ಯಶೋಽರ್ಥಂ ಚ ತಥಾತ್ಮನಃ ॥೬॥**

ಮದ್ರಕನೇ! ಕರ್ಣನು ಹುಟ್ಟಿರುವುದು ಭಯಪಡುವುದಕ್ಕಲ್ಲ. ಪರಾಕ್ರಮವನ್ನು ತೋರಿಸುವ ಸಲುವಾಗಿ ಮತ್ತು ಯಶಸ್ಸನ್ನು ಗಳಿಸುವ ಸಲುವಾಗಿ ನಾನು ಹುಟ್ಟಿದ್ದೇನೆ.

**ಸಖಿಭಾವೇನ ಸೌಹಾರ್ದಾನ್ಮಿತ್ರಭಾವೇನ ಚೈವ ಹಿ ।**
**ಕಾರಣೈಸ್ತ್ರಿಭಿರೇತೈಸ್ತ್ವಂ ಶಲ್ಯ ಜೀವಸಿ ಸಾಮ್ಪ್ರತಮ್ ॥೭॥**

ಶಲ್ಯ! ನಿನ್ನನ್ನು ಸಾರಥಿಯನ್ನಾಗಿ ಮಾಡಿಕೊಂಡಿರುವುದರಿಂದ ನಿನ್ನಲ್ಲಿ ನನಗೆ ಸಖ್ಯವುಂಟಾಗಿದೆ. ಸೌಹಾರ್ದದ ಕಾರಣದಿಂದಾಗಿ ನೀನು ಆಡಿದುದೆಲ್ಲವನ್ನೂ ನಾನು ಕ್ಷಮಿಸುತ್ತಲೇ ಇದ್ದೇನೆ. ಮೂರನೆಯದಾಗಿ: ಮಿತ್ರನಾದ ದುರ್ಯೋಧನನ ಅಭೀಷ್ಟದ ಸಿದ್ಧಿಯಾಗಬೇಕೆಂದು ನನ್ನ ಅಪೇಕ್ಷೆಯಾಗಿದೆ. ಈ ಮೂರು ಕಾರಣಗಳಿಂದ ನಿನ್ನನ್ನು ನಾನು ಸಂಹರಿಸಿಲ್ಲ. ಇಷ್ಟು ಕಠೋರವಾಗಿ ಮಾತನಾಡಿಯೂ ನೀನು ಜೀವಿಸಿರಲು ಈ

ಮೂರು ವಿಷಯಗಳು ಕಾರಣವಾಗಿವೆ. ದುರ್ಯೋಧನರಾಜನ ಮಹಾ ಕಾರ್ಯವನ್ನು ಸಾಧಿಸಲು ಪ್ರಯತ್ನವು ನಡೆಯುತ್ತಿದೆ. ಇದರ ಸಂಪೂರ್ಣ ಭಾರವೂ ಸಹ ನನ್ನ ಮೇಲೆಯೇ ಬಿದ್ದಿದೆ. ಈ ಕಾರಣದಿಂದಲೂ ನೀನು ಕ್ಷಣಕಾಲವಾದರೂ ಬದುಕಿರಲು ಸಾಧ್ಯವಾಗಿದೆ. ಇದೂ ಅಲ್ಲದೇ ಮೊದಲೇ ನಿನ್ನ ನಿಬಂಧನೆಗೆ ಒಪ್ಪಿಯಾಗಿದೆ. ಆದುದರಿಂದ ನಿನ್ನ ಈ ಅಪ್ರಿಯವಾದ ಮಾತುಗಳನ್ನೂ ನಾನು ಕ್ಷಮಿಸಲೇಬೇಕಾಗಿದೆ. (ನೀನಿಲ್ಲದಿದ್ದರೆ ನನಗೆ ತೊಂದರೆಯಾಗುವುದೆಂದು ಭಾವಿಸಬೇಡ.) ಶಲ್ಯರಂತಹ ಸಾವಿರ ಮಂದಿ ಇಲ್ಲದಿದ್ದರೂ ನಾನು ಶತ್ರುಗಳನ್ನು ಜಯಿಸುತ್ತೇನೆ. ಆದರೆ ಮಿತ್ರದ್ರೋಹವು ಮಹಾಪಾಪಕರವೆಂದು ನಾನು ಭಾವಿಸಿರುವುದರಿಂದ ನೀನು ಇದುವರೆಗೂ ಜೀವಿಸಿರಲು ಸಾಧ್ಯವಾಗಿದೆ."

೪೩ನೆಯ ಅಧ್ಯಾಯವು ಮುಗಿಯಿತು.



## ಕರ್ಣನು ಮದ್ರವೇ ಮೊದಲಾದ ವಾಹೀಕದೇಶವಾಸಿಗಳನ್ನು ಪುನಃ ನಿಂದಿಸಿದುದು

ಮಹಾರಾಜ! ಕರ್ಣನು ಹೇಳಿದುದಕ್ಕೆ ಪ್ರತಿಯಾಗಿ ಶಲ್ಯನು ಹೇಳುತ್ತಾನೆ:

**ನನು ಪ್ರಲಾಪಾಃ ಕರ್ಣೈತೇ ಯಾನ್ಬ್ರವೀಷಿ ಪರಾನ್ಪ್ರತಿ ।**
**ಋತೇ ಕರ್ಣಸಹಸ್ರೇಣ ಶಕ್ಯಾ ಜೇತುಂ ಪರೇ ಯುಧಿ ॥೧॥**

"ಕರ್ಣ! ನೀನು ಇತರರ ವಿಷಯವಾಗಿ ಏನು ಹೇಳುವೆಯೋ ಅವುಗಳೆಲ್ಲವೂ ಕೇವಲ ಪ್ರಲಾಪಗಳೇ (ಪ್ರಯೋಜನವಿಲ್ಲದ ಮಾತುಗಳೇ) ಆಗಿವೆ. ಕರ್ಣನಂತಹ ಸಾವಿರ ಜನರಿಲ್ಲದಿದ್ದರೂ ಯುದ್ಧದಲ್ಲಿ ಶತ್ರುಗಳನ್ನು ಜಯಿಸಬಹುದೆಂದು ನಾನು ಹೇಳುತ್ತೇನೆ."

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಹೀಗೆ ಬಹಳ ಕಠೋರವಾದ ಮಾತುಗಳನ್ನಾಡಿದ ಮದ್ರಾಧಿಪನನ್ನು ಕುರಿತು ಕರ್ಣನು ಎರಡುಪಟ್ಟು ಹೆಚ್ಚಾದ ಕಾಠಿನ್ಯವುಳ್ಳ, ಅಪ್ರಿಯವೆಂದು ಸ್ಪಷ್ಟವಾಗಿ ತೋರುವ ಮಾತುಗಳನ್ನು ಹೇಳತೊಡಗಿದನು:

"ಮದ್ರಜನಾಧಿಪನೇ! ಧೃತರಾಷ್ಟ್ರನ ಸಮಕ್ಷದಲ್ಲಿ ಬ್ರಾಹ್ಮಣರು ಹೇಳಿದ ಮತ್ತು ನನ್ನಿಂದ ಕೇಳಲ್ಪಟ್ಟ ಈ ಮಾತುಗಳನ್ನೂ ಏಕಾಗ್ರಚಿತ್ತನಾಗಿ ಕೇಳು:

ಹಿಂದೊಂದುದಿನ ಧೃತರಾಷ್ಟ್ರಮಹಾರಾಜನ ಅರಮನೆಯಲ್ಲಿ ಬ್ರಾಹ್ಮಣರು, ಭೂಮಂಡಲದಲ್ಲಿರುವ ವಿಧ-ವಿಧವಾದ, ಚಿತ್ರ-ವಿಚಿತ್ರವಾದ ದೇಶಗಳನ್ನೂ ಅಲ್ಲಿಯ ರಾಜರ ವಿಷಯಗಳನ್ನೂ ಮತ್ತು ಅವರ ಪೂರ್ವೇತಿ ಹಾಸಗಳನ್ನೂ ಹೇಳುತ್ತಿದ್ದರು. ಬ್ರಾಹ್ಮಣರ ಸಮೂಹದಲ್ಲಿ ವೃದ್ಧನಾಗಿದ್ದ ದ್ವಿಜೋತ್ತಮನು ವಾಹೀಕದೇಶವನ್ನೂ ಮತ್ತು ಮದ್ರದೇಶವನ್ನೂ ಮನ ಬಂದಂತೆ ನಿಂದನೆಮಾಡುತ್ತಾ ಆ ದೇಶಗಳಲ್ಲಿ ನಡೆದ ಪೂರ್ವೇತಿಹಾಸಗಳನ್ನು ಹೇಳಿದನು.

**ಬಹಿಷ್ಕೃತಾ ಹಿಮವತಾ ಗಙ್ಗಯಾ ಚ ಬಹಿಷ್ಕೃತಾಃ ।**<br>
**ಸರಸ್ವತ್ಯಾ ಯಮುನಯಾ ಕುರುಕ್ಷೇತ್ರೇಣ ಚಾಪಿ ಯೇ ॥೬॥**<br>
**ಪಞ್ಚಾನಾಂ ಸಿನ್ಧುಷಷ್ಠಾನಾಂ ನದೀನಾಂ ಯೇಽನ್ತರಾಶ್ರಿತಾಃ ।**<br>
**ತಾನ್ಧರ್ಮಬಾಹ್ಯಾನಶುಚೀನ್ವಾಹೀಕಾನಪಿ ವರ್ಜಯೇತ್ ॥೭॥**

ಯಾವ ಪ್ರದೇಶಗಳು ಹಿಮಾಲಯ, ಗಂಗಾ, ಯಮುನಾ, ಸರಸ್ವತೀ ಮತ್ತು ಕುರುಕ್ಷೇತ್ರಗಳ ಗಡಿಗಳಿಗೆ ಹೊರಭಾಗದಲ್ಲಿವೆಯೋ ಮತ್ತು ಶತದ್ರೂ, ರಾವಿ, ಬೀಯಾಸ್, ಚೀನಾಬ್, ಝೀಲಂ ಮತ್ತು ಸಿಂಧೂನದಿಗಳ ಮಧ್ಯಭಾಗದಲ್ಲಿವೆಯೋ–ಆ ಪ್ರದೇಶಗಳನ್ನು ವಾಹೀಕದೇಶವೆಂದು ಕರೆಯು ತ್ತಾರೆ. ಅಲ್ಲಿಯ ಜನರು ಧರ್ಮಬಾಹಿರರೂ ಅಶುಚಿಗಳೂ ಆಗಿರುತ್ತಾರೆ. ಆದುದರಿಂದ ಅವರನ್ನು ಅವಶ್ಯವಾಗಿ ವರ್ಜಿಸಬೇಕು.

ರಾಜಭವನದ ಮಹಾದ್ವಾರದ ಸಮೀಪದಲ್ಲಿರುವ ಗೋವರ್ಧನ ಎಂಬ ವಟವೃಕ್ಷವನ್ನೂ ಮತ್ತು ಸುಭದ್ರ ಎಂಬ ವೃತ್ತ (ನಾಲ್ಕು ಮಾರ್ಗಗಳು ಸೇರುವಸ್ಥಳ) ವನ್ನೂ ಬಾಲ್ಯದಿಂದಲೂ ನಾನು ಜ್ಞಾಪಕ ದಲ್ಲಿಟ್ಟುಕೊಂಡಿರುತ್ತೇನೆ. ಅತ್ಯಂತರಹಸ್ಯವಾದ ಕಾರ್ಯಾರ್ಥವಾಗಿ ನಾನು ವಾಹೀಕದೇಶದಲ್ಲಿ ಸ್ವಲ್ಪಕಾಲ ವಾಸಮಾಡುತ್ತಿದ್ದೆನು. ಆ ಸಮಯದಲ್ಲಿ ಅಲ್ಲಿಯ ಜನಗಳ ಸಂಪರ್ಕದಿಂದ ಮತ್ತು ಅವರೊಡನೆ ಮಾಡುತ್ತಿದ್ದ

ಸಂಭಾಷಣೆಯಿಂದ ಅವರ ಆಚಾರ-ವಿಚಾರ-ವ್ಯವಹಾರಗಳೆಲ್ಲವನ್ನೂ ತಿಳಿದುಕೊಂಡೆನು. ವಾಹೀಕದೇಶದಲ್ಲಿ ಶಾಕಲ ಎಂಬ ಪಟ್ಟಣವೊಂದಿದೆ. ಆ ಪಟ್ಟಣದ ಸಮೀಪದಲ್ಲಿ ಆಪಗಾ ಎಂಬ ಹೆಸರಿನ ನದಿಯೂ ಹರಿಯುತ್ತದೆ. ಆ ಪಟ್ಟಣದಲ್ಲಿ ಜರ್ತಿಕಾ ಎಂಬ ಹೆಸರಿನ ವಾಹೀಕರಿದ್ದಾರೆ. ನಿಶ್ಚಯವಾಗಿಯೂ ಅವರ ಆಚಾರ-ವಿಚಾರಗಳು ಅತಿನಿಂದ್ಯವಾಗಿವೆ.

**ಧಾನಾ ಗೌಡ್ಯಾಸವಂ ಪೀತ್ವಾ ಗೋಮಾಂಸಂ ಲಶುನೈಃ ಸಹ।**
**ಅಪೂಪಮಾಂಸವಾಟ್ಯಾನಾಮಾಶಿನಃ ಶೀಲವರ್ಜಿತಾಃ ॥೧೧॥**

ಅವರು ಹುರಿದ ಗೋಧಿ ಮತ್ತು ಬೆಲ್ಲಗಳಿಂದ ಮಾಡಿದ ಮದ್ಯವನ್ನು ಕುಡಿದು, ಬೆಳ್ಳುಳ್ಳಿಯನ್ನು ನಂಚಿಕೊಂಡು ಗೋಮಾಂಸವನ್ನು ತಿನ್ನುತ್ತಾರೆ. ಅಪೂಪವನ್ನೂ (ದೋಸೆ-ಒಬ್ಬಟ್ಟು ಮುಂತಾದುವು) ಮಾಂಸವನ್ನೂ ಮತ್ತು ಯವಾನ್ನವನ್ನೂ ತಿನ್ನುವ ಅವರು ಶೀಲ ಮತ್ತು ಆಚಾರಗಳಿಂದ ವರ್ಜಿತ ರಾಗಿದ್ದಾರೆ. ಅಲ್ಲಿಯ ಸ್ತ್ರೀಯರು ಎಲ್ಲರಿಗೂ ಕಾಣಿಸುವ ರೀತಿಯಲ್ಲಿ ಮಾಲೆ ಗಳನ್ನು ಧರಿಸಿಕೊಂಡು, ಗಂಧವನ್ನು ಲೇಪಿಸಿಕೊಂಡು, ನಗರಸ್ಥಳಗಳಲ್ಲಿರುವ ಮನೆಗಳ ಪ್ರಾಕಾರಗಳಲ್ಲಿ ಮದಿರೆಯನ್ನು ಸೇವಿಸಿ ನಗ್ನರಾಗಿ ಹಾಡುತ್ತಿರುತ್ತಾರೆ ಮತ್ತು ಕುಣಿಯುತ್ತಿರುತ್ತಾರೆ. ಮತ್ತರಾದ ಸ್ತ್ರೀಯರು ಕತ್ತೆಯ ಮತ್ತು ಒಂಟೆಯ ಕಿರುಚಾಟಗಳಿಗೆ ಸಮಾನವಾದ ಧ್ವನಿಯಿಂದ ನಾನಾವಿಧವಾದ ಕಾಮ ಪ್ರಚೋದಕವಾದ ಗೀತಗಳನ್ನು ಹಾಡುತ್ತಿರುತ್ತಾರೆ. ಎಲ್ಲ ಪ್ರಕಾರಗಳಿಂದಲೂ ಸ್ವೇಚ್ಛಾಚಾರಿಣಿಯರಾದ ಅವರು ಪುರುಷರೊಡನೆ ಸಂಗಮಾಡುವಾಗಲೂ ಆವರಣದಲ್ಲಿಯೇ ಇರುತ್ತಾರೆ. ಮದೋತ್ಕಟೆಯರಾದ ಆ ಸ್ತ್ರೀಯರು ಪರಸ್ಪರವಾಗಿ ಸರಸಸಲ್ಲಾಪಮಾಡುತ್ತಿರುವಾಗ 'ಹೇ ಹತೇ! ಹೇ ಹತೇ! ಸ್ವಾಮಿಭರ್ತೃಹತೇ! ಯಾರಿಂದಲೋ ಪರಚಿಸಿಕೊಂಡು ಗಾಯಗೊಂಡಿರು ವವಳೇ! ಕಾಣದಂತೆ ಪರಪುರುಷನ ಬಳಿಗೆ ಹೋಗಲು ಪ್ರಯತ್ನಿಸಿ ಗಂಡನಿಂದ ಪೆಟ್ಟುತಿಂದವಳೇ!–ಎಂಬುದಾಗಿ ಕಾಮಪ್ರಚೋದಕವಾದ ಸಂಬೋಧನೆಗಳಿಂದ ಒಬ್ಬರು ಮತ್ತೊಬ್ಬರನ್ನು ಕೂಗುತ್ತಾ ಕುಣಿಯು ತ್ತಿರುತ್ತಾರೆ. ಉತ್ಸವ ಮತ್ತು ಪರ್ವದಿವಸಗಳಲ್ಲಿಯೂ ಸಂಸ್ಕಾರಹೀನರಾದ ಆ ಸ್ತ್ರೀಯರು ಯಾವ ವಿಧವಾದ ಕಟ್ಟುಪಾಡುಗಳೂ ಇಲ್ಲದೇ ಸ್ವೇಚ್ಛೆಯಿಂದ ವರ್ತಿಸುತ್ತಾರೆ.

ಮದೋನ್ಮತ್ತೆಯರಾದ, ದುಷ್ಟೆಯರಾದ ಆ ವಾಹೀಕಸ್ತ್ರೀಯರ ಸಂಬಂಧಿಯೊಬ್ಬನು ಕುರುಜಾಂಗಲದಲ್ಲಿ ವಾಸಮಾಡುತ್ತಿದ್ದಾಗ ಅತಿ ಖಿನ್ನನಾಗಿ ತನಗೆ ಸಂಬಂಧಪಟ್ಟ ಹೆಂಗಸಿನ ಗುಣಗಾನಮಾಡುತ್ತಿದ್ದನು. "ಎತ್ತರವಾದ ಶರೀರವುಳ್ಳ, ಬಿಳುಪಾಗಿರುವ, ಸೂಕ್ಷ್ಮವಾದ (ಮೇಲು ಹೊದ್ದಿಕೆ ಯನ್ನು) ಧರಿಸಿರುವ ಆ ನನ್ನ ಪ್ರೇಯಸಿಯು ನಿಶ್ಚಯವಾಗಿಯೂ ಈ ಕುರುಜಾಂಗಲದಲ್ಲಿರುವ ವಾಹೀಕನಾದ ನನ್ನನ್ನೇ ಸ್ಮರಿಸುತ್ತಾ ಮಲಗುತ್ತಾಳೆ. ನಾನು ಶತದ್ರೂ (ಸಟ್ಲೇಜ್) ನದಿಯನ್ನೂ ಮತ್ತು ರಮ್ಯವಾದ ಇರಾವತೀ (ರಾವೀ) ನದಿಯನ್ನೂ ದಾಟಿ ನನ್ನ ದೇಶಕ್ಕೆ ಹೋಗಿ ಸ್ಥೂಲವಾದ ಜನನೇಂದ್ರಿ ಯದಿಂದ ಕೂಡಿರುವ ಸುಂದರಸ್ತ್ರೀಯರನ್ನು ಯಾವಾಗ ನೋಡುವೆನು? ಯಾರ ಅಪಾಂಗಗಳು ಮಣಿಶಿಲಾಲೇಪನದಿಂದ ಉಜ್ವಲವಾಗಿ ಕಾಣುತ್ತ ವೆಯೋ, ಯಾರ ಎರಡು ಕಣ್ಣುಗಳೂ ಮತ್ತು ಲಲಾಟವೂ ಅಂಜನದಿಂದ ಸುಶೋಭಿತವಾಗಿರುವುವೋ, ಯಾರು ಕಂಬಲಗಳಿಂದಲೂ-ಮೃಗಚರ್ಮ ಗಳಿಂದಲೂ ಆವೃತರಾಗಿರುವರೋ ಅಂತಹ ಗೌರಾಂಗರಾದ, ಪ್ರಿಯದರ್ಶನೆ ಯರಾದ ಸುಂದರಿಯರು, ಭೇರೀ-ಮೃದಂಗ- ಶಂಖ-ಮರ್ದಲವಾದ್ಯಗಳ ಧ್ವನಿಗಳೊಡನೆ ನೃತ್ಯಮಾಡುವುದನ್ನು ನಾನು ಯಾವಾಗ ನೋಡುವೆನು? ಮದೋನ್ಮತ್ತರಾದ ನಾವು ಕತ್ತೆ, ಒಂಟೆ ಮತ್ತು ಹೇಸರಗತ್ತೆಗಳ ಮೇಲೆ ಕುಳಿತು ಸುಖಕರವಾದ ಹಾದಿಗಳಿಂದ ಕೂಡಿರುವ ಬನ್ನೀಮರ-ಗೋನುಮರ ಮತ್ತು ಬಿದಿರುಮೆಳೆಗಳಿಂದ ವ್ಯಾಪ್ತವಾಗಿರುವ ಅರಣ್ಯಗಳ ಮೂಲಕವಾಗಿ ಯಾವಾಗ ಸುಖವಾಗಿ ಪ್ರಯಾಣಮಾಡುತ್ತೇವೆ? ಕಜ್ಜಾಯಗಳನ್ನೂ ಮತ್ತು ಮಜ್ಜಿಗೆ ಯಿಂದ ಕೂಡಿದ ಹಿಟ್ಟಿನುಂಡೆಗಳನ್ನೂ ತಿನ್ನುತ್ತಾ ಬಹುಬಲಿಷ್ಠರಾಗಿ, ಹಾದಿ ಯಲ್ಲಿ ಸಿಕ್ಕುವ ಹಾದಿಗರ ಮೇಲೆ ಬೀಳುತ್ತಾ, ಅವರ ಬಟ್ಟೆ-ಬರೆಗಳನ್ನು ದೋಚಿಕೊಂಡು ಅವರಿಗೆ ಪ್ರಹಾರಗಳನ್ನೂ ಯಾವಾಗ ಕೊಡುವೆವು?" ಹೀಗೆ ಕುರುಜಾಂಗಲದಲ್ಲಿದ್ದ ವಾಹೀಕದುಷ್ಟರು ತಮ್ಮ-ತಮ್ಮಲ್ಲಿಯೇ ಮಾತನಾಡಿ ಕೊಳ್ಳುತ್ತಾರೆ.

ಇಂತಹ ದುಃಶೀಲರಾದ, ಸಂಸ್ಕಾರಶೂನ್ಯರಾದ, ದುರಾತ್ಮರಾದ ವಾಹೀಕರ ಜೊತೆಯಲ್ಲಿ ಬುದ್ಧಿಯಿರುವ ಯಾವ ಮನುಷ್ಯನು ತಾನೇ ಮುಹೂರ್ತಕಾಲವಾದರೂ ವಾಸಮಾಡಿಕೊಂಡಿರಬಲ್ಲನು?"

254-18

ಶಲ್ಯ! ಆ ಬ್ರಾಹ್ಮಣನು, ನಿರರ್ಥಕವಾದ ಆಚಾರ-ವಿಚಾರಗಳಿರುವ ವಾಹೀಕರ ವಿಷಯವಾಗಿ ಧೃತರಾಷ್ಟ್ರನೊಡನೆ ಹೀಗೆಯೇ ಹೇಳಿದನು. ಅಂತಹವರಿಗೆ ರಾಜನಾಗಿರುವ ನೀನು ಅವರ ಪಾಪ-ಪುಣ್ಯಗಳೆರಡರಲ್ಲಿಯೂ ಆರನೆಯ ಒಂದು ಭಾಗವನ್ನು ಪಡೆದುಕೊಳ್ಳುವೆ.

ಹೀಗೆ ಹೇಳಿದನಂತರವೂ ಆ ಬ್ರಾಹ್ಮಣನು ಉದ್ಧತರಾದ ವಾಹೀಕರ ವಿಷಯದಲ್ಲಿ ಇನ್ನೂ ಅನೇಕ ವಿಷಯಗಳನ್ನು ಹೇಳಿದನು. ಆ ಎಲ್ಲ ವಿಷಯಗಳನ್ನೂ ನಾನು ನಿನಗೆ ಯಥಾವತ್ತಾಗಿಯೇ ಹೇಳುತ್ತೇನೆ; ಆಲಿಸು:

"ಆ ದೇಶದಲ್ಲಿ ಒಬ್ಬಳು ರಾಕ್ಷಸಿಯಿದ್ದಳು. ಅವಳು ಯಾವಾಗಲೂ ಸಂಪತ್ಸಮೃದ್ಧವಾದ ಶಾಕಲನಗರದಲ್ಲಿ ಕೃಷ್ಣಪಕ್ಷದ ಚತುರ್ದಶಿಯಂದು ರಾತ್ರಿಯ ಕಾಲದಲ್ಲಿ ದುಂದುಭಿಯನ್ನು ಬಾರಿಸುತ್ತಾ ಹೀಗೆ ಗಾಯನ ಮಾಡುತ್ತಾಳೆ:

"ನಾನು ವಸ್ತ್ರಾಲಂಕಾರಭೂಷಿತೆಯಾಗಿ, ಗೋಮಾಂಸವನ್ನು ತಿಂದು, ಬೆಲ್ಲದಿಂದ ಮಾಡಿದ ಸುರೆಯನ್ನು ಕುಡಿದು ತೃಪ್ತಳಾಗಿ, ಸ್ಥೂಲಕಾಯರಾದ ಹೊಂಬಣ್ಣದ ಸ್ತ್ರೀಯರೊಡನೆ ಸೇರಿಕೊಂಡು ಬೊಗಸೆಯಷ್ಟು ಈರುಳ್ಳಿ ಯೊಡನೆ ಅನೇಕ ಕುರಿಗಳನ್ನು (ಕುರಿಗಳ ಮಾಂಸವನ್ನು) ತಿನ್ನುತ್ತಾ ಈ ಶಾಕಲ ನಗರದಲ್ಲಿ ವಾಹೀಕರಿಗೆ ಸಂಬಂಧಿಸಿದ ಗೀತೆಗಳನ್ನು ಪುನಃ ಯಾವಾಗ ಹಾಡುತ್ತೇನೆ?"

**ವಾರಾಹಂ ಕೌಕ್ಕುಟಂ ಮಾಂಸಂ ಗವ್ಯಂ ಗಾರ್ದಭಮೌಷ್ಟ್ರಿಕಮ್ ।**
**ಐಡಂ ಚ ಯೇ ನ ಖಾದನ್ತಿ ತೇಷಾಂ ಜನ್ಮ ನಿರರ್ಥಕಮ್ ॥೨೮॥**

"ಹಂದಿ, ಕೋಳಿ, ಹಸು, ಕತ್ತೆ, ಒಂಟೆ, ಕುರಿ-ಇವುಗಳ ಮಾಂಸವನ್ನು ಯಾರು ತಿನ್ನುವುದಿಲ್ಲವೋ ಅವರ ಜನ್ಮವು ವ್ಯರ್ಥವೇ ಸರಿ."

ಹೀಗೆಂಬುದಾಗಿ ಶಾಕಲಪುರನಿವಾಸಿಗಳಾದ, ಆಬಾಲವೃದ್ಧರೂ, ನರ ನಾರಿಯರೂ ಮದಿರೆಯಿಂದ ಉನ್ಮತ್ತರಾಗಿ ಬಾಯಿಗೆ ಬಂದಂತೆ ಕೂಗುತ್ತಾ ಮನಬಂದಂತೆ ಹಾಡುತ್ತಿರುತ್ತಾರೆ. ಇಂತಹವರಲ್ಲಿ ಧರ್ಮವು ಹೇಗೆ ತಾನೇ ಇರುತ್ತದೆ?"

ಶಲ್ಯ! ಈ ಮಾತುಗಳನ್ನು ನೀನು ಚೆನ್ನಾಗಿ ಅರ್ಥಮಾಡಿಕೊ. ಅಯ್ಯೋ! ಇಷ್ಟು ಮಾತ್ರವಲ್ಲ. ಪುನಃ ಹೇಳುತ್ತೇನೆ. ಮತ್ತೊಬ್ಬ ಬ್ರಾಹ್ಮಣನು ಕುರುಗಳ

ಸಭೆಗೆ ಬಂದು ಆ ನಿನ್ನ ದೇಶಕ್ಕೆ ಸಂಬಂಧಿಸಿದಂತೆ ಇನ್ನೂ ಅನೇಕ ವಿಷಯಗಳನ್ನು ನಮಗೆ ಹೇಳಿದ್ದಾನೆ.

**ಪಞ್ಚ ನದ್ಯೋ ವಹನ್ತ್ಯೇತಾ ಯತ್ರ ಪೀಲುವನಾನ್ಯುತ ।**
**ಶತದ್ರುಶ್ಚ ವಿಪಾಶಾ ಚ ತೃತೀಯೈರಾವತೀ ತಥಾ ॥೩೧॥**

**ಚನ್ದ್ರಭಾಗಾ ವಿತಸ್ತಾ ಚ ಸಿನ್ಧುಷಷ್ಠಾ ಬಹಿರ್ಗಿರೇಃ ।**
**ಆರಟ್ಟಾ ನಾಮ ತೇ ದೇಶಾ ನಷ್ಟಧರ್ಮಾ ನ ತಾನ್ವ್ರಜೇತ್ ॥೩೨॥**

ಶತದ್ರು (ಸಟ್ಲೆಜ್), ವಿಪಾಶಾ (ಬೀಯಾಸ್), ಇರಾವತೀ (ರಾವೀ), ಚಂದ್ರಭಾಗಾ (ಚೀನಾಬ್), ವಿತಸ್ತಾ (ಝೀಲಮ್)-ಈ ಐದು ನದಿಗಳೂ ಸಿಂಧೂನದಿಯೊಡನೆ ಹರಿಯುತ್ತವೆ. ಆ ಪ್ರದೇಶದಲ್ಲಿಯೇ ಗೋನುಮರ ಗಳಿರುವ ಅರಣ್ಯಪ್ರದೇಶಗಳಿವೆ. ಅವು ಹಿಮಾಲಯದ ಎಲ್ಲೆಯಿಂದ ಹೊರಗಿವೆ. ಆ ದೇಶಗಳಿಗೆ ಆರಟ್ಟದೇಶಗಳೆಂದು ಹೆಸರು. ಆ ದೇಶಗಳಲ್ಲಿ ಧರ್ಮವು ಸಂಪೂರ್ಣವಾಗಿ ನಷ್ಟವಾಗಿಹೋಗಿದೆ. ಆದುದರಿಂದ ಆ ದೇಶಗಳಿಗೆ ಯಾರೂ ಹೋಗಲೇಬಾರದು.

**ವ್ರಾತ್ಯಾನಾಂ ದಾಸಮೀಯಾನಾಂ ವಾಹೀಕಾನಾಮಯಜ್ವನಾಮ್ ।**
**ನ ದೇವಾಃ ಪ್ರತಿಗೃಹ್ಣನ್ತಿ ಪಿತರೋ ಬ್ರಾಹ್ಮಣಾಸ್ತಥಾ ।**
**ತೇಷಾಂ ಪ್ರಣಷ್ಟಧರ್ಮಾಣಾಂ ವಾಹೀಕಾನಾಮಿತಿ ಶ್ರುತಿಃ ॥೩೪॥**

ಸಂಸ್ಕಾರಹೀನರಾದ, ಅನೈತಿಕವಾದ ಮಾರ್ಗದಲ್ಲಿ ಹುಟ್ಟಿದ (ಜಾರಜ ರಾದ), ಯಜ್ಞಾದಿ ಕರ್ಮಗಳನ್ನೂ ಮಾಡದಿರುವ, ಪ್ರಣಷ್ಟವಾದ ಧರ್ಮ-ಕರ್ಮಗಳುಳ್ಳ ವಾಹೀಕರಿಂದ ಕೊಡಲ್ಪಡುವ ಹವ್ಯ-ಕವ್ಯಗಳನ್ನು ದೇವ-ಪಿತೃಗಳಾಗಲೀ, ದಾನ-ದಕ್ಷಿಣೆಗಳನ್ನು ಬ್ರಾಹ್ಮಣರಾಗಲೀ ಸ್ವೀಕರಿಸುವುದಿಲ್ಲ ವೆಂದು ನಾವು ಕೇಳಿದ್ದೇವೆ.

ಮತ್ತೊಬ್ಬ ಬ್ರಾಹ್ಮಣನು ಸತ್ಪುರುಷರ ಸಭೆಯಲ್ಲಿ ವಾಹೀಕರ ವಿಷಯವಾಗಿ ಮತ್ತೂ ಕೆಲವು ವಿಷಯಗಳನ್ನು ಹೇಳಿದನು:

**ಕಾಷ್ಠಕುಣ್ಡೇಷು ವಾಹೀಕಾ ಮೃಣ್ಮಯೇಷು ಚ ಭುಞ್ಜತೇ ।**
**ಸಕ್ತುಮದ್ಯಾವಲಿಪ್ತೇಷು ಶ್ವಾವಲೀಢೇಷು ನಿರ್ಘೃಣಾಃ ॥೩೫॥**

**ಆವಿಕಂ ಚೌಷ್ಟ್ರಿಕಂ ಚೈವ ಕ್ಷೀರಂ ಗಾರ್ದಭಮೇವ ಚ ।**
**ತದ್ವಿಕಾರಾಂಶ್ಚ ವಾಹೀಕಾಃ ಖಾದನ್ತಿ ಚ ಪಿಬನ್ತಿ ಚ ॥೩೬॥**

"ದಯಾಹೀನರಾದ ವಾಹೀಕರು ಹಿಟ್ಟಿನಿಂದಲೂ ಮದ್ಯದಿಂದಲೂ ದೂಷಿತವಾಗಿರುವ, ನಾಯಿನೆಕ್ಕಿರುವ ಮರದ ಮರಿಗೆಗಳಲ್ಲಿಯೂ ಮಣ್ಣಿನ ಶರಾವೆಗಳಲ್ಲಿಯೂ ಊಟಮಾಡುತ್ತಾರೆ. ಕುರಿ, ಒಂಟೆ, ಕತ್ತೆ ಇವುಗಳ ಹಾಲನ್ನು ಕುಡಿಯುತ್ತಾರೆ. ಆ ಹಾಲಿನಿಂದಾದ ಮೊಸರು-ಬೆಣ್ಣೆ-ತುಪ್ಪಗಳನ್ನೂ ತಿನ್ನುತ್ತಾರೆ ಮತ್ತು ಕುಡಿಯುತ್ತಾರೆ.

**ಪುತ್ರಸಂಕರಿಣೋ ಜಾಲ್ಮಾಃ ಸರ್ವಾನ್ನಕ್ಷೀರಭೋಜನಾಃ ।**
**ಆರಟ್ಟಾ ನಾಮ ವಾಹೀಕಾ ವರ್ಜನೀಯಾ ವಿಪಶ್ಚಿತಾ ॥೩೭॥**

ಸಂಕರಜಾತಿಯ ಮಕ್ಕಳನ್ನು ಹೊಂದಿರುವ, ನೀಚರಾದ, ಸಕಲರ ಅನ್ನವನ್ನೂ ತಿನ್ನುವ, ಎಲ್ಲ ಪ್ರಾಣಿಗಳ ಹಾಲನ್ನೂ ಕುಡಿಯುವ ಆರಟ್ಟ ಎಂಬ ಹೆಸರಿನ ವಾಹೀಕರನ್ನು ವಿದ್ವಾಂಸನಾದವನು ವರ್ಜಿಸಬೇಕು. (ಅವರ ಸಹವಾಸವನ್ನೂ ಮಾಡಬಾರದು)"–ಹೀಗೆಂಬುದಾಗಿ ಆ ಬ್ರಾಹ್ಮಣನು ಹೇಳಿದನು.

ಅಯ್ಯೋ ಶಲ್ಯ! ಇಷ್ಟು ಮಾತ್ರವೇ ಅಲ್ಲ. ಪುನಃ ನಿನ್ನೊಡನೆ ಇನ್ನೂ ಹೆಚ್ಚಿನ ವಿಚಾರಗಳನ್ನು ಹೇಳುತ್ತೇನೆ. ಮತ್ತೊಬ್ಬ ಬ್ರಾಹ್ಮಣನು ಈ ವಿಷಯವನ್ನು ನನಗೆ ಒಮ್ಮೆ ಕುರುಗಳ ಸಭೆಯಲ್ಲಿ ಹೀಗೆ ಹೇಳಿದನು:

**ಯುಗನ್ಧರೇ ಪಯಃ ಪೀತ್ವಾ ಪ್ರೋಷ್ಯ ಚಾಪ್ಯಚ್ಯುತಸ್ಥಲೇ ।**
**ತದ್ವದ್ಭೂತಿಲಯೇ ಸ್ನಾತ್ವಾ ಕಥಂ ಸ್ವರ್ಗಂ ಗಮಿಷ್ಯತಿ ॥೩೮॥**

"ಯುಗಂಧರನಗರದಲ್ಲಿ ಹಾಲುಕುಡಿದು, ಅಚ್ಯುತಸ್ಥಳ ಎಂಬ ಹೆಸರಿನ ನಗರದಲ್ಲಿ ಒಂದು ರಾತ್ರಿ ತಂಗಿದ್ದು, ಭೂತಿಲಯದಲ್ಲಿ ಸ್ನಾನಮಾಡಿದವನು ಸ್ವರ್ಗಕ್ಕೆ ಹೇಗೆ ಹೋಗುತ್ತಾನೆ? (ಯುಗಂಧರದಲ್ಲಿ ಹಾಲು ಕುಡಿಯುವುದೆಂದರೆ: ಅಪವಿತ್ರವಾದ ಕತ್ತೆ-ಒಂಟೆಗಳ ಹಾಲುಕುಡಿಯುವುದು. ಆ ಸ್ಥಳದಲ್ಲಿ ಆ ಹಾಲನ್ನು ಬಿಟ್ಟರೆ ಬೇರೆ ಹಾಲೇ ಸಿಕ್ಕುವುದಿಲ್ಲ. ಆದುದರಿಂದ ಕತ್ತೆ-ಒಂಟೆಗಳ ಹಾಲು ಕುಡಿಯುವುದು ಅಲ್ಲಿ ಅನಿವಾರ್ಯವಾಗುತ್ತದೆ. ಆದರೆ ಪರಲೋಕಪ್ರಾಪ್ತಿಯ ದೃಷ್ಟಿಯಿಂದ ಇದು ಮಹಾಪಾಪಕರ. ಅಚ್ಯುತಸ್ಥಳದಲ್ಲಿ ಮಲಗುವುದೆಂದರೆ: ಆ ಊರಿನಲ್ಲಿ ಯಾವ ವಿಧವಾದ ಕಟ್ಟುಪಾಡುಗಳೂ ಇಲ್ಲದೇ ಕಾಮತೃಪ್ತಿಗಾಗಿಯೇ

ಸ್ತ್ರೀ-ಪುರುಷರ ಸಮಾಗಮವಾಗುತ್ತಿರುತ್ತದೆ. ಆ ಊರಿಗೆ ಹೋಗಿ ತಂಗಿದವರೂ ಹಾಗೆಯೇ ಮಾಡಬೇಕಾಗುತ್ತದೆ. ಆದುದರಿಂದ ಅಚ್ಯುತಸ್ಥಳದಲ್ಲಿ ರಾತ್ರಿಯ ವೇಳೆಯಲ್ಲಿ ತಂಗುವುದು ಪಾಪಕ್ಕೆ ಎಡೆಮಾಡಿಕೊಡುತ್ತದೆ. ಪುಣ್ಯಲೋಕಗಳ ಪ್ರಾಪ್ತಿಗೆ ಅವಕಾಶವಾಗುವುದಿಲ್ಲ. ಭೂತಿಲಯದಲ್ಲಿ ಸ್ನಾನವು ಪಾಪಕರ. ಹೇಗೆಂದರೆ ಭೂತಿಲಯದಲ್ಲಿ ಇರುವುದು ಒಂದೇ ಬಾವಿ. ಆ ಬಾವಿಯ ನೀರನ್ನೇ ಎಲ್ಲರೂ ಉಪಯೋಗಿಸ ಬೇಕು. ಈ ಕಾರಣದಿಂದ ಆ ಬಾವಿಯು ಸ್ಪರ್ಶದೋಷದಿಂದ ಕೂಡಿರುತ್ತದೆ. ಅಂತಹ ಬಾವಿಯಲ್ಲಿ ಸ್ನಾನಮಾಡುವುದರಿಂದ ಪಾಪಗಳು ಹೋಗುವುದಕ್ಕೆ ಬದಲಾಗಿ ಪಾಪಸಂಚಯವೇ ಆಗುತ್ತದೆ. ಇದರಿಂದ ಸ್ವರ್ಗಪ್ರಾಪ್ತಿಗೆ ಅವಕಾಶವಾಗುವುದಿಲ್ಲ.) [ವ್ಯಾಖ್ಯಾನದ ಪ್ರಕಾರ ಇದನ್ನು ವಿವರಿಸಲಾಗಿದೆ.]

**ಪಞ್ಚ ನದ್ಯೋ ವಹನ್ತ್ಯೇತಾ ಯತ್ರ ನಿಃಸೃತ್ಯ ಪರ್ವತಾತ್ ।**
**ಆರಟ್ಟಾನಾಮ ವಾಹೀಕಾ ನ ತೇಷ್ವಾರ್ಯೋ ದ್ವ್ಯಹಂ ವಸೇತ್ ॥**

ಹಿಮವತ್ಪರ್ವತದಿಂದ ಹರಿದುಬರುವ ಐದು ನದಿಗಳು ಎಲ್ಲಿ ಪ್ರವಹಿಸುತ್ತವೆಯೋ–ಅಲ್ಲಿ ಆರಟ್ಟ ಎಂಬ ಹೆಸರಿನಿಂದ ಪ್ರಸಿದ್ಧವಾದ ವಾಹೀಕರ ದೇಶವಿದೆ. ಆರ್ಯರು ಆ ದೇಶದಲ್ಲಿ ಎರಡು ದಿವಸಗಳು ಸಹ ತಂಗಬಾರದು.

**ವಹಿಶ್ಚ ನಾಮ ಹೀಕಶ್ಚ ವಿಪಾಶಾಯಾಂ ಪಿಶಾಚಕೌ ।**
**ತಯೋರಪತ್ಯಂ ವಾಹೀಕಾ ನೈಷಾ ಸೃಷ್ಟಿಃ ಪ್ರಜಾಪತೇಃ ।**
**ತೇ ಕಥಂ ವಿವಿಧಾನ್ಧರ್ಮಾನ್ ಜ್ಞಾಸ್ಯನ್ತೇ ಹೀನಯೋನಯಃ ॥**

ವಿಪಾಶಾ (ಬೀಯಾಸ್) ನದಿಯಲ್ಲಿ ಎರಡು ಪಿಶಾಚಿಗಳಿವೆ. ಆ ಪಿಶಾಚಿಗಳಲ್ಲಿ ಒಂದರ ಹೆಸರು 'ವಹಿ' ಮತ್ತೊಂದರ ಹೆಸರು 'ಹೀಕ' ಈ ಎರಡು ಪಿಶಾಚಿಗಳ ಸಂತಾನಗಳಿಗೆ 'ವಾಹೀಕರು' ಎಂದು ಹೆಸರಾಗಿದೆ. ಅವರು ಪ್ರಜಾಪತಿಯ ಸೃಷ್ಟಿಗೆ ಸೇರಿದವರಲ್ಲ. ಹೀನಯೋನಿಗಳಲ್ಲಿ ಜನಿಸಿ ರುವ ಅವರು ವಿಧ-ವಿಧವಾದ ಧರ್ಮಗಳನ್ನು ಹೇಗೆ ತಾನೇ ತಿಳಿಯುವರು?

**ಕಾರಸ್ಕರಾನ್ಮಾಹಿಷಕಾನ್ಕುರಣ್ಡಾನ್ಕೇರಲಾಂಸ್ತಥಾ ।**
**ಕರ್ಕೋಟಕಾನ್ವೀರಕಾಂಶ್ಚ ದುರ್ಧರ್ಮಾಂಶ್ಚ ವಿಸರ್ಜಯೇತ್ ॥**

ಕಾರಸ್ಕರ, ಮಾಹಿಷಕ, ಕುರಂಡ, ಕೇರಳ, ಕರ್ಕೋಟಕ ಮತ್ತು ವೀರಕ-ಈ ದೇಶಗಳ ಧರ್ಮಗಳು (ಆಚಾರ-ವ್ಯವಹಾರಗಳು) ಬಹಳ ದೂಷಿತವಾಗಿವೆ. ಆದುದರಿಂದ ಈ ದೇಶಗಳನ್ನೂ ತ್ಯಾಗಮಾಡಬೇಕು."

ಮರದ ಪೀಪಾಯನ್ನೇ ನಡುಕಟ್ಟಾಗಿ ಹೊಂದಿದ್ದ ಒಬ್ಬಳು ರಾಕ್ಷಸಿಯು-ತೀರ್ಥಯಾತ್ರೆಗೆ ಹೊರಟಿದ್ದವನ ಮನೆಯಲ್ಲಿ ಒಂದು ರಾತ್ರಿ ತಂಗಿದ್ದು ಅವನೊಡನೆ ಈ ಮಾತನ್ನು ಹೇಳಿದಳು:

**ಆರಟ್ಟಾ ನಾಮ ತೇ ದೇಶಾ ವಾಹೀಕಂ ನಾಮ ತಜ್ಜಲಮ್ ।**
**ಬ್ರಾಹ್ಮಣಾಪಸದಾ ಯತ್ರ ತುಲ್ಯಕಾಲಾಃ ಪ್ರಜಾಪತೇಃ ॥೪೫॥**

"ಪ್ರಜಾಪತಿಬ್ರಹ್ಮನ ಸಮಕಾಲೀನರಾದ (ಅತ್ಯಂತಪ್ರಾಚೀನರಾದ) ಬ್ರಾಹ್ಮಣಾಪಸದರ (ವೇದಧರ್ಮಕ್ಕೆ ವಿರುದ್ಧವಾದ ಆಚರಣೆಯುಳ್ಳವರ) ವಾಸಸ್ಥಳವೇ 'ಆರಟ್ಟ' ಎಂಬ ಹೆಸರಿನಿಂದ ಪ್ರಸಿದ್ಧವಾದ ದೇಶವಾಗಿದೆ. ಅಲ್ಲಿರುವ ನೀರಿಗೆ 'ವಾಹೀಕ' ಎಂದು ಹೆಸರು.

**ವೇದಾ ನ ತೇಷಾಂ ವೇದ್ಯಶ್ಚ ಯಜ್ಞಾ ಯಜನಮೇವ ಚ ।**
**ವ್ರಾತ್ಯಾನಾಂ ದಾಸಮೀಯಾನಾಮನ್ನಂ ದೇವಾ ನ ಭುಞ್ಜತೇ ॥೪೬॥**

ಅಲ್ಲಿರುವ ಬ್ರಾಹ್ಮಣಾಧಮರಿಗೆ ವೇದಗಳ ಜ್ಞಾನವಿಲ್ಲ. ಅಲ್ಲಿ ಯಜ್ಞವೇದಿಗಳಿಲ್ಲ. ಆ ಪ್ರದೇಶದಲ್ಲಿ ಯಜ್ಞ-ಯಾಗಾದಿಗಳೂ ನಡೆಯುವುದಿಲ್ಲ. ಅಲ್ಲಿ ಸಂಸ್ಕಾರಹೀನರ ಮತ್ತು ಸೇವಕರೊಡನೆ ಸಮಾಗಮ ಮಾಡುವ ಕುಲಟೆಯರ ಸಂತಾನವಿದೆ. ಆದುದರಿಂದಲೇ ಅವರು ಅರ್ಪಿಸುವ ಅನ್ನವನ್ನು ದೇವತೆಗಳು ಪ್ರತಿಗ್ರಹಿಸುವುದಿಲ್ಲ.

**ಪ್ರಸ್ಥಲಾ ಮದ್ರಗಾನ್ಧಾರಾ ಆರಟ್ಟಾ ನಾಮತಃ ಖಶಾಃ ।**
**ವಸಾತಿಸಿನ್ಧುಸೌವೀರಾ ಇತಿ ಪ್ರಾಯೋಽತಿಕುತ್ಸಿತಾಃ ॥೪೭॥**

ಪ್ರಸ್ಥಲ, ಮದ್ರ, ಗಾಂಧಾರ, ಆರಟ್ಟ, ಖಶ, ವಸಾತಿ, ಸಿಂಧು ಮತ್ತು ಸೌವೀರ-ಈ ಪ್ರದೇಶಗಳು ಪ್ರಾಯಶಃ ಅತ್ಯಂತ ನಿಂದಿತವಾದುವುಗಳು."

ಳಳನೆಯ ಅಧ್ಯಾಯವು ಮುಗಿಯಿತು.

## ಕರ್ಣನು ಪುನಃ ಮದ್ರ-ವಾಹೀಕರ ದೋಷಗಳನ್ನು ಹೇಳಿದುದು: ಶಲ್ಯನ ಉತ್ತರ: ದುರ್ಯೋಧನನು ಇಬ್ಬರನ್ನೂ ಸಮಾಧಾನಗೊಳಿಸಿದುದು

ಕರ್ಣನು ಪುನಃ ಮದ್ರಾದಿ ದೇಶಗಳ ನಿಂದನೆಯನ್ನು ಮುಂದುವರಿಸಿ ಶಲ್ಯನೊಡನೆ ಹೇಳುತ್ತಾನೆ:

"ಶಲ್ಯ! ನಾನು ಈ ಹಿಂದೆ ಹೇಳಿದುದೆಲ್ಲವನ್ನೂ ಚೆನ್ನಾಗಿ ಮನದಟ್ಟು ಮಾಡಿಕೋ. ಇನ್ನೂ ಅನೇಕವಿಷಯಗಳನ್ನು ನಿನ್ನೊಡನೆ ಹೇಳುತ್ತೇನೆ. ನಾನು ಹೇಳುವುದೆಲ್ಲವನ್ನೂ ಏಕಾಗ್ರವಾದ ಮನಸ್ಸಿನಿಂದ ಚೆನ್ನಾಗಿ ಕೇಳು.

ಹಿಂದೊಮ್ಮೆ ಒಬ್ಬ ಬ್ರಾಹ್ಮಣನು ನನ್ನ ಮನೆಗೆ ಅತಿಥಿಯಾಗಿ ಬಂದಿದ್ದನು. ನಮ್ಮ ಮನೆಯ ಆಚಾರ-ವಿಚಾರ-ವ್ಯವಹಾರಗಳನ್ನು ನೋಡಿ ಸುಪ್ರೀತನಾಗಿ ಈ ಮಾತುಗಳನ್ನು ಹೇಳಿದನು:

"ನಾನು ಬಹಳ ಕಾಲದವರೆಗೆ ಹಿಮಾಲಯದ ಶಿಖರದಲ್ಲಿ (ತಪ್ಪಲು ಪ್ರದೇಶಗಳಲ್ಲಿ) ಏಕಾಕಿಯಾಗಿ ವಾಸಮಾಡಿಕೊಂಡಿದ್ದೆನು. ನಾನು ನಾನಾವಿಧವಾದ ಧರ್ಮಗಳನ್ನು ಅನುಸರಿಸುವ ಅನೇಕದೇಶಗಳನ್ನೂ ನೋಡಿರುವೆನು.

**ನ ಚ ಕೇನ ಚ ಧರ್ಮೇಣ ವಿರುಧ್ಯನ್ತೇ ಪ್ರಜಾ ಇಮಾಃ।**
**ಸರ್ವಂ ಹಿ ತೇಬ್ರುವನ್ಧರ್ಮಂ ಯದುಕ್ತಂ ವೇದಪಾರಗೈಃ ॥೪॥**

ಆ ದೇಶಗಳ ಜನರು ಯಾವುದೇ ಕಾರಣದಿಂದಲೂ ಧರ್ಮಕ್ಕೆ ವಿರುದ್ಧವಾಗಿ ನಡೆಯುತ್ತಿರಲಿಲ್ಲ. ವೇದಪಾರಂಗತರಾದ ವಿದ್ವಾಂಸರಿಂದ ಯಾವ ಸನಾತನಧರ್ಮವು ಹೇಳಲ್ಪಟ್ಟಿರುವುದೋ-ಆ ಧರ್ಮವನ್ನೇ ಅವರು ಮಾನ್ಯಮಾಡುತ್ತಿದ್ದರು ಮತ್ತು ಆ ಧರ್ಮದ ವಿಷಯವಾಗಿಯೇ ಮಾತನಾಡುತ್ತಿದ್ದರು. ವಿಭಿನ್ನವಾದ ಧರ್ಮಗಳನ್ನು ಹೊಂದಿದ್ದ ಹಲವಾರು ದೇಶಗಳನ್ನು ಸುತ್ತಿಕೊಂಡು ನಾನು ಕಡೆಗೆ ವಾಹೀಕದೇಶಕ್ಕೆ ಬಂದೆನು. ಆ ದೇಶದಲ್ಲಿ ನಾನು ಇಂತಹ ಸ್ಥಿತಿಯನ್ನು ನೋಡಿದೆನು.

**ತತ್ರ ವೈ ಬ್ರಾಹ್ಮಣೋ ಭೂತ್ವಾ ತತೋ ಭವತಿ ಕ್ಷತ್ರಿಯಃ ।**
**ವೈಶ್ಯಃ ಶೂದ್ರಶ್ಚ ವಾಹೀಕಸ್ತತೋ ಭವತಿ ನಾಪಿತಃ ॥೬॥**
**ನಾಪಿತಶ್ಚ ತತೋ ಭೂತ್ವಾ ಪುನರ್ಭವತಿ ಬ್ರಾಹ್ಮಣಃ ।**
**ದ್ವಿಜೋ ಭೂತ್ವಾ ಚ ತತ್ರೈವ ಪುನರ್ದಾಸೋಽಭಿಜಾಯತೇ ॥೭॥**

ಆ ವಾಹೀಕದೇಶದಲ್ಲಿ ಮೊದಲು ಬ್ರಾಹ್ಮಣನಾಗಿದ್ದವನು ಅನಂತರ ಕ್ಷತ್ರಿಯನಾಗುತ್ತಾನೆ. ಅನಂತರ ವೈಶ್ಯನಾಗುತ್ತಾನೆ. ಬಳಿಕ ಶೂದ್ರನೂ ಆಗುತ್ತಾನೆ. ಅನಂತರ ನಾಪಿತನೂ ಆಗಿ ಪುನಃ ಬ್ರಾಹ್ಮಣನಾಗುತ್ತಾನೆ. ಬ್ರಾಹ್ಮಣನಾಗಿದ್ದವನು ಪುನಃ ಅಲ್ಲಿಯೇ ದಾಸನೂ ಆಗುತ್ತಾನೆ. (ಆ ದೇಶದಲ್ಲಿ ವರ್ಣಾಶ್ರಮಗಳ ವ್ಯವಸ್ಥೆಯಿಲ್ಲ. ಯಾವ ಕರ್ಮವನ್ನು ಯಾರು ಮಾಡಬೇಕೆಂಬ ನಿಯಮವೂ ಇಲ್ಲ.)

ಒಂದೇ ವಂಶದಲ್ಲಿಯೇ ಕೆಲವರು ಬ್ರಾಹ್ಮಣರೂ ಇರುತ್ತಾರೆ. ಕೆಲವರು ಸ್ವೇಚ್ಛಾಚಾರಿಗಳಾಗಿ ವರ್ಣಸಂಕರಸಂತಾನಕ್ಕೆ ಕಾರಣರಾದವರೂ ಇರುತ್ತಾರೆ. ಗಾಂಧಾರರು, ಮದ್ರಕರು, ವಾಹೀಕರು–ಇವರೆಲ್ಲರೂ ಸಾಮಾನ್ಯವಾಗಿ ಮಂದಬುದ್ಧಿಯವರು. ಆ ದೇಶದಲ್ಲಿಯೇ ಧರ್ಮಸಂಕರವು ಅತಿವೇಗವಾಗಿ ಹರಡುತ್ತಿರುವುದೆಂಬ ಮಾತನ್ನು ನಾನು ಕೇಳಿದೆನು. ನಾನು ಈ ಭೂಮಂಡಲದಲ್ಲಿ ಸರ್ವತ್ರ ಸಂಚರಿಸಿ ವಾಹೀಕರಲ್ಲಿ ಮಾತ್ರವೇ ಇಂತಹ ವಿಪರ್ಯಾಸವನ್ನು ಕಂಡೆನು."

ಹೀಗೆ ಆ ಬ್ರಾಹ್ಮಣನು ಹೇಳಿದನು. ಅಯ್ಯೋ ಶಲ್ಯ! ವಾಹೀಕರ ವಿಷಯವು ಇಷ್ಟಕ್ಕೇ ಮುಗಿದುಹೋಯಿತೆಂದು ತಿಳಿಯಬೇಡ. ನಾನು ಹೇಳಿದುದೆಲ್ಲವನ್ನೂ ನೀನು ಮನದಟ್ಟುಮಾಡಿಕೊಳ್ಳುತ್ತಲೇ ಇರು. ಪುನಃ ಈ ವಿಷಯವನ್ನೇ ಮುಂದುವರಿಸಿ ಹೇಳುತ್ತೇನೆ. ನನ್ನನ್ನು ಸಂಧಿಸಿದ ಮತ್ತೊಬ್ಬ ಯಾತ್ರಿಕನೂ ವಾಹೀಕರ ವಿಷಯದಲ್ಲಿ ಕುತ್ಸಿತವಾದ ಈ ಮಾತುಗಳನ್ನು ಹೇಳಿದನು:

**ಸತೀ ಪುರಾ ಹೃತಾ ಕಾಚಿದಾರಟ್ಟಾತ್ಕಿಲ ದಸ್ಯುಭಿಃ ।**
**ಅಧರ್ಮತಶ್ಚೋಪಯಾತಾ ಸಾ ತಾನಭ್ಯಶಪತ್ತತಃ ॥೧೧॥**

"ಹಿಂದೊಮ್ಮೆ ದರೋಡೆಕೋರರು ಆರಟ್ಟದೇಶದಿಂದ ಸಾಧ್ವಿಯೊಬ್ಬ

ಳನ್ನು ಅಪಹರಿಸಿಕೊಂಡು ಹೋದರು ಮತ್ತು ಧರ್ಮಕ್ಕೆ ವಿರುದ್ಧವಾಗಿ ಅವಳೊಡನೆ ಸಮಾಗಮವನ್ನು ಮಾಡಿದರು. ಅದರಿಂದ ಕುಪಿತಳಾದ ಆ ಸಾಧ್ವಿಯು ಅವರನ್ನು ಶಪಿಸಿದಳು:

**ಬಾಲಾಂ ಬನ್ಧುಮತೀಂ ಯನ್ಮಾಮಧರ್ಮೇಣೋಪಗಚ್ಛಥ।**
**ತಸ್ಮಾನ್ನಾರ್ಯೋ ಭವಿಷ್ಯನ್ತಿ ಬನ್ಧಕ್ಯೋ ವೈ ಕುಲಸ್ಯ ಚ।**
**ನ ಚೈವಾಸ್ಮಾತ್ಪ್ರಮೋಕ್ಷ್ಯಧ್ವಂ ಘೋರಾತ್ಪಾಪಾನ್ನರಾಧಮಾಃ ॥೧೨॥**

"ನಾನು ಇನ್ನೂ ಬಾಲಕಿಯು. ಬಂಧು-ಬಾಂಧವರನ್ನು ಹೊಂದಿರುವವಳು. ಆದರೂ ಸಹ ನನ್ನನ್ನು ನೀವು ಅಪಹರಿಸಿ ತಂದು ನನ್ನೊಡನೆ ಧರ್ಮಕ್ಕೆ ವಿರುದ್ಧವಾದ ರೀತಿಯಲ್ಲಿ ಸಮಾಗಮವನ್ನು ಮಾಡಿರುವಿರಿ. ಆದುದರಿಂದ ಇನ್ನು ಮುಂದೆ ನಿಮ್ಮ ಕುಲದಲ್ಲಿ ಹುಟ್ಟುವ ಸ್ತ್ರೀಯರೆಲ್ಲರೂ ವ್ಯಭಿಚಾರಿಣಿಯರಾಗುತ್ತಾರೆ. ನರಾಧಮರೇ! ಈ ಘೋರಪಾಪದಿಂದ ನಿಮಗೆ ಮುಕ್ತಿಯೇ ಇಲ್ಲ."

**ತಸ್ಮಾತ್ತೇಷಾಂ ಭಾಗಹರಾ ಭಾಗಿನೇಯಾ ನ ಸೂನವಃ ॥೧೩॥**

ಆದುದರಿಂದಲೇ ಅವರ ಧನಸಂಪತ್ತುಗಳಿಗೆ ಭಾಗಿಗಳಾಗುವವರು ಅಕ್ಕ-ತಂಗಿಯರ ಮಕ್ಕಳೇ ಹೊರತು ಗಂಡುಮಕ್ಕಳಲ್ಲ."

ಕುರುಗಳು, ಪಾಂಚಾಲರು, ಶಾಲ್ವರು, ಮತ್ಸ್ಯರು, ನೈಮಿಷರು, ಕೋಸಲರು, ಕಾಶಿದೇಶೀಯರು, ಅಂಗರು, ಕಳಿಂಗರು, ಮಾಗಧರು, ಮಹಾಭಾಗರಾದ ಚೇದಿಗಳು-ಇವರೆಲ್ಲರೂ ಸನಾತನಧರ್ಮವನ್ನು ತಿಳಿದವರಾಗಿರುತ್ತಾರೆ. ವಾಹೀಕದೇಶವೊಂದನ್ನು ಬಿಟ್ಟು ಉಳಿದ ದೇಶಗಳಲ್ಲಿ ನಾವು ಅನೇಕ ಸಾಧು-ಸತ್ಪುರುಷರನ್ನು ಕಾಣಬಹುದಾಗಿದೆ.

**ಆ ಮತ್ಸ್ಯೇಭ್ಯಃ ಕುರುಪಞ್ಚಾಲದೇಶ್ಯಾಃ**
**ಆ ನೈಮಿಷಾಚ್ಚೇದಯೋ ಯೇ ವಿಶಿಷ್ಟಾಃ।**
**ಧರ್ಮಂ ಪುರಾಣಮುಪಜೀವನ್ತಿ ಸನ್ತೋ**
**ಮದ್ರಾನೃತೇ ಪಞ್ಚನದಾಂಶ್ಚ ಜಿಹ್ಮಾನ್ ॥೧೪॥**

ಮತ್ಸ್ಯದೇಶದಿಂದ ಹಿಡಿದು ಪಾಂಚಾಲದೇಶದವರೆಗೂ ನೈಮಿಷಾರಣ್ಯದಿಂದ ಹಿಡಿದು ಚೇದಿದೇಶದವರೆಗೂ ಇರುವ ದೇಶಗಳಲ್ಲಿ ವಾಸ

ಮಾಡುವ ಜನರು ಶ್ರೇಷ್ಠರೂ, ಸಂತರೂ, ಪುರಾತನವಾದ ಸನಾತನಧರ್ಮವನ್ನು ಆಶ್ರಯಿಸಿ ಜೀವನನಿರ್ವಹಣೆಯನ್ನು ಮಾಡುವವರೂ ಆಗಿರುತ್ತಾರೆ. ಮದ್ರದೇಶದವರೂ ಮತ್ತು ಪಂಚನದದೇಶದವರೂ ಇದಕ್ಕೆ ಹೊರತಾಗಿದ್ದಾರೆ. ಇವರು ಅತ್ಯಂತಕುಟಿಲರಾಗಿರುತ್ತಾರೆ. ಶಲ್ಯ! ಅಂತಹ ಮದ್ರದೇಶದ ಪ್ರಜೆಗಳ ರಾಜನೂ ಮತ್ತು ರಕ್ಷಕನೂ ನೀನೇ ಆಗಿರುವೆ. ಅವರು ಮಾಡುವ ಶುಭಾಶುಭಕರ್ಮಗಳಲ್ಲಿ ನಿನಗೂ ಸಹ ಆರನೆಯ ಒಂದು ಭಾಗ ಫಲವು ಲಭಿಸುತ್ತದೆ. ವಿದ್ವಾಂಸನೇ! ನಿಜಸ್ಥಿತಿಯು ಹೀಗಿರುವಾಗ ಧರ್ಮೋಪದೇಶಗಳಲ್ಲಿ ಯಾವ ಮಾತನ್ನೂ ಆಡದೇ ಜಡಪದಾರ್ಥದಂತೆ ಸುಮ್ಮನಿದ್ದುಬಿಡು. (ಧರ್ಮಬಾಹಿರರಾದ ಜನಗಳಿಗೆ ರಾಜನಾಗಿರುವ ನೀನು ಧರ್ಮೋಪದೇಶಮಾಡಲು ಹೊರಟರೆ ಅಂತಹ ಧರ್ಮೋಪದೇಶಕ್ಕೆ ಯಾವ ಬೆಲೆಯೂ ಇಲ್ಲವಾಗುತ್ತದೆ.)

**ಅಥವಾ ದುಷ್ಕೃತಸ್ಯ ತ್ವಂ ಹರ್ತಾ ತೇಷಾಮರಕ್ಷಿತಾ ।**
**ರಕ್ಷಿತಾ ಪುಣ್ಯಭಾಗ್ರಾಜಾ ಪ್ರಜಾನಾಂ ತ್ವಂ ಹ್ಯಪುಣ್ಯಭಾಕ್ ॥೧೮॥**

ಕೂಲಂಕಷವಾಗಿ ಪರಿಶೀಲಿಸಿದರೆ ಪ್ರಜೆಗಳ ಪುಣ್ಯದಲ್ಲಿ ನಿನಗೆ ಭಾಗಸಿಕ್ಕುವುದಿಲ್ಲ. ಏಕೆಂದರೆ: ನೀನು ಪ್ರಜೆಗಳನ್ನು ರಕ್ಷಣೆಮಾಡುತ್ತಿಲ್ಲವಾದುದರಿಂದ (ಅವರು ತಮ್ಮ-ತಮ್ಮ ವರ್ಣಾಶ್ರಮಧರ್ಮಗಳಲ್ಲಿರುವಂತೆ ವ್ಯವಸ್ಥೆಮಾಡದೇ ಇರುವುದರಿಂದ) ಅವರು ಮಾಡುವ ದುಷ್ಕೃತಕ್ಕೇ ನೀನು ಭಾಗಿಯಾಗುವೆ. ಪ್ರಜೆಗಳನ್ನು ರಕ್ಷಿಸುವವನು ಮಾತ್ರವೇ ಅವರು ಮಾಡುವ ಪುಣ್ಯದಲ್ಲಿ ಭಾಗಿಯಾಗುತ್ತಾನೆ. ಆದುದರಿಂದ ಪ್ರಜೆಗಳು ಮಾಡುವ ಪುಣ್ಯಕರ್ಮಗಳ ಫಲಕ್ಕೆ ನೀನೆಂದಿಗೂ ಭಾಗಿಯಾಗುವುದಿಲ್ಲ.

**ಪೂಜ್ಯಮಾನೇ ಪುರಾ ಧರ್ಮೇ ಸರ್ವದೇಶೇಷು ಶಾಶ್ವತೇ ।**
**ಧರ್ಮಂ ಪಾಞ್ಚನದಂ ದೃಷ್ಟ್ವಾ ಧಿಗಿತ್ಯಾಹ ಪಿತಾಮಹಃ ॥೧೯॥**

ಪೂರ್ವಕಾಲದಲ್ಲಿ ಸರ್ವದೇಶಗಳಲ್ಲಿಯೂ ಶಾಶ್ವತವಾದ ಸನಾತನ ಧರ್ಮವು ಪುರಸ್ಕೃತವಾಗುತ್ತಿರಲಾಗಿ ಅತಿಸಂತುಷ್ಟನಾದ ಪಿತಾಮಹನು ಪಂಚನದದೇಶನಿವಾಸಿಗಳ ಧರ್ಮವನ್ನು ನೋಡಿ 'ಇಂತಹ ಧರ್ಮಕ್ಕೆ ಧಿಕ್ಕಾರವಿರಲಿ' –ಎಂದನು.

ಪಂಚನದಪ್ರದೇಶದಲ್ಲಿ ವಾಸಮಾಡುವ, ಸಂಸ್ಕಾರಹೀನರ, ಜಾರಜರ, ಅಶುಭಕರ್ಮಿಗಳ ಧರ್ಮದ ವಿಷಯದಲ್ಲಿ ಬಹಳ ಹಿಂದೆಯೇ ಬ್ರಹ್ಮನೇ ಧಿಕ್ಕಾರಮಾಡಿರುವಾಗ ಅವರಿಗೆ ರಾಜನಾಗಿರುವ ನೀನು ಧರ್ಮೋಪದೇಶವನ್ನು ಏಕೆ ಮಾಡುತ್ತಿರುವೆ?

ಶಲ್ಯರಾಜ! 'ಇಂತಹ ಧರ್ಮಕ್ಕೆ ಧಿಕ್ಕಾರವಿರಲಿ' ಎಂದು ಹೇಳಿ ಪಿತಾಮಹನು ಪಂಚನದದೇಶದ ಧರ್ಮವನ್ನು ಅನಾದರಣೆಮಾಡಿದನು. ಉಳಿದೆಲ್ಲ ದೇಶಗಳ ಜನರೂ ತಮ್ಮ ತಮ್ಮ ವರ್ಣಾಶ್ರಮಧರ್ಮದಲ್ಲಿ ಇರುತ್ತಿರಲಾಗಿ ಬ್ರಹ್ಮನು ಧರ್ಮ-ಕರ್ಮಹೀನರಾದ ಪಂಚನದದೇಶದ ಪ್ರಜೆಗಳನ್ನು ಗೌರವಿಸಲಿಲ್ಲ.

ಶಲ್ಯ! ಇದುವರೆಗೆ ಹೇಳಿದ ವಿಷಯಗಳೆಲ್ಲವನ್ನೂ ನೀನು ಮನದಟ್ಟು ಮಾಡಿಕೊಂಡೆಯಲ್ಲವೇ? ಇದೇ ವಿಷಯದಲ್ಲಿ ನಿನಗೆ ಇನ್ನೂ ಕೆಲವು ವಿಶೇಷ ಸಂಗತಿಗಳನ್ನು ಹೇಳುವೆನು, ಕೇಳು. ಕಲ್ಮಾಷಪಾದನು ಶಾಪದಿಂದ ರಾಕ್ಷಸನಾದನು. ಅವನು ಸರೋವರವೊಂದರಲ್ಲಿ ಮುಳುಗಿಹೋಗುವುದರಲ್ಲಿದ್ದಾಗ ಹೀಗೆ ಹೇಳಿದನು:

**ಕ್ಷತ್ರಿಯಸ್ಯ ಮಲಂ ಭೈಕ್ಷ್ಯಂ ಬ್ರಾಹ್ಮಣಸ್ಯಾಶ್ರುತಂ ಮಲಮ್ ।**
**ಮಲಂ ಪೃಥಿವ್ಯಾಂ ವಾಹೀಕಾಃ ಸ್ತ್ರೀಣಾಂ ಮದ್ರಸ್ತ್ರಿಯೋ ಮಲಮ್ ॥**

"ಕ್ಷತ್ರಿಯನಿಗೆ ಭಿಕ್ಷಾವೃತ್ತಿಯು ಹೊಲಸು. ಬ್ರಾಹ್ಮಣನು ವೇದ-ಶಾಸ್ತ್ರಗಳನ್ನು ಅಧ್ಯಯನಮಾಡದೇ (ವಿದ್ಯಾವಂತನಾಗದೇ) ಇರುವುದು ಹೊಲಸು. ವಾಹೀಕರು ಭೂಮಿಗೇ ಕೊಳೆ ಇದ್ದಂತೆ. ಸ್ತ್ರೀಯರಲ್ಲಿ ಮದ್ರ ದೇಶದ ಸ್ತ್ರೀಯರು ದೋಷಯುಕ್ತರಾದವರು."

ಮುಳುಗಿಹೋಗುತ್ತಿದ್ದ ಕಲ್ಮಾಷಪಾದರಾಕ್ಷಸನನ್ನು ರಾಜನೊಬ್ಬನು ಮೇಲಕ್ಕೆತ್ತಿ ಇನ್ನೂ ಹಲವಾರು ಪ್ರಶ್ನೆಗಳನ್ನು ಕೇಳಿದನು. ಆ ಎಲ್ಲ ಪ್ರಶ್ನೆಗಳಿಗೂ ರಾಕ್ಷಸನು ಸಮಂಜಸವಾದ ಉತ್ತರಗಳನ್ನು ಕೊಟ್ಟನು. ರಾಕ್ಷಸನು ಕೊಟ್ಟ ಉತ್ತರಗಳನ್ನೇ ನಿನಗೂ ಹೇಳುತ್ತೇನೆ.

**ಮನುಷ್ಯಾಣಾಂ ಮಲಂ ಮ್ಲೇಚ್ಛಾ**
**ಮ್ಲೇಚ್ಛಾನಾಂ ಶೌಣ್ಡಿಕಾ ಮಲಮ್ ।**

ಶೌಣ್ಡಿಕಾನಾಂ ಮಲಂ ಷಣ್ಡಾಃ
ಷಣ್ಡಾನಾಂ ರಾಜಯಾಜಕಾಃ ॥೨೫॥

ರಾಜಯಾಜಕಯಾಜ್ಯಾನಾಂ ಮದ್ರಕಾಣಾಂ ಚ ಯನ್ಮಲಮ್ ।
ತದ್ಭವೇದ್ವೈ ತವ ಮಲಂ ಯದ್ಯಸ್ಮಾನ್ನವಿಮುಞ್ಚಸಿ ॥೨೬॥

"ಮನುಷ್ಯರಲ್ಲಿ ಮ್ಲೇಚ್ಛರು ಹೊಲಸು ಮನುಷ್ಯರು. ಮ್ಲೇಚ್ಛರಲ್ಲಿ ಹೆಂಡವನ್ನು ಮಾರುವವನು ಅಥವಾ ಹೆಂಡವನ್ನು ಇಳಿಸುವವನು ಹೊಲಸು ಮನುಷ್ಯನು. ಹೆಂಡಮಾರುವವರಲ್ಲಿ ನಪುಂಸಕರು ಹೊಲಸು ಮನುಷ್ಯರು. ನಪುಂಸಕರಲ್ಲಿ ರಾಜಪುರೋಹಿತರು ಹೊಲಸು ಮನುಷ್ಯರು. ನೀನೇನಾದರೂ ನನ್ನನ್ನು ಉದ್ಧರಿಸದಿದ್ದರೆ ರಾಜಪುರೋಹಿತರಿಗೂ, ಕ್ಷತ್ರಿಯನನ್ನೇ ಪುರೋಹಿತ ನನ್ನಾಗಿ ಇಟ್ಟುಕೊಂಡವರಿಗೂ, (ಅಥವಾ ರಾಜಪುರೋಹಿತರ ಪುರೋಹಿತ ರಿಗೂ) ಮದ್ರಕರಿಗೂ ಯಾವ ಮಹಾದೋಷಗಳಿವೆಯೋ ಆ ಮಹಾದೋಷಗಳೂ ನಿನ್ನವಾಗುತ್ತವೆ.

ಯಾರಿಗೆ ರಾಕ್ಷಸರ ಉಪದ್ರವವಿರುವುದೋ-ಯಾರು ವಿಷದ ಪ್ರಭಾವ ದಿಂದ ಹಿಂಸೆಪಡುತ್ತಿರುವರೋ–ಅಂತಹವರಿಗೆ, ರಾಕ್ಷಸರ ಉಪದ್ರವದಿಂದ ತಪ್ಪಿಸಿಕೊಳ್ಳಲು ಮತ್ತು ವಿಷದ ಪ್ರಭಾವವನ್ನು ಹೋಗಲಾಡಿಸಲು, ರಾಕ್ಷಸಭೈಷಜವೆಂಬ ಶ್ರೇಷ್ಠವಾದ ಈ ಸಿದ್ಧವಚನವು (ಸಿದ್ಧಮಂತ್ರವು) ಹೇಳಲ್ಪಟ್ಟಿದೆ.

ಬ್ರಾಹ್ಮಂ ಪಞ್ಚಾಲಾಃ ಕೌರವೇಯಾಸ್ತು ಧರ್ಮ್ಯಂ
ಸತ್ಯಂ ಮತ್ಸ್ಯಾಃ ಶೂರಸೇನಾಶ್ಚ ಯಜ್ಞಮ್ ।
ಪ್ರಾಚ್ಯಾ ದಾಸಾ ವೃಷಲಾ ದಾಕ್ಷಿಣಾತ್ಯಾಃ
ಸ್ತೇನಾ ವಾಹೀಕಾಃ ಸಂಕರಾ ವೈ ಸುರಾಷ್ಟ್ರಾಃ ॥೨೭॥

ಪಾಂಚಾಲದೇಶದ ಜನರು ವೇದೋಕ್ತವಾದ ಕರ್ಮಗಳನ್ನು ಅನುಷ್ಠಾನ ಮಾಡುತ್ತಾರೆ. ಕುರುದೇಶದ ಜನರು ಧರ್ಮಾನುಕೂಲವಾದ ಕಾರ್ಯಗಳಲ್ಲಿ ತತ್ಪರರಾಗಿರುತ್ತಾರೆ. ಮತ್ಸ್ಯದೇಶದ ಜನರು ಸತ್ಯನಿಷ್ಠರಾಗಿರುತ್ತಾರೆ. ಶೂರಸೇನದೇಶದ ಜನರು ಯಜ್ಞ-ಯಾಗಾದಿಗಳಲ್ಲಿ ನಿರತರಾಗಿರುತ್ತಾರೆ. ಪೂರ್ವದೇಶದ ಜನರು ಸೇವಾಕಾರ್ಯವನ್ನು ಮಾಡತಕ್ಕವರು. ದಕ್ಷಿಣದೇಶದವರು ವೃಷಲರು. ವಾಹೀಕದೇಶದ ಜನರು ಕಳ್ಳರು. ಸೌರಾಷ್ಟ್ರದೇಶದ ಜನರು ಸಂಕರವರ್ಣದವರು.

ಕೃತಘ್ನತಾ ಪರವಿತ್ತಾಪಹಾರೋ
ಮದ್ಯಪಾನಂ ಗುರುದಾರಾವಮರ್ದಃ ।
ವಾಕ್ಪಾರುಷ್ಯಂ ಗೋವಧೋ ರಾತ್ರಿಚರ್ಯಾ
ಬಹಿರ್ಗೇಹಂ ಪರವಸ್ತ್ರೋಪಭೋಗಃ ॥
ಯೇಷಾಂ ಧರ್ಮಸ್ತಾನ್ಪ್ರತಿ ನಾಸ್ತ್ಯಧರ್ಮೋ
ಹ್ಯಾರಟ್ಟಾನಾಂ ಪಞ್ಚನದಾನ್ಧಿಗಸ್ತು ॥೨೯॥

ಕೃತಘ್ನತೆ (ಮಾಡಿದ ಉಪಕಾರವನ್ನು ಸ್ಮರಿಸದೆ ಅಪಕಾರ ಮಾಡುವುದು), ಇತರರ ಐಶ್ವರ್ಯವನ್ನು ಅಪಹರಿಸುವುದು, ಮದ್ಯಪಾನ ವನ್ನು ಮಾಡುವುದು, ಗುರುಪತ್ನೀಗಮನ, ಕಠಿನೋಕ್ತಿಗಳನ್ನಾಡುವುದು, ಗೋವಧೆಮಾಡುವುದು, ರಾತ್ರಿಯ ವೇಳೆಯಲ್ಲಿ ಮನೆಯಿಂದ ಹೊರಗೆ ಅಲೆಯುವುದು, ಇತರರ ಬಟ್ಟೆಗಳನ್ನು ಉಟ್ಟುಕೊಳ್ಳುವುದು–ಇವುಗಳು ಯಾರಿಗೆ ಧರ್ಮವಾಗಿರುವುದೋ, ಅಂತಹ ಆರಟ್ಟರಿಗೆ ಮತ್ತು ಪಂಚನದಪ್ರದೇಶವಾಸಿಗಳಿಗೆ 'ಅಧರ್ಮ' ಎಂಬುದೊಂದು ಇಲ್ಲವೇ ಇಲ್ಲ. ಅಂತಹವರಿಗೆ ದಿಕ್ಕಾರವಿರಲಿ.

ಆ ಪಾಞ್ಚಾಲ್ಯೇಭ್ಯಃ ಕುರವೋ ನೈಮಿಷಾಶ್ಚ
ಮತ್ಸ್ಯಾಶ್ಚೈತೇಽಪ್ಯಥ ಜಾನನ್ತಿ ಧರ್ಮಮ್ ।
ಅಥೋದೀಚ್ಯಾಶ್ಚಾಙ್ಗಕಾ ಮಾಗಧಾಶ್ಚ
ಶಿಷ್ಟಾನ್ಧರ್ಮಾನುಪಜೀವನ್ತಿ ವೃದ್ಧಾಃ ॥೩೦॥

ಪಾಂಚಾಲ, ಕೌರವ, ನೈಮಿಷ ಮತ್ತು ಮತ್ಸ್ಯದೇಶಗಳ ಜನರು ಧರ್ಮವನ್ನು ತಿಳಿದವರಾಗಿದ್ದಾರೆ. ಉತ್ತರ, ಅಂಗ ಮತ್ತು ಮಗಧದೇಶಗಳ ವೃದ್ಧರು ಶಾಸ್ತ್ರೋಕ್ತವಾದ ಧರ್ಮಗಳ ಆಶ್ರಯವನ್ನು ಪಡೆದು ಜೀವನವನ್ನು ನಿರ್ವಹಿಸುತ್ತಾರೆ.

ಪ್ರಾಚೀಂ ದಿಶಂ ಶ್ರಿತಾ ದೇವಾ ಜಾತವೇದಃ ಪುರೋಗಮಾಃ ।
ದಕ್ಷಿಣಾಂ ಪಿತರೋ ಗುಪ್ತಾಂ ಯಮೇನ ಶುಭಕರ್ಮಣಾ ॥೩೧॥
ಪ್ರತೀಚೀಂ ವರುಣಃ ಪಾತಿ ಪಾಲಯಾನಃ ಸುರಾನ್ಬಲೀ ।
ಉದೀಚೀಂ ಭಗವಾನ್ಸೋಮೋ ಬ್ರಾಹ್ಮಣೈಃ ಸಹ ರಕ್ಷತಿ ॥೩೨॥

ಅಗ್ನಿಪುರಃಸರರಾದ ದೇವತೆಗಳು ಪೂರ್ವದಿಕ್ಕನ್ನು ಆಶ್ರಯಿಸಿದ್ದಾರೆ. ಪಿತೃಗಳು ಪುಣ್ಯಕರ್ಮನಾದ ಯಮರಾಜನಿಂದ ರಕ್ಷಿತವಾದ ದಕ್ಷಿಣದಿಕ್ಕನ್ನು ಆಶ್ರಯಿಸಿದ್ದಾರೆ. ಬಲಿಷ್ಠನಾದ ವರುಣನು ದೇವತೆಗಳನ್ನು ಸಂರಕ್ಷಿಸುತ್ತಾ ಪಶ್ಚಿಮದಿಕ್ಕಿನ ರಕ್ಷಣೆಯಲ್ಲಿ ತತ್ಪರನಾಗಿರುತ್ತಾನೆ. ಭಗವಂತನಾದ ಸೋಮನು ಬ್ರಾಹ್ಮಣರೊಡನೆ ಉತ್ತರದಿಕ್ಕನ್ನು ಸಂರಕ್ಷಿಸುತ್ತಾನೆ.

**ತಥಾ ರಕ್ಷಃ ಪಿಶಾಚಾಶ್ಚ ಹಿಮವನ್ತಂ ನಗೋತ್ತಮಮ್ ।**
**ಗುಹ್ಯಕಾಶ್ಚ ಮಹಾರಾಜ ಪರ್ವತಂ ಗನ್ಧಮಾದನಮ್ ।**
**ಧ್ರುವಃ ಸರ್ವಾಣಿ ಭೂತಾನಿ ವಿಷ್ಣುಃ ಪಾತಿ ಜನಾರ್ದನಃ ॥೩೩॥**

ರಾಕ್ಷಸ-ಪಿಶಾಚರು ಗಿರಿಶ್ರೇಷ್ಠವಾದ ಹಿಮಾಲಯವನ್ನೂ, ಗುಹ್ಯಕರು ಗಂಧಮಾಧನಪರ್ವತವನ್ನೂ ರಕ್ಷಿಸುತ್ತಾರೆ. ಅವಿನಾಶಿಯಾದ ಮತ್ತು ಸರ್ವವ್ಯಾಪಿಯಾದ ಜನಾರ್ದನನು ಸಮಸ್ತಪ್ರಾಣಿಗಳನ್ನೂ ರಕ್ಷಿಸುತ್ತಾನೆ. (ಆದರೆ ವಾಹೀಕದೇಶದ ಜನರನ್ನು ರಕ್ಷಿಸುವವರೂ ಇಲ್ಲ; ಅನುಗ್ರಹಿಸುವವರೂ ಇಲ್ಲ.)

**ಇಙ್ಗಿತಜ್ಞಾಶ್ಚ ಮಗಧಾಃ ಪ್ರೇಕ್ಷಿತಜ್ಞಾಶ್ಚ ಕೋಸಲಾಃ ।**
**ಅರ್ಧೋಕ್ತಾಃ ಕುರುಪಾಞ್ಚಾಲಾಃ ಶಾಲ್ವಾ ಕೃತ್ಸ್ನಾನುಶಾಸನಾಃ ।**
**ಪರ್ವತೀಯಾಶ್ಚ ವಿಷಮಾ ಯಥೈವ ಶಿಬಯಸ್ತಥಾ ॥೩೪॥**

ಮಗಧದೇಶದ ಜನರು ಮುಖಭಾವದಿಂದಲೇ ಎಲ್ಲ ವಿಷಯಗಳನ್ನೂ ತಿಳಿದುಕೊಳ್ಳುತ್ತಾರೆ. ಕೋಸಲದೇಶದ ಜನರು ನೇತ್ರಗಳ ಭಾವಭಂಗಿ ಗಳಿಂದಲೇ ಮನಸ್ಸಿನಲ್ಲಿರುವ ಅಭಿಪ್ರಾಯವನ್ನು ತಿಳಿದುಕೊಳ್ಳಬಲ್ಲರು. ಕುರು-ಪಾಂಚಾಲದೇಶಗಳ ಜನರು ಅರ್ಧಮಾತಿನಿಂದಲೇ ಸಂಪೂರ್ಣ ವಿಷಯವನ್ನೂ ಗ್ರಹಿಸುತ್ತಾರೆ. ಶಾಲ್ವದೇಶದ ಜನರು ವಿಷಯವನ್ನು ಸಂಪೂರ್ಣವಾಗಿ ಹೇಳಿದನಂತರವೇ ಗ್ರಹಣಮಾಡಬಲ್ಲರು. ಆದರೆ ಶಿಬಿ ದೇಶದ ಜನರಂತೆ ಪರ್ವತಪ್ರದೇಶಗಳ ಜನರೂ-ಇವರೆಲ್ಲರಿಗೂ ವಿಲಕ್ಷಣ ರಾಗಿದ್ದಾರೆ. ಅರ್ಥಾತ್ ಶಿಬಿಗಳೂ ಮತ್ತು ಪರ್ವತೀಯರೂ ವಿಷಯ ವನ್ನು ಆಮೂಲಾಗ್ರವಾಗಿ ಹೇಳಿದನಂತರವೂ ಅರ್ಥಮಾಡಿಕೊಳ್ಳಲಾರರು.

**ಸರ್ವಜ್ಞಾ ಯವನಾ ರಾಜಞ್ಶೂರಾಶ್ಚೈವ ವಿಶೇಷತಃ।**
**ಮ್ಲೇಚ್ಛಾಃ ಸ್ವಸಂಜ್ಞಾನಿಯತಾ ನಾನುಕ್ತಮಿತರೇ ಜನಾಃ।**
**ಪ್ರತಿರಬ್ಧಾಸ್ತು ವಾಹೀಕಾ ನ ಚ ಕೇಚನ ಮದ್ರಕಾಃ ॥೩೬॥**

ಶಲ್ಯ! ಯದ್ಯಪಿ ಯವನಜಾತಿಗೆ ಸೇರಿದ ಮ್ಲೇಚ್ಛರು ಎಲ್ಲವನ್ನೂ ತಿಳಿದವರಾಗಿದ್ದಾರೆ. ಅದರಲ್ಲಿಯೂ ವಿಶೇಷವಾಗಿ ಎಲ್ಲರೂ ಶೂರರೂ ಆಗಿದ್ದಾರೆ. ಆದರೆ ಅವರು ತಾವೇ ರೂಪಿಸಿಕೊಂಡ ಧರ್ಮಸಂಕೇತದಲ್ಲಿಯೇ ನಿರತರಾಗಿರುತ್ತಾರೆ. (ವೈದಿಕಧರ್ಮವನ್ನು ಮಾನ್ಯಮಾಡುವುದಿಲ್ಲ.) ಇತರ ದೇಶಗಳ ಜನರು ಸಂಪೂರ್ಣವಾಗಿ ಎಲ್ಲ ವಿಷಯಗಳನ್ನೂ ವಿಶದವಾಗಿ ಹೇಳದಿದ್ದರೆ ಏನನ್ನೂ ಅರ್ಥಮಾಡಿಕೊಳ್ಳುವುದಿಲ್ಲ. ಆದರೆ ವಾಹೀಕ ದೇಶದವರು ಒಂದು ವಿಷಯವನ್ನು ಹೇಳಿದರೆ ಆ ವಿಷಯವನ್ನು ತಿಳಿದು ಕೊಳ್ಳದೇ ಇರುವುದೂ ಮತ್ತು ಅದರಂತೆ ನಡೆದುಕೊಳ್ಳದೇ ಇರುವುದೂ ಮಾತ್ರವಲ್ಲದೇ ಹೇಳಿದುದಕ್ಕೆ ವಿರೋಧವಾಗಿಯೇ ನಡೆದುಕೊಳ್ಳುತ್ತಾರೆ. ಕೆಲವು ಮದ್ರಕರಿಗಂತೂ ಏನೇನೂ ತಿಳಿಯುವುದೇ ಇಲ್ಲ.

ಶಲ್ಯ! ನೀನು ಇಂತಹವನಾಗಿರುವೆ. ಆದುದರಿಂದ ನೀನು ನನ್ನ ಮಾತಿಗೆ ಯಾವ ಉತ್ತರವನ್ನೂ ಕೊಡಬೇಕಾದ ಆವಶ್ಯಕತೆಯೇ ಇಲ್ಲ

**ಪೃಥಿವ್ಯಾಂ ಸರ್ವದೇಶಾನಾಂ ಮದ್ರಕೋ ಮಲಮುಚ್ಯತೇ ॥೩೭॥**

ಪೃಥಿವಿಯಲ್ಲಿರುವ ಎಲ್ಲ ದೇಶಗಳಲ್ಲಿಯೂ ಮದ್ರದೇಶವು ಪೃಥಿವಿಯ ಮಲ ಎಂದು ಹೇಳಲ್ಪಟ್ಟಿದೆ.

**ಸೀಧೋಃ ಪಾನಂ ಗುರುತಲ್ಪಾವಮರ್ದೋ**
**ಭ್ರೂಣಹತ್ಯಾ ಪರವಿತ್ತಾಪಹಾರಃ।**
**ಯೇಷಾಂ ಧರ್ಮಸ್ತಾನ್ಪ್ರತಿ ನಾಸ್ತ್ಯಧರ್ಮ**
**ಆರಟ್ಟಜಾನ್ಪಞ್ಚನದಾನ್ಧಿಗಸ್ತು ॥೩೮॥**

ಮದ್ಯಪಾನ, ಗುರುತಲ್ಪಗಮನ, ಭ್ರೂಣಹತ್ಯೆ, ಪರವಿತ್ತಾಪಹಾರ-ಇವುಗಳು ಯಾರಿಗೆ ಧರ್ಮವಾಗಿದೆಯೋ–ಅವರಿಗೆ ಅಧರ್ಮವೆಂಬುದೇ ಇಲ್ಲ. ಅಂತಹ ಆರಟ್ಟ ಮತ್ತು ಪಂಚನದದೇಶಗಳ ಜನರಿಗೆ ಧಿಕ್ಕಾರವಿರಲಿ.

ಶಲ್ಯ! ನಾನು ಹೇಳಿದುದೆಲ್ಲವನ್ನೂ ಮನಸ್ಸಿಗೆ ತಂದುಕೊಂಡು ಮಾತನಾಡದೇ ಕುಳಿತಿರು. ಪುನಃ ಪ್ರತಿಕೂಲವಾದಂತಹ ಮಾತುಗಳ

ನ್ನಾಡಲು ಪ್ರಾರಂಭಿಸಬೇಡ. ನಿನ್ನನ್ನೇ ಮೊದಲು ಸಂಹರಿಸಿ ಅನಂತರ ಕೇಶವಾರ್ಜುನರನ್ನು ಸಂಹರಿಸುವಂತಾಗದಿರಲಿ."

ಕರ್ಣನ ಮಾತಿಗೆ ಪ್ರತಿಯಾಗಿ ಶಲ್ಯನು ಅಂಗದೇಶೀಯರನ್ನು ತೆಗಳಲು ಉಪಕ್ರಮಿಸುತ್ತಾನೆ:

**ಆತುರಾಣಾಂ ಪರಿತ್ಯಾಗಃ ಸ್ವದಾರಸುತವಿಕ್ರಯಃ ।**
**ಅಙ್ಗೇಪ್ರವರ್ತತೇ ಕರ್ಣ ಯೇಷಾಮಧಿಪತಿರ್ಭವಾನ್ ॥೪೦॥**

"ಕರ್ಣ! ನೀನೇ ಅಧಿಪತಿಯಾಗಿರುವ ಅಂಗದೇಶದಲ್ಲಿ ರೋಗದಿಂದ ನರಳುತ್ತಿರುವವರು ಯಾರೇ ಆಗಿರಲಿ ಅವರಿಗೆ ಚಿಕಿತ್ಸೆಮಾಡಿಸದೇ ಪರಿತ್ಯಾಗಮಾಡಿಬಿಡುತ್ತಾರೆ. ಅಲ್ಲಿಯ ಜನರು ತಮ್ಮ ಪತ್ನಿಯರನ್ನೂ ಪುತ್ರರನ್ನೂ ಮಾರುತ್ತಾರೆ. (ಇವು ಅಂಗದೇಶದಲ್ಲಿ ನಡೆಯುವ ಧರ್ಮ ಕಾರ್ಯಗಳು.)

ಹಿಂದೊಂದು ದಿನ ರಥಾತಿರಥರನ್ನು ಗಣನೆಮಾಡುವ ಸಮಯದಲ್ಲಿ ನಿನ್ನನ್ನು ಉದ್ದೇಶಿಸಿ ಭೀಷ್ಮನು ಕೆಲವು ಸಂಗತಿಗಳನ್ನು ಹೇಳಿದನು. ಅದಕ್ಕೆ ಅನುಸಾರವಾಗಿ ಮೊದಲು ನೀನು ನಿನ್ನಲ್ಲಿರುವ ದೋಷಗಳನ್ನು ತಿಳಿದು ಕೊಂಡು ಕ್ರೋಧರಹಿತನಾಗಿ ಶಾಂತನಾಗು. ವೃಥಾ ಕೋಪಮಾಡಿ ಕೊಳ್ಳಬೇಡ.

ಎಲ್ಲ ಕಡೆಗಳಲ್ಲಿಯೂ ಬ್ರಾಹ್ಮಣರೂ ಇರುತ್ತಾರೆ, ಕ್ಷತ್ರಿಯರೂ ಇರುತ್ತಾರೆ. ವೈಶ್ಯರೂ ಇರುತ್ತಾರೆ, ಶೂದ್ರರೂ ಇರುತ್ತಾರೆ. ಉತ್ತಮವಾದ ವ್ರತಗಳನ್ನು ಪಾಲಿಸುವ ಸಾಧ್ವಿಯರಾದ ಸ್ತ್ರೀಯರೂ ಇರುತ್ತಾರೆ. ಎಲ್ಲ ದೇಶಗಳಲ್ಲಿಯೂ ಪುರುಷರು ಇತರ ಪುರುಷರೊಡನೆ ಮಾತನಾಡುವಾಗ ಪರಸ್ಪರವಾಗಿ ಹಾಸ್ಯಮಾಡುತ್ತಾರೆ. ಕೆಲವು ಸಮಯಗಳಲ್ಲಿ ಪರಸ್ಪರವಾಗಿ ಕಚ್ಚಾಡುತ್ತಾರೆ. ಸ್ತ್ರೀಯರೊಡನೆಯೂ ರಮಿಸುತ್ತಾರೆ.

**ಪರವಾಚ್ಯೇಷು ನಿಪುಣಃ ಸರ್ವೋ ಭವತಿ ಸರ್ವದಾ ।**
**ಆತ್ಮವಾಚ್ಯಂ ನ ಜಾನೀತೇ ಜಾನನ್ನಪಿ ಚ ಮುಹ್ಯತಿ ॥೪೪॥**

ಮತ್ತೊಬ್ಬರ ದೋಷಕಥನದಲ್ಲಿ ಎಲ್ಲರೂ ಯಾವಾಗಲೂ ನಿಪುಣ ರಾಗಿಯೇ ಇರುತ್ತಾರೆ. ತಮ್ಮಲ್ಲಿರುವ ದೋಷಗಳನ್ನು ತಿಳಿದುಕೊಳ್ಳುವುದೇ ಇಲ್ಲ. ಒಂದು ವೇಳೆ ತಿಳಿದುಕೊಂಡರೂ ತಿಳಿಯದವರಂತೆಯೇ ನಡೆದು

ಕೊಳ್ಳುತ್ತಾರೆ. (ತಮ್ಮ ದೋಷವು ತಮಗೆ ತಿಳಿದಿದೆಯೆಂಬುದನ್ನು ತೋರ್ಪಡಿಸಿಕೊಳ್ಳುವುದಿಲ್ಲ.)

**ಸರ್ವತ್ರ ಸನ್ತಿ ರಾಜಾನಃ ಸ್ವಂ ಸ್ವಂ ಧರ್ಮಮನುವ್ರತಾಃ ।**
**ದುರ್ಮನುಷ್ಯಾನ್ನಿಗೃಹ್ಣನ್ತಿ ಸನ್ತಿ ಸರ್ವತ್ರ ಧಾರ್ಮಿಕಾಃ ॥೪೫॥**

ಸ್ವಧರ್ಮಾಚರಣೆಯಲ್ಲಿ ನಿರತರಾದ ರಾಜರು ಸರ್ವತ್ರ ಇದ್ದಾರೆ. ಅವರು ದುರ್ಮನುಷ್ಯರ ದಮನವನ್ನೂ ಮಾಡುತ್ತಾರೆ. ಧಾರ್ಮಿಕರೂ ಎಲ್ಲೆಡೆಯಲ್ಲಿಯೂ ಇದ್ದಾರೆ.

**ನ ಕರ್ಣ ದೇಶಸಾಮಾನ್ಯತ್ಸರ್ವಃ ಪಾಪಂ ನಿಷೇವತೇ ।**
**ಯಾದೃಶಾಃ ಸ್ವಸ್ವಭಾವೇನ ದೇವಾ ಅಪಿ ನ ತಾದೃಶಾಃ ॥೪೬॥**

ಒಂದು ದೇಶದಲ್ಲಿ ವಾಸವಾಗಿರುವ ಮಾತ್ರದಿಂದಲೇ ಆ ದೇಶದವರೆಲ್ಲರೂ ಪಾಪಕರ್ಮಗಳನ್ನೇ ಮಾಡುತ್ತಿರುವುದಿಲ್ಲ. ಅಂತಹ ದೇಶದಲ್ಲಿಯೂ ಮನುಷ್ಯರು ತಮ್ಮ ಶೀಲ ಮತ್ತು ಸತ್ಸ್ವಭಾವಗಳಿಂದ ಎಂತಹ ಮಹಾಪುರುಷರಾಗುತ್ತಾರೆಂದರೆ-ದೇವತೆಗಳೂ ಸಹ ಅವರಿಗೆ ಸಮಾನರಾಗಲಾರರು."

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಅನಂತರ ಹೀಗೆ ವಾದ-ವಿವಾದಮಾಡುತ್ತಿದ್ದ ಕರ್ಣ-ಶಲ್ಯರಿಬ್ಬರನ್ನೂ ಮುಂದೆ ಮಾತು ಬೆಳೆಸದಂತೆ ದುರ್ಯೋಧನನು ತಡೆದನು. ಮುಂದೆ ಮಾತನಾಡದಂತೆ ರಾಧೇಯನಿಗೆ ಮಿತ್ರಭಾವದಿಂದ ಹೇಳಿದನು. ಎರಡು ಕೈಗಳನ್ನೂ ಜೋಡಿಸಿಕೊಂಡು ಮುಂದೆ ಮಾತನಾಡದಂತೆ ಶಲ್ಯನನ್ನು ಪ್ರಾರ್ಥಿಸಿಕೊಂಡನು.

ಮಹಾರಾಜ! ದುರ್ಯೋಧನನು ಮಾತನಾಡಕೂಡದೆಂದು ಹೇಳಿದ ನಂತರ ಕರ್ಣನು ಮುಂದೆ ಯಾವ ಉತ್ತರವನ್ನೂ ಕೊಡಲಿಲ್ಲ. ಶಲ್ಯನೂ ಸಹ ಯಾವ ಮಾತನ್ನೂ ಆಡದೇ ಶತ್ರುಗಳಿಗೆ ಅಭಿಮುಖವಾಗಿ ನಡೆದನು. ಅನಂತರ ಕರ್ಣನು ನಸುನಗುತ್ತಾ 'ಮುಂದೆ ಹೋಗು' ಎಂದು ಶಲ್ಯನನ್ನು ಪ್ರಚೋದಿಸಿದನು."

ಳ೫ನೆಯ ಅಧ್ಯಾಯವು ಮುಗಿಯಿತು.

## ಕೌರವರು ಸೈನ್ಯವನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿದುದು: ಯುಧಿಷ್ಠಿರನ ಆದೇಶದಂತೆ ಅರ್ಜುನನು ಕರ್ಣನನ್ನು ಆಕ್ರಮಿಸಿದುದು: ಶಲ್ಯನು ಪಾಂಡವರ ಸೈನ್ಯದಲ್ಲಿದ್ದ ಪ್ರಮುಖರಾದ ವೀರರನ್ನು ವರ್ಣಿಸಿದುದು: ಅಂತೆಯೇ ಅರ್ಜುನನನ್ನೂ ಪ್ರಶಂಸಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಅನಂತರ ಕರ್ಣನು–ಶತ್ರುಪಕ್ಷದ ಸೈನಿಕರ ದಾಳಿಯನ್ನು ಎದುರಿಸಲು ಸಮರ್ಥವಾದ, ಅಪ್ರತಿಮವಾದ, ಧೃಷ್ಟದ್ಯುಮ್ನನಿಂದ ರಕ್ಷಿಸಲ್ಪಡುತ್ತಿದ್ದ ಪಾಂಡವರ ವ್ಯೂಹವನ್ನು ನೋಡಿ–ರಥಚಕ್ರಗಳ ಗಡ-ಗಡಾಶಬ್ದಗಳಿಂದಲೂ, ಸಿಂಹನಾದಗಳ ಶಬ್ದಗಳಿಂದಲೂ, ರಣವಾದ್ಯಗಳ ಘೋಷಣೆಗಳಿಂದಲೂ ಭೂಮಿಯನ್ನೇ ನಡುಗಿಸುತ್ತಿರುವನೋ ಎಂಬಂತೆ ಯುದ್ಧಕ್ಕೆ ಹೊರಟನು. ಯುದ್ಧಶೌಂಡನಾದ, ಶತ್ರುತಾಪಕನಾದ, ಮಹಾತೇಜಸ್ವಿಯಾದ ಕರ್ಣನು ಕೋಪದಿಂದ ಕಂಪಿಸುತ್ತಿರುವನೋ ಎಂಬಂತೆ ಮೈ-ಕೈಗಳನ್ನು ನಡುಗಿಸುತ್ತಾ ಪಾಂಡವರು ರಚಿಸಿದ್ದ ವ್ಯೂಹಕ್ಕೆ ಪ್ರತಿವ್ಯೂಹವನ್ನು ಯಥಾವತ್ತಾಗಿ ರಚಿಸಿ–ದೈತ್ಯರ ಸೈನ್ಯವನ್ನು ವಾಸವನು ಧ್ವಂಸಮಾಡಿದಂತೆ-ಪಾಂಡವರ ಸೈನ್ಯವನ್ನು ಧ್ವಂಸಗೊಳಿಸುತ್ತಾ ಯುಧಿಷ್ಠಿರನನ್ನೂ ಗಾಯಗೊಳಿಸಿ ಅವನನ್ನು ತನ್ನ ಬಲಕ್ಕೆ ಬಿಟ್ಟುಕೊಂಡನು."

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ:

"ಸಂಜಯ! ದೇವತೆಗಳಿಂದಲೂ ಅಜಯ್ಯರಾದ, ಭೀಮಸೇನನಿಂದ ಸಂರಕ್ಷಿತರಾಗಿದ್ದ, ಧೃಷ್ಟದ್ಯುಮ್ನಪ್ರಮುಖರಾಗಿದ್ದ ಪಾಂಡವರನ್ನು ಕರ್ಣನು ಯಾವ ಪ್ರತಿವ್ಯೂಹದಿಂದ ಹೇಗೆ ಎದುರಿಸಿದನು? ನನ್ನ ಸೈನ್ಯದ (ವ್ಯೂಹದ) ಪಕ್ಷ-ಪ್ರಪಕ್ಷಗಳಲ್ಲಿ (ಎಡಭಾಗ-ಬಲಭಾಗಗಳಲ್ಲಿ) [ಪಕ್ಷದ ಕೊನೆಯಲ್ಲಿ] ಯಾವ ಪ್ರಮುಖಯೋಧರು ನಿಂತಿದ್ದರು? ಶತ್ರುಪಕ್ಷದ ಯೋಧರನ್ನೂ- ಸೈನಿಕರನ್ನೂ ಯಥೋಚಿತವಾಗಿ ಹಂಚಿಕೊಂಡು ನನ್ನ ಕಡೆಯ ಯೋಧರು ಹೇಗೆ ಮತ್ತು ಎಲ್ಲಿ ನಿಂತಿದ್ದರು? ನನ್ನ ಮಕ್ಕಳಿಗೆ

ಅಭಿಮುಖವಾಗಿ ಪಾಂಡವರು ಪ್ರತಿವ್ಯೂಹವನ್ನು ಯಾವ ರೀತಿಯಲ್ಲಿ ರಚಿಸಿಕೊಂಡಿದ್ದರು? ಸುದಾರುಣವಾದ ಅಂದಿನ ಆ ಮಹಾಯುದ್ಧವು ಹೇಗೆ ಪ್ರಾರಂಭವಾಯಿತು? 'ಕರ್ಣನು ಯುಧಿಷ್ಠಿರನನ್ನು ಗಾಯಗೊಳಿಸಿದನು' ಎಂದು ನೀನು ಹೇಳುವೆ. ಆ ಸಮಯದಲ್ಲಿ ಅರ್ಜುನನೆಲ್ಲಿದ್ದನು? ಹಿಂದೆ ಅರ್ಜುನನೊಬ್ಬನೇ ಖಾಂಡವವನದಲ್ಲಿ ಸರ್ವಪ್ರಾಣಿಗಳನ್ನೂ ಜಯಿಸಿದ್ದನು. ಅಂತಹ ಅರ್ಜುನನು ಸಮೀಪದಲ್ಲಿಯೇ ಇದ್ದುದಾದರೆ ಯುಧಿಷ್ಠಿರನ ಸಮೀಪಕ್ಕೆ ಹೋಗಲು ಯಾರಿಗೆ ತಾನೇ ಸಾಮರ್ಥ್ಯವಿದ್ದೀತು? ರಾಧಾಪುತ್ರನಾದ ಕರ್ಣನೊಬ್ಬನನ್ನು ಬಿಟ್ಟು ಜೀವಿಸಿರಲು ಇಚ್ಛಿಸುವ ಯಾವನು ತಾನೇ ಅರ್ಜುನನೊಡನೆ ಯುದ್ಧಮಾಡಲು ಇಚ್ಛಿಸುತ್ತಾನೆ?"

"ಮಹಾರಾಜ! ಅಂದು ಎರಡು ಪಕ್ಷಗಳೂ ವ್ಯೂಹಗಳನ್ನು ಯಾವ ಕ್ರಮದಲ್ಲಿ ರಚಿಸಿದ್ದುವು? ಅರ್ಜುನನು ಎಲ್ಲಿಗೆ ಹೋಗಿದ್ದನು? ತಮ್ಮ-ತಮ್ಮ ಕಡೆಯ ರಾಜರನ್ನು ಸುತ್ತುವರಿದುಕೊಂಡು ಎರಡೂ ಪಕ್ಷಗಳ ಯೋಧರು ಯಾವ ರೀತಿಯಲ್ಲಿ ಯುದ್ಧಮಾಡಿದರು?—ಈ ಎಲ್ಲ ವಿಷಯಗಳನ್ನೂ ವಿಶದವಾಗಿಯೇ ಹೇಳುವೆನು, ಕೇಳು.

ಶರದ್ವಂತರ ಮಕ್ಕಳಾದ ಕೃಪರೂ, ವೇಗವಂತನಾದ ಮಗಧರಾಜನೂ ಮತ್ತು ಸಾತ್ವತವಂಶೀಯನಾದ ಕೃತವರ್ಮನೂ ವ್ಯೂಹದ ದಕ್ಷಿಣಭಾಗವನ್ನು ಆಶ್ರಯಿಸಿದ್ದರು. ಶಕುನಿ ಮತ್ತು ಮಹಾರಥನಾದ ಉಲೂಕ ಇವರು ಥಳ-ಥಳಿಸುವ ಪ್ರಾಸಾಯುಧಗಳಿಂದ ಸುಶೋಭಿತರಾಗಿದ್ದ ಕುದುರೆಸವಾರರೊಡನೆ ದಕ್ಷಿಣಭಾಗದ ತುದಿಯಲ್ಲಿದ್ದ ನಿನ್ನ ಸೈನ್ಯವನ್ನು ಸಂರಕ್ಷಿಸುತ್ತಿದ್ದರು. ಸ್ವಲ್ಪವಾದರೂ ಗಾಬರಿಗೊಳ್ಳದ ಗಾಂಧಾರದೇಶದ ಸೈನಿಕರೂ, ದುರ್ಜಯರಾದ ಪರ್ವತಪ್ರದೇಶದ ವೀರರೂ ಅವರೊಡನೆ ಉಪಸ್ಥಿತರಾಗಿದ್ದರು. ಆ ಯೋಧರು ಮಿಡತೆಯ ಹುಳುಗಳಂತೆ ಗುಂಪು-ಗುಂಪಾಗಿ ರಣಾಂಗಣಕ್ಕೆ ಬರುತ್ತಿದ್ದರು. ಪಿಶಾಚಿಗಳಂತೆ ನೋಡಲು ಅಸಾಧ್ಯರಾಗಿದ್ದರು. (ಭಯಂಕರವಾಗಿ ಕಾಣುತ್ತಿದ್ದರು.) ಯುದ್ಧದಿಂದ ಹಿಂದಿರುಗದೇ ಇರತಕ್ಕ ರಥಿಗಳ ಸಂಖ್ಯೆಯು ಮೂವತ್ತುನಾಲ್ಕು ಸಾವಿರದಷ್ಟಿದ್ದಿತು. ಕೃಷ್ಣಾರ್ಜುನರನ್ನು ಸಂಹರಿಸಲು ಇಚ್ಛಿಸಿದ್ದ ಯುದ್ಧಕುಶಲರಾದ ಸಂಶಪ್ತಕರು

ನಿನ್ನ ಮಕ್ಕಳೊಡನೆ ಕೂಡಿಕೊಂಡು ವ್ಯೂಹದ ಎಡಭಾಗವನ್ನು ಸಂರಕ್ಷಿಸುತ್ತಿದ್ದರು. ಅವರ ಪ್ರಪಕ್ಷಸ್ಥಾನದಲ್ಲಿ ಸೂತಪುತ್ರನಾದ ಕರ್ಣನ ನಿದೇಶಾನುಸಾರವಾಗಿ ರಥಾಶ್ವ- ಪದಾತಿಗಳಿಂದ ಕೂಡಿದ ಕಾಂಬೋಜ-ಶಕ-ಯವನರು ಮಹಾಬಲನಾದ ಕೇಶವನನ್ನೂ ಮತ್ತು ಅರ್ಜುನನನ್ನೂ ಯುದ್ಧಕ್ಕೆ ಆಹ್ವಾನಿಸುತ್ತಾ ಸಜ್ಜಾಗಿ ನಿಂತಿದ್ದರು. ಸೇನಾಮುಖದ ಮಧ್ಯಭಾಗದಲ್ಲಿ ಚಿತ್ರಿತವಾದ ಕವಚವನ್ನು ಧರಿಸಿದ್ದ, ಅಂಗದಗಳಿಂದಲೂ ಹಾರಗಳಿಂದಲೂ ಸಮಲಂಕೃತನಾಗಿದ್ದ ಕರ್ಣನು ವಾಹಿನಿಯ (ವ್ಯೂಹದ) ಮುಖಭಾಗವನ್ನು ಸಂರಕ್ಷಿಸುತ್ತಾ ನಿಂತಿದ್ದನು. ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ಮಹಾಬಾಹುವಾದ ಕರ್ಣನು- ಬಹಳವಾಗಿ ಕೋಪಗೊಂಡಿದ್ದ, ತನ್ನ ರಕ್ಷಣೆಯಲ್ಲಿ ತತ್ಪರರಾಗಿದ್ದ ಮಕ್ಕಳಿಂದ ಕೂಡಿದವನಾಗಿ ಸೈನ್ಯವನ್ನು ಮುಂದಕ್ಕೆ ಒಯ್ಯುತ್ತಾ (ನಡೆಸುತ್ತಾ) ಶೋಭಾಯಮಾನವಾಗಿ ಕಾಣುತ್ತಿದ್ದನು. ಸೂರ್ಯಾಗ್ನಿಗಳ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ, ಉಕ್ಕಿನಂತಹ ತೋಳುಗಳನ್ನು ಹೊಂದಿದ್ದ, ಮಹಾಬಾಹುವಾದ, ಪಿಂಗಾಕ್ಷನಾದ (ಕಂದು-ಹಳದೀಬಣ್ಣದ ಕಣ್ಣುಗಳುಳ್ಳ), ನೋಡಲು ಬಹಳ ಚೆಲುವನಾಗಿದ್ದ ದುಃಶಾಸನನು ದೊಡ್ಡದೊಂದು ಆನೆಯ ಮೇಲೆ ಕುಳಿತು ಅನೇಕ ಸೈನಿಕರಿಂದ ಪರಿವೃತನಾಗಿ ವ್ಯೂಹದ ಹಿಂಭಾಗದಲ್ಲಿ ನಿಂತಿದ್ದನು. ವಿಚಿತ್ರವಾದ ಅಸ್ತ್ರಗಳನ್ನು ಧರಿಸಿದ್ದ, ಚಿತ್ರಿತವಾದ ಕವಚಗಳನ್ನು ತೊಟ್ಟಿದ್ದ ಸಹೋದರರಿಂದಲೂ ಮಹಾವೀರ್ಯರಾದ, ಒಟ್ಟಾಗಿ ಬರುತ್ತಿದ್ದ ಮದ್ರ-ಕೇಕಯಯೋಧರಿಂದಲೂ ರಕ್ಷಿಸಲ್ಪಡುತ್ತಿದ್ದ ದುರ್ಯೋಧನರಾಜನೇ ದುಃಶಾಸನನನ್ನು ಅನುಸರಿಸಿ ಹೋಗುತ್ತಿದ್ದನು. ಆ ಸಮಯದಲ್ಲವನು ದೇವತೆಗಳಿಂದ ಪರಿವೃತ ನಾದ ಇಂದ್ರನಂತೆಯೇ ಪರಿಶೋಭಿಸುತ್ತಿದ್ದನು. ದುರ್ಯೋಧನನ ಹಿಂಭಾಗದಲ್ಲಿ ಅಶ್ವತ್ಥಾಮನೂ, ಕೌರವರ ಕಡೆಯ ವೀರಶ್ರೇಷ್ಠ ರಾದ ಮಹಾರಥರೂ ಹೋಗುತ್ತಿದ್ದರು. ಅವರನ್ನೇ ಅನುಸರಿಸಿ ನಿತ್ಯಮತ್ತವಾದ ಮದಗಜಗಳು–ವರ್ಷಾಕಾಲದಲ್ಲಿ ಮೇಘ ಗಳು ಮಳೆಗರೆಯುವಂತೆ–ಮದೋದಕವನ್ನು ಸುರಿಸುತ್ತಾ, ಶೂರರಾದ

ಮ್ಲೇಚ್ಛಸೈನಿಕರೊಡನೆ ರಥಸೈನ್ಯವನ್ನು ಅನುಸರಿಸಿಹೋದುವು. ಆ ಮದ ಗಜಗಳು ಧ್ವಜಗಳಿಂದಲೂ, ವೈಜಯಂತೀಪತಾಕೆಗಳಿಂದಲೂ, ಪ್ರಜ್ವಲಿಸುತ್ತಿದ್ದ ಶ್ರೇಷ್ಠವಾದ ಆಯುಧಗಳಿಂದಲೂ, ತಮ್ಮ ಮೇಲೆ ಕುಳಿತಿದ್ದ ಮಾವಟಿಗರಿಂದಲೂ ಶೋಭಾಯಮಾನವಾಗಿ ಕಾಣುತ್ತಾ ವೃಕ್ಷಗಳಿಂದ ಕೂಡಿದ ಪರ್ವತಗಳಂತೆಯೇ ಪ್ರಕಾಶಿಸುತ್ತಿದ್ದುವು. ಪಟ್ಟಿಶ ಮತ್ತು ಖಡ್ಗಗಳನ್ನು ಧರಿಸಿದ್ದ, ಯುದ್ಧದಿಂದ ಹಿಂದಿರುಗದಿದ್ದ ಸಾವಿರಾರು ಸೈನಿಕರು ಪದಾತಿಗಳ ಮತ್ತು ಆನೆಗಳ ಪಾದರಕ್ಷಕರಾಗಿದ್ದರು. ವಿಶೇಷವಾಗಿ ಸಜ್ಜಾಗಿದ್ದ, ರಥ-ಗಜಾಶ್ವಸೈನಿಕರಿಂದ ಸುಸಂಪನ್ನವಾಗಿದ್ದ ಆ ಶ್ರೇಷ್ಠವಾದ ವ್ಯೂಹವು ದೇವಾಸುರಸೈನ್ಯಗಳ ವ್ಯೂಹಗಳಂತೆಯೇ ಪ್ರಕಾಶಿಸುತ್ತಿದ್ದಿತು. ವಿದ್ವಾಂಸನಾದ, ಸೇನಾನಾಯಕನಾದ ಕರ್ಣನಿಂದ ಬೃಹಸ್ಪತಿಯು ಹೇಳಿರುವ ರೀತಿಯಲ್ಲಿ ಬಹಳ ಚೆನ್ನಾಗಿ ರಚಿಸಲ್ಪಟ್ಟಿದ್ದ ಆ ಮಹಾವ್ಯೂಹವು ನೃತ್ಯಮಾಡುತ್ತಿರುವುದೋ ಎಂಬಂತೆ ಕಾಣುತ್ತಿದ್ದು ಶತ್ರುಗಳ ಮನಸ್ಸಿನಲ್ಲಿ ಭಯವನ್ನು ಹುಟ್ಟಿಸಿತು. ಆ ಮಹಾವ್ಯೂಹದ ಪಕ್ಷ-ಪ್ರಪಕ್ಷಗಳಿಂದ ಯುದ್ಧಮಾಡಲು ಉತ್ಸುಕರಾಗಿದ್ದ ರಥ-ಗಜಾಶ್ವ-ಪದಾತಿಸೈನಿಕರು ವರ್ಷಾಕಾಲದ ಮೇಘಗಳಂತೆ ಶತ್ರುಗಳ ಮೇಲೆ ಬೀಳುತ್ತಿದ್ದರು.

ಅನಂತರ ಯುಧಿಷ್ಠಿರನು ಶತ್ರುಸೈನ್ಯದ ಅಗ್ರಭಾಗದಲ್ಲಿದ್ದ ಕರ್ಣನನ್ನು ನೋಡಿ ಶತ್ರುಹಂತಕನಾದ, ಲೋಕೈಕವೀರನಾದ ಧನಂಜಯನಿಗೆ ಹೇಳಿದನು:

"ಅರ್ಜುನ! ಕರ್ಣನು ರಚಿಸಿರುವ ಈ ಮಹಾವ್ಯೂಹವನ್ನು ನೋಡು! ಪಕ್ಷ-ಪ್ರಪಕ್ಷಗಳಿಂದ ಕೂಡಿರುವ ವ್ಯೂಹಕ್ರಮದಲ್ಲಿ ನಿಂತಿರುವ ಶತ್ರುಗಳ ಸೈನ್ಯವು ಬಹಳವಾಗಿ ಪ್ರಕಾಶಿಸುತ್ತಿದೆ. ಶತ್ರುಗಳ ಈ ಮಹಾಸೈನ್ಯವನ್ನು ಚೆನ್ನಾಗಿ ನೋಡಿ (ಸೂಕ್ಷ್ಮದೃಷ್ಟಿಯಿಂದ ಪರಿಶೀಲಿಸಿ) ನಮ್ಮನ್ನು ಆ ವ್ಯೂಹದ ಮೂಲಕವಾಗಿ ಕರ್ಣನು ಪರಾಜಯಗೊಳಿಸದ ರೀತಿಯಲ್ಲಿ ಯುದ್ಧನೀತಿಯನ್ನು ರೂಪಿಸು."

ಮಹಾರಾಜ! ಯುಧಿಷ್ಠಿರನು ಹೀಗೆ ಹೇಳುತ್ತಲೇ ಅರ್ಜುನನು ಬದ್ಧಾಂಜಲಿಯಾಗಿ ರಾಜನೊಡನೆ ಹೇಳಿದನು:

**ಯಥಾ ಭವಾನಾಹ ತಥಾ ತತ್ಸರ್ವಂ ನ ತದನ್ಯಥಾ ॥೩೨॥**

"ಅಗ್ರಜ! ನೀನು ಹೇಗೆ ಹೇಳಿದೆಯೋ ಎಲ್ಲವೂ ಹಾಗೆಯೇ ನಡೆಯುತ್ತದೆ. ನಿನ್ನ ಅಭಿಪ್ರಾಯಕ್ಕೆ ವ್ಯತ್ಯಾಸವಾಗಿ ಯಾವುದೂ ನಡೆಯುವುದಿಲ್ಲ.

ಯುದ್ಧಶಾಸ್ತ್ರದಲ್ಲಿ ವ್ಯೂಹದ ವಿನಾಶಕ್ಕೆ ಯಾವ ಉಪಾಯವು



ಹೇಳಿರುವುದೋ ಆ ಉಪಾಯವನ್ನೇ ನಾನೂ ಮಾಡುತ್ತೇನೆ. ಈ ವ್ಯೂಹದ ಪ್ರಧಾನನನ್ನು ವಧೆಮಾಡುವುದರಿಂದ ಮಾತ್ರವೇ ವ್ಯೂಹವೂ ವಿನಾಶ ವಾಗುತ್ತದೆ. ಅದನ್ನೇ ನಾನೂ ಮಾಡುತ್ತೇನೆ."

"ನೀನು ಹೇಳಿದುದು ಸರಿ. ವ್ಯೂಹದ ಪ್ರಧಾನನನ್ನು ಸಂಹರಿಸುವ ಸಲುವಾಗಿ ಇಂದು ನೀನೇ ಕರ್ಣನನ್ನು ಎದುರಿಸು. ಭೀಮಸೇನನು ಸುಯೋಧನನನ್ನು ಎದುರಿಸಲಿ. ವೃಷಸೇನನನ್ನು ನಕುಲನೂ, ಶಕುನಿಯನ್ನು ಸಹದೇವನೂ, ದುಃಶಾಸನನನ್ನು ಶತಾನೀಕನೂ, ಕೃತವರ್ಮನನ್ನು ಸಾತ್ಯಕಿಯೂ, ಅಶ್ವತ್ಥಾಮನನ್ನು ಧೃಷ್ಟದ್ಯುಮ್ನನೂ ಎದುರಿಸಿ ಯುದ್ಧಮಾಡಲಿ. ನಾನು ಕೃಪಾಚಾರ್ಯರೊಡನೆ ಯುದ್ಧಮಾಡುತ್ತೇನೆ. ದ್ರೌಪದಿಯ ಮಕ್ಕಳು ಶಿಖಂಡಿಯೊಡನೆ ಕೂಡಿಕೊಂಡು ಉಳಿದಿರುವ ಧೃತರಾಷ್ಟ್ರನ ಮಕ್ಕಳೊಡನೆ ಯುದ್ಧಮಾಡಲಿ. ಹೀಗೆಯೇ ನಮ್ಮ ಪಕ್ಷದ ರಥ-ಗಜಾಶ್ವ-ಪದಾತಿಸೈನಿಕರು ಶತ್ರುಪಕ್ಷದ ರಥ-ಗಜಾಶ್ವ-ಪದಾತಿಸೈನಿಕರೊಡನೆ ಯುದ್ಧದಲ್ಲಿ ತೊಡಗಿ ಶತ್ರುಗಳನ್ನು ಸಂಹರಿಸಲಿ."

ಮಹಾರಾಜ! ಧರ್ಮರಾಜನು ಹೀಗೆ ಹೇಳಿದನಂತರ ಧನಂಜಯನು ಹಾಗೆಯೇ ಆಗಲೆಂದು ಹೇಳಿ ಯುದ್ಧಸನ್ನದ್ಧರಾಗಿ ನಿಲ್ಲುವಂತೆ ಸೈನಿಕರಿಗೆ ಆದೇಶನೀಡಿ ವ್ಯೂಹದ ಅಗ್ರಭಾಗದಲ್ಲಿ ತಾನೇ ಉಪಸ್ಥಿತನಾದನು.

ವೇದಮಂತ್ರಗಳ ಮೂಲಕವಾಗಿ ಹುತಮಾಡಲ್ಪಡುವ, ವಿಶ್ವಕ್ಕೇ ನಾಯಕನಾದ ಅಗ್ನಿಯು ಕುದುರೆಯಾದನು. ಅಗ್ನಿಯಿಂದ ಮೊದಲು ಹುಟ್ಟಿದವನನ್ನು ದೇವತೆಗಳು ಬ್ರಾಹ್ಮಣನೆಂದು ಭಾವಿಸಿದರು. ಬ್ರಹ್ಮ ಈಶಾನ, ಇಂದ್ರ ಮತ್ತು ವರುಣರನ್ನು ಅನುಕ್ರಮವಾಗಿ ಯಾವ ರಥವು ಧರಿಸಿಕೊಂಡಿದ್ದಿತೋ-ಅಂತಹ ಸನಾತನವಾದ ಅಗ್ನಿದತ್ತವಾದ ರಥದಲ್ಲಿ ಕುಳಿತು ಕೇಶವಾರ್ಜುನರು ಯುದ್ಧಕ್ಕೆ ಹೊರಟರು.

ಪರಮಾದ್ಭುತವಾಗಿ ಕಾಣುತ್ತಿದ್ದ ಆ ರಥವು ಬರುತ್ತಿರುವುದನ್ನು ಕಂಡು ಶಲ್ಯನು ಯುದ್ಧದುರ್ಮದನಾದ ರಾಧೇಯನನ್ನು ಕುರಿತು ಪುನಃ ಹೇಳಿದನು:

"ಕರ್ಣ! ನೀನು ಯಾವನಿಗಾಗಿ 'ಅರ್ಜುನನೆಲ್ಲಿ? ಹೇಳಿರಿ. ಬಹುಮಾನ ಕೊಡುತ್ತೇನೆ'–ಎಂದು ಪ್ರಶ್ನಿಸುತ್ತಿದ್ದೆಯೋ ಆ ಕೌಂತೇಯನೇ ಇಲ್ಲಿಗೆ ಬರುತ್ತಿದ್ದಾನೆ. ಶ್ವೇತಾಶ್ವನಾದ, ಕೃಷ್ಣಸಾರಥಿಯಾದ-ತಡೆಯಲು ಸಾಧ್ಯವಿಲ್ಲದ ಕರ್ಮಗಳ ಫಲದಂತೆ-ನಿನ್ನ ಸೈನಿಕರಿಂದ ತಡೆಯಲು ಅಸಾಧ್ಯನಾದ ಪಾರ್ಥನು ಶತ್ರುಗಳನ್ನು ಧ್ವಂಸಮಾಡುತ್ತಾ ರಥಸಹಿತನಾಗಿ

ಬರುತ್ತಿದ್ದಾನೆ. ದೊಡ್ಡದಾದ ಮೇಘಗಳ ಘರ್ಜನೆಯಂತೆ ಅರ್ಜುನನ ರಥಚಕ್ರಗಳ ಭಯಂಕರಶಬ್ದವು ಕೇಳಿಬರುತ್ತಿದೆ. ಇದರಿಂದಲೇ ಬರುತ್ತಿರುವವರು ಮಹಾತ್ಮರಾದ ವಾಸುದೇವ-ಧನಂಜಯರೆಂಬುದನ್ನು ನಾವು ನಿಶ್ಚಯಿಸಬಹುದಾಗಿದೆ. ಕರ್ಣ! ಅರ್ಜುನನ ರಥದ ಚಕ್ರಗಳಿಂದ ಸಮುದ್ಭೂತವಾದ ಧೂಳಿಯು ಆಕಾಶವನ್ನೂ ಆವರಿಸಿ ನಿಂತಿದೆ. ರಥಚಕ್ರಗಳ ಸಂಘಟ್ಟನೆಯಿಂದ ವಿಶೀರ್ಣಳಾದಳೋ ಎಂಬಂತೆ–ಭೂದೇವಿಯೂ ಕಂಪಿಸುತ್ತಿದ್ದಾಳೆ. ನಿನ್ನ ಸೈನ್ಯದ ಸುತ್ತಲೂ ಚಂಡಮಾರುತವು ಬೀಸುತ್ತಿದೆ. ಮಾಂಸಾಶಿಗಳಾದ ದುಷ್ಟಮೃಗಗಳು ಕೂಗಿಕೊಳ್ಳುತ್ತಿವೆ. ಮೃಗಗಳು ಭಯಂಕರವಾಗಿ ಊಳಿಡುತ್ತಿವೆ. ಅಲ್ಲಿ ನೋಡು ಕರ್ಣ! ಮಹಾಘೋರವಾದ, ಭಯವನ್ನುಂಟುಮಾಡುವ, ರೋಮಾಂಚಕರವಾದ, ಮಹಾಮೇಘಸದೃಶವಾದ ಕಬಂಧಾಕಾರದ ಕೇತುಗ್ರಹವು ಸೂರ್ಯನನ್ನು ಆವರಿಸಿ ನಿಂತಿದೆ. ಇತ್ತ ಕಡೆ ನೋಡು, ಕರ್ಣ! ನಾಲ್ಕು ದಿಕ್ಕುಗಳಲ್ಲಿಯೂ ನಾನಾವಿಧವಾದ ಮೃಗಗಳ ಸಮೂಹಗಳೂ ಮತ್ತು ಮಹಾಬಲಿಷ್ಠವಾದ ಮತ್ತು ಮದಿಸಿದ ಹುಲಿಗಳೂ ಸೂರ್ಯನನ್ನೇ ದಿಟ್ಟಿಸಿ ನೋಡುತ್ತಿವೆ.

ಅಲ್ಲಿ ನೋಡು, ಕರ್ಣ! ಘೋರವಾದ ಸಾವಿರಾರು ರಣಹದ್ದುಗಳೂ ಮತ್ತು ಹದ್ದುಗಳೂ ಒಂದೇ ಕಡೆಯಲ್ಲಿ ಸೇರಿ ಪರಸ್ಪರವಾಗಿ ವೀಕ್ಷಿಸುತ್ತಾ ಏನನ್ನೋ ಮಾತನಾಡಿಕೊಳ್ಳುತ್ತಿವೆ. ವಿಶಾಲವಾದ ನಿನ್ನ ರಥದಲ್ಲಿ ಹಾರಿಸಲ್ಪಟ್ಟಿರುವ, ಬಣ್ಣ-ಬಣ್ಣದ, ಶ್ರೇಷ್ಠವಾದ ಚಾಮರಗಳು ಇದ್ದಕ್ಕಿದ್ದಂತೆಯೇ ಪ್ರಜ್ವಲಿಸುತ್ತಿವೆ. ನಿನ್ನ ಧ್ವಜವೂ ಸಹ ಬಹಳ ವೇಗದಿಂದ ರಪ-ರಪನೆ ಹಾರಾಡುತ್ತಿದೆ. ದೊಡ್ಡದಾದ ಶರೀರಗಳಿಂದ ಕೂಡಿದ, ಮಹಾವೇಗಯುಕ್ತವಾದ, ನೋಡಲು ಬಹಳ ಸುಂದರವಾಗಿ ಕಾಣುವ, ಗರುಡಪಕ್ಷಿಗಳಂತೆ ಆಕಾಶದಲ್ಲಿ ಹಾರಿಹೋಗುವ ಕುದುರೆಗಳು ಇದ್ದಕ್ಕಿದ್ದಂತೆಯೇ ಥರ-ಥರನೆ ನಡುಗುತ್ತಿರುವುದನ್ನು ನೋಡು. ಇಂತಹ ಅಪಶಕುನಗಳು ಕಾಣಿಸಿಕೊಳ್ಳುತ್ತಿರುವಾಗ ಇಂದು ನಿಶ್ಚಯವಾಗಿಯೂ ನೂರಾರು- ಸಾವಿರಾರು ರಾಜರು ಹತರಾಗಿ ಭೂಮಿಯನ್ನೇ ಆಶ್ರಯಿಸಿ ಮಲಗುತ್ತಾರೆ. ಎಲ್ಲ ಕಡೆಗಳಲ್ಲಿಯೂ ಶಂಖ-ಭೇರೀ-ಮೃದಂಗಗಳ ರೋಮಾಂಚಕರವಾದ ಭಯಂಕರ

ಶಬ್ದಗಳು ಕೇಳಿಬರುತ್ತಿವೆ. ನಾನಾರೀತಿಯ ಬಾಣಗಳ ವಿಧ-ವಿಧವಾದ ಶಬ್ದಗಳನ್ನೂ, ರಥಾಶ್ವ-ಪದಾತಿಗಳ ಕೋಲಾಹಲಧ್ವನಿಗಳನ್ನೂ, ಮಹಾತ್ಮರಾದ ಯೋಧರು ಮಾಡುತ್ತಿರುವ ಟೇಂಕಾರಶಬ್ದಗಳನ್ನೂ ಕೇಳು, ಕರ್ಣ! ಈ ಶಬ್ದಗಳು ಎಷ್ಟೊಂದು ಭಯಂಕರವಾಗಿವೆ! ಅರ್ಜುನನ ರಥದ ಧ್ವಜದಂಡಗಳ ಮೇಲೆ, ಸುವರ್ಣ ಮತ್ತು ರಜತಗಳಿಂದ ಚಿತ್ರಿತವಾದ ಬಟ್ಟೆಗಳಿಂದ ಶಿಲ್ಪಿಗಳು ಮಾಡಿದ ನಾನಾವರ್ಣಗಳ ಪತಾಕೆಗಳು ಗಾಳಿಯಲ್ಲಿ ಹಾರಾಡುತ್ತಿದ್ದು ಬಹಳವಾಗಿ ಪ್ರಕಾಶಿಸುತ್ತಿವೆ. ಅರ್ಜುನನ ರಥದ ಪತಾಕೆಗಳಲ್ಲಿ ಸುವರ್ಣಮಯವಾದ ಚಂದ್ರ-ಸೂರ್ಯ-ನಕ್ಷತ್ರಗಳ ಚಿಹ್ನೆ ಗಳಿವೆ. ಆ ಪತಾಕೆಗಳು ಸಣ್ಣ-ಸಣ್ಣ ಗಂಟೆಗಳಿಂದಲೂ ಸಮಲಂಕೃತವಾಗಿವೆ. ಅರ್ಜುನನ ರಥದ ಪತಾಕೆಗಳು ಅಂತರಿಕ್ಷದಲ್ಲಿ ಮೋಡಗಳ ಮಧ್ಯದಲ್ಲಿರುವ ಮಿಂಚುಗಳಂತೆಯೇ ಪ್ರಕಾಶಮಾನವಾಗಿ ಕಾಣುತ್ತಿವೆ. ಗಾಳಿಯಲ್ಲಿ ಹಾರಾಡುತ್ತಿರುವ, ಅರ್ಜುನನ ರಥದಲ್ಲಿರುವ ಆ ಧ್ವಜಗಳು ಕಣ-ಕಣ ಎಂದು ಶಬ್ದಮಾಡುತ್ತಿವೆ. ದೇವತೆಗಳ ವಿಮಾನಗಳ ಮೇಲಿರುವ ಧ್ವಜಗಳೋಪಾದಿ ಯಲ್ಲಿ ಅರ್ಜುನನ ರಥದ ಮೇಲಿರುವ ಪತಾಕೆಗಳು ಪ್ರಕಾಶಮಾನವಾಗಿ ಕಾಣುತ್ತಿವೆ. ಪತಾಕೆಗಳಿಂದ ಕೂಡಿರುವ ಉಳಿದ ರಥಗಳು ಮಹಾತ್ಮರಾದ ಪಾಂಚಾಲಯೋಧರಿಗೆ ಸೇರಿದ್ದಾಗಿವೆ. ಅಪರಾಜಿತನಾದ, ವೀರನಾದ, ಕಪಿಧ್ವಜನಾದ, ಕುಂತಿಯ ಮಗನಾದ ಬೀಭತ್ಸುವು ನಮ್ಮನ್ನು ಆಕ್ರಮಣ ಮಾಡಲು ಇತ್ತ ಬರುತ್ತಿರುವುದನ್ನು ನೋಡು, ಕರ್ಣ! ಅರ್ಜುನನ ಧ್ವಜಾಗ್ರ ದಲ್ಲಿ ಎಲ್ಲ ಕಡೆಗಳಿಂದಲೂ ನೋಡಲು ಸಾಧ್ಯನಾಗಿರುವ, ಭಯಂಕರನಾದ, ಶತ್ರುಗಳ ದುಃಖವನ್ನು ಹೆಚ್ಚಿಸುವ ವಾನರನು ಕಾಣುತ್ತಿದ್ದಾನೆ.

ಅಲ್ಲಿ ನೋಡು. ಅವುಗಳೇ ಧೀಮಂತನಾದ ಶ್ರೀಕೃಷ್ಣನ ಶಂಖ-ಚಕ್ರ-ಗದಾ-ಶಾರ್ಙ್ಗಗಳು. ಕೌಸ್ತುಭಮಣಿಯು ಶ್ರೀಕೃಷ್ಣನ ವಕ್ಷಃಸ್ಥಳದಲ್ಲಿ ಅತಿಶಯವಾಗಿ ಪ್ರಕಾಶಿಸುತ್ತಿದೆ. ಮಹಾವೀರ್ಯವಂತನಾದ, ಶಂಖ-ಗದಾ ಪಾಣಿಯಾದ ಶ್ರೀಕೃಷ್ಣನು ವಾಯುವೇಗಕ್ಕೆ ಸಮಾನವಾದ ವೇಗವುಳ್ಳ ಬಿಳಿಯಬಣ್ಣದ ಕುದುರೆಗಳನ್ನು ಚಪ್ಪರಿಸುತ್ತಾ ಇತ್ತ ಕಡೆಗೇ ಬರುತ್ತಿದ್ದಾನೆ. ಸವ್ಯಸಾಚಿಯಾದ ಅರ್ಜುನನಿಂದ ಸೆಳೆದು ಬಿಡಲ್ಪಟ್ಟ ಗಾಂಡೀವಧನುಸ್ಸಿನ ಶಿಂಜಿನಿಯು ಧ್ವನಿಮಾಡುತ್ತಿದೆ. ಕುಶಲಹಸ್ತನಾದ ಅರ್ಜುನನಿಂದ ಬಿಡಲ್ಪ

ಡುವ ನಿಶಿತವಾದ ಬಾಣಗಳು ಶತ್ರುಗಳನ್ನು ಸಂಹಾರಮಾಡುತ್ತವೆ. ವಿಶಾಲವಾಗಿಯೂ, ಅಗಲವಾಗಿಯೂ ಮತ್ತು ಕೆಂಪಾಗಿಯೂ ಇರುವ ಕಣ್ಣುಗಳನ್ನೂ ಪೂರ್ಣಚಂದ್ರಸದೃಶವಾದ ಮುಖಗಳನ್ನೂ ಹೊಂದಿರುವ, ಯುದ್ಧದಿಂದ ಹಿಂದಿರುಗದೇ ಇರುವ ರಾಜರ ಶಿರಸ್ಸುಗಳಿಂದ ಈ ರಣ ರಂಗವು ಇಂದು ತುಂಬಿಹೋಗುತ್ತದೆ. ಪರಿಘಾಯುಧದ ಆಕಾರವನ್ನು ಹೊಂದಿರುವ, ಪುಣ್ಯಗಂಧದಿಂದ ಲೇಪಿತವಾದ ಆಯುಧಗಳನ್ನೆತ್ತಿರುವ ಯುದ್ಧಕುಶಲರಾದ ವೀರರ ಭುಜಗಳು ಆಯುಧಗಳ ಸಹಿತವಾಗಿಯೇ ಕತ್ತರಿಸಲ್ಪಟ್ಟು ಕೆಳಕ್ಕೆ ಬೀಳುತ್ತವೆ. ಸವಾರರೊಡನೆ ಕೆಳಕ್ಕೆ ಬಿದ್ದಿರುವ, ಬೀಳುತ್ತಿರುವ ಮತ್ತು ಕ್ಷತ-ವಿಕ್ಷತವಾದ ಕುದುರೆಗಳು ಕಣ್ಣು-ನಾಲಿಗೆ ಮತ್ತು ಕರುಳುಗಳನ್ನು ಹೊರಚಾಚಿಕೊಂಡು ನೆಲದಮೇಲೆ ಬೀಳುತ್ತವೆ. ಪರ್ವತಶಿಖರಗಳಿಗೆ ಸಮಾನರೂಪಗಳಾದ ಈ ಆನೆಗಳು ಪಾರ್ಥನಿಂದ ಹತವಾಗಿ ಛಿನ್ನ-ಭಿನ್ನವಾಗಿ ಪರ್ವತಗಳೋಪಾದಿಯಲ್ಲಿ ರಣರಂಗದಲ್ಲಿ ಬೀಳುತ್ತವೆ. ಅರ್ಜುನನಿಂದ ಹತರಾದ, ರಥಿಗಳಿಂದ ಕೂಡಿದ, ಗಂಧರ್ವ ನಗರದ ಆಕಾರಗಳನ್ನು ಹೊಂದಿರುವ ಈ ರಥಗಳು ಸ್ವರ್ಗನಿವಾಸಿಗಳ ಪುಣ್ಯಮಯವಾದ ವಿಮಾನಗಳೋಪಾದಿಯಲ್ಲಿ ಭೂಮಿಯ ಮೇಲೆ ಬೀಳುತ್ತವೆ. ಸಿಂಹವು ಸಾವಿರಾರು ಮೃಗಗಳ ಸಮೂಹಗಳನ್ನೂ ವ್ಯಾಕುಲ ಗೊಳಿಸುವಂತೆ– ಕಿರೀಟಿಯು ನಮ್ಮ ಸೈನ್ಯವನ್ನು ಬಹಳವಾಗಿ ವ್ಯಾಕುಲಗೊಳಿಸುತ್ತಿರುವುದನ್ನು ನೋಡು, ಕರ್ಣ! ನಿನ್ನ ಸೈನಿಕರು ಆಕ್ರಮಣ ನಡೆಸಿದನಂತರ ವೀರಪಾಂಡವಯೋಧರು ತಮ್ಮನ್ನು ಪ್ರಹರಿಸಿದ ರಾಜ ರನ್ನೂ ಗಜಾಶ್ವ-ರಥ-ಪದಾತಿ ಸೈನಿಕರನ್ನೂ ಅವ್ಯಾಹತವಾಗಿ ಕೊಲ್ಲುತ್ತಿ ದ್ದಾರೆ. ಸೂರ್ಯನು ಮೋಡಗಳಿಂದ ಮುಚ್ಚಲ್ಪಡುವಂತೆ–ಅರ್ಜುನನೂ ಈಗ ಕಾಣುತ್ತಿಲ್ಲ. ಆದರೆ ಅವನ ಧ್ವಜಾಗ್ರವು ಮಾತ್ರವೇ ಕಾಣುತ್ತಿದೆ. ಮತ್ತು ಶಿಂಜಿನಿಯ ಟೇಂಕಾರಶಬ್ದವೂ ಕೇಳಿಸುತ್ತದೆ. ಕರ್ಣ! ನೀನು 'ಅರ್ಜುನನೆಲ್ಲಿದ್ದಾನೆ?'–ಎಂದು ಪ್ರಶ್ನಿಸುತ್ತಿದ್ದೆಯಲ್ಲವೆ? ಶ್ವೇತಾಶ್ವನಾದ, ಕೃಷ್ಣಸಾರಥಿಯಾದ, ವೀರನಾದ, ಶತ್ರುಗಳನ್ನು ಧ್ವಂಸಮಾಡುತ್ತಿರುವ ಅರ್ಜುನನನ್ನು ಈ ಕ್ಷಣದಲ್ಲಿಯೇ ನೀನು ನೋಡಲಿರುವೆ. ಪುರುಷಸಿಂಹ ರಾದ, ಲೋಹಿತಾಕ್ಷರಾದ, ಶತ್ರುತಾಪಕರಾದ, ಒಂದೇ ರಥದಲ್ಲಿ ಕುಳಿತಿ ರುವ ವಾಸುದೇವಾರ್ಜುನರನ್ನು ಈಗಲೇ ಕಾಣುವೆ. ಶ್ರೀಕೃಷ್ಣನು ಯಾರಿಗೆ

ಸಾರಥಿಯಾಗಿರುವನೋ, ಗಾಂಡೀವವು ಯಾರಿಗೆ ಧನುಸ್ಸಾಗಿರುವುದೋ-ಅಂತಹ ಅರ್ಜುನನನ್ನು ನೀನು ಸಂಹರಿಸಿದೆಯಾದರೆ ಖಂಡಿತವಾಗಿಯೂ ನೀನೇ ನಮಗೆ ರಾಜನಾಗುವೆ. ಸಂಶಪ್ತಕರಿಂದ ಯುದ್ಧಕ್ಕೆ ಆಹ್ವಾನಿಸಲ್ಪಟ್ಟ ಪಾರ್ಥನು ಅವರನ್ನೇ ಎದುರಿಸಿ ಯುದ್ಧಮಾಡಲು ಹೋಗಿರುವನು. ಮಹಾಬಲಿಷ್ಠನಾದ ಅರ್ಜುನನು ಯುದ್ಧದಲ್ಲಿ ಶತ್ರುಗಳನ್ನು ಅಪಾರಸಂಖ್ಯೆಯಲ್ಲಿ ಸಂಹಾರಮಾಡುತ್ತಾನೆ."

ಇವೇ ಮುಂತಾಗಿ ಅರ್ಜುನನನ್ನು ಪ್ರಶಂಸೆಮಾಡುತ್ತಿದ್ದ ಶಲ್ಯನನ್ನು ಕುರಿತು ಕರ್ಣನು ಬಹಳ ಕೋಪದಿಂದ ಈ ಮಾತುಗಳನ್ನು ಹೇಳಿದನು:

"ಶಲ್ಯ! ಇಲ್ಲಿ ನೋಡು. ಕ್ರುದ್ಧರಾದ ಸಂಶಪ್ತಕರು ಅರ್ಜುನನನ್ನು ನಾಲ್ಕುಕಡೆಗಳಿಂದಲೂ ಮುತ್ತಿಗೆ ಹಾಕಿದ್ದಾರೆ. ಮೋಡದಿಂದ ಸೂರ್ಯನು ಮುಚ್ಚಲ್ಪಡುವಂತೆ–ಅರ್ಜುನನು ಆ ಸಮೂಹದಲ್ಲಿ ಮುಚ್ಚಿಹೋಗಿದ್ದಾನೆ. ಕಾಣುತ್ತಲೇ ಇಲ್ಲ. ಅರ್ಜುನನ ಅಂತ್ಯವಾಗಿ ಹೋಯಿತು. ಯೋಧರ ಸಾಗರದಲ್ಲವನು ಮುಳುಗಿಯೇಹೋದನು."

ಶಲ್ಯನು ಹೇಳುತ್ತಾನೆ:

**ವರುಣಂ ಕೋಮ್ಭಸಾ ಹನ್ಯಾದಿನ್ಧನೇನ ಚ ಪಾವಕಮ್ ।**
**ಕೋ ವಾನಿಲಂ ನಿಗೃಹ್ಣೀಯಾತ್ಪಿಬೇದ್ವಾ ಕೋ ಮಹಾರ್ಣವಮ್ ॥**

"ಅಪಾಂಪತಿಯಾದ ವರುಣನನ್ನು ನೀರಿನಿಂದಲೇ ಯಾರು ನಾಶ ಮಾಡುತ್ತಾರೆ? ಅಗ್ನಿಯನ್ನು ಕಟ್ಟಿಗೆಯಿಂದಲೇ ಯಾರು ವಿನಾಶಗೊಳಿಸ ಬಲ್ಲರು? ವಾಯುವನ್ನು ಬಂಧನದಲ್ಲಿಡತಕ್ಕವರು ಯಾರಿದ್ದಾರೆ? ಮಹಾ ಸಮುದ್ರವನ್ನು ಯಾರು ಕುಡಿಯುತ್ತಾರೆ? ಯುದ್ಧದಲ್ಲಿ ಪಾರ್ಥನ ಪರಾಜಯವೂ ಇಂತಹ ಸ್ವರೂಪದ್ದೇ ಎಂದು ನಾನು ಭಾವಿಸುತ್ತೇನೆ. ಅರ್ಜುನನನ್ನು ಜಯಿಸಲು ಇಂದ್ರಸಹಿತರಾದ ದೇವ-ದಾನವರಿಂದಲೂ ಸಾಧ್ಯವಾಗುವುದಿಲ್ಲ. ಅಥವಾ ಅರ್ಜುನನು ಹತನಾಗುತ್ತಾನೆಂದು ಬಾಯಿಂದ ಹೇಳುವುದರಿಂದಲೇ ಮತ್ತು ಭಾವಿಸುವುದರಿಂದಲೇ ನಿನಗೆ ಸಂತೋಷವಾಗುವುದಾದರೆ ಹಾಗೆ ಹೇಳಿಕೊಂಡೇ ಸಂತೋಷಪಡು. ಆದರೆ

ಯುದ್ಧದ ಮೂಲಕ ಅರ್ಜುನನನ್ನು ಗೆಲ್ಲಲಂತೂ ಸಾಧ್ಯವೇ ಇಲ್ಲ. ಆದುದರಿಂದ ಅರ್ಜುನನನ್ನು ಗೆಲ್ಲುವೆನೆಂಬ ಆಸೆಯನ್ನು ಸಂಪೂರ್ಣವಾಗಿ ಪರಿತ್ಯಜಿಸಿ ಬೇರೆ ಯಾವುದಾದರೂ ಆಸೆಯನ್ನು ಮನಸ್ಸಿನಲ್ಲಿ ಕಲ್ಪಿಸಿಕೊ.

**ಬಾಹುಭ್ಯಾಮುದ್ಧರೇದ್ಭೂಮಿಂ ದಹೇತ್ಕ್ರುದ್ಧ ಇಮಾಃ ಪ್ರಜಾಃ।**
**ಪಾತಯೇತ್ತ್ರಿದಿವಾದ್ದೇವಾನ್ಯೋಽರ್ಜುನಂ ಸಮರೇ ಜಯೇತ್ ॥**

ಯಾವ ಮಹಾವೀರನು ಯುದ್ಧದಲ್ಲಿ ಅರ್ಜುನನನ್ನು ಜಯಿಸುವನೋ ಅವನು ಎರಡು ತೋಳುಗಳಿಂದಲೇ ಭೂಮಿಯನ್ನು ಎತ್ತಬಲ್ಲನು. ಕ್ರುದ್ಧನಾಗಿ ಕ್ಷಣಮಾತ್ರದಲ್ಲಿ ವಿಶ್ವದಲ್ಲಿರುವ ಪ್ರಜಾಕೋಟಿಯನ್ನೇ ದಹಿಸಿಬಿಡಬಲ್ಲನು. ಸ್ವರ್ಗದಿಂದ ದೇವತೆಗಳನ್ನೇ ಕೆಳಕ್ಕೆ ಬೀಳಿಸಬಲ್ಲನು. ಕಷ್ಟಸಾಧ್ಯವಾದ ಕಾರ್ಯ ವನ್ನೂ ಸ್ವಲ್ಪವಾದರೂ ಶ್ರಮವಿಲ್ಲದೆಯೇ ಮಾಡಿ ಮುಗಿಸುವ, ವೀರನಾದ, ಮಹಾಬಾಹುವಾದ, ಭೀಮಪರಾಕ್ರಮನಾದ, ಬೇರೊಂದು ಮೇರುಪರ್ವತ ದೋಪಾದಿಯಲ್ಲಿ ಸ್ಥಿರನಾಗಿ ನಿಂತು ಜಾಜ್ವಲ್ಯಮಾನನಾಗಿ ಪ್ರಕಾಶಿಸುತ್ತಿರುವ, ಕುಂತಿಯಮಗನಾದ ಅರ್ಜುನನನ್ನು ನೋಡು. ಅಸಹನಶೀಲನಾದ, ನಿತ್ಯ ಕೋಪಿಯಾದ, ವಿಜಯೇಚ್ಛುವಾದ, ವೀರ್ಯವಂತನಾದ ಭೀಮಸೇನನು ಹಿಂದಿನ ವೈರವನ್ನು ಸ್ಮರಿಸುತ್ತಾ ರಣರಂಗದಲ್ಲಿ ಯುದ್ಧಸನ್ನದ್ಧನಾಗಿ ನಿಂತಿದ್ದಾನೆ. ಧರ್ಮಿಷ್ಠರಲ್ಲಿ ಶ್ರೇಷ್ಠನಾದ, ಪರಪುರಂಜಯನಾದ, ಶತ್ರುಗಳಿಂದ ಗೆಲ್ಲಲು ಅಸಾಧ್ಯನಾದ ಧರ್ಮರಾಜ ಯುಧಿಷ್ಠಿರನು ಯುದ್ಧಸನ್ನದ್ಧನಾಗಿ ನಿಂತಿದ್ದಾನೆ. ಪುರುಷವ್ಯಾಘ್ರರಾದ, ಅಶ್ವಿನೀದೇವತೆಗಳೋಪಾದಿಯಲ್ಲಿರುವ, ದುರ್ಜಯ ರಾದ, ಯಮಳರಾದ ನಕುಲ-ಸಹದೇವರು ಯುದ್ಧಸನ್ನದ್ಧರಾಗಿ ನಿಂತಿದ್ದಾರೆ. ಅರ್ಜುನನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮದಿಂದ ಕೂಡಿರುವ, ಐದು ಪರ್ವತಗಳಂತೆಯೇ ಕಾಣುತ್ತಿರುವ, ಐವರು ದ್ರೌಪದಿಯ ಮಕ್ಕಳೂ ಯುದ್ಧಮಾಡುವ ಇಚ್ಛೆಯಿಂದ ಸನ್ನದ್ಧರಾಗಿ ನಿಂತಿದ್ದಾರೆ.

ಪರಿಪುಷ್ಟರಾದ, ಸತ್ಯಜಿತರಾದ, ವೀರರಾದ, ಮಹಾತೇಜಸ್ಸಿನಿಂದ ಕೂಡಿರುವ ಧೃಷ್ಟದ್ಯುಮ್ನನೇ ಮೊದಲಾದ ದ್ರುಪದನ ಮಕ್ಕಳು ಯುದ್ಧ

ಸನ್ನದ್ಧರಾಗಿ ನಿಂತಿದ್ದಾರೆ. ಸಾತ್ವತವಂಶೀಯರಲ್ಲಿ ಶ್ರೇಷ್ಠನಾದ, ಇಂದ್ರನಂತೆ ಶತ್ರುಗಳಿಂದ ಸಹಿಸಲು ಅಸಾಧ್ಯನಾದ, ಕ್ರುದ್ಧನಾದ ಯಮರಾಜನಿಗೆ ಸಮಾನನಾದ ಸಾತ್ಯಕಿಯು ಯುದ್ಧಮಾಡುವ ಇಚ್ಛೆಯಿಂದ ನಮ್ಮ ಕಡೆಗೇ ಬರುತ್ತಿದ್ದಾನೆ."

ಮಹಾರಾಜ! ಪುರುಷಸಿಂಹರಾದ ಕರ್ಣ-ಶಲ್ಯರಿಬ್ಬರೂ ಹೀಗೆ ಸಂಭಾಷಿಸುತ್ತಿರಲಾಗಿ, ಗಂಗಾ-ಯಮುನಾ ನದಿಗಳು ಒಟ್ಟಾಗಿ ಸೇರುವಂತೆ ಕೌರವ-ಪಾಂಡವಸೇನೆಗಳು ವೇಗಪೂರ್ವಕವಾಗಿ ಸಂಘರ್ಷಿಸಿದುವು.

೪೬ನೆಯ ಅಧ್ಯಾಯವು ಮುಗಿಯಿತು.

೪೭ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕೌರವ-ಪಾಂಡವ ಸೈನ್ಯಗಳ ನಡುವೆ ಭಯಂಕರಯುದ್ಧ: ಕರ್ಣಾರ್ಜುನರ ಪರಾಕ್ರಮ

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ:

"ಸಂಜಯ! ನೀನು ಹೇಳಿದಂತೆ ಉಭಯಪಕ್ಷಗಳೂ ವ್ಯೂಹವನ್ನು ರಚಿಸಿಕೊಂಡು ಉಭಯಪಕ್ಷಗಳ ಸೈನಿಕರೂ ಸಂಘರ್ಷಿಸುತ್ತಿರಲಾಗಿ, ಪಾರ್ಥನು ಸಂಶಪ್ತಕರೊಡನೆ ಯುದ್ಧಮಾಡಲು ಹೇಗೆ ಹೋದನು ಮತ್ತು ಕರ್ಣನು ಅರ್ಜುನನಿಲ್ಲದ ಆ ಸಮಯದಲ್ಲಿ ಪಾಂಡವರೊಡನೆ ಹೇಗೆ ಯುದ್ಧಮಾಡಿದನು? ಸೂತ! ಈ ವಿಷಯವನ್ನು ನನಗೆ ನೀನು ವಿಸ್ತಾರವಾಗಿ ಹೇಳು. ವೃತ್ತಾಂತಗಳನ್ನು ನಿರೂಪಿಸುವುದರಲ್ಲಿ ನೀನು ಬಹಳ ಕುಶಲನಾಗಿರುವೆ. ರಣಭೂಮಿಯಲ್ಲಿ ವೀರರು ತೋರಿಸುವ ಪರಾಕ್ರಮವರ್ಣನೆಯನ್ನು ಕೇಳುತ್ತಿದ್ದಂತೆಲ್ಲಾ ನನಗೆ ಇನ್ನೂ ಕೇಳಬೇಕೆನ್ನಿಸುವುದೇ ಹೊರತು ತೃಪ್ತಿಯೇ ಆಗುವುದಿಲ್ಲ."

"ಮಹಾರಾಜ! ನಿನ್ನ ಮಗನ ದುರ್ನೀತಿಯಿಂದಾಗಿ ಶತ್ರುಗಳ ಮಹಾಸೇನೆಯು ಯುದ್ಧಕ್ಕೆ ಸನ್ನದ್ಧವಾಗಿದ್ದುದನ್ನು ಕಂಡು ಅರ್ಜುನನು ತನ್ನ ಸೈನ್ಯವನ್ನೂ ವ್ಯೂಹಕ್ರಮದಲ್ಲಿ ನಿಲ್ಲಿಸಿದನು. ಕುದುರೆಸವಾರ

ರಿಂದಲೂ, ಗಜಸೈನಿಕರಿಂದಲೂ, ರಥಸೈನಿಕರಿಂದಲೂ ಮತ್ತು ಪದಾತಿ ಗಳಿಂದಲೂ ಸಂಪನ್ನವಾಗಿದ್ದ ಆ ವ್ಯೂಹವು ಧೃಷ್ಟದ್ಯುಮ್ನನನ್ನು ಮುಖಭಾಗದಲ್ಲಿ ಹೊಂದಿ ಬಹಳವಾಗಿ ಶೋಭಿಸುತ್ತಿದ್ದಿತು. ಪಾರಿವಾಳಗಳ ಬಣ್ಣದಿಂದ ಶೋಭಿಸುತ್ತಿದ್ದ ಕುದುರೆಗಳಿಂದ ಕೂಡಿದ್ದ, ಚಂದ್ರ-ಸೂರ್ಯರ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ವಿರಾಜಿಸುತ್ತಿದ್ದ, ಧನುರ್ಧರನಾದ ಪಾರ್ಷತನು ಮೂರ್ತಿಮತ್ತಾಗಿ ನಿಂತಿರುವ ಕಾಲನೋಪಾದಿಯಲ್ಲಿ ಪ್ರಕಾಶಿಸುತ್ತಿದ್ದನು. ದಿವ್ಯವಾದ ಕವಚಗಳನ್ನೂ ಆಯುಧಗಳನ್ನೂ ಧರಿಸಿದ್ದ, ಸಿಂಹಸಮಾನ ವಿಕ್ರಮರಾಗಿದ್ದ, ಅನುಯಾಯಿಸೈನಿಕರಿಂದ ಕೂಡಿದ್ದ, ಯುದ್ಧೋತ್ಸುಕರಾಗಿದ್ದ ದ್ರೌಪದಿಯ ಮಕ್ಕಳು–ಪ್ರದೀಪ್ತವಾದ ಸ್ವರೂಪಗಳಿಂದ ಕೂಡಿದ ನಕ್ಷತ್ರಗಳು ಚಂದ್ರನನ್ನು ಸಂರಕ್ಷಿಸುವಂತೆ-ಧೃಷ್ಟದ್ಯುಮ್ನನನ್ನು ರಕ್ಷಿಸುತ್ತಿದ್ದರು. ಹೀಗೆ ಸೈನಿಕರನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿದ ನಂತರ ರಣರಂಗದಲ್ಲಿ ಸಂಶಪ್ತಕರನ್ನು ನೋಡಿ ಕ್ರುದ್ಧನಾದ ಅರ್ಜುನನು ಗಾಂಡೀವಧನುಸ್ಸನ್ನು ಟೇಂಕರಿಸುತ್ತಾ ಅವರನ್ನು ಆಕ್ರಮಿಸಿದನು.

ವಿಜಯವನ್ನು ಗಳಿಸಬೇಕೆಂಬ ದೃಢಸಂಕಲ್ಪದಿಂದ ಮೃತ್ಯುವನ್ನೇ ತಮ್ಮ ಹಿಂದಿರುಗುವ ಸ್ಥಾನವನ್ನಾಗಿ ಕಲ್ಪಿಸಿಕೊಂಡು, ಪಾರ್ಥನನ್ನು ವಧಿ ಸುವ ಇಚ್ಛೆಯಿಂದ ಸಂಶಪ್ತಕರೂ ಅರ್ಜುನನನ್ನು ಆಕ್ರಮಿಸಿದರು. ಆ ಸಂಶಪ್ತಕ ಮಹಾಸೈನ್ಯವು ಕುದುರೇಸವಾರರಿಂದಲೂ ಮತ್ತು ಕುದುರೆ ಗಳಿಂದಲೂ ಸಮೃದ್ಧವಾಗಿದ್ದಿತು. ಮದಿಸಿದ ಆನೆಗಳಿಂದಲೂ ಮತ್ತು ರಥಗಳಿಂದಲೂ ಸಂಪನ್ನವಾಗಿದ್ದಿತು. ಆ ಸೈನ್ಯದಲ್ಲಿ ಬಹುಸಂಖ್ಯಾತರಾದ ಪದಾತಿಗಳೂ ಇದ್ದರು. ಶೂರರ ಸಮುದಾಯದಿಂದಲೂ ಆ ಮಹಾ ಸೈನ್ಯವು ಸಮಲಂಕೃತ ವಾಗಿದ್ದಿತು. ಹೀಗೆ ಚತುರಂಗಬಲದಿಂದ ಯುಕ್ತ ವಾಗಿದ್ದ ಆ ಮಹಾಸೈನ್ಯವು ಅರ್ಜುನನನ್ನು ಎಲ್ಲ ಕಡೆಗಳಿಂದಲೂ ಪೀಡಿಸ ತೊಡಗಿತು. ಹಿಂದೆ ನಿವಾತಕವಚರಿಗೂ ಮತ್ತು ಅರ್ಜುನನಿಗೂ ಘೋರಯುದ್ಧವಾಯಿತೆಂದು ನಾವು ಕೇಳಿದ್ದೆವು. ಆ ಮಹಾಯುದ್ಧ ದಂತೆಯೇ ಈಗಲೂ ಸಹ ಅರ್ಜುನನಿಗೂ ಮತ್ತು ಸಂಶಪ್ತಕರಿಗೂ ಮಹಾಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಅನಂತರ

ಪಾರ್ಥನು ತನ್ನೊಡನೆ ಯುದ್ಧಮಾಡುತ್ತಿದ್ದ ಸಂಶಪ್ತಕರ ರಥಗಳನ್ನೂ, ಕುದುರೆಗಳನ್ನೂ, ಧ್ವಜಗಳನ್ನೂ, ಆನೆಗಳನ್ನೂ, ಪದಾತಿಗಳನ್ನೂ ಬಾಣಗಳನ್ನೂ, ಧನುಸ್ಸುಗಳನ್ನೂ, ಕತ್ತಿಗಳನ್ನೂ, ಚಕ್ರಗಳನ್ನೂ, ಗಂಡು ಗೊಡಲಿಗಳನ್ನೂ, ಮೇಲಕ್ಕೆತ್ತಿದ್ದ ಆಯುಧಸಹಿತವಾದ ಬಾಹುಗಳನ್ನೂ, ವಿಧ-ವಿಧವಾದ ಆಯುಧಗಳನ್ನೂ, ಶತ್ರುಗಳ ಶಿರಸ್ಸುಗಳನ್ನೂ-ಸಾವಿರಾರು ಸಂಖ್ಯೆಯಲ್ಲಿ ಕತ್ತರಿಸಿದನು. (ಅರ್ಜುನನ ಸುತ್ತಲೂ ಸಾವಿರಾರು ಸಂಖ್ಯೆಯಲ್ಲಿ ರಥಾಶ್ವ-ಗಜ-ಪದಾತಿಗಳು ಸತ್ತುಬಿದ್ದಿದ್ದುವು.) ಆ ಸಮಯದಲ್ಲಿ ಅರ್ಜುನನು ಮಹಾಸೈನ್ಯದ ಸುಳಿಯಲ್ಲಿ ಸಿಕ್ಕಿಬಿದ್ದವನಂತಿದ್ದನು. ಆ ಸುಳಿಯು ಪಾತಾಳ ದಂತಿದ್ದಿತು. ಆ ಮಧ್ಯದಲ್ಲಿದ್ದ ಅರ್ಜುನನು ಸ್ವಲ್ಪದೂರದಲ್ಲಿದ್ದ ಸೈನಿಕರಿಗೆ ಕಾಣಿಸುತ್ತಲೇ ಇರಲಿಲ್ಲ. ಸಂಶಪ್ತಕರ ಸೈನ್ಯದ ಸುಳಿಗೆ ಸಿಕ್ಕಿ ಅರ್ಜುನನ ರಥವು ಮುಳುಗಿಹೋಯಿತೆಂದೇ ಸಂಶಪ್ತಕರೆಲ್ಲರೂ ಭಾವಿಸಿಬಿಟ್ಟರು. ಅಷ್ಟರಿಂದಲೇ ಅವರು ಪರಮಹೃಷ್ಟರಾಗಿ ಸಿಂಹನಾದಗಳನ್ನು ಮಾಡಿದರು. ಅನಂತರ ಅರ್ಜುನನು ಪೂರ್ವದಿಕ್ಕಿನಲ್ಲಿದ್ದ ಶತ್ರುಗಳೆಲ್ಲರನ್ನೂ ಸಂಹಾರಮಾಡಿ ಬಳಿಕ ಉತ್ತರ-ದಕ್ಷಿಣ-ಪಶ್ಚಿಮದಿಕ್ಕು ಗಳಲ್ಲಿದ್ದ ಸಂಶಪ್ತಕರನ್ನೂ–ಪ್ರಳಯಕಾಲದಲ್ಲಿ ಕ್ರುದ್ಧನಾದ ರುದ್ರದೇವನು ಪ್ರಾಣಿಗಳನ್ನು ಸಂಹರಿಸುವಂತೆ–ಸಂಹರಿಸಿದನು.

ಮಹಾರಾಜ! ಮತ್ತೊಂದು ವಿಭಾಗದಲ್ಲಿ ಪಾಂಚಾಲ-ಚೇದಿ-ಸೃಂಜಯಸೈನಿಕರಿಗೂ ಮತ್ತು ನಿನ್ನ ಕಡೆಯ ಸೈನಿಕರಿಗೂ ಪರಮದಾರುಣವಾದ ಯುದ್ಧವಾಯಿತು. ರಥಸೈನ್ಯವನ್ನು ಧ್ವಂಸಮಾಡುವುದರಲ್ಲಿ ಮಹಾಕುಶಲರಾದ ಕೃಪ-ಕೃತವರ್ಮ-ಸೌಬಲರು ಯುದ್ಧದುರ್ಮದರಾದ, ಅತ್ಯಂತಕುಪಿತ ರಾಗಿದ್ದ, ಯುದ್ಧಮಾಡುವುದರಲ್ಲಿ ಪರಮಹೃಷ್ಟರಾಗಿದ್ದ ಸೈನಿಕರೊಡನೆ ಕೂಡಿಕೊಂಡು ಕೋಸಲ-ಕಾಶಿ-ಮತ್ಸ್ಯ-ಕರೂಷ- ಕೇಕಯ-ಶೂರಸೇನ ದೇಶಗಳ ಯೋಧರೊಡನೆ ಯುದ್ಧದಲ್ಲಿ ತೊಡಗಿದರು. ಅವರ ಆ ಮಹಾಯುದ್ಧವು ಕ್ಷತ್ರಿಯ-ವೈಶ್ಯ-ಶೂದ್ರವೀರರ ಶರೀರ-ಪಾಪ-ಪ್ರಾಣಾಪ ಹಾರಕವೂ, ಧರ್ಮಸಮ್ಮತವೂ, ಸ್ವರ್ಗಪ್ರಾಪಕವೂ, ಯಶಸ್ಕರವೂ ಆಗಿದ್ದಿತು.

ಭರತಶ್ರೇಷ್ಠನೇ! ಅನುಜರಿಂದ ಕೂಡಿದ ಕುರುವೀರನಾದ

ದುರ್ಯೋಧನನು ಕುರುಪ್ರವೀರರಿಂದಲೂ ಮದ್ರಮಹಾರಥರಿಂದಲೂ ಸಂರಕ್ಷಿತನಾಗಿ ಪಾಂಡವ-ಪಾಂಚಾಲ-ಚೇದಿವೀರರೊಡನೆಯೂ ಮತ್ತು ಸಾತ್ಯಕಿಯೊಡನೆಯೂ ಯುದ್ಧಮಾಡುತ್ತಿದ್ದ ಕರ್ಣನನ್ನು ರಕ್ಷಿಸುತ್ತಿದ್ದನು. ಕರ್ಣನೂ ಸಹ ನಿಶಿತವಾದ ಬಾಣಗಳಿಂದ ಪಾಂಡು-ಪಾಂಚಾಲ-ಚೇದಿಗಳ ಮಹಾಸೈನ್ಯವನ್ನು ಧ್ವಂಸಮಾಡಿ, ಪಾಂಡವರ ಪಕ್ಷದ ಶ್ರೇಷ್ಠರಾದ ರಥಿಗಳನ್ನೂ ಮರ್ದನಮಾಡಿ, ಅನಂತರ ಯುಧಿಷ್ಠಿರನನ್ನೂ ಬಹಳವಾಗಿ ಪೀಡಿಸ ತೊಡಗಿದನು. ಕರ್ಣನು ಸಾವಿರಾರು ಶತ್ರುಸೈನಿಕರನ್ನು ವಸ್ತ್ರಾಯುಧ-ದೇಹ-ಪ್ರಾಣಗಳಿಂದ ವಿಹೀನರನ್ನಾಗಿ ಮಾಡಿ ತನ್ಮೂಲಕವಾಗಿ ಅವರಿಗೆ ಸ್ವರ್ಗ ಮತ್ತು ಯಶಸ್ಸುಗಳು ಲಭಿಸುವಂತೆ ಮಾಡಿ, ತನ್ನ ಕಡೆಯ ಸೈನಿಕರಿಗೆ ಮಹಾನಂದವನ್ನುಂಟುಮಾಡಿದನು. ಮಾರಿಷ! ಈ ರೀತಿಯಲ್ಲಿ ಗಜಾಶ್ವ-ಪದಾತಿಸೈನಿಕರ ಕ್ಷಯಕರವಾದ ಕುರು-ಸೃಂಜಯರ ಯುದ್ಧವು ದೇವಾಸುರರ ಯುದ್ಧಕ್ಕೆ ಸದೃಶವಾಗಿಯೇ ನಡೆಯುತ್ತಿದ್ದಿತು."

೪೭ನೆಯ ಅಧ್ಯಾಯವು ಮುಗಿಯಿತು.

೪೮ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣನು ಪಾಂಡವರ ಸೈನ್ಯದಲ್ಲಿ ಅನೇಕ ಯೋಧರನ್ನು ಸಂಹರಿಸಿದುದು: ಭೀಮಸೇನನು ಕರ್ಣನ ಮಗನಾದ ಭಾನುಸೇನನನ್ನು ಸಂಹರಿಸಿದುದು: ನಕುಲ-ಸಾತ್ಯಕಿಯರೊಡನೆ ವೃಷಸೇನನ ಯುದ್ಧ: ಕರ್ಣನು ಯುಧಿಷ್ಠಿರರಾಜನನ್ನು ಆಕ್ರಮಿಸಿದುದು

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ:

"ಸಂಜಯ! ಕರ್ಣನು ತನ್ನನ್ನು ಎದುರಿಸಲು ಬಂದ ಸೈನಿಕರನ್ನು ಸಂಹರಿಸುವುದರ ಮೂಲಕ ಅಪಾರವಾದ ಜನಕ್ಷಯವನ್ನು ಮಾಡುತ್ತಾ ಪಾಂಡವರ ಸೈನ್ಯವನ್ನು ಪ್ರವೇಶಿಸಿ ಯುಧಿಷ್ಠಿರನನ್ನು ಯಾವ ರೀತಿಯಲ್ಲಿ ಪೀಡಿಸಿದನೆಂಬ ವಿಷಯವನ್ನು ನನ್ನೊಡನೆ ಹೇಳು. ಕರ್ಣನು ಯುಧಿಷ್ಠಿರನ

ಸಮೀಪಕ್ಕೆ ಹೋಗುತ್ತಿದ್ದಾಗ ಪಾಂಡವರ ಕಡೆಯಲ್ಲಿದ್ದ ಯಾವ ವೀರರು ಅವನನ್ನು ತಡೆದರು? ಹೀಗೆ ತಡೆಯಲು ಬಂದವರಲ್ಲಿ ಕರ್ಣನು ಯಾವ ಯೋಧರನ್ನು ಸಂಹರಿಸಿ ಯುಧಿಷ್ಠಿರನ ಬಳಿಗೆ ಹೋಗಿ ಅವನನ್ನು ಪೀಡಿಸಿದನು?"

"ಮಹಾರಾಜ! ಶತ್ರುಸಂಹಾರಕನಾದ ಕರ್ಣನು ಧೃಷ್ಟದ್ಯುಮ್ನ ಪ್ರಮುಖರಾದ ಪಾರ್ಥರು ಯುದ್ಧಸನ್ನದ್ಧರಾಗಿ ನಿಂತಿರುವುದನ್ನು ನೋಡಿ ಬಹಳ ವೇಗವಾಗಿ ಮುಂದೆ ಹೋಗಿ ಪಾಂಚಾಲರ ಮೇಲೆ ದಾಳಿಮಾಡಿದನು. ವಿಜಯೋಲ್ಲಸಿತರಾದ ಪಾಂಚಾಲರು ಬಹಳ ವೇಗವಾಗಿ ತಮ್ಮ ಕಡೆಗೇ ಬರುತ್ತಿದ್ದ ಮಹಾತ್ಮನಾದ ಕರ್ಣನನ್ನು–ಮಹಾಸರೋವರದ ಬಳಿಗೆ ಹಂಸಗಳು ವೇಗವಾಗಿ ಹೋಗುವಂತೆ–ರಭಸದಿಂದ ಎದುರಿಸಿದರು. ಅನಂತರ ಎರಡು ಪಕ್ಷಗಳಲ್ಲಿಯೂ ಹೃದಯಂಗಮವಾದ ಸಾವಿರಾರು ಶಂಖಗಳ ಧ್ವನಿಗಳೂ, ದಾರುಣವಾದ ಭೇರೀನಿನಾದವೂ ಪ್ರಾದುರ್ಭವಿಸಿದುವು. ನಾನಾವಿಧವಾದ ಬಾಣಗಳ ನಿಪಾತಶಬ್ದಗಳೂ, ಆನೆಗಳ ಘೀಂಕಾರಶಬ್ದಗಳೂ, ಕುದುರೆಗಳ ಕೆನೆಯುವ ಶಬ್ದಗಳೂ, ರಥಗಳ ಗಡ-ಗಡಾ ಶಬ್ದಗಳೂ, ವೀರರ, ಸಿಂಹನಾದಗಳ ಶಬ್ದಗಳೂ ಬಹಳ ದಾರುಣವಾಗಿ ಕೇಳಿಬರುತ್ತಿದ್ದುವು. ಪರ್ವತ, ವೃಕ್ಷ ಮತ್ತು ಸಮುದ್ರಗಳಿಂದ ಯುಕ್ತವಾದ ಭೂಮಿಯೂ, ವಾಯು ಮತ್ತು ಮೇಘಗಳಿಂದ ಕೂಡಿದ ಆಕಾಶವೂ, ಸೂರ್ಯ-ಚಂದ್ರ-ಗ್ರಹ-ನಕ್ಷತ್ರಗಳಿಂದ ಕೂಡಿದ ಸ್ವರ್ಗವೂ ಭ್ರಮಿಸುತ್ತಿರುವಂತೆ ಕಾಣುತ್ತಿದ್ದುವು. ಈ ರೀತಿಯಾದ ಆ ತುಮುಲಶಬ್ದವನ್ನು ಪ್ರಪಂಚದ ಎಲ್ಲ ಪ್ರಾಣಿಗಳೂ ಕೇಳಿದುವು ಮತ್ತು ಬಹಳವಾಗಿ ವ್ಯಥೆಗೊಂಡುವು. ಅವುಗಳಲ್ಲಿ ಅಲ್ಪಬಲವುಳ್ಳ, ಪ್ರಾಣಿಗಳು ಆ ಘೋರ ಶಬ್ದವನ್ನು ಕೇಳಿ ಪ್ರಾಯಶಃ ಸತ್ತೇಹೋದುವು.

ಅನಂತರ ಕರ್ಣನು ಬಹಳ ಕ್ರುದ್ಧನಾಗಿ ಅಸ್ತ್ರಗಳನ್ನು ಶೀಘ್ರಾತಿಶೀಘ್ರವಾಗಿ ಬಿಡುತ್ತಾ–ದೈತ್ಯರ ಸೈನ್ಯವನ್ನು ಇಂದ್ರನು ಪ್ರಹರಿಸುತ್ತಿದ್ದಂತೆ–ಪಾಂಡವರ ಸೈನ್ಯವನ್ನು ಪ್ರಹರಿಸಿದನು. ಕರ್ಣನು ಪಾಂಡವರ ಸೈನ್ಯದೊಳಗೆ ಪ್ರವೇಶಿಸಿ ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಾ ಎಪ್ಪತ್ತೇಳು ಪ್ರಭದ್ರಕವೀರರನ್ನು ಸಂಹರಿಸಿದನು. ಬಳಿಕ ರಥಿಗಳಲ್ಲಿ ಶ್ರೇಷ್ಠನಾದ ಕರ್ಣನು ನಿಶಿತವಾದ, ಸುಂದರವಾದ ಹಿಂಭಾಗದಿಂದ ಕೂಡಿದ್ದ ಇಪ್ಪತ್ತೈದು ಬಾಣಗಳಿಂದ ಇಪ್ಪತ್ತೈದು ಮಂದಿ ಪಾಂಚಾಲಯೋಧರನ್ನು ಸಂಹರಿಸಿ

ದನು. ವೀರನಾದ ಕರ್ಣನು ಸುವರ್ಣಮಯವಾದ ಹಿಂಭಾಗದಿಂದ ಕೂಡಿದ್ದ, ಶತ್ರುಗಳ ಶರೀರವನ್ನು ಸೀಳಲು ಸಮರ್ಥವಾಗಿದ್ದ ನಾರಾಚಗಳಿಂದ ನೂರಾರು-ಸಾವಿರಾರು ಚೇದಿವೀರರನ್ನು ಸಂಹರಿಸಿದನು.

ಮಹಾರಾಜ! ಆಗಿನ ಯುದ್ಧದಲ್ಲಿ ಅತಿಮಾನುಷವಾದ ಸಂಹಾರಕಾರ್ಯವನ್ನು ಮಾಡುತ್ತಿದ್ದ ಕರ್ಣನನ್ನು ಪಾಂಚಾಲಮಹಾರಥರು ಸುತ್ತುವರಿದರು. ಭಾರತನೇ! ಆ ಸಮಯದಲ್ಲಿ ವೈಕರ್ತನಕರ್ಣನು ದುಃಸಹವಾದ ಐದು ಬಾಣಗಳನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಭಾನುದೇವ, ಚಿತ್ರಸೇನ, ಸೇನಾಬಿಂದು, ತಪನ, ಶೂರಸೇನರೆಂಬ ಐವರು ಪಾಂಚಾಲಯೋಧರನ್ನು ಸಂಹರಿಸಿದನು. ಅವನು ಪ್ರಯೋಗಿಸಿದ ನಿಶಿತವಾದ ಬಾಣಗಳಿಂದ ಪಾಂಚಾಲಶೂರರು ಹತರಾಗಲಾಗಿ ಪಾಂಚಾಲರ ಸೈನ್ಯದಲ್ಲಿ ದೊಡ್ಡ ಹಾಹಾಕಾರವೆದ್ದಿತು. ಪುನಃ ಹತ್ತು ಮಂದಿ ಪಾಂಚಾಲ ರಥಿಗಳು ಕರ್ಣನನ್ನು ಮುತ್ತಿಗೆ ಹಾಕಿದರು. ಮರುಕ್ಷಣದಲ್ಲಿಯೇ ಕರ್ಣನು ಅವರೆಲ್ಲರನ್ನೂ ನಿಶಿತವಾದ ಬಾಣಗಳಿಂದ ಸಂಹರಿಸಿದನು.

ಮಾನನೀಯನಾದ ನರೇಶನೇ! ಸುಷೇಣ ಮತ್ತು ಸತ್ಯಸೇನರೆಂಬ ಕರ್ಣನ ಇಬ್ಬರು ಮಕ್ಕಳು ಕರ್ಣನ ರಥದ ಚಕ್ರಗಳನ್ನು ರಕ್ಷಿಸುತ್ತಿದ್ದರು. ದುರ್ಜಯರಾದ ಅವರಿಬ್ಬರೂ ಪ್ರಾಣಗಳನ್ನೇ ಒತ್ತೆಯಾಗಿಟ್ಟು ವೀರಾವೇಶ ದಿಂದ ಯುದ್ಧಮಾಡುತ್ತಿದ್ದರು. ಕರ್ಣನ ಜ್ಯೇಷ್ಠಪುತ್ರನಾದ, ಮಹಾರಥ ನಾದ ವೃಷಸೇನನೇ ಕರ್ಣನ ರಥದ ಪೃಷ್ಠಭಾಗದ ರಕ್ಷಕನಾಗಿದ್ದನು. ವೃಷಸೇನನನು ರಥದ ಹಿಂಭಾಗದಲ್ಲಿದ್ದು ಕರ್ಣನನ್ನು ರಕ್ಷಿಸುತ್ತಿದ್ದನು. ಪ್ರಹಾರಕುಶಲನಾದ ಕರ್ಣನನ್ನು ಸಂಹಾರಮಾಡುವ ಇಚ್ಛೆಯಿಂದ ಧೃಷ್ಟ ದ್ಯುಮ್ನ, ಸಾತ್ಯಕಿ, ದ್ರೌಪದಿಯ ಐವರು ಮಕ್ಕಳು, ಭೀಮಸೇನ, ಜನ ಮೇಜಯ, ಶಿಖಂಡೀ, ಪ್ರಭದ್ರಕಪ್ರವೀರರು, ಚೇದಿ-ಕೇಕಯ-ಪಾಂಚಾಲ ಯೋಧರು, ನಕುಲ-ಸಹದೇವರು, ಮತ್ಸ್ಯಯೋಧರು-ಈ ಎಲ್ಲರೂ ಕವಚ ಧಾರಿಗಳಾಗಿ ಸಮ್ಮಿಳಿತರಾಗಿ ರಾಧೇಯನನ್ನು ಆಕ್ರಮಿಸಿದರು. ವರ್ಷರ್ತುವಿ ನಲ್ಲಿ ಮೇಘಗಳು ಪರ್ವತದ ಮೇಲೆ ಮಳೆಗರೆಯುವಂತೆ–ತಮ್ಮ ಸೈನಿಕರನ್ನು ಮರ್ದನಮಾಡುತ್ತಿದ್ದ ಕರ್ಣನನ್ನು ಧೃಷ್ಟದ್ಯುಮ್ನಾದಿಗಳು ನಾನಾವಿಧವಾದ ಶಸ್ತ್ರಗಳಿಂದಲೂ ಮತ್ತು ಶರವೃಷ್ಟಿಯಿಂದಲೂ ಅಭಿಷೇಚಿಸಿದರು. ತಂದೆಯನ್ನು ರಕ್ಷಿಸಲು ನಿರತರಾಗಿದ್ದ, ಪ್ರಹಾರಕುಶಲರಾದ ಕರ್ಣನ ಮಕ್ಕಳು ಮತ್ತು ನಿನ್ನ ಕಡೆಯ ಇತರ ವೀರರೂ ಒಟ್ಟಿಗೆ ಸೇರಿ ಪಾಂಡವರ ಕಡೆಯ ಧೃಷ್ಟದ್ಯುಮ್ನನೇ

ಮೊದಲಾದ ವೀರರನ್ನು ತಡೆದು ನಿಲ್ಲಿಸಿದರು. ಕರ್ಣನ ಚಕ್ರರಕ್ಷಕನಾಗಿದ್ದ ಕರ್ಣಪುತ್ರನಾದ ಸುಷೇಣನು ಭಲ್ಲದಿಂದ ಭೀಮಸೇನನ ಧನುಸ್ಸನ್ನು ಕತ್ತರಿಸಿ, ಪುನಃ ಏಳು ನಾರಾಚಗಳಿಂದ ಭೀಮನ ವಕ್ಷಃಸ್ಥಳದಲ್ಲಿ ಪ್ರಹರಿಸಿ ಗಟ್ಟಿಯಾಗಿ ಗರ್ಜಿಸಿದನು. ಭೀಮವಿಕ್ರಮನಾದ ಭೀಮಸೇನನು ಮತ್ತೊಂದು ಸುದೃಢವಾದ ಧನುಸ್ಸನ್ನೆತ್ತಿಕೊಂಡು ಶಿಂಜಿನಿಯನ್ನು ಕಟ್ಟಿ ನಿಶಿತವಾದ ಬಾಣದಿಂದ ಸುಷೇಣನ ಧನುಸ್ಸನ್ನು ಕತ್ತರಿಸಿದನು. ಕ್ರುದ್ಧನಾಗಿದ್ದ ಭೀಮಸೇನನು ನರ್ತನಮಾಡುತ್ತಿರುವನೋ ಎಂಬಂತೆ ಸುಷೇಣನನ್ನೂ ಹತ್ತು ಬಾಣಗಳಿಂದ ಪ್ರಹರಿಸಿದನು. ಬಳಿಕ ಕರ್ಣನನ್ನೂ ನಿಶಿತವಾದ ಎಪ್ಪತ್ತುಮೂರು ಬಾಣಗಳಿಂದ ಪ್ರಹರಿಸಿದನು.



ಇಷ್ಟು ಮಾತ್ರವಲ್ಲ; ಸುಹೃದರ ಮಧ್ಯದಲ್ಲಿದ್ದ ಕರ್ಣನ ಮತ್ತೊಬ್ಬ

ಮಗನಾದ ಭಾನುಸೇನ ಎಂಬುವನನ್ನೂ ಅಶ್ವ-ಸೂತ-ಧ್ವಜಾಯುಧ ಸಹಿತ ವಾಗಿ ನಿನ್ನ ಕಡೆಯ ಸೈನಿಕರು ನೋಡುತ್ತಿದ್ದಂತೆಯೇ ಹತ್ತು ಬಾಣಗಳಿಂದ ಸಂಹರಿಸಿದನು. ಭೀಮಸೇನನ ಕ್ಷುರದಿಂದ ಕತ್ತರಿಸಲ್ಪಟ್ಟ, ಚಂದ್ರೋಪಮ ವಾದ ಮುಖದಿಂದ ಯುಕ್ತವಾಗಿದ್ದ ಭಾನುಸೇನನ ತಲೆಯು–ನಾಳದಿಂದ ಬೇರ್ಪಡಿಸಲ್ಪಟ್ಟ ಕಮಲದ ಹೂವಿನಂತೆ–ಬಹಳ ಸುಂದರವಾಗಿಯೇ ಕಾಣುತ್ತಿದ್ದಿತು. ಮಹಾರಾಜ! ಭೀಮಸೇನನು ಕರ್ಣನ ಮಗನನ್ನು ಸಂಹರಿಸಿ ನಿನ್ನ ಕಡೆಯ ಯೋಧರನ್ನು ಪುನಃ ಪೀಡಿಸತೊಡಗಿದನು. ಕೃಪ-ಹಾರ್ದಿಕ್ಯರ ಧನುಸ್ಸುಗಳನ್ನು ಕತ್ತರಿಸಿ ನಿಶಿತವಾದ ಬಾಣಗಳಿಂದ ಅವರನ್ನು ಗಾಯಗೊಳಿಸಿದನು. ಭೀಮಸೇನನು ದುಃಶಾಸನನನ್ನು ಮೂರು ಬಾಣಗಳಿಂದ ಪ್ರಹರಿಸಿ, ಶಕುನಿಯನ್ನು ಲೋಹಮಯವಾದ ಆರು ಬಾಣಗಳಿಂದ ಪ್ರಹರಿಸಿದುದಲ್ಲದೇ ಉಲೂಕನನ್ನೂ ಮತ್ತು ಪತತ್ರಿಯನ್ನೂ ರಥಹೀನರನ್ನಾಗಿ ಮಾಡಿದನು. ಕರ್ಣನ ಚಕ್ರರಕ್ಷಕನಾಗಿದ್ದ ಸುಷೇಣನ ಕಡೆಗೆ ತಿರುಗಿ ಬಾಣವನ್ನು ಕೈಗೆತ್ತಿಕೊಂಡು 'ನೀನೀಗ ಹತನಾದೆ' ಎಂದು ಹೇಳುತ್ತಾ ಪ್ರಯೋಗಿಸಿದನು. ಮರುಕ್ಷಣದಲ್ಲಿಯೇ ಕರ್ಣನು, ಭೀಮನು ಸುಷೇಣನನ್ನು ಅನುಲಕ್ಷಿಸಿ ಬಿಟ್ಟಿದ್ದ ಬಾಣವನ್ನು ಕತ್ತರಿಸಿ ಪುನಃ ಮೂರು ಬಾಣಗಳಿಂದ ಭೀಮನನ್ನು ಪ್ರಹರಿಸಿದನು. ಭೀಮನು ಸುಂದರವಾದ ರೆಕ್ಕೆಗಳನ್ನು ಹೊಂದಿದ್ದ, ಬಹಳ ಹರಿತವಾಗಿದ್ದ ಮತ್ತೊಂದು ಬಾಣವನ್ನು ಬತ್ತಳಿಕೆಯಿಂದ ತೆಗೆದು ಪುನಃ ಸುಷೇಣನ ಮೇಲೆ ಪ್ರಯೋಗಿಸಿದನು. ಕರ್ಣನು ಆ ಬಾಣವನ್ನೂ ಕತ್ತರಿಸಿದನು. ಪುನಃ ಕರ್ಣನು ತನ್ನ ಮಗನ ಪ್ರಾಣವನ್ನುಳಿಸಬೇಕೆಂಬ ಇಚ್ಛೆಯಿಂದ, ಕ್ರೂರಿಯಾದ ಭೀಮಸೇನನನ್ನು ಸಂಹರಿಸುವ ಅಭಿಲಾಷೆಯಿಂದ ಕ್ರೂರವಾಗಿದ್ದ ಎಪ್ಪತ್ತು ಮೂರು ಬಾಣ ಗಳಿಂದ ಪ್ರಹರಿಸಿದನು. ಸುಷೇಣನೂ ಪರಾಕ್ರಮದ ಭಾರವನ್ನು ವಹಿಸಲು ಸಾಧ್ಯವಾಗುವಂತಹ ಉತ್ತಮೋತ್ತಮವಾದ ಮತ್ತೊಂದು ಧನುಸ್ಸನ್ನೆತ್ತಿ ಕೊಂಡು ಐದು ಬಾಣಗಳಿಂದ ನಕುಲನ ತೋಳುಗಳಲ್ಲಿಯೂ ಮತ್ತು ವಕ್ಷಃಸ್ಥಳದಲ್ಲಿಯೂ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ನಕುಲನು ಪರಾಕ್ರಮದ ಭಾರವನ್ನು ಸಹಿಸುವ (ಮುರಿದುಹೋಗದ) ದೃಢತರವಾದ ಇಪ್ಪತ್ತು ಬಾಣಗಳಿಂದ ಸುಷೇಣನನ್ನು ಪ್ರಹರಿಸಿ ಗಟ್ಟಿಯಾಗಿ ಗರ್ಜನೆ ಯನ್ನು ಮಾಡಿದನು. ನಕುಲನ ಆ ಸಾಹಸಕಾರ್ಯದಿಂದ ಕರ್ಣನಿಗೂ ಭಯವೇ ಆಯಿತು. ಮರುಕ್ಷಣದಲ್ಲಿಯೇ ಮಹಾರಥನಾದ ಸುಷೇಣನು

ವೇಗವಾಗಿ ಹೋಗುವ ಹತ್ತು ಬಾಣಗಳಿಂದ ನಕುಲನನ್ನು ಪ್ರಹರಿಸಿ, ಕ್ಷುರಪ್ರದಿಂದ ಅವನ ಧನುಸ್ಸನ್ನೂ ಬಹಳ ಶೀಘ್ರವಾಗಿ ಕತ್ತರಿಸಿಬಿಟ್ಟನು. ಅದರಿಂದ ಕ್ರೋಧಮೂರ್ಛಿತನಾದ ನಕುಲನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಒಂಬತ್ತು ಬಾಣಗಳಿಂದ ಸುಷೇಣನನ್ನು ಮುಂದೆ ಬರದಂತೆ ತಡೆದು ನಿಲ್ಲಿಸಿದನು. ಶತ್ರುವೀರಹಂತಕನಾದ ನಕುಲನು ಬಾಣಗಳಿಂದ ಎಲ್ಲ ದಿಕ್ಕುಗಳನ್ನೂ ತುಂಬಿ ಮೂರು ಬಾಣಗಳಿಂದ ಸುಷೇಣನನ್ನೂ ಮತ್ತು ಸುಷೇಣನ ಸಾರಥಿಯನ್ನೂ ಪ್ರಹರಿಸಿದುದಲ್ಲದೇ ಮರುಕ್ಷಣದಲ್ಲಿಯೇ ಮೂರು ಭಲ್ಲಗಳಿಂದ ಸುಷೇಣನ ಸುದೃಢವಾದ ಧನುಸ್ಸನ್ನೂ ಮೂರು ಭಾಗಗಳಾಗಿ ಕತ್ತರಿಸಿದನು. ಅದರಿಂದ ಕ್ರೋಧಮೂರ್ಛಿತನಾದ ಸುಷೇಣನು ಒಡನೆಯೇ ಮತ್ತೊಂದು ಧನುಸ್ಸನ್ನೆತ್ತಿಕೊಂಡು ನಕುಲನನ್ನು ಅರುವತ್ತು ಬಾಣಗಳಿಂದಲೂ ಸಹದೇವನನ್ನು ಏಳು ಬಾಣಗಳಿಂದಲೂ ಪ್ರಹರಿಸಿದನು. ಬಾಣಗಳಿಂದ ಶೀಘ್ರತಾಪೂರ್ವಕವಾಗಿ ಒಬ್ಬರು ಮತ್ತೊಬ್ಬರನ್ನು ವಧಿಸಬೇಕೆನ್ನುವ ಇಚ್ಛೆಯಿಂದ ಪ್ರಹರಿಸುತ್ತಿದ್ದ ಉಭಯಪಕ್ಷಗಳ ವೀರರ ಆ ಮಹಾಯುದ್ಧವು ದೇವಾಸುರರ ಯುದ್ಧಕ್ಕೆ ಸಮಾನವಾಗಿದ್ದು ಬಹಳ ಭಯಂಕರವಾಗಿ ಕಾಣುತ್ತಿದ್ದಿತು.

ಸಾತ್ಯಕಿಯು ವೃಷಸೇನನ ಸೂತನನ್ನು ಮೂರು ಬಾಣಗಳಿಂದ ಸಂಹರಿಸಿ ಭಲ್ಲದಿಂದ ಅವನ ಧನುಸ್ಸನ್ನೂ ಕತ್ತರಿಸಿದನು. ಅನಂತರ ಏಳು ಬಾಣಗಳಿಂದ ಅವನ ಕುದುರೆಗಳನ್ನೂ ಸಂಹರಿಸಿ, ಒಂದು ಬಾಣದಿಂದ ರಥದಲ್ಲಿದ್ದ ಧ್ವಜವನ್ನೂ ಧ್ವಂಸಮಾಡಿ, ಪುನಃ ಮೂರು ಬಾಣಗಳಿಂದ ವೃಷಸೇನನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಹೀಗೆ ರಣಾಂಗಣದಲ್ಲಿ ಯುಯುಧಾನನಿಂದ ಸಾರಥ್ಯಶ್ವ-ರಥ-ಧ್ವಜಗಳಿಂದ ವಿಹೀನನಾಗಿ ಮಾಡಲ್ಪಟ್ಟ ವೃಷಸೇನನು ಮುಹೂರ್ತಕಾಲ ರಥದಲ್ಲಿಯೇ ಕುಸಿದುಬಿದ್ದನು. ಅನಂತರ ಚೇತರಿಸಿಕೊಂಡು ಮೇಲೆದ್ದು ಸಾತ್ಯಕಿಯನ್ನೂ ಸಂಹರಿಸುವ ಇಚ್ಛೆಯಿಂದ ಕತ್ತಿ-ಗುರಾಣಿಗಳನ್ನು ಹಿಡಿದು ಅವನ ರಥದ ಕಡೆಗೆ ಧಾವಿಸಿದನು. ಸಾತ್ಯಕಿಯೂ, ತನ್ನ ಮೇಲೆ ರಭಸದಿಂದ ಬೀಳಲು ಬರುತ್ತಿದ್ದ ವೃಷಸೇನನ ಕತ್ತಿ-ಗುರಾಣಿಗಳನ್ನು ವಾರಾಹಕರ್ಣವೆಂಬ ಹೆಸರಿನ ಹತ್ತು ಬಾಣಗಳಿಂದ ಕತ್ತರಿಸಿದನು. ಸಾತ್ಯಕಿಯೂ ವೃಷಸೇನನನ್ನು ರಥಾಯುಧಗಳಿಂದ ವಿಹೀನನನ್ನಾಗಿ ಮಾಡಿದುದನ್ನು ಕಂಡು ದುಃಶಾಸನನು ವೃಷಸೇನನನ್ನು ತನ್ನ ರಥಕ್ಕೆ

ಹತ್ತಿಸಿಕೊಂಡು ಬಹಳ ಬೇಗ ಆ ಸ್ಥಳದಿಂದ ಹೊರಟು ಹೋದನು. ಸ್ವಲ್ಪಹೊತ್ತಿನಲ್ಲಿಯೇ ಮಹಾರಥನಾದ, ಕರ್ಣನ ಮಗನಾದ, ಮಹಾಧನುಷ್ಮಂತನಾದ ವೃಷಸೇನನು ಮತ್ತೊಂದು ರಥದಲ್ಲಿ ಕುಳಿತು ಯುದ್ಧಭೂಮಿಗೆ ಬಂದು ದ್ರೌಪದಿಯ ಐವರು ಮಕ್ಕಳನ್ನು ಎಪ್ಪತ್ತು ಮೂರು ಬಾಣಗಳಿಂದಲೂ, ಸಾತ್ಯಕಿಯನ್ನು ಐದು ಬಾಣಗಳಿಂದಲೂ, ಭೀಮಸೇನನನ್ನು ಅರುವತ್ತು ನಾಲ್ಕು ಬಾಣಗಳಿಂದಲೂ, ಸಹದೇವನನ್ನು ಐದು ಬಾಣಗಳಿಂದಲೂ, ನಕುಲನನ್ನು ಮೂವತ್ತು ಬಾಣಗಳಿಂದಲೂ, ಶತಾನೀಕನನ್ನು ಏಳು ಬಾಣಗಳಿಂದಲೂ, ಶಿಖಂಡಿಯನ್ನು ಹತ್ತು ಬಾಣ ಗಳಿಂದಲೂ, ಧರ್ಮರಾಜನನ್ನು ನೂರು ಬಾಣಗಳಿಂದಲೂ ಪ್ರಹರಿಸಿ– ವಿಜಯೇಚ್ಛುಗಳಾದ, ವೀರಶ್ರೇಷ್ಠರಾದ ಪಾಂಡವರ ಕಡೆಯ ಇತರ ರಾಜರನ್ನೂ ಬಾಣಗಳಿಂದ ಬಹಳವಾಗಿ ಪೀಡಿಸಿದನು. ಅನಂತರ ದುರ್ಧರ್ಷ ನಾದ ವೃಷಸೇನನು ಕರ್ಣನ ಪೃಷ್ಠಭಾಗದ ರಕ್ಷಣೆಯಲ್ಲಿ ಪುನಃ ನಿರತನಾದನು. ಸಾತ್ಯಕಿಯು ವಿನೂತನವಾದ, ಲೋಹಮಯವಾದ ಒಂಬತ್ತು ಬಾಣಗಳಿಂದ ದುಃಶಾಸನನನ್ನು ಸೂತಾಶ್ವ-ರಥಗಳಿಂದ ರಹಿತನನ್ನಾಗಿ ಮಾಡಿ ಪುನಃ ಮೂರು ಬಾಣಗಳಿಂದ ಅವನ ನಡುನೆತ್ತಿಯಲ್ಲಿ ಪ್ರಹರಿಸಿದನು. ಮರುಕ್ಷಣದಲ್ಲಿಯೇ ದುಃಶಾಸನನು ವಿಧಿವತ್ತಾಗಿ ಸಜ್ಜಾಗಿದ್ದ ಮತ್ತೊಂದು ರಥದಲ್ಲಿ ಕುಳಿತು ಕರ್ಣನ ಬಲವನ್ನು ಅಭಿವೃದ್ಧಿಗೊಳಿಸುತ್ತಾ ಪಾಂಡವರೊಡನೆ ಯುದ್ಧಮಾಡುತ್ತಿದ್ದನು.

ಅನಂತರ ಪಾಂಡವಯೋಧರಲ್ಲಿ ಒಬ್ಬೊಬ್ಬರೂ ಕರ್ಣನನ್ನು ನಿಶಿತವಾದ ಬಾಣಗಳಿಂದ ಪ್ರಹರಿಸತೊಡಗಿದರು. ಧೃಷ್ಟದ್ಯುಮ್ನನು ಕರ್ಣನನ್ನು ಹತ್ತು ಬಾಣಗಳಿಂದಲೂ, ದ್ರೌಪದಿಯು ಐವರು ಮಕ್ಕಳು ಎಪ್ಪತ್ತುಮೂರು ಬಾಣಗಳಿಂದಲೂ, ಸಾತ್ಯಕಿಯು ಏಳು ಬಾಣಗಳಿಂದಲೂ, ಭೀಮಸೇನನು ಅರುವತ್ತುನಾಲ್ಕು ಬಾಣಗಳಿಂದಲೂ, ಸಹದೇವನು ಏಳು ಬಾಣಗಳಿಂದಲೂ, ನಕುಲನು, ಮೂವತ್ತು ಬಾಣಗಳಿಂದಲೂ, ಶತಾನೀಕನು ಏಳು ಬಾಣಗಳಿಂದಲೂ, ಶಿಖಂಡಿಯು ಹತ್ತು ಬಾಣಗಳಿಂದಲೂ, ಧರ್ಮರಾಜನು ನೂರು ಬಾಣಗಳಿಂದಲೂ-ಕರ್ಣನನ್ನು ಪ್ರಹರಿಸಿದರು. ಅವರೇ ಅಲ್ಲದೇ ವಿಜಯೇಚ್ಛುಗಳಾದ ಇನ್ನೂ ಅನೇಕ ಶ್ರೇಷ್ಠವೀರರು ಮಹಾಧನುಷ್ಮಂತನಾದ ಸೂತಪುತ್ರನನ್ನು ಬಾಣಗಳಿಂದ ಬಹಳವಾಗಿ ಪೀಡಿಸಿದರು. ಅದಕ್ಕೆ ಪ್ರತಿಯಾಗಿ ಅರಿಂದಮನಾದ, ಸೂತಪುತ್ರನಾದ

ಕರ್ಣನು ರಥದಲ್ಲಿ ಸಂಚರಿಸುತ್ತಾ ಪಾಂಡವರ ಕಡೆಯ ಯೋಧರೆಲ್ಲರನ್ನೂ ನಿಶಿತವಾದ ಹತ್ತು-ಹತ್ತು ಬಾಣಗಳಿಂದ ಪ್ರಹರಿಸಿದನು. ಮಹಾಭಾಗನೇ! ಆ ಸಮಯದಲ್ಲಿ ನಾವು ಮಹಾತ್ಮನಾದ ಕರ್ಣನ ಅಸ್ತ್ರವೀರ್ಯವನ್ನೂ ಬಾಣ ಬಿಡುವುದರಲ್ಲಿನ ಕೈಚಳಕವನ್ನೂ ನೋಡಿದೆವು. ನಿಶ್ಚಯವಾಗಿಯೂ ಕರ್ಣನ ಬಾಣಗಳ ಆದಾನ-ಸಂಧಾನ-ಪ್ರಹರಣಕಾರ್ಯಗಳು ನಮಗೆ ಪರಮಾದ್ಭುತ ವಾಗಿ ಕಂಡುವು.

**ನಹ್ಯಾದದಾನಂ ದದೃಶುಃ ಸಂದಧಾನಂ ಚ ಸಾಯಕಾನ್ ।**
**ವಿಮುಞ್ಚನ್ತಂ ಚ ಸಂರಮ್ಭಾದಪಶ್ಯನ್ತ ಹತಾನರೀನ್ ॥೫೮॥**

ಕರ್ಣನು ಬತ್ತಳಿಕೆಯಿಂದ ಯಾವಾಗ ಬಾಣಗಳನ್ನು ತೆಗೆದುಕೊಳ್ಳುತ್ತಾ ನೆಂಬುದು ಯಾರಿಗೂ ಕಾಣುತ್ತಿರಲಿಲ್ಲ. ಅವನು ಯಾವಾಗ ಬಾಣಗಳನ್ನು ಧನುಸ್ಸಿನಲ್ಲಿ ಅನುಸಂಧಾನಮಾಡುತ್ತಿದ್ದನೆಂಬುದನ್ನಾಗಲೀ ಯಾರೂ ಕಾಣುತ್ತಿ ರಲಿಲ್ಲ. ಶತ್ರುಗಳ ಕಡೆಯ ಸೈನಿಕರು ಕರ್ಣನ ಬಾಣಗಳಿಂದ ಹತರಾಗಿ ಕೆಳಕ್ಕೆ ಬೀಳುತ್ತಿದ್ದುದನ್ನು ಮಾತ್ರವೇ ಪ್ರೇಕ್ಷಕರು ಕಾಣುತ್ತಿದ್ದರು. ಕರ್ಣನು ಪುಂಖಾನುಪುಂಖವಾಗಿ ಬಿಡುತ್ತಿದ್ದ ನಿಶಿತವಾದ ಬಾಣಗಳಿಂದ ಸ್ವರ್ಗಾಕಾಶ-ಭೂಮಿ-ದಿಕ್ಕುಗಳು ತುಂಬಿಹೋದುವು. ಆ ಪ್ರದೇಶದ ಆಕಾಶವು ಎಣೆಗೆಂಪಾದ ಮೋಡಗಳಿಂದ ಆವೃತವಾಗಿರುವಂತೆಯೇ ಕಾಣುತ್ತಿದ್ದಿತು. ಪ್ರತಾಪವಂತನಾದ, ಧನುರ್ಧರನಾದ ರಾಧೇಯನು ರಣಾಂಗಣದಲ್ಲಿ ನಾಟ್ಯವಾಡುತ್ತಿರುವನೋ ಎಂಬಂತೆ ಕಾಣುತ್ತಿದ್ದನು. ಪಾಂಡವರ ಕಡೆಯ ಯಾವ ಯೋಧರು ಬಾಣಗಳಿಂದ ಕರ್ಣನನ್ನು ಗಾಯಗೊಳಿಸುತ್ತಿದ್ದರೋ ಆ ಯೋಧರು ಬಿಡುತ್ತಿದ್ದ ಬಾಣಕ್ಕೆ ಮೂರುಪಟ್ಟು ಹೆಚ್ಚು ಸಂಖ್ಯೆಯ ಬಾಣಗಳನ್ನು ಕರ್ಣನು ಪ್ರತಿಯಾಗಿ ಬಿಟ್ಟು ಅವರನ್ನು ಗಾಯಗೊಳಿಸುತ್ತಿದ್ದನು. ಪುನಃ ಹತ್ತು-ಹತ್ತು ಬಾಣಗಳಿಂದ ಶತ್ರುಪಕ್ಷದ ರಥಿಕರ ಅಶ್ವ-ಸೂತ-ರಥ-ಛತ್ರಗಳನ್ನೂ ಪ್ರಹರಿಸಿ ಗಟ್ಟಿಯಾಗಿ ಗರ್ಜನೆಮಾಡುತ್ತಿದ್ದನು. ಅನಂತರವೇ ಶತ್ರುಪಕ್ಷದವರು ಕರ್ಣನಿಗೆ ಮುಂದೆ ಹೋಗಲು ಅವಕಾಶವನ್ನು ನೀಡುತ್ತಿ ದ್ದರು. ಶತ್ರುಕರ್ಶನನಾದ ಕರ್ಣನು ಬಾಣಗಳ ಮಳೆಗರೆಯುವಿಕೆಯಿಂದ ಮಹಾಧನುಷ್ಮಂತರಾದ ಪಾಂಡವಯೋಧರನ್ನು ಧ್ವಂಸಮಾಡಿ ಸೈನಿಕರ

ಒತ್ತಡವಿಲ್ಲದಿದ್ದ ಯುಧಿಷ್ಠಿರನ ಸೈನ್ಯವನ್ನು ಪ್ರವೇಶಿಸಿದನು. ಯುದ್ಧದಿಂದ ಹಿಂದಿರುಗದೇ ಇದ್ದ ಚೇದಿಯೋಧರ ಮೂರುನೂರು ರಥಿಗಳನ್ನು ನಿಶಿತವಾದ ಬಾಣಗಳಿಂದ ಸಂಹರಿಸಿ ಅನಂತರ ಯುಧಿಷ್ಠಿರನನ್ನು ಆಕ್ರಮಿಸಿದನು. ಆ ಸಮಯದಲ್ಲಿ ಪಾಂಡವರೂ, ಶಿಖಂಡಿಯೂ ಮತ್ತು ಸಾತ್ಯಕಿಯೂ ಯುಧಿಷ್ಠಿರನನ್ನು ಕರ್ಣನಿಂದ ರಕ್ಷಿಸುವ ಸಲುವಾಗಿ ನಾಲ್ಕುಕಡೆಗಳಿಂದಲೂ ಧರ್ಮಜನನ್ನು ಸುತ್ತುವರಿದರು. ಅದೇ ರೀತಿಯಲ್ಲಿ ನಿನ್ನ ಕಡೆಯ ಶೂರರಾದ ಎಲ್ಲ ಧನುಷ್ಮಂತರೂ ತಡೆಯಲು ಅಸಾಧ್ಯನಾದ ಕರ್ಣನನ್ನು ಎಲ್ಲ ಕಡೆಗಳಿಂದಲೂ ಪ್ರಯತ್ನಪೂರ್ವಕವಾಗಿ ರಕ್ಷಿಸುತ್ತಿದ್ದರು. ಪ್ರಜಾನಾಥ! ಆ ಸಮಯದಲ್ಲಿ ನಾನಾವಿಧವಾದ ರಣವಾದ್ಯಗಳು ಮೊಳಗಿದುವು. ಗಟ್ಟಿಯಾಗಿ ಗರ್ಜಿಸುತ್ತಿದ್ದ ಶೂರರ ಸಿಂಹನಾದಗಳೂ ಕೇಳಿಬಂದುವು. ಅನಂತರ ಭಯರಹಿತರಾಗಿದ್ದ ಕುರು-ಪಾಂಡವಯೋಧರು ಪರಸ್ಪರವಾಗಿ ಪುನಃ ಸಂಘರ್ಷಿಸತೊಡಗಿದರು. ಆ ಸಮಯದಲ್ಲಿ ಪಾಂಡವರು ಯುಧಿಷ್ಠಿರನನ್ನು ಮುಂದೆಮಾಡಿಕೊಂಡು ಯುದ್ಧಮಾಡುತ್ತಿದ್ದರು. ನಾವೆಲ್ಲರೂ ಕರ್ಣನನ್ನೇ ಮುಂದೆಮಾಡಿಕೊಂಡು ಯುದ್ಧಮಾಡುತ್ತಿದ್ದೆವು."

೪೮ನೆಯ ಅಧ್ಯಾಯವು ಮುಗಿಯಿತು.

೪೯ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣ–ಯುಧಿಷ್ಠಿರರ ಯುದ್ಧ: ಕರ್ಣನು ಮೂರ್ಛೆಹೋದುದು: ಕರ್ಣನು ಯುಧಿಷ್ಠಿರನನ್ನು ಪರಾಜಯಗೊಳಿಸಿ ಅವಹೇಳನ ಮಾಡಿದುದು: ಪಾಂಡವರ ಸೈನ್ಯದಲ್ಲಿ ಸಾವಿರಾರು ಯೋಧರ ಸಂಹಾರ: ರಕ್ತನದಿಯ ವರ್ಣನೆ: ಪಾಂಡವಯೋಧರು ಕೌರವಸೈನಿಕರನ್ನು ವಿಧ್ವಂಸಮಾಡಿದುದು: ಕೌರವಸೈನಿಕರ ಪಲಾಯನ

ಸಂಜಯನು ಹೇಳುತ್ತಾನೆ:

"ಮಹಾರಾಜ! ಸಾವಿರಾರು ಸಂಖ್ಯೆಯ ರಥ-ಗಜಾಶ್ವ-ಪದಾತಿ ಸೈನಿಕರಿಂದ ಪರಿವೃತನಾಗಿದ್ದ ಕರ್ಣನು ಪಾಂಡವರ ಸೈನ್ಯವನ್ನು ಭೇದಿಸಿ ಯುಧಿಷ್ಠಿರನನ್ನು ಆಕ್ರಮಿಸಿದನು. ಕರ್ಣನು ಶತ್ರುಗಳು ಪ್ರಹರಿಸಿದ ನಾನಾ

ವಿಧವಾದ ಸಾವಿರಾರು ಆಯುಧಗಳನ್ನು-ಸ್ವಲ್ಪವಾದರೂ ಗಾಬರಿಗೊಳ್ಳದೇ ಭಯಂಕರವಾದ ನೂರಾರು ಬಾಣಗಳಿಂದ ಕತ್ತರಿಸಿ ಶತ್ರುಪಕ್ಷದವರ ಶಿರಸ್ಸುಗಳನ್ನೂ, ತೋಳುಗಳನ್ನೂ, ತೊಡೆಗಳನ್ನೂ ಕತ್ತರಿಸಿದನು. ಅವರಲ್ಲಿ ಹಲವರು ಹತರಾಗಿ ನೆಲದ ಮೇಲೆ ಬಿದ್ದರು. ಗಾಯಗೊಂಡ ಕೆಲವರು ಪಲಾಯನಮಾಡಿದರು. ಆಗ ಸಾತ್ಯಕಿಯಿಂದ ಪ್ರೇರಿತರಾದ ದ್ರಾವಿಡ-ನಿಷಾದದೇಶಗಳ ಪದಾತಿಗಳು ಕರ್ಣನನ್ನು ಯುದ್ಧದಲ್ಲಿ ಸಂಹರಿಸುವ ಇಚ್ಛೆಯಿಂದ ಪುನಃ ಕರ್ಣನನ್ನು ಆಕ್ರಮಿಸಿದುವು. ಆದರೆ ಕರ್ಣನ ಬಾಣಗಳಿಂದ ಪ್ರಹೃತರಾದ ಅವರೆಲ್ಲರೂ ತೋಳುಗಳಿಂದಲೂ ಮತ್ತು ಶಿರಸ್ತ್ರಾಣಗಳಿಂದಲೂ ವಿಹೀನರಾಗಿ ಕತ್ತರಿಸಿದ ಶಾಲವೃಕ್ಷಗಳ ವನದಂತೆ ಒಂದೇ ಬಾರಿಗೆ ರಣಾಂಗಣದಲ್ಲಿ ಬಿದ್ದುಹೋದರು. ಹೀಗೆ ಆ ಮಹಾಯುದ್ಧದಲ್ಲಿ ಹತರಾದ ಹತ್ತಾರು ಸಾವಿರ ಸೈನಿಕರು ಶರೀರಗಳಿಂದ ಭೂಮಿಯನ್ನು ಮಾತ್ರವೇ ತುಂಬಲಿಲ್ಲ; ಯಶಸ್ಸಿನಿಂದ ನಾಲ್ಕು ದಿಕ್ಕುಗಳನ್ನೂ ತುಂಬಿಬಿಟ್ಟರು. ಅನಂತರ ರಣರಂಗದಲ್ಲಿ ಕ್ರುದ್ಧನಾದ ಯಮನೋಪಾದಿಯಲ್ಲಿ ಶತ್ರುಗಳನ್ನು ಸಂಹರಿಸುತ್ತಿದ್ದ ವೈಕರ್ತನಕರ್ಣನನ್ನು ಪಾಂಡು-ಪಾಂಚಾಲಯೋಧರು–ವ್ಯಾಧಿಯನ್ನು ಮಂತ್ರೌಷಧಗಳಿಂದ ತಡೆಹಿಡಿಯುವಂತೆ–ನಿಶಿತವಾದ ಬಾಣಗಳಿಂದ ತಡೆದು ನಿಲ್ಲಿಸಿದರು. ಅತಿಯಾಗಿ ಉಲ್ಬಣಿಸಿರುವ ರೋಗವು ಮಂತ್ರೌಷಧಚಿಕಿತ್ಸೆಗಳಿಗೂ ಮಣಿಯದಂತೆ-ಕರ್ಣನು ತನ್ನನ್ನು ತಡೆಹಿಡಿದ ಪಾಂಡು-ಪಾಂಚಾಲ ಯೋಧರನ್ನು ಧ್ವಂಸಮಾಡಿ ಪುನಃ ಯುಧಿಷ್ಠಿರನ ಬಳಿಗೆ ಧಾವಿಸಿದನು.

ಆದರೆ ರಾಜನನ್ನು ರಕ್ಷಿಸಿಯೇ ತೀರಬೇಕೆಂಬ ಇಚ್ಛೆಯನ್ನು ಹೊಂದಿದ್ದ ಪಾಂಡು-ಪಾಂಚಾಲಯೋಧರಿಂದ ಪುನಃ ತಡೆಯಲ್ಪಟ್ಟ ರಾಧೇಯನು–ಮೃತ್ಯುವು ಬ್ರಹ್ಮವಿದರನ್ನು ಅತಿಕ್ರಮಿಸಲು ಸಾಧ್ಯವಾಗದಂತೆ– ಅವರನ್ನು ಅತಿಕ್ರಮಿಸಿ ರಾಜನ ಬಳಿಗೆ ಹೋಗಲು ಸಮರ್ಥನಾಗಲಿಲ್ಲ. ತನ್ನ ಕಡೆಯ ವೀರಯೋಧರಿಂದ ತಡೆಯಲ್ಪಟ್ಟು ಅನತಿದೂರದಲ್ಲಿಯೇ ಇದ್ದ, ಶತ್ರುವೀರಹಂತಕನಾದ ಕರ್ಣನನ್ನು ಕುರಿತು ಕೋಪದಿಂದ (ರಕ್ತಾಕ್ಷನಾಗಿದ್ದ ಯುಧಿಷ್ಠಿರನು) ಹೇಳಿದನು: “ಕರ್ಣ!

ಕರ್ಣ! ಶೂನ್ಯದೃಷ್ಟಿಯವನೇ! ಸೂತಪುತ್ರ! ನಾನು ಹೇಳಲಿರುವ ಮಾತುಗಳನ್ನು ಕೇಳು. ದುರ್ಯೋಧನನ ಅಭಿಪ್ರಾಯದಂತೆ ನಡೆದುಕೊಳ್ಳುತ್ತಿರುವ ನೀನು ಯಾವಾಗಲೂ ವೇಗವಂತನಾದ ಅರ್ಜುನನೊಡನೆಯೇ ಯುದ್ಧದಲ್ಲಿ ಸ್ಪರ್ಧಿಸುವೆ; ಹಾಗೂ ನಮ್ಮನ್ನೂ ಸದಾಕಾಲದಲ್ಲಿಯೂ ಬಾಧೆಪಡಿಸುವೆ.

ನಿನ್ನಲ್ಲಿ ಯಾವ ಬಲವಿದೆಯೋ, ಯಾವ ವೀರ್ಯವಿದೆಯೋ, ಪಾಂಡವರಲ್ಲಿ ನಿನಗೆ ಎಷ್ಟು ಪ್ರಗಾಢವಾದ ದ್ವೇಷವಿದೆಯೋ–ಆ ಎಲ್ಲವನ್ನೂ ಮಹಾಪೌರುಷವನ್ನು ಆಶ್ರಯಿಸಿ ಈಗ ಪ್ರದರ್ಶಿಸು. ಇಂದಿನ ಮಹಾಯುದ್ಧದಲ್ಲಿ ನಾನು ನಿನ್ನ ಯುದ್ಧಶ್ರದ್ಧೆಯನ್ನು ಹೋಗಲಾಡಿಸುತ್ತೇನೆ.”

ಧೃತರಾಷ್ಟ್ರಮಹಾರಾಜ! ಪಾಂಡುವಿನ ಮಗನಾದ ಯುಧಿಷ್ಠಿರನು ಕರ್ಣನಿಗೆ ಹೀಗೆ ಹೇಳಿ ಸುವರ್ಣದ ಮೂಲಭಾಗದಿಂದ ಕೂಡಿದ್ದ, ಲೋಹಮಯವಾಗಿದ್ದ, ಹತ್ತು ಬಾಣಗಳಿಂದ ಕರ್ಣನನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಮಹಾಧನುಷ್ಮಂತನಾದ ಶತ್ರುದಮನನಾದ ಸೂತಪುತ್ರನು ವತ್ಸದಂತಗಳೆಂಬ ಹತ್ತುಬಾಣಗಳಿಂದ ಯುಧಿಷ್ಠಿರನನ್ನು ನಗುತ್ತಲೇ ಪ್ರಹರಿಸಿದನು. ಮಾರಿಷ! ಸೂತಪುತ್ರನಿಂದ ತಿರಸ್ಕಾರಪೂರ್ವಕವಾಗಿ ಪ್ರಹರಿಸಲ್ಪಟ್ಟ ಧರ್ಮರಾಜನು–ಹವಿಸ್ಸಿನಿಂದ ಯಜ್ಞೇಶ್ವರನು ಧಗ-ಧಗನೆ ಪ್ರಜ್ವಲಿಸುವಂತೆ–ಕೋಪದಿಂದ ಉರಿದುಹೋದನು. ಪ್ರಳಯಕಾಲದಲ್ಲಿ ಪ್ರಪಂಚವನ್ನು ದಹಿಸಿಬಿಡಬೇಕೆನ್ನುವ ಇಚ್ಛೆಯನ್ನು ಹೊಂದಿರುವ ಬೇರೊಂದು ಸಂವರ್ತಾಕಾಗ್ನಿಯಂತೆ ಆ ಸಮಯದಲ್ಲಿ ಜ್ವಾಲೆಗಳ ಮಾಲೆಗಳಿಂದ ಪರೀತ ವಾದ ಯುಧಿಷ್ಠಿರನ ದೇಹವು ಕಾಣುತ್ತಿದ್ದಿತು. ಅನಂತರ ಯುಧಿಷ್ಠಿರನು ಸುವರ್ಣಭೂಷಿತವಾದ ಮಹಾಧನುಸ್ಸನ್ನು ಟೇಂಕರಿಸಿ ಪರ್ವತಗಳನ್ನೂ ಭೇದಿಸಲು ಸಮರ್ಥವಾದ ನಿಶಿತವಾದ ಒಂದು ಬಾಣವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿದನು. ಬಳಿಕ ಯುಧಿಷ್ಠಿರನು ಸೂತಪುತ್ರನನ್ನು ಸಂಹ ರಿಸುವ ಇಚ್ಛೆಯಿಂದ ಯಮದಂಡ ಸದೃಶವಾದ ಆ ಬಾಣವನ್ನು ಕಿವಿಯ ತುದಿಯವರೆಗೂ ಸೆಳೆದು ಬಹಳ ಶೀಘ್ರವಾಗಿ ಕರ್ಣನ ಮೇಲೆ ಪ್ರಯೋಗಿಸಿ ದನು. ವೇಗವಂತನಾದ ಯುಧಿಷ್ಠಿರನಿಂದ ಬಿಡಲ್ಪಟ್ಟ, ಸಿಡಿಲಿಗೆ ಸಮಾನವಾದ ಶಬ್ದದಿಂದ ಕೂಡಿದ್ದ ಆ ಬಾಣವು ಒಡನೆಯೇ ಮಹಾರಥನಾದ ಕರ್ಣನ ಎಡಪಾರ್ಶ್ವಕ್ಕೆ ಬಡಿಯಿತು. ಮಹಾಬಾಹುವಾದ ಕರ್ಣನು ಬಾಣದ ಆ ಪ್ರಹಾರದಿಂದ ಬಹಳ ಪೀಡಿತನಾದನು. ಅವನ ಶರೀರವು ಜರ್ಝರಿಸಿತು. ಧನುಸ್ಸನ್ನು ರಥದಲ್ಲಿ

ಬಿಸುಟು ಮೂರ್ಛೆಹೋದನು. ಪ್ರಾಣಹೋದವನಂತೆಯೇ ನಿಶ್ಚೇಷ್ಟನಾಗಿ ಶಲ್ಯನ ಮುಂಭಾಗದಲ್ಲಿಯೇ ಬಿದ್ದುಬಿಟ್ಟನು. ಆದರೆ ಕರ್ಣನು ಮೂರ್ಛಿತನಾದನಂತರ ಪಾರ್ಥನಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ ಧರ್ಮರಾಜನು ಪುನಃ ಅವನನ್ನು ಪ್ರಹರಿಸಹೋಗಲಿಲ್ಲ.

ಆ ಸಮಯದಲ್ಲಿ ಕರ್ಣನ ಅಂತಹ ದುರವಸ್ಥೆಯನ್ನು ನೋಡಿ ದುರ್ಯೋಧನನ ಮಹಾಸೈನ್ಯದಲ್ಲಿ ದೊಡ್ಡ ಹಾಹಾಕಾರವೆದ್ದಿತು. ಬಹುತೇಕ ಸೈನಿಕರ ಮುಖಗಳು ವಿಷಾದದಿಂದ ವಿವರ್ಣವಾದುವು. ಯುಧಿಷ್ಠಿರನ ಆ ಪರಾಕ್ರಮವನ್ನು ನೋಡಿ ಪಾಂಡವರ ಸೈನ್ಯದಲ್ಲಿ ಸಿಂಹನಾದಗಳಾದುವು. ಎಲ್ಲರೂ ಕುಣಿದಾಡಿದರು. ಆನಂದಸೂಚಕವಾದ ಕಿಲ-ಕಿಲಾಶಬ್ದವಾಯಿತು. ಆದರೆ ರಾಧೇಯನು ಬಹಳ ಬೇಗ ಮೂರ್ಛೆಯಿಂದ ಎಚ್ಚರಗೊಂಡನು. ಕ್ರೂರಪರಾಕ್ರಮನಾದ ಕರ್ಣನು ಯುಧಿಷ್ಠಿರನನ್ನು ವಿನಾಶಗೊಳಿಸಬೇಕೆಂದೇ ಮನಸ್ಸುಮಾಡಿಬಿಟ್ಟನು. ಮಹಾತ್ಮನಾದ ಕರ್ಣನು ಸುವರ್ಣವಿಭೂಷಿತವಾದ ವಿಜಯವೆಂಬ ಹೆಸರಿನ ಧನುಸ್ಸನ್ನು ಟೇಂಕರಿಸಿ ಧರ್ಮರಾಜನನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಅನಂತರ ಕರ್ಣನು ಮಹಾತ್ಮನಾದ ಯುಧಿಷ್ಠಿರನ ಚಕ್ರರಕ್ಷಕರಾಗಿದ್ದ ಚಂದ್ರದೇವ ಮತ್ತು ದಂಡಧಾರರೆಂಬ ಪಾಂಚಾಲಯೋಧರನ್ನು ಎರಡು ಕ್ಷುರಗಳೆಂಬ ಬಾಣಗಳಿಂದ ಸಂಹರಿಸಿದನು. ಧರ್ಮರಾಜನ ರಥದ ಪಾರ್ಶ್ವಗಳಲ್ಲಿದ್ದ ಆ ಇಬ್ಬರು ಪ್ರಮುಖ ಪಾಂಚಾಲ ವೀರರು ಧರ್ಮರಾಜನ ರಥದ ಬಳಿಯಲ್ಲಿ ಅಸುನೀಗಿಬಿದ್ದಿದ್ದು–ಚಂದ್ರನ ಸಮೀಪದಲ್ಲಿರುವ ಪುನರ್ವಸು ನಕ್ಷತ್ರಗಳಂತೆಯೇ–ಪ್ರಕಾಶಿಸುತ್ತಿದ್ದರು. ಯುಧಿಷ್ಠಿರನು ಕರ್ಣನನ್ನು ಪುನಃ ಮೂವತ್ತು ಬಾಣಗಳಿಂದ ಪ್ರಹರಿಸಿದನು. ಬಳಿಕ ಸುಷೇಣ-ಸತ್ಯಸೇನರನ್ನೂ ಮೂರು-ಮೂರು ಬಾಣಗಳಿಂದ ಪ್ರಹರಿಸಿದನು. ಪುನಃ ಧರ್ಮರಾಜನು ಶಲ್ಯನನ್ನು ತೊಂಬತ್ತು ಬಾಣಗಳಿಂದಲೂ ಕರ್ಣನನ್ನು ಎಪ್ಪತ್ತುಮೂರು ಬಾಣಗಳಿಂದಲೂ, ಅವನ ರಕ್ಷಕರನ್ನು ನೇರವಾಗಿ ಹೋಗುವ ಮೂರು-ಮೂರು ಬಾಣಗಳಿಂದಲೂ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಕರ್ಣನು ಗಹಗಹಿಸಿ ನಕ್ಕು ತನ್ನ ಧನುಸ್ಸನ್ನು ಹಿಂದಕ್ಕೂ ಮುಂದಕ್ಕೂ ಜಗ್ಗಿಸುತ್ತಾ ಒಂದು ಭಲ್ಲದಿಂದ ರಾಜನನ್ನು ಭೇದಿಸಿ ಪುನಃ ಅರುವತ್ತು ಬಾಣಗಳಿಂದ ಅವನನ್ನು ಗಾಯಗೊಳಿಸಿ ಸಿಂಹಗರ್ಜನೆಯನ್ನು ಮಾಡಿದನು.

ಕರ್ಣನು ಯುಧಿಷ್ಠಿರನನ್ನು ಪ್ರಹರಿಸಿದ ಕಾರಣದಿಂದ ಬಹಳವಾಗಿ ಕೋಪಗೊಂಡ ಪಾಂಡವಪಕ್ಷದ ಪ್ರಮುಖಯೋಧರು ಯುಧಿಷ್ಠಿರನನ್ನು ರಕ್ಷಿಸುವ ಇಚ್ಛೆಯಿಂದ ಕರ್ಣನನ್ನು ಬಾಣಗಳಿಂದ ಬಹಳವಾಗಿ ಗಾಯಗೊಳಿಸಿದರು. ಸಾತ್ಯಕಿ, ಚೇಕಿತಾನ, ಯುಯುತ್ಸು, ಪಾಂಡ್ಯ, ಧೃಷ್ಟದ್ಯುಮ್ನ, ಶಿಖಂಡೀ, ದ್ರೌಪದಿಯ ಐವರು ಮಕ್ಕಳು, ಪ್ರಭದ್ರಕರು, ನಕುಲ-ಸಹದೇವರು, ಭೀಮಸೇನ, ಶಿಶುಪಾಲನ ಮಗ, ಕರೂಷ-ಮತ್ಸ್ಯ-ಕೇಕಯರು, ಕಾಶಿ-ಕೋಸಲದೇಶಗಳ ಯೋಧರು–ಈ ಎಲ್ಲರೂ ಸೇರಿ ಬಾಣಗಳಿಂದ ಕರ್ಣನನ್ನು ಸಂಹರಿಸುವ ಇಚ್ಛೆಯಿಂದ ರಥ-ಗಜಾಶ್ವ-ಪದಾತಿಸೇನೆಗಳ ಸಮೇತರಾಗಿ ಕರ್ಣನ ಮೇಲೆ ನಾಲ್ಕು ದಿಕ್ಕುಗಳಿಂದಲೂ ದಾಳಿಮಾಡುತ್ತಾ ವರಾಹಕರ್ಣ, ನಾರಾಚ, ನಾಲೀಕ, ನಿಶಿತವಾದ ಬಾಣ, ವತ್ಸದಂತ, ವಿಪಾಠ, ಕ್ಷುರಪ್ರ, ಚಟಕಾಮುಖ–ಇವೇ ಮುಂತಾದ ನಾನಾವಿಧವಾದ ಉಗ್ರವಾದ ಅಸ್ತ್ರ-ಶಸ್ತ್ರಗಳಿಂದ ಕರ್ಣನನ್ನು ಬಹಳವಾಗಿ ಪೀಡಿಸಿದರು.

ಅನಂತರ ಪಾಂಡವರ ಕಡೆಯ ಪ್ರಮುಖವೀರರಿಂದ ಆಕ್ರಮಿಸಲ್ಪಟ್ಟ ಕರ್ಣನು ಬ್ರಹ್ಮಾಸ್ತ್ರವನ್ನು ಪ್ರಕಟಿಸುತ್ತಾ ಬಾಣಗಳ ಸಮೂಹಗಳಿಂದ ನಾಲ್ಕು ದಿಕ್ಕುಗಳನ್ನೂ ಮುಚ್ಚಿಬಿಟ್ಟನು. ಕರ್ಣನೆಂಬ ಅಗ್ನಿಯು ಬಾಣಗಳೆಂಬ ಮಹಾಜ್ವಾಲೆಗಳಿಂದ ಕೂಡಿದವನಾಗಿ ಪರಾಕ್ರಮವೆಂಬ ತಾಪದಿಂದ ಪಾಂಡವರೆಂಬ ಅರಣ್ಯವನ್ನು ಭಸ್ಮಮಾಡುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದನು. ಮಹಾಧನುಷ್ಮಂತನಾದ, ಮಹಾತ್ಮನಾದ ಕರ್ಣನು ಮಹಾಸ್ತ್ರಗಳನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಗಟ್ಟಿಯಾಗಿ ನಗುತ್ತಾ ಪುರುಷೇಂದ್ರನಾದ ಯುಧಿಷ್ಠಿರನ ಧನುಸ್ಸನ್ನು ಬಾಣಗಳಿಂದ ಕತ್ತರಿಸಿದನು. ಪುನಃ ಬಗ್ಗಿದ ಗಿಣ್ಣುಗಳಿದ್ದ ತೊಂಬತ್ತು ಬಾಣಗಳನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ನಿಮೇಷಮಾತ್ರದಲ್ಲಿ ನಿಶಿತವಾದ ಆ ಬಾಣಗಳಿಂದ ಧರ್ಮರಾಜನ ಕವಚವನ್ನೂ ಕತ್ತರಿಸಿದನು. ಸುವರ್ಣವಿಭೂಷಿತವಾಗಿದ್ದ ಮತ್ತು ವಜ್ರ-ವೈಡೂರ್ಯಗಳಿಂದ ಚಿತ್ರಿತವಾಗಿ ಮಾಡಲ್ಪಟ್ಟಿದ್ದ ಯುಧಿಷ್ಠಿರನ ಕವಚವು ಕೆಳಕ್ಕೆ ಬೀಳುತ್ತಿರುವಾಗ–ಸೂರ್ಯನೊಡನಿದ್ದ ಚಂಡ

ಮಾರುತಕ್ಕೆ ಸಿಕ್ಕಿ ಕೆಳಕ್ಕೆ ಬೀಳುವ ವಿದ್ಯುತ್ಸಹಿತವಾದ ಮೇಘದಂತೆಯೇ ಪ್ರಕಾಶಿಸುತ್ತಿದ್ದಿತು. ಪುರುಷೇಂದ್ರನಾದ ಯುಧಿಷ್ಠಿರನ ಶರೀರದಿಂದ ಚ್ಯುತ ವಾದ ರತ್ನಖಚಿತವಾದ ಆ ಕವಚವು–ಮೋಡಗಳಿಂದ ರಹಿತವಾದ, ನಕ್ಷತ್ರಮಂಡಲದಿಂದ ಶೋಭಾಯಮಾನವಾಗಿ ಕಾಣುವ, ರಾತ್ರಿಯ ಕಾಲದ ಆಕಾಶದಂತೆಯೇ ಕಾಣುತ್ತಿದ್ದಿತು. ಕವಚದಿಂದ ವಿಹೀನನಾಗಿದ್ದ ಯುಧಿಷ್ಠಿರನು ರಕ್ತದಿಂದ ತೋಯ್ದುಹೋದನು. ಅನಂತರ ಯುಧಿಷ್ಠಿರನು ಕರ್ಣನ ಕಡೆಗೆ ಲೋಹಮಯವಾದ ಶಕ್ತ್ಯಾಯುಧವನ್ನು ಎಸೆದನು. ಆದರೆ ಪ್ರಜ್ವಲಿಸುತ್ತಿದ್ದ ಆ ಶಕ್ತ್ಯಾಯುಧವನ್ನು ಕರ್ಣನು ಏಳು ಬಾಣಗಳಿಂದ ಆಕಾಶದಲ್ಲಿಯೇ ಕತ್ತರಿಸಿ ಬಿಟ್ಟನು. ಮಹಾಧನುಷ್ಮಂತನಾದ ಕರ್ಣನಿಂದ ಕತ್ತರಿಸಲ್ಪಟ್ಟ ಆ ಶಕ್ತ್ಯಾಯುಧವು ಭೂಮಿಯ ಮೇಲೆ ಬಿದ್ದಿತು. ಅನಂತರ ಯುಧಿಷ್ಠಿರನು ನಾಲ್ಕು ತೋಮರಗಳಿಂದ ಕರ್ಣನ ಹಣೆಯಲ್ಲಿಯೂ, ವಕ್ಷಃಸ್ಥಳದಲ್ಲಿಯೂ ಮತ್ತು ಬಾಹುಗಳಲ್ಲಿಯೂ ಪ್ರಹರಿಸಿ ಆನಂದದಿಂದ ಸಿಂಹನಾದಮಾಡಿದನು. ಉಕ್ಕಿಬರುತ್ತಿದ್ದ ರಕ್ತದ ಪ್ರವಾಹದಿಂದ ತೋಯ್ದು ಹೋಗಿದ್ದ ಕರ್ಣನು ಅತ್ಯಂತಕುಪಿತನಾಗಿ ಸರ್ಪದಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ, ಭಲ್ಲದಿಂದ ಯುಧಿಷ್ಠಿರನ ಧ್ವಜವನ್ನು ಕತ್ತರಿಸಿ ಮೂರು ಬಾಣಗಳಿಂದ ಧರ್ಮಜನನ್ನೂ ಪ್ರಹರಿಸಿದನು. ಬಳಿಕ ಅವನ ಎರಡು ಬತ್ತಳಿಕೆಗಳನ್ನೂ ಕತ್ತರಿಸಿ, ಯುಧಿಷ್ಠಿರನ ರಥವನ್ನೂ ನಿಶಿತವಾದ ಬಾಣಗಳಿಂದ ನುಚ್ಚುನೂರು ಮಾಡಿದನು. ದಂತದಂತೆ ಬಿಳಿಯ ಬಣ್ಣ ದಿಂದ ಕೂಡಿದ್ದ ಮತ್ತು ಕಪ್ಪಾದ ಬಾಲಗಳನ್ನು ಹೊಂದಿದ್ದ ಕುದುರೆಗಳು ಯುಧಿಷ್ಠಿರನ ರಥವನ್ನು ಎಳೆಯುತ್ತಿದ್ದುವು. ರಥವು ಚೂರ್ಣೀಕೃತವಾದ ನಂತರ ಅದೇ ಕುದುರೆಗಳಿಂದಲೇ ಯುಕ್ತವಾಗಿದ್ದ ಮತ್ತೊಂದು ರಥದಲ್ಲಿ ಕುಳಿತು ಯುದ್ಧದಿಂದ ವಿಮುಖನಾದ ರಾಜನು ಶಿಬಿರದ ಕಡೆಗೆ ಹೊರ ಟನು. ಆ ಮೊದಲೇ ಯುಧಿಷ್ಠಿರನ ಪಾರ್ಶ್ವರಕ್ಷಕರನ್ನು ಕರ್ಣನು ಸಂಹರಿಸಿದ್ದನು. ಆದುದರಿಂದ ಯುಧಿಷ್ಠಿರನು ಕರ್ಣನಿಗೆ ಎದುರಾಗಿ ನಿಲ್ಲಲಾಗದೇ ಬಹಳ ಖಿನ್ನನಾಗಿ ರಣರಂಗವನ್ನು ಬಿಟ್ಟು ಹೊರಟು ಹೋದನು. ಆ ಸಮಯದಲ್ಲಿ ಕರ್ಣನು ಯುಧಿಷ್ಠಿರನನ್ನು ಹಿಂಬಾಲಿಸಿ ಹೋಗಿ ವಜ್ರಾಯುಧ, ಛತ್ರ, ಅಂಕುಶ, ಮತ್ಸ್ಯ, ಧ್ವಜ, ಕೂರ್ಮ ಮತ್ತು ಕಮಲ್ಗ–ಇವೇ ಮೊದಲಾದ ಶುಭಲಕ್ಷಣಗಳಿಂದ ಕೂಡಿದ್ದ ಬಿಳುಪಾದ ಕೈಯಿಂದ ಯುಧಿಷ್ಠಿರನನ್ನು ಅವನ ಹೆಗಲಿನ ಪ್ರದೇಶದಲ್ಲಿ ಹಿಡಿದುಕೊಳ್ಳುತ್ತಾ

(ಯುಧಿಷ್ಠಿರನನ್ನು ಜೀವಗ್ರಹಣಮಾಡಿ ದುರ್ಯೋಧನನಿಗೆ ಒಪ್ಪಿಸಿ) ತನ್ನ ಆತ್ಮವನ್ನು ಪವಿತ್ರವನ್ನಾಗಿ ಮಾಡಬೇಕೆಂಬ ಇಚ್ಛೆಯಿಂದ ಬಲಾತ್ಕಾರವಾಗಿ ಯುಧಿಷ್ಠಿರನನ್ನು ಸೆಳೆದುಕೊಳ್ಳಬೇಕೆಂದು ಪ್ರಯತ್ನಿಸುತ್ತಾ ಇದ್ದಾಗ ಕುಂತಿಯು ಹೇಳಿದ ಮಾತು ಕರ್ಣನ ಸ್ಮರಣೆಗೆ ಬಂದಿತು.

ಆ ಸಮಯಕ್ಕೆ ಸರಿಯಾಗಿ ಶಲ್ಯನೂ ಹೇಳಿದನು: "ಕರ್ಣ! ನರಶ್ರೇಷ್ಠನಾದ ಧರ್ಮರಾಜನನ್ನು ಹಿಡಿದುಕೊಳ್ಳಬೇಡ. ಅವನನ್ನು ನೀನು



ಹಿಡಿದುಕೊಂಡೊಡನೆಯೇ ನಿನ್ನನ್ನು ಸಂಹರಿಸಿ ಭಸ್ಮಮಾಡಿಬಿಡುತ್ತಾನೆ. ಹಾಗಾಗದಿರಲಿ."

ಕರ್ಣನು ಗಹ-ಗಹಿಸಿ ನಗುತ್ತಾ ಯುಧಿಷ್ಠಿರನನ್ನು ನಿಂದಿಸುತ್ತಿರುವನೋ ಎಂಬಂತೆ ಈ ಮಾತುಗಳನ್ನು ಹೇಳಿದನು:

**ಕಥಂ ನಾಮ ಕುಲೇ ಜಾತಃ ಕ್ಷತ್ರಧರ್ಮೇ ವ್ಯವಸ್ಥಿತಃ ।**
**ಪ್ರಜಹ್ಯಾತ್ಸಮರಂ ಭೀತಃ ಪ್ರಾಣಾನ್ರಕ್ಷನ್ಮಹಾಹವೇ ।**
**ನ ಭವಾನ್ಕ್ಷತ್ರಧರ್ಮೇಷು ಕುಶಲೋ ಹೀತಿ ಮೇ ಮತಿಃ ॥೫೫॥**

"ಯುಧಿಷ್ಠಿರ! ಶ್ರೇಷ್ಠನಾದ ಕ್ಷತ್ರಿಯಕುಲದಲ್ಲಿ ಹುಟ್ಟಿ, ಕ್ಷತ್ರಧರ್ಮದಲ್ಲಿಯೇ ನಿರತನಾಗಿರುವ ನೀನು, ಈ ಮಹಾಸಮರದಲ್ಲಿ ಪ್ರಾಣಗಳನ್ನು ರಕ್ಷಣೆಮಾಡಿಕೊಳ್ಳುವ ಆಸೆಯಿಂದ ಭಯಪಟ್ಟುಕೊಂಡು ಯುದ್ಧವನ್ನು ಬಿಟ್ಟು ಏಕೆ ಪಲಾಯನಮಾಡುತ್ತಿರುವೆ? ನೀನು ಕ್ಷತ್ರಧರ್ಮದ ಪರಿಪಾಲನೆಯಲ್ಲಿ ಕುಶಲನಲ್ಲವೆಂಬುದು ನನ್ನ ಅಭಿಪ್ರಾಯವಾಗಿದೆ.

**ಬ್ರಾಹ್ಮೇ ಬಲೇ ಭವಾನ್ಯುಕ್ತಃ ಸ್ವಾಧ್ಯಾಯೇ ಯಜ್ಞಕರ್ಮಣಿ ।**
**ಮಾ ಸ್ಮ ಯುಧ್ಯಸ್ವ ಕೌಂತೇಯ ಮಾ ಸ್ಮ ವೀರಾನ್ಸಮಾಸದಃ ॥೫೬॥**

ಕೌಂತೇಯ! ನೀನು ಕೇವಲ ಬ್ರಹ್ಮಬಲಯುಕ್ತನಾಗಿರುವೆ. ಅಧ್ಯಯನ ಮಾಡುವುದರಲ್ಲಿಯೂ-ಯಜ್ಞಕರ್ಮಗಳಲ್ಲಿಯೂ ನೀನು ಪರಿಣತನು. ಆದುದರಿಂದ ನಿನಗೆ ತಕ್ಕುದಲ್ಲದ ಯುದ್ಧಗಳಲ್ಲಿ ನೀನು ತೊಡಗಬೇಡ. ವೀರರಾದವರೊಡನೆ ಸೆಣೆಸಲು ಹೋಗಬೇಡ.

**ಮಾ ಚೈತಾನಪ್ರಿಯಂ ಬ್ರೂಹಿ ಮಾ ವೈ ವ್ರಜ ಮಹಾರಣಮ್ ।**
**ವಕ್ತವ್ಯಾ ಮಾರಿಷಾನ್ಯೇ ತು ನ ವಕ್ತವ್ಯಾಸ್ತು ಮಾದೃಶಾಃ ॥೫೭॥**

ಧರ್ಮಜ! ವೀರರೊಡನೆ ಯಾವಾಗಲೂ ಅಪ್ರಿಯವಾದ ಮಾತುಗಳನ್ನಾಡಲು ಹೋಗಬೇಡ. ಯುದ್ಧಭೂಮಿಗೆ ಇನ್ನು ಮುಂದೆ ಕಾಲನ್ನೇ ಇಡಬೇಡ. ಅಪ್ರಿಯವಾದ ಮಾತುಗಳನ್ನು ಹೇಳಲೇಬೇಕೆನ್ನುವುದಾದರೆ ಬೇರೆಯವರೊಡನೆ ಹೇಳು. ಆದರೆ ನನ್ನಂತಹವರೊಡನೆ ಮಾತ್ರ ಅಪ್ರಿಯವಾದ ಮಾತುಗಳನ್ನಾಡಬೇಡ.

**ಮಾದೃಶಾನ್ವಿಬ್ರುವನ್ಯುದ್ಧೇ ಏತದನ್ಯಚ್ಚ ಲಪ್ಸ್ಯಸೇ ।**
**ಸ್ವಗೃಹಂ ಗಚ್ಛ ಕೌಂತೇಯ ಯತ್ರ ತೌ ಕೇಶವಾರ್ಜುನೌ ।**
**ನ ಹಿ ತ್ವಾಂ ಸಮರೇ ರಾಜನ್ಹನ್ಯಾತ್ಕರ್ಣಃ ಕಥಂಚನ ॥೫೮॥**

ಯುದ್ಧದಲ್ಲಿ ನನ್ನಂತಹವರೊಡನೆ ಅಪ್ರಿಯವಾದ ಮಾತುಗಳನ್ನೇ

ಆಡುತ್ತಾ ಹೋದರೆ ಈಗ ಆದುದನ್ನೂ ಮತ್ತು ಇನ್ನೂ ಅತಿಕಠೋರವಾದ ಫಲವನ್ನೂ ಅನುಭವಿಸಬೇಕಾಗುತ್ತದೆ. ನಿನ್ನ ಮನೆಗೆ ಹೊರಟುಹೋಗು. ಅಥವಾ ಕೇಶವಾರ್ಜುನರು ಎಲ್ಲಿರುವರೋ ಅಲ್ಲಿಗಾದರೂ ಹೊರಟು ಹೋಗು. ಆದರೆ ಕರ್ಣನು ಮಾತ್ರ ನಿನ್ನನ್ನು ಯಾವುದೇ ಕಾರಣದಿಂದಲೂ ಯುದ್ಧಭೂಮಿಯಲ್ಲಿ ಸಂಹರಿಸುವುದಿಲ್ಲ."

ಮಹಾಬಲನಾದ ಕರ್ಣನು ಯುಧಿಷ್ಠಿರನೊಡನೆ ಹೀಗೆ ಹೇಳಿ ಅವನನ್ನು ಅಲ್ಲಿಯೇ ಬಿಟ್ಟು–ವಜ್ರಪಾಣಿಯಾದ ಇಂದ್ರನು ಅಸುರಸೈನ್ಯವನ್ನು ಧ್ವಂಸ ಮಾಡುತ್ತಿದ್ದಂತೆ–ಪಾಂಡವರ ಸೈನ್ಯವನ್ನು ಧ್ವಂಸಮಾಡಲು ಉಪಕ್ರಮಿಸಿದನು.

ಅನಂತರ ಯುಧಿಷ್ಠಿರನು ಬಹಳವಾಗಿ ನಾಚಿಕೊಂಡವನಂತೆ ರಣಾಂಗಣದಿಂದ ಶೀಘ್ರವಾಗಿ ಹೊರಟುಹೋದನು. ಯಾವುದೇ ಕಾರಣ ದಿಂದಲೂ ಧರ್ಮದಿಂದ ಚ್ಯುತನಾಗದೇ ಇದ್ದ ಅಚ್ಯುತನಾದ ರಾಜನು ರಣಾಂಗಣವನ್ನು ಬಿಟ್ಟು ಹೋಗುತ್ತಿರುವನೆಂಬುದನ್ನು ಗಮನಿಸಿದ ಚೇದಿ-ಪಾಂಡವ-ಪಾಂಚಾಲರೂ, ಮಹಾರಥನಾದ ಸಾತ್ಯಕಿಯೂ, ಶೂರರಾದ ದ್ರೌಪದಿಯ ಮಕ್ಕಳೂ, ನಕುಲ-ಸಹದೇವರೂ ಅವನನ್ನೇ ಅನುಸರಿಸಿ ಹೋದರು. ಯುಧಿಷ್ಠಿರನ ಸೈನ್ಯವು ಪರಾಙ್ಮುಖವಾದುದನ್ನು ಕಂಡು ಪ್ರಹೃಷ್ಟನಾದ ಕರ್ಣನು ಕುರುಗಳೊಡನೆ ಯುಧಿಷ್ಠಿರನ ಸೈನ್ಯವನ್ನು ಹಿಂಬಾಲಿಸಿ ಹೋದನು. ಆ ಸಮಯದಲ್ಲಿ ನಮ್ಮ ಸೈನ್ಯದಲ್ಲಿ ಭೇರೀ- ಶಂಖ-ಮೃದಂಗ-ಧನುಸ್ಸುಗಳ ಮಹಾಧ್ವನಿಯಾಯಿತು. ದುರ್ಯೋಧನನ ಕಡೆಯಯೋಧರು ಗಟ್ಟಿಯಾಗಿ ಸಿಂಹನಾದಗಳನ್ನು ಮಾಡಿದರು.

ಧೃತರಾಷ್ಟ್ರ! ಆ ಸಮಯದಲ್ಲಿ ಯುಧಿಷ್ಠಿರನು ಬಹಳ ಬೇಗ ಶ್ರುತಕೀರ್ತಿಯ ರಥವನ್ನು ಹತ್ತಿಕೊಂಡು ಕರ್ಣನ ಪರಾಕ್ರಮವನ್ನು ನೋಡುತ್ತಿದ್ದನು. ತನ್ನ ಸೈನಿಕರನ್ನು ಕರ್ಣನು ಕದಡಿಹಾಕುತ್ತಿರುವುದನ್ನು ನೋಡಿ ಕ್ರುದ್ಧನಾದ ಯುಧಿಷ್ಠಿರನು–'ಸೈನಿಕರೇ! ಸುಮ್ಮನೇಕೆ ನೋಡುತ್ತಿ

ರುವಿರಿ? ಶತ್ರುಪಕ್ಷದ ಸೈನಿಕರನ್ನು ಧ್ವಂಸಮಾಡಿರಿ'–ಎಂದು ತನ್ನ ಕಡೆಯ ಯೋಧರಿಗೆ ಹೇಳಿದನು.

ಕೂಡಲೇ ರಾಜನಿಂದ ಅನುಜ್ಞಾತರಾದ ಭೀಮಸೇನಪ್ರಮುಖರಾದ ಪಾಂಡವಮಹಾರಥರು ನಿನ್ನ ಮಕ್ಕಳ ಮೇಲೆ ಆಕ್ರಮಣವನ್ನು ನಡೆಸಿದರು. ಪುನಃ ಅಲ್ಲಲ್ಲಿ ರಥ-ಗಜಾಶ್ವ-ಪದಾತಿಗಳ, ಯೋಧರ ಮತ್ತು ಶಸ್ತ್ರಾಸ್ತ್ರಗಳ ಸಂಘರ್ಷದಿಂದುಂಟಾದ ಭಯಂಕರಶಬ್ದವು ಕೇಳತೊಡಗಿತು.

'ಮೇಲೇಳಿರಿ! ಪ್ರಹರಿಸಿರಿ! ಮುಂದೆ ಹೋಗಿರಿ! ಶತ್ರುವಿನ ಮೇಲೆ ಬೀಳಿರಿ!' ಹೀಗೆಂಬುದಾಗಿ ಹೇಳುತ್ತಾ ಆ ಮಹಾಯುದ್ಧದಲ್ಲಿ ಯೋಧರು ಪರಸ್ಪರವಾಗಿ ಹೊಡೆದಾಡುತ್ತಿದ್ದರು. ಎರಡೂ ಪಕ್ಷಗಳ ನರಶ್ರೇಷ್ಠರೂ ಪರಸ್ಪರವಾಗಿ ಕಲೆತು ಒಬ್ಬರು ಮತ್ತೊಬ್ಬರನ್ನು ಬಾಣಗಳ ಮೂಲಕವಾಗಿ ಪ್ರಹರಿಸುತ್ತಿದ್ದಾಗ ಅವರು ಬಿಡುತ್ತಿದ್ದ ಬಾಣವೃಷ್ಟಿಯು ಆಕಾಶದಲ್ಲಿ ಮೋಡಗಳ ನೆಳಲಿನಂತೆಯೇ ಕಾಣುತ್ತಿದ್ದಿತು.

ಪರಸ್ಪರಪ್ರಹಾರಗಳಿಂದ ಗಾಯಗೊಂಡ ಅನೇಕ ಭೂಪಾಲಕರು ಪತಾಕೆ, ಧ್ವಜ, ಕುದುರೆ, ಸಾರಥಿ, ಆಯುಧ ಮತ್ತು ಶರೀರಾವಯವ ಗಳಿಂದ ವಿಹೀನರಾಗಿ ಭೂಮಿಯ ಮೇಲೆ ಬಿದ್ದುಹೋದರು. ಮಹಾಪರಾ ಕ್ರಮಿಯಾದ ಇಂದ್ರನ ವಜ್ರಾಯುಧಪ್ರಹಾರದಿಂದ ಛಿನ್ನ-ಭಿನ್ನವಾದ ಪರ್ವತಗಳ ಶಿಖರಗಳು ಕಳಚಿ ಕೆಳಕ್ಕೆ ಬೀಳುವಂತೆ–ಮಾವಟಿಗರಿಂದ ಕೂಡಿದ ಆನೆಗಳು ರಣಾಂಗಣದಲ್ಲಿ ತಂಡ-ತಂಡವಾಗಿ ಬೀಳುತ್ತಿದ್ದುವು. ಛಿನ್ನವಾದ-ಭಿನ್ನವಾದ ಮತ್ತು ಅಸ್ತವ್ಯಸ್ತವಾಗಿದ್ದ ಕವಚಗಳಿಂದಲೂ, ಅಲಂಕಾರಪದಾರ್ಥಗಳಿಂದಲೂ ಕೂಡಿದ್ದ ಸಾವಿರಾರು ಕುದುರೆಗಳು ಸತ್ತುಹೋದ ಅಶ್ವಯೋಧರಿಂದ ಕೂಡಿದುವುಗಳಾಗಿ ರಣಭೂಮಿಯಲ್ಲಿ ಬೀಳುತ್ತಿದ್ದುವು. ಆ ಮಹಾಸಂಘರ್ಷದಲ್ಲಿ ಪ್ರತಿಪಕ್ಷದ ಗಜಾಶ್ವ-ರಥಸೈನಿಕ ರಿಂದ ಹತರಾದ, ಮುರಿದು ಹೋದ ಆಯುಧಗಳನ್ನೂ, ಕ್ಷತ-ವಿಕ್ಷತವಾದ ಅಂಗಾಂಗಗಳನ್ನೂ ಹೊಂದಿದ್ದ ಸಾವಿರಾರು ಪದಾತಿಸೈನ್ಯಸಮೂಹಗಳು ರಣಾಂಗಣದ ಸುತ್ತಲೂ ರಾಶಿ-ರಾಶಿಯಾಗಿ ಬಿದ್ದಿದ್ದುವು. ವಿಶಾಲ ವಾಗಿಯೂ, ಅಗಲವಾಗಿಯೂ, ಕೆಂಪಾಗಿಯೂ ಇದ್ದ ಕಣ್ಣುಗಳಿಂದಲೂ,

ಕಮಲಕ್ಕೂ ಮತ್ತು ಚಂದ್ರನಿಗೂ ಸಮಾನವಾದ ಮುಖಗಳಿಂದಲೂ ಕೂಡಿದ್ದ, ಯುದ್ಧಕುಶಲರಾದ ವೀರರ ಶಿರಸ್ಸುಗಳಿಂದ ರಣಾಂಗಣವು ತುಂಬಿಹೋಗಿದ್ದಿತು.

ಭೂಮಿಯಲ್ಲಿ ಹೇಗೆ ಕಲ-ಕಲಾಶಬ್ದವಾಗುತ್ತಿದ್ದಿತೋ ಅದೇ ರೀತಿಯಲ್ಲಿ ಆಕಾಶದಲ್ಲಿಯೂ ಕಲ-ಕಲಾಶಬ್ದವಾಗುತ್ತಿದ್ದುದನ್ನು ಜನರು ಕೇಳಿ ದರು. ವಿಮಾನಗಳಲ್ಲಿ ಕುಳಿತಿದ್ದ ಅಪ್ಸರೆಯರು ಗುಂಪು-ಗುಂಪಾಗಿ



ಹಾಡುತ್ತಿದ್ದ ಗೀತಗಳ ಧ್ವನಿಯೂ ಮತ್ತು ಸುಮಧುರವಾದ ವಾದ್ಯಗಳ ಧ್ವನಿಯೂ ಕೇಳಿಸುತ್ತಿದ್ದಿತು. ಯುದ್ಧಾಭಿಮುಖರಾಗಿದ್ದ ಶತ್ರುಗಳಿಂದ ಹತ ರಾದ ಲಕ್ಷೋಪಲಕ್ಷ ಯೋಧರನ್ನೂ ಅಪ್ಸರೆಯರು ವಿಮಾನಗಳಲ್ಲಿ ಕುಳ್ಳಿರಿಸಿಕೊಂಡು ಹೋಗುತ್ತಿದ್ದರು. ತಮ್ಮ ಕಣ್ಣೆದುರಿನಲ್ಲಿಯೇ ನಡೆಯು

ತ್ತಿದ್ದ ಮಹಾಶ್ಚರ್ಯಕರವಾದ ಆ ದೃಶ್ಯವನ್ನು ನೋಡಿ ಆನಂದತುಂದಿಲರಾದ ಯೋಧರು ಸ್ವರ್ಗವನ್ನು ಪಡೆದುಕೊಳ್ಳಬೇಕೆಂಬ ಇಚ್ಛೆಯಿಂದ ಬಹಳ ಬೇಗ ಪರಸ್ಪರವಾಗಿ ಹೊಡೆದಾಡಿ ಸಾಯುತ್ತಿದ್ದರು. ರಥಿಗಳು ರಥಿಗಳೊಡನೆಯೂ, ಪದಾತಿಗಳೂ ಪದಾತಿಗಳೊಡನೆಯೂ, ಗಜಸೈನಿಕರು ಗಜಸೈನಿಕ ರೊಡನೆಯೂ, ಅಶ್ವಸೈನಿಕರು ಅಶ್ವಸೈನಿಕರೊಡನೆಯೂ ವಿಚಿತ್ರವಾದ ರೀತಿಯಲ್ಲಿ ಯುದ್ಧಮಾಡುತ್ತಿದ್ದರು. ಕೌರವೇಶ್ವರ! ಹೀಗೆ ಗಜಾಶ್ವ-ನರವಿನಾಶಕವಾದ, ಭಯಂಕರವಾದ ಯುದ್ಧವು ನಡೆಯುತ್ತಿರಲಾಗಿ, ಸೈನ್ಯವು ಧೂಳಿನಿಂದ ಆವೃತವಾಗಲಾಗಿ, ದಿಕ್ಕುಗಾಣದ ಸೈನಿಕರು ತಮ್ಮ ಕಡೆಯ ಸೈನಿಕರನ್ನೇ ಸಂಹರಿಸಲು ಉಪಕ್ರಮಿಸಿದರು.

**ಕಚಾಕಚಿ ಯುದ್ಧಮಾಸೀದ್ದನ್ತಾದನ್ತಿ ನಖಾನಖಿ ।**
**ಮುಷ್ಟಿಯುದ್ಧಂ ನಿಯುದ್ಧಂ ಚ ದೇಹಪಾಪ್ಮಾಸುನಾಶನಮ್ ॥**

ಎರಡೂ ಪಕ್ಷಗಳ ಸೈನಿಕರು ಪರಸ್ಪರವಾಗಿ ಒಬ್ಬರ ತಲೆಗೂದಲನ್ನು ಮತ್ತೊಬ್ಬರು ಹಿಡಿದು ಜಗ್ಗಾಡುತ್ತಾ ಯುದ್ಧಮಾಡುತ್ತಿದ್ದರು. ಮತ್ತೆ ಕೆಲವರು ಹಲ್ಲುಗಳಿಂದಲೇ ಪರಸ್ಪರವಾಗಿ ಕಚ್ಚಾಡುತ್ತಾ ಯುದ್ಧಮಾಡುತ್ತಿದ್ದರು. ಇನ್ನೂ ಕೆಲವರು ಉಗುರುಗಳಿಂದಲೇ ಎದುರಾಳಿಗಳನ್ನು ಪರಚುತ್ತಾ ಯುದ್ಧ ಮಾಡುತ್ತಿದ್ದರು. ಇನ್ನೂ ಕೆಲವರು ಬಾಹುಯುದ್ಧಗಳಲ್ಲಿ ತೊಡಗಿದ್ದರು. ಮತ್ತೆ ಕೆಲವರು ಮುಷ್ಟಿಯುದ್ಧದಲ್ಲಿ ತೊಡಗಿದ್ದರು. ಮತ್ತೆ ಕೆಲವರು ದೇಹ-ಪಾಪ ಮತ್ತು ಪ್ರಾಣನಾಶಕವಾದ ದ್ವಂದ್ವಯುದ್ಧದಲ್ಲಿ ತೊಡಗಿದ್ದರು.

ಗಜಾಶ್ವ-ನರಕ್ಷಯಕರವಾದ ಮಹಾಸಂಗ್ರಾಮವು ಹೀಗೆ ನಡೆಯುತ್ತಿರ ಲಾಗಿ, ಕ್ಷತ-ವಿಕ್ಷತವಾದ ಗಜಾಶ್ವ-ಮನುಷ್ಯದೇಹಗಳಿಂದ ರಕ್ತದ ನದಿಯೇ ಪ್ರವಹಿಸತೊಡಗಿತು. ಹಾಗೆ ಹುಟ್ಟಿದ ನದಿಯು ಯುದ್ಧಭೂಮಿ ಯಲ್ಲಿ ಬಿದ್ದಿದ್ದ ಅಸಂಖ್ಯಾತವಾದ ಗಜಾಶ್ವ-ನರದೇಹಗಳನ್ನೇ ಕೊಚ್ಚಿ ಕೊಂಡು ಹೋಗುತ್ತಿದ್ದಿತು. ನರಾಶ್ವ-ಗಜಗಳಿಂದ ಸಂಪನ್ನವಾಗಿದ್ದ ಆ ರಣಾಂಗಣದಲ್ಲಿ ನರಾಶ್ವಗಜ-ಯೋಧರ ರಕ್ತವೇ ಆ ಮಹಾನದಿಯ ನೀರಾಗಿದ್ದಿತು. ಮಾಂಸದಿಂದ ಸಮ್ಮಿಶ್ರವಾದ ರಕ್ತವೇ ಕೆಸರಾಗಿದ್ದಿತು.

ನರಾಶ್ವ- ಗಜಗಳ ದೇಹಗಳನ್ನು ಪ್ರವಾಹದಲ್ಲಿ ಒಯ್ಯುತ್ತಿದ್ದ ಮಹಾಘೋರವಾಗಿ ಕಾಣುತ್ತಿದ್ದ ಆ ನದಿಯು ಭೀರುಗಳಿಗೆ ಭಯವನ್ನುಂಟುಮಾಡುವುದೂ ಆಗಿದ್ದಿತು. ವಿಜಯೇಚ್ಛುಗಳಾದ ಯೋಧರು ಆ ನದಿಯನ್ನು ದಾಟಲು ಸಾಧ್ಯವಾದ, ಆಳವಿಲ್ಲದ ಸ್ಥಳದಲ್ಲಿ ದಾಟಿಕೊಂಡು ಹೋಗುತ್ತಿದ್ದರು. ಬಹಳ ಆಳವಾಗಿ ಮತ್ತು ದಾಟಲು ಅಸಾಧ್ಯವಾಗಿದ್ದ ಸ್ಥಳದಲ್ಲಿ ಮುಳುಗುತ್ತಾ ಏಳುತ್ತಾ ಹೋಗುತ್ತಿದ್ದರು. (ಆ ರಕ್ತನದಿಯಲ್ಲಿ ಕೆಲವರ ದೇಹಗಳು ತೇಲಿಕೊಂಡು ಹೋಗುತ್ತಿದ್ದುವು; ಮತ್ತೆ ಕೆಲವರ ದೇಹಗಳು ಮುಳುಗುತ್ತಾ ಪುನಃ ಮೇಲೇಳುತ್ತಾ ಹೋಗುತ್ತಿದ್ದುವು.) ಆ ರಕ್ತನದಿಯಲ್ಲಿ ತೇಲಿಹೋಗುತ್ತಿದ್ದ ಯೋಧರೆಲ್ಲರೂ ರಕ್ತದಿಂದ ಸಂಪೂರ್ಣವಾಗಿ ತೋಯ್ದುಹೋದ ಅವಯವವುಳ್ಳವರಾಗಿಯೂ, ರಕ್ತಮಯವಾದ ಕವಚಗಳನ್ನೂ ಮತ್ತು ವಸ್ತ್ರಗಳನ್ನೂ ಧರಿಸಿದವರಾಗಿಯೂ ಇದ್ದರು. ಕೆಲವರು ಆ ರಕ್ತನದಿಯಲ್ಲಿ ಸ್ನಾನಮಾಡುತ್ತಿದ್ದರು. ಕೆಲವರು ರಕ್ತವನ್ನೇ ಗುಟುಕುಹಾಕುತ್ತಿದ್ದರು. ಮತ್ತೆ ಕೆಲವರು ಅಂತಹ ನದಿಯನ್ನು ನೋಡಿ ಮೋಹಪರವಶರಾಗುತ್ತಿದ್ದರು. ರಥಗಳು, ಕುದುರೆಗಳು, ಪದಾತಿಗಳು, ಆನೆಗಳು, ಆಯುಧಗಳು, ಆಭರಣಗಳು, ವಸ್ತ್ರಗಳು, ಕವಚ ಗಳು, ಸತ್ತುಹೋದವರು ಮತ್ತು ವಧಿಸಲ್ಪಡುತ್ತಿದ್ದವರು, ಭೂಮಿ, ಅಂತರಿಕ್ಷ ಮತ್ತು ಸ್ವರ್ಗ—ಈ ಎಲ್ಲವೂ ಪ್ರಾಯಶಃ ಕೆಂಪುಬಣ್ಣವಾಗಿರುವುದನ್ನೇ ನಾವು ನೋಡುತ್ತಿದ್ದೆವು. (ಆ ಘೋರಯುದ್ಧದ ಸಮಯದಲ್ಲಿ ಎಲ್ಲವೂ ಕೆಂಪಾಗಿಯೇ ಕಾಣುತ್ತಿದ್ದಿತು.) ಪ್ರವಾಹರೂಪದಲ್ಲಿ ಹರಿದುಹೋಗುತ್ತಿದ್ದ ರಕ್ತನದಿಯ ವಾಸನೆ, ಸ್ಪರ್ಶ, ರುಚಿ, ಭಯಂಕರರೂಪ, ಭಯಂಕರವಾದ ಕೆಂಪುಬಣ್ಣ ಮತ್ತು ಆ ನದಿಯ ಭೋರ್ಗರೆಯುವ ಶಬ್ದ-ಇವುಗಳಿಂದ ಪ್ರಾಯಶಃ ಎಲ್ಲ ಸೈನಿಕರೂ ಬಹಳವಾಗಿ ವಿಷಾದಿಸಿದರು.

ಭೀಮ-ಸಾತ್ಯಕಿಪ್ರಮುಖರಾದ ಪಾಂಡವಯೋಧರು ಆ ವೇಳೆಗಾ ಗಲೇ ಬಹಳವಾಗಿ ನಾಶಹೊಂದಿದ್ದ ಕೌರವಸೈನ್ಯವನ್ನು ಪುನಃ ಆಕ್ರಮಿಸಿ ದರು. ಹಾಗೆ ತಮ್ಮ ಮೇಲೆ ಬೀಳಲು ರಭಸದಿಂದ ಬರುತ್ತಿದ್ದ ಪಾಂಡವರ

ಸೈನ್ಯವು ತಡೆದುಕೊಳ್ಳಲು ಅಸಾಧ್ಯವೆಂಬುದನ್ನು ನಿರೀಕ್ಷಿಸಿ ನಿನ್ನ ಮಕ್ಕಳ ಮಹಾಸೈನ್ಯವು ಪರಾಙ್ಮುಖವಾಯಿತು. ಅರಣ್ಯದಲ್ಲಿ ಸಿಂಹಗಳಿಂದ ಪೀಡಿತವಾದ ಆನೆಗಳ ಸಮೂಹವು ಕಂಗಾಲಾಗಿ ಚದುರಿಹೋಗುವಂತೆ– ಸರ್ವತ್ರ ಪಾಂಡವಯೋಧರಿಂದ ಕದಡಲ್ಪಡುತ್ತಿದ್ದ ನಿನ್ನ ಸೈನ್ಯವು ಪಲಾಯನಮಾಡಿತು. ರಥಾಶ್ವ-ಗಜ-ಪದಾತಿಸೈನ್ಯಗಳ ಸಮೂಹಗಳು ಚಲ್ಲಾ-ಪಿಲ್ಲಿಯಾಗಿ ಹೋದುವು. ಯೋಧರ ಕವಚಗಳೂ ಮತ್ತು ಆವರಣಗಳೂ ವಿಧ್ವಸ್ತವಾದುವು. ಆಯುಧಗಳೂ ಮತ್ತು ಧನುಸ್ಸುಗಳೂ ಭಗ್ನವಾಗಿ ಭೂಮಿಯಮೇಲೆ ಬಿದ್ದುವು.”

೪೯ನೆಯ ಅಧ್ಯಾಯವು ಮುಗಿಯಿತು.

೫೦ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕರ್ಣ–ಭೀಮಸೇನರ ಯುದ್ಧ: ಕರ್ಣನು ಮೂರ್ಛೆಹೋದುದು

ಸಂಜಯನು ಯುದ್ಧವನ್ನು ವರ್ಣಿಸುತ್ತಾ ಹೇಳುತ್ತಾನೆ:

“ಮಹಾರಾಜ! ಪಾಂಡವರು ತನ್ನ ಸೈನ್ಯದ ಮೇಲೆ ಆಕ್ರಮಣ ನಡೆಸುತ್ತಿರುವುದನ್ನು ಕಂಡು ದುರ್ಯೋಧನನು ಪಾಂಡವರ ಮುನ್ನಡೆಯನ್ನು ಎಲ್ಲ ಕಡೆಗಳಿಂದಲೂ ತಡೆದನು ಮತ್ತು ತನ್ನ ಸೈನ್ಯವು ಸ್ಥಿರವಾಗಿ ನಿಂತು ಶತ್ರುಗಳನ್ನು ಎದುರಿಸುವಂತೆ ಪ್ರಯತ್ನಿಸುತ್ತಿದ್ದನು. ಆದರೆ ನಿನ್ನ ಮಗನು ಎಷ್ಟೇ ಕೂಗಿಕೊಂಡರೂ ಓಡಿಹೋಗುತ್ತಿದ್ದ ನಿನ್ನ ಸೈನಿಕರು ಹಿಂದಿರುಗಲಿಲ್ಲ. ಅನಂತರ ವ್ಯೂಹದ ಪಕ್ಷ-ಪ್ರಪಕ್ಷಗಳಲ್ಲಿ ನಿಂತಿದ್ದ ಸೈನಿಕರೂ, ಸುಬಲನ ಮಗನಾದ ಶಕುನಿಯೂ ಮತ್ತು ಶಸ್ತ್ರಪಾಣಿಗಳಾಗಿದ್ದ ಕುರುಗಳೂ ರಣಭೂಮಿಯಲ್ಲಿ ಭೀಮಸೇನನನ್ನು ಆಕ್ರಮಿಸಿದರು.

ಕರ್ಣನೂ ಸಹ ರಾಜರೊಡನೆ ಓಡಿ ಹೋಗುತ್ತಿದ್ದ ದುರ್ಯೋಧನನ ಸೈನಿಕರನ್ನು ನೋಡಿ ಮದ್ರರಾಜನಾದ ಶಲ್ಯನನ್ನು ಕುರಿತು, ಭೀಮನ ರಥದ ಬಳಿಗೆ ಹೋಗುವಂತೆ ಹೇಳಿದನು. ಮದ್ರಾಧಿಪನಾದ ಶಲ್ಯನು ಕೂಡಲೇ ಹಂಸದಂತೆ ಬಿಳುಪಾದ, ಶ್ರೇಷ್ಠವಾದ ಕುದುರೆಗಳನ್ನು ವೃಕೋದರನ ಬಳಿಗೆ ಓಡಿಸಿದನು. ಆಹವಶೋಭಿಯಾದ ಶಲ್ಯನಿಂದ ಪ್ರೇರಿತವಾದ ಆ ಕುದುರೆ

ಗಳು ಭೀಮಸೇನನ ರಥದ ಸಮೀಪಕ್ಕೆ ಬಂದು ಆ ರಥದ ಕುದುರೆಗಳೊಡನೆ ಮಿಳಿತವಾದುವು. ಕ್ರೋಧಮೂರ್ಛಿತನಾಗಿದ್ದ ಭೀಮಸೇನನು, ಕರ್ಣನು ತನ್ನ ಬಳಿಗೆ ಬರುತ್ತಿರುವುದನ್ನು ನೋಡಿ ಅವನನ್ನು ವಿನಾಶಗೊಳಿಸಬೇಕೆಂದೇ ನಿಶ್ಚಯಿಸಿದನು. ತನ್ನ ಸಮೀಪದಲ್ಲಿಯೇ ಇದ್ದ ಸಾತ್ಯಕಿಯನ್ನೂ ಮತ್ತು ದ್ರುಪದನ ಮಗನಾದ ಧೃಷ್ಟದ್ಯುಮ್ನನನ್ನೂ ಉದ್ದೇಶಿಸಿ ಹೇಳಿದನು:

"ನಾನು ಕಣ್ಣೆದುರಿನಲ್ಲಿರುವಾಗ ಕಥಂಚಿತ್ ಮಹಾಸಂಕಟದಿಂದ ಮುಕ್ತನಾದಂತೆ ಕಾಣುತ್ತಿರುವ ಧರ್ಮಾತ್ಮನಾದ ಯುಧಿಷ್ಠಿರನನ್ನು ನೀವು ರಕ್ಷಿಸಿರಿ. ದುರಾತ್ಮನಾದ ಕರ್ಣನು ದುರ್ಯೋಧನನ ಪ್ರೀತ್ಯರ್ಥವಾಗಿ ನನ್ನ ಸಮಕ್ಷದಲ್ಲಿಯೇ ಧರ್ಮರಾಜನನ್ನು ಸಕಲವಿಧವಾದ ಯುದ್ಧಸಾಮಗ್ರಿಗಳಿಂದಲೂ ವಿಹೀನನನ್ನಾಗಿ ಮಾಡಿರುವನು. ಇದರಿಂದ ನಾನು ಬಹಳ ದುಃಖಿತನಾಗಿದ್ದೇನೆ. ಈ ದುಃಖವನ್ನು ನಾನಿಂದು ಕರ್ಣನ ವಧೆಯಿಂದ ಅಂತ್ಯಗೊಳಿಸುತ್ತೇನೆ. ಇಂದಿನ ಸುಘೋರವಾದ ಸಂಗ್ರಾಮದಲ್ಲಿ ನಾನು ಕರ್ಣನನ್ನು ಸಂಹಾರಮಾಡುತ್ತೇನೆ. ಅಥವಾ ಅವನಾದರೂ ನನ್ನನ್ನು ಸಂಹರಿಸುತ್ತಾನೆ. ಸತ್ಯವಾದ ಈ ಮಾತನ್ನು ನಾನು ನಿಮ್ಮೊಡನೆ ಹೇಳುತ್ತಿದ್ದೇನೆ. ಈ ಕಾರಣದಿಂದ ಈ ಸಮಯದಲ್ಲಿ ನಾನು ರಾಜನನ್ನು ನಿಮ್ಮ ರಕ್ಷಣೆಯಲ್ಲಿ ನ್ಯಾಸಭೂತವಾಗಿ ಇಡುತ್ತಿದ್ದೇನೆ. ನೀವು ಸ್ವಲ್ಪವಾದರೂ ಚಿಂತಿಸಹೋಗದೇ ರಾಜನ ರಕ್ಷಣೆಗೆ ಸಂಪೂರ್ಣವಾಗಿ ಪ್ರಯತ್ನಿಸಿರಿ."

ಮಹಾಬಾಹುವಾದ ಭೀಮಸೇನನು ಹೀಗೆ ಹೇಳಿ ಸಿಂಹನಾದದಿಂದ ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಾ ಕರ್ಣನ ರಥದ ಬಳಿಗೆ ಧಾವಿಸಿದನು. ಯುದ್ಧಾಭಿನಂದಿಯಾದ ಭೀಮಸೇನನು ಬಹಳ ತ್ವರೆಯಿಂದ ಕರ್ಣನ ರಥದ ಬಳಿಗೆ ಬರುತ್ತಿರುವುದನ್ನು ಕಂಡು ಮದ್ರೇಶ್ವರನಾದ, ಶೂರನಾದ ಶಲ್ಯನು ಕರ್ಣನೊಡನೆ ಹೇಳಿದನು:

"ಕರ್ಣ! ಬಹಳ ಕಾಲದಿಂದಲೂ ಸಂಚಿತವಾಗಿರುವ ಕ್ರೋಧವನ್ನು ನಿನ್ನ ಮೇಲೆ ವಿಸರ್ಜಿಸಲು ನಿಶ್ಚಯಿಸಿರುವ, ಸಂಕ್ರುದ್ಧನಾದ, ಮಹಾಬಾಹುವಾದ ಭೀಮಸೇನನನ್ನು ನೋಡು. ಹಿಂದೆ ಅಭಿಮನ್ಯುವು ಹತನಾದ

ಸಂದರ್ಭದಲ್ಲಿಯೇ ಆಗಲೀ, ತನ್ನ ಮಗನಾದ ಘಟೋತ್ಕಚನು ಹತನಾದ ಸಂದರ್ಭದಲ್ಲಿಯೇ ಆಗಲೀ ಇವನಲ್ಲಿ ನಾನು ಈಗ ಕಾಣುತ್ತಿರುವ ಘೋರರೂಪವನ್ನು ಕಂಡಿರಲೇ ಇಲ್ಲ.

ಇವನಿಂದು ಪ್ರಳಯಕಾಲದ ಸಂವರ್ತಕಾಗ್ನಿಯ ರೂಪವನ್ನೇ ತಳೆದಿದ್ದಾನೆ. ಆದುದರಿಂದ ಕ್ರುದ್ಧನಾಗಿರುವ ಇವನು, ಮೂರು ಲೋಕಗಳೂ ಒಟ್ಟಾಗಿಯೇ ಬಂದರೂ ತಡೆದು ನಿಲ್ಲಿಸಲು ಸಮರ್ಥನಾಗಿದ್ದಾನೆ.”

ಮಹಾರಾಜ! ಮದ್ರಾಧಿಪತಿಯು ಕರ್ಣನಿಗೆ ಹೀಗೆ ಹೇಳುತ್ತಿರಲಾಗಿ ಕ್ರೋಧದಿಂದ ಪ್ರಜ್ವಲಿಸುತ್ತಿದ್ದ ಭೀಮಸೇನನು ಕರ್ಣನ ಬಳಿಗೆ ಧಾವಿಸಿದನು. ಯುದ್ಧಾಭಿನಂದಿಯಾದ ರಾಧೇಯನು, ಭೀಮನು ತನ್ನ ಬಳಿಗೆ ಬಂದುದನ್ನು ನೋಡಿ ನಗುತ್ತಿರುವನಂತೆ ತೋರ್ಪಡಿಸಿಕೊಳ್ಳುತ್ತಾ ಶಲ್ಯನನ್ನು ಕುರಿತು ಹೇಳಿದನು:

“ಮದ್ರೇಶ್ವರ! ಭೀಮಸೇನನ ವಿಷಯವಾಗಿ ನೀನು ನನ್ನೊಡನೆ ಹೇಳಿದ ಮಾತು ಸರ್ವಥಾ ಸತ್ಯವೇ ಆಗಿದೆ. ಇದರಲ್ಲಿ ಸಂಶಯವೇ ಇಲ್ಲ. ಈ ಭೀಮನು ಶೂರ; ವೀರ; ಕೋಪಿಷ್ಠ. ಶರೀರದ ಮತ್ತು ಪ್ರಾಣಗಳ ಹಂಗನ್ನೂ ತೊರೆದುಬಿಟ್ಟಿರುವವನು. ವಿರಾಟನಗರದಲ್ಲಿ ಅಜ್ಞಾತವಾಸದಲ್ಲಿದ್ದಾಗ ದ್ರೌಪದಿಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ಈ ಭೀಮಸೇನನು ರಹಸ್ಯದಲ್ಲಿ ಕೇವಲ ಬಾಹುಗಳ ಆಶ್ರಯದಿಂದಲೇ ಕೀಚಕನನ್ನು ಅವನ ಅನುಯಾಯಿಗಳ ಸಹಿತವಾಗಿ ಸಂಹರಿಸಿದನು. ಆ ಭೀಮನೀಗ ಕ್ರೋಧ ಮೂರ್ಛಿತನಾಗಿ ಕವಚವನ್ನು ಧರಿಸಿ ಯುದ್ಧಮಾಡಲು ರಣರಂಗದ ಅಗ್ರ ಭಾಗಕ್ಕೆ ಬಂದಿರುತ್ತಾನೆ. ಆದರೆ ಕೈಯಲ್ಲಿ ದಂಡವನ್ನೆತ್ತಿ ನಿಂತಿರುವ ಮೃತ್ಯು ವಿನೊಡನೆ ಇವನು ಯುದ್ಧಮಾಡುವನೇ? ಶಲ್ಯ! ಬಹಳ ಕಾಲದಿಂದ ಈ ಒಂದು ಆಸೆಯು ನನ್ನ ಮನಸ್ಸಿನಲ್ಲಿದ್ದಿತು. ಯುದ್ಧದಲ್ಲಿ ನಾನಾದರೂ ಅರ್ಜುನ ನನ್ನು ಸಂಹರಿಸಬೇಕು ಅಥವಾ ಅರ್ಜುನನಾದರೂ ನನ್ನನ್ನು ಸಂಹರಿಸಬೇಕು. ಇದೇ ಬಹಳ ಕಾಲದಿಂದಲೂ ಇರುವ ನನ್ನ ಮನಸ್ಸಿನ ಬಯಕೆಯಾಗಿದೆ. ಬಹಳ ದಿವಸಗಳನಂತರ ಭೀಮನೊಡನೆ ನನ್ನ ಸಮಾಗಮವಾಗುತ್ತಿರುವುದ

ರಿಂದ ಆ ನನ್ನ ಮನಸ್ಸಿನ ಅಭಿಲಾಷೆಯು ಈಗಲಾದರೂ ಈಡೇರ ಬಹುದೆಂದು ಭಾವಿಸಿದ್ದೇನೆ. ಹೇಗೆಂದರೆ: ಭೀಮನನ್ನು ನಾನು ಸಂಹರಿಸಿದರೆ ಅಥವಾ ಅವನನ್ನು ನಾನು ರಥಹೀನನನ್ನಾಗಿ ಮಾಡಿಬಿಟ್ಟರೆ ಪಾರ್ಥನು ನನ್ನೊಡನೆ ಯುದ್ಧಮಾಡಲು ಬಂದೇ ಬರುತ್ತಾನೆ. ಅದರಿಂದ ನನಗೆ ಒಳ್ಳೆಯದೇ ಆಗುತ್ತದೆ. ಅಂತಹ ಸುಸಂದರ್ಭವು ಒದಗಿದೆಯೆಂದು ನೀನೂ ಭಾವಿಸುವೆಯಲ್ಲವೇ? ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನೆಂಬುದನ್ನು ಶೀಘ್ರವಾಗಿ ಹೇಳು."

ಮಹಾಶಕ್ತಿಶಾಲಿಯಾದ ರಾಧೇಯನ ಮಾತನ್ನು ಕೇಳಿ ಶಲ್ಯನು ಸೂತಪುತ್ರನನ್ನು ಕುರಿತು ತತ್ಕಾಲೋಚಿತವಾದ ಮಾತನ್ನೇ ಹೇಳಿದನು:

"ಮಹಾಬಾಹುವೇ! ಮಹಾಬಲನಾದ ಭೀಮಸೇನನನ್ನು ಮೊದಲು ಎದುರಿಸು. ಭೀಮಸೇನನನ್ನು ಪರಾಜಯಗೊಳಿಸಿದನಂತರ ಅರ್ಜುನನು ನಿನ್ನನ್ನೆದುರಿಸಲು ಬಂದೇ ಬರುತ್ತಾನೆ. ಬಹಳ ಹಿಂದಿನಿಂದ ಹೃದ್ಗತವಾಗಿದ್ದ ನಿನ್ನ ಅಭೀಷ್ಟವಾದ ಮನೋರಥವು ನಿಶ್ಚಯವಾಗಿಯೂ ಸಫಲತೆಯನ್ನು ಹೊಂದುತ್ತದೆ. ನಾನು ಈ ವಿಷಯವನ್ನು ಸತ್ಯವಾಗಿ ನಿನ್ನೊಡನೆ ಹೇಳುತ್ತಿದ್ದೇನೆ."

ಮಹಾರಾಜ! ಶಲ್ಯನು ಹೀಗೆ ಹೇಳಿದನಂತರ ಪುನಃ ಕರ್ಣನು ಶಲ್ಯನೊಡನೆ ಹೇಳಿದನು:

"ನಾನಾದರೂ ಯುದ್ಧದಲ್ಲಿ ಅರ್ಜುನನನ್ನು ಸಂಹರಿಸುತ್ತೇನೆ. ಅರ್ಜುನನಾದರೂ ನನ್ನನ್ನು ಯುದ್ಧದಲ್ಲಿ ಸಂಹರಿಸುತ್ತಾನೆ. ಈ ಒಂದು ಉದ್ದೇಶದಿಂದಲೇ ಯುದ್ಧದ ಮೇಲೆ ಮನಸ್ಸನ್ನು ಕೇಂದ್ರೀಕರಿಸಿ ವೃಕೋದರನಿರುವಲ್ಲಿಗೆ ರಥವನ್ನು ನಡೆಸು."

ಮಹಾರಾಜ! ಅನಂತರ ಶಲ್ಯನು ರಥದ ಮೂಲಕವಾಗಿ, ಮಹಾಧನುಷ್ಮಂತನಾದ ಭೀಮಸೇನನು ನಿನ್ನ ಸೈನ್ಯವನ್ನು ಧ್ವಂಸಮಾಡಿ ಪಲಾಯನ ಮಾಡಿಸುತ್ತಿದ್ದ ಸ್ಥಳಕ್ಕೆ ಹೋದನು. ಕರ್ಣ-ಭೀಮರ ನಡುವೆ ಸಂಘರ್ಷವಾಗಲಿದ್ದಾಗ ರಣವಾದ್ಯಗಳ ಮತ್ತು ಭೇರೀನಾದಗಳ ಮಹಾಧ್ವನಿಯುಂಟಾಯಿತು. ಸಂಕ್ರುದ್ಧನಾದ, ಬಲಿಷ್ಠನಾದ ಭೀಮಸೇನನು

ದುರಾಸದವಾದ ಕರ್ಣನ ಸೈನ್ಯವನ್ನು ಹೊಳೆಯುತ್ತಿರುವ ಮತ್ತು ತೀಕ್ಷ್ಣವಾಗಿದ್ದ ನಾರಾಚಗಳಿಂದ ದಿಕ್ಕಾಪಾಲಾಗಿ ಓಡಿಸುತ್ತಿದ್ದನು. ಮಹಾರಾಜ! ಕರ್ಣ-ಭೀಮರ ಆ ಮಹಾಸಮರದಲ್ಲಿ ಭಯಂಕರವಾದ, ಘೋರರೂಪವಾದ, ರೌದ್ರವಾದ ಸಂಹಾರಕಾರ್ಯವು ನಡೆಯಿತು. ಅನಂತರ ಸ್ವಲ್ಪ ಹೊತ್ತಿನಲ್ಲಿಯೇ ಭೀಮಸೇನನು ಕರ್ಣನ ಮೇಲೆ ಎರಗಿದನು. ಭೀಮನು ತನ್ನ ಮೇಲೆ ಬೀಳಲು ಬರುತ್ತಿರುವುದನ್ನು ಧರ್ಮಾತ್ಮನಾದ ವೈಕರ್ತನಕರ್ಣನು ನೋಡಿ ಪರಮಕ್ರುದ್ಧನಾಗಿ ನಾರಾಚದಿಂದ ಭೀಮಸೇನನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಅಮೇಯಾತ್ಮನಾದ ಕರ್ಣನು ಪುನಃ ಬಾಣವರ್ಷದಿಂದ ಭೀಮಸೇನನನ್ನು ಮುಚ್ಚಿದನು. ಈ ರೀತಿಯಲ್ಲಿ ಸೂತನ ಮಗನಾದ ಕರ್ಣನಿಂದ ಪೀಡಿತನಾದ ಭೀಮಸೇನನು ಮರುಕ್ಷಣದಲ್ಲಿಯೇ ಕರ್ಣನನ್ನು ಬಾಣಗಳಿಂದ ಮುಚ್ಚಿದನು. ಪುನಃ ಅವನನ್ನು ನಿಶಿತವಾದ, ಬಗ್ಗಿದ ಗಿಣ್ಣುಗಳಿಂದ ಕೂಡಿದ್ದ ಒಂಬತ್ತು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಕರ್ಣನು ನಿಶಿತವಾದ ಬಾಣಗಳಿಂದ ಭೀಮಸೇನನ ಧನುಸ್ಸನ್ನು ಎರಡಾಗಿ ಕತ್ತರಿಸಿದನು. ಅನಂತರ ಧನುಸ್ಸಿನಿಂದ ವಿಹೀನನಾಗಿದ್ದ ಭೀಮಸೇನನನ್ನು, ಸಕಲವಿಧವಾದ ಆವರಣಗಳನ್ನೂ ಭೇದಿಸಲು ಸಮರ್ಥವಾದ ಸುತೀಕ್ಷ್ಣವಾದ ನಾರಾಚದಿಂದ ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಮರ್ಮಜ್ಞನಾದ ವೃಕೋದರನು ಮರುಕ್ಷಣದಲ್ಲಿಯೇ ಮತ್ತೊಂದು ಧನುಸ್ಸನ್ನೆತ್ತಿಕೊಂಡು ನಿಶಿತವಾದ ಬಾಣಗಳಿಂದ ಕರ್ಣನ ಮರ್ಮಸ್ಥಳಗಳಲ್ಲಿ ಪ್ರಹರಿಸುತ್ತಾ ಅತ್ಯಂತ ಹರ್ಷಿತನಾಗಿ ದ್ಯಾವಾಪೃಥಿವಿಗಳನ್ನೂ ನಡುಗಿಸುತ್ತಿರುವನೋ ಎಂಬಂತೆ ಬಹಳ ಗಟ್ಟಿಯಾಗಿ ಗರ್ಜನೆಮಾಡಿದನು. ಮದೋದಕವನ್ನು ಸುರಿಸುತ್ತಿರುವ, ದೃಪ್ತವಾದ ಅರಣ್ಯದ ಆನೆಯನ್ನು ಪಂಜುಗಳಿಂದ ಪ್ರಹರಿಸುವಂತೆ–ಕರ್ಣನು ಇಪ್ಪತ್ತೈದು ಬಾಣಗಳಿಂದ ಭೀಮಸೇನನನ್ನು ಪ್ರಹರಿಸಿದನು. ಕರ್ಣನ ಆ ಬಾಣಗಳ ಪ್ರಹಾರದಿಂದ ಕ್ಷತ-ವಿಕ್ಷತವಾದ ಶರೀರದಿಂದ ಕೂಡಿದ ಪಾಂಡವನು ಕ್ರೋಧಮೂರ್ಛಿತನಾದನು. ಕೋಪದಿಂದಲೂ ಅಸಹನೆಯಿಂದಲೂ ಅವನ ಕಣ್ಣುಗಳು ಕೆಂಪಾದುವು. ಭೀಮಸೇನನು ಸೂತಪುತ್ರನನ್ನು ವಧಿಸುವ ಇಚ್ಛೆಯಿಂದ ಮಹಾವೇಗಯುಕ್ತವಾದ, ಭಾರಸಾಧನ ಸಮರ್ಥವಾದ, ಪರ್ವತಗಳನ್ನೂ ಸಹ ಭೇದಿಸಬಲ್ಲ ಬಾಣವೊಂದನ್ನು

ಧನುಸ್ಸಿನಲ್ಲಿ ಅನುಸಂಧಾನಮಾಡಿದನು. ಮಹಾಧನುಷ್ಮಂತನಾದ, ಕ್ರುದ್ಧ ನಾಗಿದ್ದ, ವಾಯುವಿನ ಮಗನಾದ ಭೀಮಸೇನನು ಅತಿಬಲಪೂರ್ವಕವಾಗಿ ಧನುಸ್ಸನ್ನು ಆಕರ್ಣಪರ್ಯಂತವಾಗಿ ಸೆಳೆದು ಕರ್ಣನನ್ನು ಸಂಹರಿಸುವ ಇಚ್ಛೆಯಿಂದ ಅವನ ಮೇಲೆ ಬಿಟ್ಟುಬಿಟ್ಟನು. ಬಲಿಷ್ಠನಾದ ಭೀಮನಿಂದ ಬಿಡಲ್ಪಟ್ಟ, ಸಿಡಿಲಿನ ಶಬ್ದಕ್ಕೆ ಸಮಾನವಾದ, ಘೋರಶಬ್ದದಿಂದ ಯುಕ್ತವಾಗಿದ್ದ ಆ ಬಾಣವು–ವಜ್ರಾಯುಧದ ವೇಗವು ಪರ್ವತವನ್ನು ಸೀಳಿಬಿಡುವಂತೆ– ಕರ್ಣನನ್ನು ಸೀಳಿಬಿಟ್ಟಿತು. ಕುರುಶ್ರೇಷ್ಠನೇ! ಹೀಗೆ ಭೀಮನಿಂದ ಪ್ರಹೃತನಾದ, ಸೇನಾಪತಿಯಾದ ಕರ್ಣನು ಸಂಜ್ಞಾಹೀನನಾಗಿ ರಥದ ಪೀಠದ ಹಿಂಭಾಗದಲ್ಲಿ ಕುಸಿದುಬಿದ್ದನು. ಪ್ರಜ್ಞೆತಪ್ಪಿ ಪೀಠದ ಹಿಂಭಾಗದಲ್ಲಿ ಬಿದ್ದ ಆಹವಶೋಭಿ ಯಾದ ಕರ್ಣನನ್ನು ನೋಡಿ ಶಲ್ಯನು ರಥದ ಮೂಲಕವಾಗಿ ಅವನನ್ನು ರಣಾಂಗಣದಿಂದ ಬಹಳ ದೂರಕ್ಕೆ ಒಯ್ದುಬಿಟ್ಟನು. ಹೀಗೆ ಕರ್ಣನು ಪರಾಜಿತನಾಗಲಾಗಿ ಭೀಮಸೇನನು ದುರ್ಯೋಧನನ ಮಹಾಸೈನ್ಯವನ್ನು– ಹಿಂದೆ ಇಂದ್ರನು ದಾನವರ ಸೈನ್ಯವನ್ನು ಧ್ವಂಸಮಾಡಿ ಓಡಿಸಿದಂತೆ– ಓಡಿಸಿಬಿಟ್ಟನು.”

೫೦ನೆಯ ಅಧ್ಯಾಯವು ಮುಗಿಯಿತು.

೫೧ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಭೀಮಸೇನನಿಂದ ಧೃತರಾಷ್ಟ್ರನ ಆರು ಮಕ್ಕಳ ಸಂಹಾರ: ಭೀಮ–ಕರ್ಣರ ಯುದ್ಧ: ಭೀಮನು ಗಜಾಶ್ವ–ರಥಸೈನ್ಯವನ್ನು ಸಂಹರಿಸಿದುದು: ಎರಡೂ ಪಕ್ಷಗಳ ಸೈನ್ಯಗಳ ನಡುವೆ ಘೋರವಾದ ಯುದ್ಧ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

“ಸಂಜಯ! ಭೀಮಸೇನನು ಮಹಾಬಾಹುವಾದ ಕರ್ಣನನ್ನು ಪೀಠದಿಂದ ಕುಸಿದು ಬೀಳುವಂತೆ ಮಾಡಿ ಅತ್ಯಂತದುಷ್ಕರವಾದ ಸಾಹಸ ಕಾರ್ಯವನ್ನೇ ಮಾಡಿದನು. ‘ಕರ್ಣನೊಬ್ಬನೇ ಪಾಂಡವರನ್ನು ಸೃಂಜಯ ರೊಡನೆ ಸಂಹರಿಸುತ್ತಾನೆ’–ಎಂದು ದುರ್ಯೋಧನನು ನನ್ನೊಡನೆ ಪದೇ ಪದೇ ಹೇಳುತ್ತಲೇ ಇದ್ದನು. ಯುದ್ಧದಲ್ಲಿ ಕರ್ಣನು ಭೀಮಸೇನನಿಂದ

ಪರಾಜಿತನಾದುದನ್ನು ಕಂಡು ನನ್ನ ಮಗನಾದ ದುರ್ಯೋಧನನು ಮುಂದೇನು ಮಾಡಿದನು?”

ಮಹಾರಾಜ! ಸೂತನ ಮಗನಾದ ಕರ್ಣನು ಯುದ್ಧದಿಂದ ಹಿಮ್ಮೆಟ್ಟಿದುದನ್ನು ಕಂಡು ನಿನ್ನ ಮಗನು ತನ್ನ ಅನುಜರೊಡನೆ ಹೇಳಿದನು:

“ಸಹೋದರರರೇ! ನಿಮಗೆ ಮಂಗಳವಾಗಲಿ. ಭೀಮಸೇನನ ಭಯವೆಂಬ ಅಗಾಧವಾದ ವ್ಯಸನಸಮುದ್ರದಲ್ಲಿ ಮುಳುಗಿಹೋಗುತ್ತಿರುವ ಕರ್ಣನನ್ನು ರಕ್ಷಿಸಿರಿ. ಬೇಗನೆ ಹೊರಡಿರಿ.”

ಮಹಾರಾಜ! ದುರ್ಯೋಧನರಾಜನಿಂದ ನಿರ್ದೇಶಿತ (ಆಜ್ಞಪ್ತ) ರಾದ, ಕ್ರುದ್ಧರಾಗಿದ್ದ ನಿನ್ನ ಮಕ್ಕಳು ಭೀಮಸೇನನನ್ನು ಸಂಹರಿಸುವ ಸಲುವಾಗಿ ಪತಂಗದ ಹುಳುಗಳು ಬೆಂಕಿಯ ಬಳಿಗೆ ಹೋಗುವಂತೆ–ಭೀಮಸೇನನ ಬಳಿಗೆ ಯುದ್ಧಮಾಡಲು ಹೋದರು. ವೀರ್ಯವಂತರಾದ, ಮಹಾಬಲರಾದ ಶ್ರುತರ್ವಾ, ದುರ್ಧರ, ಕ್ರಾಥ (ಕ್ರಥನ), ವಿವಿತ್ಸು, ವಿಕಟ (ವಿಕಟಾನನ), ಸಮ, ನಿಷಂಗೀ, ಕವಚೀ, ಪಾಶೀ, ನಂದ, ಉಪನಂದ, ದುಷ್ಪ್ರಧರ್ಷ, ಸುಬಾಹು, ವಾತವೇಗ, ಸುವರ್ಚಸ, ಧನುರ್ಗ್ರಾಹ, ದುರ್ಮದ, ಜಲಸಂಧ, ಶಲ ಮತ್ತು ಸಹ–ಇವರೆಲ್ಲರೂ ರಥಗಳಿಂದ ಪರಿವೃತರಾಗಿ ಭೀಮಸೇನನನ್ನು ಸಂಧಿಸಿ ಅವನನ್ನು ನಾಲ್ಕು ಕಡೆಗಳಿಂದಲೂ ಮುತ್ತಿದರು. ನಿನ್ನ ಮಕ್ಕಳು ಎಲ್ಲಕಡೆಗಳಿಂದಲೂ ನಾನಾವಿಧವಾದ ಬಾಣಗಳನ್ನೂ ಭೀಮಸೇನನ ಮೇಲೆ ಸುರಿಸಿದರು. ದುರ್ಯೋಧನನ ಅನುಜರಿಂದ ಪೀಡಿತನಾದ ಮಹಾಬಲನಾದ ಭೀಮಸೇನನು ತನ್ನ ಮೇಲೆ ಬೀಳಲು ಬರುತ್ತಿದ್ದ ನಿನ್ನ ಮಕ್ಕಳ ಬೆಂಬಲಿಗ ರಾಗಿದ್ದ, ಐವತ್ತು ರಥಗಳಲ್ಲಿ ಉಪಸ್ಥಿತರಾಗಿದ್ದ ಐವತ್ತು ರಥಿಗಳನ್ನೂ ಕ್ಷಣಮಾತ್ರದಲ್ಲಿ ಧ್ವಂಸಮಾಡಿದನು. ಅನಂತರ ಕ್ರುದ್ಧನಾದ ಭೀಮಸೇನನು ಒಂದು ಭಲ್ಲದಿಂದ ವಿವಿತ್ಸುವಿನ ಶಿರಸ್ಸನ್ನು ಕತ್ತರಿಸಿದನು. ಕುಂಡಲಗಳಿಂದಲೂ ಶಿರಸ್ತ್ರಾಣಗಳಿಂದಲೂ ಕೂಡಿದ್ದ, ಪೂರ್ಣಚಂದ್ರಸದೃಶವಾಗಿದ್ದ ವಿವಿತ್ಸುವಿನ ಶಿರಸ್ಸು ಭೂಮಿಯಮೇಲೆ ಬಿದ್ದಿತು. ಶೂರನಾದ ವಿವಿತ್ಸುವು ಹತನಾದುದನ್ನು ಕಂಡು ಅವನ ಸಹೋದರರು ಎಲ್ಲ ಕಡೆಗಳಿಂದಲೂ ಭೀಮಪರಾಕ್ರಮನಾದ

ಭೀಮಸೇನನನ್ನು ಆಕ್ರಮಿಸಿದರು. ಕೂಡಲೇ ಘೋರಪರಾಕ್ರಮನಾದ ಭೀಮಸೇನನು ಎರಡು ಭಲ್ಲಗಳಿಂದ ನಿನ್ನ ಮತ್ತೆರಡು ಮಕ್ಕಳ ಪ್ರಾಣಗಳನ್ನೂ ಅಪಹರಿಸಿದನು. ಚಂಡವಾಯುವಿನ ರಭಸಕ್ಕೆ ಸಿಕ್ಕಿ ಮುರಿದು ಬಿದ್ದ ಎರಡು ವೃಕ್ಷಗಳಂತೆ–ದೇವಪುತ್ರೋಪಮರಾಗಿದ್ದ ವಿಕಟ ಮತ್ತು ಸಮರೆಂಬುವರು ನೆಲದ ಮೇಲೆ ಬಿದ್ದರು. ಅನಂತರ ಭೀಮಸೇನನು ಅತ್ಯಂತತ್ವರಾಯುಕ್ತನಾಗಿ ಸುತೀಕ್ಷ್ಣವಾದ ನಾರಾಚದಿಂದ ಕ್ರಾಥನನ್ನೂ ಯಮಾಲಯಕ್ಕೆ ಕಳುಹಿಸಿ ಕೊಟ್ಟನು. ಭೀಮನಿಂದ ಹತನಾಗಿ ಅವನೂ ನೆಲದ ಮೇಲೆ ಬಿದ್ದನು.



ಜನೇಶ್ವರ! ಹೀಗೆ ಧನುಷ್ಮಂತರಾದ ನಿನ್ನ ಮಕ್ಕಳು ಭೀಮಸೇನನಿಂದ ಹತರಾಗುತ್ತಿರಲಾಗಿ ನಿನ್ನ ಸೈನ್ಯಸಮೂಹದಲ್ಲಿ ಅತಿತೀವ್ರವಾದ ಹಾಹಾಕಾರ

ವೆದ್ದಿತು. ಹೀಗೆ ಕೌರವರ ಸೈನ್ಯವು ಭಯದಿಂದ ಕ್ಷೋಭೆಗೊಳ್ಳುತ್ತಿರಲಾಗಿ ಮಹಾಬಲನಾದ ಭೀಮಸೇನನು ನಂದೋಪನಂದರನ್ನು ಯುದ್ಧದಲ್ಲಿ ಯಮಾಲಯಕ್ಕೆ ಕಳುಹಿಸಿದನು. ಅನಂತರ ಕಾಲ, ಅಂತಕ ಮತ್ತು ಯಮರಿಗೆ ಸಮಾನನಾಗಿದ್ದ ಭೀಮಸೇನನನ್ನು ನೋಡಿ ನಿನ್ನ ಮಕ್ಕಳು ಬಹಳ ಭಯಗೊಂಡವರಾಗಿ ವ್ಯಾಕುಲಗೊಂಡು ರಣಾಂಗಣವನ್ನು ಬಿಟ್ಟು ಓಡಿಹೋದರು. ತನ್ನನ್ನು ರಕ್ಷಿಸಲು ಬಂದ ನಿನ್ನ ಮಕ್ಕಳು ಹತರಾದುದನ್ನು ಕಂಡು ಕರ್ಣನು ಬಹಳವಾಗಿ ದುಃಖಿಸಿದನು. ಹಂಸಪಕ್ಷಿಯ ಬಣ್ಣದಂತೆ ಬಣ್ಣವಿದ್ದ ಕುದುರೆಗಳನ್ನು ಪುನಃ ಭೀಮಸೇನನಿದ್ದೆಡೆಗೆ ಓಡಿಸುವಂತೆ ಶಲ್ಯನನ್ನು ಪ್ರಚೋದಿಸಿದನು. ಮದ್ರರಾಜನಿಂದ ಪ್ರಚೋದಿತವಾದ ಆ ಕುದುರೆಗಳು ಬಹಳ ಬೇಗ ಭೀಮಸೇನನ ರಥದ ಸಮೀಪಕ್ಕೆ ಹೋಗಿ ಸಜ್ಜಾಗಿ ನಿಂತುವು.

ಮಹಾರಾಜ! ರಣರಂಗದಲ್ಲಿ ಕರ್ಣನಿಗೂ ಮತ್ತು ಭೀಮಸೇನನಿಗೂ ನಡೆಯುತ್ತಿದ್ದ ಆ ಸಂಘರ್ಷವು ಘೋರವೂ, ರೌದ್ರವೂ ಮತ್ತು ಅತ್ಯಂತ ಭಯಂಕರವೂ ಆಗಿದ್ದಿತು. ಆ ಇಬ್ಬರು ಮಹಾರಥರೂ ಪುನಃ ಸಂಘರ್ಷಿಸಿದುದನ್ನು ನೋಡಿ–ಈ ಯುದ್ಧವು ಹೇಗೆ ಪರ್ಯವಸಾನ ವಾದೀತೆಂದು-ನನ್ನ ಬುದ್ಧಿಯು ಚಿಂತಿಸತೊಡಗಿತು. ಅನಂತರ ರಣಶ್ಲಾಘಿ ಯಾದ ಭೀಮಸೇನನು ನಿನ್ನ ಮಕ್ಕಳೆಲ್ಲರೂ ನೋಡುತ್ತಿದ್ದಂತೆಯೇ ಕರ್ಣನನ್ನು ಬಾಣಗಳಿಂದ ಮುಚ್ಚಿದನು. ಅದರಿಂದ ಅತ್ಯಂತಕ್ರುದ್ಧನಾದ, ಶ್ರೇಷ್ಠವಾದ ಅಸ್ತ್ರಗಳನ್ನು ತಿಳಿದವನಾಗಿದ್ದ ಕರ್ಣನು–ಲೋಹಮಯವಾದ, ಬಗ್ಗಿದ ಗಿಣ್ಣುಗಳಿದ್ದ ಒಂಬತ್ತು ಭಲ್ಲಗಳಿಂದ ಭೀಮನನ್ನು ಪ್ರಹರಿಸಿದನು. ನಿಶಿತವಾದ ಭಲ್ಲಗಳಿಂದ ಪ್ರಹೃತನಾದ, ಮಹಾಬಾಹುವಾದ, ಭೀಮಪರಾಕ್ರಮನಾದ ಭೀಮಸೇನನು ಕರ್ಣಪರ್ಯಂತವಾಗಿ ಸೆಳೆದು ಬಿಟ್ಟ ಏಳು ಬಾಣಗಳಿಂದ ಕರ್ಣನನ್ನು ಪ್ರಹರಿಸಿದನು. ಬಳಿಕ ಕರ್ಣನು ವಿಷಸರ್ಪದಂತೆಯೇ ಸುದೀರ್ಘವಾದ ನಿಟ್ಟುಸಿರುಬಿಡುತ್ತಾ ಬಾಣಗಳ ವೃಷ್ಟಿಯಿಂದ ಭೀಮಸೇನನನ್ನು ಮುಚ್ಚಿದನು. ಅದಕ್ಕೆ ಪ್ರತಿಯಾಗಿ ಮಹಾಬಲನಾದ ಭೀಮಸೇನನೂ ಮಹಾರಥನಾದ ಕರ್ಣನನ್ನು ಬಾಣಗಳ ಸಮೂಹಗಳಿಂದ ಮುಚ್ಚಿ ನಿನ್ನ ಮಕ್ಕಳು ನೋಡುತ್ತಿದ್ದಂತೆಯೇ ವಿಕಟವಾಗಿ ಗರ್ಜಿಸಿದನು. ಅದರಿಂದ ಅತಿಕುಪಿತನಾದ ಕರ್ಣನು ಧನುಸ್ಸನ್ನು ಬಿಗಿಯಾಗಿ ಹಿಡಿದು,

ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ರಣಹದ್ದಿನ ರೆಕ್ಕೆಗಳಿಂದ ಯುಕ್ತವಾಗಿದ್ದ ಹತ್ತು ಬಾಣಗಳಿಂದ ಭೀಮಸೇನನನ್ನು ಪ್ರಹರಿಸಿದನು. ಬಳಿಕ ಆತಿಬಲಿಷ್ಠನಾದ, ಮಹಾಬಾಹುವಾದ ಕರ್ಣನ ನಿಧನವನ್ನು ಆಶಿಸುತ್ತಿದ್ದ ಭೀಮಸೇನನು ಗರ್ಜನೆಮಾಡುತ್ತಾ ಸುವರ್ಣದ ಪಟ್ಟಿಯಿಂದ ಸಮಲಂಕೃತ ವಾಗಿದ್ದ, ಮಹಾಘೋರವಾಗಿದ್ದ, ಯಮದಂಡದ ಪ್ರತಿಕೃತಿಯಂತೆಯೇ ಇದ್ದ ಪರಿಘಾಯುಧವನ್ನು ಕರ್ಣನ ಮೇಲೆಸೆದನು. ತನ್ನ ಮೇಲೆ ಬೀಳುವುದರಲ್ಲಿದ್ದ, ಸಿಡಿಲಿಗೆ ಸಮಾನವಾದ ಶಬ್ದದೊಡನೆ ಬರುತ್ತಿದ್ದ, ಭೀಮಪ್ರೇಷಿತವಾದ ಪರಿಘಾಯುಧವನ್ನು ಕರ್ಣನು ಸರ್ಪಸದೃಶವಾದ ಬಾಣಗಳಿಂದ ಅನೇಕ ತುಂಡುಗಳಾಗಿ ಕತ್ತರಿಸಿದನು. ಅನಂತರ ಭೀಮಸೇನನು ಬಹುದೃಢವಾಗಿದ್ದ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಶತ್ರುಸೈನ್ಯಮರ್ದನನಾದ ಕರ್ಣನನ್ನು ಬಾಣಗಳಿಂದ ಮುಚ್ಚಿದನು. ಪರಸ್ಪರವಾಗಿ ವಧೆಮಾಡಲು ಇಚ್ಛಿಸಿರುವ ಎರಡು ಸಿಂಹಗಳ ನಡುವೆ ಘೋರವಾದ ಕಾಳಗವಾಗುವಂತೆ ಕರ್ಣ-ಭೀಮರ ನಡುವೆ ಘೋರವಾದ ಯುದ್ಧವು ಪುನಃ ಪ್ರಾರಂಭವಾಯಿತು.

ಅನಂತರ ಕರ್ಣನು ಕಿವಿಯ ತುದಿಯವರೆಗೂ ಶಿಂಜಿನಿಯನ್ನು ಸೆಳೆದು ಆ ಮೂಲಕವಾಗಿ ಧನುಸ್ಸನ್ನು ಸಂಪೂರ್ಣವಾಗಿ ಬಗ್ಗಿಸಿ ಮೂರು ಬಾಣಗಳಿಂದ ಭೀಮಸೇನನನ್ನು ಪ್ರಹರಿಸಿದನು. ಬಲಿಷ್ಠರಲ್ಲಿ ಶ್ರೇಷ್ಠನಾದ, ಮಹಾಧನುಷ್ಮಂತನಾದ ಭೀಮಸೇನನು ಕರ್ಣಪ್ರೇಷಿತವಾದ ಬಾಣಗಳಿಂದ ಬಹಳವಾಗಿ ಗಾಯಗೊಂಡು, ಕರ್ಣನ ಶರೀರವನ್ನು ಸೀಳಲು ಸಮರ್ಥ ವಾದ ಘೋರವಾದ ಒಂದು ಬಾಣವನ್ನು ಬತ್ತಳಿಕೆಯಿಂದ ಹೊರತೆಗೆದನು. ಭೀಮನಿಂದ ಪ್ರಮುಕ್ತವಾದ ಆ ಬಾಣವು ಸರ್ಪವು ಬಿಲವನ್ನು ಹೊಗು ವಂತೆ–ಕರ್ಣನ ಕವಚವನ್ನೂ ಮತ್ತು ಶರೀರವನ್ನೂ ಭೇದಿಸಿಕೊಂಡು ಹೊರಬಂದು ಭೂಮಿಯನ್ನು ಹೊಕ್ಕಿತು. ಪ್ರಬಲವಾದ ಆ ಶರಪ್ರಹಾರ ದಿಂದ ವ್ಯಥಿತನಾದ ಮತ್ತು ವಿಹ್ವಲನಾದ ಕರ್ಣನು ಭೂಕಂಪವಾಗುವ ಸಮಯದಲ್ಲಿ ಪರ್ವತವು ಅಳ್ಳಾಡುವಂತೆ–ರಥದಲ್ಲಿ ತೂರಾಡಿದನು. ಅನಂತರ ಕರ್ಣನು ರೋಷದಿಂದಲೂ ಅಸಹನೆಯಿಂದಲೂ ಕೂಡಿದವ

ನಾಗಿ ಭೀಮಸೇನನನ್ನು ಇಪ್ಪತ್ತೈದು ನಾರಾಚಗಳಿಂದ ಪ್ರಹರಿಸಿದನು. ಪುನಃ ಅನೇಕ ಬಾಣಗಳಿಂದ ಭೀಮಸೇನನನ್ನು ಸತತವಾಗಿ ಗಾಯಗೊಳಿಸುತ್ತಾ ಒಂದು ಬಾಣದಿಂದ ಭೀಮಸೇನನ ಧ್ವಜವನ್ನು ಕತ್ತರಿಸಿದನು. ಮರುಕ್ಷಣದಲ್ಲಿಯೇ ಕರ್ಣನು ಭಲ್ಲದಿಂದ ಭೀಮಸೇನನ ಸಾರಥಿಯನ್ನು ಮೃತ್ಯುಪರವಶನನ್ನಾಗಿ ಮಾಡಿದನು. ಕರ್ಣನು ಮತ್ತೊಂದು ಬಾಣದಿಂದ ಬಹಳ ಬೇಗ ಭೀಮಸೇನನ ಧನುಸ್ಸನ್ನು ಕತ್ತರಿಸಿದನು. ಮುಹೂರ್ತ ಮಾತ್ರದಲ್ಲಿ ಹೆಚ್ಚಿನ ತೊಂದರೆಯನ್ನೇ ತೆಗೆದುಕೊಳ್ಳದೇ, ನಗು-ನಗುತ್ತಲೇ ಇರುವನೋ ಎಂಬಂತೆ ಭೀಮಕರ್ಮನಾದ ಭೀಮಸೇನನನ್ನು ರಥಹೀನನನ್ನಾಗಿಯೂ ಮಾಡಿದನು. (ಕುದುರೆಗಳನ್ನೂ ಸಂಹರಿಸಿ ರಥವನ್ನೂ ಧ್ವಂಸಮಾಡಿದನು.)

ಅನಂತರ ವಾಯುವಿನ ಬಲಕ್ಕೆ ಸಮಾನವಾದ ಬಲವನ್ನು ಹೊಂದಿದ್ದ ವಿರಥನಾಗಿದ್ದ ಮಹಾಬಾಹುವಾದ ಭೀಮಸೇನನು ನಗುತ್ತಾ ಗದೆಯನ್ನು ಹಿಡಿದುಕೊಂಡು ರಥದಿಂದ ಕೆಳಕ್ಕೆ ಧುಮುಕಿ, ವಾಯುವು ಶರತ್ಕಾಲದ ಮೇಘಗಳನ್ನು ಛಿನ್ನ-ಭಿನ್ನಮಾಡಿಬಿಡುವಂತೆ–ಗದೆಯಿಂದ ನಿನ್ನ ಸೈನ್ಯವನ್ನು ಧ್ವಂಸಮಾಡಲು ಉಪಕ್ರಮಿಸಿದನು. ಶತ್ರುತಾಪಕನಾದ ಭೀಮನು ಪರಮ ಕ್ರುದ್ಧನಾಗಿ ಎದುರಾಳಿಗಳನ್ನು ಪ್ರಹರಿಸುವುದರಲ್ಲಿ ನಿಷ್ಣಾತವಾದ, ಈಷಾ ದಂಡಕ್ಕೆ ಸಮಾನವಾದ ದಂತಗಳನ್ನು ಹೊಂದಿದ್ದ ಏಳು ನೂರು ಆನೆಗಳನ್ನೂ ಬಹಳ ಬೇಗ ಸಂಹರಿಸಿದನು. ಆನೆಗಳ ಮರ್ಮಸ್ಥಾನಗಳನ್ನು ಚೆನ್ನಾಗಿ ತಿಳಿದಿದ್ದ ಬಲಿಷ್ಠನಾದ ಭೀಮಸೇನನು ಆನೆಗಳ ಮರ್ಮಸ್ಥಳಗಳಲ್ಲಿಯೂ, ತುಟಿಗಳಲ್ಲಿಯೂ, ಕಣ್ಣುಗಳಲ್ಲಿಯೂ, ಕುಂಭಸ್ಥಳಗಳಲ್ಲಿಯೂ, ಕಪೋಲಗಳಲ್ಲಿಯೂ ಪ್ರಹರಿಸಿ ಅವುಗಳನ್ನು ಸಂಹರಿಸುತ್ತಿದ್ದನು. ಭೀಮನ ವಿಧ್ವಂಸನಕ್ರಿಯೆಯನ್ನು ನೋಡಿ ಹಲವಾರು ಆನೆಗಳು ಪಲಾಯನಮಾಡಿದುವು. ಆದರೆ ಮಾವಟಿಗರಿಂದ ಪುನಃ ರಣರಂಗಕ್ಕೆ ಹಿಂದಿರುಗಿಸಲ್ಪಟ್ಟು ಮೇಘಗಳು ಸೂರ್ಯನನ್ನು ಆವರಿಸುವಂತೆ–ಭೀಮಸೇನನನ್ನು ಆವರಿಸಿ ನಿಂತುಕೊಂಡುವು. ಆಯುಧಸಹಿತರಾದ ಯೋಧರಿಂದಲೂ ಮತ್ತು ಧ್ವಜಗಳಿಂದಲೂ ಕೂಡಿದ್ದ ಆ ಏಳು ನೂರು ಆನೆಗಳನ್ನೂ–ಇಂದ್ರನು ವಜ್ರಾಯುಧದಿಂದ ಪರ್ವತಗಳನ್ನು ಧ್ವಂಸಮಾಡಿದಂತೆ–ಭೀಮಸೇನನು

ಭೂಮಿಯಲ್ಲಿ ನಿಂತುಕೊಂಡೇ ಗದೆಯಿಂದ ಸಂಹಾರಮಾಡಿದನು. ಬಳಿಕ ಶತ್ರುದಮನನಾದ ಭೀಮಸೇನನು ಮಹಾಬಲಿಷ್ಠನಾಗಿದ್ದ ಶಕುನಿಯ ಐವತ್ತೆರಡು ಆನೆಗಳನ್ನೂ ಧ್ವಂಸಮಾಡಿದನು. ಅದೇ ರೀತಿಯಲ್ಲಿ ಭೀಮಸೇನನು ನಿನ್ನ ಸೈನ್ಯವನ್ನು ಸಂತಾಪಗೊಳಿಸುತ್ತಾ ನೂರಕ್ಕೂ ಹೆಚ್ಚು ರಥಗಳನ್ನೂ, ನೂರಾರು ಪದಾತಿಸೈನಿಕರನ್ನೂ ಸಂಹಾರಮಾಡಿದನು.



ಪ್ರಜ್ವಲಿಸುತ್ತಿದ್ದ ಸೂರ್ಯನಿಂದಲೂ ಮಹಾತ್ಮನಾದ ಭೀಮಸೇನನಿಂದಲೂ ಏಕಕಾಲದಲ್ಲಿ ದಹಿಸಲ್ಪಡುತ್ತಿದ್ದ ನಿನ್ನ ಸೈನ್ಯವು ಬೆಂಕಿಯಲ್ಲಿ ಹಾಕಿದ ಚರ್ಮದಂತೆ ಕುಗ್ಗಿಹೋಯಿತು. ಭೀಮನ ಭಯದಿಂದ ಸಂತಪ್ತರಾದ ನಿನ್ನ ಕಡೆಯ ಸೈನಿಕರು ಭೀಮನನ್ನು ಅಲ್ಲಿಯೇ ಬಿಟ್ಟು ದಿಕ್ಕಾಪಾಲಾಗಿ ಓಡಿಹೋದರು.

ಅನಂತರ ಚರ್ಮದ ಆವರಣದಿಂದ ಯುಕ್ತವಾಗಿದ್ದ, ಗಂಭೀರಶಬ್ದದಿಂದ ಕೂಡಿದ್ದ ರಥಗಳಲ್ಲಿ ಕುಳಿತಿದ್ದ ಐದು ನೂರು ರಥಿಗಳು ಭೀಮಸೇನನನ್ನು ಆಕ್ರಮಿಸಿ ಬಾಣಗಳ ಸಮೂಹಗಳಿಂದ ಅವನನ್ನು ಗಾಯಗೊಳಿಸಿದರು. ಪತಾಕೆ, ಧ್ವಜ ಮತ್ತು ಆಯುಧಗಳಿಂದ ಕೂಡಿದ್ದ ಐದು ನೂರು ವೀರರಥಿಗಳನ್ನೂ ಭೀಮಸೇನನು–ವಿಷ್ಣುವು ಅಸುರರನ್ನು ಧ್ವಂಸ ಮಾಡಿದಂತೆ–ಗದೆಯಿಂದ ಧ್ವಂಸಮಾಡಿದನು. ಅನಂತರ ಶಕುನಿಯಿಂದ ನಿರ್ದೇಶಿತರಾದ, ಶೂರರಿಂದ ಸಮ್ಮಾನಿತರಾದ ಮೂರು ಸಾವಿರ ಅಶ್ವಾ ರೋಹಿಗಳು ಶಕ್ತಿ, ಋಷ್ಟಿ ಮತ್ತು ಪ್ರಾಸಾಯುಧಪಾಣಿಗಳಾಗಿ ಭೀಮಸೇನ ನನ್ನು ಆಕ್ರಮಿಸಿದರು. ಶತ್ರುಹಂತಕನಾದ ಭೀಮಸೇನನು ಅಶ್ವಸೈನಿಕರು ತನ್ನನ್ನು ಆಕ್ರಮಿಸಲು ಬರುತ್ತಿರುವುದನ್ನು ನೋಡಿ ಬಹಳ ಬೇಗ ಮೇಲಕ್ಕೆ ಹಾರಿ, ನಾನಾವಿಧವಾದ ವರಸೆಗಳಲ್ಲಿ ಗದೆಯನ್ನು ತಿರುಗಿಸುತ್ತಾ ಮತ್ತು ವರಸೆಗಳಿಗೆ ಅನುಗುಣವಾಗಿ ಹೆಜ್ಜೆಗಳನ್ನಿಡುತ್ತಾ ಮೂರು ಸಾವಿರ ಅಶ್ವಾರೋಹಿಗಳನ್ನೂ, ಕುದುರೆಗಳನ್ನೂ ಸಂಹರಿಸಿದನು. ಕಲ್ಲುಗಳಿಂದ ಹೊಡೆಯಲ್ಪಟ್ಟ ವೃಕ್ಷಗಳಿಂದ ಟಪ್-ಟಪ್ ಎಂಬ ಶಬ್ದವು ಹೊರಬರುವಂತೆ–ಗದೆಯಿಂದ ಪ್ರಹೃತವಾದ ಕುದುರೆಗಳಿಂದ ಅಂತಹುದೇ ಮಹಾಶಬ್ದವು ಎಲ್ಲ ಕಡೆಗಳಿಂದಲೂ ಕೇಳಿ ಬರುತ್ತಿದ್ದಿತು. ಹೀಗೆ ಕ್ರುದ್ಧನಾದ ಭೀಮಸೇನನು ಶಕುನಿಯ ಮೂರು ಸಾವಿರ ಶ್ರೇಷ್ಠಕುದುರೆಗಳನ್ನೂ ಸಂಹರಿಸಿ ಮತ್ತೊಂದು ರಥದಲ್ಲಿ ಕುಳಿತು ಕರ್ಣನ ಬಳಿಗೆ ಹೋದನು.

ಇತ್ತಲಾಗಿ ಕರ್ಣನೂ ಅರಿಂದಮನಾದ ಧರ್ಮಪುತ್ರನನ್ನು ಬಾಣಗಳಿಂದ ಮುಚ್ಚಿ ಅವನ ಸಾರಥಿಯನ್ನು ಸಂಹರಿಸಿ ಕೆಳಕ್ಕೆ ಕೆಡವಿದನು. ಸಾರಥಿಯಿಂದ ರಹಿತವಾಗಿದ್ದ ಯುಧಿಷ್ಠಿರನ ರಥವು ರಣಾಂಗಣದಲ್ಲಿ ಪಲಾಯಿತವಾಗುತ್ತಿರು ವುದನ್ನು ಕಂಡು ಮಹಾರಥನಾದ ಕರ್ಣನು ಹದ್ದುಗಳ ರೆಕ್ಕೆಗಳನ್ನು ಹೊಂದಿದ್ದ, ನೇರವಾಗಿ ಹೋಗುವ ಬಾಣಗಳನ್ನು ಯುಧಿಷ್ಠಿರನ ಮೇಲೆ ಸುರಿಸುತ್ತಾ ಆ ರಥದ ಹಿಂದೆಯೇ ಹೋಗುತ್ತಿದ್ದನು. ಬಾಣಗಳ ಮಳೆಗರೆಯುತ್ತಾ ಯುಧಿಷ್ಠಿ ರನ ಹಿಂದೆ ಕರ್ಣನು ಹೋಗುತ್ತಿರುವುದನ್ನು ಕಂಡು ಪರಮಕ್ರುದ್ಧನಾದ ಭೀಮಸೇನನು ಭೂಮ್ಯಂತರಿಕ್ಷಗಳನ್ನೂ ಬಾಣಗಳಿಂದ ತುಂಬಿ ಪುನಃ ಬಾಣಗಳ ಸಮೂಹಗಳಿಂದ ಕರ್ಣನನ್ನು ಸಂಪೂರ್ಣವಾಗಿ ಆಚ್ಛಾದಿಸಿದನು.

ಧರ್ಮರಾಜನನ್ನು ಅನುಸರಿಸಿ ಹೋಗುತ್ತಿದ್ದ ಶತ್ರುಕರ್ಶನನಾದ ಕರ್ಣನು ಒಡನೆಯೇ ಹಿಂದಿರುಗಿ ನಿಶಿತವಾದ ಬಾಣಗಳಿಂದ ಭೀಮಸೇನನನ್ನು ಎಲ್ಲ ಕಡೆಗಳಿಂದಲೂ ಮುಚ್ಚಿದನು. ಮಹಾರಾಜ! ಭೀಮಸೇನನ ರಥದ ಪೃಷ್ಠಭಾಗವನ್ನು ರಕ್ಷಿಸುತ್ತಿದ್ದ ಮಹಾತ್ಮನಾದ ಸಾತ್ಯಕಿಯು, ಭೀಮಸೇನನ ರಥದ ಕಡೆಗೆ ತಿರುಗಿದ ಕರ್ಣನನ್ನು ಬಾಣಗಳಿಂದ ಪೀಡಿಸಲು ಉಪ ಕ್ರಮಿಸಿದನು. ಸಾತ್ಯಕಿಯು ಬಾಣಗಳಿಂದ ಕರ್ಣನನ್ನು ಬಹಳವಾಗಿ ಪೀಡಿಸು ತ್ತಿದ್ದರೂ ಕರ್ಣನು ಭೀಮಸೇನನನ್ನೇ ಎದುರಿಸಿ ಯುದ್ಧಮಾಡುತ್ತಿದ್ದನು. ಎಲ್ಲ ಧನುಷ್ಮಂತರಲ್ಲಿಯೂ ಶ್ರೇಷ್ಠರಾದ, ಮನಸ್ವಿಗಳಾದ ಭೀಮ-ಕರ್ಣರಿಬ್ಬರೂ ಒಬ್ಬರು ಮತ್ತೊಬ್ಬರ ಮೇಲೆ ಪ್ರದೀಪ್ತವಾದ ಬಾಣಗಳನ್ನು ಬಿಡುತ್ತಾ ರಣಾಂಗಣದಲ್ಲಿ ಪ್ರಕಾಶಿಸುತ್ತಿದ್ದರು.

ಇಬ್ಬರೂ ಬಿಡುತ್ತಿದ್ದ ಬಾಣಗಳ ಸಮೂಹಗಳು ಆಕಾಶದಲ್ಲಿ ಕ್ರೌಂಚಪಕ್ಷಿಯ ಪೃಷ್ಠಭಾಗದಂತೆ–ಎಣ್ಣೆಗೆಂಪಾಗಿಯೂ ಮತ್ತು ಭಯಂಕರ ವಾಗಿಯೂ ಕಾಣಿಸುತ್ತಿದ್ದುವು. ಆ ಇಬ್ಬರು ಮಹಾವೀರರೂ ಸಾವಿರಾರು ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಿದ್ದುದರಿಂದ ನಮಗಾಗಲೀ ಶತ್ರುಪಕ್ಷದವರಿಗಾಗಲೀ ಸೂರ್ಯನ ಪ್ರಭೆಯೂ ಕಾಣಿಸುತ್ತಿರಲಿಲ್ಲ. ದಿಕ್ಕುಗಳಾಗಲೀ, ಉಪದಿಕ್ಕುಗಳಾಗಲೀ ಕಾಣಿಸುತ್ತಿರಲಿಲ್ಲ. ಮಧ್ಯಾಹ್ನ ಸಮಯದಲ್ಲಿ ತಾಪವನ್ನುಂಟುಮಾಡುತ್ತಿದ್ದ ಸೂರ್ಯನ ಪ್ರಖರವಾದ ಕಿರಣಗಳು ಕರ್ಣ-ಭೀಮರ ಬಾಣಗಳ ಸಮೂಹಗಳಿಂದ ಅಪಹರಿ ಸಲ್ಪಟ್ಟುವು. ಶಕುನಿ, ಕೃತವರ್ಮಾ, ಅಶ್ವತ್ಥಾಮಾ, ಕರ್ಣ ಮತ್ತು ಕೃಪರು ಪಾಂಡವರೊಡನೆ ಯುದ್ಧದಲ್ಲಿ ತೊಡಗಿದ್ದುದನ್ನು ಕಂಡು ಓಡಿಹೋಗಿದ್ದ ಕೌರವಸೈನಿಕರು ಪುನಃ ರಣರಂಗಕ್ಕೆ ಹಿಂದಿರುಗಿದರು. ಹೀಗೆ ಹಿಂದಿರುಗಿ ಶತ್ರುಗಳ ಮೇಲೆ ಬೀಳುತ್ತಿದ್ದ ಸೈನಿಕರ ಶಬ್ದವು ಬಹಳ ತೀವ್ರ ವಾಗಿದ್ದು–ಮಳೆಯಿಂದ ಉಕ್ಕಿಬರುವ ಸಮುದ್ರಗಳ ಭಯಂಕರಶಬ್ದಕ್ಕೆ ಸಮವಾಗಿದ್ದಿತು. ಎರಡೂಪಕ್ಷಗಳ ಆ ಸೈನ್ಯಗಳು ಪರಸ್ಪರವಾಗಿ ನೋಡುತ್ತಾ ಹರ್ಷದಿಂದಲೂ ಉತ್ಸಾಹದಿಂದಲೂ ಕೂಡಿದುವುಗಳಾಗಿ, ಪರಸ್ಪರವಾಗಿ ಒಂದು ಸೈನ್ಯವು ಮತ್ತೊಂದು ಸೈನ್ಯವನ್ನು ಆಕ್ರಮಿಸುತ್ತಾ ಯುದ್ಧದಲ್ಲಿ ತೊಡಗಿದುವು. ಸೂರ್ಯನು ಹಗಲಿನ ಮಧ್ಯಭಾಗವನ್ನು ತಲುಪಿದಾಗ ಎರಡು ಪಕ್ಷಗಳಿಗೂ ಸುಘೋರವಾದ ಯುದ್ಧವು ಪ್ರಾರಂಭವಾಯಿತು. ಆಗ ನಡೆದಂತಹ ಘೋರಯುದ್ಧವು ಹಿಂದೆ ನೋಡಿದುದೂ ಅಲ್ಲ; ಕೇಳಿದುದೂ

ಅಲ್ಲ. ಜಲಪ್ರವಾಹವು ವೇಗವಾಗಿ ಹೋಗಿ ಸಮುದ್ರವನ್ನು ಸೇರುವಂತೆ– ಒಂದು ಸೈನ್ಯಸಮೂಹವು ಮತ್ತೊಂದು ಸೈನ್ಯಸಮೂಹದೊಡನೆ ಸೇರಿ ಮಹಾಯುದ್ಧದಲ್ಲಿ ತೊಡಗಿತು. ಭೋರ್ಗರೆಯುತ್ತಿರುವ ಸಾಗರ ಸಮೂಹ ಗಳ ಘೋರಶಬ್ದದಂತೆ–ಪರಸ್ಪರವಾಗಿ ಒಬ್ಬರು ಮತ್ತೊಬ್ಬರ ಮೇಲೆ ಬಿಡುತ್ತಿದ್ದ ಬಾಣಗಳ ಸಮೂಹಗಳ ಶಬ್ದವು ಸುಘೋರವಾಗಿ ಕೇಳಿಸುತ್ತಿದ್ದಿತು. ಪ್ರತ್ಯೇಕವಾದ ಎರಡು ನದಿಗಳು ಸಂಗಮದಲ್ಲಿ ಸೇರಿ ಒಂದೇ ಆಗಿಬಿಡುವಂತೆ- ವೇಗಯುಕ್ತವಾದ ಕೌರವ-ಪಾಂಡವರ ಆ ಎರಡು ಸೈನ್ಯಗಳೂ ಪರಸ್ಪರವಾಗಿ ಮಿಳಿತವಾದನಂತರ ಒಂದೇ ಮಹಾಸೈನ್ಯಸಮುದಾಯದಂತೆ ಕಾಣುತ್ತಿದ್ದುವು. ಯುದ್ಧದಲ್ಲಿ ಅಪಾರವಾದ ಯಶಸ್ಸನ್ನು ಗಳಿಸಲಿಚ್ಛಿಸಿದ್ದ ಕೌರವ-ಪಾಂಡವ ಯೋಧರಲ್ಲಿ ಘೋರರೂಪವಾದ ಯುದ್ಧವು ಪ್ರಾರಂಭವಾಯಿತು. ಆ ಸಮಯದಲ್ಲಿ ಶೂರವೀರರ ಹೆಸರುಗಳನ್ನೇ ಹೇಳಿಕೊಂಡು ಯುದ್ಧಕ್ಕೆ ಆಹ್ವಾನಿಸುತ್ತಾ ಮತ್ತು ಗರ್ಜಿಸುತ್ತಾ ಇದ್ದ ವೀರಯೋಧರ ಅನೇಕ ವಿಧವಾದ ಮಾತುಗಳು ತಡೆ-ಬಡೆಯೇ ಇಲ್ಲದೇ ಅನವರತವಾಗಿ ಕೇಳುತ್ತಿದ್ದುವು. ಯೋಧನೊಬ್ಬನಿಗೆ ತಂದೆಯ ಸಂಬಂಧದಿಂದ ಅಥವಾ ತಾಯಿಯ ಸಂಬಂಧದಿಂದ ದೋಷವೇನಾದರೂ ಇದ್ದರೆ ಅದನ್ನೇ ವ್ಯಂಗ್ಯವಾಗಿ ಎದುರುಪಕ್ಷದವರು ಕೂಗಿ ಹೇಳುತ್ತಿದ್ದರು. ಯೋಧನೊಬ್ಬನ ಕರ್ಮದಲ್ಲಿ ಅಥವಾ ಶೀಲದಲ್ಲಿ ದೋಷವಿದ್ದರೆ ಅದನ್ನೂ ಗಟ್ಟಿಯಾಗಿ ಸಮಸ್ತರಿಗೂ ಕೇಳಿಸುವಂತೆ ವಿರೋಧಪಕ್ಷದವರು ಹೇಳುತ್ತಿದ್ದರು. ಈ ರೀತಿಯಲ್ಲಿ ಉಭಯಪಕ್ಷಗಳ ಯೋಧರೂ ಪರಸ್ಪರವಾಗಿ ನಿಂದನೆಯ ಮಾತುಗಳನ್ನು ಹೇಳಿಕೊಂಡು ಗರ್ಜನೆಮಾಡುತ್ತಿರುವುದನ್ನು ನೋಡಿ ನಾನು ಇವರ ಜೀವಗಳು ಉಳಿಯಲಾರವೆಂದು ನಿಶ್ಚಯಿಸಿಬಿಟ್ಟೆನು.

ಅತ್ಯಂತಕ್ರುದ್ಧರಾಗಿದ್ದ, ಅಮಿತತೇಜಸ್ವಿಗಳಾದ ಯೋಧರ ಶರೀರಗಳನ್ನು ನೋಡಿ ಆ ಯುದ್ಧದ ಪರಿಣಾಮವೇನಾಗಬಹುದೆಂಬುದರ ಬಗೆಗೂ ಬಹಳ ಭಯವುಂಟಾಯಿತು. ಅನಂತರ ಪಾಂಡವರೂ ಮತ್ತು ಕೌರವಮಹಾರಥರೂ ಪರಸ್ಪರವಾಗಿ ತೀಕ್ಷ್ಣವಾದ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಾ ಕ್ಷತ-ವಿಕ್ಷತಗೊಳಿಸಿದರು.”

೫೧ನೆಯ ಅಧ್ಯಾಯವು ಮುಗಿಯಿತು.

೫೨ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಎರಡೂ ಪಕ್ಷಗಳ ಸೈನ್ಯಗಳ ನಡುವೆ ಘೋರಯುದ್ಧ: ಕೌರವರ ಸೈನ್ಯವು ವ್ಯಥೆಗೊಂಡುದು

ಸಂಜಯನು ಮುಂದುವರಿದು ಹೇಳುತ್ತಾನೆ:

"ಮಹಾರಾಜ! ಒಬ್ಬರು ಮತ್ತೊಬ್ಬರನ್ನು ವಧಿಸಬೇಕೆಂಬ ಇಚ್ಛೆಯನ್ನು ಹೊಂದಿದ್ದ ಕ್ಷತ್ರಿಯರು ಅನ್ಯೋನ್ಯವಾಗಿ ದ್ವೇಷಿಸುತ್ತಾ ಯುದ್ಧದಲ್ಲಿ ಒಬ್ಬರ ನ್ನೊಬ್ಬರು ಸಂಹರಿಸಲು ಉಪಕ್ರಮಿಸಿದರು. ರಥಗಳ ಸಮೂಹಗಳೂ, ಕುದುರೆಗಳೂ, ಪದಾತಿಗಳ ಸಮೂಹಗಳೂ, ಆನೆಗಳ ಸಮೂಹಗಳೂ, ರಣಾಂಗಣದ ಸುತ್ತಲೂ ಪರಸ್ಪರವಾಗಿ ಸಂಘರ್ಷಿಸುತ್ತಿದ್ದುವು. ಆಗಿನ ಅತ್ಯಂತದಾರುಣವಾದ ಸಂಗ್ರಾಮದಲ್ಲಿ ಗದೆ, ಪರಿಘ, ಕುಣಪ, ಪ್ರಾಸ, ಭಿಂದಿಪಾಲ, ಭುಶುಂಡೀ-ಇವೇ ಮೊದಲಾದ ಆಯುಧಗಳು ಸರ್ವತ್ರ ಬೀಳುತ್ತಿದ್ದುದನ್ನು ನಾವು ನೋಡಿದೆವು. ಬಾಣಗಳ ವೃಷ್ಟಿಯಂತೂ ಮಿಡತೆಗಳೋಪಾದಿಯಲ್ಲಿ ರಣಾಂಗಣದ ಸುತ್ತಲೂ ಬೀಳುತ್ತಿದ್ದುವು. ಆನೆಗಳು ಆನೆಗಳೊಡನೆಯೇ ಸಂಘರ್ಷಿಸಿ ಪರಸ್ಪರವಾಗಿ ಸಮ್ಮರ್ದಿಸು ತ್ತಿದ್ದುವು. ಅಶ್ವಸೈನ್ಯವನ್ನು ಅಶ್ವಸೈನಿಕರೂ, ರಥಿಗಳನ್ನು ರಥಿಗಳೂ, ಪದಾತಿ ಗಳನ್ನು ಪದಾತಿಸಮೂಹಗಳೂ ಪರಸ್ಪರವಾಗಿ ಸಮ್ಮರ್ದಿಸುತ್ತಿದ್ದುವು. ಮತ್ತೆ ಕೆಲವೆಡೆಗಳಲ್ಲಿ ಅಶ್ವಸಮೂಹಗಳನ್ನು ಪದಾತಿಸೈನಿಕರು ಧ್ವಂಸಮಾಡುತ್ತಿದ್ದರು. ಕೆಲವು ವಿಭಾಗಗಳಲ್ಲಿ ಪದಾತಿಸೈನಿಕರು ರಥ-ಗಜಸೈನಿಕರನ್ನು ಧ್ವಂಸ ಮಾಡುತ್ತಿದ್ದರು. ಶೀಘ್ರವಾಗಿ ಹೋಗುವ ಆನೆಗಳು ಯುದ್ಧದಲ್ಲಿ ರಥಾಶ್ವ- ಪದಾತಿಗಳನ್ನು ಮರ್ದನಮಾಡುತ್ತಿದ್ದುವು. ವಧಿಸಲ್ಪಡುತ್ತಿದ್ದ ಮತ್ತು ಪರಸ್ಪರ ವಾಗಿ ಕೂಗಿಕೊಳ್ಳುತ್ತಿದ್ದ ಯೋಧರಿಂದ ವ್ಯಾಪ್ತವಾಗಿದ್ದ ಆ ರಣಾಂಗಣವು ಪಶುಗಳ ವಧ್ಯಸ್ಥಾನದಂತೆ ಬಹಳ ಘೋರವಾಗಿ ಕಾಣುತ್ತಿದ್ದಿತು. ರಕ್ತದಿಂದ ವ್ಯಾಪ್ತವಾಗಿದ್ದ ಆ ರಣಭೂಮಿಯು ವರ್ಷಾಕಾಲದಲ್ಲಿ ಕೆಂಪುಬಣ್ಣದ ಶಕ್ರ ಗೋಪಗಣಗಳಿಂದ (ಒನಕೆ ಬಂಡೇಹುಳುಗಳಿಂದ) ವ್ಯಾಪ್ತವಾದ ಭೂಮಿ ಯಂತೆಯೇ ಪ್ರಕಾಶಿಸುತ್ತಿದ್ದಿತು.

ಶ್ಯಾಮಲವರ್ಣದ ಯುವತಿಯೊಬ್ಬಳು ಕುಂಕುಮದ ಹೂವಿನ

ಬಣ್ಣದಿಂದ ರಂಜಿತವಾದ ಬಿಳಿಯ ವಸ್ತ್ರಗಳನ್ನು ಉಟ್ಟಿರುವಂತೆ–ರಣರಂಗವು ಪ್ರಕಾಶಿಸುತ್ತಿದ್ದಿತು. ಮಾಂಸ ಮತ್ತು ರಕ್ತಗಳಿಂದ ಚಿತ್ರಿತವಾಗಿರುವುದೋ ಎಂಬಂತೆಯೂ–ಸುವರ್ಣಮಯವಾಗಿರುವಂತೆಯೂ ಕಾಣುತ್ತಿದ್ದಿತು. ಭೀಕರವಾದ ಆ ರಣಭೂಮಿಯಲ್ಲಿ ಭಿನ್ನವಾದ ಶಿರಸ್ಸುಗಳೂ, ತೊಡೆಗಳೂ, ಕುಂಡಲಗಳೂ, ಅಂಗದ-ಕೇಯೂರಾದಿ ಒಡವೆ-ವಸ್ತುಗಳೂ, ಹಾರಗಳೂ, ಧನುಷ್ಮಂತರಾದ ಶೂರರ ಶರೀರಗಳೂ, ಗುರಾಣಿಗಳೂ ಮತ್ತು ಧ್ವಜ ಪತಾಕೆಗಳೂ ರಾಶಿ-ರಾಶಿಯಾಗಿ ಬಿದ್ದಿದ್ದುವು. ಆನೆಗಳು ಆನೆಗಳೊಡನೆ ಸಂಘರ್ಷಿಸಿ ದಂತಗಳಿಂದ ತಿವಿದಾಡುತ್ತಿದ್ದುವು. ವಿಷಾಣಪ್ರಹಾರಗಳಿಂದ ಗಾಯಗೊಂಡ ಆನೆಗಳು ರಕ್ತದಿಂದ ತೋಯ್ದುಹೋದ ಶರೀರವುಳ್ಳವುಗಳಾಗಿ ಗೈರಿಕಾದಿ ಧಾತುಗಳಿಂದ ಕೂಡಿದ ಚಿಲುಮೆಗಳುಳ್ಳ ಪರ್ವತಗಳಂತೆ ಪ್ರಕಾಶಿ ಸುತ್ತಿದ್ದುವು. ಕೆಲವು ಆನೆಗಳು ಪ್ರತಿಯೋಧರಾದ ಮಾವಟಿಗರಿಂದ ಪ್ರಹೃತ ವಾದ ತೋಮರಗಳನ್ನು ಸೊಂಡಲಿನಲ್ಲೆತ್ತಿಕೊಂಡು ಎದುರಾಳಿಗಳ ಮೇಲೆ ಎಸೆಯುತ್ತಾ ರಣಾಂಗಣದ ಸುತ್ತಲೂ ತಿರುಗುತ್ತಿದ್ದುವು. ಇತರ ಆನೆಗಳು ಆ ತೋಮರಗಳನ್ನು ಮುರಿದುಹಾಕುತ್ತಿದ್ದುವು. ನಾರಾಚಗಳ ಪ್ರಹಾರಗಳಿಂದ ಕವಚಗಳನ್ನು ಕಳೆದುಕೊಂಡಿದ್ದ ಆನೆಗಳು–ಹೇಮಂತರ್ತುವಿನಲ್ಲಿ ಮೋಡ ಗಳಿಂದ ವಿಹೀನವಾದ ಪರ್ವತಗಳಂತೆ ಪ್ರಕಾಶಿಸುತ್ತಿದ್ದುವು. ಕೆಲವು ಶ್ರೇಷ್ಠ ವಾದ ಆನೆಗಳು ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ ಬಾಣಗಳಿಂದ ಶರೀರಾದ್ಯಂತವಾಗಿ ಚುಚ್ಚಲ್ಪಟ್ಟು–ಕೊಳ್ಳಿಗಳಿಂದ ಪ್ರದೀಪ್ತ ವಾದ ಶಿಖರಗಳಿಂದ ಕೂಡಿದ ಪರ್ವತಗಳಂತೆಯೇ ಪ್ರಕಾಶಿಸುತ್ತಿದ್ದುವು. ಆ ಮಹಾಸಂಗ್ರಾಮದಲ್ಲಿ ಪರ್ವತೋಪಮಗಳಾದ ಕೆಲವು ಆನೆಗಳು ಪ್ರತಿಪಕ್ಷದ ಆನೆಗಳಿಂದ ಗಾಯಗೊಳಿಸಲ್ಪಟ್ಟು ರೆಕ್ಕೆಗಳನ್ನು ಹೊಂದಿರುವ ಪರ್ವತ ಗಳೋಪಾದಿಯಲ್ಲಿ ಸತ್ತುಬಿದ್ದಿದ್ದುವು. ಮತ್ತೆ ಕೆಲವು ಆನೆಗಳು ಬಾಣಗಳ ಪ್ರಹಾರಗಳಿಂದ ಸಂಕಟಪಡುತ್ತಾ, ಬಾಣಗಳಿಂದುಂಟಾದ ಗಾಯಗಳ ನೋವಿನಿಂದ ವ್ಯಥೆಪಡುತ್ತಾ, ವೇದನೆಯನ್ನು ಸಹಿಸಲಾರದೇ ಸ್ವಲ್ಪ ದೂರ ದವರೆಗೆ ಓಡಿಹೋಗಿ ಅನಂತರ ದಂತಗಳ ಮಧ್ಯಪ್ರದೇಶಗಳನ್ನೂ ಕುಂಭ ಸ್ಥಳಗಳನ್ನೂ ಊರೆಗೊಟ್ಟುಕೊಂಡು ಭೂಮಿಯ ಮೇಲೆ ಬೀಳುತ್ತಿ ದ್ದುವು. ಮತ್ತೆ ಕೆಲವು ಆನೆಗಳು ಸಿಂಹಗಳಂತೆಯೇ ಮಹಾಭಯಂಕರವಾಗಿ

ಗರ್ಜನೆಮಾಡುತ್ತಿದ್ದುವು. ಕೆಲವು ಆನೆಗಳು ರಣರಂಗದ ಸುತ್ತಲೂ ಸುತ್ತುತ್ತಿದ್ದುವು. ಕೆಲವು ಮಹಾಗಜಗಳು ಕಿರುಚಿಕೊಳ್ಳುತ್ತಿದ್ದುವು.

ಸುವರ್ಣಮಯವಾದ ಆಭರಣಗಳಿಂದ ವಿಭೂಷಿತವಾಗಿದ್ದ ಕುದುರೆಗಳು ಬಾಣಗಳಿಂದ ಗಾಯಗೊಂಡುವುಗಳಾಗಿ ಒಂದು ಕಡೆಯಲ್ಲಿ ಬಿದ್ದಿರುತ್ತಿದ್ದುವು. ಕೆಲವು ಸಂಕಟವನ್ನು ತಾಳಲಾರದೇ ಹೊರಳಾಡುತ್ತಾ ಕಳೆ ಗುಂದುತ್ತಿದ್ದುವು. ಕೆಲವು ಕುದುರೆಗಳು ಎಲ್ಲ ದಿಕ್ಕುಗಳಲ್ಲಿಯೂ ಸುತ್ತಾಡು ತ್ತಿದ್ದುವು. ಕೆಲವು ಕುದುರೆಗಳು ಶರ-ತೋಮರಗಳಿಂದ ಗಾಯಗೊಂಡು ನೆಲದ ಮೇಲೆ ಹೊರಳಾಡುತ್ತಾ ಬಿದ್ದಿರುತ್ತಿದ್ದುವು. ಇಂತಹ ಕುದುರೆಗಳನ್ನು ಆನೆಗಳು ಸೊಂಡಿಲುಗಳಿಂದ ಹಿಡಿದು ಸೆಳೆದಾಡಲು ಪ್ರಯತ್ನಿಸಿದಾಗ ಕುದುರೆಗಳು ಚಡಪಡಿಸುತ್ತಾ ಮೇಲೆದ್ದು ನಾನಾವಿಧವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದುವು. ಗಾಯಗೊಂಡ ಮನುಷ್ಯರು ರಣಾಂಗಣದ ಸುತ್ತಲೂ ಬಿದ್ದಿರುತ್ತಿದ್ದು ತಮ್ಮ ಬಂಧುಗಳನ್ನು ನೋಡಿದೊಡನೆಯೇ ಕೇಳಿಸಿಯೂ ಕೇಳಿಸದ ರೀತಿಯಲ್ಲಿ ಮೆಲುಧ್ವನಿಯಿಂದ ಕೂಗಿಕೊಳ್ಳುತ್ತಿದ್ದರು. ಮತ್ತೆಕೆಲವರು ತಮ್ಮ ಪಿತೃಗಳನ್ನೂ ಅಜ್ಜಂದಿರನ್ನೂ ನೋಡಿ ಅಸ್ಫುಟವಾದ ಮಾತಿನಲ್ಲಿ ಏನನ್ನೋ ಹೇಳಲು ಪ್ರಯತ್ನಿಸುತ್ತಿದ್ದರು. ಓಡಿಹೋಗುತ್ತಿರುವ ಶತ್ರುಗಳನ್ನೂ ಮತ್ತು ಇತರರನ್ನೂ ನೋಡಿದ ಪ್ರೇಕ್ಷಕರು, ಓಡಿಹೋಗುತ್ತಿರುವವರ ಸುಪ್ರಸಿದ್ಧವಾದ ಗೋತ್ರಗಳನ್ನೂ, ನಾಮಧೇಯಗಳನ್ನೂ ಪರಸ್ಪರವಾಗಿ ಹೇಳಿಕೊಳ್ಳುತ್ತಿದ್ದರು. ಕತ್ತರಿಸಲ್ಪಟ್ಟ ಕನಕಾಂಗದ-ಕೇಯೂರಗಳಿಂದ ಭೂಷಿತ ವಾದ ಯೋಧರ ತೋಳುಗಳು ಅಲ್ಲಲ್ಲಿಯೇ ಸುತ್ತಿಕೊಳ್ಳುತ್ತಿದ್ದುವು. ಮತ್ತೆ ಕೆಲವು ತೋಳುಗಳು ಕುಣಿಯುತ್ತಿದ್ದುವು. ಹಾರುತ್ತಿದ್ದುವು. ಪುನಃ ಕೆಳಕ್ಕೆ ಬೀಳುತ್ತಿದ್ದುವು. ಮತ್ತೆ ಕೆಲವು ನಡುಗುತ್ತಿದ್ದುವು. ಇಂತಹ ಸಾವಿರಾರು ತೋಳುಗಳು ಆ ರಣಾಂಗಣದಲ್ಲಿ ತುಂಬಿಹೋಗಿದ್ದುವು. ಕೆಲವು ಭುಜಗಳು ಐದು ಹೆಡೆಗಳುಳ್ಳ ಸರ್ಪಗಳಂತೆ ಮಹಾವೇಗದಿಂದ ಮುಂದೆ ಹೋಗು ತ್ತಿದ್ದುವು. ಸರ್ಪಗಳ ಶರೀರಗಳಿಗೆ ಸಮಾನವಾಗಿದ್ದು, ಚಂದನಚರ್ಚಿತವಾಗಿ ರಕ್ತದಿಂದ ನೆನೆದುಹೋಗಿದ್ದ ಕೆಲವು ತೋಳುಗಳು ಸುವರ್ಣಮಯವಾದ ಧ್ವಜಗಳಂತೆ ಕಾಣುತ್ತಿದ್ದುವು. ಎಲ್ಲ ದಿಕ್ಕುಗಳಲ್ಲಿಯೂ ಮಹಾಭಯಂಕರವಾದ

ಯುದ್ಧವು ಈ ರೀತಿಯಲ್ಲಿ ನಡೆಯುತ್ತಿರಲಾಗಿ; ಯೋಧರು 'ತಾವು ಯಾವ ಕಡೆಯವರು? ತಮ್ಮ ಎದುರಾಳಿಗಳು ಯಾರು?'–ಎಂಬ ಅರಿವೇ ಇಲ್ಲ ದೆಯೇ ಕೈಗೆ ಸಿಕ್ಕಿದವರನ್ನು ಸಂಹರಿಸುತ್ತಾ ಕಾದಾಡುತ್ತಿದ್ದರು. ಶಸ್ತ್ರಾಸ್ತ್ರಗಳಿಂದ ಪ್ರಹರಣವಾಗುತ್ತಿದ್ದ ಆ ಘೋರಸಂಗ್ರಾಮದಲ್ಲಿ ರಣಾಂಗಣವು ಭಯಂಕರ ವಾದ ಧೂಳಿನಿಂದ ಆಚ್ಛಾದಿತವಾಗಲಾಗಿ, ಕತ್ತಲೆಯಿಂದ ಆವೃತರಾದ ಯೋಧರು 'ತಮ್ಮವರಾರು?-ಶತ್ರುಗಳಾರು?'–ಎಂಬುದನ್ನೇ ತಿಳಿಯುತ್ತಿರ ಲಿಲ್ಲ. ಈ ರೀತಿಯಲ್ಲಿ ಆ ಯುದ್ಧವು ಘೋರರೂಪವಾಗಿ ಮತ್ತು ಮಹಾ ಭಯಂಕರವಾಗಿ ಪರಿಣಮಿಸಿತು. ರಕ್ತವನ್ನೇ ನೀರನ್ನಾಗಿ ಹೊಂದಿದ್ದ ಮಹಾ ನದಿಗಳು ಆ ಸೈನಿಕರ ಸಮೂಹದಿಂದ ಹಲವು ಬಾರಿ ಸಮುದ್ಭೂತವಾಗಿ ಪ್ರವಹಿಸಿದುವು. ಆ ಮಹಾನದಿಗಳು ಯೋಧರ ತಲೆಗಳೆಂಬ ಬಂಡೆಗಳಿಂದ ಸಮಾವೃತವಾಗಿದ್ದುವು. ಯೋಧರ ತಲೆಗೂದಲುಗಳೇ ಆ ರಕ್ತನದಿಯ ಪಾಚಿಯ ಹುಲ್ಲುಗಳಂತಿದ್ದುವು. ಪ್ರಾಣಿಗಳ ಎಲುಬುಗಳೇ ಮಹಾನದಿಗಳ ಮೀನಿನ ರೂಪದಲ್ಲಿದ್ದುವು. ಧನುಸ್ಸು, ಬಾಣಗಳು ಮತ್ತು ಗದೆಗಳೇ ಆ ರಕ್ತನದಿಯನ್ನು ದಾಟುವ ದೋಣಿಗಳಂತಿದ್ದುವು. ಘೋರವಾದ ರೂಪವನ್ನು ಹೊಂದಿದ್ದ ಸುದಾರುಣವಾದ ಆ ರಕ್ತನದಿಗಳು ಮಾಂಸ-ರಕ್ತಗಳ ಸಮ್ಮಿಶ್ರಣದಿಂದುಂಟಾದ ಕೆಸರಿನಿಂದ ಕೂಡಿದ್ದುವು. ರಕ್ತದ ಪ್ರವಾಹವನ್ನು ಕ್ಷಣ-ಕ್ಷಣಕ್ಕೂ ವರ್ಧಿಸುತ್ತಿದ್ದ ಅಂತಹ ಅನೇಕ ಮಹಾನದಿಗಳೂ ಆ ರಣರಂಗ ದಲ್ಲಿ ಪ್ರವಹಿಸತೊಡಗಿದುವು. ಹೇಡಿಗಳಾದವರಿಗೆ ಭಯವನ್ನುಂಟು ಮಾಡುತ್ತಿದ್ದ, ಶೂರರಾದವರಿಗೆ ಹರ್ಷದಾಯಕವಾಗಿದ್ದ ಘೋರರೂಪವಾದ ಆ ನದಿಗಳು ಯೋಧರನ್ನು ಯಮನ ಅರಮನೆಗೆ ಒಯ್ಯುತ್ತಿದ್ದುವು. ಆ ಘೋರನದಿಗಳು, ಅವುಗಳಲ್ಲಿ ಪ್ರವೇಶಿಸಿದವರನ್ನು ಮುಳುಗಿಸಿಬಿಡುತ್ತಿದ್ದುವು. ವೀರಕ್ಷತ್ರಿಯರಿಗೆ ಭಯವನ್ನುಂಟುಮಾಡುತ್ತಿದ್ದುವು. ನರವ್ಯಾಘ್ರನೇ! ಅಲ್ಲಿ ಗರ್ಜನೆಮಾಡುತ್ತಿದ್ದ ಮಾಂಸಾಶಿಗಳಾದ ಪ್ರಾಣಿಗಳ ಶಬ್ದಗಳಿಂದಾಗಿ ಆ ರಣಭೂಮಿಯು ಪ್ರೇತರಾಜನ ಪಟ್ಟಣಕ್ಕೆ ಸಮಾನವಾಗಿ ಕಾಣುತ್ತಿದ್ದು ಅತ್ಯಂತಭಯಂಕರವಾಗಿದ್ದಿತು. ಆ ರಣರಂಗದ ಸುತ್ತಲೂ ಅಗಣಿತವಾದ ಮುಂಡಗಳು ಎದ್ದುನಿಂತು ಕುಣಿಯುತ್ತಿದ್ದುವು. ಅವುಗಳ ಜೊತೆಗೆ ಮಾಂಸ-ರಕ್ತಗಳ ಭಕ್ಷಣದಿಂದ ತೃಪ್ತಿಹೊಂದಿದ ಭೂತಗಣಗಳೂ ನೃತ್ಯಮಾಡುತ್ತಿದ್ದುವು.

ರಕ್ತವನ್ನು ಕುಡಿದು ವಸೆಯನ್ನು ತಿಂದು ಆ ಪ್ರಾಣಿಗಳು ಬಹಳವಾಗಿ ತೃಪ್ತಿಹೊಂದಿದುವು. ಮೇದಸ್ಸು, ವಸೆ, ಮಜ್ಜೆ ಮತ್ತು ಮಾಂಸಗಳ ಭಕ್ಷಣದಿಂದ ತೃಪ್ತಿಹೊಂದಿದ ಮತ್ತು ಮದಿಸಿದ ಕಾಗೆ-ರಣಹದ್ದು ಮತ್ತು ಬಕಪಕ್ಷಿಗಳು ರಣಾಂಗಣದ ಸುತ್ತಲೂ ಹಾರಾಡುತ್ತಿದ್ದುದು ಕಾಣುತ್ತಿದ್ದಿತು.



ಯೋಧವ್ರತದ ಪಾಲನೆಯಲ್ಲಿ ಸುವಿಖ್ಯಾತರಾದ ಶೂರಯೋಧರು, ತ್ಯಜಿಸಲು ಕಷ್ಟಸಾಧ್ಯವಾದ ಭಯವನ್ನೂ ಸಂಪೂರ್ಣವಾಗಿ ಪರಿತ್ಯಜಿಸಿ, ಸ್ವಲ್ಪವಾದರೂ ಪ್ರಾಣಭಯವೇ ಇಲ್ಲದವರಂತೆ ಪರಾಕ್ರಮವನ್ನು ಪ್ರದರ್ಶಿಸುತ್ತಿದ್ದರು. ಬಾಣಗಳಿಂದಲೂ-ಶಕ್ತ್ಯಾಯುಧಗಳಿಂದಲೂ ಸಮಾಕೀರ್ಣವಾಗಿದ್ದ, ಮಾಂಸಾಶಿಗಳಾದ ಪ್ರಾಣಿಗಳಿಂದ ಸಂಪನ್ನವಾಗಿದ್ದ ಆ

ರಣಭೂಮಿಯಲ್ಲಿ ಶೂರರು ತಮ್ಮ ಪೌರುಷವನ್ನು ವಿಖ್ಯಾತಗೊಳಿಸುತ್ತಾ ರಣಾಂಗಣದಲ್ಲಿ ಸುತ್ತುತ್ತಿದ್ದರು. ಎರಡೂ ಪಕ್ಷಗಳ ಯೋಧರು ಪರಸ್ಪರವಾಗಿ ತಮ್ಮ-ತಮ್ಮ ನಾಮ-ಗೋತ್ರಗಳನ್ನು ಒಬ್ಬರು ಮತ್ತೊಬ್ಬರಿಗೆ ತಿಳಿಯ ಪಡಿಸುತ್ತಿದ್ದರು. ತಮ್ಮ ಪಿತೃಗಳ ಹೆಸರುಗಳನ್ನೂ ಕೆಲವು ಸಮಯಗಳಲ್ಲಿ ಘೋಷಿಸುತ್ತಿದ್ದರು. ಹೀಗೆ ನಾಮ-ಗೋತ್ರಗಳನ್ನು ಎಲ್ಲರಿಗೂ ಕೇಳಿಸುವಂತೆ ಹೇಳುತ್ತಾ ಅಲ್ಲಿದ್ದ ಅನೇಕಯೋಧರು ಶಕ್ತಿ, ತೋಮರ, ಪಟ್ಟಿಶಗಳೇ ಮೊದಲಾದ ಆಯುಧಗಳಿಂದ ಒಬ್ಬರು ಮತ್ತೊಬ್ಬರನ್ನು ಧೂಳೀಪಟಲ ಗೊಳಿಸುತ್ತಿದ್ದರು. ಘೋರರೂಪವಾದ, ಸುದಾರುಣವಾದ ಯುದ್ಧವು ಹೀಗೆ ನಡೆಯುತ್ತಿರಲಾಗಿ, ಸಮುದ್ರದಲ್ಲಿ ಭಿನ್ನವಾದ ನೌಕೆಯೋಪಾದಿಯಲ್ಲಿ ಕೌರವರ ಸೈನ್ಯವು ಭಗ್ನವಾಗಿ ವ್ಯಾಕುಲಗೊಂಡಿತು."

೫೨ನೆಯ ಅಧ್ಯಾಯವು ಮುಗಿಯಿತು.

೫೩ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಅರ್ಜುನನು ಹತ್ತುಸಾವಿರ ಸಂಶಪ್ತಕಯೋಧರನ್ನು ಸಂಹರಿಸಿದುದು

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ:

"ಧೃತರಾಷ್ಟ್ರಮಹಾರಾಜ! ಕ್ಷತ್ರಿಯರೆಲ್ಲರನ್ನೂ ಸಂಪೂರ್ಣವಾಗಿ ಮುಳುಗಿಸಿಬಿಡಲಿದ್ದ ಭಯಂಕರವಾದ ಆ ಯುದ್ಧವು ನಡೆಯುತ್ತಿರಲಾಗಿ ರಣರಂಗದಲ್ಲಿ ಗಾಂಡೀವಧನುಸ್ಸಿನ ಮಹಾಘೋಷವು ಕೇಳಿಬಂದಿತು. ಆ ಸಮಯದಲ್ಲಿ ಅರ್ಜುನನು ಸಂಶಪ್ತಕರ, ಕೋಸಲದೇಶದ ಯೋಧರ ಮತ್ತು ನಾರಾಯಣರೆಂಬ ಸೈನಿಕರ ಸಂಹಾರಕಾರ್ಯವನ್ನು ಮಾಡುತ್ತಿದ್ದನು. ವಿಜಯದ ಅಭಿಲಾಷೆಯನ್ನು ಹೊಂದಿದ್ದ, ಬಹಳ ಕುಪಿತರಾಗಿದ್ದ ಸಂಶಪ್ತಕರು ಅರ್ಜುನನ ತಲೆಯ ಮೇಲೆ ಎಲ್ಲ ಕಡೆಗಳಿಂದಲೂ ಬಾಣಗಳ ಮಳೆಯನ್ನೇ ಸುರಿಸುತ್ತಿದ್ದರು. ಒಡನೆಯೇ ಪ್ರಭುವಾದ ಅರ್ಜುನನು ಆ ಬಾಣಗಳ ವೃಷ್ಟಿ ಯನ್ನು ವೇಗಪೂರ್ವಕವಾಗಿ ಧಾರಣೆಮಾಡಿಕೊಳ್ಳುತ್ತಾ (ತನ್ನ ಬಾಣಗಳಿಂದ

ನಿರೋಧಿಸುತ್ತಾ) ರಥಿಶ್ರೇಷ್ಠರನ್ನು ಸಂಹರಿಸುತ್ತಾ ಸಂಶಪ್ತಕಸೈನ್ಯದೊಳಕ್ಕೆ ನುಗ್ಗಿಹೋದನು. ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಮತ್ತು ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಬಾಣಗಳ ಸತತಪ್ರಯೋಗದಿಂದ ರಥಸೈನ್ಯದೊಳಕ್ಕೆ ನುಗ್ಗಿಹೋದ ಅರ್ಜುನನು ಶ್ರೇಷ್ಠವಾದ ಆಯುಧವನ್ನು ಹೊಂದಿದ್ದ ಸಂಶಪ್ತಕರ ರಾಜನಾದ ಸುಶರ್ಮನ ಸಮೀಪಕ್ಕೆ ಹೋದನು. ರಥಿಗಳಲ್ಲಿ ಶ್ರೇಷ್ಠನಾದ ಸುಶರ್ಮನು ಅರ್ಜುನನ ಮೇಲೆ ಬಾಣಗಳ ಮಳೆಗರೆದನು. ಅದೇ ರೀತಿಯಲ್ಲಿ ಅವನ ಅನುಯಾಯಿಗಳಾದ ಸಂಶಪ್ತಕ ಯೋಧರೂ ಅರ್ಜುನನನ್ನು ಬಾಣಗಳಿಂದ ಗಾಯಗೊಳಿಸಿದರು. ಅನಂತರ ಸುಶರ್ಮನು ಪಾರ್ಥನನ್ನು ಹತ್ತುಬಾಣಗಳಿಂದ ಪ್ರಹರಿಸಿ ಮೂರು ಬಾಣ ಗಳಿಂದ ಜನಾರ್ದನನ ಬಲಭುಜದಲ್ಲಿ ಪ್ರಹರಿಸಿದನು. ಮತ್ತೊಂದು ಭಲ್ಲ ದಿಂದ ಸುಶರ್ಮನು ಅರ್ಜುನನ ಧ್ವಜವನ್ನೂ ಪ್ರಹರಿಸಿದನು. ವಿಶ್ವಕರ್ಮ ನಿಂದಲೇ ಧ್ವಜದಲ್ಲಿ ನಿರ್ಮಿತನಾಗಿದ್ದ ವಾನರಶ್ರೇಷ್ಠನಾದ ಮಾರುತಿಯು ಎಲ್ಲರನ್ನೂ ಭಯಗೊಳಿಸುತ್ತಾ ಬಹಳ ಗಟ್ಟಿಯಾಗಿ ಗರ್ಜನೆಮಾಡಿದನು.

ಕಪಿಯ ಭಯಂಕರಗರ್ಜನೆಯನ್ನು ಕೇಳಿ ನಿನ್ನ ಸೈನ್ಯವು ಭಯದಿಂದ ನಡುಗಿತು. ಅತ್ಯಂತಭಯಾವಿಷ್ಟವಾದ ನಮ್ಮ ಸೈನ್ಯವು ನಿಶ್ಚೇಷ್ಟಿತವಾಯಿತು. ಆ ಸಮಯದಲ್ಲಿ ಏನೊಂದನ್ನೂ ಮಾಡದೇ ಸ್ತಬ್ಧವಾಗಿ ನಿಂತಿದ್ದ ನಮ್ಮ ಸೈನ್ಯವು ನಾನಾಪುಷ್ಪಗಳಿಂದ ಸಮೃದ್ಧವಾದ ಚೈತ್ರರಥವನದಂತೆಯೇ ಕಾಣುತ್ತಿದ್ದಿತು.

ಸ್ವಲ್ಪಹೊತ್ತಿನಲ್ಲಿಯೇ ಯೋಧರೆಲ್ಲರೂ ಎಚ್ಚರಗೊಂಡವರಾಗಿ ಮೋಡ ಗಳು ಪರ್ವತವನ್ನು ಜಲಧಾರೆಗಳಿಂದ ಮುಚ್ಚಿಬಿಡುವಂತೆ–ಅರ್ಜುನನನ್ನು ಬಾಣಗಳ ವೃಷ್ಟಿಯಿಂದ ಮುಚ್ಚಿಬಿಟ್ಟರು. ಆ ಎಲ್ಲ ಯೋಧರೂ ಅರ್ಜುನನ ರಥವನ್ನು ಮುತ್ತಿದರು. ಅರ್ಜುನನ ನಿಶಿತವಾದ ಬಾಣಗಳಿಂದ ಎಲ್ಲರೂ ಪ್ರಹರಿಸಲ್ಪಡುತ್ತಿದ್ದರೂ ಅರ್ಜುನನ ರಥವನ್ನು ತಡೆದು ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದರು. ಕ್ರೋಧಾಭಿಭೂತರಾಗಿದ್ದ ಸಂಶಪ್ತಕಯೋಧರು ಎಲ್ಲ ಕಡೆಗಳಿಂದಲೂ ಅರ್ಜುನನನ್ನು ಆಕ್ರಮಿಸಿ ಅವನ ಕುದುರೆಗಳನ್ನೂ, ಈಷಾದಂಡವನ್ನೂ ಹಿಡಿದೆಳೆಯಲು ಪ್ರಯತ್ನಿಸಿದರು. ಈ ಪ್ರಕಾರವಾಗಿ ಸಾವಿರಾರು ಸಂಶಪ್ತಕಯೋಧರು ಅರ್ಜುನನ ರಥವನ್ನು ಹಿಡಿದು

ಬಲಾತ್ಕಾರವಾಗಿ ಎಳೆದಾಡುತ್ತಾ ಸಿಂಹನಾದಗಳನ್ನು ಮಾಡಿದರು. ಸಂಶಪ್ತಕಯೋಧರಲ್ಲಿ ಕೆಲವರು ಶ್ರೀಕೃಷ್ಣನ ಎರಡು ಭುಜಗಳನ್ನೂ ಹಿಡಿದು ಎಳೆದಾಡುತ್ತಿದ್ದರು. ಮತ್ತೆ ಕೆಲವರು ಸಂತೋಷಭರಿತರಾಗಿ ರಥದಲ್ಲಿ ಕುಳಿತಿದ್ದ ಪಾರ್ಥನನ್ನು ಹಿಡಿದುಕೊಂಡರು.



ದುಷ್ಟವಾದ ಆನೆಯು ಮಾವಟಿಗನನ್ನು ಕೆಳಕ್ಕೆ ಹಾಕಿಬಿಡುವಂತೆ– ಶ್ರೀಕೃಷ್ಣನು ತನ್ನೆರಡು ತೋಳುಗಳನ್ನೂ ಬಲವಾಗಿ ಒದರುತ್ತಾ ತೋಳುಗಳನ್ನು ಹಿಡಿದಿದ್ದ ಸಂಶಪ್ತಕಯೋಧರನ್ನು ಕೆಳಕ್ಕೆ ಬೀಳಿಸಿದನು.

ಸಂಶಪ್ತಕಮಹಾರಥರು ತನ್ನನ್ನು ಎಲ್ಲ ದಿಕ್ಕುಗಳಿಂದಲೂ ಮುತ್ತಿ

ಕೊಂಡಿರುವುದನ್ನೂ, ರಥವನ್ನು ಮುಂದೆ ಹೋಗದಂತೆ ತಡೆದಿರುವುದನ್ನೂ ಮತ್ತು ಶ್ರೀಕೃಷ್ಣನನ್ನೂ ಸಹ ಆಕ್ರಮಿಸಿರುವುದನ್ನೂ ನೋಡಿ ಅರ್ಜುನನು ಬಹಳ ಕೋಪಗೊಂಡನು. ರಥದ ಮೇಲೆ ಹತ್ತಿ ಎಳೆದಾಡುತ್ತಿದ್ದ ಅನೇಕ ಪದಾತಿಸೈನಿಕರನ್ನು ಬಲಾತ್ಕಾರಪೂರ್ವಕವಾಗಿ ರಥದಿಂದ ಕೆಳಕ್ಕೆ ಕೆಡವಿದನು. ಅನತಿದೂರದಲ್ಲಿದ್ದ ಯೋಧರನ್ನು ಹತ್ತಿರದಿಂದಲೇ ಪ್ರಹರಿಸಬಹುದಾದ ಬಾಣಗಳಿಂದ ಆಚ್ಛಾದಿಸುತ್ತಾ ಕೇಶವನನ್ನು ಕುರಿತು ಹೇಳಿದನು: "ಮಹಾಬಾಹುವೇ! ಕೃಷ್ಣ! ಈ ಸಂಶಪ್ತಕಯೋಧರನ್ನು ನೋಡು. ಸಾವಿರಾರು ಸಂಖ್ಯೆಯಲ್ಲಿ ಹತರಾಗುತ್ತಿದ್ದರೂ ಬಹಳ ದಾರುಣವಾದ ಸಾಹಸಕರ್ಮವನ್ನು ಮಾಡುತ್ತಲೇ ಇದ್ದಾರೆ. ಯದುಪುಂಗವನೇ! ಘೋರವಾದ ಈ ರಥಬಂಧವನ್ನು ಈ ಪ್ರಪಂಚದಲ್ಲಿ ನನ್ನೊಬ್ಬನಿಂದಲ್ಲದೇ ಮತ್ತಾರಿಂದಲೂ ಸಹಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ."

ಅರ್ಜುನನು ಹೀಗೆ ಹೇಳುತ್ತಾ ದೇವದತ್ತವೆಂಬ ಶಂಖವನ್ನು ಗಟ್ಟಿಯಾಗಿ ಊದಿದನು. ಶ್ರೀಕೃಷ್ಣನೂ ಸಹ ಭೂಮ್ಯಾಕಾಶಗಳೆರಡನ್ನೂ ಶಬ್ದದಿಂದಲೇ ತುಂಬುತ್ತಾನೆಯೋ ಎಂಬಂತೆ ಪಾಂಚಜನ್ಯಶಂಖವನ್ನು ಊದಿದನು. ಮಹಾರಾಜ! ಕೃಷ್ಣರಿಬ್ಬರೂ-ಊದಿದ ದೇವದತ್ತ-ಪಾಂಚಜನ್ಯಶಂಖಧ್ವನಿಗಳನ್ನು ಕೇಳುತ್ತಲೇ ಸಂಶಪ್ತಕಸೈನ್ಯವು ಭಯದಿಂದ ನಡುಗಿತು. ಬಹಳವಾಗಿ ಭಯಗೊಂಡು ದಿಕ್ಕಾಪಾಲಾಗಿ ಓಡತೊಡಗಿತು. ಆ ಸಮಯದಲ್ಲಿ ಶತ್ರುವೀರಹಂತಕನಾದ ಅರ್ಜುನನು ಬಾರಿ-ಬಾರಿಗೂ ನಾಗಾಸ್ತ್ರವನ್ನು ಪ್ರಯೋಗಿಸುತ್ತಾ ಓಡಿಹೋಗುತ್ತಿದ್ದ ಸಂಶಪ್ತಕರ ಕಾಲುಗಳನ್ನು ಬಂಧಿಸಿಬಿಟ್ಟನು. ಮಹಾತ್ಮನಾದ ಪಾರ್ಥನು ನಾಗಾಸ್ತ್ರದ ಮೂಲಕವಾಗಿ ಸಂಶಪ್ತಕರ ಪಾದಗಳನ್ನು ಬಂಧಿಸಿದನಂತರ ಅವರು ಲೋಹದ ಮೂರ್ತಿಗಳೋಪಾದಿಯಲ್ಲಿ ನಿಶ್ಚೇಷ್ಟರಾಗಿ ನಿಂತುಬಿಟ್ಟರು.

ತಾರಕಾಸುರನನ್ನು ವಧೆಮಾಡುವ ಸಮಯದಲ್ಲಿ ಇಂದ್ರನು ದೈತ್ಯರನ್ನು ಸಂಹರಿಸಿದಂತೆ–ಅರ್ಜುನನು ನಿಶ್ಚೇಷ್ಟರಾಗಿದ್ದ ಸಂಶಪ್ತಕಯೋಧರನ್ನು ಸಂಹರಿಸಲು ಉಪಕ್ರಮಿಸಿದನು. ಸಮರಾಂಗಣದಲ್ಲಿ ಅರ್ಜುನನ ಬಾಣಗಳಿಂದ ವಧ್ಯರಾಗುತ್ತಿದ್ದ ಸಂಶಪ್ತಕರು ಕುರುಶ್ರೇಷ್ಠನಾದ ಅರ್ಜುನನ ರಥದ ಬಂಧನವನ್ನು ಮುಕ್ತಗೊಳಿಸಿ ತಮ್ಮಲ್ಲಿದ್ದ ಆಯುಧಗಳೆಲ್ಲವನ್ನೂ

ಅರ್ಜುನನ ಮೇಲೆ ಪ್ರಯೋಗಿಸಲು ಪ್ರಯತ್ನಿಸಿದರು. ಆದರೆ ಅರ್ಜುನನು ಪಾದಬಂಧದಿಂದ ಅವರೆಲ್ಲರನ್ನೂ ಬಂಧಿಸಿದ್ದರಿಂದ ಅಳ್ಳಾಡಲೂ ಅವರಿಂದ ಸಾಧ್ಯವಾಗಲಿಲ್ಲ. ಅನಂತರ ಪಾರ್ಥನು ಅವರೆಲ್ಲರನ್ನೂ ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಒಬ್ಬೊಬ್ಬರನ್ನೂ ಸಂಹರಿಸುತ್ತಿದ್ದನು. ಅರ್ಜುನನು ಸಮರಾಂಗಣದಲ್ಲಿ ಯಾವ ಯೋಧರನ್ನು ಉದ್ದೇಶಿಸಿ ಪಾದಬಂಧಾಸ್ತ್ರವನ್ನು ಪ್ರಯೋಗಿಸುತ್ತಿದ್ದನೋ–ಆ ಎಲ್ಲ ಯೋಧರೂ ಸರ್ಪಗಳಿಂದ ಬಿಗಿಯಲ್ಪಡು ತ್ತಿದ್ದರು. ಅನಂತರ ಮಹಾರಥನಾದ ಸುಶರ್ಮನು ನಾಗಾಸ್ತ್ರದಿಂದ ತನ್ನ ಕಡೆಯ ಸೈನಿಕರೆಲ್ಲರೂ ಬಂಧಿಸಲ್ಪಟ್ಟಿರುವುದನ್ನು ಕಂಡು ಒಡನೆಯೇ ಗಾರುಡಾಸ್ತ್ರವನ್ನು ಪ್ರಕಟಿಸಿದನು. ಸೌಪರ್ಣಾಸ್ತ್ರವನ್ನು ಪ್ರಯೋಗಿಸಿ ದೊಡನೆಯೇ ಗರುಡಪಕ್ಷಿಗಳು ನಾಗಗಳ ಮೇಲೆ ಬಿದ್ದು ಅವುಗಳನ್ನು ಭಕ್ಷಿಸತೊಡಗಿದುವು. ಅಪಾರಸಂಖ್ಯೆಯಲ್ಲಿ ಗರುಡಪಕ್ಷಿಗಳು ಬಂದುದನ್ನು ಕಂಡು ನಾಗಾಸ್ತ್ರದಿಂದ ಉದ್ಭೂತವಾಗಿದ್ದ ಸರ್ಪಗಳೆಲ್ಲವೂ ಓಡಿಹೋದುವು. ಯಾವ ರೀತಿಯಲ್ಲಿ ಸೂರ್ಯನು ಮೇಘಗಳಿಂದ ವಿಮುಕ್ತನಾಗಿ ಪ್ರಜೆಗಳಿಗೆ ತಾಪವನ್ನುಂಟುಮಾಡುತ್ತಾ ಪ್ರಕಾಶಿಸುವನೋ–ಅದೇ ರೀತಿಯಲ್ಲಿ ಪಾದಬಂಧದಿಂದ ವಿಮುಕ್ತವಾದ ಸಂಶಪ್ತಕಸೈನ್ಯವು ಪ್ರಕಾಶಿಸಿತು.

ನಾಗಾಸ್ತ್ರದಿಂದ ವಿಮುಕ್ತರಾದ ಸಂಶಪ್ತಕಯೋಧರು ಬಾಣಗಳ ಸಮೂಹಗಳನ್ನೂ, ಶಸ್ತ್ರಗಳ ಸಮೂಹಗಳನ್ನೂ ಪುಂಖಾನುಪುಂಖವಾಗಿ ಅರ್ಜುನನ ರಥದ ಮೇಲೆ ಪ್ರಯೋಗಿಸಿದನು. ಅರ್ಜುನನು ಬಿಡುತ್ತಿದ್ದ ವಿಧ-ವಿಧವಾದ ಶಸ್ತ್ರಗಳನ್ನೂ ಪ್ರತಿಯಾದ ಶಸ್ತ್ರಗಳಿಂದ ನಿರಸನ ಗೊಳಿಸುತ್ತಿದ್ದರು. ಶತ್ರುವೀರಹಂತಕನಾದ, ಇಂದ್ರಪುತ್ರನಾದ ಅರ್ಜುನನು ಮಹಾಸ್ತ್ರಮಯವಾದ ಆ ವೃಷ್ಟಿಯನ್ನೂ ಶರವೃಷ್ಟಿಗಳಿಂದಲೇ ನಿರಸನಗೊಳಿಸಿ ಅನಂತರ ಅನೇಕ ಸಂಶಪ್ತಕಯೋಧರನ್ನು ಸಂಹರಿಸಿದನು. ಬಳಿಕ ಸುಶರ್ಮನು ಬಗ್ಗಿದ ಗಿಣ್ಣೆದ್ದ ಬಾಣದಿಂದ ಅರ್ಜುನನನ್ನು ವಕ್ಷಃಸ್ಥಳದಲ್ಲಿ ಪ್ರಹರಿಸಿ ಅನಂತರ ಪುನಃ ಮೂರು ಬಾಣಗಳಿಂದಲೂ ಪ್ರಹರಿಸಿದನು. ಅದರಿಂದ ಬಹಳವಾಗಿ ಗಾಯಗೊಂಡ ಅರ್ಜುನನು ವ್ಯಥಿತನಾಗಿ ರಥದ ಪೀಠದ ಹಿಂಭಾಗಕ್ಕೆ ಸರಿದು ಕುಳಿತನು. ಅದನ್ನು ನೋಡಿದ ಸಂಶಪ್ತಕ

ರೆಲ್ಲರೂ ಪಾರ್ಥನು ಹತನಾದನೆಂದು ಕೂಗಿಕೊಂಡರು. ಒಡನೆಯೇ ಶಂಖಧ್ವನಿಗಳೂ, ಅನೇಕವಾದ ಭೇರಿಗಳ ನಿನಾದಗಳೂ, ಮಂಗಳವಾದ್ಯಗಳ ನಿನಾದಗಳೂ ಮತ್ತು ವೀರರ ಸಿಂಹನಾದಗಳೂ ಆಗತೊಡಗಿದುವು. ಸ್ವಲ್ಪಹೊತ್ತಿನಲ್ಲಿಯೇ ಶ್ವೇತಾಶ್ವನಾದ, ಕೃಷ್ಣಸಾರಥಿಯಾದ, ಮಹಾತ್ಮನಾದ ಅರ್ಜುನನು ಚೇತರಿಸಿಕೊಂಡು ಬಹಳ ಬೇಗ ಐಂದ್ರಾಸ್ತ್ರವನ್ನು ಪ್ರಕಟಿಸಿದನು. ಅದರಿಂದ ಹುಟ್ಟಿದ ಸಾವಿರಾರು ಬಾಣಗಳು ನಿನ್ನ ಸೈನ್ಯವನ್ನು ಸಂಹರಿಸುತ್ತಾ ಎಲ್ಲ ದಿಕ್ಕುಗಳಲ್ಲಿಯೂ ಕಾಣಿಸಿಕೊಂಡುವು. ಐಂದ್ರಾಸ್ತ್ರದಿಂದ ಪ್ರಾದುರ್ಭೂತ ವಾದ ಶಸ್ತ್ರಗಳಿಂದ ಸಾವಿರಾರು ಕುದುರೆಗಳೂ, ರಥಗಳೂ ಧ್ವಂಸವಾದುವು. ಅದನ್ನು ನೋಡಿದ ಸಂಶಪ್ತಕರ ಮತ್ತು ಗೋಪಾಲಕರ ಸೈನ್ಯದಲ್ಲಿ ಮಹಾಭಯವು ಆವರಿಸಿತು. ಅರ್ಜುನನನ್ನು ಪ್ರತಿಯಾಗಿ ಪ್ರಹರಿಸುವ ವೀರಪುರುಷನೇ ಆ ಸಮಯದಲ್ಲಿ ಅಲ್ಲಿರಲಿಲ್ಲ. ಮಹಾ-ಮಹಾವೀರರು ನೋಡುತ್ತಿದ್ದಂತೆಯೇ ಅರ್ಜುನನು ನಿನ್ನ ಸೈನ್ಯವನ್ನು ನಾಶಗೊಳಿಸುತ್ತಿದ್ದನು.

ಎಲ್ಲ ಸೈನ್ಯವೂ ನಿಶ್ಶೇಷವಾಗಿದ್ದಿತು. ಸೈನಿಕರ ಪರಾಕ್ರಮವೂ ಉಡುಗಿಹೋಗಿದ್ದಿತು. ಆ ಸಂದರ್ಭದಲ್ಲಿ ಸೈನಿಕರು ಅವ್ಯಾಹತವಾಗಿ ವಧಿಸಲ್ಪಡುತ್ತಿದ್ದುದನ್ನು ನಾನು ನೋಡಿದೆನು. ಪಾರ್ಥನು ಹತ್ತು ಸಾವಿರ ಯೋಧರನ್ನು ಸಂಹರಿಸಿ ಧೂಮರಹಿತನಾದ ಅಗ್ನಿಯಂತೆ ಪ್ರಜ್ವಲಿಸುತ್ತಾ ರಣಾಂಗಣದಲ್ಲಿ ವಿರಾಜಿಸಿದನು. ಆ ಸಮಯದಲ್ಲಿ ಸಂಶಪ್ತಕಸೈನ್ಯದಲ್ಲಿ :

**ಚತುರ್ದಶ ಸಹಸ್ರಾಣಿ ಯಾನಿ ಶಿಷ್ಟಾನಿ ಭಾರತ ।**
**ರಥಾನಾಮಯುತಂ ಚೈವ ತ್ರಿಸಾಹಸ್ರಾಶ್ಚ ದನ್ತಿನಃ ॥೪೪॥**

ಹದಿನಾಲ್ಕುಸಾವಿರ ಪದಾತಿಗಳು, ಹತ್ತುಸಾವಿರ ರಥಿಗಳು ಮತ್ತು ಮೂರುಸಾವಿರ ಆನೆಗಳು ಮಾತ್ರವೇ ಉಳಿದಿದ್ದುವು.

ಸಂಶಪ್ತಕರು 'ಸಾಯಬೇಕು ಅಥವಾ ವಿಜಯವನ್ನು ಗಳಿಸಬೇಕು. ಅದು ಹೊರತಾಗಿ ಯುದ್ಧದಿಂದ ಹಿಂದಿರುಗಲೇಬಾರದು'–ಎಂಬುದಾಗಿ ನಿಶ್ಚಯಿಸಿ ಧನಂಜಯನನ್ನು ಪುನಃ ಆಕ್ರಮಿಸಿದರು.

ಮಹಾರಾಜ! ಬಲಿಷ್ಠನಾದ ಮಹಾಶೂರನಾದ ಕಿರೀಟಧರನಾದ ಅರ್ಜುನನಿಗೂ ಮತ್ತು ನಿನ್ನ ಕಡೆಯವರಿಗೂ ಪುನಃ ಮಹಾಯುದ್ಧವು ಪ್ರಾರಂಭವಾಯಿತು."

೫೩ನೆಯ ಅಧ್ಯಾಯವು ಮುಗಿಯಿತು.

೫೪ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಕೃಪಾಚಾರ್ಯರು ಶಿಖಂಡಿಯನ್ನು ಪರಾಜಯಗೊಳಿಸಿದುದು: ಸುಕೇತುವಿನ ವಧೆ: ಧೃಷ್ಟದ್ಯುಮ್ನನು ಕೃತವರ್ಮನನ್ನು ಪರಾಜಯಗೊಳಿಸಿದುದು

ಸಂಜಯನು ಯುದ್ಧಪ್ರಕರಣವನ್ನು ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ಕೃತವರ್ಮಾ, ಕೃಪರು, ಅಶ್ವತ್ಥಾಮಾ, ಕರ್ಣ, ಉಲೂಕ, ಶಕುನಿ, ದುರ್ಯೋಧನ ಮತ್ತು ಅವನ ಸಹೋದರರು ಸಮುದ್ರದಲ್ಲಿರುವ ಒಡೆದುಹೋದ ನೌಕೆಯಂತೆ ನಮ್ಮ ಸೈನ್ಯವು ಪಾಂಡುಪುತ್ರರಿಂದ ಭಯಗೊಂಡು ವಿನಾಶಹೊಂದುತ್ತಿರುವುದನ್ನು ಕಂಡು ಬಹಳ ಶೀಘ್ರವಾಗಿ ಮುನ್ನುಗ್ಗಿ ಹೋಗಿ ನಮ್ಮ ಸೈನ್ಯವನ್ನು ಉದ್ಧರಿಸಲು (ಸೈನ್ಯಕ್ಕೆ ಧೈರ್ಯತುಂಬಲು) ಪ್ರಯತ್ನಿಸುತ್ತಿದ್ದರು. ಅನಂತರ ಮುಹೂರ್ತಕಾಲ ಎರಡುಕಡೆಯವರಿಗೂ ಬಹಳ ಘೋರವಾದ ಯುದ್ಧವಾಯಿತು. ಆ ಯುದ್ಧವು ಹೇಡಿಗಳಿಗೆ ತ್ರಾಸದಾಯಕವೂ ವೀರರಿಗೆ ಹರ್ಷವರ್ಧಕವೂ ಆಗಿದ್ದಿತು. ಕೃಪರು ಯುದ್ಧಸಮಯದಲ್ಲಿ ಶತ್ರುಗಳ ಮೇಲೆ ಬಾಣಗಳ ವೃಷ್ಟಿಯನ್ನೇ ಸುರಿಸಿದರು. ಅವರು ಬಿಟ್ಟ ಬಾಣಗಳು ಮಿಡತೆಗಳ ಗುಂಪುಗಳೋಪಾದಿಯಲ್ಲಿ ಸೃಂಜಯ ಸೈನಿಕರನ್ನು ಸಂಪೂರ್ಣವಾಗಿ ಮುಚ್ಚಿಬಿಟ್ಟಿತು. ಅದನ್ನು ನೋಡಿಪರಮಕ್ರುದ್ಧನಾದ ಶಿಖಂಡಿಯು ಅತ್ಯಂತ ತ್ವರೆಯಿಂದ ಕೃಪರ ಸಮೀಪಕ್ಕೆ ಹೋಗಿ ಅವರ ಸುತ್ತಲೂ ಬಾಣಗಳ ಮಳೆಯನ್ನೇ ಸುರಿಸಿದನು. ಮಹಾಸ್ತ್ರವಿದರಾದ ಕೃಪರು ಶಿಖಂಡಿಯು ಬಿಟ್ಟ ಎಲ್ಲ ಬಾಣಗಳನ್ನೂ ಪ್ರತಿಬಾಣಗಳಿಂದ ನಿರಸನಗೊಳಿಸಿ ಪರಮಕ್ರುದ್ಧರಾಗಿ ಶಿಖಂಡಿಯನ್ನು ಹತ್ತು ಬಾಣಗಳಿಂದ ಗಾಯಗೊಳಿಸಿದರು.

ಅದರಿಂದ ಕುಪಿತನಾದ ಶಿಖಂಡಿಯು ಹದ್ದುಗಳ ರೆಕ್ಕೆಗಳನ್ನು ಹೊಂದಿದ್ದ, ನೇರವಾಗಿ ಹೋಗುವ ಏಳು ಬಾಣಗಳಿಂದ ಕುಪಿತರಾಗಿದ್ದ ಕೃಪರನ್ನು ಪ್ರಹರಿಸಿದನು.

ಶಿಖಂಡಿಪ್ರೇಷಿತವಾದ, ನಿಶಿತವಾದ ಬಾಣಗಳಿಂದ ಬಹಳವಾಗಿ ಗಾಯಗೊಂಡ, ಮಹಾರಥರಾದ, ಬ್ರಾಹ್ಮಣೋತ್ತಮರಾದ ಕೃಪರು ಶಿಖಂಡಿಯನ್ನು ಅಶ್ವ-ಸೂತ-ರಥಗಳಿಂದ ವಿಹೀನನನ್ನಾಗಿ ಮಾಡಿದರು. ಒಡನೆಯೇ ಮಹಾರಥನಾದ ಶಿಖಂಡಿಯು ಕುದುರೆಗಳಿಂದ ವಿಹೀನ ವಾಗಿದ್ದ ರಥದಿಂದ ಕೆಳಕ್ಕೆ ಧುಮುಕಿ ಕತ್ತಿಯನ್ನೂ ಗುರಾಣಿಯನ್ನೂ ಹಿಡಿದುಕೊಂಡು ಕೃಪರ ಬಳಿಗೆ ರಭಸದಿಂದ ನುಗ್ಗಿದನು. ಕೃಪರು, ತಮ್ಮ ಕಡೆಗೆ ವೇಗವಾಗಿ ಬರುತ್ತಿದ್ದ ಶಿಖಂಡಿಯನ್ನು ಬಹಳ ಬೇಗ ಬಗ್ಗಿದ ಗಿಣ್ಣುಗಳಿಂದ ಕೂಡಿದ್ದ ಬಾಣಗಳಿಂದ ಮುಚ್ಚಿಬಿಟ್ಟರು. ಅವರ ಆ ಸಾಹಸಕಾರ್ಯವು ನಮಗೆ ಪರಮಾದ್ಭುತವಾಗಿ ಕಂಡಿತು. ಆ ಬಾಣಗಳ ಮಧ್ಯದಲ್ಲಿ ಶಿಖಂಡಿಯು ನಿಶ್ಚೇಷ್ಟನಾಗಿ ನಿಂತುಬಿಟ್ಟನು. ಕಲ್ಲುಗಳು ನೀರಿನಲ್ಲಿ ತೇಲಿದರೆ ಎಷ್ಟು ಅಚ್ಚರಿಯುಂಟಾಗುವುದೋ–ಅಂತಹುದೇ ಅಚ್ಚರಿಯನ್ನು ಆಗ ನಾವು ಕಂಡೆವು. ರಾಜಸತ್ತಮ! ಕೃಪರು ಶಿಖಂಡಿಯನ್ನು ಬಾಣಗಳಿಂದ ಮುಚ್ಚಿದುದನ್ನು ನೋಡಿ ಮಹಾರಥನಾದ ಧೃಷ್ಟದ್ಯುಮ್ನನು ಬಹಳಬೇಗ ಕೃಪರನ್ನು ಎದುರಿಸಿದನು. ಕೃಪರ ರಥದ ಬಳಿಗೆ ಧೃಷ್ಟದ್ಯುಮ್ನನು ರಭಸದಿಂದ ಹೋಗುತ್ತಿರುವುದನ್ನು ಕಂಡು ಮಹಾರಥನಾದ ಕೃತವರ್ಮನು ಶೀಘ್ರವಾಗಿ ಮುಂದೆ ಬಂದು ಧೃಷ್ಟದ್ಯುಮ್ನನನ್ನು ತಡೆದನು. ಮಕ್ಕಳೊಡನೆಯೂ ಮತ್ತು ಸೈನಿಕರೊಡನೆಯೂ ಯುಧಿಷ್ಠಿರನು ಕೃಪರ ರಥದ ಸಮೀಪಕ್ಕೆ ಬರುತ್ತಿರುವುದನ್ನು ನೋಡಿ ಅಶ್ವತ್ಥಾಮನು ಅವನನ್ನು ತಡೆದನು. ಮಹಾರಥರಾದ ನಕುಲ-ಸಹದೇವರು ಅವಸರದಿಂದ ಕೃಪರ ರಥದ ಬಳಿಗೆ ಬರುತ್ತಿರುವುದನ್ನು ನೋಡಿ ನಿನ್ನ ಮಗ ದುರ್ಯೋಧನನು ಬಾಣಗಳ ವರ್ಷದಿಂದ ಮುಂದೆ ಬರದಂತೆ ಅವರನ್ನು ತಡೆದು ನಿಲ್ಲಿಸಿದನು. ವೈಕರ್ತನಕರ್ಣನು ಕೃಪರ ರಥದ ಬಳಿಗೆ ಹೋಗುತ್ತಿದ್ದ ಭೀಮಸೇನನನ್ನೂ,

ಕರೂಷ-ಕೇಕಯ-ಸೃಂಜಯರನ್ನೂ ತಡೆದನು. ಇತ್ತಕಡೆ ಶರದ್ವಂತರ ಮಕ್ಕಳಾದ ಕೃಪರು ಶಿಖಂಡಿಯನ್ನು ದಹಿಸಿಬಿಡುವರೋ ಎಂಬಂತೆ ಬಹಳ ಅವಸರದಿಂದ ಅವನ ಮೇಲೆ ಬಾಣಗಳ ಮಳೆಗರೆಯುತ್ತಿದ್ದರು.

ವೀರನಾದ ಶಿಖಂಡಿಯು, ಕತ್ತಿಯನ್ನು ಪುನಃ ಪುನಃ ವರಸೆ-ವರಸೆಯಾಗಿ ತಿರುಗಿಸುತ್ತಾ ಕೃಪರು ಪ್ರಯೋಗಿಸುತ್ತಿದ್ದ, ಸ್ವರ್ಣಭೂಷಿತವಾಗಿದ್ದ, ಸುತ್ತಲೂ ಪುಂಖಾನುಪುಂಖವಾಗಿ ಬೀಳುತ್ತಿದ್ದ



ಬಾಣಗಳನ್ನು ಕತ್ತರಿಸಿಹಾಕುತ್ತಿದ್ದನು. ಅನಂತರ ಗೌತಮರು ಶಿಖಂಡಿಯ ಕೈಯಲ್ಲಿದ್ದ ನೂರು ಚಂದ್ರರ ಚಿಹ್ನೆಗಳಿಂದ ಕೂಡಿದ್ದ ಗುರಾಣಿಯನ್ನು ಬಾಣಗಳಿಂದ ಬಹಳ ಬೇಗ ಧ್ವಂಸಮಾಡಿದರು.

ಆ ಸಮಯದಲ್ಲಿ ಸುತ್ತಲೂ ಇದ್ದ ಜನರು ಗಟ್ಟಿಯಾಗಿ ಕೂಗಿಕೊಂಡರು. ರೋಗಿಯಾದವನು ಮೃತ್ಯುಮುಖನಾಗುವಂತೆ–ಗುರಾಣಿಯನ್ನು ಕಳೆದು ಕೊಂಡು ಕೃಪರ ವಶನಾದ ಶಿಖಂಡಿಯು ಖಡ್ಗಹಸ್ತನಾಗಿಯೇ ಕೃಪರ ಕಡೆಗೆ ನುಗ್ಗಿಹೋದನು. ಕೃಪಾಚಾರ್ಯರ ಬಾಣಗಳಿಗೆ ತುತ್ತಾಗಿ ಸಂಕಟಪಡುತ್ತಿದ್ದ ಶಿಖಂಡಿಯನ್ನು ನೋಡಿ ಮಹಾಬಲನಾದ, ಚಿತ್ರಕೇತುವಿನ ಮಗನಾದ ಸುಕೇತುವು ಅವಸರದಿಂದ ಕೃಪರನ್ನು ನಿಶಿತವಾದ ಅನೇಕಬಾಣಗಳಿಂದ ಆಚ್ಛಾದಿಸುತ್ತಾ ಕೃಪರ ರಥದ ಸಮೀಪಕ್ಕೆ ಧಾವಿಸಿದನು. ರಾಜಸತ್ತಮನೇ! ವ್ರತಾನುಷ್ಠಾನಪರರಾದ ಕೃಪರೊಡನೆ ಸುಕೇತುವು ಯುದ್ಧದಲ್ಲಿ ತೊಡಗಿರು ವುದನ್ನು ಕಂಡು ಶಿಖಂಡಿಯು ಬಹಳ ಬೇಗ ಅಲ್ಲಿಂದ ಹೊರಟುಹೋದನು. ಸುಕೇತುವಾದರೋ ಗೌತಮರನ್ನು ಒಂಬತ್ತು ಬಾಣಗಳಿಂದ ಪ್ರಹರಿಸಿ ಎಪ್ಪತ್ತು ಮೂರು ಬಾಣಗಳಿಂದ ಪುನಃ ಪ್ರಹರಿಸಿದನು. ಮರುಕ್ಷಣದಲ್ಲಿಯೇ ಸುಕೇತುವು ಬಾಣದಿಂದ ಯುಕ್ತವಾಗಿದ್ದ ಕೃಪರ ಧನುಸ್ಸನ್ನು ಕತ್ತರಿಸಿ ಅವರ ಸಾರಥಿಯನ್ನೂ ಮರ್ಮಸ್ಥಳದಲ್ಲಿ ಗಾಢವಾಗಿ ಪ್ರಹರಿಸಿ ಗಾಯಗೊಳಿಸಿದನು.

ಅದರಿಂದ ಪರಮಕ್ರುದ್ಧರಾದ ಕೃಪರು ನೂತನವಾದ ಮತ್ತು ದೃಢವಾದ ಧನುಸ್ಸನ್ನೆತ್ತಿಕೊಂಡು ಮೂವತ್ತು ಬಾಣಗಳಿಂದ ಸುಕೇತುವಿನ ಎಲ್ಲ ಮರ್ಮಸ್ಥಳಗಳಲ್ಲಿಯೂ ಪ್ರಹರಿಸಿದರು. ಅದರಿಂದಾಗಿ ಸುಕೇತುವಿನ ಎಲ್ಲ ಅಂಗಗಳಲ್ಲಿಯೂ ಬಾಧೆಯುಂಟಾಯಿತು. ಶ್ರೇಷ್ಠವಾದ ರಥದಲ್ಲಿ ಕುಳಿತಿದ್ದ ಸುಕೇತುವು –ಭೂಕಂಪದ ಸಮಯದಲ್ಲಿ ಭೂಮಿಯ ಮೇಲಿ ರುವ ವೃಕ್ಷಗಳು ಅಳ್ಳಾಡುವಂತೆ–ತರ-ತರನೆ ನಡುಗಿಬಿಟ್ಟನು. ಹೀಗೆ ನಡುಗುತ್ತಿದ್ದ ಸುಕೇತುವಿನ ಶರೀರದಿಂದ, ಪ್ರಜ್ವಲಿಸುವ ಕುಂಡಲಗಳನ್ನು ಹೊಂದಿದ್ದ, ಶಿರಸ್ತ್ರಾಣದಿಂದ ಶೋಭಾಯಮಾನವಾಗಿ ಕಾಣುತ್ತಿದ್ದ ತಲೆ ಯನ್ನು ಗೌತಮರು ಕ್ಷುರಪ್ರದಿಂದ ಬೇರ್ಪಡಿಸಿಬಿಟ್ಟರು. ಗಿಡಗಪಕ್ಷಿಯು ಕೊಕ್ಕಿನಿಂದ ಒಯ್ಯುತ್ತಿರುವ ಮಾಂಸದ ತುಂಡು ಕೆಳಕ್ಕೆ ಬೀಳುವಂತೆ–ಸುಕೇತುವಿನ ಶಿರಸ್ಸು ರಥದಿಂದ ಕೆಳಕ್ಕೆ ಬಿದ್ದಿತು. ಅನಂತರ ಅವನ ಶರೀರವೂ ನೆಲದಮೇಲೆ ಬಿದ್ದಿತು. ಮಹಾರಾಜ! ಸುಕೇತುವು ಹೀಗೆ

ಹತನಾಗಲಾಗಿ ಅವನ ಅನುಯಾಯಿಗಳಾಗಿದ್ದ ಸೈನಿಕರು ಕೃಪರನ್ನು ಅಲ್ಲಿಯೇ ಬಿಟ್ಟು ಓಡಿಹೋದರು.

ಮಹಾರಥನಾದ ಹೃಷ್ಟನಾದ ಕೃತವರ್ಮನು ಯುದ್ಧದಲ್ಲಿ ಧೃಷ್ಟದ್ಯುಮ್ನನನ್ನು ಮುಂದೆ ಹೋಗದಂತೆ ತಡೆದು ನಿಲ್ಲಿಸಿ, ನಿಲ್ಲು-ನಿಲ್ಲೆಂದು ಕೂಗಿದನು. ಮಾಂಸದ ತುಂಡಿನ ಸಲುವಾಗಿ ಎರಡು ಗಿಡಗಪಕ್ಷಿಗಳ ನಡುವೆ ಕಾಳಗವಾಗುವಂತೆ–ಕೃತವರ್ಮ-ಪಾರ್ಷತರ ನಡುವೆ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಕ್ರುದ್ಧನಾದ ಧೃಷ್ಟದ್ಯುಮ್ನನು ಹಾರ್ದಿಕ್ಯನನ್ನು ಒಂಬತ್ತು ಬಾಣಗಳಿಂದ ವಕ್ಷಃಸ್ಥಳದಲ್ಲಿ ಪ್ರಹರಿಸಿ ಅವನನ್ನು ಬಹುವಾಗಿ ಪೀಡಿಸಿದನು. ಪಾರ್ಷತನ ಬಾಣಗಳಿಂದ ಬಹಳವಾಗಿ ಗಾಯಗೊಂಡ ಹಾರ್ದಿಕ್ಯನು ರಥಾಶ್ವಸಹಿತನಾದ ಧೃಷ್ಟದ್ಯುಮ್ನನನ್ನು ಬಾಣಗಳಿಂದ ಆಚ್ಛಾದಿಸಿದನು. ನೀರಿನ ಧಾರೆಗಳನ್ನು ಸುರಿಸುವ ಕಾರ್ಮುಗಿಲುಗಳಿಂದ ಸೂರ್ಯನು ಆಚ್ಛಾದಿತನಾಗುವಂತೆ ಹಾರ್ದಿಕ್ಯನು ಬಿಟ್ಟ ಬಾಣಗಳಿಂದ ಆಚ್ಛಾದಿತನಾದ ಪಾರ್ಷತನು ಯಾರಿಗೂ ಕಾಣಿಸುತ್ತಲೇ ಇರಲಿಲ್ಲ. ಯದ್ಯಪಿ ಧೃಷ್ಟದ್ಯುಮ್ನನು, ಹಾರ್ದಿಕ್ಯನು ಬಿಟ್ಟ ಬಾಣಗಳಿಂದ ಬಹುವಾಗಿ ಗಾಯಗೊಂಡಿದ್ದರೂ, ಸುವರ್ಣದಿಂದ ವಿಭೂಷಿತವಾದ ಬಾಣಗಳಿಂದ ಹಾರ್ದಿಕ್ಯನು ಬಿಟ್ಟಿದ್ದ ಬಾಣಗಳ ಸಮೂಹವನ್ನು ನಿರಸನಗೊಳಿಸಿ ರಣರಂಗದಲ್ಲಿ ಬಹಳವಾಗಿ ಪ್ರಕಾಶಿಸಿದನು. ಅನಂತರ ಪಾಂಡವರ ಸೇನಾನಾಯಕನಾದ ಧೃಷ್ಟದ್ಯುಮ್ನನು ಪರಮಕ್ರುದ್ಧನಾಗಿ ಕೃತವರ್ಮನಮೇಲೆ ಸುದಾರುಣವಾದ ಶರವೃಷ್ಟಿಯನ್ನು ಸುರಿಸಿದನು. ಸುದಾರುಣವಾದ ಬಾಣಗಳ ಗುಂಪೇ ತನ್ನ ಮೇಲೆ ಬೀಳುತ್ತಿರುವುದನ್ನು ಕಂಡು ಕೃತವರ್ಮನು ಹಲವು ಸಾವಿರ ಬಾಣಗಳಿಂದ ಆ ಶರವೃಷ್ಟಿಯನ್ನು ಧ್ವಂಸಮಾಡಿ ಪುನಃ ಧೃಷ್ಟದ್ಯುಮ್ನನನ್ನು ಮುಂದೆ ಹೋಗದಂತೆ ತಡೆದು ನಿಲ್ಲಿಸಿದನು. ತಾನು ಪ್ರಯೋಗಿಸಿದ ದುರಾಸದವಾದ ಬಾಣಗಳ ವೃಷ್ಟಿಯನ್ನೂ ಹಾರ್ದಿಕ್ಯನು ನಿರಸನಗೊಳಿಸಿದುದನ್ನು ಕಂಡು ಧೃಷ್ಟದ್ಯುಮ್ನನು ಕೃತವರ್ಮನನ್ನು ಎದುರಿಸಿ ಪುನಃ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಲು ಉಪಕ್ರಮಿಸಿದನು. ಕ್ಷಣಮಾತ್ರದಲ್ಲಿ ಪಾರ್ಷತನು ಹಾರ್ದಿಕ್ಯನ ಸಾರಥಿಯನ್ನು ಯಮಾಲಯಕ್ಕೆ ಕಳುಹಿಸಿಕೊಟ್ಟನು. ನಿಶಿತವಾದ ಅಲುಗಿನಿಂದ ಕೂಡಿದ್ದ ಭಲ್ಲದಿಂದ ಹತನಾದ ಹಾರ್ದಿಕ್ಯನ ಸಾರಥಿಯು ರಥದಿಂದ ಕೆಳಕ್ಕೆ ಬಿದ್ದನು.

ಹಾರ್ದಿಕ್ಯನ ಕುದುರೆಗಳು (ರಥವನ್ನೆಳೆದುಕೊಂಡು ಓಡಿಹೋದುವು.)

ಹೀಗೆ ಬಲಿಷ್ಠನಾದ ಧೃಷ್ಟದ್ಯುಮ್ನನು ಮಹಾಬಲನಾದ ಹಾರ್ದಿಕ್ಯನನ್ನು ಜಯಿಸಿ ಬಹಳ ಬೇಗ ಕೌರವರನ್ನು ಬಾಣಗಳಿಂದ ತಡೆದು ನಿಲ್ಲಿಸಿದನು ಬಳಿಕ ನಿನ್ನ ಕಡೆಯ ಯೋಧರು ಗಟ್ಟಿಯಾಗಿ ಸಿಂಹನಾದಗಳನ್ನೂ ಮಾಡುತ್ತಾ ಧೃಷ್ಟದ್ಯುಮ್ನನನ್ನು ಆಕ್ರಮಿಸಿದರು. ಬಹಳ ಘೋರವಾದ ಯುದ್ಧವು ಪುನಃ ಪ್ರಾರಂಭವಾಯಿತು."

೫೪ನೆಯ ಅಧ್ಯಾಯವು ಮುಗಿಯಿತು.

೫೫ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಯುಧಿಷ್ಠಿರಾಶ್ವತ್ಥಾಮರ ಘೋರಯುದ್ಧ: ಅಶ್ವತ್ಥಾಮನು ಶೈನೇಯನ ಸಾರಥಿಯನ್ನು ಸಂಹರಿಸಿದುದು: ಯುಧಿಷ್ಠಿರನು ಅಶ್ವತ್ಥಾಮನನ್ನು ಬಿಟ್ಟು ಬೇರೆಯ ಕಡೆಗೆ ಹೊರಟುಹೋದುದು

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ಸಾತ್ಯಕಿಯಿಂದಲೂ, ಶೂರರಾದ ದ್ರೌಪದಿಯ ಮಕ್ಕಳಿಂದಲೂ ಯುಧಿಷ್ಠಿರನು ಸಂರಕ್ಷಿಸಲ್ಪಡುತ್ತಿದ್ದುದನ್ನು ನೋಡಿ ಅಶ್ವತ್ಥಾಮನು ಪರಮಹೃಷ್ಟನಾಗಿ ಯುಧಿಷ್ಠಿರನ ಕಡೆಗೆ ಧಾವಿಸಿದನು. ಮಹಾಸ್ತ್ರಗಳನ್ನು ತಿಳಿದಿದ್ದ ಅಶ್ವತ್ಥಾಮನು ಶೀಘ್ರಹಸ್ತನಂತೆ ವಿಧ-ವಿಧವಾದ ಶಸ್ತ್ರಸಂಚಾಲಮಾರ್ಗಗಳನ್ನೂ, ಅಸ್ತ್ರಶಿಕ್ಷೆಯಲ್ಲಿ ತನಗಿರುವ ಪ್ರಾವೀಣ್ಯವನ್ನೂ ಪ್ರದರ್ಶಿಸುತ್ತಾ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ಸುವರ್ಣದ ಮೂಲಭಾಗಗಳನ್ನು ಹೊಂದಿದ್ದ, ಮಹಾಘೋರವಾದ ಬಾಣಗಳ ಸಮೂಹಗಳನ್ನು ಸುತ್ತಲೂ ಸುರಿಸುತ್ತಾ ದಿವ್ಯಾಸ್ತ್ರದಿಂದ ಅಭಿಮಂತ್ರಿತವಾದ ಬಾಣಗಳಿಂದ ಯುಧಿಷ್ಠಿರನನ್ನು ನಿರೋಧಿಸಿ ಆಕಾಶವನ್ನೂ ಮುಚ್ಚಿಬಿಟ್ಟನು. ದ್ರೋಣಪುತ್ರನ ಬಾಣಗಳಿಂದ ತುಂಬಿಹೋಗಿದ್ದ ಆ ಸ್ಥಳದಲ್ಲಿ ಯಾವು ದೊಂದೂ ತಿಳಿಯುತ್ತಲೇ ಇರಲಿಲ್ಲ. ಯುದ್ಧವು ನಡೆಯುತ್ತಿದ್ದ ಆ ವಿಶಾಲವಾದ ಮೈದಾನವೇ ಬಾಣಮಯವಾಗಿಬಿಟ್ಟಿದ್ದಿತು.

ಅಂತರಿಕ್ಷದಲ್ಲಿ ವ್ಯಾಪ್ತವಾಗಿದ್ದ ಬಾಣಗಳ ಸಮೂಹವು ಸುವರ್ಣಜಾಲ ಗಳಿಂದ ವಿಭೂಷಿತವಾದ ಚಪ್ಪರದಂತೆಯೇ (ಮೇಲ್ಗಟ್ಟಿನಂತೆಯೇ) ಕಾಣುತ್ತಿದ್ದಿತು. ಪ್ರಕಾಶಮಾನವಾಗಿದ್ದ ಬಾಣಗಳ ಸಮೂಹದಿಂದ ಆಕಾಶವು ಮುಚ್ಚಿ ಹೋಗಿದ್ದಿತು. ಬಾಣಗಳಿಂದ ನೇಯಲ್ಪಟ್ಟಿದ್ದ ಆಕಾಶದಲ್ಲಿ ಮೇಘಗಳ ಛಾಯೆಯೇನಾದರೂ ಬಿದ್ದಿರುವುದೋ ಎಂಬಂತೆ ಕಾಣುತ್ತಿದ್ದಿತು. ಆ ರೀತಿಯಲ್ಲಿ ಬಾಣಮಯವಾಗಿದ್ದ ಆಕಾಶದಲ್ಲಿ ನಾವು ಒಂದು ಆಶ್ಚರ್ಯವನ್ನು ಕಂಡೆವು. ಬಾಣಗಳ ಜಾಲದಿಂದ ಆಕಾಶವು ಸಂಪೂರ್ಣವಾಗಿ ವ್ಯಾಪ್ತವಾಗಿದ್ದು ದರಿಂದ ಆ ಬಾಣಜಾಲದ ಮೇಲ್ಭಾಗದಲ್ಲಿದ್ದ ಆಕಾಶಚಾರಿಯಾದ ಯಾವ ಪ್ರಾಣಿಯೂ (ಪಕ್ಷಿಯೂ) ಕೆಳಕ್ಕೆ ಬರಲು ಸಾಧ್ಯವಾಗುತ್ತಲೇ ಇರಲಿಲ್ಲ. ಆ ಸಮಯದಲ್ಲಿ ಸಾತ್ಯಕಿಯಾಗಲೀ, ಧರ್ಮರಾಜನಾಗಲೀ, ಇತರ ಯಾವ ಸೈನಿಕರೇ ಆಗಲೀ, ಎಷ್ಟೇ ಪ್ರಯತ್ನಿಸಿದರೂ ಅಶ್ವತ್ಥಾಮನ ಮುಂದೆ ತಮ್ಮ ಪರಾಕ್ರಮವನ್ನು ತೋರಿಸಲು ಸಾಧ್ಯವಾಗಲಿಲ್ಲ. ದ್ರೋಣಪುತ್ರನ ಹಸ್ತಲಾಘವ ವನ್ನು ನೋಡಿ ಎಲ್ಲ ಮಹಾರಥರೂ ವಿಸ್ಮಿತರಾದರು. ತಾಪಯುಕ್ತನಾದ ಭಾಸ್ಕರನಂತಿದ್ದ ಅಶ್ವತ್ಥಾಮನನ್ನು ಆ ಸಮಯದಲ್ಲಿ ದಿಟ್ಟಿಸಿ ನೋಡಲು ಕೂಡ ಯಾವ ರಾಜರೂ ಸಮರ್ಥರಾಗಲಿಲ್ಲ. ಪಾಂಡವರ ಸೈನ್ಯವು ಅಶ್ವತ್ಥಾಮನಿಂದ ವಧಿಸಲ್ಪಡುತ್ತಿರಲಾಗಿ, ಮಹಾರಥರಾದ ದ್ರೌಪದಿಯ ಮಕ್ಕಳೂ, ಸಾತ್ಯಕಿ-ಧರ್ಮರಾಜರೂ, ಪಾಂಚಾಲರೂ ಒಟ್ಟಾಗಿ ಸೇರಿ ಘೋರವಾದ ಮೃತ್ಯುವಿನ ಭಯವನ್ನು ಸಂಪೂರ್ಣವಾಗಿ ಪರಿತ್ಯಜಿಸಿ (ಸಾವಿಗೆ ಹೆದರದೇ) ಅಶ್ವತ್ಥಾಮನನ್ನು ಆಕ್ರಮಿಸಿದರು. ಸಾತ್ಯಕಿಯು ಅಶ್ವತ್ಥಾಮನನ್ನು ಇಪ್ಪತ್ತೇಳು ಬಾಣಗಳಿಂದ ಪ್ರಹರಿಸಿ ಪುನಃ ಸ್ವರ್ಣಭೂಷಿತವಾಗಿದ್ದ ಏಳು ನಾರಾಚಗಳಿಂದಲೂ ಪ್ರಹರಿಸಿದನು.

ಅನಂತರ ಯುಧಿಷ್ಠಿರನು ಎಪ್ಪತ್ತುಮೂರು ಬಾಣಗಳಿಂದಲೂ, ಪ್ರತಿವಿಂಧ್ಯನು ಏಳು ಬಾಣಗಳಿಂದಲೂ, ಶ್ರುತಕರ್ಮನು ಮೂರು ಬಾಣ ಗಳಿಂದಲೂ, ಶ್ರುತಕೀರ್ತಿಯು ಏಳು ಬಾಣಗಳಿಂದಲೂ ಅಶ್ವತ್ಥಾಮನನ್ನು ಪ್ರಹರಿಸಿದರು. ಪಾಂಡವರ ಕಡೆಯ ಇನ್ನೂ ಅನೇಕ ವೀರಯೋಧರು ಅಶ್ವತ್ಥಾಮನನ್ನು ಎಲ್ಲ ಕಡೆಗಳಿಂದಲೂ ಪ್ರಹರಿಸುತ್ತಿದ್ದರು. ಅದರಿಂದ

ಕ್ರುದ್ಧನಾದ ದ್ರೌಣಿಯು ಸರ್ಪದಂತೆ ನಿಟ್ಟುಸಿರುಬಿಡುತ್ತಾ ಸಾತ್ಯಕಿಯನ್ನು ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದನು. ಶ್ರುತಕೀರ್ತಿಯನ್ನು ಒಂಬತ್ತು ಬಾಣಗಳಿಂದಲೂ, ಸುತಸೋಮನನ್ನು ಐದು ಬಾಣಗಳಿಂದಲೂ, ಶ್ರುತ ಕರ್ಮನನ್ನು ಎಂಟು ಬಾಣಗಳಿಂದಲೂ, ಪ್ರತಿವಿಂಧ್ಯನನ್ನು ಮೂರು ಬಾಣಗಳಿಂದಲೂ, ಶತಾನೀಕನನ್ನು ಒಂಬತ್ತು ಬಾಣಗಳಿಂದಲೂ, ಧರ್ಮ ಪುತ್ರನನ್ನು ಐದು ಬಾಣಗಳಿಂದಲೂ ಪ್ರಹರಿಸಿ, ಇತರ ಎಲ್ಲ ವೀರರನ್ನೂ ಎರಡೆರಡು ಬಾಣಗಳಿಂದ ಪ್ರಹರಿಸಿದನು. ಅನಂತರ ದ್ರೌಣಿಯು ನಿಶಿತವಾದ ಬಾಣಗಳಿಂದ ಶ್ರುತಕೀರ್ತಿಯ ಧನುಸ್ಸನ್ನೂ ಕತ್ತರಿಸಿದನು. ಬಳಿಕ ಮಹಾರಥ ನಾದ ಶ್ರುತಕೀರ್ತಿಯು ಮತ್ತೊಂದು ಧನುಸ್ಸನ್ನೆತ್ತಿಕೊಂಡು ದ್ರೌಣಾಯನಿ ಯನ್ನು ಮೂರು ಬಾಣಗಳಿಂದ ಪ್ರಹರಿಸಿ, ನಿಶಿತವಾದ ಇನ್ನೂ ಅನೇಕ ಬಾಣಗಳಿಂದಲೂ ಅವನನ್ನು ಗಾಯಗೊಳಿಸಿದನು. ಅನಂತರ ದ್ರೌಣಿಯು ಶರವೃಷ್ಟಿಯಿಂದ ಪಾಂಡವರ ಆ ಮಹಾಸೈನ್ಯವನ್ನು ಎಲ್ಲ ಕಡೆಗಳಿಂದಲೂ ಮುಚ್ಚಿಬಿಟ್ಟನು. ಮಹಾತ್ಮನಾದ ದ್ರೌಣಿಯು ಪುನಃ ಧರ್ಮರಾಜನ ಧನುಸ್ಸನ್ನು ಕತ್ತರಿಸಿ ಗಹ-ಗಹಿಸಿ ನಗುತ್ತಾ ಮೂರು ಬಾಣಗಳಿಂದ ಯುಧಿಷ್ಠಿರನನ್ನೂ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಧರ್ಮರಾಜನು ದೊಡ್ಡದಾಗಿದ್ದ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಎಪ್ಪತ್ತು ಬಾಣಗಳಿಂದ ದ್ರೌಣಿಯ ಬಾಹುಗಳನ್ನೂ ಮತ್ತು ವಕ್ಷಃಸ್ಥಳವನ್ನೂ ಗಾಯಗೊಳಿಸಿದನು. ಮಹಾಕ್ರುದ್ಧ ನಾಗಿದ್ದ ಸಾತ್ಯಕಿಯು ಹೀಗೆ ಸತತವಾಗಿ ಬಾಣಗಳಿಂದ ಪ್ರಹರಿಸುತ್ತಿದ್ದ ಅಶ್ವತ್ಥಾಮನ ಧನುಸ್ಸನ್ನು ಅರ್ಧಚಂದ್ರದಿಂದ ಕತ್ತರಿಸಿ ಸಿಂಹನಾದಮಾಡಿದನು. ಶಕ್ತಿವಂತರಲ್ಲಿ ಶ್ರೇಷ್ಠನಾದ ದ್ರೌಣಿಯು ಛಿನ್ನಧನ್ವನಾಗಲಾಗಿ ಮರುಕ್ಷಣ ದಲ್ಲಿಯೇ ಶಕ್ತ್ಯಾಯುಧದಿಂದ ಶೈನೇಯನ ಸಾರಥಿಯನ್ನು ಸಂಹರಿಸಿ ರಥದಿಂದ ಕೆಳಕ್ಕೆ ಬೀಳಿಸಿದನು. ಬಳಿಕ ಪ್ರತಾಪವಂತನಾದ ದ್ರೋಣಪುತ್ರನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಸಾತ್ಯಕಿಯನ್ನು ಬಾಣಗಳ ವೃಷ್ಟಿಯಿಂದ ಮುಚ್ಚಿದನು. ಸಾರಥಿಯು ಹತನಾಗಿ ರಥದಿಂದ ಬಿದ್ದುಹೋಗಲಾಗಿ ಸಾತ್ಯಕಿಯ ಕುದುರೆಗಳು ನಿಯಂತ್ರವೇ ಇಲ್ಲದ ಕಾರಣ ಓಡತೊಡಗಿದುವು. ಗೊತ್ತುಗುರಿಯಿಲ್ಲದೇ ಅವುಗಳು ರಣಾಂಗಣದಲ್ಲಿ ತಿರುಗಾಡುತ್ತಿದ್ದುದು ಕಾಣಬರುತ್ತಿದ್ದಿತು. ಅನಂತರ ಯುಧಿಷ್ಠಿರಪುರಃಸರರಾದ ವೀರರು ನಿಶಿತವಾದ ಬಾಣಗಳನ್ನು ವೇಗವಾಗಿ ಪ್ರಯೋಗಿಸುತ್ತಾ ಶಸ್ತ್ರಭೃತರಲ್ಲಿ

ಶ್ರೇಷ್ಠನಾದ ಅಶ್ವತ್ಥಾಮನನ್ನು ಬಾಣಗಳಿಂದಲೇ ಅಭಿಷೇಚಿಸಿಬಿಟ್ಟರು. ಕ್ರುದ್ಧರೂಪರಾಗಿದ್ದ ಯುಧಿಷ್ಠಿರಾದಿಗಳು ತನ್ನನ್ನು ಆಕ್ರಮಣ ಮಾಡುತ್ತಿರುವುದನ್ನು ಕಂಡು ಶತ್ರುತಾಪಕನಾದ ದ್ರೌಣಿಯು ನಗುತ್ತಲೇ ಆ ಮಹಾಸಂಗ್ರಾಮದಲ್ಲಿ ಅವರೆಲ್ಲರನ್ನೂ ಎದುರಿಸಿ ನಿಂತನು. ಅಗ್ನಿಯು ಅರಣ್ಯದಲ್ಲಿರುವ ಪೊದೆಯನ್ನು ದಹಿಸುವಂತೆ-ಮಹಾರಥನಾದ ಅಶ್ವತ್ಥಾಮನು ಜ್ವಾಲಾರೂಪವಾದ ನೂರಾರು ಬಾಣಗಳಿಂದ ಪೊದೆಯ ರೂಪದಲ್ಲಿದ್ದ ಪಾಂಡವರ ಸೈನ್ಯವನ್ನು ಯುದ್ಧದಲ್ಲಿ ದಹಿಸಿಬಿಟ್ಟನು.

ಅಶ್ವತ್ಥಾಮನಿಂದ ಸಂತಾಪಗೊಳಿಸಲ್ಪಡುತ್ತಿದ್ದ ಯುಧಿಷ್ಠಿರನ ಸೈನ್ಯವು ತಿಮಿಯೆಂಬ ಮಹಾಮತ್ಸ್ಯದಿಂದ ನದಿಯ ಮುಖಜಪ್ರದೇಶವು (ನದಿಯು ಸಮುದ್ರಕ್ಕೆ ಸೇರುವ ಸ್ಥಳವು) ಅಲ್ಲೋಲ-ಕಲ್ಲೋಲವಾಗುವಂತೆ, ಅಲ್ಲೋಲ-ಕಲ್ಲೋಲವಾಯಿತು. (ತಿಮಿಯು ನದಿಯ ಪ್ರವಾಹವನ್ನು ಅಲ್ಲೋಲ-ಕಲ್ಲೋಲಗೊಳಿಸುವಂತೆ ಅಶ್ವತ್ಥಾಮನು ಪಾಂಡವರ ಸೈನ್ಯವನ್ನು ಅಲ್ಲೋಲ-ಕಲ್ಲೋಲಗೊಳಿಸಿದನು.) ದ್ರೋಣಪುತ್ರನ ಪರಾಕ್ರಮವನ್ನು ನೋಡಿ ಪಾಂಡವರೆಲ್ಲರೂ ಅಶ್ವತ್ಥಾಮನಿಂದ ಹತರಾದರೆಂದೇ ಸೈನಿಕರು ಭಾವಿಸಿದರು. ದ್ರೋಣರ ಶಿಷ್ಯನಾದ, ಮಹಾರಥನಾದ, ಕೋಪ ಮತ್ತು ಅಸಹನೆಗಳಿಂದ ಕೂಡಿದ್ದ ಯುಧಿಷ್ಠಿರನು ಅತ್ಯಂತತ್ವರೆಯಿಂದ ದ್ರೋಣರ ಮಗನಾದ ಅಶ್ವತ್ಥಾಮನಿಗೆ ಹೇಳಿದನು:

**ನೈವ ನಾಮ ತವ ಪ್ರೀತಿರ್ನೈವ ನಾಮ ಕೃತಜ್ಞತಾ ।**
**ಯತಸ್ತ್ವಂ ಪುರುಷವ್ಯಾಘ್ರ ಮಾಮೇವಾದ್ಯ ಜಿಘಾಂಸಸಿ ॥೩೨॥**

"ಪುರುಷವ್ಯಾಘ್ರನೇ! ನೀನು ನನ್ನನ್ನು ಇಂದು ಸಂಹರಿಸಲು ಇಚ್ಛಿಸಿರುವೆಯಲ್ಲವೇ? ಈ ನಿನ್ನ ಪ್ರಯತ್ನವು ನಿನಗೆ ನಮ್ಮ ಮೇಲಿರುವ ಪ್ರೀತಿಯ ದ್ಯೋತಕವೂ ಅಲ್ಲ; ಕೃತಜ್ಞತೆಯ ದ್ಯೋತಕವೂ ಅಲ್ಲ. (ನಿನಗೆ ನಮ್ಮ ಮೇಲೆ ಪ್ರೀತಿಯೂ ಇಲ್ಲ; ಕೃತಜ್ಞತೆಯೂ ಇಲ್ಲ.)

**ಬ್ರಾಹ್ಮಣೇನ ತಪಃ ಕಾರ್ಯಂ ದಾನಮಧ್ಯಯನಂ ತಥಾ ।**
**ಕ್ಷತ್ರಿಯೇಣ ಧನುರ್ನಾಮ್ಯಂ ಸ ಭವಾನ್ಬ್ರಾಹ್ಮಣಬ್ರುವಃ ॥೩೩॥**

ತಪಸ್ಸು, ದಾನ ಮತ್ತು ಅಧ್ಯಯನಗಳು ಬ್ರಾಹ್ಮಣನು ಮಾಡಬೇಕಾದ ಕರ್ತವ್ಯಗಳಾಗಿವೆ. ಧನುಸ್ಸನ್ನು ಬಗ್ಗಿಸುವುದು ಕ್ಷತ್ರಿಯನ ಧರ್ಮ.

ಆದರೆ ನಿನ್ನ ವರ್ಣಕ್ಕೆ ವಿರುದ್ಧವಾದ ವೃತ್ತಿಯನ್ನೇ ನೀನು ಆಚರಿಸುತ್ತಿರುವುದರಿಂದ ನೀನು ನಾಮಮಾತ್ರಕ್ಕೆ ಬ್ರಾಹ್ಮಣನಾಗಿರುವೆ.

**ಮಿಷತಸ್ತೇ ಮಹಾಬಾಹೋ ಯುಧಿ ಜೇಷ್ಯಾಮಿ ಕೌರವಾನ್ ।**
**ಕುರುಷ್ವ ಸಮರೇ ಕರ್ಮ ಬ್ರಹ್ಮಬನ್ಧುರಸಿ ಧ್ರುವಮ್ ॥೩೪॥**

ಮಹಾಬಾಹುವೇ! ನೀನು ನಿಶ್ಚಯವಾಗಿಯೂ ಸ್ವಧರ್ಮಭ್ರಷ್ಟನಾದ ಬ್ರಾಹ್ಮಣನಾಗಿರುವೆ. ಈ ಮಹಾಸಮರದಲ್ಲಿ ನಿನ್ನ ಪರಾಕ್ರಮವನ್ನು ಪ್ರದರ್ಶಿಸು. ಚಿಂತೆಯಿಲ್ಲ. ಆದರೆ ನೀನು ನೋಡುತ್ತಿರುವಂತೆಯೇ ನಾನು ಯುದ್ಧದಲ್ಲಿ ಕೌರವರನ್ನು ಜಯಿಸುತ್ತೇನೆ."

ಮಹಾರಾಜ! ಯುಧಿಷ್ಠಿರನು ಹೀಗೆ ಹೇಳಲಾಗಿ ಅಶ್ವತ್ಥಾಮನು ನಸುನಕ್ಕನು. ಯುಧಿಷ್ಠಿರನು ಹೇಳಿದುದು ಯುಕ್ತಿಯುಕ್ತವೂ ಯಥಾರ್ಥವೂ ಆಗಿರುವುದೆಂಬುದನ್ನು ಪರ್ಯಾಲೋಚಿಸಿ ಅವನ ಮಾತಿಗೆ ಯಾವ ಉತ್ತರವನ್ನೂ ಕೊಡಲಿಲ್ಲ. ಪ್ರಳಯಕಾಲದಲ್ಲಿ ಕ್ರುದ್ಧನಾದ ಯಮನು ಪ್ರಜೆಗಳನ್ನು ಅದೃಶ್ಯಗೊಳಿಸುವಂತೆ–ಅಶ್ವತ್ಥಾಮನು ಯುಧಿಷ್ಠಿರನೊಡನೆ ಯಾವ ಮಾತನ್ನೂ ಆಡದೆ ಬಾಣಗಳ ಮಳೆಯಿಂದ ಯುಧಿಷ್ಠಿರನನ್ನು ಮುಚ್ಚಿಬಿಟ್ಟನು. ದ್ರೋಣಪುತ್ರನ ಬಾಣಗಳಿಂದ ಆಚ್ಛಾದಿತನಾದ ಯುಧಿಷ್ಠಿರನು ತನ್ನ ಮಹಾಸೈನ್ಯವನ್ನು ಅಲ್ಲಿಯೇ ಬಿಟ್ಟು ಶೀಘ್ರವಾಗಿ ಹೊರಟುಹೋದನು. ಧರ್ಮಪುತ್ರನಾದ ಯುಧಿಷ್ಠಿರನು ರಣಾಂಗಣದಿಂದ ಹೊರಟುಹೋಗಲಾಗಿ ಮಹಾತ್ಮನಾದ ದ್ರೋಣಪುತ್ರನು ಬೇರೆಯ ಹಾದಿಯನ್ನು ಹಿಡಿದು ಹೊರಟುಹೋದನು. ಅನಂತರ ಯುಧಿಷ್ಠಿರನು ಕ್ರೂರಕರ್ಮದಲ್ಲಿಯೇ (ಸಂಹಾರಕಾರ್ಯದಲ್ಲಿಯೇ) ಆಸಕ್ತಚಿತ್ತನಾಗಿ ಅಶ್ವತ್ಥಾಮನನ್ನು ತ್ಯಜಿಸಿ ನಿನ್ನ ಸೈನ್ಯದ ಕಡೆಗೆ ಧಾವಿಸಿದನು.

೫೫ನೆಯ ಅಧ್ಯಾಯವು ಮುಗಿಯಿತು.

೫೭ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ)

## ನಕುಲ-ಸಹದೇವರೊಡನೆ ದುರ್ಯೋಧನನ ಯುದ್ಧ: ಧೃಷ್ಟದ್ಯುಮ್ನನಿಂದ ದುರ್ಯೋಧನನ ಪರಾಜಯ: ಕರ್ಣನಿಂದ ಪಾಂಚಾಲಯೋಧರ ಸಂಹಾರ: ಭೀಮಸೇನನಿಂದ ಕೌರವಯೋಧರ ಸಂಹಾರ: ಅರ್ಜುನನಿಂದ ಸಂಶಪ್ತಕರ ವಧೆ: ಅಶ್ವತ್ಥಾಮನು ಅರ್ಜುನನೊಡನೆ ಯುದ್ಧಮಾಡಿ ಪರಾಜಿತನಾದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ವೈಕರ್ತಕರ್ಣನು ಧೃಷ್ಟದ್ಯುಮ್ನಸಹಿತನಾದ, ಚೇದಿ-ಕೇಕಯ ಯೋಧರಿಂದ ಸಮಾವೃತನಾಗಿದ್ದ ಭೀಮಸೇನನನ್ನು ತಾನೇ ಬಾಣಗಳಿಂದ ಪ್ರತಿರೋಧಿಸಿ ಅವನು ಮುನ್ನಡೆಯದಂತೆ ಮಾಡಿದನು. ಅನಂತರ ಭೀಮಸೇನನು ನೋಡುತ್ತಿದ್ದಂತೆಯೇ ಕರ್ಣನು ಚೇದಿ-ಕಾರೂಷ-ಸೃಂಜಯಮಹಾರಥರನ್ನು ಸಂಹರಿಸಲು ಉಪಕ್ರಮಿಸಿದನು. ಅದಕ್ಕೆ ಪ್ರತಿಯಾಗಿ ಭೀಮಸೇನನು ಕರ್ಣನನ್ನು ಅಲ್ಲಿಯೇ ಬಿಟ್ಟು ಅಗ್ನಿಯು ಹುಲ್ಲಿನ ಮೆದೆಯನ್ನು ಪ್ರವೇಶಿಸುವಂತೆ–ಕೌರವಯೋಧರನ್ನು ದಹಿಸುವ ಸಲುವಾಗಿ ಯಜ್ಞೇಶ್ವರನಂತೆಯೇ ಪ್ರಜ್ವಲಿಸುತ್ತಾ ಕೌರವರ ಸೈನ್ಯದ ಬಳಿಗೆ ಹೋದನು. ಕರ್ಣನು ರಕ್ಷಕರೇ ಇಲ್ಲದಿದ್ದ ಮಹಾಧನುಷ್ಮಂತರಾದ ಪಾಂಚಾಲ-ಕೇಕಯ-ಸೃಂಜಯರನ್ನು ಸಾವಿರಾರು ಸಂಖ್ಯೆಯಲ್ಲಿ ಸಂಹರಿಸಿದನು. ಸಂಶಪ್ತಕರಲ್ಲಿ ಪಾರ್ಥನೂ, ಕೌರವಸೈನ್ಯದಲ್ಲಿ ವೃಕೋದರನೂ, ಪಾಂಚಾಲ ಸೈನ್ಯದಲ್ಲಿ ಕರ್ಣನೂ ಅತ್ಯಧಿಕವಾದ ಸೈನ್ಯಕ್ಷಯವನ್ನುಂಟುಮಾಡಿದರು.

ಮಹಾರಾಜ! ನಿನ್ನ ದುರಾಲೋಚನೆಯ ಕಾರಣದಿಂದಾಗಿ ಆ ಎಲ್ಲ ಕ್ಷತ್ರಿಯರೂ-ಪಾವಕೋಪಮರಾದ ಆ ಮೂವರಿಂದ (ಭೀಮಾರ್ಜುನ-ಕರ್ಣರಿಂದ) ಯುದ್ಧದಲ್ಲಿ ದಹಿಸಲ್ಪಟ್ಟವರಾಗಿ ವಿನಾಶಹೊಂದಿದರು. ಮತ್ತೊಂದು ವಿಭಾಗದಲ್ಲಿ ಕ್ರುದ್ಧನಾದ ದುರ್ಯೋಧನನು ನಕುಲನನ್ನು ಒಂಬತ್ತು ಬಾಣಗಳಿಂದ ಪ್ರಹರಿಸಿ ಅವನ ನಾಲ್ಕು ಕುದುರೆ

ಗಳನ್ನೂ ಗಾಯಗೊಳಿಸಿದನು. ಬಳಿಕ ಮಹಾತ್ಮನಾದ ನಿನ್ನ ಮಗನು ಕ್ಷುರದಿಂದ ಸಹದೇವನ ಸ್ವರ್ಣಮಯವಾದ ಧ್ವಜವನ್ನು ಕತ್ತರಿಸಿದನು.

ಅದಕ್ಕೆ ಪ್ರತಿಯಾಗಿ ಕ್ರುದ್ಧನಾದ ನಕುಲನು ನಿನ್ನ ಮಗನನ್ನು ಏಳು ಬಾಣಗಳಿಂದ ಪ್ರಹರಿಸಿದನು. ಸಹದೇವನೂ ಸಹ ಐದು ಬಾಣಗಳಿಂದ ದುರ್ಯೋಧನನನ್ನು ಪ್ರಹರಿಸಿದನು. ಅದರಿಂದ ಪರಮಕ್ರುದ್ಧನಾದ ದುರ್ಯೋಧನನು ಧನುಷ್ಮಂತರೆಲ್ಲರಿಗೂ ಶ್ರೇಷ್ಠರಾದ ಭರತಕುಲ ಪುಂಗವರಾದ ನಕುಲ-ಸಹದೇವರನ್ನು ಐದೈದು ಬಾಣಗಳಿಂದ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಮತ್ತೆರಡು ಬಾಣಗಳಿಂದ ಅವರ ಧನುಸ್ಸುಗಳನ್ನೂ ಕತ್ತರಿಸಿ, ಪುನಃ ಇಬ್ಬರನ್ನೂ ಇಪ್ಪತ್ತೊಂದು ಬಾಣಗಳಿಂದ ಗಾಯಗೊಳಿಸಿದನು. ಮರುಕ್ಷಣದಲ್ಲಿಯೇ ನಕುಲ-ಸಹದೇವರು ಇಂದ್ರನ ಧನುಸ್ಸಿಗೆ ಅನುರೂಪ ವಾಗಿದ್ದ ಶ್ರೇಷ್ಠವಾದ ಎರಡು ಧನುಸ್ಸುಗಳನ್ನು ಕೈಗೆತ್ತಿಕೊಂಡು ದೇವಕುಮಾರ ರಂತೆಯೇ ಆ ರಣಾಂಗಣದಲ್ಲಿ ಪ್ರಕಾಶಿಸಿದರು. ವೇಗವಂತರಾದ ಆ ಇಬ್ಬರು ಸಹೋದರರೂ ಅಣ್ಣನಾದ ದುರ್ಯೋಧನನನ್ನು-ಎರಡು ಮಹಾಮೇಘಗಳು ಪರ್ವತವನ್ನು ನೀರಿನಿಂದ ತೋಯಿಸುವಂತೆ–ಬಾಣಗಳಿಂದ ಅಭಿಷೇಚಿಸಿ ದರು. ಬಳಿಕ ಕ್ರುದ್ಧನಾದ ನಿನ್ನ ಮಗನು ಮಹಾಧನುಷ್ಮಂತರಾದ, ಪಾಂಡುವಿನ ಮಕ್ಕಳಾದ ನಕುಲ-ಸಹದೇವರನ್ನು ನಿಶಿತವಾದ ಬಾಣಗಳಿಂದ ಮುಂದಕ್ಕೆ ಬಾರದಂತೆ ತಡೆದನು. ಆ ಸಮಯದಲ್ಲಿ ದುರ್ಯೋಧನನ ಧನುಸ್ಸು ಕೇವಲ ಮಂಡಲಾಕಾರವಾಗಿ ಮಾತ್ರವೇ ಕಾಣಿಸುತ್ತಿದ್ದಿತು. ಮಂಡಲಾಕಾರವಾಗಿದ್ದ ಧನುಸ್ಸಿನ ಮೂಲಕವಾಗಿ ಬಾಣಗಳು ಪುಂಖಾನುಪುಂಖವಾಗಿ ಹೊರಬರುತ್ತಿ ದ್ದುದು ಕಾಣಿಸುತ್ತಿದ್ದಿತು. ಹೀಗೆ ಧನುರ್ಮಂಡಲದಿಂದ ಹೊರಬಂದ ಬಾಣಗಳು ಸೂರ್ಯಮಂಡಲದಿಂದ ಹೊರಬಂದ ಕಿರಣಗಳಂತೆ ಎಲ್ಲ ದಿಕ್ಕುಗಳನ್ನೂ ವ್ಯಾಪಿಸಿದುವು. ಎಲ್ಲ ದಿಕ್ಕುಗಳೂ ಬಾಣಮಯವಾದುವು. ಆ ಬಾಣಗಳ ಸಮೂಹಗಳಿಂದ ಆಕಾಶವೂ ಮುಚ್ಚಿಹೋಯಿತು. ಆಗ ನಕುಲ-ಸಹದೇವರಿಗೆ ದುರ್ಯೋಧನನ ಸ್ವರೂಪವು ಕಾಲಾಂತಕ-ಯಮರಂತೆಯೇ ಕಂಡಿತು. ಆ ಸಮಯದಲ್ಲಿ ಅಲ್ಲಿದ್ದ ಮಹಾರಥರು ನಿನ್ನ ಮಗನ ಅದ್ಭುತ ಪರಾಕ್ರಮವನ್ನು ನೋಡಿ ಮಾದ್ರಿಯ ಮಕ್ಕಳಾದ ನಕುಲ-ಸಹದೇವರು ಮೃತ್ಯುಮುಖವನ್ನೈದಿದರೆಂದೇ ಭಾವಿಸಿದರು. ಆ ವೇಳೆಗೆ ಸರಿಯಾಗಿ

ಯುಧಿಷ್ಠಿರನ ಸೇನಾಪತಿಯಾದ ಧೃಷ್ಟದ್ಯುಮ್ನನು ದುರ್ಯೋಧನನಿದ್ದೆಡೆಗೆ ಬಂದನು. ಧೃಷ್ಟದ್ಯುಮ್ನನು, ಮಹಾರಥರಾದ, ಶೂರರಾದ ನಕುಲ- ಸಹ ದೇವರನ್ನು ಅತಿಕ್ರಮಿಸಿ ಮುಂದೆ ಹೋಗಿ ನಿನ್ನ ಮಗನನ್ನು ಬಾಣಗಳಿಂದ ತಡೆದು ನಿಲ್ಲಿಸಿದನು. ಆತ್ಮಬಲಸಂಪನ್ನನಾದ, ಅಸಹನಶೀಲನಾದ ನಿನ್ನ ಮಗನು ನಗು-ನಗುತ್ತಲೇ ಧೃಷ್ಟದ್ಯುಮ್ನನನ್ನು ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದನು. ಅಸಹನಶೀಲನಾದ ಮತ್ತು ಅಮೇಯಾತ್ಮನಾದ, ನಿನ್ನ ಮಗನು ಪುನಃ ಪಾಂಚಾಲ್ಯನನ್ನು ಅರುವತ್ತೈದು ಬಾಣಗಳಿಂದ ಪ್ರಹರಿಸಿ ಗಟ್ಟಿಯಾಗಿ ಗರ್ಜನೆಮಾಡಿದನು. ಪುನಃ ದೃಪ್ತನಾದ ದುರ್ಯೋಧನರಾಜನು ಸುತೀಕ್ಷ್ಣ ವಾದ ಕ್ಷುರಪ್ರದಿಂದ, ಬಾಣದಿಂದ ಯುಕ್ತವಾಗಿದ್ದ ಧೃಷ್ಟದ್ಯುಮ್ನನ ಧನುಸ್ಸನ್ನೂ, ಕೈಚೀಲವನ್ನೂ ಕತ್ತರಿಸಿದನು. ಶತ್ರುಸೂದನನಾದ ಪಾಂಚಾಲ್ಯನು ಭಿನ್ನವಾದ ಧನುಸ್ಸನ್ನು ಬಿಸುಟು ಭಾರವನ್ನು (ಬಲವನ್ನು) ಸಹಿಸುವ ಹೊಸದಾದ ಮತ್ತೊಂದು ಧನುಸ್ಸನ್ನು ಬಹಳ ಬೇಗ ಕೈಗೆತ್ತಿಕೊಂಡನು. ಆ ಸಮಯದಲ್ಲಿ ಧೃಷ್ಟದ್ಯುಮ್ನನ ಶರೀರಾದ್ಯಂತವಾಗಿ ಗಾಯಗಳಾಗಿದ್ದುವು. ಕೋಪದಿಂದ ಅವನ ಕಣ್ಣುಗಳು ಕೆಂಪಾಗಿದ್ದುವು. ಮಹಾಧನುಷ್ಮಂತನಾದ ಧೃಷ್ಟದ್ಯುಮ್ನನು ಜಾಜ್ವಲ್ಯಮಾನನಾಗಿ ಉರಿಯುವ ಅಗ್ನಿದೇವನಂತೆಯೇ ಪ್ರಕಾಶಿಸುತ್ತಿದ್ದನು. ಧೃಷ್ಟದ್ಯುಮ್ನನು ಭರತಶ್ರೇಷ್ಠನಾದ ದುರ್ಯೋಧನನನ್ನು ಸಂಹರಿಸುವ ಇಚ್ಛೆಯಿಂದ ಬುಸುಗುಟ್ಟುತ್ತಿರುವ ಸರ್ಪಗಳಂತೆಯೇ ಇದ್ದ ಹದಿನೈದು ನಾರಾಚಗಳನ್ನು ಪ್ರಯೋಗಿಸಿದನು. ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ರಣಹದ್ದಿನ ರೆಕ್ಕೆಗಳನ್ನೇ ವಸ್ತ್ರರೂಪದಲ್ಲಿ ಹೊಂದಿದ್ದ ಧೃಷ್ಟದ್ಯುಮ್ನಪ್ರಮುಕ್ತವಾದ ಬಾಣಗಳು ರಾಜನ ಸುವರ್ಣಮಯವಾದ ಕವಚವನ್ನು ಭೇದಿಸಿ ಹೊರಬಂದು ಬಹಳ ವೇಗದಿಂದ ಭೂಮಿಯನ್ನು ಹೊಕ್ಕುವು. ಅದರಿಂದ ಬಹಳವಾಗಿ ಗಾಯಗೊಂಡ ನಿನ್ನ ಮಗನು– ವಸಂತಕಾಲದಲ್ಲಿ ಪುಷ್ಪಿತವಾದ ಮುತ್ತುಗದ ಮರದಂತೆಯೇ ಪ್ರಕಾಶಿಸಿದನು. ಭಿನ್ನವಾಗಿಹೋಗಿದ್ದ ಕವಚವುಳ್ಳವನಾಗಿದ್ದ ದುರ್ಯೋಧನನು ನಾರಾಚಗಳ ಪ್ರಹಾರದಿಂದ ಜರ್ಝರಿತನಾದನು. ಅದರಿಂದ ಅತ್ಯಂತಕ್ರುದ್ಧನಾದ ದುರ್ಯೋಧನನು ಭಲ್ಲದಿಂದ ಧೃಷ್ಟದ್ಯುಮ್ನನ ಧನುಸ್ಸನ್ನು ಕತ್ತರಿಸಿದನು. ಮರುಕ್ಷಣದಲ್ಲಿಯೇ ದುರ್ಯೋಧನನು ಬಹಳತ್ವರೆಯಿಂದ, ಧನುಸ್ಸನ್ನು

ಕಳೆದುಕೊಂಡಿದ್ದ ಧೃಷ್ಟದ್ಯುಮ್ನನ ಹುಬ್ಬುಗಳ ನಡುಭಾಗವನ್ನು ಹತ್ತು ಬಾಣಗಳಿಂದ ಪ್ರಹರಿಸಿದನು. ಮಧುವನ್ನಪೇಕ್ಷಿಸುವ ದುಂಬಿಗಳು ವಿಕಸಿತ ವಾದ ಕಮಲವನ್ನು ಮುತ್ತಿಕೊಂಡು ಕಮಲಗಳನ್ನೇ ಪ್ರಕಾಶಗೊಳಿಸುವಂತೆ-ಕಮ್ಮಾರನಿಂದ ಹದಮಾಡಲ್ಪಟ್ಟಿದ್ದ ದುರ್ಯೋಧನಪ್ರಮುಕ್ತವಾದ ಹತ್ತು ಬಾಣಗಳು ಧೃಷ್ಟದ್ಯುಮ್ನನ ಮುಖವನ್ನು ಪ್ರಕಾಶಗೊಳಿಸಿದುವು.

ಮಹಾತ್ಮನಾದ ಧೃಷ್ಟದ್ಯುಮ್ನನು ದುರ್ಯೋಧನನಿಂದ ಕತ್ತರಿಸಲ್ಪಟ್ಟ ಧನುಸ್ಸನ್ನು ಬಿಸುಟು ಬಹಳ ಬೇಗ ಮತ್ತೊಂದು ಧನುಸ್ಸನ್ನೂ ಮತ್ತು ಹದಿ ನಾರು ಭಲ್ಲಗಳನ್ನೂ ಕೈಗೆತ್ತಿಕೊಂಡನು. ಮರುಕ್ಷಣದಲ್ಲಿಯೇ ಧೃಷ್ಟದ್ಯುಮ್ನನು ಐದು ಭಲ್ಲಗಳಿಂದ ದುರ್ಯೋಧನನ ನಾಲ್ಕು ಕುದುರೆಗಳನ್ನೂ ಮತ್ತು ಸಾರಥಿಯನ್ನೂ ಸಂಹರಿಸಿ, ಆರನೆಯ ಭಲ್ಲದಿಂದ ಸುವರ್ಣಭೂಷಿತವಾದ ದುರ್ಯೋಧನನ ಧನುಸ್ಸನ್ನೂ ಕತ್ತರಿಸಿದನು. ಉಳಿದ ಹತ್ತು ಭಲ್ಲಗಳಿಂದ ಯುದ್ಧಸಾಮಗ್ರಿಗಳಿಂದ ಯುಕ್ತವಾದ ನಿನ್ನ ಪುತ್ರನ ರಥವನ್ನೂ, ಛತ್ರವನ್ನೂ, ಶಕ್ತ್ಯಾಯುಧವನ್ನೂ, ಖಡ್ಗವನ್ನೂ, ಗದೆಯನ್ನೂ ಮತ್ತು ಧ್ವಜವನ್ನೂ ಕತ್ತರಿಸಿದನು. ಚಿನ್ನದ ಅಂಗದದಿಂದ ವಿಭೂಷಿತವಾಗಿದ್ದ, ನಾಗದ ಚಿಹ್ನೆ ಯಿಂದ ಕೂಡಿದ್ದ, ಮಣಿಮಯವಾದ, ಶುಭಾವಹವಾದ, ಕುರುಪತಿಯಾದ ದುರ್ಯೋಧನನ ಧ್ವಜವು ಧೃಷ್ಟದ್ಯುಮ್ನನ ಭಲ್ಲದಿಂದ ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದುದನ್ನು ಎಲ್ಲ ರಾಜರೂ ನೋಡಿದರು. ರಥ-ಕವಚಾಯುಧಗಳಿಂದ ವಿಹೀನನಾಗಿದ್ದ ದುರ್ಯೋಧನನನ್ನು ಅವನ ಒಡಹುಟ್ಟಿದ ಸಹೋದರರು ಎಲ್ಲ ಕಡೆಗಳಿಂದಲೂ ಸಂರಕ್ಷಿಸುತ್ತಿದ್ದರು. ದಂಡಧಾರನು ಸ್ವಲ್ಪವಾದರೂ ಗಾಬರಿಗೊಳ್ಳದೇ ನರಾಧಿಪನಾದ ದುರ್ಯೋಧನನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಧೃಷ್ಟದ್ಯುಮ್ನನು ನೋಡುತ್ತಿದ್ದಂತೆಯೇ ರಣಭೂಮಿಯಿಂದ ಬಹಳ ದೂರಕ್ಕೆ ಒಯ್ದುಬಿಟ್ಟನು.

ಇತ್ತಲಾಗಿ ದುರ್ಯೋಧನನ ಹಿತಾಕಾಂಕ್ಷಿಯಾದ, ಮಹಾಬಲ ನಾದ ಕರ್ಣನು ಸಾತ್ಯಕಿಯನ್ನು ಜಯಿಸಿ ಭಯಂಕರವಾದ ಬಾಣಗಳನ್ನು

ಹೊಂದಿದ್ದ ದ್ರೋಣರ ಹಂತಕನಾದ ಧೃಷ್ಟದ್ಯುಮ್ನನಿಗೆ ಅಭಿಮುಖವಾಗಿ ಹೋದನು. ಮದಿಸಿದ ಆನೆಯು ತನ್ನೆರಡು ದಂತಗಳಿಂದಲೂ ಮತ್ತೊಂದು ಆನೆಯ ಸೊಂಟದ ಪ್ರದೇಶದಲ್ಲಿ ಹಿಂಬದಿಯಿಂದ ತಿವಿಯುವಂತೆ–ಶೈನೇಯನು ಬಾಣಗಳಿಂದ ಕರ್ಣನನ್ನು ಪೀಡಿಸುತ್ತಾ ಅವನ ಹಿಂದೆಯೇ ಹೋಗುತ್ತಿದ್ದನು. ಕರ್ಣ-ಧೃಷ್ಟದ್ಯುಮ್ನರ ಮಧ್ಯಭಾಗದಲ್ಲಿದ್ದ ನಿನ್ನ ಕಡೆಯ ಯೋಧರಿಗೂ ಮತ್ತು ಮಹಾತ್ಮರಾದ ಪಾಂಡವರ ಕಡೆಯ ಯೋಧರಿಗೂ ಭಯಂಕರವಾದ ಮಹಾಯುದ್ಧವು ನಡೆಯಿತು. ಆ ಸಮಯದಲ್ಲಿ ಪಾಂಡವರ ಕಡೆಯಲ್ಲಾಗಲೀ, ನಮ್ಮ ಕಡೆಯಲ್ಲಾಗಲೀ ಯಾವ ಯೋಧನೂ ಪರಾಙ್ಮುಖನಾದುದು ಕಂಡುಬರಲಿಲ್ಲ. ಅನಂತರ ಕರ್ಣನು ಪಾಂಚಾಲರ ಮೇಲೆ ಆಕ್ರಮಣನಡೆಸಿದನು. ಮಧ್ಯಾಹ್ನದ ಆ ಸಮಯದಲ್ಲಿ ಎರಡೂ ಪಕ್ಷಗಳಲ್ಲಿ ಗಜಾಶ್ವ-ಮನುಷ್ಯರ ವಿನಾಶವು ಪ್ರಾರಂಭವಾಯಿತು. ವಿಜಯವನ್ನು ಗಳಿಸಬೇಕೆಂದು ಇಚ್ಛಿಸಿದ್ದ ಪಾಂಚಾಲರು ಪಕ್ಷಿಗಳು ವೃಕ್ಷವನ್ನು ಸೇರಿಕೊಳ್ಳುವಂತೆ–ಬಹಳ ಬೇಗ ಕರ್ಣನ ಮೇಲೆ ಎರಗಿದರು. ಕರ್ಣನು ವಿಜಯಗಳಿಸಲು ಸತತವಾಗಿ ಪ್ರಯತ್ನಿಸುತ್ತಿದ್ದ, ಮನಸ್ವಿಗಳಾಗಿದ್ದ ಮತ್ತು ಪಾಂಚಾಲರಲ್ಲಿ ಅಗ್ರಗಾಮಿಗಳಾಗಿದ್ದ ಯೋಧರನ್ನು ಆಯ್ದಾಯ್ದುಕೊಂಡು ಬಾಣಗಳ ಸಮೂಹಗಳಿಂದ ಸಂಹರಿಸಲು ಉಪಕ್ರಮಿಸಿದನು. ವ್ಯಾಘ್ರಕೇತು, ಸುಶರ್ಮಾ, ಚಿತ್ರ, ಉಗ್ರಾಯುಧ, ಜಯ, ಶುಕ್ಲ, ರೋಚಮಾನ, ದುರ್ಜಯನಾದ ಸಿಂಹಸೇನ ಈ ವೀರರು ರಥಮಾರ್ಗದಿಂದ ನರೋತ್ತಮನಾದ, ಕ್ರುದ್ಧನಾದ, ಅಹವಶೋಭಿಯಾದ, ಬಾಣಗಳನ್ನು ಅವ್ಯಾಹತವಾಗಿ ಸೃಷ್ಟಿಸುತ್ತಿದ್ದ ಕರ್ಣನನ್ನು ಸುತ್ತುವರಿದರು.

ಪ್ರತಾಪವಂತನಾದ, ರಾಧೆಯ ಮಗನಾದ ಕರ್ಣನು ದೂರದಲ್ಲಿ ನಿಂತು ಯುದ್ಧಮಾಡುತ್ತಿದ್ದ ಎಂಟು ಮಂದಿ ವೀರರನ್ನೂ ನಿಶಿತವಾದ ಎಂಟು ಬಾಣಗಳಿಂದ ಗಾಯಗೊಳಿಸಿದನು. ಬಳಿಕ ಪ್ರತಾಪವಂತನಾದ ಸೂತಪುತ್ರನು ಯುದ್ಧವಿಶಾರದರಾದ ಅನೇಕಸಹಸ್ರಯೋಧರನ್ನೂ ಸಂಹರಿಸಿದನು. ಪರಮಕ್ರುದ್ಧನಾಗಿದ್ದ ಕರ್ಣನು ರಣರಂಗದಲ್ಲಿ ಚೇದಿದೇಶದ ಮಹಾರಥರಾದ ಜಿಷ್ಣು, ಜಿಷ್ಣುಕರ್ಮಾ, ದೇವಾಪಿ, ಭದ್ರ, ದಂಡ, ಚಿತ್ರ, ಚಿತ್ರಾಯುಧ, ಹರಿ, ಸಿಂಹಕೇತು, ರೋಚಮಾನ ಮತ್ತು ಮಹಾರಥಿ

ಯಾದ ಶಲಭ–ಇವರನ್ನೂ ಸಂಹರಿಸಿದನು. ಸಾವಿರಾರು ಮಹಾವೀರರ ಪ್ರಾಣಗಳನ್ನು ಬಾಣಗಳ ಮೂಲಕವಾಗಿ ಹೀರುತ್ತಿದ್ದ ಸಮಯದಲ್ಲಿ ರಕ್ತದಿಂದ ತೋಯ್ದುಹೋಗಿದ್ದ ಕರ್ಣನ ಶರೀರವು ಪ್ರಳಯಕಾಲದಲ್ಲಿ ಪ್ರಾಣಿಗಳನ್ನು ಸಂಹಾರಮಾಡುವ ರುದ್ರನ ವಿಶಾಲವಾದ ಶರೀರದಂತೆಯೇ ದೇದೀಪ್ಯಮಾನವಾಗಿ ಕಾಣುತ್ತಿದ್ದಿತು. ಕರ್ಣನ ಬಾಣಗಳಿಂದ ಪ್ರಹೃತವಾದ



ಹಲವು ಆನೆಗಳು ಭಯಗೊಂಡು ಎಲ್ಲ ಸೈನಿಕರಿಗೂ ವ್ಯಾಕುಲವನ್ನುಂಟುಮಾಡುತ್ತಾ ದಿಕ್ಕು-ದಿಕ್ಕುಗಳಿಗೂ ಓಡಿಹೋಗುತ್ತಿದ್ದುವು.

ಕೆಲವು ಆನೆಗಳು ಕರ್ಣನ ಬಾಣಗಳಿಂದ ಪೀಡಿಸಲ್ಪಟ್ಟವುಗಳಾಗಿ ವಿಕಾರವಾಗಿ ಘೀಳಿಡುತ್ತಾ ವಜ್ರಾಹತವಾದ ಪರ್ವತಗಳಂತೆ–ಭೂಮಿಯ ಮೇಲೆ ಬೀಳುತ್ತಿದ್ದುವು. ಸೂತಪುತ್ರನ ರಥದ ಮಾರ್ಗದಲ್ಲಿ ಎಲ್ಲ

ಕಡೆಗಳಿಂದಲೂ ಕರ್ಣನ ಬಾಣಗಳಿಗೆ ಲಕ್ಷ್ಯವಾಗಿ ಬೀಳುತ್ತಿದ್ದ ರಥಗಳಿಂದಲೂ, ಗಜಾಶ್ವ-ಪದಾತಿಸೈನಿಕರಿಂದಲೂ, ಭೂಮಿಯು ಆಚ್ಛಾದಿತವಾಗಿದ್ದಿತು. ಮಹಾರಾಜ! ಭೀಷ್ಮನಾಗಲೀ, ದ್ರೋಣರಾಗಲೀ, ಅಥವಾ ನಿನ್ನ ಕಡೆಯ ಇತರ ಯಾವ ಯೋಧರೇ ಆಗಲೀ ಆ ಸಮಯದಲ್ಲಿ ಕರ್ಣನು ತೋರಿಸಿದಂತಹ ಪರಾಕ್ರಮವನ್ನು ತೋರಿಸಿರಲಿಲ್ಲ. ಸೂತಪುತ್ರನು ಆನೆಗಳನ್ನೂ, ಕುದುರೆಗಳನ್ನೂ, ರಥಿಗಳನ್ನೂ, ಪದಾತಿಗಳನ್ನೂ ಅಪಾರಸಂಖ್ಯೆಯಲ್ಲಿ ಸಂಹರಿಸಿದನು. ಮೃಗಗಳ ಮಧ್ಯದಲ್ಲಿ ಸಿಂಹವು ಯಾವರೀತಿಯಲ್ಲಿ ನಿರ್ಭಯವಾಗಿ ಸಂಚರಿಸುತ್ತದೆಯೋ ಅದೇ ರೀತಿಯಲ್ಲಿ ಕರ್ಣನು ಪಾಂಚಾಲಸೈನಿಕರ ಮಧ್ಯದಲ್ಲಿ ಸ್ವಲ್ಪವಾದರೂ ಭಯವೇ ಇಲ್ಲದವನಂತೆ ಸಂಚರಿಸುತ್ತಿದ್ದನು. ಸಿಂಹವು ಭಯಗೊಂಡ ಮೃಗಗಳನ್ನು ಯಾವರೀತಿಯಲ್ಲಿ ದಿಕ್ಕಾಪಾಲಾಗಿ ಓಡಿಹೋಗುವಂತೆ ಮಾಡುತ್ತದೆಯೋ ಅದೇರೀತಿಯಲ್ಲಿ ಕರ್ಣನು ಪಾಂಚಾಲರ ರಥಗಳ ಸಮೂಹಗಳನ್ನು ಭಯದಿಂದ ಓಡಿಹೋಗುವಂತೆ ಮಾಡಿದನು. ಯಾವರೀತಿಯಲ್ಲಿ ಸಿಂಹದ ಬಾಯಿಗೆ ಸಿಕ್ಕಿದ ಮೃಗಗಳು ಯಾವುದೇ ಕಾರಣದಿಂದಲೂ ಜೀವಿಸಿರಲಾರವೋ ಅದೇರೀತಿಯಲ್ಲಿ ಕರ್ಣನನ್ನು ಸಮೀಪಿಸಿದ ಮಹಾರಥರಾರೂ ಜೀವಸಹಿತವಾಗಿ ಉಳಿಯುತ್ತಿರಲಿಲ್ಲ. ಬೆಂಕಿಯ ಮಧ್ಯದಲ್ಲಿ ಸಿಕ್ಕಿದ ಜನರು ಭಸ್ಮವಾಗಿ ಹೋಗುವಂತೆ– ಕರ್ಣನೆಂಬ ಅಗ್ನಿಯಿಂದ ಸೃಂಜಯಯೋಧರೆಲ್ಲರೂ ದಗ್ಧರಾಗಿ ಹೋದರು. ಕರ್ಣನು ತನ್ನ ಹೆಸರನ್ನು ಘೋಷಿಸಿ ಶೂರಸಮ್ಮತರಾದ ಚೇದಿ-ಕೇಕಯ-ಪಾಂಚಾಲಯೋಧರಲ್ಲಿ ಅನೇಕರನ್ನು 'ಈಗ ನಿಮ್ಮನ್ನು ಸಂಹರಿಸುತ್ತೇನೆ. ಸಾಧ್ಯವಾಗುವುದಾದರೆ ರಕ್ಷಣೆಮಾಡಿಕೊಳ್ಳಿರಿ.'–ಎಂಬುದಾಗಿ ಹೇಳುತ್ತಾ ಸಂಹರಿಸುತ್ತಿದ್ದನು. ಮಹಾರಾಜ! ಕರ್ಣನ ಆ ಅದ್ಭುತವಾದ ಪರಾಕ್ರಮವನ್ನು ನೋಡಿ, ಕರ್ಣನಿಂದ ಒಬ್ಬನೇ ಒಬ್ಬ ಪಾಂಚಾಲಯೋಧನೂ ಜೀವಸಹಿತವಾಗಿ ಬಿಡುಗಡೆಹೊಂದಲಾರನೆಂದು ಭಾವಿಸಿದೆನು. ಏಕೆಂದರೆ: ಸೂತಪುತ್ರನು ಪಾಂಚಾಲಯೋಧರನ್ನು ಪುನಃ ಪುನಃ ಸಂಹರಿಸುತ್ತಲೇ ಇದ್ದನು. ಪಾಂಚಾಲಯೋಧರನ್ನು ಪುನಃ ಪುನಃ ಸಂಹರಿಸುತ್ತಿದ್ದ ಕರ್ಣನನ್ನು ನೋಡಿ ಬಹಳ ಕ್ರುದ್ಧನಾದ ಧರ್ಮರಾಜನಾದ ಯುಧಿಷ್ಠಿರನು ಕರ್ಣನ ಬಳಿಗೆ ಧಾವಿಸಿದನು. ಧೃಷ್ಟದ್ಯುಮ್ನ, ದ್ರೌಪದಿಯ ಐವರು ಮಕ್ಕಳು ಮತ್ತು ಇತರ

ನೂರಾರು ಯೋಧರು ಶತ್ರುಹಂತಕನಾದ ಕರ್ಣನನ್ನು ನಾಲ್ಕು ಕಡೆಗಳಿಂದಲೂ ಆಕ್ರಮಿಸಿದರು. ಅಮಿತೌಜಸ್ಕರಾದ ಶಿಖಂಡೀ, ಸಹದೇವ, ನಕುಲ, ಶತಾನೀಕ, ಜನಮೇಜಯ, ಸಾತ್ಯಕಿ ಮತ್ತು ಅನೇಕ ಪ್ರಭದ್ರಕಯೋಧರು ಧೃಷ್ಟದ್ಯುಮ್ನನಿಗಿಂತಲೂ ಮುಂದೆ ಹೋಗಿ ಬಾಣಗಳನ್ನು ಅವ್ಯಾಹತವಾಗಿ ಸುರಿಸುತ್ತಿದ್ದ ಕರ್ಣನನ್ನು ಅಸ್ತ್ರ-ಶಸ್ತ್ರಗಳಿಂದ ಪ್ರಹರಿಸುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದರು.

ಗರುಡಪಕ್ಷಿಯು ಅನೇಕ ಸರ್ಪಗಳ ಮೇಲೆ ಬೀಳುವಂತೆ– ಬಹುಸಂಖ್ಯಾತರಾಗಿದ್ದ ಚೇದಿ-ಪಾಂಚಾಲ-ಪಾಂಡವಯೋಧರನ್ನು ಕರ್ಣನೊಬ್ಬನೇ ಎದುರಿಸಿದನು. ಕರ್ಣನಿಗೂ ಚೇದಿ-ಪಾಂಚಾಲ-ಪಾಂಡವಯೋಧರಿಗೂ ಹಿಂದೆ ದೇವತೆಗಳಿಗೂ ಮತ್ತು ದಾನವರಿಗೂ ನಡೆದ ಯುದ್ಧದಂತೆ ಘೋರರೂಪವಾದ ಯುದ್ಧವು ನಡೆಯಿತು. ದಿವಾಕರನೊಬ್ಬನೇ ಕತ್ತಲೆಗಳೆಲ್ಲವನ್ನೂ ಹೋಗಲಾಡಿಸುವಂತೆ–ಬಾಣಗಳ ಸಮೂಹಗಳನ್ನೇ ಸುರಿಸುತ್ತಿದ್ದ, ಒಟ್ಟಾಗಿ ಬಂದಿದ್ದ, ಮಹಾಧನುಷ್ಮಂತರಾದ ಚೇದಿ-ಪಾಂಚಾಲ-ಪಾಂಡವಯೋಧರನ್ನು ಸ್ಥಿರಮತಿಯಾದ ಕರ್ಣನೊಬ್ಬನೇ ಧ್ವಂಸಮಾಡಿದನು.

ರಾಧಾಪುತ್ರನಾದ ಕರ್ಣನು ಪಾಂಡವಯೋಧರೊಡನೆ ಯುದ್ಧದಲ್ಲಿ ತೊಡಗಿರಲಾಗಿ, ಕ್ರುದ್ಧನಾದ ಭೀಮಸೇನನು ಯಮದಂಡಸದೃಶವಾದ ಬಾಣಗಳಿಂದ ಬಾಹ್ಲೀಕ-ಕೇಕಯ-ಮತ್ಸ್ಯ-ವಸಾತೀಯ-ಮದ್ರ-ಸೈಂಧವ ಸೈನಿಕರನ್ನು ಎಲ್ಲ ಕಡೆಗಳಿಂದಲೂ ಸಂಹರಿಸುತ್ತಿದ್ದನು. ಮಹಾಧನುಷ್ಮಂತನಾದ ಭೀಮನೊಬ್ಬನೇ ಅವರೊಡನೆ ಯುದ್ಧಮಾಡುತ್ತಿದ್ದು ಬಹಳವಾಗಿ ಶೋಭಿಸುತ್ತಿದ್ದನು. ಭೀಮಸೇನನಿಂದ ನಾರಾಚಗಳ ಮೂಲಕವಾಗಿ ಮರ್ಮಸ್ಥಳಗಳಲ್ಲಿ ಪ್ರಹರಿಸಲ್ಪಟ್ಟ ಆನೆಗಳು ಹತರಾದ ಗಜಯೋಧರೊಡನೆಯೇ ಕೆಳಕ್ಕೆ ಬೀಳುತ್ತಾ ಭೂಮಿಯನ್ನೇ ಕಂಪನಗೊಳಿಸುತ್ತಿದ್ದುವು. ಕುದುರೇಸವಾರರಿಂದ ಕೂಡಿದ ಕುದುರೆಗಳೂ, ಪ್ರಾಣತೊರೆದ ಪದಾತಿಗಳೂ ಛಿನ್ನ-ಭಿನ್ನಗಳಾಗಿ ಬಹಳವಾಗಿ ರಕ್ತವನ್ನು ಕಕ್ಕುತ್ತಾ ರಣರಂಗದಲ್ಲಿ ಮಲಗಿದ್ದುವು. ಸಾವಿರಾರು ರಥಿಕರು ರಥಗಳಿಂದ ಬಿದ್ದುಹೋಗಿದ್ದರು. ಅವರ ಆಯುಧಗಳೂ ಬಿದ್ದು ಹೋಗಿದ್ದುವು. ಕ್ಷತ-ವಿಕ್ಷತರಾಗಿದ್ದ ಅವರು ಭೀಮಸೇನನಿಗೆ ಭಯಪಟ್ಟು ಪ್ರಾಣವನ್ನು ತೊರೆದವರಂತೆ ಕಾಣುತ್ತಿದ್ದರು. ಭೀಮಸೇನನ ಬಾಣಗಳಿಂದ ಛಿನ್ನ-ಭಿನ್ನರಾಗಿದ್ದ ರಥಿಗಳಿಂದಲೂ, ಕುದುರೇ ಸವಾರರಿಂದಲೂ, ಸಾರಥಿ- ಪದಾತಿಗಳಿಂದಲೂ, ಗಜಾಶ್ವಗಳಿಂದಲೂ

ಭೂಮಿಯು ಮುಚ್ಚಿಹೋಗಿದ್ದಿತು. ಆ ಮಹಾಯುದ್ಧದಲ್ಲಿ ದುರ್ಯೋಧನನ ಸೈನ್ಯವು ಭೀಮಸೇನನ ಭಯದಿಂದ ಪೀಡಿತವಾಗಿ, ಉತ್ಸಾಹಶೂನ್ಯವಾಗಿ ಸ್ತಬ್ಧವಾಗಿರುವಂತೆ ಕಾಣುತ್ತಿದ್ದಿತು. ಬಹಳವಾಗಿ ಗಾಯಗೊಂಡಿದ್ದಿತು. ಗಾಬರಿಗೊಂಡಿದ್ದಿತು. ಅತ್ಯಂತದೀನವಾಗಿದ್ದಿತು. ಸಮುದ್ರವು ಏರಿಳಿತ ಗಳಿಲ್ಲದೇ ಇರುವಾಗ ಶಾಂತವಾಗಿರು ವಂತೆ–ನಿನ್ನ ಸೈನ್ಯವೂ ಸಹ ಯಾವ ವಿಧವಾದ ಸದ್ದು-ಗದ್ದಲಗಳಿಲ್ಲದೆ ನಿಶ್ಚಲವಾಗಿದ್ದಿತು. ಆ ಸಮಯದಲ್ಲಿಯೂ ನಿನ್ನ ಸೈನ್ಯವು ಕೋಪ, ವೀರ್ಯ ಮತ್ತು ಬಲಗಳಿಂದ ಕೂಡಿದ್ದಿತು. ಆದರೆ ಅದರ ದರ್ಪವು ಮಾತ್ರ ಸಂಪೂರ್ಣವಾಗಿ ಉಡುಗಿಹೋಗಿದ್ದಿತು. ಈ ಕಾರಣದಿಂದಲೇ ಆ ಸಮಯದಲ್ಲಿ ನಿನ್ನ ಮಗನ ಸೈನ್ಯವು ತೇಜೋಹೀನವಾಗಿದ್ದಿತು. ಭರತಶ್ರೇಷ್ಠನೇ! ಪರಸ್ಪರವಾಗಿ ವಧಿಸಲ್ಪಡುತ್ತಿದ್ದ ಆ ಸೈನ್ಯವು ಮೈಮೇಲೆ ಚೆಲ್ಲಿದ ರಕ್ತಪ್ರವಾಹದಿಂದ ತೋಯ್ದುಹೋಗಿ ಅದೇ ರಕ್ತದಿಂದಲೇ ಒದ್ದೆಯಾಯಿತು. ಹೀಗೆ ಪರಸ್ಪರವಾಗಿ ವಧಿಸಲ್ಪಡುತ್ತಿದ್ದ ಸೈನ್ಯವು ಸಂಪೂರ್ಣವಾಗಿ ವಿನಾಶ ಹೊಂದಿತು. ಕ್ರುದ್ಧನಾದ ಕರ್ಣನು ಪಾಂಡವರ ಸೈನ್ಯವನ್ನೂ ಭೀಮಸೇನನು ಕೌರವರ ಸೈನ್ಯವನ್ನೂ ಪಲಾಯಿತರನ್ನಾಗಿ ಮಾಡುತ್ತಾ ಬಹಳವಾಗಿ ವಿರಾಜಿಸಿದರು.

ಅದ್ಭುತರೀತಿಯಲ್ಲಿ ಕಾಣುತ್ತಿದ್ದ ಭಯಂಕರವಾದ ಯುದ್ಧವು ಈ ರೀತಿಯಲ್ಲಿ ನಡೆಯುತ್ತಿರಲಾಗಿ; ವಿಜಯಿಗಳಲ್ಲಿ ಶ್ರೇಷ್ಠನಾದ ಅರ್ಜುನನು ಸೈನ್ಯದ ಮಧ್ಯಭಾಗದಲ್ಲಿದ್ದ ಅನೇಕ ಸಂಶಪ್ತಕಗಣಗಳನ್ನು ಸಂಹರಿಸಿ ವಾಸುದೇವನೊಡನೆ ಹೇಳಿದನು:

"ಜನಾರ್ದನ! ನನ್ನೊಡನೆ ಯುದ್ಧಮಾಡುತ್ತಿದ್ದ ಈ ಸಂಶಪ್ತಕಸೈನ್ಯವು ಭಗ್ನವಾಗಿಹೋಯಿತು. ಸಿಂಹದ ಗರ್ಜನೆಯನ್ನು ಮೃಗಗಳು ಸಹಿಸಿಕೊಳ್ಳ ದಂತೆ–ನನ್ನ ಬಾಣಗಳ ಪ್ರಹಾರವನ್ನು ಸಹಿಸಿಕೊಳ್ಳಲು ಅಸಮರ್ಥರಾದ ಸಂಶಪ್ತಕಮಹಾರಥರು ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದಾರೆ. ನಮ್ಮ ಕಡೆಯಲ್ಲಿ ಸೃಂಜಯರ ಸೈನ್ಯವೂ ಸಹ ಭಗ್ನವಾಗಿ ಹೋಗಿದೆ. ಕುರುರಾಜನ ಸೈನ್ಯದ ಮಧ್ಯದಲ್ಲಿ ಅತ್ಯಂತಸಂತೋಷದಿಂದ ಸಂಚರಿಸುತ್ತಿರುವ, ಧೀಮಂತ ನಾದ ಕರ್ಣನ ಆನೆಯ ಹಗ್ಗವನ್ನೇ ಚಿಹ್ನೆಯಾಗಿಹೊಂದಿರುವ ಧ್ವಜವು ಕಾಣುತ್ತಿದೆ.

**ನ ಚ ಕರ್ಣಂ ರಣೇ ಶಕ್ತಾ ಜೇತುಮನ್ಯೇ ಮಹಾರಥಾಃ ।**
**ಜಾನೀತೇ ಹಿ ಭವಾನ್ಕರ್ಣಂ ವೀರ್ಯವನ್ತಂ ಪರಾಕ್ರಮೇ ॥೮೬॥**

ನಮ್ಮ ಕಡೆಯಲ್ಲಿರುವ ಇತರ ಮಹಾರಥರಾರೂ ಯುದ್ಧದಲ್ಲಿ ಕರ್ಣನನ್ನು ಜಯಿಸಲು ಸಮರ್ಥರಲ್ಲ. ಕೃಷ್ಣ! ವೀರನಾದ ಕರ್ಣನು ಪರಾಕ್ರಮದಲ್ಲಿ ಅಸಾಮಾನ್ಯನೆಂಬುದು ನಿನಗೂ ತಿಳಿದಿದೆ.

**ತತ್ರ ಯಾಹಿ ಯತಃ ಕರ್ಣೋ ದ್ರಾವಯತ್ಯೇಷ ನೋ ಬಲಮ್ ।**
**ವರ್ಜಯಿತ್ವಾ ರಣೇ ಯಾಹಿ ಸೂತಪುತ್ರಂ ಮಹಾರಥಮ್ ।**
**ಏತನ್ಮೇ ರೋಚತೇ ಕೃಷ್ಣ ಯಥಾ ವಾ ತವ ರೋಚತೇ ॥೮೭॥**

ಕೃಷ್ಣ! ಕರ್ಣನು ನಮ್ಮ ಸೈನ್ಯವನ್ನು ಶಸ್ತ್ರಾಸ್ತ್ರಗಳ ಪ್ರಹಾರಗಳಿಂದ ಹೊಡೆದೋಡಿಸುತ್ತಿರುವ ಸ್ಥಳಕ್ಕೆ ಹೋಗು. ಸಂಶಪ್ತಕರನ್ನು ವರ್ಜಿಸಿ ಮಹಾರಥನಾದ ಸೂತಪುತ್ರನ ಬಳಿಗೇ ಹೋಗು. ಹೀಗೆ ಮಾಡುವುದೇ ನನಗೆ ಸರಿಯಾಗಿ ಕಾಣುತ್ತದೆ. ಅಥವಾ ನಿನಗೆ ಯಾವುದು ಉಚಿತವಾಗಿ ಕಾಣುತ್ತದೆಯೋ ಹಾಗೆಯೇ ಮಾಡು.”

ಮಹಾರಾಜ! ಅರ್ಜುನನ ಮಾತನ್ನು ಕೇಳಿ ಗೋವಿಂದನು ನಸುನಗುತ್ತಾ: “ತೂರ್ಣಂ ಕೌರವಾಞ್ಜಹಿ ಪಾಣ್ಡವ-ಪಾಂಡವನೇ! ಕೌರವರನ್ನು ಶೀಘ್ರವಾಗಿ ಸಂಹರಿಸು”–ಎಂದು ಹೇಳಿದನು.

ಧೃತರಾಷ್ಟ್ರ! ಅನಂತರ ಶ್ರೀಕೃಷ್ಣನಿಂದ ಪ್ರಚೋದಿತವಾದ, ಹಂಸಪಕ್ಷಿಯ ಬಣ್ಣವನ್ನು ಹೊಂದಿದ್ದ ಕುದುರೆಗಳು (ಶ್ವೇತಾಶ್ವಗಳು) ಕೃಷ್ಣ-ಪಾಂಡವರನ್ನು ಹೊತ್ತು ನಿನ್ನ ಸೈನ್ಯವನ್ನು ಪ್ರವೇಶಿಸಿದುವು. ಕೇಶವನಿಂದ ಪ್ರಚೋದಿತವಾದ, ಕಾಂಚನಭೂಷಿತವಾದ ಶ್ವೇತಾಶ್ವಗಳು ನಿನ್ನ ಸೈನ್ಯವನ್ನು ಪ್ರವೇಶಿಸುತ್ತಲೇ ನಿನ್ನ ಸೈನ್ಯವು ನಾಲ್ಕು ದಿಕ್ಕುಗಳಿಗೂ ಚದುರಿತು. (ನಾಲ್ಕು ದಿಕ್ಕುಗಳಲ್ಲಿಯೂ ಪಲಾಯನಮಾಡತೊಡಗಿತು.) ಮೇಘಗಳ ಗರ್ಜನೆಗೆ ಸಮಾನವಾದ ಶಬ್ದದಿಂದ ಕೂಡಿದ್ದ, ವಾನರನನ್ನು ಧ್ವಜದಲ್ಲಿ ಹೊಂದಿದ್ದ, ಚಂಚಲಿಸುತ್ತಿದ್ದ ಪತಾಕೆಗಳಿಂದ ಯುಕ್ತವಾಗಿದ್ದ ಅರ್ಜುನನ ರಥವು–ದೇವ ವಿಮಾನವು ಸ್ವರ್ಗವನ್ನು ಪ್ರವೇಶಿಸುವಂತೆ–ನಿನ್ನ ಸೇನೆಯನ್ನು ಪ್ರವೇಶಿಸಿತು. ಕ್ರುದ್ಧರಾಗಿದ್ದ, ಕೋಪದಿಂದಲೇ ರಕ್ತಾಕ್ಷರಾಗಿದ್ದ, ಮಹಾದ್ಯುತಿಮಂತರಾಗಿದ್ದ ಕೇಶವಾರ್ಜುನರು ಕೌರವಮಹಾಸೇನೆಯನ್ನು ಭೇದಿಸಿ

ಕೊಂಡು ಒಳನುಗ್ಗಿ ಬಹಳವಾಗಿ ಪ್ರಕಾಶಿಸಿದರು. ಋತ್ವಿಜರಿಂದ ವಿಧಿ ಪೂರ್ವಕವಾಗಿ ಆಹ್ವಾನಿಸಲ್ಪಟ್ಟನಂತರ ಅಶ್ವಿನೀದೇವತೆಗಳು ಯಜ್ಞದಲ್ಲಿ ಭಾಗವಹಿಸುವಂತೆ–ರಣವೆಂಬ ಯಜ್ಞಕ್ಕೆ ಆಹೂತರಾದ, ನಿಪುಣರಾದ ಕೃಷ್ಣಾರ್ಜುನರು ರಣಭೂಮಿಗೆ ಆಗಮಿಸಿದರು. ಮಹಾರಣ್ಯದಲ್ಲಿರುವ ಆನೆಗಳು ಚಪ್ಪಾಳೆಯ ಶಬ್ದವನ್ನು ಕೇಳಿ ಕೋಪಗೊಳ್ಳುವಂತೆ–ಕೌರವರ ಕಡೆಯಲ್ಲಿ ಕೇಳಿಬರುತ್ತಿದ್ದ ವಿಜಯಸೂಚಕಧ್ವನಿಯನ್ನು ಕೇಳಿ ಕ್ರುದ್ಧರಾದ ನರವ್ಯಾಘ್ರರಿಬ್ಬರೂ ವೇಗವಾಗಿ ಕೌರವರ ಸೈನ್ಯದ ಬಳಿಗೆ ಬಂದರು. ಅರ್ಜುನನು ರಥಸೈನ್ಯದ ಮತ್ತು ಅಶ್ವಸೈನ್ಯದ ಒಳಭಾಗಕ್ಕೆ ನುಗ್ಗಿ–ಪಾಶ ಹಸ್ತನಾದ ಯಮನೋಪಾದಿಯಲ್ಲಿ ಕೌರವ ಸೈನ್ಯದ ಮಧ್ಯದಲ್ಲಿ ಸಂಚರಿ ಸುತ್ತಿದ್ದನು. ಮಹಾಪರಾಕ್ರಮಿಯಾದ ಅರ್ಜುನನು ತನ್ನ ಸೈನ್ಯದ ಮಧ್ಯದಲ್ಲಿರುವುದನ್ನು ಕಂಡು ನಿನ್ನ ಮಗನು ಅರ್ಜುನನನ್ನು ಪುನಃ ಯುದ್ಧಕ್ಕೆ ಆಹ್ವಾನಿಸುವಂತೆ ಸಂಶಪ್ತಕಸೈನಿಕರನ್ನು ಪ್ರಚೋದಿಸಿದನು. ನಿನ್ನ ಮಗನ ಪ್ರೇರಣೆಯಂತೆ ಸಂಶಪ್ತಕಮಹಾರಥರು ಒಂದು ಸಾವಿರ ರಥಗಳೊಡನೆಯೂ, ಸುಪ್ರಸಿದ್ಧರಾದ, ಲಕ್ಷ್ಯವನ್ನು ಭೇದಿಸುವುದರಲ್ಲಿ ನಿಪುಣರಾದ, ಮಹಾಶೂರರಾದ, ಧನುಷ್ಮಂತರಾದ ಎರಡು ಲಕ್ಷ ಪದಾತಿ ಸೈನಿಕರೊಡನೆಯೂ ಕೂಡಿಕೊಂಡು ಶರವೃಷ್ಟಿಯಿಂದ ಅರ್ಜುನನನ್ನು ಮುಚ್ಚುತ್ತಾ ಪಾಂಡುನಂದನನಾದ ಪಾರ್ಥನನ್ನು ಆಕ್ರಮಿಸಿದರು. ಸಂಶಪ್ತಕ ಮಹಾರಥರ ಬಾಣಗಳಿಂದ ಆಚ್ಛಾದಿತನಾದ ಶತ್ರುಬಲಮರ್ದನನಾದ, ಅರ್ಜುನನು ಪಾಶಹಸ್ತನಾದ ಯಮನಂತೆ–ಭಯಂಕರವಾದ ರೂಪವನ್ನು ಪ್ರಕಟಿಸುತ್ತಾ ಸಂಶಪ್ತಕರನ್ನು ಸಂಹರಿಸುತ್ತಾ ದರ್ಶನೀಯವಾದ ರೂಪ ವನ್ನು ಹೊಂದಿದನು. (ಭಯಂಕರವಾದ ರೂಪವನ್ನು ಹೊಂದಿದ್ದರೂ ಅವನು ಸಂಶಪ್ತಕರನ್ನು ಸಂಹರಿಸುವಾಗ ಅವನ ಕೈಚಳಕವು ಪ್ರೇಕ್ಷಣೀಯ ವಾಗಿದ್ದಿತು.) ಅನಂತರ ಕಿರೀಟಧರನಾದ ಅರ್ಜುನನು ಸತತವಾಗಿ ಬಿಡು

ತ್ತಿದ್ದ, ವಿದ್ಯುತ್ಪ್ರಭೆಯಿಂದ ಕೂಡಿದ್ದ ಮತ್ತು ಸುವರ್ಣವಿಭೂಷಿತವಾದ ಬಾಣಗಳಿಂದ ಸ್ವಲ್ಪ ಸ್ಥಳವೂ ಉಳಿದೇ ಇಲ್ಲವೋ–ಎಂಬ ರೀತಿಯಲ್ಲಿ ಆಕಾಶವು ತುಂಬಿಬಿಟ್ಟಿತು. ಕಿರೀಟಿಯ ಭುಜಗಳಿಂದ ಮುಕ್ತವಾಗಿ ಸುತ್ತಲೂ ಬೀಳುತ್ತಿದ್ದ, ಮಹಾಶರಗಳಿಂದ ತುಂಬಿಹೋಗಿದ್ದ ಆ ಪ್ರದೇಶವು ಸರ್ಪಗಳಿಂದ ತುಂಬಿರುವುದೋ–ಎಂಬಂತೆ ಕಾಣುತ್ತಿದ್ದಿತು. ಮಹಾತ್ಮನಾದ ಪಾಂಡವನು ಸುವರ್ಣಮಯವಾದ ಮೂಲಭಾಗಗಳನ್ನೂ, ಸ್ವಚ್ಛವಾದ ಅಗ್ರಭಾಗಗಳನ್ನೂ ಹೊಂದಿದ್ದ, ಬಗ್ಗಿದ ಗಿಣ್ಣುಗಳಿದ್ದ ಬಾಣಗಳನ್ನು ಎಲ್ಲ ದಿಕ್ಕುಗಳಲ್ಲಿಯೂ ಸುರಿಸಿದನು. ಅರ್ಜುನನ ಅಂಗೈಯಿಂದ ಹೊರಟ ಶಬ್ದದಿಂದ ಭೂಮ್ಯಾಕಾಶಗಳೂ, ಎಲ್ಲ ದಿಕ್ಕುಗಳೂ, ಎಲ್ಲ ಸಮುದ್ರಗಳೂ, ಎಲ್ಲ ಪರ್ವತಗಳೂ ಒಡೆದುಹೋಗುತ್ತಿವೆಯೆಂದು ಜನರು ಭಾವಿಸಿದರು. ಮಹಾರಥನಾದ, ಕುಂತಿಯ ಮಗನಾದ ಅರ್ಜುನನು ಎಲ್ಲರೂ ನೋಡುತ್ತಿದ್ದಂತೆಯೇ ಹತ್ತು ಸಾವಿರ ಸಂಶಪ್ತಕರಾಜರನ್ನು ಸಂಹರಿಸಿ ಮುಂದೆ ಹೊರಟನು. ಪಾರ್ಥನು ತನ್ನ ಎದುರಿನಲ್ಲಿಯೇ ಕಾಂಬೋಜರಾಜನಿಂದ ರಕ್ಷಿಸಲ್ಪಡುತ್ತಿದ್ದ ಸೈನ್ಯದ ಬಳಿಗೆ ಹೋಗಿ–ದೈತ್ಯರನ್ನು ಇಂದ್ರನು ಮಥಿಸಿದಂತೆ–ಬಾಣಗಳಿಂದ ಆ ಕಾಂಬೋಜಸೈನ್ಯವನ್ನು ಧ್ವಂಸಗೊಳಿಸಿದನು.

ಅರ್ಜುನನು ನಿಶಿತವಾದ ಭಲ್ಲಗಳಿಂದ, ತನ್ನನ್ನು ಕೊಲ್ಲಲು ಪ್ರಯ ತ್ನಿಸುತ್ತಿದ್ದ ಶತ್ರುಗಳ ಶಸ್ತ್ರಗಳನ್ನೂ, ಕೈಗಳನ್ನೂ, ತೋಳುಗಳನ್ನೂ, ಶಿರಸ್ಸು ಗಳನ್ನೂ ಕತ್ತರಿಸಿದನು. ಬಿರುಗಾಳಿಯಿಂದ ಭಗ್ನವಾಗಿ ಕೆಳಗುರುಳಿದ ಹಲವು ರೆಂಬೆಗಳಿಂದ ಕೂಡಿರುವ ವೃಕ್ಷಗಳಂತೆ–ಭಿನ್ನವಾದ ಅವಯವ ವುಳ್ಳವರಾಗಿದ್ದ, ನಿರಾಯುಧರಾಗಿದ್ದ ಶತ್ರುಪಕ್ಷದ ಯೋಧರು ಭೂಮಿಯ ಮೇಲೆ ಬಿದ್ದರು. ಗಜಾಶ್ವ-ರಥ-ಪದಾತಿಗಳ ಗುಂಪುಗಳನ್ನೇ ಪ್ರತಿಕ್ಷಣ ದಲ್ಲಿಯೂ ಧ್ವಂಸಮಾಡುತ್ತಿದ್ದ ಅರ್ಜುನನನ್ನು ಕಾಂಬೋಜರಾಜನಾದ, ಸುದಕ್ಷಿಣನ ತಮ್ಮನು ಬಾಣಗಳ ವೃಷ್ಟಿಯಿಂದ ಅಭಿಷೇಚಿಸಿದನು. ಅರ್ಜು ನನು ತನ್ನ ಮೇಲೆ ಬಾಣಗಳನ್ನು ಸುರಿಸುತ್ತಿದ್ದ ಸುದಕ್ಷಿಣ ಸಹೋದರನ ಪರಿಘೋಪಮವಾದ ತೋಳುಗಳನ್ನು ಅರ್ಧಚಂದ್ರಗಳೆಂಬ ಎರಡು ಬಾಣ ಗಳಿಂದ ಕತ್ತರಿಸಿದನು. ಕ್ಷುರವೆಂಬ ಬಾಣದಿಂದ ಪೂರ್ಣಚಂದ್ರನಂತೆ ಕಾಂತಿಯುಕ್ತವಾದ ಮುಖದಿಂದ ಕೂಡಿದ್ದ ಅವನ ಶಿರಸ್ಸನ್ನೂ ಕತ್ತರಿಸಿ

ದನು. ವಜ್ರಾಯುಧಪ್ರಹಾರದಿಂದ ಭಿನ್ನವಾಗಿ ಕೆಳಕ್ಕೆ ಬಿದ್ದ ಮನಶ್ಶಿಲಾಪರ್ವತದ ಶಿಖರದಂತೆ–ರಕ್ತಸ್ರಾವದಿಂದ ಯುಕ್ತನಾಗಿದ್ದ ಸುದಕ್ಷಿಣಾವರಜನು ವಾಹನದಿಂದ ಕೆಳಕ್ಕೆ ಬಿದ್ದನು. ಕಮಲಪತ್ರಾಕ್ಷನಾಗಿದ್ದ, ನೋಡಲು ಕಡುಚೆಲುವನಾಗಿದ್ದ, ಸುವರ್ಣಸ್ತಂಭದಂತೆ ಉನ್ನತನಾಗಿದ್ದ, ಸುದಕ್ಷಿಣನ ಕಡೆಯ ತಮ್ಮನಾದ ಕಾಂಬೋಜರಾಜಕುಮಾರನು–ಭಿನ್ನವಾಗಿ ಬಿದ್ದಿರುವ ಮೇರುಪರ್ವತದಂತೆ–ರಣಾಂಗಣದಲ್ಲಿ ಸತ್ತುಬಿದ್ದಿರುವುದನ್ನು ಎಲ್ಲರೂ ನೋಡಿದರು. ಅತ್ಯಂತಘೋರವಾದ ಮತ್ತು ಅದ್ಭುತವಾದ ಯುದ್ಧವು ಪುನಃ ಪ್ರಾರಂಭವಾಯಿತು. ಯುದ್ಧದಲ್ಲಿ ತೊಡಗಿದ್ದ ಯೋಧರ ನಾನಾವಸ್ಥೆಗಳು ಸ್ವಲ್ಪಹೊತ್ತಿನಲ್ಲಿಯೇ ಕಂಡುಬಂದುವು. ಒಂದೊಂದೇ ಬಾಣದಿಂದ ಹತವಾದ, ರಕ್ತಲೇಪಿತವಾದ ಕಾಂಬೋಜದೇಶದ ಕುದುರೆ ಗಳಿಂದಲೂ, ಯವನರಿಂದಲೂ, ಶಕರಿಂದಲೂ ರಣಭೂಮಿಯೆಲ್ಲವೂ ರಕ್ತಮಯವಾಯಿತು. ಸತ್ತುಹೋಗಿದ್ದ ಕುದುರೆಗಳು ಮತ್ತು ಸೂತರುಳ್ಳ ರಥಗಳಿಂದಲೂ, ಹತರಾದ ಕುದುರೇಸವಾರರುಳ್ಳ ಕುದುರೆಗಳಿಂದಲೂ, ಹತರಾದ ಗಜಯೋಧರುಳ್ಳ ಆನೆಗಳಿಂದಲೂ, ಹತವಾದ ಆನೆಗಳುಳ್ಳ ಮಾವಟಿಗರಿಂದಲೂ ಆ ರಣಭೂಮಿಯೇ ತುಂಬಿಹೋಗಿದ್ದಿತು. ಒಬ್ಬರು ಮತ್ತೊಬ್ಬರನ್ನು ಸಂಹರಿಸುತ್ತಿದ್ದುದರಿಂದ ಆ ಸಮಯದಲ್ಲಿ ಅತಿಘೋರವಾದ ಜನಕ್ಷಯವೇ ಆಯಿತು. ವ್ಯೂಹದ ಪಕ್ಷ-ಪ್ರಪಕ್ಷಗಳೆರಡೂ ಸವ್ಯಸಾಚಿಯಿಂದ ಹತವಾಗಲಾಗಿ, ಸುವರ್ಣಭೂಷಿತವಾಗಿದ್ದ ಮಹಾಧನುಸ್ಸನ್ನು ಧಾರಣೆ ಮಾಡಿ ಕೊಂಡಿರುವ ಸೂರ್ಯನಂತೆಯೇ–ಘೋರವಾದ ಬಾಣಗಳನ್ನು ಬತ್ತಳಿಕೆ ಯಿಂದ ಸೆಳೆದುಕೊಳ್ಳುತ್ತಾ ಅಶ್ವತ್ಥಾಮನು ವಿಜಯಿಗಳಲ್ಲಿ ಶ್ರೇಷ್ಠನಾದ ಅರ್ಜುನನನ್ನು ಬಹಳ ಅವಸರದಿಂದ ಸಂಧಿಸಿದನು.

ಕೋಪದಿಂದಲೂ ಮತ್ತು ಅಸಹನೆಯಿಂದಲೂ ಅಗಲವಾಗಿ ಮಾಡ ಲ್ಪಟ್ಟ ಮುಖದಿಂದ ಕೂಡಿದ್ದ, ರಕ್ತಾಕ್ಷನಾದ ಅಶ್ವತ್ಥಾಮನು–ಪ್ರಳಯ ಕಾಲದಲ್ಲಿ ಕಿಂಕರದಂಡವನ್ನು ಧರಿಸಿರುವ ಕ್ರುದ್ಧನಾದ ಮೃತ್ಯುವಿನಂತೆಯೇ ಪ್ರಕಾಶಿಸಿದನು. ಅನಂತರ ಅಶ್ವತ್ಥಾಮನು ಉಗ್ರವಾದ ಬಾಣಗಳ ವೃಷ್ಟಿ ಯನ್ನು ಗುಂಪುಗುಂಪಾಗಿ ಸೈನಿಕರ ಮೇಲೆ ಸುರಿಸಿದನು. ಅಶ್ವತ್ಥಾಮನಿಂದ ಬಿಡಲ್ಪಟ್ಟ ಆ ಬಾಣಗಳಿಂದ ಪೀಡಿಸಲ್ಪಟ್ಟ ಪಾಂಡವಸೈನ್ಯವು ಪಲಾಯನ ಮಾಡಿತು. ರಥದಲ್ಲಿ ಕುಳಿತಿದ್ದ ಶ್ರೀಕೃಷ್ಣನನ್ನು ನೋಡಿದೊಡನೆಯೇ ಅಶ್ವತ್ಥಾಮನು ಉಗ್ರವಾದ ಬಾಣಗಳ ವೃಷ್ಟಿಯನ್ನೇ ಅವನ ಮೇಲೆ

ಸುರಿಸಿದನು. ಅಶ್ವತ್ಥಾಮನ ಧನುಸ್ಸಿನಿಂದ ಮುಕ್ತವಾಗಿ ಸುತ್ತಲೂ ಬೀಳುತ್ತಿದ್ದ ಬಾಣಗಳಿಂದ ರಥದಲ್ಲಿ ಕುಳಿತಿದ್ದ ಕೃಷ್ಣ-ಧನಂಜಯರಿಬ್ಬರೂ ಮುಚ್ಚಿ ಹೋದರು. ಅನಂತರ ಪ್ರತಾಪವಂತನಾದ ಅಶ್ವತ್ಥಾಮನು ತೀಕ್ಷ್ಣವಾದ ನೂರಾರು ಬಾಣಗಳಿಂದ ಮಾಧವ-ಪಾಂಡವರನ್ನು ನಿಶ್ಚೇಷ್ಟರನ್ನಾಗಿ ಮಾಡಿದನು. ಚರಾಚರಜಗತ್ತಿನ ಸಂರಕ್ಷಕರಾದ ಕೃಷ್ಣಾರ್ಜುನರು ಅಶ್ವತ್ಥಾಮನ ಬಾಣಗಳಿಂದ ಆಚ್ಛಾದಿತರಾದುದನ್ನು ಕಂಡು ಸ್ಥಾವರ-ಜಂಗಮಪ್ರಾಣಿಗಳಲ್ಲಿ ಹಾಹಾಕಾರವೆದ್ದಿತು. ಸಿದ್ಧ-ಚಾರಣರು ಎಲ್ಲ ಕಡೆಗಳಿಂದಲೂ ರಣರಂಗಕ್ಕೆ ಬಂದು 'ಈಗ ನಿಶ್ಚಯವಾಗಿಯೂ ಲೋಕಗಳಿಗೆ ಕಲ್ಯಾಣವಾಗುವುದೇ?'– ಎಂಬುದಾಗಿ ಚಿಂತಿಸುತ್ತಿದ್ದರು. ಯುದ್ಧಭೂಮಿಯಲ್ಲಿ ಕೃಷ್ಣಾರ್ಜುನರನ್ನು ಬಾಣಗಳಿಂದ ಆಚ್ಛಾದಿಸಿದ ಅಶ್ವತ್ಥಾಮನ ಅಂತಹ ಪರಾಕ್ರಮವನ್ನು ನಾನು ಹಿಂದೆಂದೂ ನೋಡಿಯೇ ಇರಲಿಲ್ಲ. ಸಿಂಹದ ಭಯಂಕರಘರ್ಜನೆಯಂತೆ ಶತ್ರುಗಳನ್ನು ಭಯಗೊಳಿಸುವ ಅಶ್ವತ್ಥಾಮನ ಧನುಸ್ಸಿನ ಟೇಂಕಾರಶಬ್ದವನ್ನು ನಾನು ಪದೇ-ಪದೇ ಕೇಳುತ್ತಲೇ ಇದ್ದೆನು. ಮೋಡಗಳ ಮಧ್ಯಭಾಗದಲ್ಲಿರುವ ಮಿಂಚು ಪ್ರಕಾಶಮಾನವಾಗಿ ಕಾಣುವಂತೆ ಎಡಕ್ಕೂ ಬಲಕ್ಕೂ ಬಾಣಗಳನ್ನು ಸತತವಾಗಿ ಬಿಡುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದ ಅಶ್ವತ್ಥಾಮನ ಮೌರ್ವಿಯು ಪ್ರಕಾಶಿಸುತ್ತಿದ್ದಿತು. ಕ್ಷಿಪ್ರವಾಗಿ ಬಾಣಗಳನ್ನು ಬಿಡುವ, ದೃಢಹಸ್ತನಾದ, ಯಶೋವಂತನಾದ ಪಾಂಡವನೂ ಸಹ ಅದ್ಭುತಪರಾಕ್ರಮ ವನ್ನು ತೋರಿಸುತ್ತಿದ್ದ ಅಶ್ವತ್ಥಾಮನನ್ನು ನೋಡಿ ಮಂಕುಹಿಡಿದಂತಾಗಿ ತನ್ನ ಪರಾಕ್ರಮವು ಸಂಪೂರ್ಣವಾಗಿ ನಷ್ಟವಾಗಿ ಹೋಯಿತೆಂದೇ ಭಾವಿಸಿದನು. ನಿಶ್ಚಯವಾಗಿಯೂ ಆ ಸಮಯದಲ್ಲಿ ಅಶ್ವತ್ಥಾಮನ ಭಯಂಕರಶರೀರವನ್ನು ನೋಡಲೂ ಸಾಧ್ಯವಾಗುತ್ತಿರಲಿಲ್ಲ. ಅಶ್ವತ್ಥಾಮಾರ್ಜುನರ ನಡುವೆ ಹೀಗೆ ಮಹಾಯುದ್ಧವು ನಡೆಯುತ್ತಿರಲಾಗಿ, ಮಹಾಬಲನಾದ ದ್ರೌಣಿಯು ಕ್ಷಣ-ಕ್ಷಣಕ್ಕೂ ಬಲದಲ್ಲಿ ವರ್ಧಿಸುತ್ತಿರಲಾಗಿ, ಕೌಂತೇಯನು ಕ್ಷಣ-ಕ್ಷಣಕ್ಕೂ ಕ್ಷೀಣಬಲನಾಗುತ್ತಿರಲಾಗಿ, ಕೋಪವು ಕೃಷ್ಣನನ್ನು ಆವರಿಸಿತು. (ಶ್ರೀಕೃಷ್ಣನು ಕುಪಿತನಾದನು.) ಆ ಸಮಯದಲ್ಲಿ ಶ್ರೀಕೃಷ್ಣನು ಕೋಪದಿಂದ ನಿಟ್ಟುಸಿರು ಬಿಡುತ್ತಿದ್ದನು. ಕಣ್ಣುಗಳಿಂದಲೇ ಎಲ್ಲವನ್ನೂ ಭಸ್ಮಮಾಡಿಬಿಡುವನೋ ಎಂಬಂತೆ ಕಾಣುತ್ತಿದ್ದನು. ಅಶ್ವತ್ಥಾಮನನ್ನೂ ಮತ್ತು ಅರ್ಜುನನನ್ನೂ ಪದೇ ಪದೇ ನೋಡುತ್ತಲೇ ಇದ್ದನು. ಕ್ರುದ್ಧನಾಗಿದ್ದರೂ ಸಹ ಶ್ರೀಕೃಷ್ಣನು

ಅರ್ಜುನನನ್ನು ಕುರಿತು ಪ್ರೀತಿಪೂರ್ವಕವಾದ ಈ ಮಾತುಗಳನ್ನು ಹೇಳಿದನು:

**ಅತ್ಯದ್ಭುತಮಿದಂ ಪಾರ್ಥ ತವ ಪಶ್ಯಾಮಿ ಸಂಯುಗೇ ।**
**ಅತಿಶೇತೇ ಹಿ ಯತ್ರ ತ್ವಾಂ ದ್ರೋಣಪುತ್ರೋಽದ್ಯ ಭಾರತ ॥೧೩೫॥**

"ಪಾರ್ಥ! ಉಪೇಕ್ಷಾಯುಕ್ತವಾದ ನಿನ್ನ ಅತ್ಯದ್ಭುತವಾದ ವರ್ತನೆಯನ್ನು ನಾನು ಈ ಯುದ್ಧದಲ್ಲಿ ನೋಡುತ್ತಿದ್ದೇನೆ. ಈ ಯುದ್ಧಸಮಯದಲ್ಲಿ ದ್ರೋಣ ಪುತ್ರನು ನಿನ್ನನ್ನು ಅತಿಶಯಿಸಿದ್ದಾನೆ. (ಮೀರಿಸಿದ್ದಾನೆ.) ಹಿಂದಿನಂತೆಯೇ ನಿನ್ನ ಶರೀರದಲ್ಲಿ ವೀರ್ಯವಿದೆಯಲ್ಲವೇ? ಭುಜಗಳಲ್ಲಿ ಬಲವಿದೆಯಲ್ಲವೇ? ಕೈಯಲ್ಲಿ ಗಾಂಡೀವಧನುಸ್ಸಿದೆಯಲ್ಲವೇ? ನಾನು ಸಾರಥ್ಯಮಾಡುತ್ತಿರುವ ಶ್ರೇಷ್ಠವಾದ ರಥದಲ್ಲಿಯೇ ನೀನು ಕುಳಿತಿರುವೆಯಲ್ಲವೇ? ನಿನ್ನ ಬಾಹುಗಳು ಗಾಯಗೊಳ್ಳದೇ ಸುದೃಢವಾಗಿವೆಯಲ್ಲವೇ? ಗಾಂಡೀವವನ್ನು ಹಿಡಿದಿರುವ ಮುಷ್ಟಿಯು ಶಿಥಿಲವಾಗಿಲ್ಲವಲ್ಲವೇ? ಇವೆಲ್ಲವೂ ಯಥಾಪೂರ್ವವಾಗಿಯೇ ಇದ್ದರೆ ದ್ರೋಣಪುತ್ರನು ನಿನ್ನನ್ನು ಅತಿಶಯಿಸುತ್ತಿರಲಿಲ್ಲ. ಆದರೆ ನಾನೀಗ ದ್ರೌಣಿಯು ಕ್ಷಣ-ಕ್ಷಣಕ್ಕೂ ವೃದ್ಧಿಸುತ್ತಿರುವುದನ್ನೇ ನೋಡುತ್ತಿದ್ದೇನೆ.

**ಗುರುಪುತ್ರ ಇತಿ ಹ್ಯೇನಂ ಮಾನಯನ್ಭರತರ್ಷಭ ।**
**ಉಪೇಕ್ಷಾಂ ಕುರು ಮಾ ಪಾರ್ಥ ನಾಯಂ ಕಾಲ ಉಪೇಕ್ಷಿತುಮ್ ॥**

ಭರತರ್ಷಭನೇ! ಗುರುಪುತ್ರನೆಂದು ಗೌರವಿಸುತ್ತಾ ಇವನನ್ನು ಉಪೇಕ್ಷೆಮಾಡಬೇಡ. ಉಪೇಕ್ಷೆಮಾಡಲು ಇದು ಸಕಾಲವೂ ಅಲ್ಲ."

ಮಹಾರಾಜ! ಶ್ರೀಕೃಷ್ಣನು ಹೀಗೆ ಹೇಳಿದೊಡನೆಯೇ ಅರ್ಜುನನು ಹದಿನಾಲ್ಕು ಭಲ್ಲಗಳನ್ನು ಕೈಗೆತ್ತಿಕೊಂಡು, ಅವಸರಪಡಬೇಕಾದ ಸಮಯ ದಲ್ಲಿ ತ್ವರೆಯಿಂದಲೇ ಕಾರ್ಯಮಾಡುತ್ತಾ ಅಶ್ವತ್ಥಾಮನ ಧನುಸ್ಸು, ಧ್ವಜ, ಛತ್ರ, ಪತಾಕೆಗಳು, ಖಡ್ಗ, ಶಕ್ತಿ ಮತ್ತು ಗದೆಗಳನ್ನು ಕತ್ತರಿಸಿದನು. ಅನಂತರ ಅಶ್ವತ್ಥಾಮನ ಜತ್ರುದೇಶವನ್ನು (ಕುತ್ತಿಗೆಯ ಎಲುಬುಪ್ರದೇಶವನ್ನು) ವತ್ಸದಂತಗಳೆಂಬ ಬಾಣಗಳಿಂದ ಪ್ರಹರಿಸಿದನು. ಅದರಿಂದ ಬಹಳವಾಗಿ ಗಾಯಗೊಂಡ ಅಶ್ವತ್ಥಾಮನು ಮೂರ್ಛಿತನಾಗಿ ಧ್ವಜದಂಡವನ್ನೇ ಅವಲಂಬಿಸಿ ಕುಳಿತನು. ಶತ್ರುವಿನಿಂದ ಬಹಳವಾಗಿ ಗಾಯಗೊಂಡು ಮೂರ್ಛಿತನಾದ ಅಶ್ಥತ್ಥಾಮನನ್ನು ಸೂತನು ಅರ್ಜುನನಿಂದ ರಕ್ಷಿಸುತ್ತಾ (ಅರ್ಜುನನು ಬಿಡುತ್ತಿದ್ದ ಬಾಣಗಳು ಅಶ್ವತ್ಥಾಮನಿಗೆ ಬೀಳದಂತೆ ನೋಡಿಕೊಳ್ಳುತ್ತಾ) ರಣಾಂಗಣದಿಂದ ಬಹಳ ದೂರಕ್ಕೆ ಹೊರಟುಹೋದನು.

ಆ ಸಮಯದಲ್ಲಿಯೇ ಶತ್ರುತಾಪನನಾದ ವಿಜಯನು–ನಿನ್ನ ವೀರಪುತ್ರನು ನೋಡುತ್ತಿದ್ದಂತೆಯೇ ನೂರಾರು-ಸಾವಿರಾರು ಸಂಖ್ಯೆಯಲ್ಲಿ ನಿನ್ನ ಸೈನಿಕರನ್ನು ಸಂಹರಿಸಿದನು. ಮಹಾರಾಜ! ನಿನ್ನ ದುರಾಲೋಚನೆಯ ಕಾರಣದಿಂದ ಶತ್ರುಗಳೊಡನೆ ನಿನ್ನ ಯೋಧರ ಇಂತಹ ವಿನಾಶಕರವಾದ, ಭಯಂಕರ ವಾದ, ಅತಿಕ್ರೂರವಾದ ಸಂಹಾರಕಾರ್ಯವು ನಡೆಯಿತು. ಅರ್ಜುನನು ಸಂಶಪ್ತಕರನ್ನೂ, ವೃಕೋದರನು ಕೌರವರನ್ನೂ, ಕರ್ಣನು ಪಾಂಚಾಲಸೈನಿಕ ರನ್ನೂ ಕ್ಷಣಮಾತ್ರದಲ್ಲಿ ಸಂಹಾರಮಾಡಿದನು. ವೀರಶ್ರೇಷ್ಠರ ಕ್ಷಯಕರವಾದ, ಮಹಾಭಯಂಕರವಾದ ಯುದ್ಧವು ಹೀಗೆ ನಡೆಯುತ್ತಿರಲಾಗಿ ರಣಾಂಗಣದ ಸುತ್ತಲೂ ಅಗಣನೀಯವಾದ ಕಬಂಧಗಳು (ಮುಂಡಗಳು) ಎದ್ದುನಿಂತುವು. ಯುದ್ಧಸಮಯದಲ್ಲಿ ಯುಧಿಷ್ಠಿರನೂ ಬಾಣಗಳ ಪ್ರಹಾರದಿಂದ ಬಹಳವಾಗಿ ಗಾಯಗೊಂಡು ಅಪಾರವಾದ ವೇದನೆಯನ್ನೂ ಅನುಭವಿಸುತ್ತಿದ್ದನು. ಈ ಕಾರಣದಿಂದಾಗಿ ಅವನು ಯುದ್ಧಭೂಮಿಯಿಂದ ಕ್ರೋಶ (ಸುಮಾರು ಮೂರು ಮೈಲಿ) ದೂರದ ಅಂತರದಲ್ಲಿ ನಿಂತಿದ್ದನು.

೫೬ನೆಯ ಅಧ್ಯಾಯವು ಮುಗಿಯಿತು.

೫೭ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ದುರ್ಯೋಧನನು ಸೈನಿಕರಿಗೆ ಪ್ರೋತ್ಸಾಹವನ್ನಿತ್ತುದು: ಅಶ್ವತ್ಥಾಮನ ಪ್ರತಿಜ್ಞೆ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

ಮಹಾರಾಜ! ದುರ್ಯೋಧನನು ಕರ್ಣನ ಬಳಿಗೆ ಬಂದು ಶಲ್ಯನನ್ನೂ ಮತ್ತು ಇತರ ರಾಜರನ್ನೂ ಕುರಿತು ಹೇಳಿದನು:

**ಯದೃಚ್ಛಯೈತತ್ಸಮ್ಪ್ರಾಪ್ತಂ ಸ್ವರ್ಗದ್ವಾರಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಕರ್ಣ ಲಭನ್ತೇ ಯುದ್ಧಮೀದೃಶಮ್ ॥೨॥**

"ಕರ್ಣ! ತೆರೆದಿಟ್ಟಿರುವ ಸ್ವರ್ಗದ ಹೆಬ್ಬಾಗಿಲಿನ ರೂಪದಲ್ಲಿರುವ ಈ ಯುದ್ಧವು ತನಗೆ ತಾನಾಗಿಯೇ ನಮಗಿಂದು ಪ್ರಾಪ್ತವಾಗಿದೆ. ಇಂತಹ ಯುದ್ಧವನ್ನು ಸುಖಿಗಳಾದ ಕ್ಷತ್ರಿಯರು ಮಾತ್ರವೇ ಪಡೆದುಕೊಳ್ಳುತ್ತಾರೆ.

ಸಮಾನಬಲರಾದ ಶೂರಕ್ಷತ್ರಿಯರೊಡನೆ ಯುದ್ಧಮಾಡುತ್ತಿರುವ ಶೂರರಿಗೆ ತಮ್ಮ ಅಭೀಷ್ಟವನ್ನು ಪೂರೈಸಿಕೊಳ್ಳುವ ಸದವಕಾಶವು ಈಗ ಪ್ರಾಪ್ತವಾಗಿದೆ.

**ಹತ್ವಾ ಚ ಪಾಣ್ಡವಾನ್ಯುದ್ಧೇ ಕ್ಷಿತಾಮುರ್ವೀಮವಾಪ್ಸ್ಯಥ ।**
**ನಿಹತಾ ವಾ ಪರೈರ್ಯುದ್ಧೇ ವೀರಲೋಕಮವಾಪ್ಸ್ಯಥ ॥೪॥**

ಪಾಂಡವರನ್ನು ಯುದ್ಧದಲ್ಲಿ ಸಂಹಾರಮಾಡಿ ಸಂಪದ್ಭರಿತವಾದ ಭೂಮಂಡಲವನ್ನಾದರೂ ಪಡೆದುಕೊಳ್ಳುವಿರಿ. ಹಾಗಲ್ಲದಿದ್ದರೆ ಶತ್ರುಗಳಿಂದ ಹತರಾಗಿ ವೀರರಿಗೆ ಲಭ್ಯವಾಗುವ ಪುಣ್ಯಲೋಕಗಳನ್ನಾದರೂ ಪಡೆದು ಕೊಳ್ಳುವಿರಿ."

ಮಹಾರಾಜ! ದುರ್ಯೋಧನನ ಮಾತುಗಳನ್ನು ಕೇಳಿ ಕ್ಷತ್ರಿಯರ್ಷಭರು ಹೃಷ್ಟರಾಗಿ ಸಿಂಹನಾದಗಳನ್ನು ಮಾಡಿದರು. ರಣವಾದ್ಯಗಳು ಮೊಳಗಿದುವು. ಹೀಗೆ ದುರ್ಯೋಧನನ ಪ್ರೋತ್ಸಾಹೋಕ್ತಿಗಳಿಂದ ಸೈನ್ಯವು ಆನಂದ ಪಡುತ್ತಿರುವಾಗ ನಿನ್ನ ಕಡೆಯ ಸೈನಿಕರಿಗೆ ಇನ್ನೂ ಹೆಚ್ಚಾದ ಸಂತೋಷ ವನ್ನುಂಟುಮಾಡುತ್ತಾ ಅಶ್ವತ್ಥಾಮನು ಹೇಳಿದನು:

"ಎಲ್ಲ ಸೈನಿಕರ ಸಮಕ್ಷದಲ್ಲಿ ಮತ್ತು ನೀವೆಲ್ಲರೂ ನೋಡುತ್ತಿರು ವಂತೆಯೇ ಶಸ್ತ್ರಸಂನ್ಯಾಸಮಾಡಿದ್ದ ನನ್ನ ತಂದೆಯು ಧೃಷ್ಟದ್ಯುಮ್ನನಿಂದ ಕೊಲ್ಲಲ್ಪಟ್ಟನು.

ಪಾರ್ಥಿವರೇ! ಆ ದುಷ್ಟನು ಹಾಗೆ ಮಾಡಿದನೆಂಬ ಕೋಪದಿಂದಲೂ ಮತ್ತು ಮಿತ್ರನಾದ ದುರ್ಯೋಧನನ ಕಾರ್ಯಸಿದ್ಧಿಗಾಗಿಯೂ ನಾನು ಸತ್ಯವಾದ ಈ ಪ್ರತಿಜ್ಞೆಯನ್ನು ಮಾಡುತ್ತೇನೆ. ಅದನ್ನು ನೀವೆಲ್ಲರೂ ಕೇಳಿರಿ.

**ಧೃಷ್ಟದ್ಯುಮ್ನಮಹತ್ವಾಹಂ ನ ವಿಮೋಕ್ಷ್ಯಾಮಿ ದಂಶನಮ್ ।**
**ಅನೃತಾಯಾಂ ಪ್ರತಿಜ್ಞಾಯಾಂ ನಾಹಂ ಸ್ವರ್ಗಮವಾಪ್ನುಯಾಮ್ ॥**

ಧೃಷ್ಟದ್ಯುಮ್ನನನ್ನು ಸಂಹರಿಸದೇ ನಾನು ಕವಚವನ್ನು ಬಿಚ್ಚುವುದಿಲ್ಲ. ನನ್ನ ಈ ಪ್ರತಿಜ್ಞೆಯು ಸುಳ್ಳಾದರೆ ನನಗೆ ಸ್ವರ್ಗವು ಲಭಿಸದೇ ಹೋಗಲಿ.

ಅರ್ಜುನನೋ, ಭೀಮಸೇನನೋ ಅಥವಾ ಬೇರೊಬ್ಬ ಯೋಧನೋ ಧೃಷ್ಟದ್ಯುಮ್ನನನ್ನು ಯುದ್ಧದಲ್ಲಿ ರಕ್ಷಿಸುತ್ತಿದ್ದರೆ ಅವನನ್ನೂ ಬಾಣಗಳಿಂದ ಸಂಹರಿಸುತ್ತೇನೆ."

ಅಶ್ವತ್ಥಾಮನು ಹೀಗೆ ಹೇಳಿದೊಡನೆಯೇ ಎಲ್ಲ ಕೌರವಸೈನ್ಯವೂ ಒಟ್ಟಾಗಿ ಸೇರಿ ಕುಂತೀಪುತ್ರರನ್ನು ಆಕ್ರಮಿಸಿತು. ಅಂತೆಯೇ ಪಾಂಡವರೂ ಕೌರವರನ್ನು ಆಕ್ರಮಿಸಿದರು.

ಮಹಾರಾಜ! ಎರಡೂ ಪಕ್ಷಗಳ ರಥಯೂಥಪತಿಗಳ ಆಗಿನ ಸಂಘರ್ಷವು ಬಹಳ ಭಯಂಕರವಾಗಿದ್ದಿತು. ಕುರು-ಸೃಂಜಯಸೈನಿಕರ ಮುಂಭಾಗದಲ್ಲಿ ಪ್ರಳಯಕಾಲಾನುರೂಪವಾದ ಜನಕ್ಷಯವು ಪ್ರಾರಂಭ ವಾಯಿತು. ಯುದ್ಧಸ್ಥಳದಲ್ಲಿ ಪ್ರಹಾರ-ಪ್ರತಿಪ್ರಹಾರಗಳು ಪ್ರಾರಂಭವಾಗ ಲಾಗಿ, ಅಪ್ಸರೆಯರಿಂದಲೂ ಮತ್ತು ದೇವತೆಗಳಿಂದಲೂ ಕೂಡಿದ ಎಲ್ಲ ಪ್ರಾಣಿಗಳೂ ನರಶ್ರೇಷ್ಠರನ್ನು (ಅವರು ಮಾಡುವ ಯುದ್ಧವನ್ನು) ನೋಡಲು ಒಟ್ಟಾಗಿ ಸೇರಿದ್ದರು. ರಣಭೂಮಿಯಲ್ಲಿ ತಮಗೆ ಸಂಬಂಧಿಸಿದ ಕಾರ್ಯ ಗಳನ್ನು ವಹಿಸಿಕೊಂಡು ಯಶಸ್ವಿಯಾಗಿ ನೆರವೇರಿಸುತ್ತಿದ್ದ ಮನುಷ್ಯಶ್ರೇಷ್ಠರಾದ ಪ್ರಮುಖವೀರರನ್ನು ಪ್ರಹೃಷ್ಟರಾದ ಅಪ್ಸರೆಯರು ದಿವ್ಯವಾದ ಮಾಲೆ ಗಳಿಂದಲೂ, ವಿಧ-ವಿಧವಾದ ಸುಗಂಧದ್ರವ್ಯಗಳಿಂದಲೂ, ನಾನಾಪ್ರಕಾರ ವಾದ ದಿವ್ಯವಾದ ರತ್ನ-ಮಣಿಗಳಿಂದಲೂ ಮುಚ್ಚುತ್ತಿದ್ದರು. (ಸಾಹಸಿಗಳಾದ ವೀರರ ಮೇಲೆ ಎರಚುತ್ತಿದ್ದರು.) ವಾಯುದೇವನು ಆ ಸುಗಂಧವನ್ನು ಪರಿಗ್ರಹಿಸಿ ಸುಗಂಧಪೂರಿತನಾಗಿ ಎಲ್ಲ ಯೋಧಮುಖ್ಯರನ್ನೂ ಸೇವಿಸುತ್ತಿ ದ್ದನು. ಹೀಗೆ ಸುಗಂಧಮಯನಾದ ವಾಯುವಿನಿಂದ ಸಂಸೇವಿಸಲ್ಪಡುತ್ತಿದ್ದ ಯೋಧರು ಪರಸ್ಪರವಾಗಿ ಕಾದಾಡಿ ಹತರಾಗಿ ರಣಭೂಮಿಯಲ್ಲಿ ಬೀಳುತ್ತಿದ್ದರು. ಅಪ್ಸರೆಯರಿಂದ ಎಸೆಯಲ್ಪಟ್ಟಿದ್ದ ದಿವ್ಯಮಾಲೆ ಗಳಿಂದಲೂ, ಸುವರ್ಣಮಯವಾದ ಮೂಲಭಾಗಗಳಿದ್ದ ಶತ್ರುಪ್ರಮುಕ್ತವಾದ ವಿಚಿತ್ರವಾದ ಬಾಣಗಳಿಂದಲೂ ಆಚ್ಛಾದಿತರಾಗಿದ್ದ ಯೋಧಶ್ರೇಷ್ಠರಿಂದ ಆ ರಣಾಂಗಣವು ನಕ್ಷತ್ರಗಳ ಸಮೂಹಗಳಿಂದ ಚಿತ್ರ-ವಿಚಿತ್ರವಾಗಿ ಕಾಣುವ ಆಕಾಶದಂತೆಯೇ ಚಿತ್ರಿತವಾಗಿ ಕಾಣುತ್ತಿದ್ದಿತು. ಅನಂತರ ಅಂತರಿಕ್ಷದ ಕಡೆಯಿಂದಲೂ ಸಾಧುವಾದಗಳು ಕೇಳಿಬರುತ್ತಿದ್ದುವು. (ಸಾಧು ಕರ್ಣ! ಸಾಧು

ಭೀಮಸೇನ! ಇವೇ ಮುಂತಾದ ಪ್ರಶಂಸಾವಚನಗಳು ಕೇಳಿಬರುತ್ತಿದ್ದುವು.) ಇಂತಹ ಪ್ರಶಂಸಾಶಬ್ದಗಳಿಂದಲೂ, ಸಮರವಾದ್ಯಗಳ ಘೋಷಗಳಿಂದಲೂ, ಉತ್ತೇಜಿತವಾಗುತ್ತಿದ್ದ ಧನುಷ್ಟೇಂಕಾರಗಳಿಂದಲೂ, ರಥಚಕ್ರಗಳ ಗಡ-ಗಡಾ ಶಬ್ದಗಳಿಂದಲೂ ಉಂಟಾದ ವಿಚಿತ್ರಧ್ವನಿಗಳಿಂದ ಆ ಮಹಾಯುದ್ಧವು ಕೋಲಾಹಲಪೂರ್ಣವಾಯಿತು."

೫೭ನೆಯ ಅಧ್ಯಾಯವು ಮುಗಿಯಿತು.

೫೮ನೆಯ ಅಧ್ಯಾಯ ಕರ್ಣಪರ್ವ (ಮುಂದುವರಿದಿದೆ.)

## ಯುಧಿಷ್ಠಿರನ ಸಮೀಪಕ್ಕೆ ಹೋಗುವಂತೆ ಅರ್ಜುನನು ಶ್ರೀಕೃಷ್ಣನನ್ನು ಆಗ್ರಹಪಡಿಸಿದುದು: ಹಾಗೆ ಹೋಗುತ್ತಿರುವಾಗ ಶ್ರೀಕೃಷ್ಣನು ಅರ್ಜುನನಿಗೆ ಯುದ್ಧಭೂಮಿಯನ್ನು ತೋರಿಸುತ್ತಾ ಅಲ್ಲಿ ನಡೆದ ಯುದ್ಧಗಳ ವಾರ್ತೆಯನ್ನು ತಿಳಿಸುತ್ತಾ ಹೋದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

ಮಹಾರಾಜ! ಈ ಪ್ರಕಾರವಾಗಿ ಕರ್ಣಾರ್ಜುನ-ಭೀಮರು ಕುಪಿತರಾಗಲಾಗಿ, ಪೃಥಿವೀವಲ್ಲಭರ ಆ ಸಂಗ್ರಾಮವು ಮಹಾಯುದ್ಧವಾಗಿ ಪರಿಣಮಿಸಿತು. ಅರ್ಜುನನು ವಾಸುದೇವನೊಡನೆ ಹೇಳಿದನು:

"ಮಹಾಬಾಹುವೇ! ಕೃಷ್ಣ! ಪಾಂಡವರ ಸೈನ್ಯವು ದಿಕ್ಕಾಪಾಲಾಗಿ ಓಡಿಹೋಗುತ್ತಿರುವುದನ್ನು ನೋಡು. ನಮ್ಮ ಕಡೆಯ ಮಹಾರಥರನ್ನು ಪಲಾಯಿತರಾಗುವಂತೆ ಮಾಡುತ್ತಿರುವ ಕರ್ಣನನ್ನೂ ನೋಡು. ಆದರೆ ಆ ಸಮೂಹದಲ್ಲಿ ನಾನು ಧರ್ಮರಾಜನಾದ ಯುಧಿಷ್ಠಿರನನ್ನು ಕಾಣುತ್ತಿಲ್ಲ. ಯೋಧಶ್ರೇಷ್ಠರಲ್ಲಿ ಶ್ರೇಷ್ಠನಾದವನೇ! ಧರ್ಮರಾಜನ ರಥದ ಧ್ವಜವೂ ನನಗೆ ಕಾಣಿಸುತ್ತಿಲ್ಲ. ಈಗ ಹಗಲಿನ ಮೂರನೆಯ ಒಂದು ಭಾಗದಷ್ಟು ಮಾತ್ರ ಉಳಿದಿದೆ. ನಮ್ಮೊಡನೆ ಯುದ್ಧಮಾಡಲು ದುರ್ಯೋಧನನ ಸೈನ್ಯದಲ್ಲಿ ಯಾರೂ ಮುಂದೆ ಬರುತ್ತಿಲ್ಲ. ಆದುದರಿಂದ ನೀನು ನನಗೆ ಪ್ರಿಯವನ್ನುಂಟು ಮಾಡುವ ಸಲುವಾಗಿ ಯುಧಿಷ್ಠಿರನಿರುವಲ್ಲಿಗೇ ಹೋಗು. ವಾರ್ಷ್ಣೇಯ! ರಣರಂಗದಲ್ಲಿ ನಮ್ಮ ಅಣ್ಣನಾದ ಯುಧಿಷ್ಠಿರನು ಅನುಜರೊಡನೆ

ಕುಶಲಿಯಾಗಿರುವನೆಂದು ತಿಳಿದನಂತರವೇ ನಾನು ಶತ್ರುಗಳೊಡನೆ ಯುದ್ಧಮಾಡುತ್ತೇನೆ.”

ಮಹಾರಾಜ! ಅರ್ಜುನನ ಮಾತಿನಂತೆಯೇ ಶ್ರೀಕೃಷ್ಣನು, ಯುಧಿಷ್ಠಿರರಾಜನೂ ಮತ್ತು ಸೃಂಜಯಮಹಾರಥರೂ ಇದ್ದ ಸ್ಥಳಕ್ಕೆ ರಥವನ್ನು ನಡೆಸಿಕೊಂಡುಹೋದನು.

ಹೀಗೆ ಹೋಗುತ್ತಿದ್ದಾಗ ಹಾದಿಯಲ್ಲಿ ನಿನ್ನ ಕಡೆಯ ಯೋಧರೊಡನೆ ಮೃತ್ಯುವನ್ನೇ ಹಿಂದಿರುಗುವ ಸ್ಥಾನವನ್ನಾಗಿ ಮಾಡಿಕೊಂಡು ಪಾಂಡವರು ಯುದ್ಧಮಾಡುತ್ತಿದ್ದ ಸ್ಥಳವನ್ನೂ, ಅನಂತರ ಅಪಾರಸಂಖ್ಯೆಯಲ್ಲಿ ಜನಸಂಹಾರವಾಗುತ್ತಿದ್ದ ಸಂಗ್ರಾಮಭೂಮಿಯನ್ನೂ ನೋಡುತ್ತಾ ಶ್ರೀಕೃಷ್ಣನು ಅರ್ಜುನನೊಡನೆ ಹೇಳಿದನು:

“ಅರ್ಜುನ! ದುರ್ಯೋಧನನ ಕಾರಣದಿಂದಾಗಿ ಈ ಭೂಮಂಡಲ ದಲ್ಲಿರುವ ಎಲ್ಲ ಕ್ಷತ್ರಿಯರ ಮತ್ತು ಭರತವಂಶೀಯರ ಭಯಂಕರವಿನಾಶವು ಹೇಗಾಗುತ್ತಿರುವುದೆಂಬುದನ್ನು ನೋಡು. ಸತ್ತುಹೋಗಿರುವ ಧನುಷ್ಮಂತರಾದ ಯೋಧರ ಸುವರ್ಣಮಯವಾದ ಹಿಂಭಾಗವುಳ್ಳ ಧನುಸ್ಸುಗಳೂ ಮತ್ತು ಬಹುಮೂಲ್ಯವಾದ ಬತ್ತಳಿಕೆಗಳೂ ರಣಾಂಗಣದ ಸುತ್ತಲೂ ಚೆಲ್ಲಾಡಿರುವು ದನ್ನು ನೋಡು, ಪಾರ್ಥ! ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿರುವ ಬಗ್ಗಿದ ಗಿಣ್ಣುಗಳಿರುವ ಬಾಣಗಳನ್ನೂ, ಎಣ್ಣೆಯಿಂದ ಹದ ಮಾಡಲ್ಪಟ್ಟ, ಪೊರೆಬಿಟ್ಟ ಸರ್ಪಗಳಂತೆ ಕಾಣುತ್ತಿರುವ ನಾರಾಚಗಳನ್ನೂ ನೋಡು. ರಣಾಂಗಣದ ಸುತ್ತಲೂ ಎಸೆಯಲ್ಪಟ್ಟಿರುವ, ಸುವರ್ಣದಿಂದ ಸಮಲಂಕೃತವಾದ, ಆನೆಯ ದಂತದಿಂದ ಮಾಡಲ್ಪಟ್ಟಿರುವ ಹಿಡಿಗಳುಳ್ಳ ಕತ್ತಿಗಳನ್ನೂ, ಸುವರ್ಣಮಯವಾದ ಕವಚಗಳನ್ನೂ ವೀಕ್ಷಿಸು. ಅರ್ಜುನ! ಸುವರ್ಣಮಯವಾದ ಪ್ರಾಸಗಳನ್ನೂ, ಸುವರ್ಣಭೂಷಿತವಾದ ಶಕ್ತ್ಯಾಯುಧ ಗಳನ್ನೂ, ಸುವರ್ಣ ಮಯವಾದ ಪಟ್ಟಿಗಳಿಂದ ಕೂಡಿರುವ ದೊಡ್ಡ-ದೊಡ್ಡ ಗದೆಗಳನ್ನೂ ಈ ರಣಭೂಮಿಯಲ್ಲಿ ನೋಡು. ಸುವರ್ಣಮಯವಾದ ಋಷ್ಟಿಗಳೂ, ಸುವರ್ಣಭೂಷಿತವಾದ ಪಟ್ಟಿಶಗಳೂ, ಸುವರ್ಣದಿಂದ ಚಿತ್ರಿತವಾದ ದಂಡಗಳಿಂದ (ಕಾವುಗಳಿಂದ) ಕೂಡಿದ ಗಂಡುಗೊಡಲಿಗಳೂ ಈ ಸಮರಾಂಗಣದಲ್ಲಿ ಬಿದ್ದಿರುವುದನ್ನು ನೋಡು, ಪಾರ್ಥ! ಲೋಹಮಯ ವಾದ ಪ್ರಾಸಾಯುಧಗಳೂ, ಭಾರವಾದ ಮುಸಲಾಯುಧಗಳೂ, ಚಿತ್ರ-

ವಿಚಿತ್ರವಾದ ಶತಘ್ನಿಗಳೂ, ದೊಡ್ಡದಾದ ಪರಿಘಾಯುಧಗಳೂ ಈ ರಣಾಂಗಣದಲ್ಲಿ ಹೇರಳವಾಗಿ ಬಿದ್ದಿವೆ. ಪರಸ್ಪರವಾಗಿ ಎಸೆಯಲ್ಪಟ್ಟ ಚಕ್ರಾಯುಧಗಳೂ, ತೋಮರಗಳೂ ಈ ರಣಾಂಗಣದಲ್ಲಿ ಹೇರಳವಾಗಿ ಬಿದ್ದಿವೆ. ವಿಜಯೇಚ್ಛುಗಳಾದ, ವೇಗವಂತರಾದ ಯೋಧರು ನಾನಾವಿಧವಾದ ಶಸ್ತ್ರಗಳನ್ನು ಕೈಯಲ್ಲಿ ಹಿಡಿದು ಪ್ರಾಣಗಳನ್ನು ತೊರೆದಿದ್ದರೂ ಅವರೀಗ ಜೀವಂತರಾಗಿರುವಂತೆಯೇ ಕಾಣುತ್ತಿದ್ದಾರೆ. ಇಲ್ಲಿ ಬಿದ್ದಿರುವ ಅನೇಕ ವೀರಯೋಧರ ಶರೀರಗಳು ಗದೆಯಿಂದ ಅಪ್ಪಳಿಸಲ್ಪಟ್ಟಿವೆ. ಮುಸಲಾಯುಧದಿಂದ ತಲೆಯನ್ನೊಡೆಸಿಕೊಂಡಿರುವ ಹಲವಾರು ಯೋಧರು ಬಿದ್ದಿದ್ದಾರೆ. ಅತ್ತ ಕಡೆಯಲ್ಲಿ ಸಾವಿರಾರು ಯೋಧರು ಆನೆ-ಕುದುರೆ ಮತ್ತು ರಥಗಳ ತುಳಿತಕ್ಕೆ ಸಿಕ್ಕಿ ಜಜ್ಜಿಹೋಗಿರುವುದನ್ನು ನೋಡು, ಪಾರ್ಥ! ಶತ್ರುಸೂದನನೇ! ಬಾಣ, ಶಕ್ತಿ, ಋಷ್ಟಿ, ಪಟ್ಟಿಶ, ಲೋಹಮಯವಾದ ಪರಿಘ, ಭಯಂಕರವಾದ ಮತ್ತು ಲೋಹನಿರ್ಮಿತವಾದ ಪ್ರಾಸಾಯುಧ ಮತ್ತು ಗಂಡುಗೊಡಲಿಗಳಿಂದ ಛಿನ್ನ-ಭಿನ್ನವಾದ, ಗಜಾಶ್ವ-ಪದಾತಿಗಳ ರಕ್ತದಿಂದ ಲೇಪಿತವಾದ, ಪ್ರಾಣರಹಿತವಾದ ಶರೀರಗಳಿಂದ ಈ ರಣಭೂಮಿಗಳು ತುಂಬಿಹೋಗಿವೆ. ಚಂದನಚರ್ಚಿತವಾದ, ಸುವರ್ಣಮಯವಾದ ಮತ್ತು ಕೇಯೂರಸಹಿತವಾದ ಅಂಗದಗಳಿಂದ ಸಮಲಂಕೃತವಾದ ಕೈಚೀಲಗಳಿಂದ ಯುಕ್ತವಾದ ವೀರರ ತೋಳುಗಳಿಂದ ಈ ರಣಭೂಮಿಯು ಬಹಳವಾಗಿ ಶೋಭಿಸುತ್ತಿದೆ. ವೇಗವಂತರಾದ, ಋಷಭಾಕ್ಷರಾದ ವೀರರ ಬೆರಳಿಗೆ ಹಾಕುವ ಚರ್ಮದ ಮುಚ್ಚಳಗಳಿಂದಲೂ, ಅಂಗುಲೀಯಾದಿಗಳಿಂದಲೂ, ಸಮಲಂಕೃತವಾದ ಭುಜಾಗ್ರಗಳಿಂದಲೂ (ಕೈಗಳಿಂದಲೂ), ಆನೆಗಳ ಸೊಂಡಿಲಿಗೆ ಸಮಾನವಾದ ಶತ್ರುಗಳಿಂದ ಕತ್ತರಿಸಿ ಹಾಕಲ್ಪಟ್ಟಿರುವ ವೀರರ ತೊಡೆಗಳಿಂದಲೂ, ಶ್ರೇಷ್ಠವಾದ ಚೂಡಾಮಣಿಗಳಿಂದಲೂ ಮತ್ತು ಕುಂಡಲಗಳಿಂದಲೂ ಸಮಲಂಕೃತವಾದ ಶಿರಸ್ಸುಗಳಿಂದಲೂ ರಣಾಂಗಣವು ವಿರಾಜಿಸುತ್ತಿದೆ. ರಕ್ತದಿಂದಲೇ ಲೇಪಿತವಾದ, ಛಿನ್ನ-ಭಿನ್ನವಾದ ಶರೀರಗಳನ್ನು ಹೊಂದಿರುವ ಕತ್ತರಿಸಿದ ಕುತ್ತಿಗೆಗಳುಳ್ಳ ಕಬಂಧಗಳಿಂದ (ಮುಂಡಗಳಿಂದ) ರಣಾಂಗಣವು– ಜ್ವಾಲೆಗಳಿಲ್ಲದ ಅಗ್ನಿಗಳಿಂದ ತುಂಬಿರುವಂತೆ ಪ್ರಕಾಶಿಸುತ್ತಿದೆ. ಇತ್ತನೋಡು, ಪಾರ್ಥ! ಸುವರ್ಣಮಯವಾದ ಘಂಟೆಗಳನ್ನು ಹೊಂದಿರುವ ಶುಭಾವಹವಾದ ರಥಗಳು ಅನೇಕಪ್ರಕಾರವಾಗಿ ಭಗ್ನವಾಗಿ ಬಿದ್ದಿರುವುದನ್ನು ನೋಡು. ಬಾಣಗಳಿಂದ ಹತವಾಗಿ ಹೊರಬಂದಿರುವ ಕರುಳುಗಳುಳ್ಳ

ಕುದುರೆಗಳ ಸಮೂಹಗಳನ್ನೂ ಇತ್ತಕಡೆಯಲ್ಲಿ ನೋಡು. ಬಂಡಿಯ ನೊಗದ ಕೆಳಗಿನ ತೋಳುಮರಗಳೂ, ಬತ್ತಳಿಕೆಗಳೂ, ಪತಾಕೆಗಳೂ, ವಿಧ-ವಿಧವಾದ ಧ್ವಜಗಳೂ, ರಥಿಗಳ ಬಿಳಿಯ ಬಣ್ಣದ ಮಹಾಶಂಖಗಳೂ ರಣಾಂಗಣದ ಸುತ್ತಲೂ ಚೆಲ್ಲಾಪಿಲ್ಲಿಯಾಗಿ ಬಿದ್ದಿರುವುದನ್ನು ನೋಡು. ನಾಲಿಗೆಗಳನ್ನು ಹೊರಚಾಚಿ ಪರ್ವತೋಪಮವಾಗಿ ರಣಾಂಗಣದಲ್ಲಿ ಬಿದ್ದಿರುವ ಆನೆಗಳನ್ನೂ, ಮುರಿದು ಬಿದ್ದಿರುವ ಚಿತ್ರ-ವಿಚಿತ್ರವಾದ ವೈಜಯಂತೀ ಪತಾಕೆಗಳನ್ನೂ, ಸತ್ತು ರಾಶಿ-ರಾಶಿಯಾಗಿ ಬಿದ್ದಿರುವ ಗಜಾಶ್ವಗಳನ್ನೂ ನೋಡು, ಅರ್ಜುನ! ಆನೆಗಳ ಹೌದಾಗಳೂ, ಚರ್ಮದ ಹೊದ್ದಿಕೆಗಳೂ ಕಂಬಲಗಳೂ ಚೂರು-ಚೂರುಗಳಾಗಿ ಕೆಳಗೆ ಬಿದ್ದು ಚಿತ್ರ-ವಿಚಿತ್ರವಾಗಿ ಕಾಣುತ್ತಿವೆ. ಬೆಳ್ಳಿಯಿಂದ ಚಿತ್ರಿತವಾದ ರತ್ನಗಂಬಳಿಗಳೂ, ಅಂಕುಶಗಳೂ, ಭಿನ್ನವಾದ ಅನೇಕ ಘಂಟೆಗಳೂ ಮಹಾಗಜಗಳೊಡನೆ ರಣರಂಗದಲ್ಲಿ ಬಿದ್ದಿರುವುದನ್ನು ನೋಡು, ಪಾರ್ಥ! ವೈಡೂರ್ಯದ ದಂಡಗಳಿಂದ (ಹಿಡಿಗಳಿಂದ) ಕೂಡಿದ ಸುಂದರವಾದ ಅಂಕುಶಗಳು ನೆಲದ ಮೇಲೆ ಬಿದ್ದಿವೆ. ಕುದುರೇ ಸವಾರರ ಭುಜಾಗ್ರಗಳಲ್ಲಿ ಸುವರ್ಣಮಯವಾದ ಚಾವಟಿಗಳೂ ಬದ್ಧವಾಗಿದ್ದು ಆ ಕುದುರೇಸವಾರರು ಹಾಗೆಯೇ ರಣಾಂಗಣದಲ್ಲಿ ಬಿದ್ದಿದ್ದಾರೆ. ನರೇಂದ್ರರ ಮಣಿಮಯಮಕುಟಗಳು, ವಿಚಿತ್ರವಾದ ಸ್ವರ್ಣಮಯ ಹಾರಗಳು, ಛತ್ರಗಳು, ಚಾಮರಗಳು, ಬೀಸಣಿಗೆಗಳು–ಇವುಗಳೆಲ್ಲವೂ ರಣರಂಗದಲ್ಲಿ ವಿಸ್ತೃತವಾಗಿ ಬಿದ್ದಿವೆ. ಅರ್ಜುನ! ಚಂದ್ರ ಮತ್ತು ನಕ್ಷತ್ರಗಳ ಕಾಂತಿಗೆ ಸಮಾನವಾದ ಕಾಂತಿಯಿಂದ ಪರಿಶೋಭಿಸುತ್ತಿರುವ, ಸುಮನೋಹರವಾದ, ಕರ್ಣಕುಂಡಲಗಳಿಂದ ಯುಕ್ತವಾಗಿರುವ, ವ್ಯವಸ್ಥಿತವಾಗಿ ಕತ್ತರಿಸಲ್ಪಟ್ಟ ಗಡ್ಡಮೀಸೆಗಳಿಂದ ಕೂಡಿರುವ ವೀರರ ಸಮಲಂಕೃತವಾದ ಮುಖಗಳಿಂದ ರಣಭೂಮಿಯು ಆಚ್ಛಾದಿತವಾಗಿದೆ ಮತ್ತು ಈ ರಣಭೂಮಿಯು ರಕ್ತದ ಕೆಸರಿನಿಂದಲೂ ತುಂಬಿಹೋಗಿದೆ. ಅತ್ತ ನೋಡು ಅರ್ಜುನ! ಅನೇಕ ಯೋಧರು ರಣಭೂಮಿಯಲ್ಲಿ ಬಿದ್ದಿದ್ದರೂ ಅವರ ಪ್ರಾಣಗಳಿನ್ನೂ ಹೋಗಿರುವುದಿಲ್ಲ. ಅಂತಹವರು ಈ ರಣಾಂಗಣದ ಸುತ್ತಲೂ ದಾರುಣಧ್ವನಿಯಿಂದ ಕೂಗಿಕೊಳ್ಳುತ್ತಿದ್ದಾರೆ. ಅವರ ಸಂಬಂಧಿಗಳೆಲ್ಲರೂ ತಮ್ಮ-ತಮ್ಮ ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟು ಒಟ್ಟಾಗಿ ಸೇರಿ ಅವರ ಸಮೀಪಕ್ಕೆ ಹೋಗಿ ಅವರ ಪ್ರಾಣಸಂಕಟವನ್ನು ನೋಡಿ ತಾವೂ ಸಹ ಗಟ್ಟಿಯಾಗಿ ಅಳುತ್ತಿದ್ದಾರೆ. ಅಂತಹ ಸಮಯದಲ್ಲಿ ಪ್ರಾಣಬಿಟ್ಟವರನ್ನು

ವೇಗವಂತರಾದ ಬಂಧುಗಳು ವಸ್ತ್ರಾದಿಗಳಿಂದ ಆಚ್ಛಾದಿಸಿ ಪರಮಕ್ರುದ್ಧರಾಗಿ ವಿಜಯದ ಅಭಿಲಾಷೆಯಿಂದ ಪುನಃ ಯುದ್ಧಕ್ಕೆ ಹೋಗುತ್ತಿದ್ದಾರೆ. ಮತ್ತೆ ಕೆಲವು ಮನುಷ್ಯರು ರಣರಂಗದಲ್ಲಿ ಗಾಯಗೊಂಡು ಬಿದ್ದಿರುವ ತಮ್ಮ ಬಂಧುಗಳಿಂದ ನೀರುಬೇಕೆಂದು ಯಾಚಿಸಲ್ಪಟ್ಟವರಾಗಿ ಅದನ್ನು ಒದಗಿಸಿಕೊಡಲು ಅಲ್ಲಲ್ಲಿಯೇ ತಿರುಗುತ್ತಿದ್ದಾರೆ. ಹೀಗೆ ಕೆಲವರು ನೀರುತರಲು ಹೋಗಿಬರುವು ದರೊಳಗಾಗಿ ನೀರನ್ನು ಅಪೇಕ್ಷಿಸಿದ ಯೋಧರು ಪ್ರಾಣಗಳನ್ನೇ ತೊರೆದಿರು ತ್ತಾರೆ. ನೀರನ್ನು ತಂದವರು ಗತಪ್ರಾಣರಾದ ತಮ್ಮ ಬಂಧುಗಳನ್ನು ನೋಡಿ ದೊಡನೆಯೇ ತಂದ ನೀರನ್ನು ಅಲ್ಲಿಯೇ ಸುರಿದು ಪರಸ್ಪರವಾಗಿ ಕೂಗಿಕೊಳ್ಳುತ್ತಾ ಓಡುತ್ತಿದ್ದಾರೆ. ಅಲ್ಲಿ ನೋಡು ಅರ್ಜುನ! ಕೆಲವರು ನೀರು ಕುಡಿದೊಡನೆಯೇ ಸತ್ತುಹೋಗುತ್ತಿದ್ದಾರೆ. ಮತ್ತೆ ಕೆಲವರು ಕುಡಿಯುತ್ತಿರು ವಾಗಲೇ ಪ್ರಾಣಬಿಡುತ್ತಿದ್ದಾರೆ. ಬಂಧುಗಳಿಗೆ ಬಹಳ ಪ್ರಿಯರಾದ ಕೆಲವು ಸೈನಿಕರು ತಮ್ಮ ಪ್ರಿಯಬಾಂಧವರನ್ನು ಪರಿತ್ಯಜಿಸಿ ಪ್ರಾಣಬಿಡುತ್ತಿರುವುದೂ ಅಲ್ಲಲ್ಲಿ ಕಂಡುಬರುತ್ತಿದೆ. ಮತ್ತೆ ಕೆಲವರು ಪ್ರಾಣಸಂಕಟದಲ್ಲಿ ಬಿದ್ದಿದ್ದರೂ ಅವುಡುಕಚ್ಚುತ್ತಾ ಹುಬ್ಬುಗಂಟಿಕ್ಕಿದ ಮುಖಗಳಿಂದ ಎಲ್ಲ ಕಡೆಗಳಲ್ಲಿಯೂ ನೋಡುತ್ತಿದ್ದಾರೆ.”

ಮಹಾರಾಜ! ಶ್ರೀಕೃಷ್ಣನು ಹೀಗೆ ಹೇಳುತ್ತಾ ಯುಧಿಷ್ಠಿರನಿದ್ದೆಡೆಗೆ ರಥವನ್ನು ನಡೆಸಿಕೊಂಡು ಹೋದನು. ಅರ್ಜುನನೂ ಸಹ ಆ ಮಹಾಸಮರ ಭೂಮಿಯಲ್ಲಿ ಯುಧಿಷ್ಠಿರರಾಜನನ್ನು ಸಂದರ್ಶಿಸಲು ಹೋದನು.

ಅರ್ಜುನನು ಗೋವಿಂದನನ್ನು ಕುರಿತು ‘ಮುಂದೆ ಹೋಗು ಕೃಷ್ಣ! ಬೇಗ ಹೋಗು’–ಎಂದು ಪುನಃ ಪುನಃ ಹೇಳುತ್ತಲೇ ಇದ್ದನು. ಮಾಧವನು ಯುದ್ಧಭೂಮಿಯನ್ನು ಅರ್ಜುನನಿಗೆ ತೋರಿಸುತ್ತಾ ಅರ್ಜುನನ ಮಾತಿ ನಂತೆ ಬಹಳ ತ್ವರೆಯಿಂದ ಮುಂದೆ ಹೋಗಿ ಪಾರ್ಥನನ್ನು ಕುರಿತು ಬಹಳ ನಿಧಾನವಾಗಿ ಹೇಳಿದನು: “ಅರ್ಜುನ! ಯುಧಿಷ್ಠಿರನನ್ನು ನೋಡು. ಅವನ ಸಮೀಪಕ್ಕೆ ಬಂದಿರುವ ರಾಜರನ್ನೂ ನೋಡು. ಪಾಂಚಾಲ-ಸೃಂಜಯ-ಪಾಂಡವರಿಗೆ ಯಾವನು ಪ್ರಧಾನಭೂತನಾಗಿರುವನೋ ಅಂತಹ ಭೀಮ ಸೇನನನ್ನು ಹಿಂಬಾಲಿಸಿ ಧೃಷ್ಟದ್ಯುಮ್ನಪುರಃಸರರಾದ ಯೋಧರು ಯುದ್ಧಕ್ಕೆ ಹಿಂದಿರುಗುತ್ತಿದ್ದಾರೆ. ಅಲ್ಲಿ ನೋಡು, ಅರ್ಜುನ! ಯುದ್ಧಕ್ಕೆ ಹಿಂದಿರುಗಿದ ಪಾರ್ಥರು ದೊಡ್ಡದಾದ ಶತ್ರುಸೈನ್ಯವನ್ನು ಭಗ್ನ ಗೊಳಿಸುತ್ತಿದ್ದಾರೆ. ಪಲಾಯನಮಾಡುತ್ತಿರುವ ಕೌರವಸೈನಿಕರನ್ನು

ಕರ್ಣನು ತಡೆಯುತ್ತಿದ್ದಾನೆ. ವೇಗದಲ್ಲಿ ಯಮಸದೃಶನಾದ, ಇಂದ್ರಸದೃಶಪರಾಕ್ರಮನಾದ, ಶಸ್ತ್ರಭೃತರಲ್ಲಿ ಶ್ರೇಷ್ಠನಾದ ಅಶ್ವತ್ಥಾಮನು ಅತ್ತಕಡೆಗೆ ಹೋಗುತ್ತಿದ್ದಾನೆ. ಅದೋ ನೋಡು. ಮಹಾರಥನಾದ ಧೃಷ್ಟದ್ಯುಮ್ನನು ಬಹಳ ವೇಗವಾಗಿ ಹೋಗುತ್ತಿರುವ ಅಶ್ವತ್ಥಾಮನನ್ನು ಹಿಂಬಾಲಿಸುತ್ತಿದ್ದಾನೆ. ಅಲ್ಲಿ ನೋಡು, ಅರ್ಜುನ! ಯುದ್ಧದಲ್ಲಿ ಬಹುಸಂಖ್ಯಾತರಾದ ಸೃಂಜಯಯೋಧರು ಮೃತಪಟ್ಟಿದ್ದಾರೆ."

ಮಹಾರಾಜ! ದುರ್ಜಯನಾದ ಶ್ರೀಕೃಷ್ಣನು ಕಿರೀಟಧರನಾದ ಅರ್ಜುನನಿಗೆ ಎಲ್ಲ ವಿಷಯಗಳನ್ನೂ ವಿವರಿಸಿ ಹೇಳಿದನು. ಅನಂತರ ಮಹಾಘೋರವಾದ ಮಹಾಯುದ್ಧವು ಪುನಃ ಪ್ರಾರಂಭವಾಯಿತು. ಉಭಯಪಕ್ಷಗಳ ಸೈನಿಕರೂ ಮೃತ್ಯುವನ್ನೇ ಹಿಂದಿರುಗುವ ಸ್ಥಾನವನ್ನಾಗಿ ಮಾಡಿಕೊಂಡು ಯುದ್ಧದಲ್ಲಿ ತೊಡಗಿದರು. ಎರಡೂ ಕಡೆಗಳ ಸೈನ್ಯಗಳು ಸಂಘರ್ಷಿಸಿದ ಸಮಯದಲ್ಲಿ ವೀರರ ಸಿಂಹನಾದಗಳಾದುವು.

ಪೃಥಿವೀಪತಿಯೇ! ನಿನ್ನ ದುರ್ಮಂತ್ರಣದ ಫಲವಾಗಿ ಈ ರೀತಿ ನಿನ್ನ ಕಡೆಯವರಿಗೂ ಮತ್ತು ಪಾಂಡವರ ಕಡೆಯವರಿಗೂ ಯುದ್ಧವು ನಡೆದು ಪ್ರಪಂಚದಲ್ಲಿ ಅಪಾರವಾದ ಜನಕ್ಷಯವಾಯಿತು."

೫೮ನೆಯ ಅಧ್ಯಾಯವು ಮುಗಿಯಿತು.

**ಹದಿನೆಂಟನೆಯ ಸಂಪುಟವು ಮುಗಿಯಿತು.**

**ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು**

**ಶ್ರೀಸದ್ಗುರುಚರಣಾರವಿಂದಾರ್ಪಣಮಸ್ತು**

**ಓಂ ತತ್ಸತ್**

